# ೩೯ ನೇ ಹಿಂದೀ ರಾಷ್ಟ್ರೀಯ ಮಹಾಸಭೆ, ೧೯೨೪.
## ಬೆಳಗಾಂವಿ.

---

೧. ಬರುವ ಡಿಸೆಂಬರ್ ತಿಂಗಳಿನಲ್ಲಿ ಬೆಳಗಾಂವಿಯಲ್ಲಿ ಸೇರುವ ರಾಷ್ಟ್ರೀಯ ಮಹಾಸಭೆಯಲ್ಲಿ ಹಾಡುವುದಕ್ಕೆ ಎರಡು ಸ್ವಾಗತಗೀತಗಳು ಬೇಕಾಗಿವೆ. ಇವುಗಳಲ್ಲಿ ಒಂದು ಕನ್ನಡ ಭಾಷೆಯಲ್ಲಿಯೂ, ಒಂದು ಸಂಸ್ಕೃತ ಭಾಷೆಯಲ್ಲಿಯೂ ಇರಬೇಕು.

೨. ಹಾಗೆಯೇ ಎರಡು ರಾಷ್ಟ್ರಗೀತಗಳೂ ಬೇಕಾಗಿವೆ. ಇವೆರಡೂ ಕನ್ನಡ ಭಾಷೆಯಲ್ಲಿರಬೇಕು. ಇವುಗೆಳಲ್ಲಿ ಒಂದು ಭಾರತಮಾತೆಯ ಸ್ತೋತ್ರರೂಪವಾಗಿಯೂ, ಇನ್ನೊಂದು ಕರ್ನಾಟಕಮಾತೆಯ ಸ್ತೋತ್ರರೂಪವಾಗಿಯೂ ಇರಬೇಕು.

೩. ಮೇಲ್ಕಂಡ ನಾಲ್ಕು ಗೀತಗಳೂ ಶುದ್ಧವಾದ ಕರ್ನಾಟಕ ಗಾಯನ ಶಾಸ್ತ್ರವನ್ನನುಸರಿಸಿರಬೇಕು. ಗೀತೆಗಳು ಸ್ವದೇಶಾಭಿಮಾನ ಪ್ರೋದ್ದೀಪಕವಾಗಿಯೂ, ಭಾವೋತ್ತೇಜಕವಾಗಿಯೂ, ಗಂಭೀರವಾಗಿಯೂ, ಲಲಿತವಾಗಿಯೂ ಇರಬೇಕು. ಅಲ್ಲದೆ ಬಹುಜನರು ಕೂಡಿಕೊಂಡು ಏಕತಾನಸ್ವರದಿಂದ ಹಾಡುವುದಕ್ಕೆ ಅನುಕೂಲವಾಗಿರಬೇಕು. ಇಂಥ ಗೀತೆಗಳನ್ನು ಕರ್ನಾಟಕದೊಳಗಿನ ಕವಿಗಳು ರಚಿಸಿ ಕಳಿಸಬೇಕೆಂದು ಬಿನ್ನಹವಿದೆ.

೪. ಹೀಗೆ ಬಂದ ಗೀತಗಳಲ್ಲಿ ಯೋಗ್ಯವಾದವುಗಳನ್ನು ಆರಿಸಿ ಉಪಯೋಗಿಸುವ ಸಂಪೂರ್ಣ ಸ್ವಾತಂತ್ರ್ಯವನ್ನು ಈ ಉಪಸಭೆಯವರು ಇಟ್ಟುಕೊಂಡಿರುತ್ತಾರೆ. ಆರಿಸಲ್ಪಟ್ಟ ಗೀತಗಳು ಮುಂದೆ ಅಖಿಲಕರ್ನಾಟಕ ದೇಶಕ್ಕೆ ರಾಷ್ಟ್ರಗೀತಗಳಾಗಿ ಉಪಯೋಗಿಸಲ್ಪಡುವವು.

೫. ಕರ್ನಾಟಕದ ಬೇರೆಬೇರೆ ಭಾಗಗಳಲ್ಲಿರುವ ಪ್ರತಿಭಾಸಂಪನ್ನ ಕವಿಗಳೆಲ್ಲರೂ ರಾಷ್ಟ್ರದೇವತೆಯ ಸೇವೆಮಾಡುವ ಈ ಸುಸಂಧಿಯನ್ನು ಮನದಂದು ಮೇಲ್ಕಾಣಿಸಿದ ಗೀತಗಳನ್ನು ರಚಿಸಿ, ಬರುವ ಸೆಪ್ಟಂಬರ್ ೧೫ ನೇ ತಾರೀಖಿನೊಳಗಾಗಿ ಧಾರವಾಡದಲ್ಲಿರತಕ್ಕ ಕಾರ್ಯದರ್ಶಿಗಳ ವಿಳಾಸಕ್ಕೆ ಮುಟ್ಟುವಂತೆ ಕಳುಹಿಸಬೇಕಾಗಿ ಪ್ರಾರ್ಥನೆ.

ಮುದ್ವೇಡಕರ ಕೃಷ್ಣರಾವ್,
ಕಾರ್ಯದರ್ಶಿ,
ಸಂಗೀತ ಶಾಖಾ,
೩೯ ನೇ ರಾಷ್ಟ್ರೀಯ ಮಹಾಸಭೆ.

# ಪ್ರಬುದ್ಧ ಕರ್ಣಾಟಕ



## ಸಂಪುಟ ೭

ಬೆಂಗಳೂರು
ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಟಿಸಲ್ಪಟ್ಟಿ
೧೯೨೬

# ಚಿತ್ರಗಳು.

೧. ನಂದಳಿಕೆ ಲಕ್ಷ್ಮೀನಾರಣಪ್ಪನವರು
೨. ಪ್ರಾಕ್ತನವಿಮರ್ಶವಿಚಕ್ಷಣ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರು, ಎಂ ಎ., ಎಂ. ಆರ್. ಎ. ಎಸ್.
೩. ಮ|| ಮಳಲಿ ಸುಬ್ಬರಾಯರು
೪. ಮ|| ಪಂಡಿತ ಮಹಾದೇವ ಪ್ರಭಾಕರ ಪೂಜಾರರವರು
೫. ಮ|| ಯು. ಮಂಗೇಶರಾಯರು
೬. ಕೀರ್ತಿನಾರಾಯಣಸ್ವಾಮಿಯ ದೇವಸ್ಥಾನ
೭. ವೈದ್ಯೇಶ್ವರ ದೇವಾಲಯ
೮. ಸೋಮಗಿರಿ ಅಥವಾ ಮುಡುಕುತೊರೆ ಬೆಟ್ಟ
೯. ಅರ್ಕೇಶ್ವರ ದೇವಾಲಯ
೧೦. ಪಾತಾಳೇಶ್ವರ ದೇವಾಲಯ
೧೧. ಮರಳೇಶ್ವರ ದೇವಾಲಯ
೧೨. ಗೋಕರ್ಣೇಶ್ವರ ದೇವಾಲಯ
೧೩. ತಲಕಾಡಿನ ನಕ್ಷೆ
೧೪. ವೈಣಿಕಶಿಖಾಮಣಿ ಶೇಷಣ್ಣನವರ ಪ್ರತಿಮೆಯ ಚಿತ್ರಗಳು
೧೫. ಸಿದ್ಧಾರ್ಥನ ರಾಜ್ಯಪರಿತ್ಯಾಗ
೧೬. ಮ|| ಜ. ವಾಸುದೇವಯ್ಯನವರು
೧೭. ಒಬ್ಬ ಮುದುಕಿಯ ಭಾವಚಿತ್ರ
೧೮. ತ್ಯಾಗರಾಜರು

## ವಿಷಯಸೂಚಿಕೆ.

---

### ಮುದ್ದಣನ ವಿಚಾರವಾದ ಲೇಖನಗಳು


೧. ಮುನ್ನುಡಿ — ಮ|| ಡಿ. ವಿ. ಗುಂಡಪ್ಪನವರು

೨. ಶ್ರೀಮಾನ್ ನಂದಳಿಕೆ ಲಕ್ಷ್ಮೀನಾರಣಯ್ಯ—ಪ್ರಾಕ್ತನವಿಮರ್ಶವಿಚಕ್ಷಣ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ ಎಂ.ಎ., ಎಂ.ಆರ್.ಎ.ಎಸ್.

೩. ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು— ಮ|| ಪಿ. ಮಂಗೇಶರಾವ್, ಬಿ.ಎ., ಎಲ್.ಟಿ.

೪. ಕವಿಯ ನೆನಪು— ಮ|| ಹುರುಳಿ ಭೀಮರಾಯರು.

೫. ಲಕ್ಷ್ಮೀನಾರಾಯಣಕವಿ— ಮ|| ಬಿ. ರಾಮರಾವ್, ಎಂ.ಎ.,ಎಲ್ಎಲ್.ಬಿ.

೬. ನಂದಳಿಕೆ ಲಕ್ಷ್ಮೀನಾರಣಪ್ಪನವರು— ಮ|| ಮಳಲಿ ಸುಬ್ಬರಾಯರು.

೭. ಮುದ್ದಣ— ಮ|| ರಾ. ಸು. ಸಾಲಿ, ಬಿ.ಎ.

೮. ಅದ್ಭುತರಾಮಾಯಣ— ಮ|| ಯು. ಮಂಗೇಶರಾವ್.

೯. ಶ್ರೀರಾಮಪಟ್ಟಾಭಿಷೇಕ — ಮ|| ಪಂಡಿತ ಮಹಾದೇವ ಪ್ರಭಾಕರ ಪೂಜಾರರವರು.

೧೦. ಶ್ರೀರಾಮಾಶ್ವಮೇಧ— ಮ|| ಎಂ. ವೆಂಕಟೇಶಯ್ಯಂಗಾರ್, ಎಂ.ಎ.

೧೧. ಅನುಬಂಧ—


### ಕವಿತೆಗಳು


೧. ಮೊರೆ— ವಿ. ಸೀ.

೨. ಜೀವವಾಹಿನಿ— ,,

೩. ವೀಣಾಗಾನ— ,,

೪. ಸಿದ್ಧಾರ್ಥನ ರಾಜ್ಯಪರಿತ್ಯಾಗ— ,,

೫. ಮಾಟಗಾರ— ಮ|| ಡಿ. ವಿ. ಗುಂಡಪ್ಪನವರು

೬. ಹಿರಿದು— "ಶ್ರೀನಿವಾಸ."


### ಸಾಹಿತ್ಯ ಮತ್ತು ಕಲೆ


ಕೆಲವು ಕನ್ನಡ ಕವಿಗಳ ಜೀವನಕಾಲವಿಚಾರ— ಡಾ|| ವೆಂಕಟಸುಬ್ಬಯ್ಯ, ಎಂ.ಎ., ಪಿಹೆಚ್.ಡಿ., ಎಲ್ಎಲ್.ಬಿ.

ಹಿಂದೂಜನರು ಮತ್ತು ಸಂಸ್ಕೃತ— ಮ|| ವಿ. ಸುಬ್ರಹ್ಮಣ್ಯಅಯ್ಯರ್, ಬಿ.ಎ. (ಮೈಸೂರು ವಿಶ್ವವಿದ್ಯಾಲಯದ ರಿಜಿಸ್ಟ್ರಾರ್.)

ತಲಕಾಡು— ಮ|| ಬಿ. ವೆಂಕೋಬರಾವ್, ಬಿ.ಎ.

ಅಭಿನವ ಕರ್ಣಾಟಕ ಕಲಾಸಂಪ್ರದಾಯ ಮತ್ತು ಮೈಸೂರಿನ ಚಿತ್ರಶಿಲ್ಪಿಗಳಾದ ಮ|| ಕೆ. ವೆಂಕಟಪ್ಪನವರು ,,

ತಾತ್ತ್ವಿಕ ಕಲಾಸಂಪ್ರದಾಯ ಮತ್ತು ಮೈಸೂರಿನ ಭಾವಚಿತ್ರ ಲೇಖಕರಾದ ಮ|| ಕೆ. ಕೇಶವಯ್ಯನವರು ,,

ವಿಗಡವಿಕ್ರಮರಾಯ— "ಸಂಸ."

## ಸಣ್ಣ ಕಥೆಗಳು—

ಹೈದರಾಲಿಯ ನ್ಯಾಯಪಕ್ಷಪಾತ— ಮ|| ಚಂದ್ರಶೇಖರಯ್ಯ, ಎಂ.ಎ.

ದೇವರು ಇದ್ದಾನೆ— "ಶ್ರೀಪತಿ."

ಕಾಮನಹಬ್ಬದ ಒಂದು ಕತೆ— "ಶ್ರೀನಿವಾಸ."

## ಕಾವ್ಯಾವಲೋಕನ—

ವಿಶ್ವಬಂಧುವಿನ ವಿಶೇಷ ಸಂಚಿಕೆ—ಪೂರ್ವಪುರಾಣಂ—ಲೀಲೆ—ಶ್ರೀ ದೇಶಬಂಧು ದಾಸರ ಜೋಗುಳ—ರಾಷ್ಟ್ರಗೀತಾರತ್ನಾಕರ—ಕಾವ್ಯರತ್ನಾಕರ—ಬಾಲರಾಮಾಯಣ—ಬಾಲಭಾರತ—ಶ್ರೀ ಚೆಲ್ವನಾರಾಯಣ ಶತಕಂ—ವನಮಾಲೆ—ರಂಗಭೂಮಿ—ಸರ್ವಜ್ಞ ವಚನಗಳು—ಸುವಾಸಿನಿ—ಸಮರ್ಥ ರಾಮದಾಸ ಸ್ವಾಮಿಗಳ ಚರಿತ್ರೆ—ಶ್ರೀ ರಾಮಕೃಷ್ಣ ವಚನಾಮೃತ—ಸ್ಕೌಟುಗಳ ಕನ್ನಡ ಕೈಪಿಡಿ—ನವಯುಗ—ಸ್ವರ್ಗಾರೋಹಣಪರ್ವ— ಸಂಪಾದಕಮಂಡಲಿ.

## ವಸ್ತುಕೋಶ—

ಮಾರ್ಗಶಿರದ ದೀಪಾವಳಿ—ಮ|| ವಿ. ಎಸ್. ಶ್ರೀನಿವಾಸಶಾಸ್ತ್ರಿಗಳು ಮತ್ತು ಸಂಸ್ಕೃತ—ನಮ್ಮ ದೇಶದಲ್ಲಿ ಸಂಸ್ಕೃತದ ಸ್ಥಿತಿ—ಕನ್ನಡದ ಸ್ಥಿತಿ—ಪ್ರಬುದ್ಧ ಕರ್ಣಾಟಕದ ಕಿರೀಟಕ್ಕೆ ಒಂದು ಹೊಸರತ್ನ—ಕನ್ನಡದ ಪುಣ್ಯ—ಗದಾಯುದ್ಧ ನಾಟಕ—ನಳೋದಯ ಕಾವ್ಯದ ಕರ್ತೃವು ಯಾರು?—ಶಕಾರ—ಅಭಿನಂದನ—ಕರ್ಣಾಟಕ ಸಂಘದ ಕಾರ್ಯಗಳು—ಮ|| ಚ. ವಾಸುದೇವಯ್ಯನವರು—ಗೌರವ ಚೆನ್ನೋ ಪ್ರೀತಿ ಚೆನ್ನೋ? ಸಂಪಾದಕ.





## ತೆಂಗಾಳಿ.

ಬಾರ ಮುಂಬೇಸಗೆಯ ಮೆಲುನಡೆಯ ಮಾರುತ
ಬಾರ ನೀ ಮಧುಮಾಸದೈತರವ ಸಾರುತ
ಬಾರ ಲೋಕಕೆ ಹರಿಸದೈಸಿರಿಯ ಬೀರುತ
ಬಾರ ಸೊಗಸಿನ ತೆರವ ಜನಕೆಲ್ಲ ತೋರುತ ||೧||

ಮೊದಲ ವತ್ಸರದ ಹಣ್ಣೆಲೆ ಬಣ್ಣ ಮಾಸಿ
ಉದುರ್ವ ದಿನ ಬಹುದನತಿಭಯದಿ ಹಾರೈಸಿ
ಇದಿರ್ನೋಳ್ಪುದರ ಮೇಲೆ ಮೆಲುಮೆಲನೆ ಬೀಸಿ
ಸದಯ ಬೆಸುಗೆಯ ಬಿಡಿಸಿ ಅದನು ಕಡೆಹಾಯ್ಸು ||೨||

ತರುಲತಾರಾಜಿಗಳ ಬಾಡಿರುವ ಮೆಯ್ಯ
ಕರುಣೆ ಕೂರ್ಮೆಯ ತೋರುವೀ ನಿನ್ನ ಕೈಯ
ಸರಸಸಂಪರ್ಕದಿಂ ನಲಿಸುತಕ್ಷಯ್ಯ
ಪರಸತ್ವವಲ್ಲಿ ತಳಿರ್ವಂತೆ ಹರಸಯ್ಯ ||೩||

ತಲಕಾಡು— ಮ|| ಬಿ. ವೆಂಕೋಬರಾವ್, ಬಿ.ಎ.

ಅಭಿನವ ಕರ್ಣಾಟಕ ಕಲಾಸಂಪ್ರದಾಯ ಮತ್ತು ಮೈಸೂರಿನ ಚಿತ್ರಶಿಲ್ಪಿಗಳಾದ ಮ|| ಕೆ. ವೆಂಕಟಪ್ಪನವರು ,,

ತಾತ್ತ್ವಿಕ ಕಲಾಸಂಪ್ರದಾಯ ಮತ್ತು ಮೈಸೂರಿನ ಭಾವಚಿತ್ರ ಲೇಖಕರಾದ ಮ|| ಕೆ. ಕೇಶವಯ್ಯನವರು ,,

ವಿಗಡವಿಕ್ರಮರಾಯ— "ಸಂಸ."

**ಸಣ್ಣಕಥೆಗಳು—**

ಹೈದರಾಲಿಯ ನ್ಯಾಯಪಕ್ಷಪಾತ— ಮ|| ಚಂದ್ರಶೇಖರಯ್ಯ, ಎಂ.ಎ.

ದೇವರು ಇದ್ದಾನೆ— "ಶ್ರೀಪತಿ."

ಕಾಮನಹಬ್ಬದ ಒಂದು ಕತೆ— "ಶ್ರೀನಿವಾಸ."

**ಕಾವ್ಯಾವಲೋಕನ—**

ವಿಶ್ವಬಂಧುವಿನ ವಿಶೇಷ ಸಂಚಿಕೆ—ಪೂರ್ವಪುರಾಣಂ—ಲೀಲೆ—ಶ್ರೀ ದೇಶಬಂಧು ದಾಸರ ಜೋಗುಳ—ರಾಷ್ಟ್ರಗೀತಾರತ್ನಾಕರ—ಕಾವ್ಯರತ್ನಾಕರ—ಬಾಲರಾಮಾಯಣ—ಬಾಲಭಾರತ—ಶ್ರೀ ಚೆಲ್ವನಾರಾಯಣ ಶತಕಂ—ವನಮಾಲೆ—ರಂಗಭೂಮಿ—ಸರ್ವಜ್ಞ ವಚನಗಳು—ಸುವಾಸಿನಿ—ಸಮರ್ಥ ರಾಮದಾಸ ಸ್ವಾಮಿಗಳ ಚರಿತ್ರೆ—ಶ್ರೀ ರಾಮಕೃಷ್ಣ ವಚನಾಮೃತ—ಸ್ಕೌಟುಗಳ ಕನ್ನಡ ಕೈಪಿಡಿ—ನವಯುಗ—ಸ್ವರ್ಗಾರೋಹಣಪರ್ವ— ಸಂಪಾದಕಮಂಡಲಿ.

**ವಸ್ತುಕೋಶ—**

ಮಾರ್ಗಶಿರದ ದೀಪಾವಳಿ—ಮ|| ವಿ. ಎಸ್. ಶ್ರೀನಿವಾಸಶಾಸ್ತ್ರಿಗಳು ಮತ್ತು ಸಂಸ್ಕೃತ—ನಮ್ಮ ದೇಶದಲ್ಲಿ ಸಂಸ್ಕೃತದ ಸ್ಥಿತಿ—ಕನ್ನಡದ ಸ್ಥಿತಿ—ಪ್ರಬುದ್ಧ ಕರ್ಣಾಟಕದ ಕಿರೀಟಕ್ಕೆ ಒಂದು ಹೊಸರತ್ನ—ಕನ್ನಡದ ಪುಣ್ಯ—ಗದಾಯುದ್ಧ ನಾಟಕ—ನಳೋದಯ ಕಾವ್ಯದ ಕರ್ತೃವು ಯಾರು?—ಶಕಾರ—ಅಭಿನಂದನ—ಕರ್ಣಾಟಕ ಸಂಘದ ಕಾರ್ಯಗಳು—ಮ|| ಚ. ವಾಸುದೇವಯ್ಯನವರು—ಗೌರವ ಚೆನ್ನೋ ಪ್ರೀತಿ ಚೆನ್ನೋ? ಸಂಪಾದಕ.

---





## ತೆಂಗಾಳಿ.

ಬಾರ ಮುಂಬೇಸಗೆಯ ಮೆಲುನಡೆಯ ಮಾರುತ
ಬಾರ ನೀ ಮಧುಮಾಸದೈತರವ ಸಾರುತ
ಬಾರ ಲೋಕಕೆ ಹರಿಸದೈಸಿರಿಯ ಬೀರುತ
ಬಾರ ಸೊಗಸಿನ ತೆರವ ಜನಕೆಲ್ಲ ತೋರುತ ||೧||

ಮೊದಲ ವತ್ಸರದ ಹಣ್ಣೆಲೆ ಬಣ್ಣ ಮಾಸಿ
ಉದುರ್ವ ದಿನ ಬಹುದನತಿಭಯದಿ ಹಾರೈಸಿ
ಇದಿರ್ನೋಳ್ಪುದರ ಮೇಲೆ ಮೆಲುಮೆಲನೆ ಬೀಸಿ
ಸದಯ ಬೆಸುಗೆಯ ಬಿಡಿಸಿ ಅದನು ಕಡೆಹಾಯ್ಸು ||೨||

ತರುಲತಾರಾಜಿಗಳ ಬಾಡಿರುವ ಮೆಯ್ಯ
ಕರುಣಿ ಕೂರ್ಮೆಯ ತೋರುವೀ ನಿನ್ನ ಕೈಯ
ಸರಸಸಂಪರ್ಕದಿಂ ನಲಿಸುತಕ್ಷಯ್ಯ
ಪರಸತ್ವವಲ್ಲಿ ತಳಿರ್ವಂತೆ ಹರಸಯ್ಯ ||೩||

ಎಲ್ಲಲತೆಗಳ ನೋಳ್ಪ ಮೊದಲಿಲ್ಲಿ ಬಂದು
ನಲ್ಲ ನೀ ಮರೆದಿರಲು ವಿರಹದಲಿ ನೊಂದು
ತಲ್ಲಣಿಸುವೀಮಲ್ಲಿಗೆಯನು ತರಿಸಂದು
ಲಲ್ಲೆಯಿಂ ಸಂತೈಸಿ ಪೊರೆ ದೀನಬಂಧು ||೪||

ಎನ್ನ ಜೀವನ ನಿನ್ನ ಸೊಗದಿನಾವರಿಸು
ಹಣ್ಣೆಲೆವೊಲೆನ್ನ ಹಳೆಗನಸುಗಳ ಹರಿಸು
ಚೆನ್ನ ಹೊಸಬಾಳ ಹೊಸರಸಗಳನೋಸರಿಸು
ಚೆನ್ನ ಹೊಸತಳಿರು ಸುಮಫಲಗಳನು ತರಿಸು ||೫||

ಅರಿಯದವರಾವು ಎಮ್ಮಯ ಮನದ ನೂರು
ವಿರಸತೆಯ ತೊಟ್ಟುಗಳ ಕಳಚಿ ಅವ ತೂರು
ಮರಣದಲಿ ಜೀವನದ ಮೊಳೆಯಿಹುದ ತೋರು
ಪರಮಾತ್ಮನುಂಟು ಸುಖದೊಳಮೆಂದು ಸಾರು ||೬||

ಮೆಲುಮೆಲನೆ ಪಸರಿಸುತೆ ತೆಂಕಣಿಂ ಬಾರ
ಫಲವಿಧದ ಸಿಂಗರವ ವನಗಳಿಗೆ ತಾರ
ನಲವಿನಂಕೆಯ ನಿತ್ಯತೆಯ ತೋರು ಧೀರ
ಚೆಲುವು ದೊರೆಯಾಳ್ವುದನು ಸಾರ್ಕೈ ಸಮೀರ ||೭||

ಶ್ರೀನಿವಾಸ.

---

# ಸಾಹಿತ್ಯದಲ್ಲಿ ವಿಮರ್ಶೆಯ ಕಾರ್ಯ.

ಈಗ ನಾವು ವಿಮರ್ಶೆಯೆಂದು ಕರೆಯುವ ರೀತಿಯ ಬರೆವಣಿಗೆ ನಮ್ಮಲ್ಲಿ ಹೊಸದು. ಅದರ ಹೆಸರೂ ಹೊಸದು. ಎಂದರೆ ನಮ್ಮಲ್ಲಿ ವಿಮರ್ಶೆ ಇರಲಿಲ್ಲವೆಂದಲ್ಲ. ವಿಮರ್ಶೆಯಿಲ್ಲದೆ ಸಾಹಿತ್ಯವು ಆಗುವುದೂ ಇಲ್ಲ ಬೆಳೆಯುವುದೂ ಇಲ್ಲ; ಈ ವಿಚಾರವನ್ನು ಮುಂದೆ ಸ್ವಲ್ಪ ವಿವರವಾಗಿ ಚರ್ಚಿಸಿ ಇದೆ. ಆದರೆ ಸಾಹಿತ್ಯದ ರಚನೆಯಲ್ಲೂ ಅದಕ್ಕೆ ಕೇವಲ ಸಂಬಂಧವುಳ್ಳ ರಚನಾಲಕ್ಷಣದ ವಿಚಾರದಲ್ಲೂ ಎಷ್ಟೋ ಅಷ್ಟು ಹೊರತು ವಿಮರ್ಶೆಯನ್ನೇ ಬೇರೆ ಗ್ರಂಥವಾಗಿ ಬರೆಯುವ ವಾಡಿಕೆ ನಮ್ಮಲ್ಲಿ ಇರಲಿಲ್ಲ. ಇದಕ್ಕೆ ಅನೇಕ ಕಾರಣಗಳಿದ್ದುವು. ಈ ರೀತಿಯ ವಿಮರ್ಶೆಯ ಲೇಖನವು ಕಾವ್ಯದ ರೂಪಲಕ್ಷಣಗಳನ್ನಲ್ಲದೆ ವಿಷಯಗಳನ್ನೂ ಚರ್ಚಿಸಬೇಕಾದ ಸಂದರ್ಭಗಳಿಂದ ಉಂಟಾಗತಕ್ಕದ್ದು. ಇಂಥ ಸಂದರ್ಭಗಳು ನಮ್ಮ ದೇಶದಲ್ಲಿ ಹಿಂದೆ ಬಂದಂತೆ ತೋರುವುದಿಲ್ಲ. ಸಾಹಿತ್ಯವು ಉದ್ದೇಶ ಆಶಯಗಳಲ್ಲಿ ಬಹುಮುಖವಾದರೆ ಇಂಥ ವಿಮರ್ಶೆಯು ಆವಶ್ಯಕವಾಗುವುದು. ನಮ್ಮಲ್ಲಿ ನಮ್ಮ ಜೀವನವನ್ನು ಅನುಸರಿಸಿ ನಮ್ಮ ಸಾಹಿತ್ಯವೂ ಒಂದು ಧರ್ಮ ಒಂದು ನೀತಿ ಒಂದೇ ಉದ್ದೇಶವನ್ನು ಇರಿಸಿಕೊಂಡು ಮುಂದಕ್ಕೆ ನಡೆಯಿತು. ಎರಡು ಗುಂಪುಗಳಿದ್ದರೆ ಒಂದು ಗುಂಪಿನವರು ಇನ್ನೊಂದು ಗುಂಪಿನವರ ಸರಿತಪ್ಪನ್ನು ಹುಡುಕಬಹುದು. ಒಬ್ಬೊಬ್ಬರೂ ತಮ್ಮ ದಾರಿ ಸರಿ ಎಂದು ಹೇಳುವುದಕ್ಕೆ ಪ್ರಯತ್ನಪಡಬಹುದು. ಈ ರೀತಿಯ ಗುಂಪು ನಮ್ಮಲ್ಲಿ ವ್ಯವಹಾರದ ಜೀವನದ ವಿಷಯದಲ್ಲಾಗಲಿ ಸಾಹಿತ್ಯದ ವಿಷಯದಲ್ಲಾಗಲಿ ಆಗಲಿಲ್ಲ. ಆದ್ದರಿಂದ ಎಲ್ಲರೂ ಒಪ್ಪಿದ್ದ ವಿಷಯವನ್ನು ಚರ್ಚಿಸಬೇಕಾದದ್ದಿರಲಿಲ್ಲ. ಈ ಕಾರಣದಿಂದ ಮಾತ್ರವಲ್ಲದೆ ಸಾಹಿತ್ಯವು ಎಲ್ಲರಿಗೂ ಒಂದೇ ರೀತಿಯಾಗಿ ತಿಳಿಯಬೇಕೆಂದು ಪ್ರಯತ್ನಪಟ್ಟರೂ ವಿಮರ್ಶೆಯು ಬೇಕಾಗುವುದು. ನಮ್ಮಲ್ಲಿ ಸಾಹಿತ್ಯದ ತಿರುಳೆಲ್ಲ ಪಂಡಿತರಿಗೆ ತಕ್ಕದ್ದೆಂದೂ ಪಾಮರರಿಗೆ ಅದರ ಮೇಲ್ಭಾಗವೂ ಅದರಿಂದ ಬರಬಹುದಾದ ನೀತಿಯೂ ತಿಳಿದರೆ ಸಾಕೆಂದೂ ಅಭಿಪ್ರಾಯವಿತ್ತು. ಇದು ಸರಿಯೆ ಎಂದು ನಾವು ಇಲ್ಲಿ ವಿಚಾರಮಾಡಬೇಕಾದದ್ದಿಲ್ಲ. ಹೀಗೆ ಅಭಿಪ್ರಾಯವಿದ್ದದ್ದರಿಂದ ಸಾಹಿತ್ಯದ ವಿಚಾರವನ್ನು ಚೆನ್ನಾಗಿ ತಿಳಿಯಬೇಕೆಂದವರು ಗುರುಸಾನ್ನಿಧ್ಯದಲ್ಲಿ ಸಾವಧಾನವಾಗಿ ಕಲಿತುಕೊಳ್ಳುತ್ತಿದ್ದರು. ಉಳಿದವರಿಗೆ ಆ ವಿಷಯಗಳನ್ನು ಅಷ್ಟು ವಿವರವಾಗಿ ತಿಳಿಸಬೇಕಾಗಿ ಇರಲಿಲ್ಲ. ಈ ಎರಡು ಕಾರಣಗಳಿಂದಲೂ ಅಲ್ಲದಿದ್ದರೂ ದುಷ್ಟಗ್ರಂಥಗಳನ್ನು ದಮನ ಮಾಡುವು

ದಕ್ಕೆ ವಿಮರ್ಶೆಯು ಬೇಕಾಗುವುದು. ನಮ್ಮಲ್ಲಿ ಹಿಂದೆ ದುಷ್ಟಗ್ರಂಥಗಳು ಪ್ರಚುರವಾಗುವುದಕ್ಕೆ ಅವಕಾಶವಿರಲಿಲ್ಲ. ಕವಿಯಾಗಬೇಕೆಂದವನು ತನ್ನ ಶಕ್ತಿಯನ್ನು ಸಭೆಗಳ ಮುಂದೆ ಸ್ಥಾಪಿಸಬೇಕಾಗಿತ್ತು. ತಿಳಿದವರ ಸಭೆಗಳು, ಅದರಲ್ಲೂ ಇತರ ಕವಿಗಳು ಇರುತ್ತಿದ್ದಂಥವು; ಇಂಥ ಸಭೆಗಳ ಮುಂದೆ ಬಹಳ ಒಳ್ಳೆಯ ಕಾವ್ಯವಲ್ಲದೆ ಯಾವುದೂ ಉಳಿಯುವ ಸಂಭವವಿರಲಿಲ್ಲ. ಇದಾದಮೇಲೆ ಇದು ಒಳ್ಳೆಯ ಗ್ರಂಥ, ಇದು ಅಲ್ಲ ಎಂದು ಹೇಳಬೇಕಾಗಿರಲಿಲ್ಲ. ಸ್ಪಾರ್ಟಾದೇಶದ ಲಿಕರ್ಗಸನ ನಿಬಂಧಗಳನ್ನನುಸರಿಸಿ ದುರ್ಬಲಶಿಶುಗಳನ್ನು ಅಲ್ಲಿಯ ಜನರು ನಿರ್ಜನವಾದ ಗುಡ್ಡಗಳ ಮೇಲೆ ಬಿಟ್ಟುಬಿಡುತ್ತಿದ್ದರಂತೆ. ಇದರಿಂದ ಸ್ಪಾರ್ಟಾದೇಶದಲ್ಲಿ ಬಲಿಷ್ಠರಲ್ಲದ ಜನರೇ ಇರಲಿಲ್ಲ. ಇದರಂತೆ ಸಭೆಗಳ ವಿಚಕ್ಷಣತೆಯಿಂದ ನಮ್ಮ ಹಿಂದಣ ಸಾಹಿತ್ಯವೆಲ್ಲ ಪುಷ್ಟವಾದ ಗ್ರಂಥಗಳನ್ನು ಮಾತ್ರ ಒಳಕೊಂಡಿತು. ಇದೇ ಕಾರಣದಿಂದ ವಿಮರ್ಶೆಯ ಮತ್ತೊಂದು ಕಾರ್ಯವೂ ಅನಾವಶ್ಯಕವಾಯಿತು. ಜನರಿಗೆ ಒಳ್ಳೆಯ ಗ್ರಂಥವನ್ನು ಪುರಸ್ಕರಿಸಬೇಕೆಂದೂ ಒಳ್ಳೆಯದಲ್ಲದ್ದನ್ನು ತಿರಸ್ಕರಿಸಬೇಕೆಂದೂ ರುಚಿಶುದ್ಧಿಯನ್ನು ಹೇಳಿಕೊಡಬೇಕಾಗಲಿಲ್ಲ. ಒಳ್ಳೆಯದಲ್ಲದ ಗ್ರಂಥಕ್ಕೆ ಉಳಿವೇ ಇಲ್ಲ; ಅಥವಾ ಉಳಿದ ಒಂದೆರಡು ಎಲ್ಲಿಯಾದರೂ ಮೂಲೆಯಲ್ಲಿರುವುವು. ಓದುವವರು ಒಳ್ಳೆಯ ಪುಸ್ತಕವನ್ನು ಓದುವ ಸಂಭವವೇ ಹೆಚ್ಚು. ಉತ್ತಮಸಾಹಿತ್ಯದ ಅನವರತ ಪಠನದಿಂದ ಇನ್ನು ಯಾವ ಶಿಕ್ಷೆಯಿಂದಲೂ ಬಾರದ ರುಚಿಶುದ್ಧಿಯು ಬರುತ್ತದೆ. ಇದರ ಮೇಲೆ ರುಚಿಶುದ್ಧಿ ಇಲ್ಲದವರು ಕೆಲವರು ಒಳ್ಳೆಯದಲ್ಲದ ಗ್ರಂಥಗಳನ್ನು ಓದಬೇಕೆಂದರೂ ಮುದ್ರಾಶಾಲೆಯಿಲ್ಲದ್ದರಿಂದ ಪುಸ್ತಕಗಳು ಸಿಕ್ಕುವುದೇ ದುಸ್ತರ. ಗಂಟೆಯನ್ನು ಹಿಡಿದು ಓಲೆಯಲ್ಲಿ ಒಂದೊಂದು ಅಕ್ಷರವನ್ನೂ ತಿದ್ದಬೇಕಾದ ಕಾಲದಲ್ಲಿ ಬಹಳ ಒಳ್ಳೆಯ ಪುಸ್ತಕ ಮೂರುನಾಲ್ಕನ್ನು ಪ್ರತಿಮಾಡಿಸಿಕೊಂಡವರೇ ಪುಣ್ಯವಂತರು. ಸಿಕ್ಕಿದ ಪುಸ್ತಕವನ್ನೆಲ್ಲಾ ಪ್ರತಿಮಾಡಿಕೊಡುವವರಾರು, ಮಾಡಿಸಿಕೊಳ್ಳುವವರು ಯಾರು? ಹೀಗೆ ಸಭೆಗಳ ನಿರ್ದಾಕ್ಷಿಣ್ಯವಾದ ತಿರಸ್ಕಾರದಿಂದಲೂ ಪ್ರತಿಗಳನ್ನು ಮಾಡುವುದರಲ್ಲಿ ಇದ್ದ ಕಷ್ಟಗಳಿಂದಲೂ ಒಳ್ಳೆಯ ಗ್ರಂಥಗಳು ಮಾತ್ರ ಪ್ರಾಚುರ್ಯಕ್ಕೆ ಬಂದು, ಜನರಲ್ಲಿ ಒಳ್ಳೆಯ ಗ್ರಂಥಗಳ ಸ್ವಾರಸ್ಯವನ್ನು ತಿಳಿಯುವ ಶಕ್ತಿಯು ಹಬ್ಬಿದ್ದದ್ದರಿಂದ ಅಸಾಧುಪ್ರವೃತ್ತಿಗಳನ್ನು ತಿದ್ದುವುದಕ್ಕಾಗಿ ವಿಮರ್ಶೆಯು ಬೇಕಾಗಿರಲಿಲ್ಲ. ಈ ಕಾರಣಗಳಿಂದೆಲ್ಲ ನಮ್ಮ ಸಾಹಿತ್ಯದಲ್ಲಿ ಕವಿಗೂ ಬೇಕಾದ ಲಕ್ಷಣಗ್ರಂಥಗಳ ವಿನಾ ಇತರ ರೀತಿಯ ಸಾಹಿತ್ಯವಿಮರ್ಶೆಯ ಗ್ರಂಥಗಳು ನಿರ್ಮಾಣವಾಗಲಿಲ್ಲ.

ಈಗ ಈ ಸ್ಥಿತಿಯೆಲ್ಲ ವ್ಯತ್ಯಾಸವಾಗಿದೆ. ಕ್ಷುದ್ರಕವಿಯು ಹಿಂದೆ ಸಭೆಗಳ ಎದುರಿಗೆ ನಿಲ್ಲಲಾರದೆ ಓಡುತ್ತಿದ್ದಂತೆ ಈಗ ಓಡಬೇಕಾದದ್ದಿಲ್ಲ. ಈಗ ಅಂಥ ಸಭೆಗಳೇ ಇಲ್ಲ. ಒಳ್ಳೆಯ ಕವಿಯಂತೆಯೇ ಅವನೂ ತನ್ನ ಗ್ರಂಥವನ್ನು ಮರೆಯಿಂದ ಜನರ ಮಧ್ಯಕ್ಕೆ ಎಸೆಯಬಹುದು, ಬೇಕಾದಹಾಗೆ ಅಚ್ಚುಹಾಕಿಸಿ ಹರಡಬಹುದು. ಹಿಂದೆ ಬರೆಯುತ್ತಿದ್ದಂಥ ಕ್ಷುದ್ರಕವಿ ಹಾಗಿರಲಿ. ಓಲೆಗರಿಯಲ್ಲಿ ಬರೆಯುವುದಕ್ಕೆ ಸೋಮಾರಿತನದಿಂದ ಹಿಂದೆಗೆಯುತ್ತಿದ್ದಂಥವರೂ ಕೂಡ ಅನೇಕರು ಈಗ ಬರೆಯಬಹುದು. ಹಿಂದೆ ಒಬ್ಬನು ಕಲಿಯುತ್ತಿದ್ದ ಕಡೆ ಈಗ ನಲವತ್ತು ಜನ ಅಕ್ಷರವನ್ನು ಕಲಿಯುತ್ತಿದ್ದಾರೆ. ಇದರಿಂದ ಬರೆಯುವ ಜನರ ಸಂಖ್ಯೆಯು ಹೆಚ್ಚಿದೆ, ಬರೆಯುವ ಪುಸ್ತಕಗಳ ಸಂಖ್ಯೆಯು ಹೆಚ್ಚಿದೆ; ಈ ಕಾರಣಗಳಿಂದ ಒಳ್ಳೆಯ ಪುಸ್ತಕ ಇದು, ಇದು ಒಳ್ಳೆಯದಲ್ಲದ್ದು ಎಂದು ನಿರ್ಧರಿಸುವುದೇ ಪ್ರಯಾಸವಾಗಿದೆ. ಅಲ್ಲದೆ ನಮ್ಮ ಜೀವನವು ಬಹುಮುಖವಾದಂತೆ ನಮ್ಮ ಸಾಹಿತ್ಯದ ಭಾಗಗಳೂ ಬಹುಮುಖವಾಗುತ್ತಬಂದಿವೆ. ಇವುಗಳನ್ನೆಲ್ಲ ಚರ್ಚೆಮಾಡಿ ಅವುಗಳ ಸಾಧುತ್ವವನ್ನು ನಿರ್ಧರಿಸುವುದು ಆವಶ್ಯಕವಾಗಿದೆ. ಅಲ್ಲದೆ ಒಳ್ಳೆಯ ಕಾವ್ಯದ ಅಭಿರುಚಿಯನ್ನು ಪೋಷಿಸುತ್ತಿದ್ದ ಸಂದರ್ಭಗಳು ಕಡಿಮೆಯಾದ ಹಾಗೆ ಜನರಲ್ಲಿ ರಸಾನುಭವದ ಶಕ್ತಿಯೇ ಕಡಿಮೆಯಾಗುತ್ತಿದೆ. ಸಂಗೀತವನ್ನು ಮತ್ತೆಮತ್ತೆ ಕೇಳದೆ ಸಂಗೀತದ ರುಚಿಯು ನೇರವಾಗಿರುವುದಿಲ್ಲ; ಚಿತ್ರದಲ್ಲೂ ಹೀಗೆಯೇ ಸಾಹಿತ್ಯದಲ್ಲಿಯೂ ಹೀಗೆಯೇ. ಆದರೆ ಈಗ ಸಾಮಾನ್ಯವಾಗಿ ಜನರು ಕೊಳ್ಳಬಹುದಾದ ಪುಸ್ತಕಗಳಲ್ಲಿ ಹತ್ತರಲ್ಲಿ ಒಂದು ಒಳ್ಳೆಯದಿರಬಹುದೋ ಇಲ್ಲವೋ ಸಂದೇಹಪಡಬಹುದು. ಇದರಿಂದ ಜನರ ಅಭಿರುಚಿಯನ್ನು ಶುದ್ಧವಾಗಿರಿಸಲು ಪ್ರಬಲವಾದ ಪ್ರಯತ್ನವನ್ನು ಮಾಡುವುದು ಆವಶ್ಯಕವಾಗಿದೆ. ಇದೆಲ್ಲ ಕಾರಣಗಳಿಂದ ನಮ್ಮ ಸಾಹಿತ್ಯದಲ್ಲಿ ವಿಮರ್ಶೆಯು ಈಗ ವ್ಯಕ್ತಸ್ವರೂಪವನ್ನು ಹೊಂದಬೇಕಾಗಿದೆ. ವಿಮರ್ಶೆಯನ್ನೂ ಸಾಹಿತ್ಯವು ಇತರ ಕಾವ್ಯರೂಪಗಳಂತೆ ಯತ್ನಪೂರ್ವಕವಾಗಿ ಪ್ರಚುರಗೊಳಿಸಬೇಕಾಗಿದೆ.

ಎಂದರೆ ಹಿಂದೆ ಇದ್ದದ್ದು ಒಳ್ಳೆಯದೆಂದೂ ಈಗ ಇರುವ ಸ್ಥಿತಿ ಕೆಟ್ಟದ್ದೆಂದೂ ನನ್ನ ಅಭಿಪ್ರಾಯವಲ್ಲ. ಗ್ರಂಥರಚನೆಯ ಮೊದಲನೆಯ ಪಾಠವನ್ನೇ ಅರಿಯದ ಗ್ರಂಥಕಾರರು ನಿರ್ಮಿಸಿರುವ ಕೇವಲ ಶುಷ್ಕವಾದ ಪುಸ್ತಗಳನ್ನು ನೋಡಿದ ಕ್ಷಣದಲ್ಲಿ ನಾವು ಯಾರಾದರೂ ಕಾಲ ಹೀಗಾಯಿತಲ್ಲ ಎಂದುಕೊಳ್ಳಬಹುದು. ಆದರೆ ಇಂತಹ ಬೇಸರವು ಅನಾವಶ್ಯಕ. ತಿಳಿವು ಪ್ರಪಂಚಕ್ಕೆಲ್ಲಾ ಹರಡಲೆಂಬುದೇ ನಮ್ಮೆಲ್ಲರ ಆಸೆ. ತಿಳಿವು ಪ್ರಪಂಚಕ್ಕೆಲ್ಲಾ ಹರಡಬೇಕಾದರೆ ಎಷ್ಟು ಜನ ಕೆಲಸಮಾಡಿದರೆ

ಸಾಕಾಗಬಹುದು ? ಈಗ ಪುಸ್ತಕಗಳನ್ನು ಬರೆಯುವವರೆಲ್ಲಾ ಒಂದೇ ರೀತಿಯಾಗಿ ಒಳ್ಳೆಯ ಗ್ರಂಥಗಳನ್ನು ಬರೆದರೂ ಮನುಷ್ಯವರ್ಗಕ್ಕೆಲ್ಲ ತಿಳಿವನ್ನು ಹರಡಲಾರರು. ಇಂಥದರಲ್ಲಿ ಮುಂದೆ ಸಾಕಾದಷ್ಟು ಜನ ಎಲ್ಲರೂ ಒಳ್ಳೆಯ ಪುಸ್ತಕವನ್ನೇ ಬರೆಯ ಬೇಕಾದರೆ ಅದು ಈಗಳಿಂದ ಜನರಲ್ಲಿ ಅಭ್ಯಾಸವಾಗಬೇಕು. ನಮ್ಮ ಸದ್ಯದ ಅವ ಸ್ಥೆಯು ಈ ಅಭ್ಯಾಸದ ಅವಸ್ಥೆ. ಮುಂದಣ ಸಾಹಿತ್ಯರಾಜ್ಯದ ವ್ಯವಸ್ಥೆಗೆ ಈಗಣ ಅನಾಯಕತ್ವವು ಒಂದು ಮಜಲು. ಆದದ್ದರಿಂದ ಈಗಣ ಅವಸ್ಥೆಯ ವಿಷಯದಲ್ಲಿ ನಾವು ಬಹಳ ಬೇಸರಪಡಬಾರದು ; ಸಾಧ್ಯವಾದಷ್ಟು ಜಾಗ್ರತೆಯಲ್ಲಿ ಸಾಹಿತ್ಯದ ಸ್ವರೂಪವನ್ನೂ ಲಕ್ಷಣವನ್ನೂ ಜನರಿಗೆ ತಿಳಿಯುವಂತೆ ಮಾಡಿ ಒಳ್ಳೆಯಗ್ರಂಥಗಳ ರಚನೆಯೂ ಅವುಗಳ ಪಠನವೂ ಕವಿಗೂ ಜನರಿಗೂ ಸುಲಭವಾಗುವಂತೆ ಮಾಡ ಬೇಕು. ಇದಕ್ಕೆ ವಿಮರ್ಶೆಯನ್ನು ಅಭಿವೃದ್ಧಿಗೆ ತರಬೇಕು. ಆದ್ದರಿಂದ ಈ ಉಪ ನ್ಯಾಸದಲ್ಲಿ ವಿಮರ್ಶೆಯ ಸ್ವರೂಪವನ್ನೂ ಅದು ಈಗ ಕೈಗೊಳ್ಳಬೇಕಾಗಿರುವ ಕಾರ್ಯ ಯಾವುದೆಂಬುದನ್ನೂ ಸ್ವಲ್ಪಮಟ್ಟಿಗೆ ವಿಚಾರಮಾಡಿದೆ.

(೨)

ವಿಮರ್ಶೆಯ ಕಾರ್ಯ ಯಾವುದು ಎಂದು ಸ್ವಲ್ಪಮಟ್ಟಿಗೆ ಮೇಲೆ ಸೂಚಿಸಿ ಇದೆ. ಒಂದು ಕಾವ್ಯವನ್ನು ಸ್ವೀಕರಿಸುವುದೇ ತ್ಯಜಿಸುವುದೇ ಎಂದು ನಿರ್ಧರಿಸು ವುದು ಅದರ ಕಾರ್ಯದಲ್ಲಿ ಸೇರಿದ್ದು. ಸರಿಯಾದ ಕಾವ್ಯದಲ್ಲಿ ರುಚಿಯನ್ನು ಉಂಟುಮಾಡುವುದೂ ಹೀಗೆಯೇ. ಕಾವ್ಯ ಹೀಗಿರಬೇಕು ಹಾಗಿರಬೇಕು ಎನ್ನು ವುದೂ ಆ ಕಾರ್ಯದಲ್ಲಿ ಸೇರಿದ್ದೇ; ಆದರೆ ಇದೆಲ್ಲ ವಿಮರ್ಶೆಯು ಧರಿಸುವ ಆಕಾರಗಳೇ ಹೊರತು ಕೇವಲ ವಿಮರ್ಶೆಯ ಸಮಸ್ತವಲ್ಲ. ಹಾಗಾದರೆ ವಿಮರ್ಶೆಯ ಸಮಸ್ತವು ಯಾವುದೆನ್ನಬಹುದು. ಇದನ್ನು ತಿಳಿಯಬೇಕಾದರೆ ವಿಮರ್ಶೆಯ ಮೂಲ ಯಾವು ದೆಂದು ವಿಚಾರಮಾಡಬೇಕು, ಅದರ ಹೃದಯವೇನೆಂದು ತಿಳಿಯಬೇಕು. ಅದರ ಮೂಲವನ್ನು ಕುರಿತು ಇಲ್ಲಿ ಸ್ವಲ್ಪ ವಿಚಾರಿಸೋಣ.

ವಿಮರ್ಶೆಯ ಮೂಲ ಯಾವುದು ? ಕಾವ್ಯದ ಮೂಲವೇ ವಿಮರ್ಶೆಯ ಮೂಲ. ಸಹಜವಾದ ಭಾವವ್ಯಂಜನವೆಲ್ಲ ಸಹಜವಾದ ಒಂದು ನಿಯಮವನ್ನು ಅನುಸರಿಸಿ ನಡೆಯುತ್ತದೆ. ಭಾವವ್ಯಂಜನವೇ ಕಾವ್ಯದ ಹೃದಯ ; ಅದು ಸ್ವಭಾವ ವಾಗಿ ಅನುಸರಿಸುವ ನಿಯಮವೇ ವಿಮರ್ಶೆಯ ಹೃದಯ. ಆದದ್ದರಿಂದ ಕಾವ್ಯಕ್ಕೂ ವಿಮರ್ಶೆಗೂ ಕವಿಯ ಆವೇಶವೇ ಮೂಲ. ಆವೇಶದ ಅಧೀನದಲ್ಲಿರುವ ಮನುಷ್ಯ ನಿಗೆ ಹೇಳುವ ವಿಷಯ ಬರುವಂತೆ ಹೇಳುವ ರೀತಿಯೂ ಬರುವುದು. ಉತ್ತಮವಾದ ಸಂಸ್ಕಾರದಿಂದ ಬರುವ ಉತ್ತಮ ಕಾವ್ಯದಲ್ಲಿ ಹೇಳುವ ರೀತಿಯನ್ನು ಕುರಿತು

ಕವಿಯು ಯೋಚಿಸಬೇಕಾದದ್ದಿಲ್ಲ. ನೋವಾದಾಗ ಕ್ಲೋರೋಫಾರವಿನಲ್ಲಿರುವ ಜೀವಿಯೂ ಅಯ್ಯೋ ಎನ್ನುವುದು. ಸಾಮಾನ್ಯ ಜೀವಿಗೆ ಈ ಸರಳಭಾವವು ಹೇಗೋ ಹಾಗೆ ಉನ್ನತಜೀವಿಗಳಿಗೆ ಆವೇಶದಲ್ಲಿ ಎಂತೆಂಥ ಗಹನ ಭಾವಗಳೂ ಸ್ವಚ್ಛವಾಗುವವು, ಸುಲಭವಾಗಿ ಹೇಳಲು ಬಾಯಿಗೆ ಬರುವುವು. ಹೇಳುವ ರೀತಿಯನ್ನು ಕುರಿತು ಯೋಚನೆಯೇ ಇಲ್ಲವಾದದ್ದರಿಂದ ಇಲ್ಲಿ ವಿಮರ್ಶೆಯು ಬೇರೆಯಾಗಿ ಇಲ್ಲ. ವೈಣಿಕ ಶಿಖಾಮಣಿಗಳು ವೀಣೆಯನ್ನು ನುಡಿಸುವಾಗ ಕುಳಿತು ಕೇಳಿದವರು ಒಂದು ವಿಷಯವನ್ನು ಯಾವಾಗಲಾದರೂ ನೋಡಿರಬಹುದು. ರಾಗದ ಕೇಂದ್ರದಲ್ಲಿ ನಾವು ಅತ್ಯಾಶ್ಚರ್ಯ ಅತ್ಯಾನಂದದಲ್ಲಿರುವಾಗ ಯಾವುದೋ ಒಂದು ಸ್ವರರೇಣುಸ್ವರ್ಗವನ್ನು ಮುಟ್ಟಲು ನಾವು ಭೇಷ್ ಎನ್ನುವ ಮೊದಲು ವೈಣಿಕರೇ ಭೇಷ್ ಎನ್ನುವರು. ತಿಳಿವಿಲ್ಲದ ಜನರು ಇದನ್ನು ನೋಡಿ ಇದೇನು ತಮ್ಮ ಬುದ್ಧಿಯನ್ನು ತಾವೇ ಹೊಗಳಿಕೊಳ್ಳುತ್ತಾರೆ ಎಂದುಕೊಳ್ಳಬಹುದು; ಕಲೆಯ ವಿಷಯವನ್ನು ತಿಳಿದವರು ಹೀಗೆಂದುಕೊಳ್ಳುವುದಿಲ್ಲ. ಆ ಸಮಯದಲ್ಲಿ ವೀಣೆಯನ್ನುನುಡಿಸುವ ವೈಣಿಕನು ಬೇರೆ, ಶ್ಲಾಘಿಸುವ ವೈಣಿಕನು ಬೇರೆ; ಈ ವೈಣಿಕಾಂಶಗಳು ಎರಡೂ ವೈಣಿಕಶಿಖಾಮಣಿಯಲ್ಲಿ ಸೇರಿವೆ. ಶ್ಲಾಘನೆಮಾಡುವ ವೈಣಿಕಾಂಶವು ಆವೇಶದ ವಿಷಯವನ್ನು ಅಲ್ಲಿಯ ಎಲ್ಲರಿಗಿಂತ ಚೆನ್ನಾಗಿ ತಿಳಿದ ಸಭಿಕನಂತೆ ಮಾತ್ರ. ಆ ವೀಣೆ ಬಾರಿಸುವುದರಲ್ಲಿರುವ ಸುಖವನ್ನು ಇತರ ಎಲ್ಲರಿಗಿಂತ ಚೆನ್ನಾಗಿ ಅನುಭವಿಸಿ ಈ ಸಭಿಕನು ಇನ್ನು ಯಾರಾದರೂ ಹೇಳಬಹುದಾಗಿದ್ದಂತೆ ಉತ್ಸಾಹದಿಂದ ಭೇಷ್ ಎಂದು ಹೇಳುತ್ತಾನೆ—ನುಡಿಸುವ ಶಕ್ತಿ ಕಲಾ ಅಂಶ, ಈ ಶ್ಲಾಘನಶಕ್ತಿಯು ವಿಮರ್ಶೆಯದು. ಹೀಗೆ ಉನ್ನತಾವೇಶದಲ್ಲಿ ಎಲ್ಲ ನಿರ್ಮಾಣಶಕ್ತಿಯೊಡನೆ. ವಿಮರ್ಶಕ ಶಕ್ತಿಯೂ ಲೀನವಾಗಿರುತ್ತದೆ. ಆವೇಶದ ಔನ್ನತ್ಯದಲ್ಲಿಯೂ ವಿಮರ್ಶೆಯು ಸೇರಿ ಇದೆ ಎಂದಮೇಲೆ ಆವೇಶದ ಇತರ ಮಟ್ಟಗಳಲ್ಲಿ ಅದು ಸೇರಿದೆ ಎಂಬುದನ್ನು ಹೇಳಬೇಕಾದದ್ದಿಲ್ಲ. ವಿಮರ್ಶೆ ಇರಲೇ ಆರದೋ ಏನೋ ಎಂದು ಸಂದೇಹವನ್ನು ಉಂಟುಮಾಡಬಹುದಾದ ಔನ್ನತ್ಯದಲ್ಲಿಯೂ ಇರುವ ಈ ಶಕ್ತಿಯು ಆವೇಶದ ತಗ್ಗಿನ ಸ್ಥಳಗಳಲ್ಲಿ ಹೆಚ್ಚುಹೆಚ್ಚು ಪ್ರಾಬಲ್ಯವನ್ನು ಹೊಂದುತ್ತದೆ; ಇಲ್ಲಿ ಭಾವವನ್ನು ಹೊರಪಡಿಸುವುದರಲ್ಲಿ ಕವಿಯು ಭಾವವನ್ನು ಮಾತ್ರ ಅಲ್ಲದೆ ಅದು ವ್ಯಕ್ತವಾಗುವ ರೀತಿಯನ್ನು ಕುರಿತು ಹೆಚ್ಚಾಗಿ ಯೋಚಿಸುತ್ತಾನೆ. ಕಾವ್ಯವು ಒಳ್ಳೆಯದಾಗಬೇಕೆಂದು ಅವನಿಗೆ ಆಸೆ ಇರುತ್ತದೆ; ಭಾವವು ಸರಿಯಾದುದಾಗಿರಬೇಕು ಅದು ಸರಿಯೂದ ರೀತಿಯಲ್ಲಿ ವ್ಯಕ್ತವಾಗಬೇಕು ಎಂದು ಅವನು ಅಪೇಕ್ಷಿಸುತ್ತಾನೆ. ಅದು ಹಾಗಾಗಲೆಂದು ಅವನು ತನ್ನ ಕೈಯಲ್ಲಾದುದನ್ನು ಮಾಡುತ್ತಾನೆ. ಇದ

ಕ್ಕೆಲ್ಲ ಅವನು ಮಾಡುವ ಯೋಚನೆಯು ವಿಮರ್ಶೆಗೆ ಸೇರಿದ್ದು. ಬರೆಯುವುದರಲ್ಲಿ ಅವನು ಕವಿ ಹೇಗೆಯೋ ಹಾಗೆ ಬರೆಯುವ ರೀತಿ ಪದ್ಧತಿ ಮೊದಲಾದವನ್ನು ಕುರಿತ ಯೋಚನೆಯಲ್ಲಿ ವಿಮರ್ಶಕನು. ಅವನು ಕಾವ್ಯವನ್ನು ಬರೆದಮೇಲೆ ಅದನ್ನು ಓದಿ ಅನುಭವಿಸುತ್ತಾನೆ; ತನ್ನ ಉದ್ದೇಶವು ನೆರವೇರಿತೇ ಎಂದು ನೋಡುತ್ತಾನೆ; ಇದರಲ್ಲಿ ಅವನು ವಿಮರ್ಶಕನು; ನೋಡಿದಮೇಲೆ ಇದು ಚೆನ್ನಾಯಿತು, ಇಲ್ಲಿ ಚೆನ್ನಾಗಿ ಬರಲಿಲ್ಲ ಎಂದು ತೃಪ್ತನೋ ಅತೃಪ್ತನೋ ಆಗಬಹುದು; ಇದರಲ್ಲಿಯೂ ಅವನು ವಿಮರ್ಶಕನೇ; ಎಂದರೆ ವಿಮರ್ಶೆ ಎಂಬುದು ಕವಿಯಲ್ಲಿಯೇ ಇರತಕ್ಕ ಒಂದು ಲಕ್ಷಣ. ಉನ್ನತಾವೇಶದಲ್ಲಿ ಅದು ಲೀನವಾಗಿ ಹೋಗಿರುತ್ತದೆ. ಆವೇಶದ ತಗ್ಗುಗಳಲ್ಲಿ ಪ್ರತ್ಯೇಕವಾಗಿಯೇ ಕಾಣುತ್ತದೆ. ಅಂತೂ ಎತ್ತರದಲ್ಲಾದರೂ ತಗ್ಗಿನಲ್ಲಾದರೂ ಆವೇಶದೊಂದಿಗೆ ತಪ್ಪದೆ ಇರುತ್ತದೆ. ಅದು ಇಲ್ಲದೆ ಕಾವ್ಯರಚನೆ ಆಗುವುದಿಲ್ಲ.

ಕವಿಯಲ್ಲಿರುವ ಈ ವಿಮರ್ಶನಶಕ್ತಿಯು ಯಾವ ಯಾವ ಕೆಲಸವನ್ನು ಮಾಡಬೇಕಾಗುತ್ತದೆ? ಅದರ ಮೊದಲ ಕಾರ್ಯವು ಭಾವದ ವ್ಯಂಜನವನ್ನು ಕುರಿತದ್ದಲ್ಲ; ಭಾವವನ್ನೇ ಕುರಿತದ್ದು. ಅದು ಭಾವವನ್ನು ಗ್ರಹಿಸಿ ಅದು ವ್ಯಕ್ತವಾಗುವ ದಾರಿಯನ್ನು ಹುಡುಕುವುದು, ಆದರೆ ಮೊದಲು ಭಾವವನ್ನು ಗ್ರಹಿಸುವುದು. ಗ್ರಹಿಸಿದಮೇಲೆ ಭಾವವನ್ನು ಪರೀಕ್ಷಿಸುವುದು. ಆಮೇಲೆ ಅದರಲ್ಲಿ ಎಷ್ಟನ್ನು ಇರಿಸಿಕೊಳ್ಳುವುದು ಎಂದು ನೋಡುವುದು. ಅದನ್ನು ಹೇಗೆ ಹೇಳುವುದು ಎಂದು ನೋಡುವುದು. ಹೀಗೆ ಮೊದಲು ಭಾವವನ್ನೂ ಆಮೇಲೆ ಅದನ್ನು ವ್ಯಕ್ತಗೊಳಿಸುವ ದಾರಿಯನ್ನೂ ನೋಡುವುದೇ ಈ ವಿಮರ್ಶೆಯು ಮಾಡಬೇಕಾಗಿರುವ ಕೆಲಸ. ಅದು ಉನ್ನತಾವೇಶದಲ್ಲಿ ತಿಳಿಯದಂತೆ ವರ್ತಿಸಬಹುದು; ಆದರೂ ಅದು ಮಾಡುವ ಕೆಲಸ ಇದು. ಅದು ಈ ಕೆಲಸವನ್ನು ಎಷ್ಟು ಚೆನ್ನಾಗಿ ಮಾಡಿದರೆ ಕಾವ್ಯವು ಅಷ್ಟು ಚೆನ್ನಾಗಿ ಆಗುವುದು. ಆವೇಶದ ಸಾಮುಗ್ರಿ ಒಂದೇ ಆಗಿದ್ದು ವಿಮರ್ಶೆ ಬೇರೆಯಾಗಿರುವ ಇಬ್ಬರು ಕವಿಗಳು ಒಂದೇ ವಿಷಯವನ್ನು ಕುರಿತು ಬರೆದರೆ ಗ್ರಂಥವು ಎರಡು ವಿಧವಾಗುವುದು. ವಿಮರ್ಶೆಯು ಹೆಚ್ಚಾಗಿದ್ದವನ ಗ್ರಂಥವು ಉತ್ತಮವಾಗುವುದು. ಎಂದರೆ ಅದು ಓದುವವರಲ್ಲಿ ಹೆಚ್ಚಿನ ಸಂಸ್ಕಾರವನ್ನು ಉಂಟುಮಾಡುವುದು.

(೩)

ಇದೇ ವಿಮರ್ಶೆಯ ಕಾರ್ಯ ಕಾವ್ಯವನ್ನು ಬರೆಯುವವನಲ್ಲಾಗಲಿ ಕಾವ್ಯವನ್ನು ಓದುವವನಲ್ಲಿ ಆಗಲಿ ವಿಮರ್ಶೆಯಿಂದ ಆಗಬೇಕಾದದ್ದು ಇದೇ. ಕಾವ್ಯದಿಂದ ಬರಬೇಕಾದ ಸಂಪೂರ್ಣ ಸಂಸ್ಕಾರವು ಓದುವವನಿಗೆ ಬರುವಂತೆ ಮಾಡತಕ್ಕದ್ದು

ಈ ಕಾರ್ಯದ ಮುಖ್ಯಾಂಶ. ಹೀಗೆ ಮಾಡುವುದಕ್ಕೆ—ಕವಿಯು ಉತ್ತಮವರ್ಗದವನಾದಲ್ಲಿ—ವಿಮರ್ಶಕನು ಮೊದಲು ತೊಡಗಬೇಕಾದದ್ದು ಒಂದು ಪ್ರಯತ್ನದಲ್ಲಿ ಮಾತ್ರ :—ಎಷ್ಟು ಸಾಧ್ಯವಾದರೆ ಅಷ್ಟು ಊಹೆಯನ್ನೂ ವೆಚ್ಚಮಾಡಿ ಅವನು ಕವಿಯ ಅವಸ್ಥೆಯನ್ನು ಭಾವನೆಯಲ್ಲಿ ಅನುಭವಿಸುವುದಕ್ಕೆ ಯತ್ನಮಾಡಬೇಕು. ಇದರಿಂದ ಕಾವ್ಯದ ಆಶಯವು ತಿಳಿಯುವುದು. ಇದು ಅವನು ಏರಬೇಕಾದ ಮೊದಲ ಸೋಪಾನ. ಆಮೇಲೆ ಅವನು ಇಷ್ಟವಿದ್ದರೆ ಕವಿಯ ಭಾವವನ್ನು ವಿವರಿಸುವುದಕ್ಕೆ ಯತ್ನಮಾಡಬಹುದು. ಇದು ಎರಡನೆಯ ಸೋಪಾನ. ಕಾವ್ಯವು ಇಷ್ಟು ಉತ್ತಮವಾದುದಲ್ಲವಾದರೂ ವಿಮರ್ಶೆಯ ಮೊದಲ ಕಾರ್ಯವು ಅದರ ಆಶಯವನ್ನು ಊಹೆಯಿಂದ ಗ್ರಹಿಸತಕ್ಕದ್ದೇ. ಆದರೆ ಇದಾದಮೇಲೆ ಅದರಲ್ಲಿ ತಪ್ಪುನೆಪ್ಪು ಕಾಣಬಹುದು. ಹೀಗಿದ್ದರೆ ಕಾವ್ಯದ ಆಶಯವನ್ನು ತಿಳಿಸುವುದರಲ್ಲಿ ಇಂತಹ ಸಂದರ್ಭದಲ್ಲಿ ವಿಮರ್ಶಕನು ಆ ತಪ್ಪುನೆಪ್ಪನ್ನೂ ಹೇಳಬಹುದು. ಅನೇಕ ವೇಳೆ ಹೇಳಬೇಕಾಗುವುದು. ಹೀಗೆ ಮಾಡುವುದರಲ್ಲೂ ಮುಖ್ಯವಾಗಿ ವಿಮರ್ಶೆಯ ಕಾರ್ಯವು ಗ್ರಂಥವನ್ನು ಚೆನ್ನಾಗಿ ತಿಳಿದು ಇತರರಿಗೆ ಅದರ ಆಶಯ ತಿಳಿಯುವಂತೆ ಮಾಡುವುದು.

ಪ್ರಯತ್ನದ ನೆಲೆ ಒಂದು ಎಂದ ಮಾತ್ರಕ್ಕೆ ಅದರ ಮುಖವೂ ಒಂದೇ ಎಂದು ತಿಳಿಯಬಾರದು. ಗ್ರಂಥದಲ್ಲಿರುವ ರೀತಿ ವಿಭೇದಗಳಿಗೆಲ್ಲ ತಕ್ಕಂತೆ ವಿಮರ್ಶೆಯಲ್ಲಿಯೂ ಉದ್ದೇಶವು ಬೇರೆಬೇರೆ ಇರುವುದು. ಕಾವ್ಯವು ವ್ಯಂಜಕಕಾವ್ಯವಾಗಿದ್ದರೆ ಒಂದು ರೀತಿಯಿಂದಲೂ ವರ್ಣನಾಕಾವ್ಯವಾಗಿದ್ದರೆ ಒಂದು ರೀತಿಯಿಂದಲೂ ಕಾವ್ಯದ ವಸ್ತುವನ್ನು ತಿಳಿಯಬೇಕಾಗುವುದು. ಕವಿಯು ತನ್ನ ದುಃಖದಲ್ಲಿ ಪ್ರಪಂಚವೇ ಮುಳುಗಿದಂತೆ ಮಾತನಾಡಬಹುದು. ಅದು ಪ್ರಪಂಚದ ಅವಸ್ಥೆಯನ್ನು ವರ್ಣಿಸುವುದಿಲ್ಲ; ಅವನ ಅವಸ್ಥೆಯನ್ನು ಸೂಚಿಸುವುದು. ಕಾವ್ಯದಲ್ಲಿಯ ಆ ವರ್ಣನೆಯನ್ನು ಅವನ ದುಃಖದ ಅಳವು ಎಂದು ತೆಗೆದುಕೊಳ್ಳದೆ ಪ್ರಪಂಚದ ವರ್ಣನೆಯೆಂದು ತೆಗೆದುಕೊಂಡರೆ ಕಾವ್ಯವು ಅಸಂಬದ್ಧ ಪ್ರಲಾಪವಾಗಿ ಕಾಣುವುದು. ವಿಮರ್ಶೆಯು ಪರಾಮರ್ಶವಿಲ್ಲದೆ ವ್ಯರ್ಥವಾಗುವುದು. ಇದರಂತೆ ಒಳ್ಳೆಯ ಕಾವ್ಯಗಳಲ್ಲಿ ನೂರು ಭಾವಗಳಿರುತ್ತವೆ; ವಿಮರ್ಶೆಯು ಎಲ್ಲವನ್ನೂ ಕವಿಯ ಕಡೆಯಿಂದ ಊಹಿಸಿ ತಿಳಿಯಬೇಕು. ಎಂದರೆ ವಿಮರ್ಶೆಯ ಮುಖ್ಯ ಲಕ್ಷಣ ಸಹಾನುಭೂತಿ. ಹೀಗೆ ಸಹಾನುಭೂತಿಯಿಂದ ಕಾವ್ಯದ ವಸ್ತುವನ್ನು ಗ್ರಹಿಸುವುದಕ್ಕೆ ವಿಮರ್ಶೆಯ ಪ್ರಯತ್ನವು ಬಹು ಮುಖವಾಗುವುದು. ಕವಿಯ ಆವೇಶವನ್ನು ತಿಳಿಯುವುದು

ಸರಿಯಷ್ಟೆ; ಅದರ ಲಕ್ಷ್ಯವನ್ನು ಊಹೆಯಿಂದ ಗ್ರಹಿಸುವುದು ಸರಿಯಷ್ಟೆ. ಇದರ ಜತೆಗೆ ವಿಮರ್ಶೆಗೆ ಕಾಲದ ಅರಿವೂ ಬೇಕಾಗುವುದು. ಸಾವಿರ ವರುಷದ ಹಿಂದಣ ಗ್ರಂಥಕ್ಕೂ ಈಗಣ ಗ್ರಂಥಕ್ಕೂ ಒಂದೇ ಅಳತೆಯನ್ನು ತರಬಾರದು. ಒಂದು ಕಾಲದ ಜನರ ಅವಸ್ಥೆಗೆ ಬರೆದಿರುವ ಗ್ರಂಥವನ್ನು ಇನ್ನೊಂದು ಕಾಲದಲ್ಲಿ ತಿಳಿಯ ಬೇಕಾದರೆ ಆ ಕಾಲದ ಜನರ ವಿಷಯವನ್ನು ಇವರು ಸರಿಯಾಗಿ ತಿಳಿದಿರಬೇಕು. ಪಿಶಾಚಗಳುಂಟೇ ಇಲ್ಲವೇ ಎಂಬ ವಿಷಯದಲ್ಲಿ ಇಲ್ಲವೆಂಬುದೇ ನಮ್ಮ ಅಭಿಪ್ರಾಯ ವಾದರೂ ಹ್ಯಾಮ್‌ಲೆಟ್ ನಾಟಕದಲ್ಲಿ ಬರುವ ಪ್ರೇತವು ಸುಳ್ಳು ಆದದ್ದರಿಂದ ಹ್ಯಾಮ್‌ಲೆಟ್ ನಾಟಕವು ಒಳ್ಳೆಯದಲ್ಲ ಎಂದು ಅದನ್ನು ಎಸೆಯಲಾಗುವುದಿಲ್ಲ. ಹ್ಯಾಮ್‌ಲೆಟ್‌ನಲ್ಲಿ ಪ್ರೇತ, ಶಾಕುಂತಲದಲ್ಲಿ ಹೆಂಗಸು ಮಾಯವಾಗುವುದು, ಹೀಗೆ ಬೇರೆಬೇರೆ ಕಾವ್ಯದಲ್ಲಿ ಬರುವ ಬೇರೆಬೇರೆ ಅಸಂಭವವೆನ್ನಬಹುದಾದ ಸಂಗತಿಗೂ ನಾವು ಇದೇ ರಸಜ್ಞತೆಯನ್ನು ತರಬೇಕು. ಹೀಗೆ ಆವೇಶದ ಮೂಲವನ್ನು ಗ್ರಹಿಸುವು ದರಿಂದಲೂ, ಕಾವ್ಯದ ಲಕ್ಷ್ಯವನ್ನು ತಿಳಿದುಕೊಳ್ಳುವುದರಿಂದಲೂ ಕಾಲಪರಿಜ್ಞಾನದ ದೆಸೆಯಿಂದಲೂ ವಿಮರ್ಶಕನಿಗೆ ಕಾವ್ಯದ ಭಾವವು ಸರಿಯಾಗಿಯೂ ತಿಳಿಯುವುದು; ಅವನಿಗೆ ಕವಿಯ ವಿಷಯದಲ್ಲಿ ಸಹಾನುಭೂತಿ ಸಾಧ್ಯವಾದಷ್ಟೂ ಸಂಪೂರ್ಣವಾ ಗುವುದು.

ಇದು ವಿಮರ್ಶೆಯ ಕಾರ್ಯದ ಮೊದಲಭಾಗ, ಮುಖ್ಯಭಾಗ. ವಿಮರ್ಶ ಕನು ಸರಿಯಾಗಿ ಸಾಧಿಸಿದಲ್ಲಿ ಉನ್ನತಾವೇಶದಲ್ಲಿ ಗಾಯಕನು ಗಾನವನ್ನು ಶ್ಲಾಘಿಸುವ ಅವಸ್ಥೆಯಲ್ಲಿ ಅವನ ವಿಮರ್ಶಾಂಶಕ್ಕೆ ಯಾವ ರಸಾನುಭವ ಉಂಟಾ ಗಿರಬೇಕೋ ಅಂಥ ರಸಾನುಭವವು ವಿಮರ್ಶಕನಿಗೆ ಆಗಿರಬೇಕು. ಎಂದರೆ ಆ ವಿಮ ರ್ಶಕಾಂಶವೇ ಬೇರೊಬ್ಬನಲ್ಲಿ ಮೈವೆತ್ತಂತೆ ಇರಬೇಕು. ಆಗ್ಯೆ ಕವಿಗೂ ವಿಮರ್ಶಕ ನಿಗೂ ಭಾವದಲ್ಲಿ ಸಂಪೂರ್ಣವಾದ ಸಂಬಂಧ ಉಂಟಾದಂತಾಯಿತು. ಎಂದರೆ ಒಬ್ಬ ವಿಮರ್ಶಕನ ಹೃದಯದಲ್ಲಿ ರಸಾವಿರ್ಭಾವವನ್ನುಂಟುಮಾಡಿದಾಗ್ಯೆ, ವಿಮರ್ಶ ಕನು ಈ ರಸವನ್ನು ಅನುಭವಿಸಿದಾಗ್ಯೆ, ಒಂದು ಕಾವ್ಯವು ನಿಜವಾಗಿಯೂ ಸಂಪೂ ರ್ಣವಾದ ಹಾಗಾಯಿತು. ಸಾಹಿತ್ಯವೆನ್ನುವುದು ಯಾವ ಒಂದು ಪುಸ್ತಕವೂ ಅಲ್ಲ, ಪುಸ್ತಕಗಳ ಸಮುದಾಯವೂ ಅಲ್ಲ. ಅದು ಕವಿಯ ಹೃದಯದಲ್ಲಿ ಮೊದಲನ್ನುಳ್ಳ ಪಾಠಕನ ಹೃದಯದಲ್ಲಿ ಕೊನೆಯನ್ನುಳ್ಳ ಭಾವಸಮುದಾಯವು. ವಿಮರ್ಶಕನು ಪಾಠಕರ ಸಮುದಾಯದಲ್ಲಿ ತಿಳಿದಂಥ ಒಬ್ಬ ಪಾಠಕನು; ಕವಿಯಾದರೋ ತನ್ನ ಆವೇಶದ ವಿಷಯದಲ್ಲಿ ಎಲ್ಲರಿಗಿಂತ ಹೆಚ್ಚಾದ ತಿಳಿವನ್ನುಳ್ಳ ಪಾಠಕನು ಇವನ ತಿಳಿ

ವಿನ ಅಂತಸ್ತಿಗೆ ಸಮೀಪಿಸಿದಷ್ಟೂ ವಿಮರ್ಶಕನು ವಿಮರ್ಶೆಯ ಮೊದಲ ಸೋಪಾನ ವನ್ನೇರಿ ಕಾರ್ಯಸಿದ್ಧಿಯನ್ನು ಪಡೆಯುವನು. ಕಾವ್ಯದ ಕಾರ್ಯವು ವಿಮರ್ಶಕನ ವಿಷಯದಲ್ಲಿ ಸಂಪೂರ್ಣವಾಗುವುದು.

ವಿಮರ್ಶೆಯ ಕೆಲಸದಲ್ಲಿ ಇದು ಮೊದಲಭಾಗವೂ ಮುಖ್ಯಭಾಗವೂ ಎಂದು ಹೇಳಿದೆ. ಆದರೂ ಕೆಲವು ವೇಳೆ ವಿಮರ್ಶೆಯು ಇದಿಷ್ಟನ್ನೂ ಮಾಡಲಾಗುವುದಿಲ್ಲ. ಕೆಲವುವೇಳೆ ಇಷ್ಟಕ್ಕೇ ನಿಲ್ಲಲಾಗುವುದಿಲ್ಲ. ಕವಿಯ ಭಾವವು ಗಹನವಾದುದಾದರೆ ವಿಮರ್ಶಕನು ಇದಿಷ್ಟನ್ನಾದರೂ ತಿಳಿದನೋ ಇಲ್ಲವೋ ಎಂಬ ಸಂದೇಹವಿರಲೇ ಬೇಕು. ಇದಾದಮೇಲೆ ವಿಮರ್ಶಕನು ಕವಿಯ ಭಾವವು ಕಾವ್ಯದಲ್ಲಿ ಎಷ್ಟರಮಟ್ಟಿಗೆ ಆಕಾರವನ್ನು ಪಡೆದಿದೆ ಎಂಬುದನ್ನು ಕುರಿತು ಯೋಚಿಸಬೇಕು. ಇದೇ ವಿಮ ರ್ಶೆಯ ಎರಡನೆಯ ಸೋಪಾನ. ಹೀಗೆ ವಿವರಿಸುವಾಗ್ಯೆ ಕಾವ್ಯದಲ್ಲಿ ರಾಗಸ್ಪೃಹ ವಾದ ರೂಪವನ್ನು ಪಡೆದಿರುವ ಭಾವಗಳು ಒಂದು ರೂಪಪರಿವರ್ತನವನ್ನು ಹೊಂದುತ್ತವೆ. ರಸಗಳನ್ನು ಅನುಭವಿಸುವುದು ರಾಗಗಳ ಸ್ವಭಾವ; ಅವುಗಳನ್ನು ವಿವರಿಸುವುದು ಬುದ್ಧಿಯ ಕೆಲಸ. ಕವಿಯ ಭಾವ ಇಂತಹದು ಎಂದು ಅದನ್ನು ಸಾಧ್ಯವಾದಷ್ಟುಮಟ್ಟಿಗೆ ವರ್ಣಿಸುವುದಕ್ಕೆ ಪ್ರಯತ್ನಪಡುವಾಗಲೂ ಕವಿಯ ಈ ಭಾವ ಸರಿಯಲ್ಲ ಎಂದು ಅದರ ಗುಣದೋಷಗಳನ್ನು ಚರ್ಚಿಸುವುದಕ್ಕೆ ಪ್ರಯತ್ನ ಪಡುವಾಗಲೂ ವಿಮರ್ಶಕನು ತನ್ನ ರಾಗಕ್ಕೆ ಉಂಟಾದ ಅನುಭವವನ್ನು ಬುದ್ಧಿಯ ಮೂಲಕ ವಿಚಾರಮಾಡುತ್ತಾನೆ. ವಿಮರ್ಶೆಯ ಈ ಎರಡನೆಯ ಭಾಗವು ಮೊದಲ ನೆಯದೆಂದು ಹೇಳಿದ ಭಾವಗ್ರಹಣಕ್ಕೆ ಪ್ರಾಮುಖ್ಯತೆಯಲ್ಲಿ ಸಮವಾದುದು. ಭಾವ ಗ್ರಹಣವಿಲ್ಲದೆ ಬುದ್ಧಿಯಿಂದ ಮಾಡುವ ವಿಚಾರವು ಶುಷ್ಕವಾಗುವುದು ನಿಜ. ಆದರೆ ಬುದ್ಧಿಯಿಂದ ವಿಚಾರವಿಲ್ಲದ ರಸಾನುಭವವು ವಿವೇಚನೆ ಇಲ್ಲದ ಉತ್ಸಾಹ ದಲ್ಲಿ ಪರಿಣಾಮವಾಗುವುದು. ಎರಡೂ ಸೇರಿದರೆ ಮಾತ್ರ ವಿಮರ್ಶೆಯು ಸಫಲ ವಾಗುವುದು.

ರಸಾನುಭವವನ್ನು ಈ ರೀತಿಯಲ್ಲಿ ಬುದ್ಧಿಯ ಮೂಲಕ ವಿಚಾರಮಾಡುವು ದರಲ್ಲಿ ವಿಮರ್ಶೆಯು ಈ ಮೊದಲು ಹೇಳಿರುವ ಅನೇಕ ರೂಪಗಳನ್ನು ಪಡೆಯುತ್ತದೆ. ವಿಮರ್ಶೆಯ ಹೊರವಳಯದಲ್ಲಿ ಸೇರಿರುವ ಲಕ್ಷಣ ಗ್ರಂಥಗಳೂ ಕೂಡ ಈ ರೂಪ ಗಳಲ್ಲಿ ಒಂದಕ್ಕೆ ಸೇರಿದವು. ಕವಿಗೆ ಸ್ವಭಾವವಾಗಿ ಬರುವ ರೀತಿ ಪದ್ಧತಿಗಳ ವಿಚಾ ರವನ್ನು ಇವು ಬುದ್ಧಿಯ ಮೂಲಕ ಪರೀಕ್ಷಿಸಿ, ಇದು ಸರಿಯಾದ ರೀತಿ, ಇದು ಸರಿಯಾದ ಪದ್ಧತಿ ಎಂದು ತಿಳಿದು ಹೇಳುತ್ತವೆ. ವಿಮರ್ಶೆಯ ಇತರ ಭಾಗಗಳೂ

ಹೀಗೆಯೇ ಕೇವಲ ಉತ್ತಮ ಗ್ರಂಥವನ್ನು ಉತ್ತಮವೆಂದು ಪ್ರಶಂಸೆಮಾಡುವುದೂ, ದುಷ್ಟಗ್ರಂಥವನ್ನು ದುಷ್ಟವೆಂದು ದೂಷಿಸುವುದೂ, ಉತ್ತಮ ಗ್ರಂಥದ ರಸವನ್ನು ಆಸ್ವಾದ ಮಾಡಿ ಅದನ್ನು ಉತ್ಸಾಹದಿಂದ ವರ್ಣಿಸಿ ಹೇಳುವುದೂ, ದುಷ್ಟಗ್ರಂಥಗಳಲ್ಲಿ ಉಕ್ತವಾಗಿರುವ ಭಾವಗಳನ್ನು ಖಂಡಿಸಿ ಬರೆಯುವುದೂ, ಒಬ್ಬ ಕವಿಯ ಜೀವನ ಚರಿತ್ರೆಯನ್ನು ಬರೆಯುವುದೂ, ಅವನ ಗ್ರಂಥಗಳನ್ನೆಲ್ಲ ಸೇರಿಸಿಕೊಂಡು ಅವನ ಭಾವಗಳನ್ನು ಚರ್ಚಿಸಿ ಉಪನ್ಯಾಸಮಾಡುವುದೂ, ಯಾವ ಒಂದು ಗ್ರಂಥವನ್ನಾಗಲಿ ಹತ್ತು ಗ್ರಂಥವನ್ನಾಗಲಿ ಚರ್ಚಿಸದೆ ಸಾಹಿತ್ಯವೆಲ್ಲವನ್ನೂ ಕುರಿತು ವಿಚಾರಮಾಡುವುದೂ, ವಿಮರ್ಶೆಯು ಧರಿಸುವ ರೂಪಭೇದಗಳು. ಎಲ್ಲವೂ ಸಾಹಿತ್ಯದ ವಿಷಯಕ್ಕೆ ಬುದ್ಧಿಯ ಮೂಲಕ ವೈಶದ್ಯವನ್ನು ತರುವುವು. ಒಳ್ಳೆಯ ಗ್ರಂಥವನ್ನು ಒಳ್ಳೆಯದೆನ್ನುವುದರಲ್ಲಿ ಹಾಗೆನ್ನುವುದಕ್ಕೆ ಕಾರಣವನ್ನು ಹೇಳುತ್ತೇವೆ. ಅದರ ರಸವನ್ನು ವರ್ಣಿಸುವುದರಲ್ಲಿ ಪಾಠದಲ್ಲಿ ರಾಗಕ್ಕೆ ಸೋಕಿದ ವಿಷಯವನ್ನು ವಿವರವಾಗಿ ಇತರರಿಗೆ ತಿಳಿಯುವಂತೆ ಹೇಳುತ್ತೇವೆ, ರಸಪರಿಚಯದ ರಹಸ್ಯಮಾರ್ಗಗಳನ್ನು ಸ್ಪಷ್ಟಗೊಳಿಸಲು ಯತ್ನಿಸುತ್ತೇವೆ. ಕೆಟ್ಟಪುಸ್ತಕವನ್ನು ಕೆಟ್ಟದೆನ್ನುವಾಗಲೂ ಕಾರಣಗಳನ್ನು ಹೇಳುತ್ತೇವೆ, ಅದರ ದುರಭಿಪ್ರಾಯವನ್ನು ಖಂಡಿಸುವಾಗಲೂ ಸಕಾರಣವಾದ ವಿಚಾರವನ್ನು ಮಾಡುತ್ತೇವೆ. ಕವಿಯ ಜೀವನಚರಿತ್ರೆಯನ್ನು ಬರೆಯುವುದರಲ್ಲಿ ಅವನ ಕಾವ್ಯಗಳ ಭಾವಗಳು ಉತ್ಪನ್ನವಾದ ಸಂದರ್ಭಗಳನ್ನೂ ಆ ಸಂದರ್ಭಗಳು ಅವನ ಮನೋಧರ್ಮವನ್ನು ಹೇಗೆ ನಿರ್ಧರಿಸಿದುವೆಂಬುದನ್ನೂ ಇದರಿಂದ ಆ ಭಾವಗಳು ತಳೆದ ಸ್ವರೂಪವನ್ನೂ ಸೂಚಿಸುವುದಕ್ಕೆ ಯತ್ನಮಾಡುತ್ತೇವೆ. ಒಟ್ಟು ಸಾಹಿತ್ಯದ ಸ್ವಭಾವವನ್ನೇ ವಿಚಾರಮಾಡುವಾಗಲೂ ರಾಗಸ್ಪರ್ಶಿಯಾದ ಸಾಹಿತ್ಯರಸದ ವಿಷಯವನ್ನು ಬುದ್ಧಿಯ ಪರಿಭಾಷೆಯಲ್ಲಿ ಹೇಳಲು ಪ್ರಯತ್ನಿಸುತ್ತೇವೆ. ಈ ಮೀಮಾಂಸೆ ಎಲ್ಲದರಲ್ಲೂ ರಸಪರಿಚಯಕ್ಕೆ ರಾಗವನ್ನೂ ಅದರ ವಿವರಣಕ್ಕೆ ಬುದ್ಧಿಯನ್ನೂ ಸಾಧನವಾಗಿ ಉಪಯೋಗಿಸುತ್ತೇವೆ. ಎಂದರೆ ಮೊತ್ತದಲ್ಲಿ ವಿಮರ್ಶೆಯ ಸಾರವು ಹೀಗೆಂದು ತೋರುವುದು. ಅದು ಸಾಹಿತ್ಯರಸದ ಬುದ್ಧಿದ್ವಾರವಾದ ಅನುವಾದವು.

(ಸಶೇಷ).

# ಸಾಹಿತ್ಯದಲ್ಲಿ ವಿಮರ್ಶೆಯ ಕಾರ್ಯ.

ಈಗ ನಾವು ವಿಮರ್ಶೆಯೆಂದು ಕರೆಯುವ ರೀತಿಯ ಬರೆವಣಿಗೆ ನಮ್ಮಲ್ಲಿ ಹೊಸದು. ಆದರ ಹೆಸರೂ ಹೊಸದು. ಎಂದರೆ ನಮ್ಮಲ್ಲಿ ವಿಮರ್ಶೆ ಇರಲಿಲ್ಲವೆಂದಲ್ಲ. ವಿಮರ್ಶೆಯಿಲ್ಲದೆ ಸಾಹಿತ್ಯವು ಆಗುವುದೂ ಇಲ್ಲ ಬೆಳೆಯುವುದೂ ಇಲ್ಲ; ಈ ವಿಚಾರವನ್ನು ಮುಂದೆ ಸ್ವಲ್ಪ ವಿವರವಾಗಿ ಚರ್ಚಿಸಿ ಇದೆ. ಆದರೆ ಸಾಹಿತ್ಯದ ರಚನೆಯಲ್ಲೂ ಅದಕ್ಕೆ ಕೇವಲ ಸಂಬಂಧವುಳ್ಳ ರಚನಾಲಕ್ಷಣದ ವಿಚಾರದಲ್ಲೂ ಎಷ್ಟೋ ಅಷ್ಟು ಹೊರತು ವಿಮರ್ಶೆಯನ್ನೇ ಬೇರೆ ಗ್ರಂಥವಾಗಿ ಬರೆಯುವ ವಾಡಿಕೆ ನಮ್ಮಲ್ಲಿ ಇರಲಿಲ್ಲ. ಇದಕ್ಕೆ ಅನೇಕ ಕಾರಣಗಳಿದ್ದುವು. ಈ ರೀತಿಯ ವಿಮರ್ಶೆಯ ಲೇಖನವು ಕಾವ್ಯದ ರೂಪಲಕ್ಷಣಗಳನ್ನಲ್ಲದೆ ವಿಷಯಗಳನ್ನೂ ಚರ್ಚಿಸಬೇಕಾದ ಸಂದರ್ಭಗಳಿಂದ ಉಂಟಾಗತಕ್ಕದ್ದು. ಇಂಥ ಸಂದರ್ಭಗಳು ನಮ್ಮ ದೇಶದಲ್ಲಿ ಹಿಂದೆ ಬಂದಂತೆ ತೋರುವುದಿಲ್ಲ. ಸಾಹಿತ್ಯವು ಉದ್ದೇಶ ಆಶಯಗಳಲ್ಲಿ ಬಹುಮುಖವಾದರೆ ಇಂಥ ವಿಮರ್ಶೆಯು ಆವಶ್ಯಕವಾಗುವುದು. ನಮ್ಮಲ್ಲಿ ನಮ್ಮ ಜೀವನವನ್ನು ಅನುಸರಿಸಿ ನಮ್ಮ ಸಾಹಿತ್ಯವೂ ಒಂದು ಧರ್ಮ ಒಂದು ನೀತಿ ಒಂದೇ ಉದ್ದೇಶವನ್ನು ಇರಿಸಿಕೊಂಡು ಮುಂದಕ್ಕೆ ನಡೆಯಿತು. ಎರಡು ಗುಂಪುಗಳಿದ್ದರೆ ಒಂದು ಗುಂಪಿನವರು ಇನ್ನೊಂದು ಗುಂಪಿನವರ ಸರಿತಪ್ಪನ್ನು ಹುಡುಕಬಹುದು. ಒಬ್ಬೊಬ್ಬರೂ ತಮ್ಮ ದಾರಿ ಸರಿ ಎಂದು ಹೇಳುವುದಕ್ಕೆ ಪ್ರಯತ್ನಪಡಬಹುದು. ಈ ರೀತಿಯ ಗುಂಪು ನಮ್ಮಲ್ಲಿ ವ್ಯವಹಾರದ ಜೀವನದ ವಿಷಯದಲ್ಲಾಗಲಿ ಸಾಹಿತ್ಯದ ವಿಷಯದಲ್ಲಾಗಲಿ ಆಗಲಿಲ್ಲ. ಆದ್ದರಿಂದ ಎಲ್ಲರೂ ಒಪ್ಪಿದ್ದ ವಿಷಯವನ್ನು ಚರ್ಚಿಸಬೇಕಾದದ್ದಿರಲಿಲ್ಲ. ಈ ಕಾರಣದಿಂದ ಮಾತ್ರವಲ್ಲದೆ ಸಾಹಿತ್ಯವು ಎಲ್ಲರಿಗೂ ಒಂದೇ ರೀತಿಯಾಗಿ ತಿಳಿಯಬೇಕೆಂದು ಪ್ರಯತ್ನಪಟ್ಟರೂ ವಿಮರ್ಶೆಯು ಬೇಕಾಗುವುದು. ನಮ್ಮಲ್ಲಿ ಸಾಹಿತ್ಯದ ತಿರುಳೆಲ್ಲ ಪಂಡಿತರಿಗೆ ತಕ್ಕದ್ದೆಂದೂ ಪಾಮರರಿಗೆ ಅದರ ಮೇಲ್ಭಾಗವೂ ಅದರಿಂದ ಬರಬಹುದಾದ ನೀತಿಯೂ ತಿಳಿದರೆ ಸಾಕೆಂದೂ ಅಭಿಪ್ರಾಯವಿತ್ತು. ಇದು ಸರಿಯೆ ಎಂದು ನಾವು ಇಲ್ಲಿ ವಿಚಾರಮಾಡಬೇಕಾದದ್ದಿಲ್ಲ. ಹೀಗೆ ಅಭಿಪ್ರಾಯವಿದ್ದದ್ದರಿಂದ ಸಾಹಿತ್ಯದ ವಿಚಾರವನ್ನು ಚೆನ್ನಾಗಿ ತಿಳಿಯಬೇಕೆಂದವರು ಗುರುಸಾನ್ನಿಧ್ಯದಲ್ಲಿ ಸಾವಧಾನವಾಗಿ ಕಲಿತುಕೊಳ್ಳುತ್ತಿದ್ದರು. ಉಳಿದವರಿಗೆ ಆ ವಿಷಯಗಳನ್ನು ಅಷ್ಟು ವಿವರವಾಗಿ ತಿಳಿಸಬೇಕಾಗಿ ಇರಲಿಲ್ಲ. ಈ ಎರಡು ಕಾರಣಗಳಿಂದಲೂ ಅಲ್ಲದಿದ್ದರೂ ದುಷ್ಟಗ್ರಂಥಗಳನ್ನು ದಮನ ಮಾಡುವು

ಈ ದೇವಸ್ಥಾನವು ೧೧೮ ಅಡಿ ಉದ್ದವೂ ೧೧೨ ಅಡಿ ಅಗಲವೂ ಇರುವ ಒಂದು ಅಂಗಳದ ಮಧ್ಯೆ ಇದೆ. ಈ ಅಂಗಳದ ಸುತ್ತ ಏಳು ಅಡಿ ಎತ್ತರವಾದ ಪ್ರಾಕಾರದ ಗೋಡೆಯೂ ಅದರಲ್ಲಿ ಪೂರ್ವ ಪಶ್ಚಿಮ ದಿಕ್ಕಿಗೆ ಎರಡು ಮಹಾದ್ವಾರಗಳೂ ಇವೆ. ಈ ರೀತಿಯು ಮಿಕ್ಕ ದೇವಸ್ಥಾನಗಳಲ್ಲೆಲ್ಲಾ ಪ್ರಾಯಶಃ ಇರುವಂತೆ ಇಲ್ಲಿ ಮಾತ್ರ ಜಗತಿ ಇಲ್ಲ. ಪಶ್ಚಿಮದ ಕಡೆಯ ಮಹಾದ್ವಾರಕ್ಕೆ ಸೇರಿದ ಹಾಗೆ ಒಂದು ಸುಂದರವಾದ ದ್ವಾರಮಂಟಪವಿದೆ. ಇದಕ್ಕೆ ಹದಿನಾರು ಕಂಬಗಳೂ ಏಳು ಸೊಗಸಾಗಿ ಕೆತ್ತಿದ ಭುವನೇಶ್ವರಿಗಳೂ ಇವೆ. ಇವುಗಳಲ್ಲಿ ಮಧ್ಯದ ಭುವನೇಶ್ವರಿಯ ಮಣಿಕೆಲಸವು ಶ್ಲಾಘ್ಯವಾಗಿದೆ. ಇದರ ಮಧ್ಯದಲ್ಲಿ ವರ್ತುಲಾಕಾರವಾದ ಶಿಲಾಫಲಕವೂ ಅದರಲ್ಲಿ ತಾಂಡವೇಶ್ವರನೂ ಇರುವುವು. ಮಿಕ್ಕವುಗಳಲ್ಲಿ ಮಧ್ಯೆ ಹೂವಿನ ಕೆಲಸವೂ ಸುತ್ತಲೂ ವರ್ತುಲಾಕಾರವಾದ ಶಿಲಾಫಲಕಗಳಲ್ಲಿ ಅಷ್ಟದಿಕ್ಪಾಲಕರ ವಿಗ್ರಹಗಳೂ ಕೆತ್ತಲ್ಪಟ್ಟಿವೆ. ಪಶ್ಚಿಮ ದಿಕ್ಕಿನಲ್ಲಿರುವ ದ್ವಾರಮಂಟಪದ ಸುತ್ತಲೂ ಕೈಸಾಲೆ ಇದೆ. ಪೂರ್ವದಿಕ್ಕಿನ ದ್ವಾರಕ್ಕೂ ಒಂದು ಸಣ್ಣ ಮಂಟಪವು ಇತ್ತು. ಆದರೆ ಈಗ ಅದೂ ಮತ್ತು ಸ್ವಲ್ಪದೂರ ಪ್ರಾಕಾರದ ಗೋಡೆಯೂ ಬಿದ್ದು ಹೋಗಿವೆ.

ಮಧ್ಯೆ ಇರುವ ದೇವಸ್ಥಾನಭಾಗದಲ್ಲಿ ನಾಲ್ಕು ಗರ್ಭಗೃಹಗಳೂ ಒಂದು ನವರಂಗವೂ ಇವೆ. ಈ ಗರ್ಭಗೃಹಗಳಲ್ಲಿ ಪೂರ್ವ ಪಶ್ಚಿಮ ದಕ್ಷಿಣ ದಿಕ್ಕಿನವುಗಳಿಗೆ ಒಂದೊಂದು ಸುಕನಾಸಿಯಿದ್ದು ನವರಂಗದ ಮೂರು ಪಕ್ಕಗಳಿಗೆ ಸೇರಿಕೊಂಡ ಹಾಗಿವೆ. ಉತ್ತರದಿಕ್ಕಿನ ಗರ್ಭಗೃಹದ ಮುಂದೆ ಒಂದು ಇಕ್ಕಟ್ಟಾದ ಸುಕನಾಸಿಯೂ ಅದರ ಮುಂದೆ ನವರಂಗಕ್ಕೆ ಸೇರಿದ ಹಾಗೆ ಮೂರು ಅಂಕಣದ ಒಂದು ಸಣ್ಣ ಹಜಾರವೂ ಇವೆ. ಈ ಹಜಾರವೂ ನವರಂಗವೂ ಸೇರಿ ೧೫ ಅಂಕಣದ ಒಂದು ದೊಡ್ಡ ಸಭಾಮಂಟಪವಾಗಿ ಕಾಣುತ್ತದೆ. ಮೇಲೆ ಹೇಳಿದ ಹಜಾರಕ್ಕೆ ಪೂರ್ವ ಪಶ್ಚಿಮಕಡೆಗಳಲ್ಲಿ ಬಾಗಿಲುಗಳೂ ಮೆಟ್ಟಲುಗಳೂ ಇವೆ. ದೇವಸ್ಥಾನದ ಒಳಕ್ಕೆ ಇಲ್ಲಿಂದಲೇ ಹೋಗಬೇಕು.

ಪೂರ್ವ ಮತ್ತು ಉತ್ತರ ದಿಕ್ಕಿನ ಗರ್ಭಗೃಹಗಳ ನಡುವೆ ೨೦ ಅಡಿ ಉದ್ದವೂ ೧೫ ಅಡಿ ಅಗಲವೂ ಇರುವ ಭೈರವ ದೇವಾಲಯವೆಂಬ ಸಣ್ಣ ಕಟ್ಟಡವಿದೆ. ಇದರಲ್ಲಿ ಒಂದು ಗರ್ಭಗೃಹ ಸುಕನಾಸಿ ಮಾತ್ರ ಇರುತ್ತವೆ.

ಪ್ರಾಕಾರದ ನಾಲ್ಕು ಮೂಲೆಗಳಲ್ಲಿಯೂ ಒಂದೊಂದು ಸಣ್ಣಗುಡಿಯೂ, ಅದರಮೇಲೆ ಕಲ್ಲುಗೋಪುರವೂ, ಅದರಲ್ಲಿ ಹುಲಿಯನ್ನು ಇರಿಯುತ್ತಿರುವ ಸಳನ

ವಿಗ್ರಹವೂ ಇವೆ. ಇವೂ ಭೈರವ ದೇವಾಲಯದ ಶಿಖರವೂ ಮತ್ತು ಮಧ್ಯೆ ಇರುವ ನಾಲ್ಕು ಶಿಖರಗಳೂ ಸೇರಿ ಒಟ್ಟು ಒಂಬತ್ತು ಗೋಪುರಗಳಾಗುತ್ತವೆ. ಇವೊಂದೊಂದರಲ್ಲಿಯೂ ಸಳನ ವಿಗ್ರಹವಿದೆ. ಸಳನ ವಿಗ್ರಹಗಳ ಗುಂಪು ಹೀಗೆ ಮತ್ತಾವ ದೇವಾಲಯದಲ್ಲಿಯೂ ಕಂಡುಬರುವುದಿಲ್ಲ.

ಪೂರ್ವದಿಕ್ಕಿನ ಗುಡಿಯಲ್ಲಿ ಲಕ್ಷ್ಮೀದೇವಿಯ ವಿಗ್ರಹವೂ, ಪಶ್ಚಿಮ ದಿಕ್ಕಿನದರಲ್ಲಿ 'ಭೂತನಾಥ' ಲಿಂಗವೂ, ದಕ್ಷಿಣದಿಕ್ಕಿನದರಲ್ಲಿ ಭೈರವವಿಗ್ರಹವೂ ಇವೆ. (ಇದರ ಪೀಠದಲ್ಲಿ ಗರುಡವಿಗ್ರಹವಿರುವುದನ್ನು ನೋಡಿದರೆ ಇಲ್ಲಿ ಮೊದಲು ವಿಷ್ಣು ವಿಗ್ರಹವಿತ್ತೆಂದು ತೋರುತ್ತದೆ). ಉತ್ತರದಿಕ್ಕಿನ ಗುಡಿಯಲ್ಲಿ ಕಾಳಿಯ ವಿಗ್ರಹವಿದೆ. ಈ ಕಾಳಿಯ ದೇವಸ್ಥಾನಕ್ಕೂ ನವರಂಗಕ್ಕೂ ಮಧ್ಯೆ ಒಂದು ಹಜಾರವಿದೆಯೆಂದೂ ಇದರ ಪೂರ್ವ ಪಶ್ಚಿಮ ಕಡೆಗಳಲ್ಲಿ ಎರಡು ಬಾಗಿಲುಗಳಿವೆಯೆಂದೂ ಹೇಳಿದೆಯಷ್ಟೆ. ಇವುಗಳಲ್ಲಿ ಪಶ್ಚಿಮದ ಕಡೆಯ ಬಾಗಿಲು ಸುಂದರವಾದ ಚಿತ್ರಕೆಲಸಮಾಡಲ್ಪಟ್ಟು ಎರಡು ಕಡೆಯೂ ವೈಷ್ಣವ ದ್ವಾರಪಾಲಕ ವಿಗ್ರಹಗಳನ್ನುಳ್ಳದ್ದಾಗಿದೆ. ಎರಡು ಬಾಗಿಲಿನ ಹತ್ತಿರವೂ ಎರಡೆರಡು ಆನೆಗಳು ಇಡಲ್ಪಟ್ಟಿವೆ. ಕಾಳೀಗುಡಿಯ ಪೂರ್ವ ದಿಕ್ಕಿನ ಗೋಡೆಯ ಹೊರಮುಖದಲ್ಲಿ ಒಂದು ಕಾಳೀವಿಗ್ರಹವು ಕೆತ್ತಲ್ಪಟ್ಟಿದೆ. ಗೋಡೆಗಳ ಹೊರಮುಖದಲ್ಲಿ ಅಲ್ಲಲ್ಲಿಯೇ ಸಣ್ಣಸಣ್ಣ ಗೋಪುರಗಳೂ ಗೂಡುಗಳೂ ಇವೆ. ಆದರೆ ಮಿಕ್ಕ ದೇವಾಲಯಗಳಲ್ಲಿರುವಂತೆ ಇವುಗಳಲ್ಲಿ ವಿಗ್ರಹಗಳಿಲ್ಲ. ಪ್ರಾಯಿಕವಾಗಿ ಶಾಸನಗಳು ಇರಿಸಲ್ಪಟ್ಟಿವೆ. ಲಕ್ಷ್ಮೀ ಮತ್ತು ವಿಷ್ಣು ದೇವಾಲಯಗಳ ಗೋಡೆಯಮೇಲೆ ಕೆತ್ತಿರುವ ಸಣ್ಣ ಗೋಪುರಗಳು ಇತರ ಗೋಡೆಗಳ ಮೇಲಿರುವ ಗೋಪುರಗಳಿಗಿಂತ ಚೆನ್ನಾಗಿ ಕೆತ್ತಲ್ಪಟ್ಟವುಗಳಾಗಿವೆ. ಲಕ್ಷ್ಮೀಗುಡಿಯ ಗೋಪುರದಮೇಲೆ ಅಲ್ಲಲ್ಲೇ ಯಕ್ಷವಿಗ್ರಹಗಳಿವೆ.

ನವರಂಗಕ್ಕೆ ಸೇರಿದ ಹಾಗೆ ಮೂರು ಕಡೆಯಲ್ಲಿಯೂ ಇರುವ ಗರ್ಭಗೃಹ ಮತ್ತು ಸುಕನಾಸಿಗಳ ಭುವನೇಶ್ವರಿಗಳಲ್ಲಿ ಕಮಲಗಳು ಕೆತ್ತಲ್ಪಟ್ಟಿವೆ. ಲಕ್ಷ್ಮೀ ದೇವಾಲಯದ ಗರ್ಭಗೃಹದ ದ್ವಾರಮುಖದಲ್ಲಿ ತಾಂಡವೇಶ್ವರವಿಗ್ರಹವೂ ವಿಷ್ಣುದೇವಾಲಯದ್ದರಲ್ಲಿ ಯೋಗಾನರಸಿಂಹವಿಗ್ರಹವೂ, ಭೂತನಾಥ ದೇವಾಲಯದ್ದರಲ್ಲಿ ಗಜಲಕ್ಷ್ಮಿಯ ವಿಗ್ರಹವೂ ಇವೆ. ಲಕ್ಷ್ಮೀದೇವಿಯ ವಿಗ್ರಹವು ಸುಂದರವಾಗಿ ಸುಮಾರು ಮೂರೂವರೆಯಡಿ ಎತ್ತರವಾಗಿ ನಿಂತಿರುವ ಭಾವದಲ್ಲಿದೆ. ಇದಕ್ಕೆ ನಾಲ್ಕು ಕೈಗಳು; ಅವುಗಳಲ್ಲಿ ಮೇಲ್ಗಡೆಯ ಬಲಗೈಯು ಶಂಖವನ್ನೂ, ಮೇಲ್ಗಡೆಯ ಎಡಗೈಯು ಚಕ್ರವನ್ನೂ, ಕೆಳಗಡೆಯ ಬಲಗೈಯು ಅಭಯಹಸ್ತದಲ್ಲಿ ಅಕ್ಷಮಾಲೆ

ಯನ್ನೂ, ಕೆಳಗಡೆಯ ಎಡಗೈಯು ಗದೆಯನ್ನೂ ಹಿಡಿದುಕೊಂಡಿವೆ. (ಚಿತ್ರವನ್ನು ನೋಡಿ). ವಿಷ್ಣುವಿನ ಗುಡಿಯಲ್ಲಿ ಹಿಂದೆ ಕೇಶವವಿಗ್ರಹವಿತ್ತಂತೆ. ಕಾಳಿಯ ವಿಗ್ರಹವು ಒಂದು ರಾಕ್ಷಸನನ್ನು ಮೆಟ್ಟಿಕೊಂಡು ಕುಳಿತಿರುವ ಭಯಂಕರವಾದ ಮೂರ್ತಿ. ಇದು ಸುಮಾರು ಮೂರು ಅಡಿ ಎತ್ತರವಾಗಿದೆ. ಇದಕ್ಕೆ ಎಂಟು ಕೈಗಳು; ಇವುಗಳಲ್ಲಿ ಬಲಗಡೆ ತ್ರಿಶೂಲ ಕತ್ತಿ ಬಾಣ ಪರಶುಗಳನ್ನೂ, ಎಡಗಡೆ ಡಮರುಗ ಪಾಶ ಬಿಲ್ಲು ಕಪಾಲಗಳನ್ನೂ ಹಿಡಿದುಕೊಂಡಿದೆ. ಪ್ರಭಾವಳಿಯ ಮೇಲ್ಭಾಗದಲ್ಲಿ ಒಂಬತ್ತು ಪ್ರೇತಗಳು ಕತ್ತಿಹಿಡಿದುಕೊಂಡು ಕುಳಿತಿವೆ; ಪೀಠದಲ್ಲಿ ಒಂದು ಪ್ರೇತವು ಕೋರೆಹಲ್ಲುಗಳನ್ನು ಬಿಟ್ಟುಕೊಂಡು ಮುಂದೆ ಒಂದು ಗಡಿಗೆಯನ್ನು ಇಟ್ಟುಕೊಂಡು ಕುಳಿತಿದೆ. ಕಾಳಿಯ ಗರ್ಭಗೃಹದ ಮೇಲ್ಭಾಗದಲ್ಲಿ ಒಂದು ಕಮಲವೂ ಸುಕನಾಸಿಯ ಮೇಲ್ಭಾಗದಲ್ಲಿ ಮಂಡಿಹೂಡಿಕೊಂಡು ಕುಳಿತಿರುವ ಒಂದು ವಿಗ್ರಹವೂ ಇವೆ. ಈ ವಿಗ್ರಹವು ಬಲಗೈಯಲ್ಲಿ ಒಂದು ಕತ್ತಿಯನ್ನೂ ಎಡಗೈಯಲ್ಲಿ ಒಂದು ಕಪಾಲವನ್ನೂ ಹಿಡಿದುಕೊಂಡಿದೆ. ಗರ್ಭಗೃಹದ ದ್ವಾರಮುಖದಲ್ಲಿ ಮಧ್ಯೆ ಕೋರೆಹಲ್ಲುಳ್ಳ ಒಂದು ಮುಖವೂ ಅದರ ಎರಡು ಕಡೆಯೂ ಮೂರು ಮೂರು ಪ್ರೇತಗಳೂ ಅವುಗಳ ಮಧ್ಯೆ ಮುಖಗಳೂ ದ್ವಾರಸ್ತಂಬಗಳಲ್ಲಿ ನಗ್ನವಾದ ಸ್ತ್ರೀಮೂರ್ತಿಗಳೂ ಇವೆ. ಸುಕನಾಸಿಯಲ್ಲಿ ಆರಾರು ಅಡಿ ಎತ್ತರವುಳ್ಳ ಬೆತ್ತಲೆಯಾದ ಎರಡು ಬೇತಾಳಗಳು ಎದುರುಬದುರಿಗೆ ನಿಂತುಕೊಂಡಿವೆ. ಬಲಗಡೆಯ ಬೇತಾಳದ ಕೈಗಳು ಮುರಿದುಹೋಗಿವೆ. ಎಡಗಡೆಯದು ನಾಲಗೆಯನ್ನು ಜೋಲುಬಿಟ್ಟುಕೊಂಡು ಬಲಗೈಯಲ್ಲಿ ಕತ್ತಿಯನ್ನೂ, ಎಡಗೈಯಲ್ಲಿ ಕಪಾಲ ಮತ್ತು ಶಿರಸ್ಸುಗಳನ್ನೂ ಹಿಡಿದುಕೊಂಡು ನಿಂತಿದೆ. ಈ ಬೇತಾಳಗಳು ಬರಿಯ ಅಸ್ಥಿಪಂಜರಗಳು; ಇವುಗಳನ್ನು ಶಿಲ್ಪಿಯು ಚೆನ್ನಾಗಿ ಕೆತ್ತಿದ್ದಾನೆ. ಇವು ಕಿವಿಗಳಲ್ಲಿ ದೊಡ್ಡ ದೊಡ್ಡ (ಓಲೆಯಂಥ) "ಕರ್ಣಪಾಲಿಕೆ" ಗಳನ್ನು ಹಾಕಿಕೊಂಡಿವೆ. ಕಾಳೀದೇವಸ್ಥಾನದ ಮುಂದಿರುವ ದ್ವಾರಮಂಟಪದ ಭುವನೇಶ್ವರಿಯಲ್ಲಿ ಕೊಳಲನ್ನು ನುಡಿಸುವಂತೆ ಇರುವ ಒಂದು ನಟವಿಗ್ರಹವು ಕೆತ್ತಲ್ಪಟ್ಟಿದೆ.

ಈ ಸುಂದರವಾದ ದೇವಾಲಯವನ್ನು ಕಟ್ಟಿದ ಶಿಲ್ಪಿಯ ಹೆಸರು ಮಲ್ಲೋಜ ಮಾಣಿಯೋಜನೆಂದು ಇಲ್ಲಿರುವ (ಹಾಸನ ಡಿಸ್ಟ್ರಿಕ್ಟಿನ ೧೪೯ ನೆಯ) ಶಾಸನದಲ್ಲಿ ಹೇಳಿದೆ. ಅವನು "ವಿಶ್ವಕರ್ಮನಿರ್ಮಿತ ಸುಭಾಸಿತ" ನಾಗಿದ್ದಂತೆ ಅದರಲ್ಲಿ ವರ್ಣಿತವಾಗಿದೆ.

---



ದೊಡ್ಡಗದ್ದವಳ್ಳಿಯಲ್ಲಿರುವ ಲಕ್ಷ್ಮೀದೇವೀ ವಿಗ್ರಹ

[ವಾಸ್ತುಶಿಲ್ಪ, ಪು. ೪೭.



ಗೋವಿಂದನಹಳ್ಳಿಯಲ್ಲಿರುವ ಪಂಚಲಿಂಗೇಶ್ವರ ದೇವಾಲಯದ ಪಶ್ಚಿಮಮುಖ [ವಾಸ್ತುಶಿಲ್ಪ, ಪು. ೪೯.

ಕೃಷ್ಣರಾಜಪೇಟೆ ತಾಲ್ಲೂಕು ಗೋವಿಂದನಹಳ್ಳಿಯಲ್ಲಿರುವ ಪಂಚಲಿಂಗೇಶ್ವರ ದೇವಾಲಯವೂ ಹೊಯಿಸಳ ರೀತಿಯಲ್ಲಿ ಕಟ್ಟಲ್ಪಟ್ಟದ್ದು; ಇದರಲ್ಲಿ ಐದು ಗರ್ಭ ಗುಡಿಗಳಿವೆ. ಹೊಯಿಸಳ ರೀತಿಯ ಕಟ್ಟಡಗಳಲ್ಲಿ ಇದು ಬಹಳ ಅಪರೂಪ. ನಮ್ಮ ಸಂಸ್ಥಾನದಲ್ಲೆಲ್ಲಾ ಈ ಮಾದರಿಗೆ ಸೋಮನಾಥ ಪುರದಲ್ಲಿರುವ ಪಾಳುದೇವಸ್ಥಾನ ವನ್ನು ಬಿಟ್ಟರೆ ಇದೊಂದೇ ಉದಾಹರಣೆಯೆಂದು ತೋರುತ್ತದೆ. ಇದರ ಐದು ಗರ್ಭಗೃಹಗಳೂ ಸಾಲಾಗಿ ಒಂದರ ಪಕ್ಕದಲ್ಲಿ ಮತ್ತೊಂದು ಇವೆ. ಇವೊಂದೊಂ ದಕ್ಕೂ ಒಂದೊಂದು ಸುಕನಾಸಿಯೂ ಒಂದೊಂದು ನವರಂಗವೂ ಇವೆ. ಆದರೆ ಈ ನವರಂಗಗಳೂ ಅವುಗಳನ್ನು ಸೇರಿಸುವ ಸಂಧ್ಯಂಕಣಗಳೂ ಒಟ್ಟುಗೂಡಿ ಮೂರು ಸಾಲುಳ್ಳ, ಐವತ್ತುನಾಲ್ಕು ಅಂಕಣದ, ಉದ್ದವಾದ ಒಂದೇ ನವರಂಗ ದಂತೆ ಕಾಣುತ್ತದೆ. ಎರಡು ಮತ್ತು ಮೂರನೆಯ ಗೃಹಗಳೆದುರಿಗೆ ದೇವಸ್ಥಾನಕ್ಕೆ ಪ್ರವೇಶಿಸುವ ಎರಡು ದ್ವಾರಗಳೂ ಅವುಗಳಿಗೆ ದ್ವಾರಮಂಟಪಗಳೂ ಇವೆ.

ದೇವಸ್ಥಾನದ ಮುಂದೆ ಹೋಗಿನಿಂತುಕೊಂಡ ಕೂಡಲೆ ಯಾರಿಗಾದರೂ ಈ ದ್ವಾರಗಳು ಮಯಕ್ಕೆ ಸರಿಯಾಗೆ ಇಡಲ್ಪಟ್ಟಿಲ್ಲವೆಂಬುದು ತಟ್ಟನೆ ಗೋಚರ ವಾಗುತ್ತದೆ. ಒಂದು ನಾಲ್ಕು ಮತ್ತು ಐದನೆಯ ಗರ್ಭಗೃಹಗಳನ್ನು ಬಿಟ್ಟು ಎರಡು ಮತ್ತು ಮೂರನೆಯ ಗೃಹಗಳ ಮುಂದೇ ದ್ವಾರಮಂಟಪಗಳನ್ನು ಏಕೆ ಕಟ್ಟಿದರೋ ಹೇಳುವುದು ಕಷ್ಟ. ಆದರೆ ದೇವಸ್ಥಾನದ ಒಳಹೊಕ್ಕು ಕಟ್ಟಡದ ಒಂದೊಂದು ಭಾಗವನ್ನೂ ಗಮನಿಸಿ ನೋಡಿದರೆ ಇದಕ್ಕೆ ಕಾರಣವನ್ನು ಊಹಿಸ ಬಹುದಾಗಿದೆ. ಮೊದಲು ಈ ದೇವಸ್ಥಾನಕ್ಕೆ ನಾಲ್ಕೇ ಗರ್ಭಗೃಹಗಳಿದ್ದು ಉತ್ತರ ದಿಕ್ಕಿನಲ್ಲಿರುವ ಐದನೆಯುದನ್ನು ಈಚೆಗೆ ಸೇರಿಸಿರಬೇಕು;—ಅದನ್ನು ಕಟ್ಟಬೇಕೆಂಬ ಯೋಚನೆಯಾದರೂ ಆಮೇಲೆ ಬಂದಿರಬೇಕು. ಏಕೆಂದರೆ, ಈ ಐದನೆಯ ಗೃಹವನ್ನು ಬಿಟ್ಟರೆ ಕಟ್ಟಡದಲ್ಲಿ ಎಲ್ಲವೂ ಮಯಕ್ಕೆ ಸರಿಯಾಗಿ ಇರುತ್ತದೆ; ನಾಲ್ಕನೆಯ ಗೃಹದ ಮುಂದಿರುವ ನವರಂಗಕ್ಕೂ ಐದನೆಯ ಗೃಹದ ಮುಂದಿರುವ ನವರಂಗಕ್ಕೂ ಮಧ್ಯೆ ಸಂಧ್ಯಂಕಣವಿಲ್ಲ. ಇವೆರಡರ ಮಧ್ಯೆ ಇರುವ ಕಂಬಗಳು ಗೋಡೆಗಳ ಪಕ್ಕದಲ್ಲಿರುವ ಕಂಬಗಳ ಮಾದರಿಯಲ್ಲಿವೆ; ಮತ್ತು ಮಧ್ಯೆ ಸ್ವಲ್ಪ ಸ್ಥಳವನ್ನು ಬಿಟ್ಟು ಅರ್ಧವಾಗಿ ಸೀಳಿದ ಎರಡೆರಡು ಹೋಳುಗಳನ್ನು ಜೋಡಿಸಿ ಮಾಡಿದವುಗಳಾಗಿ ಇರುತ್ತವೆ. ಇದನ್ನು ನೋಡಿದರೆ ಮೊದಲು ಇಲ್ಲಿ ಗೋಡೆ ಇದ್ದಂತೆ ತೋರುತ್ತದೆ. ಅಲ್ಲದೆ ಮೊದಲು ನಾಲ್ಕು ಭಾಗಗಳ ಭುವನೇಶ್ವರಿಗಳಲ್ಲಿ ಕೆಲವು ತಟ್ಟೆಯಾಗಿವೆ ಕೆಲವು ಅರ್ಧಗೋಳಾಕಾರವಾಗಿವೆ. ಆದರೆ ಐದನೆಯ ಭಾಗದಲ್ಲಿರುವವೆಲ್ಲಾ ಅರ್ಧಗೋಳಾ ಕಾರವಾಗಿದ್ದು ಮಧ್ಯೆ ಕಮಲಬಿಡಿಸಿದವುಗಳಾಗಿವೆ.

ದೊಡ್ಡಗದ್ದವಳ್ಳಿಯ ಲಕ್ಷ್ಮೀ ದೇವಸ್ಥಾನದಲ್ಲಿರುವಂತೆ ಈ ದೇವಾಲಯದ ಗೋಡೆಯ ಹೊರಮುಖವೂ ಲೋವೆ ಕಲ್ಲಿನವರೆಗೆ ತೆಳ್ಳಗಿರುವ ಕಂಬಗಳಿಂದ ವಿಭಾಗಿಸಲ್ಪಟ್ಟಿರುತ್ತದೆ. ಈ ಒಂದೊಂದು ಭಾಗದಲ್ಲಿಯೂ ಒಂದೊಂದು ಸಣ್ಣ ಗೋಪುರವೂ ಅದಕ್ಕೆ ಆಧಾರವಾಗಿ ಒಂಟಿಕಂಬಗಳಾಗಲಿ ಜೋಡಿಕಂಬಗಳಾಗಲಿ ಕೆತ್ತಲ್ಪಟ್ಟಿರುತ್ತವೆ. ಈ ಗೋಪುರಗಳ ಕೆಳಗೆ ಸಾಮಾನ್ಯವಾಗಿ, ವಿಗ್ರಹಗಳೂ ಅವುಗಳ ಮೇಲೆ ಲತಾಮಂಟಪವೂ ಕೆಳಗೆ ಪೀಠಗಳೂ ಇರುತ್ತವೆ. ಈ ಸಣ್ಣ ಗೋಪುರಗಳನ್ನೂ ವಿಗ್ರಹಗಳನ್ನೂ ಬಿಟ್ಟರೆ ಮಿಕ್ಕ ಭಾಗವೆಲ್ಲಾ ಅಚಿತ್ರಿತವಾಗಿರುತ್ತದೆ. ಹೀಗೆ ಹೆಚ್ಚು ಚಿತ್ರಗಳಿಲ್ಲದಿರುವಿಕೆಯೇ ಒಟ್ಟಿನ ಮೇಲೆ ಕಟ್ಟಡಕ್ಕೆ ಒಂದು ಗಾಂಭೀರ್ಯವನ್ನೂ, ಇರುವ ಸ್ವಲ್ಪ ಚಿತ್ರಕೆಲಸಕ್ಕೆ ಹೆಚ್ಚು ಅತಿಶಯವನ್ನೂ ತರುತ್ತದೆ.

ದೇವಸ್ಥಾನದ ಬುಡಭಾಗವು ಸುಮಾರು ನಾಲ್ಕು ಅಡಿ ಎತ್ತರವಾಗಿದ್ದು ಸರ್ವಸಾಮಾನ್ಯವಾದ ಮಾದರಿಯಲ್ಲಿ ಕೆತ್ತಲ್ಪಟ್ಟಿದೆ. ಆದರೆ ಸೋಮನಾಥಪುರ ಹಳೇಬೀಡುಗಳ ದೇವಸ್ಥಾನದಲ್ಲಿರುವಂತೆ ಚಿತ್ರಿಸಲ್ಪಟ್ಟಿಲ್ಲ. ಲೋವೆ ಕಲ್ಲಿನಮೇಲೆ ಇರುವ ಗೋಪುರಭಾಗವೂ ವಿಗ್ರಹಾದಿಗಳಿಲ್ಲದೆ ಹೀಗೇ ಅಚಿತ್ರಿತವಾಗಿವೆ. ಇವುಗಳ ತುಂಡುಗಳನ್ನು ಗಾರೆ ಹಾಕಿ ಒರಟು ಒರಟಾಗಿ ಸೇರಿಸಿರುವುದನ್ನು ನೋಡಿದರೆ ಈಚೆಗೆ ಯಾರೋ ಆತುರದಲ್ಲಿ ಸರಿಮಾಡಿಸಿರುವಂತೆ ಕಾಣುತ್ತದೆ.

ದೇವಸ್ಥಾನದ ಮುಂಭಾಗದ ಗೋಡೆಯು, ಹಿಂದೆ ಹೇಳಿದಂತೆ, ಸಣ್ಣಸಣ್ಣ ಉದ್ದಗಂಬಗಳಿಂದ ಹದಿನೆಂಟು ಭಾಗಗಳಾಗಿ ವಿಭಾಗಿಸಲ್ಪಟ್ಟಿವೆ. ಇವುಗಳ ಪೈಕಿ ಹತ್ತರಲ್ಲಿ ಜಾಲಂದ್ರಗಳನ್ನು ಕೊರೆದಿದ್ದಾರೆ. ಇವುಗಳ ಮೂಲಕ ನವರಂಗವೆಲ್ಲಾ ಚೆನ್ನಾಗಿ ಕಾಣುವಷ್ಟು ಬೆಳಕು ಒಳಕ್ಕೆ ಬರುತ್ತದೆ.

ಈ ಕಟ್ಟಡದ ಒಳಮುಖಕ್ಕೆ ನವರಂಗದಲ್ಲಿ ಎಲ್ಲಾ ಒಟ್ಟು ಹದಿಮೂರು ಗೂಡುಗಳಿವೆ.—ಪ್ರತಿಯೊಂದು ಸುಕನಾಸಿಯ ಎರಡು ಪಾರ್ಶ್ವಗಳಲ್ಲಿಯೂ ಒಂದೊಂದು; ಎರಡು ಮತ್ತು ಮೂರನೆ ಸುಕನಾಸಿಯ ಮಧ್ಯೆ ಒಂದು; ಉತ್ತರ ದಕ್ಷಿಣ ಗೋಡೆಗಳ ಮಧ್ಯೆ ಒಂದೊಂದು. ಆದರೆ ಇವುಗಳಲ್ಲಿ ಐದನೆಯ ಸುಕನಾಸಿಯ ಎಡಗಡೆ ಇರಬೇಕಾದ ಗೂಡು ಮಾತ್ರ ಉತ್ತರಕ್ಕಿರುವ ಗೋಡೆಯಲ್ಲಿದೆ. ಇವುಗಳಲ್ಲಿ ಎರಡು ಮತ್ತು ಮೂರನೆಯ ಸುಕನಾಸಿಗಳ ಮಧ್ಯೆ ಇರುವುದೇ ಎಲ್ಲಕ್ಕೂ ದೊಡ್ಡದು. ಇದು, ನಾಲ್ಕು ಗೃಹದ ಕಟ್ಟಡವನ್ನು ಮಾತ್ರ ತೆಗೆದುಕೊಂಡರೆ, ಅಕ್ಷಪ್ರದೇಶಲ್ಲಿದ್ದ ಹಾಗಾಗುತ್ತದೆ. ಇವುಗಳಲ್ಲಿ ಎಂದಿನಂತೆ ಬಲಗೂಡುಗಳಲ್ಲಿ ಗಣಪತಿ ವಿಗ್ರಹವೂ ಎಡಗೂಡುಗಳಲ್ಲಿ ಮಹಿಷಾಸುರಮರ್ದಿನಿಯೂ ಇವೆ. ಮಿಕ್ಕವುಗಳಲ್ಲಿ ಉತ್ತರದಿಂದ ಕ್ರಮವಾಗಿ ಷಣ್ಮುಖ ಉಮಾಮಹೇಶ್ವರ ವೀರಭದ್ರ ಇವುಗಳ ವಿಗ್ರಹಗಳಿವೆ.

ನವರಂಗದ ಪೂರ್ವದಿಕ್ಕಿನ ಗೋಡೆಯ ಉದ್ದಕ್ಕೂ ಒಳಭಾಗದಲ್ಲಿ ಎತ್ತರವಾದ ಜಗಲಿ ಇದೆ.

ನವರಂಗದಲ್ಲಿರುವ ಕಂಬಗಳು ಮಧ್ಯದಲ್ಲಿ ಸುಮಾರು ಮೂರು ಅಡಿ ಎತ್ತರದವರೆಗೂ ಚೌಕವಾಗಿದ್ದು ಅಲ್ಲಿಂದ ಮೇಲೆ ತಲೆಯವರೆಗೂ ದುಂಡಗಿವೆ; ಕಂಬವಾಗಲಿ ಪೀಠವಾಗಲಿ ಚಿತ್ರಕೆಲಸಮಾಡಿದ್ದಲ್ಲ. ಗೋಡೆಗಳ ಪಕ್ಕದಲ್ಲಿರುವ ಕಂಬಗಳೆಲ್ಲಾ ಮೇಲಿನಿಂದ ಕೆಳಗಿನವರೆಗೂ ಚಿತ್ರಕೆಲಸಮಾಡಿದವುಗಳು.

ಎರಡು ಮತ್ತು ಮೂರನೆಯ ಸುಕನಾಸಿಗಳಿಗೆ ಮಧ್ಯೆ ನವರಂಗದಲ್ಲಿ ಆರು ಅಡಿ ಎತ್ತರವೂ ನಾಲ್ಕು ಅಡಿ ಅಗಲವೂ ಆದ ಒಂದು ದೊಡ್ಡ ಶಾಸನವು ನಿಲ್ಲಿಸಲ್ಪಟ್ಟಿದೆ. ಇದರಲ್ಲಿ ಸಣ್ಣಗೆ ಕೆತ್ತಿದ ಸುಮಾರು ೨೦೦ ಪಂಕ್ತಿ ಅಕ್ಷರಗಳಿವೆ. ಆದರೆ ಇವಕ್ಕೂ ಈ ದೇವಸ್ಥಾನಕ್ಕೂ ಯಾವ ಸಂಬಂಧವೂ ಇಲ್ಲ. ಇದರಲ್ಲಿ ಹೊಯಿಸಳ ರಾಜನಾದ ಸೋಮೇಶ್ವರನ ಸೇನಾಪತಿಗಳಿಬ್ಬರು ಕ್ರಿ. ಶ. ೧೨೩೭ರಲ್ಲಿ ಬ್ರಾಹ್ಮಣರಿಗೆ ದಾನಕೊಟ್ಟ ಸಂಗತಿಯು ಬರೆದಿದೆ.

ದ್ವಾರಮಂಟಪಗಳಲ್ಲಿ ಬಾಗಿಲುಗಳ ಎರಡು ಕಡೆಯೂ ಎರಡೆರಡು ಸುಂದರವಾದ ಎತ್ತರವಾದ ದ್ವಾರಪಾಲಕ ವಿಗ್ರಹಗಳು ನಿಲ್ಲಿಸಲ್ಪಟ್ಟಿವೆ. ಇವುಗಳು ಶಾಂತವಾಗಿ ನಿಂತಿರುವ ಮನೋಹರಭಾವವೂ, ಸ್ಪಷ್ಟವಾಗಿಯೂ ಮುದ್ದಾಗಿಯೂ ಕೆತ್ತಿರುವ ಅಂಗ ಪ್ರತ್ಯಂಗಗಳೂ, ಸೊಗಸಾಗಿ ಮಾಡಿದ ಸಣ್ಣ ಕೆತ್ತನೆಯ ಕೆಲಸಗಳೂ ಶಿಲ್ಪಿಯ ಸಾಮರ್ಥ್ಯವನ್ನು ಚೆನ್ನಾಗಿ ವ್ಯಕ್ತಗೊಳಿಸುತ್ತಿವೆ.

ಮಿಕ್ಕ ಹೊಯಿಸಳ ಕಟ್ಟಡಗಳಲ್ಲಿರುವಂತೆ ಇಲ್ಲಿಯೂ ಸುಕನಾಸಿಯ ದ್ವಾರಪ್ರದೇಶಗಳು ಬಹುರಮಣೀಯವಾಗಿರುತ್ತವೆ. ಇವುಗಳಿಗೆ ಬಾಗಿಲ ಎರಡು ಪಾರ್ಶ್ವಗಳಲ್ಲಿಯೂ ಎರಡು ಕುಳ್ಳಾದ ದ್ವಾರಪಾಲಕ ವಿಗ್ರಹಗಳು ಇರುತ್ತವೆ. ಇವುಗಳ ಮೇಲೆ ಎರಡು ಕೆತ್ತನೆಯ ಕಂಬಗಳು ಮೇಲಣ 'ಸಜ್ಜೆ' ಗೆ* ಆಧಾರವಾಗಿ ನಿಲ್ಲಿಸಲ್ಪಟ್ಟಿವೆ. ದ್ವಾರಮುಖದಲ್ಲಿ ಮುಂದಕ್ಕೆ ಚಾಚಿಕೊಂಡುಬಂದಿರುವ ಒಂದು ದೊಡ್ಡ ಶಿಲಾಪ್ರದೇಶದೊಳಗೆ ಉಮಾಮಹೇಶ್ವರ ವಿಗ್ರಹವೂ, 'ಸಜ್ಜೆ'ಯ ಮೇಲುಭಾಗದಲ್ಲಿ ಗೋಡೆಯೊಳಗೆ ಸಪರಿವಾರನಾದ ಈಶ್ವರನ ಮತ್ತು ನಂದಿಯ ವಿಗ್ರಹಗಳೂ ಅವುಗಳ ಎರಡು ಪಾರ್ಶ್ವಗಳಲ್ಲಿಯೂ ಸೊಗಸಾಗಿ ಕೆತ್ತಿದ ಮಕರಗಳೂ ಇವೆ. ಬಾಗಿಲನ ಎರಡು ಕಡೆಯೂ ಉದ್ದುದ್ದವಾಗಿ ಒಂದೊಂದು ಸಾಲು ಜಾಲಂಧ್ರಗಳಿವೆ.

---

* ಬಾಗಿಲುವಾಡದಿಂದ ಮೇಲೆ ಸ್ವಲ್ಪ ಮುಂದಕ್ಕೆ ಚಪ್ಪರದಂತೆ ಚಾಚಿಕೊಂಡಿರುವ ಭಾಗ.

ಭುವನೇಶ್ವರಿಗಳಲ್ಲಿ ಹದಿನೈದು ಅಂಕಣಗಳು ಆಳವಾಗಿ ಮಾಡಲ್ಪಟ್ಟಿವೆ. ಇವುಗಳಲ್ಲಿ ಎರಡು ಚೌಕಗಳು, ಒಂದರ ಮೂಲೆಗಳು ಮತ್ತೊಂದರ ಮೂಲೆಗಳ ಮೇಲೆ ಬರದಂತೆ, ಅಡ್ಡಡ್ಡವಾಗಿ ಇಡಲ್ಪಟ್ಟು ಮಧ್ಯೆ ಕಮಲಗಳು ಇರುತ್ತವೆ. ಒಂದೊಂದು ಸುಕನಾಸಿಯ ಮುಂದೂ ಒಂಬತ್ತುಅಂಕಣಗಳ ಸಣ್ಣಸಣ್ಣ ನವರಂಗ ಗಳಿವೆಯೆಂದೂ ಇವೆಲ್ಲಾ ಸೇರಿ ಒಂದು ದೊಡ್ಡ ನವರಂಗವಾಗಿದೆಯೆಂದೂ ಹೇಳಿ ದೆಯಷ್ಟೆ. ಇಲ್ಲಿಯ ಸಂಧ್ಯಂಕಣಗಳ ಮೇಲ್ಭಾಗಗಳು ಕೊರೆದು ಮಾಡಿದವುಗಳಲ್ಲ; ಇಲ್ಲಿ ಚಪ್ಪಟೆಯಾದ ಕಲ್ಲು ಚಪ್ಪಡಿಗಳನ್ನು ಮಾತ್ರ ಹಾಸಿದೆ. ನವರಂಗಭಾಗಗ ಳನ್ನು ತೆಗೆದುಕೊಂಡರೆ, ಇವುಗಳಲ್ಲಿರುವ ಒಟ್ಟು ನಲವತ್ತೈದು ಅಂಕಣಗಳ ಪೈಕಿ, ಮಧ್ಯೆ ಮಧ್ಯೆ ಇರುವ ಐದು ದೊಡ್ಡ ಅಂಕಣಗಳೂ ಆಳವಾಗಿ ಕೆತ್ತಿಮಾಡಲ್ಪ ಟ್ಟಿವೆ. ಮಿಕ್ಕ ನಲವತ್ತು ಅಂಕಣಗಳಲ್ಲಿ ಮೊದಲು ನಾಲ್ಕು ಗೃಹಗಳ ಮುಂದೆ ಇರುವವೇ ಒಂದು ವಿಧವಾಗಿಯೂ ಐದನೆಯ ಗೃಹದ ಮುಂದಿರುವವೇ ಒಂದುವಿಧ ವಾಗಿಯೂ ಇವೆಯೆಂದು ಹಿಂದೆಯೇ ತಿಳಿಸಿದೆ.

ಎರಡು ಮತ್ತು ಮೂರನೆಯ ಗೃಹಗಳ ಮುಂದೆ ದ್ವಾರಮಂಟಪಗಳಿರುತ್ತ ವೆಯೆಂದು ಹಿಂದೆಯೇ ಹೇಳಿದೆಯಷ್ಟೆ. ಇವುಗಳೆರಡರಲ್ಲೂ ಒಂದೊಂದು ಸುಮಾರು ದೊಡ್ಡದಾದ ನಂದಿಗಳು ಇವೆ. ನಾಲ್ಕು ಮತ್ತು ಐದನೆಯ ಗರ್ಭಗೃಹಗಳ ಮುಂದೂ ನವರಂಗದಲ್ಲಿಯೇ, ಇದರಂತೆ ಒಂದೊಂದು ನಂದಿ ಇದೆ. ಮೊದಲನೆಯ ಗೃಹದ ಮುಂದೆ ಇದ್ದದ್ದು ಹೋಗಿದೆ. ಇವೆಲ್ಲವೂ ಸುಂದರವಾಗಿ ಕೆತ್ತಲ್ಪಟ್ಟಿವೆ.

ದೇವಸ್ಥಾನದ ಗೋಡೆಯಮೇಲೆ ಬೇಲೂರು ಸೋಮನಾಥಪುರಗಳಲ್ಲಿರು ವಂತೆ ವಿಗ್ರಹಗಳು ವಿಶೇಷವಾಗಿಲ್ಲ. ಗೋಡೆಯ ಒಂದೊಂದು 'ಮುಖ' ದಲ್ಲಿಯೂ ಒಂದೊಂದು ಸಣ್ಣಗೋಪುರವಿದೆ. ಇದಕ್ಕೆ ಕೆಲವುಕಡೆ ಊರೆಕೊಟ್ಟಂತೆ ಒಂದೊಂದು ಕಂಬಮಾತ್ರ ಇದೆ. ಕೆಲವಕ್ಕೆ ಎರಡು ಕಡೆಯೂ ಕಂಬಗಳಿದ್ದು ಮಂಟಪಗಳ ಹಾಗೆ ಇವೆ. ಈ ಕಂಬಗಳ ಮಧ್ಯೆ ಅಲ್ಲಲ್ಲಿ ಮಯಕ್ಕೆ ಸರಿಯಾಗಿ ದೇವದೇವತಾ ವಿಗ್ರಹಗಳು ಕೆತ್ತಲ್ಪಟ್ಟಿವೆ. ಪೂರ್ವದಿಕ್ಕಿನ ಗೋಡೆಯಮೇಲೆ ದಕ್ಷಿಣದಕಡೆ ಒಂದು ಸೊಗಸಾದ ಗಣಪತಿಯೂ ಉತ್ತರದಕಡೆ ಮಹಿಷಾಸುರಮರ್ದಿನಿಯವಿಗ್ರಹವೂ ಇವುಗಳಮೇಲೆ ಸುಂದರವಾದ ಗೋಪುರಗಳೂ ಇವೆ. ಈ ಗಣಪತಿಗೂ ಮೊದಲ ನೆಯ ದ್ವಾರಮಂಟಪಕ್ಕೂ ಮಧ್ಯೆ ವಿಷ್ಣುವಿನ (ಚತುರ್ವಿಂಶತಿಮೂರ್ತಿಗಳಲ್ಲಿ) ಹನ್ನೆ ರಡು ಮೂರ್ತಿಗಳೂ ಆಯಾ ಪೀಠದಲ್ಲಿ ಅದರದರ ಹೆಸರಿನೊಡನೆ ಕೆತ್ತಲ್ಪಟ್ಟಿವೆ. ಈ ವಿಷ್ಣುಮೂರ್ತಿಗಳೆರಡೆರಡರ ಮಧ್ಯೆಯೂ ಒಂದೊಂದು ಗರುಡನು ಕೈಮುಗಿದು



ಗೋವಿಂದನಹಳ್ಳಿಯ ಪಂಚಲಿಂಗೇಶ್ವರ ದೇವಸ್ಥಾನದ ವಿನ್ಯಾಸವನ್ನೂ ಭುವನೇಶ್ವರಿಗಳನ್ನೂ ತೋರಿಸುವ ನಕ್ಷೆ.

ಕೊಂಡು ನಿಂತಿದೆ. ಮಧ್ಯೆ ಮಧ್ಯೆ ಸಣ್ಣ ಕಂಬಗಳಮೇಲೆ ಸ್ತ್ರೀವಿಗ್ರಹಗಳೂ ಇವುಗಳಮೇಲೆ ಗೋಪುರಗಳೂ ಕೆತ್ತಿರುವುದುಂಟು. ಎರಡು ದ್ವಾರಮಂಟಪಗಳಿಗೆ ಮಧ್ಯೆ ಇರುವ ಭಾಗದಲ್ಲಿ ದಶಾವತಾರಗಳು ಕೆತ್ತಲ್ಪಟ್ಟಿವೆ. ಇವುಗಳಲ್ಲಿ ಬುದ್ಧನ ವಿಗ್ರಹವೂ ಒಂಬತ್ತನೆಯ ಅವತಾರವಾಗಿ ಬಂದಿದೆ. ಇಲ್ಲಿಯೂ ಹಿಂದಿನಂತೆ ಸ್ತ್ರೀ ವಿಗ್ರಹಗಳಿವೆ. ಎರಡನೆಯ ದ್ವಾರಮಂಟಪದಿಂದ ಮಹಿಷಾಸುರ ಮರ್ದಿನಿಯವರೆಗೆ ಪೂರ್ವದಂತೆ ವಿಷ್ಣುವಿಗ್ರಹಗಳೂ ಮಧ್ಯೆ ಗರುಡ ಮತ್ತು ಸ್ತ್ರೀವಿಗ್ರಹಗಳೂ ಇವೆ. ಆದರೆ ಇಲ್ಲಿ ವಿಷ್ಣುವಿನ ಮಿಕ್ಕ ಹನ್ನೆರಡು ಮೂರ್ತಿಗಳಿಗೆ ಬದಲಾಗಿ ಒಂಬತ್ತು ಮಾತ್ರವೇ ಇವೆ. ಇವುಗಳ ಪೀಠದಲ್ಲಿ ಹೆಸರುಗಳು ಕೆತ್ತಿಲ್ಲ. ಈ ಭಾಗದಲ್ಲಿಯೂ ಪಶ್ಚಿಮಗೋಡೆಯ ಕೆಲವು ಭಾಗಗಳಲ್ಲಿಯೂ ಕೆಲವು ಶಿಲಾಫಲಕಗಳು ಕೆತ್ತದೇ ಹಾಗೇ ಬಿಟ್ಟಿವೆ. ಪಶ್ಚಿಮದ ಕಡೆ, ಪ್ರತಿಗರ್ಭಗೃಹದ ಮೂರು ಗೋಡೆಗಳಮೇಲೂ, ಗರ್ಭಗೃಹಗಳಿಗೆ ಮಧ್ಯೆ ಇರುವ ಪ್ರದೇಶದಲ್ಲಿಯೂ ಮೂರ್ತಿಗಳು ಇರುತ್ತವೆ. ಈ ಮಧ್ಯಪ್ರದೇಶಗಳಲ್ಲಿ ಒಂದೊಂದು ಗೂಡೂ ಅದರ ಉಭಯಪಾರ್ಶ್ವಗಳಲ್ಲಿಯೂ ಚೌರಿಹಿಡಿದುಕೊಂಡಿರುವ ಸ್ತ್ರೀವಿಗ್ರಹಗಳೂ ಇವೆ. ಗರ್ಭಗೃಹದ ಗೋಡೆಗಳಮೇಲೆ ಇರುವ ಮುಖ್ಯ ವಿಗ್ರಹಗಳು ಯಾವುವೆಂದರೆ:—

ಮೊದಲನೆಯ ಗೃಹ:—ದಕ್ಷಿಣಕ್ಕೆ—ಪರವಾಸುದೇವ, ನಾಲ್ಕು ಕೈಯುಳ್ಳ ನಿಂತಿರುವ ಸರಸ್ವತಿ, ಐರಾವತದಮೇಲೆ ಶಚಿ ಮತ್ತು ಇಂದ್ರ, ಲಕ್ಷ್ಮೀನಾರಾಯಣರನ್ನು ವಹಿಸಿರುವ ಗರುಡ, ವಾಮನನಿಗೆ ಧಾರೆಯೆರೆಯುತ್ತಿರುವ ಬಲಿ, ತ್ರಿವಿಕ್ರಮ, ಕಾಳೀಯಮರ್ದನ, ಹಿರಣ್ಯಕಶಿಪುವಧೆ, ಪ್ರಹ್ಲಾದ, ವಿಷ್ಣು, ಕೈಮುಗಿದುಕೊಂಡು ನಿಂತಿರುವ ಗರುಡ; ಪಶ್ಚಿಮ ಮತ್ತು ಉತ್ತರಕ್ಕೆ—ತಾಂಡವೇಶ್ವರ, ಅದರ ಎಡಕ್ಕೆ ಗಣಪತಿ ಮತ್ತು ಬ್ರಹ್ಮ, ಬಲಕ್ಕೆ ಸುಬ್ರಹ್ಮಣ್ಯ ಮತ್ತು ವಿಷ್ಣು, ಉಮಾಮಹೇಶ್ವರ, ಅದರ ಪಕ್ಕಗಳಲ್ಲಿ ತಾಂಡವವಾಡುತ್ತಿರುವ ಸರಸ್ವತಿಗಳು ಅವುಗಳ ಪಕ್ಕಗಳಲ್ಲಿ ವೇಣುಗೋಪಾಲ ಮಹಿಷಾಸುರಮರ್ದಿನಿಗಳು.

ಎರಡನೆಯ ಗೃಹ:—ದಕ್ಷಿಣಕ್ಕೆ—ಭೈರವ, ದುರ್ಗಾ, ಕೈಲಾಸವನ್ನು ಎತ್ತುತ್ತಿರುವ ರಾವಣ, ತಾಂಡವಗಣಪತಿ, ತಾಂಡವಸರಸ್ವತಿ; ಪಶ್ಚಿಮಕ್ಕೆ—ರಾಮ ಲಕ್ಷ್ಮಣ ಸೀತೆ ಹನುಮಂತ; ಗೋವರ್ಧನಧಾರಿ; ಉತ್ತರಕ್ಕೆ—ದುರ್ಗಾ, ಇಬ್ಬರು ಮೃದಂಗದವರು, ನರ್ತಕಿ, ಒಂದೇ ಲಿಂಗವನ್ನು ಎರಡು ಕಡೆಯೂ ಹಿಡಿದುಕೊಂಡು ನಿಂತಿರುವ ಎರಡು ಕಪಿಗಳು.

ಮೂರನೆಯ ಗೃಹ:—ದಕ್ಷಿಣಕ್ಕೆ—ಹರಿಹರ, ಪರವಾಸುದೇವ ಅದರ ಪಾರ್ಶ್ವಗಳಲ್ಲಿ ಸ್ತ್ರೀಮೂರ್ತಿಗಳು, ಲಕ್ಷ್ಮೀನರಸಿಂಹ; ಪಶ್ಚಿಮಕ್ಕೆ—ಯೋಗನಾರ

ಸಿಂಹ, ವೇಣುಗೋಪಾಲ, ಉಮಾಮಹೇಶ್ವರ, ಚೌರಿಯವಳು, ನಂಬಿನಾರಾಯಣ; ಉತ್ತರಕ್ಕೆ—ತಾಂಡವಸರಸ್ವತಿ, ನರ್ತಕಿ, ಆದಿವರಾಹನು ಭೂದೇವಿಯನ್ನು ಉದ್ಧಾರಮಾಡುವುದು, ಕತ್ತಿಗುರಾಣಿಗಳನ್ನು ಧರಿಸಿರುವ ಸೈನಿಕ, ಗರುಡ.

ನಾಲ್ಕನೆಯ ಗೃಹ:—ದಕ್ಷಿಣಕ್ಕೆ—ವಿಠಲ, (ಇದು ಎರಡು ಕೈಗಳಲ್ಲಿಯೂ ಸಣ್ಣ ಚೀಲಗಳನ್ನು ಹಿಡಿದುಕೊಂಡು ಅವುಗಳನ್ನು ಸೊಂಟದಮೇಲೆ ಇಟ್ಟುಕೊಂಡಿದೆ) ವೇಣುಗೋಪಾಲ, ಮಹಿಷಾಸುರಮರ್ದಿನಿ, ಕಾಳೀಯಮರ್ದನ, ಅರ್ಜುನ ಮತ್ಸ್ಯಭೇದನ; ಪಶ್ಚಿಮಕ್ಕೆ—ಸ್ತ್ರೀವಿಗ್ರಹ, ಹರಿಹರ, ಗಜಾಸುರಮರ್ದನ, ಉಮಾಮಹೇಶ್ವರ, ಮತ್ತು ಪಾರ್ವತಿಯಹತ್ತಿರ ವಾಹನವಾಗಿ ಒಂದು ಮುಂಗಸಿ; ನಿಂತಿರುವ ಸರಸ್ವತಿ; ಪಾರ್ಶ್ವಗಳಲ್ಲಿ ಗಣಪತಿ ಮತ್ತು ಸುಬ್ರಹ್ಮಣ್ಯ; ಉತ್ತರಕ್ಕೆ—ಸ್ತ್ರೀವಿಗ್ರಹ, ಬ್ರಹ್ಮಾ, ನಂದಿಯಮೇಲೆ ಕುಳಿತಿರುವ ಉಮಾಮಹೇಶ್ವರ, ವಿಷ್ಣು, ಸ್ತ್ರೀವಿಗ್ರಹ.

ಐದನೆಯ ಗೃಹ:—ದಕ್ಷಿಣಕ್ಕೆ—ನರಸಿಂಹ ಹಿರಣ್ಯಕಶಿಪುಮರ್ದನ, ಪ್ರಹ್ಲಾದ, ದಂಡ ಚಕ್ರ(?)ಗಳನ್ನು ಹಿಡಿದುಕೊಂಡಿರುವ ದಕ್ಷಿಣಾಮೂರ್ತಿ(?) ಪಶ್ಚಿಮಕ್ಕೆ—ಮೋಹಿನಿ; ಉತ್ತರಕ್ಕೆ—ತಾಂಡವೇಶ್ವರನ ಎರಡು ವಿಗ್ರಹಗಳು, ಎರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಧರಿಸಿಯೂ ಇನ್ನೆರಡು ಕೈಗಳನ್ನು (ಒಂದು ಹಸ್ತದ ಮೇಲೆ ಮತ್ತೊಂದು ಹಸ್ತ ಬರುವಂತೆ) ಯೋಗಮುದ್ರೆಯ ಭಾವದಲ್ಲಿ ಇಟ್ಟುಕೊಂಡೂ ಕುಳಿತಿರುವ ವಿಷ್ಣು. ಈ ದಿಕ್ಕಿನ ಗೋಡೆಯಲ್ಲಿ ಚಿತ್ರಿತವಾಗದೇ ಇರುವ ಶಿಲಾಫಲಕಗಳು ಹೆಚ್ಚಾಗಿವೆ.

ಈ ದೇವಸ್ಥಾನದ ಕಾಲವನ್ನು ನಿರ್ಣಯಿಸುವುದಕ್ಕೆ ಒಂದು ಆಂತರ ಸಾಧನವೂ ಒಂದು ಬಾಹ್ಯಸಾಧನವೂ ಇವೆ. ದ್ವಾರಮಂಟಪದಲ್ಲಿರುವ ಎರಡು ದ್ವಾರಪಾಲಕರ ಪೀಠಗಳಲ್ಲಿ ಅವುಗಳನ್ನು ಕೆತ್ತಿದ ಶಿಲ್ಪಿಯ ಹೆಸರಿದೆ. ಇದು ಸೋಮನಾಥಪುರದೇವಾಲಯದಲ್ಲಿ ನಮಗೆ ಆಗಲೇ ಪರಿಚಿತನಾಗಿರುವ ಮಲ್ಲಿತಮ್ಮನ ಹೆಸರು. ಸೋಮನಾಥಪುರದೇವಸ್ಥಾನದ ಕಾಲ ಕ್ರಿ. ಶ. ೧೨೬೮. ನವರಂಗದಲ್ಲಿರುವ ಶಾಸನವು ಬಾಹ್ಯಸಾಧನ. ಇದು ಕ್ರಿ. ಶ. ೧೨೩೩ ರಿಂದ ೧೨೫೪ರ ವರೆಗೆ ಆಳಿದ ಸೋಮೇಶ್ವರರಾಜನ ಕಾಲದ್ದು. ಆದ್ದರಿಂದ ಈ ಕಟ್ಟಡವನ್ನು ಹದಿಮೂರನೆಯ ಶತಮಾನದ ಮಧ್ಯಭಾಗದಲ್ಲಿ ಕಟ್ಟಿದ್ದೆಂದು ಹೇಳಬಹುದಾಗಿದೆ.

ಶ್ರೀಃ

ಕರ್ಣಾಟಕ

# ಸ್ವಪ್ನವಾಸವದತ್ತನಾಟಕಂ

(ನಾಂದ್ಯಂತದಲ್ಲಿ ಸೂತ್ರಧಾರನು ಪ್ರವೇಶಿಸುವನು.)

ಸೂತ್ರಧಾರ—

ಬಲಭದ್ರಬಾಹುದಂಡಯು |
ಗಳ**ಮುದಯನ**ವೇಂದುವರ್ಣ**ವಾಸವದತ್ತಾ** ||
ಬಲಮದು **ವಸಂತಕ**ಮ್ರಂ |
ಸಲಹುಗೆ! **ಪದ್ಮಾವತೀ**ರ್ಣಪೂರ್ಣಂ ನಿಮ್ಮಂ* ||೧||

ಆರ್ಯಮಿಶ್ರರಲ್ಲಿ ಇದೊಂದು ವಿಜ್ಞಾಪನೆ.—ಓಹೋ! ಏನಿದು? ನಾನು ವಿಜ್ಞಾಪಿಸುತ್ತಿರುವಷ್ಟರಲ್ಲಿ ಅತ್ತಲಾಗಿ ಏನೋ ಕೂಗಾಟವು ಕೇಳಿಸುತ್ತಿರುವುದು! ಒಳ್ಳೆಯದಿರಲಿ, ನೋಡುವೆನು.

ತೆರೆಯಲ್ಲಿ—ದಾರಿ! ದಾರಿ! ಅಯ್ಯಾ ಅತ್ತ ಸರಿಯಿರಿ!

ಸೂತ್ರ—ಓಹೋ! ತಿಳಿಯಿತು!

ಜನಪತಿ ಮಗಧೇಂದ್ರನ ನ |
ಜ್ಟಿನ ಭೃತ್ಯರ್ ಕೆಲಬರೊರ್ವ್ವಕನ್ಯೆಯನೊಡಗೂಂ ||
ಡನುಗಮಿಸುತೀತಪೋವನ |
ಜನಮಂ ಕಠಿನಾಜ್ಞೆಯಿಂದೆ ಕೆಲಕೊತ್ತರಿಪರ್ ||೨||

(ಹೋಗುವನು)

ಇದು

**ಸ್ಥಾಪನೆ**

---

* ಭಾಸಮಹಾಕವಿಯು ನಾಂದೀಶ್ಲೋಕದಲ್ಲಿ ಕಾವ್ಯಾರ್ಥಸೂಚನೆಗಾಗಿ, ಈ ನಾಟಕದಲ್ಲಿ ಮುಖ್ಯ ಪಾತ್ರಗಳಾದ ಉದಯನ, ವಾಸವದತ್ತೆ, ವಸಂತಕ, ಪದ್ಮಾವತಿ

(ಇಬ್ಬರು ರಾಜಭಟರು ಪ್ರವೇಶಿಸುವರು)

ಭಟರು—ಅತ್ತಸರಿಯಿರಿ ! ಅತ್ತಸರಿಯಿರಿ ! ಪೂಜ್ಯರೆ, ಅತ್ತಸರಿಯಿರಿ !

(ಪರಿವ್ರಾಜಕ ವೇಷದಿಂದ ಯೌಗಂಧರಾಯಣನೂ, ಅವಂತಿ ಕನ್ಯಾವೇಷದಿಂದ ವಾಸವದತ್ತೆಯೂ ಪ್ರವೇಶಿಸುವರು)

ಯೌಗಂಧ—(ಕಿವಿಗೊಟ್ಟು ಕೇಳಿ) ಏನಿದು ? ಇಲ್ಲಿಯೂ ನಿರ್ಬಂಧವೆ ?

ನಾರುಡೆಯುಟ್ಟು ವನ್ಯಫಲಮೂಲದೆ ತೃಪ್ತಿಯನಾಂತ ಮಾನ್ಯರಂ |
ಧೀರರನಾಶ್ರಮಸ್ಥಿತರನಂಜಿಪನಾವನೊ ! ನಿಷ್ಠುರಾಜ್ಞೆಯಿಂ |
ಮೀರಿದ ದುರ್ಮದೋದ್ಧತನವಂ ಚಲಭಾಗ್ಯದೆ ಬೀಗಿ ತನ್ನಹಂ |
ಕಾರದೆ ಪಾವನಾಶ್ರಮಮಿದಂ ಪೊಲೆವಳ್ಳಿಗೆ ಸಾಟಿಗೆಯ್ದನೇಂ ||೩||

ವಾಸವದತ್ತೆ—ಆರ್ಯನೆ ! ಹೀಗೆ ಇಲ್ಲಿಯ ಜನರನ್ನು ಒತ್ತರಿಸುತ್ತ ಬರುವವನು ಯಾರಿವನು ?

ಯೌಗಂಧ—ಪೂಜ್ಯಳೆ ! ಯಾವನು ಧರ್ಮವನ್ನು ಒತ್ತರಿಸಬೇಕೆಂದು ಬಯಸುವನೋ ಅಂತಹವನಲ್ಲದೆ ಬೇರೆ ಯಾರು ?

ವಾಸವದತ್ತೆ—ಆರ್ಯನೆ ! ನಾನು ಆ ವಿಚಾರವನ್ನು ಹೇಳುವುದಕ್ಕೆ ಬಂದವಳಲ್ಲ. ಆದರೆ ನಾನೂ ಹೀಗೆ ರಾಜಭಟರ ಕೈಯಿಂದ ನೂಕಿಸಿಕೊಳ್ಳಬೇಕಾದ ಸ್ಥಿತಿಗೆ ಬಂದೆನಲ್ಲವೇ ?

---

ಯರ ನಾಮನಿರ್ದೇಶವಾಗುವಂತೆ ಪದಯೋಜನೆಯನ್ನು ಮಾಡಿ ಮೇಲಣ ಶ್ಲೋಕವನ್ನು ರಚಿಸಿರುವುದರಿಂದ, ಕನ್ನಡದಲ್ಲಿಯೂ ಅದೇ ಸಮಾಸಪದಗಳನ್ನಲ್ಲದೆ ಬೇರೆ ಉಪಯೋಗಿಸಲು ಸಾಧ್ಯವಿಲ್ಲ. ಮೂಲಶ್ಲೋಕದಲ್ಲಿರುವ ವಿಶೇಷಣಗಳಿಗೂ ಬಹು ಕ್ಲಿಷ್ಟಕಲ್ಪನೆಯಿಂದಲೇ ಅರ್ಥವನ್ನು ಗ್ರಹಿಸಬೇಕಾಗಿದೆ. "ಉದಯಿಸುವ ಚಂದ್ರನಂತೆ ಕಾಂತಿಯುಕ್ತವಾಗಿ,(ನವೇಂದುವರ್ಣಂ + ಆಸವದತ್ತಾಬಲಂ = ನವೇಂದುವರ್ಣವಾಸವದತ್ತಾಬಲಂ), ಮದ್ಯಪಾನದಿಂದುಂಟಾದ ದುರ್ಬಲತೆಯುಳ್ಳುದಾಗಿ (ಅಥವಾ—ಅಬಲೆಯರಿಗೆ ಮದ್ಯವನ್ನು ಕೊಡತಕ್ಕುದಾಗಿ), ವಸಂತಸಮಯದಲ್ಲಿ ಮನೋಜ್ಞವಾಗಿ, ಪದ್ಮೆಯ (ಲಕ್ಷ್ಮಿಯ) ಅವತಾರದಿಂದ ಪೂರ್ಣವಾಗಿರುವ (ಅಥವಾ—ಕಾಂತಿಪೂರ್ಣವಾದ) ಬಲರಾಮನ ತೋಳುಗಳು ನಿಮ್ಮನ್ನು ಕಾಪಾಡಲಿ—ಎಂದರ್ಥವು.

ಯೌಗಂಧ—ಪೂಜ್ಯಳೆ, ನಿಜಸ್ಥಿತಿಯನ್ನು ಮರೆಸಿಕೊಂಡಿದ್ದಾಗ ದೇವತೆಗಳಿಗಾದರೂ ಇಂತಹ ತಿರಸ್ಕಾರಗಳು ತಪ್ಪಿದುವಲ್ಲ.

ವಾಸವದತ್ತೆ—ಈ ಪರಾಭವದಿಂದ ನನಗುಂಟಾದಷ್ಟು ಖೇದವು, ಇಷ್ಟು ದೂರ ದಾರಿನಡೆದ ಮಾರ್ಗಾಯಾಸದಿಂದಲೂ ತೋರಲಿಲ್ಲ.

ಯೌಗಂಧ—ಇವೆಲ್ಲಾ ನೀನೂ ಮೊದಲು ಅನುಭವಿಸಿ ಬಿಟ್ಟ ವೈಭವಗಳೇ ಅಲ್ಲವೇ? ಅದಕ್ಕಾಗಿ ಚಿಂತಿಸಬಾರದು. ಏಕೆಂದರೆ—

ನೀನೆಳಸಿದಂತೆ ನಡೆದುದು |
ಮಾನಿನಿ! ಮರ್ಗ ನಿನಗೆ! ಮಗುಳೆ ಪತಿ ಜಯಮೊಂದಲ್ ||
ನೀನದನೆ ಪಡೆವೆ! ಭಾಗ್ಯವಿ |
ತಾನಂ ಚಕ್ರಾರಪಙ್ಕ್ತಿಯಂತಿರೆ ಪೊರಳ್ಗುಂ* ||೪||

ಭಟರು—ಅತ್ತ ಸರಿಯಿರಿ! ಪೂಜ್ಯರೆ, ಅತ್ತ ಸರಿಯಿರಿ!

[ಕಾಂಚುಕೀಯನು (ಕಂಚುಕಿಯೊಬ್ಬನು) ಪ್ರವೇಶಿಸುವನು]

ಕಂಚುಕಿ—ಸಂಭಷಕ! ಬೇಡಬೇಡ! ಇಷ್ಟು ಕಠಿನವಾಗಿ ಇಲ್ಲಿಯ ಜನರನ್ನು ನಿರ್ಬಂಧಿಸಿ ಹೊರಡಿಸಬಾರದು.

ಅರಸಂ ಪಳಿಗೀಡಾಗದ |
ತೆರದಿಂ ನಡೆವುದು! ಕಟೂಕ್ತಿ ತಗದೀಯೆಡೆಯೊಳ್ ||
ಪುರಪರಿಭವಕಂಜಿಯೆ ತಾ |
ನರಣ್ಯದೊಳ್ ವಸಿಪುದೀ ತಪಸ್ವಿಜನೌಘಂ ||೫||

ಭಟರು—ಸರಿ! ನಿನ್ನಿಷ್ಟದಂತಾಗಲಿ! (ಹೋಗುವರು)

ಯೌಗಂಧ—ಆಹಾ! ಇವನು ಒಳ್ಳೆಯ ವಿವೇಕದೃಷ್ಟಿಯುಳ್ಳವನಂತೆ ತೋರುವುದು. ವತ್ಸೆ! ಇವನ ಸಮೀಪಕ್ಕೆ ಹೋಗುವೆವು ಬಾ.

ವಾಸವದತ್ತೆ—ಹಾಗೆಯೇ ಆಗಲಿ.

ಯೌಗಂಧ—(ಮುಂದೆ ಹೋಗಿ) ಅಯ್ಯಾ! ಇಲ್ಲಿಯ ಜನರನ್ನು ಚದರಿಸುತ್ತಿರುವ ಕಾರಣವೇನು?

ಕಂಚುಕಿ—ಎಲೈ ತಪಸ್ವಿಯೇ ಕೇಳು.

ಯೌಗಂಧ—(ತನ್ನಲ್ಲಿ) "ತಪಸ್ವಿ" ಯೆಂದು ಕರೆಯಿಸಿಕೊಳ್ಳುವುದೇನೋ ನನಗೆ ಬಹಳ ಸಮ್ಮತವೇ! ಆದರೆ ಹಾಗೆ ಕರೆಯಿಸಿಕೊಂಡು ಬಳಕೆಯಿಲ್ಲದುದರಿಂದ ಆ ಶಬ್ದವು ಮನಸ್ಸಿಗೆ ತಟ್ಟನೆ ಹಿಡಿಯುವ ಹಾಗಿಲ್ಲ.

ಕಂಚುಕಿ—ಅಯ್ಯಾ, ಕೇಳು. ಈಕೆ ನಮ್ಮ ಮಹಾರಾಜ ದರ್ಶಕನ ತಂಗಿ. ಇವಳ ಹೆಸರು ಪದ್ಮಾವತಿ. ಈಕೆ ಈ ಆಶ್ರಮದಲ್ಲಿ ವಸಿಸುತ್ತಿರುವ ತನ್ನ ತಾಯಾದ ಮಹಾದೇವಿಯನ್ನು ನೋಡಿ ಹೋಗುವುದಕ್ಕಾಗಿ ಬಂದಿದ್ದಳು. ಅವಳನ್ನು ಸಂದರ್ಶಿಸಿ ಅವಳ ಅನುಮತಿಯನ್ನು ಪಡೆದು ಈಗ ತನ್ನ ಅರಮನೆಗೆ ಹೊರಟಿರುವಳು. ಆದರೆ ಅವಳು ಈ ದಿನ ರಾತ್ರಿ ಈ ಆಶ್ರಮದಲ್ಲಿಯೇ ಇದ್ದು ಹೋಗಬೇಕೆಂದು ಬಯಸುವಳು. ಇವಳು ಇಲ್ಲಿರುವುದರಿಂದ ಈ ಆಶ್ರಮವಾಸಿಗಳಲ್ಲಿ ಯಾರಿಗೇನೂ ಅಡ್ಡಿಯಿಲ್ಲ.

ಮುನಿಗಳ್ ಯಥೇಷ್ಟಮಿಾಕಾ |
ನನದಿಂ ಕೊಂಡುಯ್ಗೆ ತೀರ್ಥಜಲಕುಸುಮಕುಶೇಂ ||
ಧನಮನಿವಳ್ ಧರ್ಮಪ್ರಿಯೆ |
ಮುನಿಪೀಡೆಗೆ ಮೆಚ್ಚಳೀಕೆಗಿದೆ ಕುಲಧರ್ಮಂ ||೬||

ಯೌಗಂಧ—(ಸ್ವಗತಂ) ಓಹೋ! ಇವಳೇ ಮಗಧರಾಜಪುತ್ರಿಯಾದ ಪದ್ಮಾವತಿಯೆಂಬವಳೋ? ನಮ್ಮ ಮಹಾರಾಜನಿಗೆ ಮುಂದೆ ಅರಸಿಯಾಗುವಳೆಂದು ಪುಷ್ಪಕ ಭದ್ರ ಮೊದಲಾದ ದೈವಜ್ಞರು ಹೇಳಿದ್ದುದು ಇವಳನ್ನೇ ಅಲ್ಲವೇ? ಆದುದರಿಂದ ಆಲೋಚಿಸಿದಲ್ಲಿ—

ಅನುರಾಗದ್ವೇಷಂಗಳ್ |
ಜನಿಕುಂ ಸಂಕಲ್ಪಮಾತ್ರದಿಂ ಮತ್ರಭುಗೀ ||
ವನಿತೆಯನರಸಿಯನಾಗಿಪ |
ಮನಮಿಾಕೆಯೊಳೆನಗೆ ಮಮತೆಯಂ ಪುಟ್ಟಿಸುಗುಂ ||೭||

ವಾಸವದತ್ತೆ—(ಸ್ವಗತಂ) ಇವಳು ರಾಜಕುಮಾರಿಯೆಂಬುದನ್ನು ಕೇಳಿ ನನಗೆ ಇವಳಲ್ಲಿ ಸೋದರೀಸ್ನೇಹವುಂಟಾಗುತ್ತಿರುವುದು.

(ಪರಿವಾರಸಹಿತಳಾದ ಪದ್ಮಾವತಿಯೂ ಅವಳ ಚೇಟಿಯೂ ಪ್ರವೇಶಿಸುವರು.)

ಚೇಟಿ—ಬಾ, ರಾಜಪುತ್ರೀ! ಬಾ! ಈ ಆಶ್ರಮವನ್ನು ಪ್ರವೇಶಿಸು.

(ಅನಂತರ ಕುಳಿತಿರುವ ತಾಪಸಿ ಪ್ರವೇಶಿಸುವಳು)

ತಾಪಸಿ—ರಾಜಪುತ್ರಿಗೆ ಸ್ವಾಗತವು.

ವಾಸವದತ್ತೆ—(ಸ್ವಗತಂ) ಇವಳೇ ಆ ರಾಜಕುಮಾರಿಯೇನು? ಇವಳ ರೂಪವೂ ಕುಲೋನ್ನತಿಗೆ ತಕ್ಕಂತೆಯೇ ಇರುವುದು.

ಪದ್ಮಾ—ಪೂಜ್ಯಳೆ! ವಂದಿಸುವೆನು.

ತಾಪಸಿ—ಚಿರಂಜೀವಿನಿಯಾಗು! ಕುಮಾರೀ! ಬಾ! ಸಂಕೋಚವೇಕೆ? ತಪೋವನವೆಂಬುದು ಅತಿಥಿಗಳಿಗೆ ಸ್ವಗೃಹದಂತೆಯೇ ಹೊರತು ಬೇರೆಯಲ್ಲ!

ಪದ್ಮಾ—ಅದಕ್ಕೆ ಅಡ್ಡಿಯೇನು? ಈ ನಿನ್ನ ಪ್ರಿಯವಚನಗಳಿಂದಲೇ ನಾನು ಅನುಗೃಹೀತಳಾದೆನು.

ವಾಸವದತ್ತೆ—(ಸ್ವಗತಂ) ಇವಳ ರೂಪವು ಮಾತ್ರವೇ ಅಲ್ಲ! ಈಕೆಯ ನುಡಿಯೂ ಅತ್ಯಂತ ಮಧುರವಾಗಿದೆ.

ತಾಪಸಿ—(ಚೇಟಿಯೊಡನೆ) ಭದ್ರೆ! ಸೌಮ್ಯಸ್ವರೂಪನಾದ ನಮ್ಮ ಮಹಾರಾಜನಿಗೆ ಒಡಹುಟ್ಟಿದ ಈಕೆಯನ್ನು ವರಿಸಲು ಇದುವರೆಗೆ ಅನುರೂಪನಾದ ರಾಜಕುಮಾರನೊಬ್ಬನೂ ಬರಲಿಲ್ಲವೇನು?

ಚೇಟಿ—ಉಜ್ಜಯಿನೀಪತಿಯಾದ ಪ್ರದ್ಯೋತನೆಂಬ ರಾಜನುಂಟು. ಅವನು ತನ್ನ ಮಗನಿಗಾಗಿ ದೂತರ ಮುಖದಿಂದ ಹೇಳಿ ಕಳುಹಿಸುತ್ತಿರುವನು.

ವಾಸವದತ್ತೆ—(ಸ್ವಗತಂ) ಓಹೋ! ಹಾಗಿದ್ದರೆ ಈಗ ಇವಳು ನಮ್ಮವಳೇ ಆದಳು.

ತಾಪಸಿ—ಭದ್ರೆ! ಅಂತಹ ಗೌರವಕ್ಕೆ ತಕ್ಕ ಆಕೃತಿಯೇ ಇದು. ಅವೆರಡೂ ಪ್ರಸಿದ್ಧವಾದ ರಾಜವಂಶಗಳೆಂದು ಕೇಳಿದುದುಂಟು.

ಪದ್ಮಾ—(ಕಂಚುಕಿಯೊಡನೆ) ಆರ್ಯನೆ! ಇಲ್ಲಿ ನಮ್ಮನ್ನು ಅನುಗ್ರಹಿಸುವುದಕ್ಕಾಗಿ ನಮ್ಮಿಂದೇನಾದರೂ ಸತ್ಕಾರವನ್ನಪೇಕ್ಷಿಸುವವರುಂಟೇನು? ಇಲ್ಲಿಯ ಮುನಿಜನಗಳಲ್ಲಿ ಅವರವರಿಗೆ ಅಭಿಲಷಿತವಾದುದೇನಿದ್ದರೂ ನಮ್ಮಿಂದ ಪಡೆಯಬಹುದೆಂದು ಒಬ್ಬೊಬ್ಬರಿಗೂ ತಿಳಿಸಿ ಬಾ.

ಕಂಚುಕಿ—ಅಮ್ಮಾ! ನಿನ್ನ ಇಷ್ಟದಂತೆಯೇ ಆಗಲಿ! (ಆಶ್ರಮದ ಕಡೆಗೆ ಬಂದು) ಓ ತಪೋವನವಾಸಿಗಳಾದ ಮಹರ್ಷಿಗಳಿರಾ! ಲಾಲಿಸಿ ಕೇಳಬೇಕು! ಇದೋ! ಇಲ್ಲಿ ಪೂಜ್ಯಳಾದ ಮಗಧ ರಾಜಪುತ್ರಿಯು ನಿಮ್ಮ ಪರಿಚಯದಿಂದ ನಿಮ್ಮಲ್ಲಿ ತನಗೆ ಹುಟ್ಟಿದ ವಿಶ್ವಾಸಕ್ಕಾಗಿ ನಿಮಗೆ ತನ್ನ ಸತ್ಕಾರಗಳನ್ನು ಸಲ್ಲಿಸಿ, ಅದರಿಂದ ತಾನು ಧರ್ಮಭಾಗಿನಿಯಾಗಬೇಕೆಂದು ಬಯಸುವಳು. ಆದುದರಿಂದ ನಿಮ್ಮಲ್ಲಿ—

ಆರಾಗುರ್ಗಂಟಭಿಲಾಷೆ ತೀರ್ಥಘಟದೊಳ್ ವಸ್ತ್ರೇಚ್ಛೆಯೊರಾರ್ಗ್ಗೆ ಮ |
ತ್ತಾರಾನುಂ ಗುರುಗೀಯಲುಂಟೆ ಧನಮಂ ದೀಕ್ಷಾಂತದೊಳ್ ಪೇಳಿಮೀ ||
ನಾರೀರತ್ನಮುದಾರಶೀಲೆ! ಭವದೀಯಾನುಗ್ರಹಾಕಾಂಕ್ಷೆಯಿಂ |
ದಾರಾರ್ಗ್ಗಾವುದಭೀಷ್ಟಮಿತ್ತಪೆನದಂ ತಾನೆಂದು ಪೇಳ್ದಟ್ಟಿದಳ್ ||

ಯೌಗಂಧ—(ಕಿವಿಗೊಟ್ಟು ಕೇಳಿ ಸಂತೋಷದಿಂದ—ಸ್ವಗತಂ) ಭಲೆ! ಇದೊಂದು ಉಪಾಯವು ಸಿಕ್ಕಿತು! (ಪ್ರಕಾಶಂ) ಅಯ್ಯಾ! ನನ್ನದೊಂದು ಕೋರಿಕೆಯುಂಟು.

ಪದ್ಮಾ—(ಸಂತೋಷದಿಂದ) ಆಹಾ! ನಾನು ಈ ತಪೋವನಕ್ಕೆ ಬಂದುದು ಅದೃಷ್ಟವಶದಿಂದ ಈಗ ಸಾರ್ಥಕವಾಯಿತು.

ತಾಪಸಿ—ಆಹಾ ! ಏನಿದು ! ಈ ತಪೋವನವಾಸಿಗಳೆಲ್ಲರೂ ನಿತ್ಯತೃಪ್ತರು; ಯಾವುದನ್ನೂ ಕೋರುವ ಹಾಗಿಲ್ಲ. ಇವನು ಯಾವನೋ ಆಗಂತುಕನಾಗಿರಬೇಕು.

ಕಂಚುಕಿ—ಅಯ್ಯಾ ! ನಿನಗಾಗಿ ನಾವು ಮಾಡಬೇಕಾದುದೇನು ?

ಯೌಗಂಧ—ಅಯ್ಯಾ ಇವಳು ನನ್ನ ತಂಗಿ. ಇವಳ ಪತಿಯು ಇವಳನ್ನು ಬಿಟ್ಟು ದೇಶಾಂತರಕ್ಕೆ ಹೋಗಿರುವನು. ಆದುದರಿಂದ ಕೆಲವು ಕಾಲದವರೆಗೆ ಇವಳನ್ನು ಪೂಜ್ಯಳಾದ ಈಕೆ ತನ್ನ ರಕ್ಷಣೆಯಲ್ಲಿ ಇಟ್ಟುಕೊಂಡು ಕಾಪಾಡುತ್ತಿರಬೇಕೆಂದು ನಾನು ಬಯಸುವೆನು. ಇಷ್ಟೇ ಹೊರತು,

ಧನಕನಕಾಶೆಯಿಲ್ಲೆನಗೆ, ವಸ್ತ್ರದಪೇಕ್ಷೆಯುಮಿಲ್ಲ, ಭೋಗದೊಳ್ |
ಮನಮಿನಿಸಿಲ್ಲ, ಜೀವನಕೆ ಮಾರ್ಗಮಿದೆಂದುಡಲಿಲ್ಲ ಕಾವಿಯಂ ||
ಘನಗುಣಶೀಲೆ ಧರ್ಮಗತಿಯಂ ನೆರೆ ಬಲ್ಲವಳೀಕುಮಾರಿ ಯೆ |
ನ್ನನುಜೆಯ ಶೀಲಮಂ ಪೊರೆವಳೆಂಬುದಿದೆನ್ನ ಮನೋಭಿಕಾಂಕ್ಷಿತಂ ||

ವಾಸವದತ್ತೆ—(ಸ್ವಗತಂ) ಓಹೋ ! ಆರ್ಯ ಯೌಗಂಧರಾಯಣನು ನನ್ನನ್ನು ಇವಳ ವಶದಲ್ಲಿಯೇ ಬಿಟ್ಟುಹೋಗುವಂತೆ ತೋರುವುದು. ಇರಲಿ ಅವನು ಯಾವ ಕಾರ್ಯವನ್ನೂ ವಿಚಾರವಿಲ್ಲದೆ ಮಾಡತಕ್ಕವನಲ್ಲ.

ಕಂಚುಕಿ—ಪೂಜ್ಯಳೆ, ಈತನ ಪ್ರಾರ್ಥನೆಯೇನೋ ನಮಗೆ ದುಸ್ಸಾಧ್ಯವಾಗಿ ತೋರುವುದು. ಏಕೆಂದರೆ, ನೋಡು !

ಧನಮಾವುದು ಸುಖಮರ್ಥಿಪ |
ಜನಕ್ಕೆ, ತನ್ನಸುವನೀವುದುಂ ಸುಖಮೆ ! ತಪೋ ||
ಧನಮಾವುದುಂ ಸುಖಂ ! ಮ |
ತ್ತನಿತರೊಳಂ ನ್ಯಾಸರಕ್ಷೆಯೆಂಬುದತಿಕಷ್ಟತರಂ ||೧೦||

ಇದಕ್ಕಾಗಿ ಈಗ ನಾವು ಹೇಳಬೇಕಾದ ಪ್ರತ್ಯುತ್ತರವೇನು ?

ಪದ್ಮಾ—ಆರ್ಯನೆ, ಇದೇನು ಹೀಗೆ ಹೇಳುವೆ? ಮೊದಲು ನಾವು ಎಲ್ಲರ ಮುಂದೆ ಘಂಟಾಘೋಷವಾಗಿ, ಯಾರಿಗೇನು ಬೇಕಾದರೂ ಕೇಳ ಬಹುದೆಂದು ಹೇಳಿಬಂದಮೇಲೆ, ಈಗ ಆ ವಿಷಯದಲ್ಲಿ ವಿಚಾರ ಮಾಡುತ್ತಿರುವುದು ಯುಕ್ತವೇ? ಅವನ ಕೋರಿಕೆಯಂತೆ ನಡೆ ಯಿಸು.

ಕಂಚುಕಿ—ಅಮ್ಮಾ, ನಿನ್ನ ಗುಣಕ್ಕೆ ತಕ್ಕ ಮಾತನ್ನೇ ಆಡಿದೆ.

ಚೇಟಿ—ಸತ್ಯಸಂಧಳಾದ ನೀನು ಚಿರಂಜೀವಿನಿಯಾಗಿರಬೇಕು.

ತಾಪಸಿ—ವತ್ಸೆ, ಬಹು ಕಾಲದವರೆಗೆ ಸುಖದಿಂದ ಬಾಳು!

ಕಂಚುಕಿ—ಪೂಜ್ಯಳೆ, ಹಾಗೇ ಆಗಲಿ. (ಮುಂದೆ ಹೋಗಿ) ಅಯ್ಯಾ, ನಮ್ಮ ರಾಜಕುಮಾರಿಯು ನಿನ್ನ ಇಷ್ಟದಂತೆ ನಿನ್ನತಂಗಿಯನ್ನು ತನ್ನ ಲ್ಲಿಟ್ಟು ಕಾಪಾಡುವುದಕ್ಕೆ ಒಪ್ಪಿರುವಳು.

ಯೌಗಂಧ—ಅನುಗ್ರಹಿಸಲ್ಪಟ್ಟೆನು. ವತ್ಸೆ! ಆ ಪೂಜ್ಯೆಯ ಬಳಿಗೆ ಹೋಗು.

ವಾಸವದತ್ತೆ—(ಆತ್ಮಗತಂ) ಮಂದಭಾಗ್ಯಳಾದ ನನಗೆ ಹೋಗದಿದ್ದರೆ ಬೇರೆ ಗತಿಯೇನು?

ಪದ್ಮಾ—ಒಳ್ಳೆಯದು! ಬಾರಮ್ಮ! ಬಾ! ಈಗ ನೀನು ನಮ್ಮವಳಾದೆ!

ತಾಪಸಿ—ಇವಳ ಈ ಆಕೃತಿಯನ್ನು ನೋಡಿದರೆ, ಇವಳೂ ಒಬ್ಬ ರಾಜ ಕುಮಾರಿಯೆಂದೇ ತೋರುವುದು.

ಚೇಟಿ—ಪೂಜ್ಯಳೆ! ಚೆನ್ನಾಗಿ ಊಹಿಸಿದೆ! ಇವಳು ಮೊದಲು ಅನೇಕ ರಾಜಭೋಗಗಳನ್ನು ಅನುಭವಿಸುತಿದ್ದಳೆಂದೇ ನನಗೂ ತೋರು ತ್ತಿದೆ.

ಯೌಗಂಧ—(ಸ್ವಗತಂ) ಆಹಾ! ಈಗ ಅರ್ಧಭಾರವನ್ನಿಳಿಸಿದಂತಾಯಿತು. ನಾನು ಮೊದಲು ಮಂತ್ರಿಗಳೊಡನೆ ಆಲೋಚಿಸಿ ಬಂದ ಹಾಗೆಯೇ ಹಿಡಿದ ಕಾರ್ಯಗಳೆಲ್ಲಾ ಸುಲಭವಾಗಿ ಕೈಗೂಡಿ ಬರುತ್ತಿರುವುವು. ನಮ್ಮ ಮಹಾರಾಜನನ್ನು ತಿರುಗಿ ಅವನ ರಾಜ್ಯದಲ್ಲಿ ಪ್ರತಿಷ್ಠಿತನ ನ್ನಾಗಿ ಮಾಡಿದಮೇಲೆ ಅವನ ಸನ್ನಿಧಾನದಲ್ಲಿರತಕ್ಕ ನನಗೆ ಈ

ಮಗಧರಾಜಪುತ್ರಿಯು ವಿಶ್ವಾಸಸ್ಥಾನಳಾಗಿ, ನಾನು ಈಗ ಮಾಡಿರುವ ಕೆಲಸಗಳಿಗೆಲ್ಲಾ ರಾಜನ ಮುಂದೆ ಇವಳೇ ನನಗೆ ಸಾಕ್ಷಿಯಾಗಿರುವಳು. ಏಕೆಂದರೆ

ಭೂಪಾಲಾಗ್ರಣಿಗುತ್ತಮಾಂಗನೆಯೆನಿಪ್ಪಳ್ ಮುಂದೆ ಸಂದೇಹಮಿ |
ಲ್ಲೀ ಪದ್ಮಾವತಿ! ಸಿದ್ಧರಿಂ ಮೊದಲೆ ನಾಂ ಕೇಳ್ದಿರ್ದ್ದವೋಲ್ ಭೂವರಂ ||
ಗಾಪತ್ತಾತ್ಯುತ್ತಲೆ! ನಂಬಿ ನಾನದನೆ ಕಾರ್ಯಂಗೆಯ್ದೆನೀಗಳ್ ವಿಧಿ |
ವ್ಯಾಪಾರಂ ಸುವಿಚಾರದಿಂದುಸಿರ್ದ ಸಿದ್ಧಾದೇಶಮಂ ಮೀರ್ಗ್ಗುಮೇಂ? ||

(ಬ್ರಹ್ಮಚಾರಿ ಪ್ರವೇಶಿಸುವನು)

ಬ್ರಹ್ಮಚಾರಿ—(**ಮೇಲೆ ನೋಡಿ**) ಆಗಲೇ ಮಧ್ಯಾಹ್ನವಾಯಿತು! ನನಗೇನೋ ಬಹಳ ಆಯಾಸವು ತೋರುತ್ತಿದೆ. ಎಲ್ಲಿ ವಿಶ್ರಮಿಸಿಕೊಳ್ಳಲಿ? (**ಸುತ್ತ ನೋಡಿ**) ಒಳ್ಳೆಯದು! ಅದೋ! ಅಲ್ಲಿ ಅನುಕೂಲವಾದ ಸ್ಥಳವು ಕಾಣಿಸುತ್ತಿರುವುದು. ಸುತ್ತಲೂ ನೋಡಿದರೆ ಇದೊಂದು ತಪೋವನದಂತೆ ತೋರುವುದು. ಏಕೆಂದರೆ,

ನಿರಪಾಯಸ್ಥಳಮೆಂದು ನಂಬಿ ಸುಳಿಗುಂ ನಿರ್ಭೀತಿಯಿಂ ಪುಲ್ಲೆಗಳ್ |
ತರುಗಳ್ ಪ್ರೇಮವಿವರ್ಧಿತಂಗಳಿವು ಪಣ್‌ಪೂಗೊಂಚಲಿಂದೊಪ್ಪುಗುಂ ||
ಪಿರಿದುಂ ಗೋವ್ರಜಮಿಲ್ಲಿ ನೋಡೆ ಕಪಿಲಂ! ಸುಕ್ಷೇತ್ರಶೂನ್ಯಂ ವನಾಂ|
ತರವಿರ್ಕೆ ಸಂಶಯಮೇಕಿದಾಶ್ರಮಮೆ! ಕಾಣ್ಬುಂ ಹೋಮ ಧೂಮಾಳಿಯುಂ ||

ಇರಲಿ! ಈ ಆಶ್ರಮವನ್ನು ಪ್ರವೇಶಿಸುವೆನು. (**ಪ್ರವೇಶಿಸಿ**) ಆಹಾ! ಯಾರಿವನು, ಆಶ್ರಮವಿರುದ್ಧವಾದ ವೇಷದಲ್ಲಿರುವನು? (**ಬೇರೊಂದು ಕಡೆಗೆ ತಿರುಗಿ**) ಇಗೊ! ಇಲ್ಲಿ ತಪಸ್ವಿಗಳೂ ಕೆಲವರು ಕಾಣಿಸುತ್ತಿರುವರು! ಆದುದರಿಂದ ನಾನು ಅಲ್ಲಿ ಹೋಗುವುದರಿಂದ ತಪ್ಪೇನೂ ಇಲ್ಲ. ಓಹೋ, ಇದೇನು? ಇಲ್ಲಿಹೆಂಗಸರೂ ಕಾಣಿಸುವರು!

ಕಂಚುಕಿ—ಅಯ್ಯಾ! ಧಾರಾಳವಾಗಿ ಬರಬಹುದು ; ಇಂತಹ ಆಶ್ರಮ ಪ್ರದೇಶವು ಸರ್ವಜನಸಾಧಾರಣವಾದುದಲ್ಲವೆ? ಇಲ್ಲಿ ಯಾರಿಗೂ ಯಾವ ಅಡ್ಡಿಯೂ ಇಲ್ಲ.

ವಾಸವದತ್ತೆ—ಉಂ!

ಪದ್ಮಾವತಿ—ಓಹೋ ಪರಪುರುಷದರ್ಶನಕ್ಕೆ ಇವಳು ಬೇಸರಗೊಳ್ಳುವಂತಿದೆ. ಒಳ್ಳೆಯದು! ನನ್ನಲ್ಲಿ ನ್ಯಾಸರೂಪವಾಗಿರುವ ಈಕೆಯ ಮನಸ್ಸು ನೋಯದಂತೆ ನೋಡಿಕೊಳ್ಳಬೇಕಾದುದು ನನ್ನ ಕರ್ತವ್ಯವು.

ಕಂಚುಕಿ—ಅಯ್ಯಾ! ನಾವು ಇಲ್ಲಿಗೆ ಮೊದಲೇ ಬಂದವರು. ಈಗಲೇ ಅಭ್ಯಾಗತರಾಗಿ ಬಂದ ನೀವು ನಮ್ಮ ಆತಿಥ್ಯವನ್ನು ಕೈಕೊಳ್ಳಬೇಕು.

ಬ್ರಹ್ಮಚಾರಿ—(ಆಚಮನಮಾಡಿ) ಇರಲಿ! ಇರಲಿ! ನಮ್ಮ ಶ್ರಮವು ನೀಗಿತು. ತೃಪ್ತರಾದೆವು.

ಯೌಗಂಧ—ಅಯ್ಯಾ! ತಾವು ಎಲ್ಲಿಂದ ಬಂದವರು? ಮುಂದೆ ಎಲ್ಲಿಗೆ ಹೋಗತಕ್ಕವರು? ನಿಮ್ಮ ವಾಸಸ್ಥಳವಾವುದು?

ಬ್ರಹ್ಮ—ಅಯ್ಯಾ ಕೇಳು! ನಾನು ಈಗಲೇ ರಾಜಗೃಹದಿಂದ ಬರುತ್ತಿರುವೆನು. ನಾನು ವೇದಗಳಿಗೆ ವಿಶೇಷಾರ್ಥಗಳನ್ನು ಅಧ್ಯಯನಮಾಡುವುದಕ್ಕಾಗಿ ವತ್ಸದೇಶಕ್ಕೆ ಸೇರಿದ ಲಾವಾಣಕವೆಂಬ ಗ್ರಾಮದಲ್ಲಿರುತಿದ್ದೆನು.

ವಾಸವದತ್ತೆ—(ತನ್ನಲ್ಲಿ ತಾನು ದುಃಖದಿಂದ) ಅಯ್ಯೋ! ಲಾವಾಣಕವೆ? ಈ ಲಾವಾಣಕವೆಂಬ ಹೆಸರನ್ನು ಕೇಳಿ ನನ್ನ ಸಂಕಟವು ಮರುಕೊಳಿಸುತ್ತಿರುವುದು.

ಯೌಗಂಧ—ತಮ್ಮ ಅಧ್ಯಯನವು ಮುಗಿಯಿತಲ್ಲವೆ?

ಬ್ರಹ್ಮ—ಮುಗಿಯುವುದೆಲ್ಲಿ?

ಯೌಗಂಧ—ಹಾಗಿದ್ದರೆ ಅದನ್ನು ಮುಗಿಸುವುದಕ್ಕೆ ಮೊದಲೇ ಬಿಟ್ಟು ಇಲ್ಲಿಗೆ ಬರಲು ಕಾರಣವೇನು ?

ಬ್ರಹ್ಮ—ಅಲ್ಲಿ ಅತಿದಾರುಣವಾದ ಮಹಾವ್ಯಸನವೊಂದು ಪ್ರಾಪ್ತವಾಯಿತಷ್ಟೆ ?

ಯೌಗಂಧ—ಏನದು ? ಅಂತಹ ವ್ಯಸನವೇನು ?

ಬ್ರಹ್ಮ—ಅಲ್ಲಿ ಉದಯನನೆಂಬ ರಾಜನು ವಾಸಿಸುತ್ತಿದ್ದನು.

ಯೌಗಂಧ—ಹೌದು ! ಪೂಜ್ಯನಾದ ಆ ಮಹಾರಾಜನ ಖ್ಯಾತಿಯನ್ನು ಕೇಳಿಬಲ್ಲೆವು. ಅವನಿಗೇನಾಯಿತು ?

ಬ್ರಹ್ಮ—ಅವನಿಗೆ ಅವಂತಿರಾಜಪುತ್ರಿಯಾದ ವಾಸವದತ್ತೆಯೆಂಬ ಪ್ರಿಯಪತ್ನಿಯೊಬ್ಬಳಿದ್ದಳು.

ಯೌಗಂಧ—ಇರಬಹುದು ? ಆಮೇಲಾಮೇಲೆ ?

ಬ್ರಹ್ಮ—ಒಮ್ಮೆ ರಾಜನು ಬೇಟೆಗೆ ಹೋಗಿದ್ದ ಕಾಲದಲ್ಲಿ ಆ ಗ್ರಾಮಕ್ಕೆ ಬೆಂಕಿಬಿದ್ದು, ಅದರಲ್ಲಿ ಅವಳೂ ದಗ್ಧಳಾದಳು.

ವಾಸವದತ್ತೆ—(ಆತ್ಮಗತಂ) ಅಯ್ಯೋ ! ಸುಳ್ಳು ! ಸುಳ್ಳು ! ಹಾ ! ಮಂದಭಾಗಿನಿಯಾದ ನಾನು ಇನ್ನೂ ಜೀವಿಸಿರುವೆನಲ್ಲವೆ ?

ಯೌಗಂಧ—ಆಮೇಲಾಮೇಲೆ ?

ಬ್ರಹ್ಮ—ಆಗ ಆ ವಾಸವದತ್ತಾದೇವಿಯನ್ನು ಅಪಾಯದಿಂದ ತಪ್ಪಿಸಬೇಕೆಂದು ಪ್ರಯತ್ನಿಸಿ, ಯೌಗಂಧರಾಯಣನೆಂಬ ಮಂತ್ರಿಯೂ ಆ ಅಗ್ನಿಯಲ್ಲಿಯೇ ಬಿದ್ದುಬಿಟ್ಟನು.

ಯೌಗಂಧ—ಬಿದ್ದುದೇನೋ ನಿಜವೇ ! ಆಮೇಲೆ ?

ಬ್ರಹ್ಮ—ಇಷ್ಟರಲ್ಲಿ ಬೇಟೆಯಿಂದ ಹಿಂತಿರುಗಿ ಬಂದ ರಾಜನಿಗೆ ಈ ಅನರ್ಥಗಳೆಲ್ಲವೂ ತಿಳಿಯಬಂದುವು. ಅವನು ತನ್ನ ಪ್ರಿಯಭಾರ್ಯೆಯ ಮತ್ತು ಇಷ್ಟಮಂತ್ರಿಯ ವಿಯೋಗವನ್ನು ಸಹಿಸಲಾರದೆ, ತಾನೂ ಅದೇ ಬೆಂಕಿಯಲ್ಲಿ ಬಿದ್ದು ಪ್ರಾಣವನ್ನು ಕಳೆದುಕೊಳ್ಳಲು ಯತ್ನಿ

ಸುವಷ್ಟರಲ್ಲಿ, ಸಮಿಾಪದಲ್ಲಿದ್ದ ಮಂತ್ರಿಗಳು ಬಹಳ ಪ್ರಯತ್ನದಿಂದ ಅವನನ್ನು ತಡೆದರು.

ವಾಸವದತ್ತೆ—(ಆತ್ಮಗತಂ) ಬಲ್ಲೆನು, ಬಲ್ಲೆನು! ಆರ್ಯಪುತ್ರನಿಗೆ ನನ್ನಲ್ಲಿರುವ ಕನಿಕರವೆಷ್ಟೆಂಬುದನ್ನು ನಾನೂ ಬಲ್ಲೆನು.

ಯೌಗಂಧ—ಆಮೇಲಾಮೇಲೆ?

ಬ್ರಹ್ಮ—ಆಮೇಲೆ ರಾಜನು ತನ್ನ ಪ್ರಿಯೆಯ ಮೈಮೇಲಿದ್ದ ಆಭರಣಗಳಲ್ಲಿ ದಗ್ಧಶೇಷವಾಗಿದ್ದ ಕೆಲವನ್ನು ನೋಡಿ, ಅವುಗಳನ್ನೆತ್ತಿ ತನ್ನ ಎದೆಗೆ ಒತ್ತಿಕೊಂಡು ವ್ಯಸನವನ್ನು ತಡೆಯಲಾರದೆ ಮೂರ್ಛಿತನಾದನು.

ಎಲ್ಲರೂ—(ವ್ಯಸನದಿಂದ) ಹಾ! ಕಷ್ಟ, ಕಷ್ಟ!

ವಾಸವದತ್ತೆ—(ಸ್ವಗತಂ) ಆರ್ಯಯೌಗಂಧರಾಯಣನ ಕೋರಿಕೆ ತೀರಿತಲ್ಲವೇ! ಇನ್ನಾದರೂ ನೆಮ್ಮದಿಯಿಂದಿರಲಿ!

ಚೇಟಿ—ರಾಜಪುತ್ರೀ! ಈಕೆಯೇನೋ ಬಹಳವಾಗಿ ಅಳುತ್ತಿರುವಳು ನೋಡು.

ಪದ್ಮಾ—ಹೌದು, ಅವಳು ಬಹು ದುಃಖಪಡುವಂತೆ ತೋರುವುದು.

ಯೌಗಂಧ—ಹೌದಮ್ಮ, ಹೌದು! ನಿಜ! ಈ ನನ್ನ ತಂಗಿಯು ಸಹಜವಾಗಿಯೇ ದುಃಖವನ್ನು ತಡೆಯಲಾರಳು. ಆಮೇಲಾಮೇಲೆ?

ಬ್ರಹ್ಮ—ಆಮೇಲೆ ರಾಜನಿಗೆ ಮೆಲ್ಲಮೆಲ್ಲಗೆ ಪ್ರಜ್ಞೆಬಂದು ಚೇತರಿಸಿಕೊಂಡನು.

ಪದ್ಮಾ—ಹೇಗಾದರೂ ದೈವಕೃಪೆಯಿಂದ ಬದುಕಿರುವನಷ್ಟೆ? ಅವನು ಮೂರ್ಛೆಬಿದ್ದನೆಂದು ಕೇಳಿದೊಡನೆ ನನ್ನ ಹೃದಯವು ಶೂನ್ಯಪ್ರಾಯವಾಗಿತ್ತು.

ಯೌಗಂಧ—ಆಮೇಲಾಮೇಲೆ?

ಬ್ರಹ್ಮ—ಆಮೇಲೆ ಆ ರಾಜನು ನೆಲದಮೇಲೆ ಬಿದ್ದುದರಿಂದ ಧೂಳಿಧೂಸರಿತವಾದ ದೇಹದೊಡನೆ ತಟ್ಟನೆ ಮೇಲೆದ್ದು "ಹಾ! ವಾಸವದತ್ತೇ!

ಹಾ! ಅವಂತಿರಾಜಪುತ್ರೀ! ಹಾ, ಪ್ರಿಯೆ! ಹಾ, ಪ್ರಿಯ ಶಿಷ್ಯೆ!'' ಎಂದು ಏನೇನೋ ಬಹುವಿಧವಾಗಿ ಪ್ರಲಪಿಸುತಿದ್ದನು. ಹೆಚ್ಚು ಮಾತಿನಿಂದೇನು ? ಮುಖ್ಯವಾಗಿ—

ಆಪರಿ ದುರ್ನಿವಾರವಿರಹಾರ್ತರಥಾಂಗಮುಖಿಾಗಳಿಲ್ಲ! ಮ |
ತ್ತಾಪರಿ ಕಾಮಿನೀಜನವಿಯೋಗದೆ ನೊಂದರುಮನ್ಯರಿಲ್ಲ! ತ ||
ದ್ಭೂಪನದಾವಳಂ ನೆನೆವನಿಂತವಳೊರ್ವಳೆ ಧನ್ಯೆ! ಪಾವಕೋ |
ದ್ದೀಪಿತೆಯಾಗಿ ಬೆಂದಳಿದುಮಾಸತಿ ಬೆಂದವಳಲ್ಲ ನಿಶ್ಚಯಂ! ||೧೩||

ಯೌಗಂಧ—ಅಯ್ಯಾ, ಅದಿರಲಿ. ಆ ರಾಜನಿಗೆ ಇಂತಹ ಸ್ಥಿತಿಯಲ್ಲಿ ದುಃಖ ಶಮನ ಮಾಡುವುದಕ್ಕೆ ಮಂತ್ರಿಗಳಾರೂ ಸಮಿಾಪದಲ್ಲಿರಲಿಲ್ಲವೇ?

ಬ್ರಹ್ಮ—ಇಲ್ಲದೆ ಏನು ? ರುಮಣ್ವಂತನೆಂಬ ಮಂತ್ರಿಯು ಅವನ ಸಮಿಾಪದಲ್ಲಿಯೇ ಇದ್ದು, ಅವನನ್ನು ಸಮಾಧಾನದಲ್ಲಿರಿಸುವುದಕ್ಕೆ ತನ್ನಿಂದಾದಷ್ಟು ಪ್ರಯತ್ನಗಳನ್ನೆಲ್ಲಾ ಮಾಡುತ್ತಿರುವನು. ಆ ಮಂತ್ರಿಯ ದುಃಖವನ್ನು ತಾನೇ ಏನೆಂದು ಹೇಳಲಿ?

ಜನಪತಿಯಂತೆ ತಾನುಮತಿದೀನಕೃಶಾನನನಾಗಿ, ಪಾನಭೋ |
ಜನ ನಿಜದೇಹಸಂಸ್ಕರಣವೊಂದುಮನೊಲ್ಲದಹರ್ನಿಶಂ ನಿಜೇ ||
ಶನ ಪರಿಚರ್ಯೆಗೆಯ್ಯುತವನೊಳ್ ಸುಖದುಃಖಸಮಾನಭಾಗಿಯೆಂ |
ದೆನಿಸಿಹನೊರ್ವೆ ರಾಜನಸುವಂ ಬಿಡೆ ಮಂತ್ರಿಗೆ ಮೃತ್ಯು ನಿಶ್ಚಯಂ ||

ವಾಸವದತ್ತೆ—(ಸ್ವಗತಂ) ದೈವಕೃಪೆಯಿಂದ ಆರ್ಯಪುತ್ರನಿಗೆ ರಕ್ಷಕರೊದಗಿದರು.

ಯೌಗಂಧ—(ಸ್ವಗತಂ) ಈಗ ರುಮಣ್ವಂತನು ವಹಿಸಿರುವ ಭಾರವು ಬಹಳ ಮಹತ್ತಾದುದೇ! ಏಕೆಂದರೆ—

ನಾಂ ತಳೆದ ಭಾರಮಿದು ವಿ |
ಶ್ರಾಂತಿಪ್ರದಮವನ ಭಾರಮಧಿಕತರಂ! ಭೂ ||

ಕಾಂತಂ ವಶನಾರ್ಗಿಳಿಯೊ |
ದ್ಯಂತಮುಮಾತಂಗಧೀನಮೆನಿಸಿಹುದಲ್ತೇ ||೧೫||

(ಪ್ರಕಾಶಂ) ಅಯ್ಯಾ, ಈಗ ರಾಜನು ನೆಮ್ಮದಿಯಿಂದಿರುವನಷ್ಟೆ ?

ಬಹ್ಮ—ಈಗ ಹೇಗಿರುವನೆಂದು ನನಗೆ ತಿಳಿಯದು. ಆ ಗ್ರಾಮದಲ್ಲಿರುವ ವರೆಗೂ ಆ ರಾಜನು ಕ್ಷಣಕ್ಷಣಕ್ಕೂ ಅವಳನ್ನೇ ನೆನೆಸಿಕೊಂಡು "ಇಲ್ಲಿ ನಾನು ಅವಳೊಡನೆ ನಗುತ್ತಿದ್ದೆನು, ಇಲ್ಲಿ ಮಾತಾಡುತ್ತಿದ್ದೆನು, ಇಲ್ಲಿ ಆಕೆಯೊಡನೆ ಕುಳಿತಿದ್ದೆನು, ಇಲ್ಲಿ ಮಲಗಿದ್ದೆನು, ಇಲ್ಲಿ ಅವಳೊಡನೆ ಕೋಪಗೊಂಡಿದ್ದೆನು!" ಎಂದು ಪರಿಪರಿಯಾಗಿ ವಿಲಪಿಸುತ್ತಿದ್ದುದನ್ನು ನೋಡಿ, ಮಂತ್ರಿಗಳು ಅವನನ್ನು ಬಹಳ ಪ್ರಯತ್ನಪೂರ್ವಕವಾಗಿ ಆ ಗ್ರಾಮದಿಂದ ಕರೆದುಕೊಂಡು ಹೊರಟುಹೋದರು. ರಾಜನು ಬಿಟ್ಟುಹೋದಮೇಲೆ ಆ ಗ್ರಾಮವು ಚಂದ್ರನಕ್ಷತ್ರಗಳೊಂದೂ ಇಲ್ಲದ ಆಕಾಶದಂತೆ ಕೇವಲ ಶೂನ್ಯಪ್ರಾಯವಾಗಿದ್ದುದನ್ನು ನೋಡಿ ನಾನೂ ಅದನ್ನು ಬಿಟ್ಟು ಇತ್ತಲಾಗಿ ಹೊರಟುಬಂದೆನು.

ತಾಪಸಿ—ಆಹಾ! ಆ ಗ್ರಾಮಕ್ಕೆ ಆಗಂತುಕನಾಗಿ ಬಂದ ಈ ಬ್ರಹ್ಮಚಾರಿಯೂ ಹೀಗೆ ಪ್ರಶಂಸೆ ಮಾಡಬೇಕಾದರೆ, ಆ ರಾಜನು ಬಹಳ ಉತ್ತಮಗುಣವುಳ್ಳವನಾಗಿರಬೇಕಲ್ಲವೆ?

ಚೇಟಿ—ರಾಜಪುತ್ರಿ! ಅಂತಹ ಮಹನೀಯನನ್ನು ಬೇರೆ ಯಾವ ಪುಣ್ಯವತಿಯು ಕೈಹಿಡಿಯುವಳೋ?

ಪದ್ಮಾ—(ತನ್ನಲ್ಲಿತಾನು) ನನ್ನ ಹೃದಯವೂ ಇದನ್ನೇ ಆಲೋಚಿಸುತ್ತಿರುವುದು.

ಬ್ರಹ್ಮ—ಅಮ್ಮಾ! ಇನ್ನು ನಾನು ಹೊರಡಬಹುದೆ?

ಇಬ್ಬರೂ—ಹೊರಡಬಹುದು. ನಿನಗೆ ಕಾರ್ಯಸಿದ್ಧಿಯಾಗಲಿ!

ಬ್ರಹ್ಮ—ಹೋಗಿಬರುವೆನು. (ಹೋಗುವನು)

ಯೌಗಂಧ—(ಕಂಚುಕಿಯನ್ನು ನೋಡಿ) ಅಯ್ಯಾ ! ಈ ಪೂಜ್ಯಳ ಅನುಜ್ಞೆಯನ್ನು ಪಡೆದು ನಾನೂ ಹೊರಡಬೇಕೆಂದಿರುವೆನು.

ಕಂಚುಕಿ—ಅಮ್ಮಾ ! ನೀನು ಅನುಜ್ಞೆಯನ್ನು ಕೊಟ್ಟರೆ ಇವನೂ ಹೊರಡುವನಂತೆ !

ಪದ್ಮಾವತಿ—ಆರ್ಯನನ್ನು ಕಾಣದಿದ್ದರೆ ಅವನ ಸಹೋದರಿಯು ಬಹಳ ವ್ಯಸನಪಡುವಳೋ ಏನೋ !

ಯೌಗಂಧ—ನಿಮ್ಮಂತಹ ಸಾಧುಗಳ ರಕ್ಷಣೆಯಲ್ಲಿರುವಾಗ ಅವಳಿಗೆ ವ್ಯಸನವೇನೂ ತೋರದು ! (ಕಂಚುಕಿಯನ್ನು ನೋಡಿ) ಅಯ್ಯಾ! ನಾವು ಹೊರಡುವೆವು.

ಕಂಚುಕಿ—ಹೊರಡಬಹುದು! ಆದರೆ ತಿರುಗಿ ಇಲ್ಲಿಗೆ ಬಂದು ನಮಗೆ ದರ್ಶನವನ್ನು ಕೊಡಬೇಕು.

ಯೌಗಂಧ—ಆಗಲಿ ! (ಹೋಗುವನು.)

ಕಂಚುಕಿ—ರಾಜಪುತ್ರಿ ! ಪರ್ಣಶಾಲೆಗೆ ಹೋಗಲು ನಮಗೂ ಸಮಯವಾಯಿತಲ್ಲವೆ ?

ಪದ್ಮಾ—ಆರ್ಯೆ ! ವಂದಿಸುವೆನು.

ತಾಪಸಿ—ವತ್ಸೆ ! ಅನುರೂಪನಾದ ಪತಿಯನ್ನು ಹೊಂದು !

ವಾಸವದತ್ತೆ—ಆರ್ಯೆ ! ನಮಸ್ಕರಿಸುವೆನು.

ತಾಪಸಿ—ಶೀಘ್ರದಲ್ಲಿಯೇ ನಿನಗೆ ನಿನ್ನ ಪತಿಯೊಡನೆ ಸಮಾಗಮವುಂಟಾಗಲಿ !

ವಾಸವದತ್ತೆ—ಅನುಗೃಹೀತಳಾದೆನು.

ಕಂಚುಕಿ—ಅಮ್ಮಾ ! ಇನ್ನು ನಡೆಯಿರಿ. ಅದೋ ! ಆಗಲೇ ಸಂಧ್ಯಾಸಮಯವಾಯಿತು. ನೋಡಿರಿ ! ಈಗಲಾದರೋ,

ತಳರ್ದುವು ಪಕ್ಷಿಗಳ್ ನಿಜನಿವಾಸಕೆ ! ತೀರ್ಥಜಲಾವಗಾಹನ |
ಕ್ಕೆಳಿದುದು ಮೌನಿವೃಂದಮಿದೊ! ಧೂಮವನೆಳ್ಬಿಸಿ ಹೋಮವಹ್ನಿಯು ||
ಜ್ಜ್ವಲತೆಯನಾಂತುದೆಲ್ಲೆಡೆಯೊಳಂ ! ರವಿ ಮೆಲ್ಲನೆ ಪಶ್ಚಿಮಾಚಲ |
ಕ್ಕೆಳಿವನಿದೋ ! ಮರಳ್ಚಿ ರಥಮಂ ನಿಜರಶ್ಮಿಯನೀಳ್ದು ದೂರದಿಂ ||೧೬||

(ಎಲ್ಲರೂ ಹೋಗುವರು)

ಇಂತಿದು

**ಪ್ರಥಮಾಂಕಂ**

———

# ರಾಮಾಯಣ.

ಕಾವ್ಯಗಳನ್ನು ಸ್ಥೂಲವಾಗಿ ಎರಡುಪಂಗಡ ಮಾಡಬಹುದು. ಕೆಲವು ಒಬ್ಬ ಕವಿಯ ಮಾತುಗಳು, ಮತ್ತೆ ಕೆಲವು ಒಂದು ದೊಡ್ಡ ಸಂಪ್ರದಾಯದ ಮಾತುಗಳು.

ಒಬ್ಬ ಕವಿಯ ಮಾತುಗಳೆಂದರೆ ಮತ್ತಾರಿಗೂ ತಿಳಿಯತಕ್ಕುವಲ್ಲವೆಂದು ಅರ್ಥವಲ್ಲ; ಹಾಗಾಗುವ ಪಕ್ಷಕ್ಕೆ ಆ ಕವಿಯನ್ನು ಹುಚ್ಚನೆನ್ನಬೇಕಾಗುತ್ತದೆ. ಆ ಮಾತಿನ ಅರ್ಥವಿಷ್ಟೇ.—ಕವಿಗೆ ತನ್ನ ಸ್ವಂತ ಸುಖದುಃಖ, ಕಲ್ಪನೆ, ಜೀವನದ ಅಭಿಜ್ಞತೆಗಳ ಮೂಲಕ ಮಾನವಜಾತಿಗೆ ಸಾಮಾನ್ಯವಾದ ಚಿರಂತನ ಹೃದಯಾವೇಗವನ್ನೂ ಜೀವನದ ಮಾರ್ಮಿಕ ವಿಷಯಗಳನ್ನೂ ವ್ಯಕ್ತಪಡಿಸುವ ಶಕ್ತಿಯು ಇರುತ್ತದೆ.

ಈ ಪಂಗಡದ ಕವಿಗಳಿರುವಂತೆಯೇ ಮತ್ತೊಂದು ಪಂಗಡದ ಕವಿಗಳೂ ಇರುತ್ತಾರೆ. ಅವರ ಕಾವ್ಯಗಳ ಮುಖಾಂತರವಾಗಿ ಒಂದು ಸಮಗ್ರದೇಶವು ಅಥವಾ ಕಾಲವು ತನ್ನ ಹೃದಯವನ್ನೂ ಅಭಿಜ್ಞತೆಯನ್ನೂ ವ್ಯಕ್ತಪಡಿಸಿ ಅದನ್ನು ಮಾನವನ ಶಾಶ್ವತ ಸಾಮಗ್ರಿಯನ್ನಾಗಿ ಮಾಡುತ್ತದೆ.

ಈ ಎರಡನೆಯ ಪಂಗಡದ ಕವಿಗೆ ಮಹಾಕವಿಯೆಂದು ಹೆಸರು. ಸಮಗ್ರ ದೇಶದ ಅಥವಾ ಜನಾಂಗದ ವಾಣಿಯು ಇವರನ್ನು ಆಶ್ರಯಿಸಬಲ್ಲುದು. ಇವರು ರಚಿಸುವ ಕಾವ್ಯವು ಒಬ್ಬಮನುಷ್ಯನು ರಚಿಸಿದ್ದೆಂದು ಮನಸ್ಸಿಗೆ ತೋರುವುದಿಲ್ಲ. ಅದು ಒಂದು ಮಹಾವೃಕ್ಷದಂತೆ ದೇಶದ ಭೂಗರ್ಭದಿಂದ ಆವಿರ್ಭವಿಸಿ ಆ ದೇಶಕ್ಕೆ ಆಶ್ರಯಚ್ಛಾಯೆಯನ್ನು ದಾನಮಾಡುವಂತೆ ತೋರುತ್ತದೆ. ಶಾಕುಂತಳ ಕುಮಾರ ಸಂಭವಗಳಲ್ಲಿ ಕಾಳಿದಾಸನ ಲೇಖನನೈಪುಣ್ಯದ ಪರಿಚಯವನ್ನು ಹೊಂದಬಹುದು. ಆದರೆ ರಾಮಾಯಣ ಮಹಾಭಾರತಗಳು ಗಂಗಾ ಹಿಮಾಲಯಗಳಂತೆ ಸಮಗ್ರ ಭರತಖಂಡದವುಗಳು; ವ್ಯಾಸವಾಲ್ಮೀಕಿಗಳು ಉಪಲಕ್ಷ್ಯಮಾತ್ರ.

ನಿಜವಾಗಿಯೂ ವ್ಯಾಸ ಅಥವಾ ವಾಲ್ಮೀಕಿ ಎಂಬುದು ಯಾರ ಹೆಸರೂ ಆಗಿರಲಿಲ್ಲ. ಅದು ಒಂದು ಉದ್ದೇಶದಿಂದ ಆದ ನಾಮಕರಣ ಮಾತ್ರ. ಈ ಎರಡು ಗ್ರಂಥಗಳೂ ಎಷ್ಟು ದೊಡ್ಡವು ಮಹತ್ತ್ವವುಳ್ಳವುಗಳು ಎಂದರೆ, ಅವು ಸಮಗ್ರ ಭರತಖಂಡದೊಡನೆ ಒಂದಾಗಿ ತಮ್ಮನ್ನು ರಚಿಸಿದ ಕವಿಗಳ ಹೆಸರನ್ನು ಮರೆಸಿ ಕುಳಿತುಬಿಟ್ಟಿವೆ. ಕವಿಯು ಅಷ್ಟುಮಟ್ಟಿಗೆ ತನ್ನ ಕಾವ್ಯದ ಅಂತರಾಳದಲ್ಲಿ ಬಿದ್ದು ಬಿಟ್ಟಿರುತ್ತಾನೆ.

ನಮ್ಮ ದೇಶಕ್ಕೆ ರಾಮಾಯಣ ಮಹಾಭಾರತಗಳು ಹೇಗೋ ಪ್ರಾಚೀನ ಗ್ರೀಸಿಗೆ "ಇಲಿಯಡ್" ಹಾಗೆ ಎಂದು ಹೇಳಬಹುದು. ಅದು ಸಮಗ್ರಗ್ರೀಸ್

ದೇಶದ ಹೃದಯಕಮಲದಲ್ಲಿ ಆವಿರ್ಭವಿಸಿ ಆ ಹೃದಯಕಮಲದಲ್ಲಿಯೇ ವಾಸಮಾಡಿತು. ಹೋಮರ್‌ಕವಿಯು ತನ್ನ ದೇಶ ಕಾಲಗಳ ಕಂಠಕ್ಕೆ ಭಾಷೆಯನ್ನು ಒದಗಿಸಿಕೊಟ್ಟನು. ಆ ವಾಕ್ಯವು ಊಟೆಯಂತೆ ತನ್ನದೇಶದ ಅಂತಸ್ಸ್ಥಲದಿಂದ ಹೊರಟು ಪ್ರವಹಿಸಿ ಬಹುಕಾಲದಿಂದಲೂ ಅದನ್ನು ಆರ್ದ್ರವಾಗಿ ಮಾಡಿರುತ್ತದೆ.

ಆಧುನಿಕ ಕಾಲದ ಯಾವ ಕಾವ್ಯದಲ್ಲಿಯೇ ಆಗಲಿ ಇಷ್ಟರಮಟ್ಟಿನ ವ್ಯಾಪಕತೆಯು ಕಂಡು ಬರುವುದಿಲ್ಲ. ಮಿಲ್ಟನ್ ಕವಿಯ "ಪ್ಯಾರಡೈಸ್ ಲಾಸ್ಟ" ನಲ್ಲಿ ಭಾಷೆಯ ಗಾಂಭೀರ್ಯವೂ, ಛಂದಸ್ಸಿನ ಮಾಹಾತ್ಮ್ಯವೂ ರಸದ ಗಂಭೀರತೆಯೂ ಬೇಕಾದಷ್ಟು ಇವೆ; ಆದರೆ ಅದು ದೇಶದ ಧನವಲ್ಲ; ಅದೇನಿದ್ದರೂ ಲೈಬ್ರೆರಿಯ ಆದರದ ಸಾಮಗ್ರಿ.

ಆದಕಾರಣ ಒಂದೆರಡು ಮಾತ್ರವೇ ಇರುವ ಪ್ರಾಚೀನ ಕಾವ್ಯಗಳನ್ನು ಒಟ್ಟುಗೂಡಿಸಿ ಅವೆಲ್ಲಕ್ಕೂ ಒಂದೇ ಹೆಸರನ್ನು ಕೊಡಬೇಕಾದರೆ ಮಹಾಕಾವ್ಯವೆಂಬುದನ್ನಲ್ಲದೆ ಮತ್ತಾವ ಹೆಸರನ್ನು ಕೊಡಬಹುದು ? ಅವು ಪ್ರಾಚೀನ ಕಾಲದ ದೇವ ದಾನವರಂತೆ ದೊಡ್ಡ ಪರಿಮಾಣದ ದೇಹವುಳ್ಳವು—ಅವುಗಳ ಜಾತಿ ಈಗ ಲುಪ್ತವಾಗಿ ಹೋಗಿದೆ.

ಪ್ರಾಚೀನ ಆರ್ಯರ ನಾಗರಿಕತೆಯ ಒಂದು ಧಾರೆಯು ಯೂರೋಪಿನಲ್ಲಿಯೂ ಮತ್ತೊಂದು ಧಾರೆಯು ಭರತಖಂಡದಲ್ಲಿಯೂ ಪ್ರವಹಿಸಿತು. ಯೂರೋಪಿನ ಧಾರೆಯು ಎರಡು ಮಹಾಕಾವ್ಯಗಳಲ್ಲಿಯೂ ಭರತಖಂಡದ ಧಾರೆಯು ಎರಡು ಮಹಾಕಾವ್ಯಗಳಲ್ಲಿಯೂ ತಮ್ಮ ಭಾಷೆಯನ್ನೂ ಗಾನವನ್ನೂ ಸಂರಕ್ಷಿಸಿಕೊಂಡಿರುತ್ತವೆ.

ನಾವು ವಿದೇಶೀಯರು; ಆದಕಾರಣ ಗ್ರೀಸ್‌ದೇಶವು ತನ್ನ ಸ್ವರೂಪವನ್ನು ತನ್ನ ಎರಡು ಕಾವ್ಯಗಳಲ್ಲಿ ಸಂಪೂರ್ಣವಾಗಿ ಪ್ರಕಾಶಪಡಿಸಿರುವುದೋ ಇಲ್ಲವೋ ನಾವು ನಿಶ್ಚಿತವಾಗಿ ಹೇಳಲಾರೆವು. ಆದರೆ ಭರತಖಂಡವು ಮಾತ್ರ ತನ್ನ ಸ್ವರೂಪವನ್ನು ರಾಮಾಯಣ ಮಹಾಭಾರತಗಳಲ್ಲಿ ಸ್ವಲ್ಪವೂ ಬಿಡದಂತೆ ಪ್ರಕಾಶ ಪಡಿಸಿಕೊಂಡಿರುತ್ತದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಆದುದರಿಂದಲೇ ಶತಮಾನದ ಮೇಲೆ ಶತಮಾನವು ಕಳೆದುಹೋಗಿದ್ದರೂ ರಾಮಾಯಣ ಮಹಾಭಾರತಗಳ ಪ್ರವಾಹವು ನಮ್ಮ ದೇಶದಲ್ಲಿ ಇನ್ನೂ ಲೇಶವಾದರೂ ಶುಷ್ಕವಾಗಿಲ್ಲ. ಜನರು ಈಗಲೂ ನಿತ್ಯವೂ ಗ್ರಾಮ ಗ್ರಾಮದಲ್ಲಿಯೂ ಮನೆ ಮನೆಯಲ್ಲಿಯೂ ಅವನ್ನು ಓದುತ್ತಾ ಇದ್ದಾರೆ. ಅಂಗಡಿಯ ಮಳಿಗೆಯಿಂದ ಹಿಡಿದು ಅರಮನೆಯವರೆಗೆ ಎಲ್ಲಕಡೆಗಳಲ್ಲಿಯೂ ಅವಕ್ಕೆ ಸಮಾನವಾದ ಆದರವು ದೊರೆಯುತ್ತಿದೆ. ಆ ಮಹಾಕವಿಗಳಿಬ್ಬರೂ ಧನ್ಯರು. ಅವರ ಹೆಸರು ಕಾಲದ

ವಿಸ್ತಾರವಾದ ಪ್ರಾಂತರದಲ್ಲಿ ಕಣ್ಮರೆಯಾಗಿ ಹೋಗಿದೆ. ಆದರೆ ಅವರ ಆ ವಾಣಿಯು ಕೋಟ್ಯನುಕೋಟಿ ಸ್ತ್ರೀಪುರುಷರ ಮನೆಗಳ ಬಾಗಿಲುಗಳಲ್ಲಿ ಈಗಲೂ ಶಾಖೋಪಶಾಖೆಗಳಾಗಿ ಶಕ್ತಿ ಶಾಂತಿಗಳೊಡನೆ ಪ್ರವಹಿಸುತ್ತಿರುವುದು ; ಮತ್ತು ಕಳೆದುಹೋಗಿರುವ ನೂರಾರು ಶತಮಾನಗಳ ಗೋಡುಮಣ್ಣನ್ನು ಒಂದೇ ಸಮನಾಗಿ ಎತ್ತಿಕೊಂಡು ಬಂದು ಭರತಖಂಡದ ಮನೋಭೂಮಿಯನ್ನು ಸಾರವತ್ತಾಗಿ ಮಾಡಿಟ್ಟಿರುವುದು.

ಈ ಸ್ಥಿತಿಯಲ್ಲಿ ರಾಮಾಯಣ ಮಹಾಭಾರತಗಳು ಕೇವಲ ಮಹಾಕಾವ್ಯವೆಂದು ಹೇಳಿದರೆ ಸಾಲದು ; ಅವು ಇತಿಹಾಸವೂ ಆಗಿವೆ. ಆದರೆ ಅವು ಸಂಗತಿಗಳ ಇತಿಹಾಸವಲ್ಲ; ಏಕೆಂದರೆ ಅಂತಹ ಇತಿಹಾಸವು ಸಮಯವಿಶೇಷವನ್ನು ಅವಲಂಬಿಸುತ್ತದೆ. ರಾಮಾಯಣ ಮಹಾಭಾರತಗಳು ಭರತಖಂಡದ ಶಾಶ್ವತವಾದ ಇತಿಹಾಸಗಳು. ಮಿಕ್ಕ ಇತಿಹಾಸಗಳು ಕಾಲಕಾಲಕ್ಕೆ ಎಷ್ಟೋ ವ್ಯತ್ಯಸ್ತವಾಗುತ್ತವೆ; ಆದರೆ ಈ ಇತಿಹಾಸಕ್ಕೆ ಬದಲಾವಣೆಯೆಂಬುದೇ ಇಲ್ಲ. ಏಕೆಂದರೆ ಯಾವುದು ಭರತಖಂಡದ ಸಾಧನೆಯೋ, ಯಾವುದು ಅದರ ಆರಾಧನೆಯೋ, ಯಾವುದು ಆದರ ಸಂಕಲ್ಪವೋ, ಅದರ ಇತಿಹಾಸವು ಈ ಎರಡು ದೊಡ್ಡ ಕಾವ್ಯಸೌಧಗಳಲ್ಲಿ ಚಿರಕಾಲದ ಸಿಂಹಾಸನದ ಮೇಲೆ ವಿರಾಜಿಸುತ್ತದೆ.

ಆದಕಾರಣ, ರಾಮಾಯಣ ಮಹಾಭಾರತಗಳ ಸಮಾಲೋಚನೆಯು ಇತರ ಕಾವ್ಯಗಳ ಸಮಾಲೋಚನೆಯ ಆದರ್ಶದಿಂದ ಭಿನ್ನವಾದದ್ದು. ರಾಮನ ಚರಿತ್ರೆಯು ಉಚ್ಚವಾದದ್ದೇ, ನೀಚವಾದದ್ದೇ, ಲಕ್ಷ್ಮಣನ ಚರಿತ್ರೆಯನ್ನು ನಾವು ಒಪ್ಪುತ್ತೇವೆಯೇ, ಇಲ್ಲವೇ, ಎಂಬ ಸಮಾಲೋಚನೆಯನ್ನು ಮಾತ್ರವೇ ಮಾಡಿದರೆ ಸಾಲದು ; ಸಮಗ್ರಭರತಖಂಡವು ಸಾವಿರಾರು ವರ್ಷಗಳಿಂದಲೂ ಈ ಕಾವ್ಯಗಳನ್ನು ಹೇಗೆ ಗ್ರಹಿಸಿರುತ್ತದೆ ಎಂಬುದನ್ನು ನಾವು ಸ್ತಬ್ಧರಾಗಿಯೂ ಶ್ರದ್ಧಾಳುಗಳಾಗಿಯೂ ವಿಚಾರಮಾಡಬೇಕಾಗುತ್ತದೆ.

ರಾಮಾಯಣದಲ್ಲಿ ಭರತಖಂಡವು ಏನು ಹೇಳುತ್ತಿದೆ, ಯಾವ ಆದರ್ಶದ ಮಹತ್ವವನ್ನು ಸ್ವೀಕಾರಮಾಡಿರುತ್ತದೆ ಎಂಬುದೇ ನಾವು ಇಲ್ಲಿ ನಮ್ರಭಾವದಿಂದ ವಿಚಾರಮಾಡತಕ್ಕ ವಿಷಯ.

"ಎಪಿಕ್" (ಪುರಾಣಕಾವ್ಯ) ಎಂಬ ಹೆಸರು ಸಲ್ಲುವುದು ವೀರರಸಪ್ರಧಾನವಾದ ಕಾವ್ಯಕ್ಕೆ ಮಾತ್ರವೇ, ಎಂಬುದಾಗಿ ಸಾಧಾರಣವಾದ ಒಂದು ಅಭಿಪ್ರಾಯವಿದೆ. ಅದಕ್ಕೆ ಕಾರಣವಿಷ್ಟೇ—ಯಾವ ದೇಶದಲ್ಲಿ ಯಾವ ಕಾಲದಲ್ಲಿ ವೀರರಸದ ಗೌರವವು ಪ್ರಾಧಾನ್ಯವನ್ನು ಹೊಂದುತ್ತದೆಯೋ ಆ ದೇಶದಲ್ಲಿ ಆ ಕಾಲದಲ್ಲಿ

ಸ್ವಾಭಾವಿಕವಾಗಿ "ಎಪಿಕ್" ಕಾವ್ಯವು ವೀರರಸಪ್ರಧಾನವಾದುದಾಗಿ ಪರಿಣಮಿಸುತ್ತದೆ. ರಾಮಾಯಣದಲ್ಲಿ ಯುದ್ಧವ್ಯಾಪಾರವು ಯಥೇಷ್ಟವಾಗಿದೆ; ರಾಮನ ಬಾಹುಬಲವಾದರೂ ಸಾಮಾನ್ಯವಾದದ್ದಲ್ಲ. ಆದರೂ ರಾಮಾಯಣವು ಪ್ರಾಧಾನ್ಯವನ್ನು ಕೊಟ್ಟಿರುವುದು ವೀರರಸಕ್ಕಲ್ಲ; ಅದು ಹೊಗಳುವುದು ಬಾಹುಬಲದ ಮಹತ್ವವನ್ನಲ್ಲ; ಆದರ ಮುಖ್ಯವರ್ಣನೆಯ ವಿಷಯವು ಯುದ್ಧದ ಸಂಗತಿಯಲ್ಲ.

ದೇವರ ಅವತಾರಲೀಲೆಯನ್ನು ವರ್ಣಿಸುವುದಕ್ಕಾಗಿಯೇ ರಾಮಾಯಣವು ರಚಿತವಾದದ್ದು ಎಂಬ ಮತವು ಒಪ್ಪತಕ್ಕದ್ದಲ್ಲ. ವಾಲ್ಮೀಕಿಯ ದೃಷ್ಟಿಯಿಂದ ರಾಮನು ಅವತಾರಪುರುಷನಲ್ಲ, ಮನುಷ್ಯನೇ ಆಗಿದ್ದನು ಎಂಬುದನ್ನು ಪಂಡಿತರು ಪರೀಕ್ಷೆಮಾಡಿ ತಿಳಿದುಕೊಳ್ಳಬಹುದು. ಈ ಲೇಖನದಲ್ಲಿ ಪಾಂಡಿತ್ಯಕ್ಕೆ ಅವಕಾಶವಿಲ್ಲ; ಆದರೂ ಇಲ್ಲಿ ಇಷ್ಟನ್ನು ಮಾತ್ರ ಸಂಕ್ಷೇಪವಾಗಿ ಹೇಳುತ್ತೇನೆ:—ಕವಿಯು ರಾಮಾಯಣದಲ್ಲಿ ಮಾನವಚರಿತ್ರೆಯನ್ನು ವರ್ಣಿಸದೆ ದೇವಚರಿತ್ರೆಯನ್ನು ವರ್ಣಿಸುವ ಪಕ್ಷಕ್ಕೆ ಆದರಿಂದ ರಾಮಾಯಣದ ಗೌರವಕ್ಕೆ ಕುಂದಕವುಂಟಾಗುತ್ತದೆ, ಕಾವ್ಯದೃಷ್ಟಿಯಿಂದ ಅದಕ್ಕೆ ಬಾಧಕವುಂಟಾಗುತ್ತದೆ. ಏಕೆಂದರೆ, ಮಾನವಚರಿತ್ರೆಯಾದಕಾರಣವೇ ರಾಮಚರಿತ್ರೆಯು ಮಹಿಮಾನ್ವಿತವಾದದ್ದಾಗಿರುವುದು.

ಆದಿಕಾಂಡದ ಪ್ರಥಮಸರ್ಗದಲ್ಲಿ ವಾಲ್ಮೀಕಿಯು ತನ್ನ ಕಾವ್ಯಕ್ಕೆ ಉಪಯುಕ್ತನಾದ ನಾಯಕನನ್ನು ಹುಡುಕಿ ಅನೇಕ ಗುಣಗಳನ್ನು ಉಲ್ಲೇಖಮಾಡಿ ನಾರದನನ್ನು ಕುರಿತು,

"ಸಮಗ್ರಾ ರೂಪಿಣೀ ಲಕ್ಷ್ಮೀಃ ಕಮೇಕಂ ಸಂಶ್ರಿತಾ ನರಂ"

ಯಾವ ಏಕಮಾತ್ರ ಪುರುಷನನ್ನು ಆಶ್ರಯಿಸಿ ಸಮಗ್ರಲಕ್ಷ್ಮಿಯು ರೂಪವನ್ನು ತಾಳಿರುವಳು ? ಎಂದು ಕೇಳಿದಾಗ ನಾರದನು,

ದೇವೇಷ್ವಪಿ ನ ಪಶ್ಯಾಮಿ ಕಂಚಿದೇಭಿರ್ಗುಣೈರ್ಯುತಂ ।
ಶ್ರೂಯತಾಂ ತು ಗುಣೈರೇಭಿರ್ಯೋ ಯುಕ್ತೋ ನರಚಂದ್ರಮಾಃ ॥"

ಇಷ್ಟು ಗುಣಯುಕ್ತನಾದ ಪುರುಷನನ್ನು ದೇವತೆಗಳಲ್ಲಿ ಕೂಡ ನಾನು ನೋಡಲಿಲ್ಲ; ಯಾವ ನರಚಂದ್ರಮನಲ್ಲಿ ಈ ಸಕಲ ಗುಣಗಳೂ ಇರುವುವೋ ಆತನ ಕಥೆಯನ್ನು ಕೇಳು ಎಂಬುದಾಗಿ ಉತ್ತರಕೊಟ್ಟನು.

ರಾಮಾಯಣವು ಆ ನರಚಂದ್ರಮನ ಕಥೆಯೇ ಹೊರತು ದೇವತೆಯ ಕಥೆಯಲ್ಲ. ರಾಮಾಯಣದಲ್ಲಿ ದೇವನು ತನ್ನ ದೇವತ್ವವನ್ನು ಕುಗ್ಗಿಸಿಕೊಂಡು ಮನುಷ್ಯತ್ವಕ್ಕೆ ಇಳಿದಿಲ್ಲ. ಮನುಷ್ಯನು ತನ್ನ ಗುಣಗಳಿಂದ ದೇವತ್ವಕ್ಕೆ ಏರಿಹೋಗಿದ್ದಾನೆ.

ಭಾರತೀಯ ಕವಿಯು ಮಹಾಕಾವ್ಯವನ್ನು ರಚನೆಮಾಡಿದ್ದು ಮನುಷ್ಯನ ಉಚ್ಚತಮ ಆದರ್ಶವನ್ನು ಸ್ಥಾಪಿಸುವುದಕ್ಕಾಗಿಯೇ. ಮನುಷ್ಯನ ಆ ಆದರ್ಶಚರಿತ್ರ

ವರ್ಣನೆಯನ್ನೇ ಭಾರತೀಯರು ಅಂದಿನಿಂದ ಇಂದಿನವರೆಗೂ ಅತ್ಯಂತ ಉತ್ಸಾಹದಿಂದ ಓದುತ್ತಾ ಬಂದಿದ್ದಾರೆ.

ಸಂಸಾರದ ಕಥೆಗೆ ಅತ್ಯಂತ ಮಹತ್ವವನ್ನು ಕೊಟ್ಟಿರುವುದೇ ರಾಮಾಯಣದಲ್ಲಿರುವ ಮುಖ್ಯ ವಿಶೇಷತ್ವ. ತಂದೆಮಕ್ಕಳು, ಅಣ್ಣತಮ್ಮಂದಿರು, ಗಂಡಹೆಂಡಿರು ಇವರಿಗಿರುವ ಧರ್ಮದ ಬಂಧನಕ್ಕೂ ಪ್ರೇಮಮೂಲವಾದ ಸಂಬಂಧಕ್ಕೂ ರಾಮಾಯಣವು ಎಷ್ಟು ಮಹತ್ವವನ್ನು ಕೊಟ್ಟಿರುವುದೆಂದರೆ—ಸಂಸಾರದ ಚರಿತ್ರೆಯು ಅತಿಸಹಜವಾಗಿ ಮಹಾಕಾವ್ಯಕ್ಕೆ ಉಪಯುಕ್ತವಾಗಿದೆ. ದೇಶಜಯ, ಶತ್ರುವಿನಾಶ ಪ್ರಬಲವಾದ ಎರಡು ಶತ್ರುಪಕ್ಷಗಳ ಪ್ರಚಂಡವಾದ ಹೋರಾಟ—ಈ ಸಮಸ್ತ ವ್ಯಾಪಾರವೂ ಸಾಧಾರಣವಾಗಿ ಮಹಾಕಾವ್ಯಗಳಲ್ಲಿ ಆಂದೋಲನವನ್ನೂ ಉದ್ದೀಪನದ ಸಂಚಾರವನ್ನೂ ಉಂಟುಮಾಡುತ್ತವೆ. ಆದರೆ ರಾಮಾಯಣದ ಮಹಿಮೆಯು ರಾಮ ರಾವಣರ ಯುದ್ಧವನ್ನು ಆಶ್ರಯಿಸಿಲ್ಲ; ಆ ಯುದ್ಧದ ಸಂಗತಿಯು ರಾಮ ಸೀತೆಯರ ದಾಂಪತ್ಯಪ್ರೀತಿಯನ್ನು ಉಜ್ಜ್ವಲಮಾಡಿ ತೋರಿಸತಕ್ಕ ಉಪಲಕ್ಷ್ಯ ಮಾತ್ರವಾಗಿದೆ. ತಂದೆಯಲ್ಲಿ ಮಗನಿಗಿರುವ ವಿಧೇಯತೆ, ಅಣ್ಣನಿಗಾಗಿ ತಮ್ಮನ ಸ್ವಾರ್ಥತ್ಯಾಗ, ಗಂಡಹೆಂಡಿರಿಗೆ ಒಬ್ಬರಿಗೊಬ್ಬರಲ್ಲಿರುವ ನಿಷ್ಠೆ, ಮತ್ತು ಪ್ರಜೆಗಳ ವಿಷಯದಲ್ಲಿ ರಾಜನ ಕರ್ತವ್ಯ ಇವುಗಳು ಎಷ್ಟುದೂರ ಹೋಗಬಲ್ಲುವೆಂಬುದನ್ನು ರಾಮಾಯಣವು ತೋರಿಸಿರುತ್ತದೆ. ವ್ಯಕ್ತಿವಿಶೇಷದ, ಮುಖ್ಯವಾಗಿ ಸಂಸಾರದ, ಸಂಬಂಧಗಳು ಈರೀತಿಯಾಗಿ ವರ್ಣನೀಯ ವಿಷಯಗಳೆಂದು ಮತ್ತಾವ ದೇಶದ ಮಹಾಕಾವ್ಯದಲ್ಲಿಯೂ ಪರಿಗಣಿತವಾಗಿಲ್ಲ.

ಈ ಕಾವ್ಯದಿಂದ ನಮಗೆ ಆಗುವುದು ಕವಿಯ ಪರಿಚಯವು ಮಾತ್ರವಲ್ಲ; ಸಮಗ್ರ ಭರತಖಂಡದ ಪರಿಚಯವೂ ಆಗುತ್ತದೆ. ಗೃಹಕ್ಕೂ ಗೃಹಧರ್ಮಕ್ಕೂ ಭರತಖಂಡವು ಎಷ್ಟರಮಟ್ಟಿನ ಪ್ರಾಶಸ್ತ್ಯವನ್ನು ಕೊಟ್ಟಿದೆ ಎಂಬುದನ್ನು ಈ ಕಾವ್ಯದಿಂದ ತಿಳಿಯಬಹುದು. ನಮ್ಮ ದೇಶದಲ್ಲಿ ಗೃಹಸ್ಥಾಶ್ರಮಕ್ಕೆ ಅತ್ಯಂತ ಉನ್ನತಸ್ಥಾನವು ದೊರೆತಿದೆ ಎಂಬುದಕ್ಕೆ ಈ ಕಾವ್ಯವು ಪ್ರಮಾಣವಾಗಿದೆ. ಗೃಹಸ್ಥಾಶ್ರಮವಿರುವುದು ನಮ್ಮ ಸ್ವಂತಸುಖಕ್ಕೋಸ್ಕರ ಅಥವಾ ಅನುಕೂಲ್ಯಕ್ಕೋಸ್ಕರವಲ್ಲ. ಅದು ಸಮಸ್ತ ಸಮಾಜವನ್ನೂ ನಿಲ್ಲಿಸಿರುತ್ತದೆ. ಅಷ್ಟೇ ಅಲ್ಲ, ಮನುಷ್ಯನನ್ನು ಯಥಾರ್ಥವಾಗಿ ಮನುಷ್ಯನನ್ನಾಗಿ ಮಾಡಿದೆ. ಗೃಹಸ್ಥಾಶ್ರಮವೇ ಭರತಖಂಡದ ಆರ್ಯಸಮಾಜದ ತಳಹದಿ. ರಾಮಾಯಣವು ಆ ಗೃಹಸ್ಥಾಶ್ರಮದ ಕಾವ್ಯ. ಆ ಗೃಹಸ್ಥಾಶ್ರಮಧರ್ಮವನ್ನೇ ರಾಮಾಯಣವು ವಿಷಮಾವಸ್ಥೆಗೆ ಗುರಿಪಡಿಸಿ ವನವಾಸದುಃಖದ ಮೂಲಕ ಅದಕ್ಕೆ ವಿಶೇಷ ಗೌರವವನ್ನುಂಟುಮಾಡಿರುತ್ತದೆ. ಕೈಕೆ ಮಂಥರೆಯರ ಪಿತೂರಿಯ ಕಠಿನವಾದ ಆಘಾತದಿಂದ ಅಯೋ

ಧ್ಯೆಯ ರಾಜಗೃಹವನ್ನು ಭಗ್ನಮಾಡಿ, ಅದರ ಆಧಾರದಿಂದಲೇ ಗೃಹಸ್ಥಧರ್ಮದ ದುರ್ಭೇದ್ಯವಾದ ದೃಢತೆಯನ್ನು ರಾಮಾಯಣವು ಘೋಷಿಸಿರುತ್ತದೆ. ಬಾಹುಬಲ, ಶತ್ರುಜಯ, ರಾಷ್ಟ್ರಗೌರವಗಳಿಗೆ ರಾಮಾಯಣವು ಮಹತ್ವವನ್ನು ಕೊಟ್ಟಿಲ್ಲ; ಶಾಂತರಸಾಸ್ಪದವಾದ ಗೃಹಸ್ಥಧರ್ಮಕ್ಕೆ ಕರುಣೆಯ ಕಣ್ಣೀರಿನಿಂದ ಅಭಿಷೇಕ ಮಾಡಿ ಅದನ್ನು ಮಹತ್ತಾದ ಪೀಠದಮೇಲೆ ಪ್ರತಿಷ್ಠಿಸಿರುವುದು.

ಇಂತಹ ಸಂದರ್ಭದಲ್ಲಿ ಚರಿತ್ರವರ್ಣನೆಯು ಅತಿಶಯೋಕ್ತಿಯಿಂದ ತುಂಬಿ ಹೋಗುತ್ತದೆ ಎಂದು ಶ್ರದ್ಧಾಹೀನರಾದ ಪಾಠಕರು ಹೇಳಬಹುದು. ಆದರೆ ಯಥಾರ್ಥದ ಮೇರೆಯಾವುದು, ಕಲ್ಪನೆಯು ಯಾವ ಸರಹದ್ದನ್ನು ಮೀರಿದರೆ ಕಾವ್ಯಕಲೆಯು ಅತಿಶಯೋಕ್ತಿಗೆ ಹೋಗುತ್ತದೆ, ಎಂಬುದರ ಮೀಮಾಂಸೆಯು ಒಂದು ಮಾತಿನಲ್ಲಿ ಮುಗಿಯತಕ್ಕದ್ದಲ್ಲ. ರಾಮಾಯಣದಲ್ಲಿ ಚರಿತ್ರವರ್ಣನೆಯು ಅಸ್ವಾಭಾವಿಕವಾಗಿದೆಯೆಂದು ಹೇಳುವ ವಿದೇಶೀಯ ಸಮಾಲೋಚಕರಿಗೆ ನಾವು ಹೀಗೆ ಉತ್ತರಕೊಡುತ್ತೇವೆ—"ಪ್ರಕೃತಿಭೇದದಿಂದ ಒಬ್ಬರಿಗೆ ಅಸ್ವಾಭಾವಿಕವಾದದ್ದು ಮತ್ತೊಬ್ಬರಿಗೆ ಸ್ವಾಭಾವಿಕವಾಗಿರುತ್ತದೆ. ಭರತಖಂಡದ ಜನರು ರಾಮಾಯಣದಲ್ಲಿ ಅಸ್ವಾಭಾವಿಕತೆಯ ಅತಿಶಯವನ್ನು ಕಂಡಿಲ್ಲ."

ಒಂದು ಸ್ಥಳದಲ್ಲಿ ಪ್ರಚಾರದಲ್ಲಿರುವ ಆದರ್ಶವನ್ನು ವಿಶೇಷವಾಗಿ ಕೈಬಿಟ್ಟುಬಿಟ್ಟರೆ ಆ ಸ್ಥಳದ ಜನರಿಗೆ ಅದು ಗ್ರಾಹ್ಯವೇ ಆಗುವುದಿಲ್ಲ. ನಮ್ಮ ಶ್ರುತಿಯಂತ್ರದಲ್ಲಿ ನಾವು ಎಷ್ಟು ಶಬ್ದತರಂಗಗಳ ಆಘಾತವನ್ನು ಹೊಂದಬಲ್ಲೆವೆಂಬುದಕ್ಕೆ ಮಿತಿ ಇದೆ; ಆ ಮೇರೆಯಿಂದ ಮೇಲಿನ ಏಳನೆಯ ಸ್ವರವನ್ನು ಬಾಜಿಸಿದರೆ ನಮ್ಮ ಕಿವಿಯು ಅದನ್ನು ಗ್ರಹಿಸುವುದಿಲ್ಲ. ಕಾವ್ಯದಲ್ಲಿ ಚರಿತ್ರೆಯ ಮತ್ತು ಭಾವೋದ್ರೇಕದ ಸಂಬಂಧಕ್ಕೂ ಈ ಮಾತು ಅನ್ವಯಿಸುತ್ತದೆ.

ಈ ಮಾತನ್ನು ಒಪ್ಪುವುದಾದರೆ ಭಾರತೀಯರ ದೃಷ್ಟಿಯಿಂದ ರಾಮಾಯಣವು ಯಾವ ಅಂಶದಲ್ಲಿಯೂ ಮಿತಿಮೀರಿಲ್ಲವೆಂಬುದಕ್ಕೆ ಸಾವಿರಾರು ವರುಷಗಳು ಪ್ರಮಾಣವಾಗಿವೆ. ಈ ರಾಮಾಯಣ ಕಥೆಯಿಂದ ಭರತಖಂಡದ ಆಬಾಲವೃದ್ಧವನಿತೆಯರೂ ಆಪಾಮರಸಾಧಾರಣರೂ ಶಿಕ್ಷಾಲಾಭವನ್ನು ಪಡೆಯುತ್ತಿರುವುದು ಮಾತ್ರವೇ ಅಲ್ಲ, ಆನಂದಾನುಭವವನ್ನೂ ಮಾಡುತ್ತಿದ್ದಾರೆ; ಅದನ್ನು ಶಿರಸಾಧರಿಸಿರುವುದು ಮಾತ್ರವೇ ಅಲ್ಲ, ತಮ್ಮ ಹೃದಯದಲ್ಲಿಯೂ ಅದಕ್ಕೆ ಸ್ಥಾನವನ್ನು ಕೊಟ್ಟಿದ್ದಾರೆ: ಅದು ಅವರ ಧರ್ಮಶಾಸ್ತ್ರವಾಗಿರುವುದು ಮಾತ್ರವೇ ಅಲ್ಲ, ಅವರ ಕಾವ್ಯವೂ ಆಗಿದೆ.

ಈ ಮಹಾಗ್ರಂಥದ ಕವಿತ್ವವು ಭರತಖಂಡದವರಿಗೆ ದೂರದಲ್ಲಿರುವ ಒಂದು ಕಲ್ಪನಾಪ್ರಪಂಚದ ಸಾಮಗ್ರಿಯಾಗಿದ್ದುಬಿಟ್ಟು ನಮ್ಮ ಈ ಜಗತ್ತಿನ ಎಲ್ಲೆಗೆ ಸೇರದೆಯೇ ಹೋಗಿದ್ದ ಪಕ್ಷದಲ್ಲಿ ರಾಮನು ಏಕಕಾಲದಲ್ಲಿ ನಮ್ಮ ಪಕ್ಷಕ್ಕೆ ದೇವತೆಯೂ ಮನುಷ್ಯನೂ ಆಗುವುದೂ, ರಾಮಾಯಣವು ಏಕಕಾಲದಲ್ಲಿ ನಮ್ಮ ಭಕ್ತಿಯನ್ನೂ ಪ್ರೀತಿಯನ್ನೂ ಹೊಂದುವುದೂ ಎಂದಿಗೂ ಸಂಭವವಾಗುತ್ತಿರಲಿಲ್ಲ.

ವಿದೇಶೀಯ ಸಮಾಲೋಚಕರು ತಮ್ಮ ಕಾವ್ಯವಿಚಾರದ ಆದರ್ಶಾನುಸಾರ ವಾಗಿ ಇಂತಹ ಗ್ರಂಥವನ್ನು ಅಸ್ವಾಭಾವಿಕವಾದದ್ದೆಂದು ಕರೆಯುವ ಪಕ್ಷದಲ್ಲಿ ಅವರ ದೇಶಕ್ಕೂ ಭರತಖಂಡಕ್ಕೂ ಇರುವ ವ್ಯತ್ಯಾಸವು ಸ್ಫುಟವಾಗಿ ಕಾಣುತ್ತದೆ. ಭರತಖಂಡವು ತನಗೆ ಅಪೇಕ್ಷಣೀಯವಾದುದನ್ನು ರಾಮಾಯಣದಲ್ಲಿ ಪಡೆ ದಿರುತ್ತದೆ.

ರಾಮಾಯಣ ಮಹಾಭಾರತಗಳನ್ನು ನಾನು ವಿಶೇಷವಾಗಿ ಈ ಭಾವದಿಂದ ನೋಡುತ್ತೇನೆ. ಇವುಗಳ ಸರಳವಾದ ಅನುಷ್ಟುಪ್ ಛಂದಸ್ಸಿನಿಂದ ಭರತಖಂಡದ ಹೃದಯವು ಸಾವಿರಾರು ವರ್ಷಗಳಿಂದಲೂ ಸ್ಪಂದಿತವಾಗುತ್ತಾ ಬಂದಿರುತ್ತದೆ.

ಶ್ರೀಯುಕ್ತ ದಿನೇಶಚಂದ್ರ ಮಹಾಶಯನು ತನ್ನ "ರಾಮಾಯಣ ಚರಿತ್ರ ಸಮಾಲೋಚನೆ" ಗೆ ಒಂದು ಪೀಠಿಕೆಯನ್ನು ಬರೆದುಕೊಡಬೇಕೆಂದು ಬಲಾತ್ಕಾರ ಮಾಡಿದಾಗ ನನಗೆ ಅಸ್ವಸ್ಥವಾಗಿದ್ದರೂ ಅವಕಾಶವಿಲ್ಲದೇ ಇದ್ದರೂ ಆತನ ಮಾತನ್ನು ತೆಗೆದುಹಾಕುವುದಕ್ಕೆ ನನ್ನಿಂದ ಆಗಲಿಲ್ಲ.

ಕವಿಯ ಕಥೆಯನ್ನು ಭಕ್ತನ ಭಾಷೆಯಲ್ಲಿ ಆವೃತ್ತಿಮಾಡಿ ಆತನು ತನ್ನ ಭಕ್ತಿಯ ಚರಿತಾರ್ಥವನ್ನು ಸಾಧಿಸಿರುತ್ತಾನೆ. ಪೂಜೆಯ ಆವೇಗದಿಂದ ಮಿಶ್ರಿತ ವಾದ ಈತೆರದ ವ್ಯಾಖ್ಯಾನವೇ ನಮ್ಮ ಮತದ ಪ್ರಕಾರ ಸರಿಯಾದ ಸಮಾಲೋ ಚನೆ—ಈ ಉಪಾಯದಿಂದಲೇ ಒಂದು ಹೃದಯದ ಭಕ್ತಿಯು ಮತ್ತೊಂದು ಹೃದ ಯದಲ್ಲಿ ಸಂಚಾರಿತವಾಗುವುದು. ಆದರೆ ಈಗಿನಕಾಲದ ಸಮಾಲೋಚನೆಯು ಬಜಾರಿನ ದರವನ್ನು ಪ್ರಮಾಣವಾಗಿಟ್ಟುಕೊಂಡಿರುತ್ತದೆ. ಏಕೆಂದರೆ, ಈಗ ಸಾಹಿ ತ್ಯವು ಸಂತೆಯ ದಿನಸು. ತಾವು ಹಿಂದೆ ಬೀಳಬಹುದು ಎಂದು ಎಲ್ಲರೂ ಜಾಣನಾದ ದಳ್ಳಾಳಿಯ ಆಶ್ರಯವನ್ನು ಪಡೆಯಲು ಆತುರಪಡುತ್ತಾರೆ. ಇಂಥ ದಳ್ಳಾಳಿ ಕೆಲ ಸದಿಂದ ಉಪಯೋಗವೇನೋ ಬೇಕಾದಷ್ಟು ಇದೆ. ಆದರೂ ಯಥಾರ್ಥ ಸಮಾ ಲೋಚನೆಯು ಪೂಜೆ; ಸಮಾಲೋಚಕನು ಪೂಜಾರಿ, ಪುರೋಹಿತ; ಭಕ್ತಿಯಿಂದ ಹೊರಸೂಸುವ ವಿಸ್ಮಯವನ್ನು ವ್ಯಕ್ತಮಾಡುವುದು ಮಾತ್ರವೇ ಆತನ ಕರ್ತವ್ಯ-- ಎಂದು ನಾವು ಹೇಳುತ್ತೇವೆ.

ಭಕ್ತನಾದ ದಿನೇಶಚಂದ್ರನು ಆ ಪೂಜಾಮಂದಿರದ ಪ್ರಾಂಗಣದಲ್ಲಿ ನಿಂತು ಕೊಂಡು ಮಂಗಳಾರತಿಗೆ ಆರಂಭಿಸಿರುತ್ತಾನೆ. ಗಂಟೆಯನ್ನು ಬಾರಿಸುವ ಭಾರ ವನ್ನು ಆತನು ಹಠಾತ್ತಾಗಿ ನನಗೆ ವಹಿಸಿರುವನು. ಒಂದು ಪಕ್ಕದಲ್ಲಿ ನಿಂತು ನಾನು ಆ ಕೆಲಸವನ್ನು ಮಾಡುತ್ತಿದ್ದೇನೆ. ಹೆಚ್ಚು ಆಡಂಬರಮಾಡಿ ಆತನ ಪೂಜೆ ಯನ್ನು ಮರೆಮಾಡಲು ನನಗೆ ಇಷ್ಟವಿಲ್ಲ. ಆದರೂ ಇದೊಂದುಮಾತನ್ನು ಮಾತ್ರ ತಿಳಿಸಬೇಕೆಂದು ನನಗೆ ಅಪೇಕ್ಷೆಯಿದೆ. ಏನೆಂದರೆ ವಾಲ್ಮೀಕಿಯು ರಾಮಚರಿತ ಕಥೆ ಯನ್ನು ಪಾಠಕರು ಒಬ್ಬ ಕವಿಯ ಕಾವ್ಯವೆಂದು ತಿಳಿಯಬಾರದು, ಅದನ್ನು ಸಮಗ್ರ ಭರತಖಂಡದ್ದೆಂದು ತಿಳಿದುಕೊಳ್ಳಬೇಕು. ಹಾಗೆ ಮಾಡಿದರೆ ರಾಮಾಯ ಣದ ಮೂಲಕ ಭರತಖಂಡವನ್ನೂ, ಭರತಖಂಡದ ಮೂಲಕ ರಾಮಾಯಣವನ್ನೂ ಯಥಾರ್ಥವಾಗಿ ತಿಳಿಯಬಲ್ಲವರಾಗುತ್ತೇವೆ. ಜ್ಞಾಪಕದಲ್ಲಿಟ್ಟುಕೊಳ್ಳಬೇಕಾದ

ಮತ್ತೊಂದು ಅಂಶವಿದೆ. ಅದು ಯಾವುದೆಂದರೆ, ಭರತಖಂಡವು ಕೇಳಬೇಕೆಂದು ಇಷ್ಟಪಟ್ಟದ್ದು ಐತಿಹಾಸಿಕ ಗೌರವದ ಕಥೆಯನ್ನಲ್ಲ, ಪೂರ್ಣ ಮಾನವನ ಆದರ್ಶವನ್ನು. ಅದನ್ನು ಭರತಖಂಡವು ಇಂದಿನವರೆಗೂ ಅವಿಶ್ರಾಂತವಾದ ಆನಂದದಿಂದ ಕೇಳುತ್ತಾ ಬಂದಿದೆ. ಈ ಕಾವ್ಯವು ಅತಿಶಯೋಕ್ತಿಯೆಂದಾಗಲಿ ಇದೊಂದು ಕಾವ್ಯ ಕಥೆ ಮಾತ್ರವೆಂದಾಗಲಿ ನಾವು ಹೇಳಿಲ್ಲ. ಭಾರತೀಯರಿಗೆ ರಾಮ ಲಕ್ಷ್ಮಣ ಸೀತೆಯರು ಎಷ್ಟು ಸತ್ಯವೋ ಮನೆಯ ಜನಗಳೂ ಕೂಡ ಅಷ್ಟು ಸತ್ಯವಲ್ಲ.

ಭಾರತೀಯರಿಗೆ ಪರಿಪೂರ್ಣತೆಯ ಮೇಲೆ ಒಂದು ದುರ್ದಮನೀಯವಾದ ಅಪೇಕ್ಷೆಯಿದೆ. ವಾಸ್ತವಸತ್ಯಕ್ಕೆ ಅತೀತವಾದುದೆಂದು ಅದನ್ನು ಅವರು ತಿರಸ್ಕಾರ ಮಾಡುವುದಿಲ್ಲ, ಅವಿಶ್ವಾಸ ಮಾಡುವುದೂ ಇಲ್ಲ. ಅದನ್ನು ಅವರು ಯಥಾರ್ಥ ಸತ್ಯವೆಂದೇ ಭಾವಿಸಿರುತ್ತಾರೆ. ಆದರಿಂದಲೇ ಆನಂದವನ್ನೂ ಹೊಂದಿರುತ್ತಾರೆ. ಆ ಪರಿಪೂರ್ಣತೆಯ ಆಕಾಂಕ್ಷೆಯನ್ನೇ ಉದ್ಬೋಧಗೊಳಿಸಿ ಅದನ್ನು ತೃಪ್ತಿಪಡಿಸಿ ರಾಮಾಯಣದ ಕವಿಯು ಭರತಖಂಡದ ಭಕ್ತಹೃದಯವನ್ನು ಚಿರಕಾಲ ಕೊಂಡು ಕೊಂಡುಬಿಟ್ಟಿದ್ದಾನೆ.

ಯಾವ ಜನಾಂಗದವರು ಖಂಡಸತ್ಯಕ್ಕೆ ಪ್ರಾಧಾನ್ಯವನ್ನು ಕೊಡುವರೋ, ಯಾರು ವಾಸ್ತವಸತ್ಯವನ್ನು ಅನುಸರಿಸುವುದರಲ್ಲಿ ಬಳಲಿಕೆಯನ್ನು ಅನುಭವಿಸುವುದಿಲ್ಲವೋ, ಯಾರು ಕಾವ್ಯವನ್ನು ಪ್ರಕೃತಿಯ ದರ್ಪಣಮಾತ್ರವೆಂದು ಹೇಳುತ್ತಾರೆಯೋ ಅವರು ಜಗತ್ತಿನಲ್ಲಿ ಅನೇಕ ಕಾರ್ಯಗಳನ್ನು ಸಾಧಿಸಿ ವಿಶೇಷವಾಗಿ ಧನ್ಯರಾಗಿರುತ್ತಾರೆ; ಮಾನವಜಾತಿಯು ಅವರಿಗೆ ಋಣಿಯಾಗಿದೆ. ಮತ್ತೊಂದು ಕಡೆ, ಯಾರು "ಭೂಮೈವ ಸುಖಂ ಭೂಮತ್ವೇನೈವ ವಿಜಿಜ್ಞಾಸಿತವ್ಯಃ" ಎಂದು ಹೇಳಿರುವರೋ, ಯಾರು ಪರಿಪೂರ್ಣ ಪರಿಣಾಮದಲ್ಲಿ ಸಮಸ್ತ ಖಂಡತೆಯ ಸುಷಮೆಯನ್ನೂ ಸಮಸ್ತವಿರೋಧದ ಶಾನ್ತಿಯನ್ನೂ ಪಡೆಯುವುದಕ್ಕಾಗಿ ಸಾಧನಮಾಡಿರುವರೋ ಅವರ ಋಣವಾದರೂ ಯಾವಕಾಲದಲ್ಲಿಯೇ ಆಗಲಿ ತೀರಿಸುವುದಕ್ಕೇ ಸಾಧ್ಯವಾದದ್ದಲ್ಲ. ಅವರ ಪರಿಚಯವು ಲುಪ್ತವಾಗಿಹೋದರೆ, ಅವರ ಉಪದೇಶವು ಮರೆತುಹೋದರೆ ಮಾನವಸಭ್ಯತೆಯು ಧೂಳಿಧೂಮಸಮಾಕೀರ್ಣವಾದ ಕಾರ್ಖಾನೆಯ ಜನತೆಯಲ್ಲಿ ನಿಶ್ವಾಸಕಲುಷಿತವಾಗಿ ಉಸಿರುಕಟ್ಟುವ ವಾತಾವರಣದಲ್ಲಿ ಕ್ಷಣಕ್ಷಣವೂ ಪೀಡಿತವಾಗಿ ಕೃಶವಾಗಿ ಸಾಯುತ್ತಾ ಬಿದ್ದಿರಬೇಕಾಗುತ್ತದೆ. ರಾಮಾಯಣವು ಅಖಂಡ ಅಮೃತಪಿಪಾಸುಗಳ ಚಿರ ಪರಿಚಯವನ್ನು ವಹಿಸಿರುತ್ತದೆ. ಇದರಲ್ಲಿ ವರ್ಣಿತವಾಗಿರುವ ಸೌಭ್ರಾತ್ರ, ಸತ್ಯಪರತೆ, ಪಾತಿವ್ರತ್ಯ, ಪ್ರಭುಭಕ್ತಿಗಳಲ್ಲಿ ಸರಳವಾದ ಶ್ರದ್ಧೆಯನ್ನೂ, ಆಂತರಿಕವಾದ ಭಕ್ತಿಯನ್ನೂ ನಾವು ಕಾಪಾಡಿಕೊಳ್ಳಬಲ್ಲೆವಾದರೆ ನಮ್ಮ ಕಾರ್ಖಾನೆಯ ವಾತಾವರಣದಲ್ಲಿ ಮಹಾಸಮುದ್ರದ ನಿರ್ಮಲವಾಯುವು ಪ್ರವೇಶಿಸುವುದಕ್ಕೆ ದಾರಿಯಾಗುತ್ತದೆ.

---

# "ಭವತಿ ಭಿಕ್ಷಾಂ ದೇಹಿ"

"ಭವತಿ ಭಿಕ್ಷಾಂ ದೇಹಿ!"......

"ಭಿಕ್ಷಾನ್ನ, ತಾಯಿ!"

"ಮುಂದಕ್ಕೆ ಹೋಗಿಬಿಟ್ಟು ಬಾಪ್ಪ!"

(ಬಹು ಸಂಕೋಚದಿಂದಲೂ ದೀನಸ್ವರದಿಂದಲೂ)

"ಇವತ್ತು ಎಲ್ಲಿಯೂ ಸಿಕ್ಕಲಿಲ್ಲ, ತಾಯಿ!"

ಭಿಕ್ಷಾನ್ನಕ್ಕೆ ಬಂದಿದ್ದ ಹುಡುಗನ ಹೆಸರು ಮಾಧು. (ಸ್ಕೂಲಿನಲ್ಲಿ 'ಮಾಧವ ರಾವ್' ಎಂದು ಇರಬಹುದು). 'ಹೋಗಿಬಿಟ್ಟು ಬಾ' ಎಂದು ಹೇಳಿದವರು ನಾಗೇಶರಾಯರ ಹೆಂಡತಿ ಶಾರದಾಬಾಯಿ; ಇದುವರೆಗೆ ಅವರು ಮಾಧುವನ್ನು ಎಂದೂ ಭಿಕ್ಷಾನ್ನಹಾಕದೆ ಕಳುಹಿಸಿರಲಿಲ್ಲ; ಆದರೆ ಇಂದು ಊಟವಾಗಿ ಎಲ್ಲ ಮುಗಿದುಹೋಗಿತ್ತು; ಅವನೂ ಇದುವರೆಗೆ ಎಂದೂ ಎರಡನೆಯಸಾರಿ ಕೇಳಿದ್ದಿಲ್ಲ; ಆದ್ದರಿಂದ ಅವನು ಇವತ್ತು ಸಂಕೋಚದಿಂದ "ಎಲ್ಲಿಯೂ ಸಿಕ್ಕಲಿಲ್ಲ" ವೆಂದು ಹೇಳಿದ ಕೂಡಲೆ ಅವರ ಗಮನವು ಆಕಡೆ ಹೋಯಿತು. ಅನಂತರ, "ಮಧ್ಯಾಹ್ನದ ಅನ್ನ ಸ್ವಲ್ಪ ಮಿಕ್ಕಿದೆಯೇನೋ ಹಾಕಲೇ ಅಪ್ಪ?" ಎಂದು ಕೇಳಿದರು.

"ಹಾಕಿ ಅಮ್ಮ"

"ಸ್ವಲ್ಪ ಮೆತ್ತಗಿದೆಯೆಂತ ಕಾಣುತ್ತದೆಯಲ್ಲ, ಇರಲೇ? ಹಳಸಿದ ಅನ್ನ ಹಾಕಿದರೆಂದುಕೊಳ್ಳಬೇಡ; ತಿನ್ನುವುದಕ್ಕೆ ಬರುವ ಹಾಗಿದ್ದರೆ ತಿನ್ನು; ಆಗದಿದ್ದರೆ ಬಿಸಾಟುಬಿಡು."

"ಹಾಕಿ ಅಮ್ಮ; ಭಿಕ್ಷಾನ್ನದ ಹುಡುಗರು ಅದೆಲ್ಲಾ ನೋಡುವುದಕ್ಕಾಗುತ್ತದೆಯೇ? ನನಗೆ ಎಲ್ಲಾ ಅಭ್ಯಾಸವಾಗಿದೆ; ಅದು ಉಪವಾಸಕ್ಕಿಂತ ಕಡೆಯೆ ತಾಯಿ!"

"ಉಪವಾಸ ಏಕಪ್ಪ!"

ಹೀಗೆಂದು ಹೇಳಿ ಶಾರದಮ್ಮನವರು ಮಿಕ್ಕಿದ್ದ ಮಧ್ಯಾಹ್ನದ ಅನ್ನವನ್ನೆಲ್ಲಾ ಹಾಕಿ ಕಳುಹಿಸಿದರು. ಈ ಮಾತುಗಳನ್ನು ಕೇಳಿ ಓಡಿಬಂದು ಅವರ ಮಗಳು—ಆರೇಳುವರ್ಷದ ಹುಡುಗಿ—ಸೀತೆ, ಹುಡುಗ ಹೊರಟುಹೋದಮೇಲೆ,

"ಹಳಸಿದ ಅನ್ನ ಹ್ಯಾಗೆ ತಿಂತಾನೇ ಅಮ್ಮಾ? ಅಸಹ್ಯ ಆಗುವದಿಲ್ಲ ವೇನೇ?" ಎಂದು ಕೇಳಿದಳು.

"ಹಳಸಿರಲಿಲ್ಲ ಕಣೆ! ಎಲ್ಲೊ ಸ್ವಲ್ಪ ಮೆತ್ತಗಿತ್ತು ಅಷ್ಟೆ" ಎಂದು ಶಾರದಮ್ಮನವರು ಉತ್ತರಕೊಟ್ಟರು. ಆದರೆ ಆ ಹುಡುಗನ ಮಾತುಗಳನ್ನೂ ಅವನ ದೈನ್ಯವನ್ನೂ ನೋಡಿ ಅವನ ಪೂರ್ವೋತ್ತರಗಳನ್ನೆಲ್ಲಾ ತಿಳಿದುಕೊಳ್ಳಬೇಕೆಂದು ಕುತೂಹಲ ಹುಟ್ಟಿತು; ನಾಗೇಶರಾಯರೂ ಆಗಬಹುದೆಂದೂ, ತುಂಬ ಕಷ್ಟಪಡುತ್ತಿದ್ದರೆ ಏನಾದರೂ ಸಹಾಯ ಮಾಡಬಹುದೆಂದೂ ಒಪ್ಪಿಕೊಂಡರು.

ಗಂಡಹೆಂಡರಿಬ್ಬರಿಗೂ ಹೀಗೆ ಒಂದೇ ವಿಧವಾದ ಮನಸ್ಸೂ ಕನಿಕರವೂ ಧಾರಾಳಬುದ್ಧಿಯೂ ಇರುವುದು ಅಪರೂಪ; ಸಾಮಾನ್ಯವಾಗಿ ವಿದ್ಯಾವಂತನಿಗೆ ಮೂಢೆಯೂ, ಸಾತ್ವಿಕನಿಗೆ ರಾಕ್ಷಸಿಯೂ, ಧಾರಾಳಿಗೆ ಜಿಪುಣೆಯೂ ಹೆಂಡತಿಯಾಗುವುದೇ ಹೆಚ್ಚು; ಹಾಗಲ್ಲದೆ ಅನುರೂಪಳಾದ ಹೆಂಡತಿ ಇದ್ದುದ್ದರಿಂದ ನಾಗೇಶರಾಯರ ಸಂಸಾರವು ಅಮೃತಮಯವಾಗಿತ್ತು; ಅವರು ತಮ್ಮ ಸಂಸಾರವನ್ನು ಕ್ಷೀರಸಾಗರವೆಂದೂ ತಮ್ಮ ಹೆಂಡತಿಯು ಅದರಲ್ಲಿ ಹುಟ್ಟಿದ ಲಕ್ಷ್ಮಿಯೆಂದೂ ಇನ್ನೂ ಏನೇನೋ ಹೇಳಿಕೊಳ್ಳುವರು.

ಮರುದಿನ ಮಾಧು ಬಂದಾಗ ಅವನ ಕಥೆಯೆಲ್ಲಾ ತಿಳಿಯಿತು; ಬಹು ಕಷ್ಟದ ಕಥೆ; ತಾಯಿತಂದೆಗಳು ತೀರ ಬಡವರು; ಎಲ್ಲೋ ದೂರದ ಹಳ್ಳಿಯಲ್ಲಿ ಇರುವರು; ಮಾಧುವು ಮಾತ್ರ ಪಟ್ಟಣಕ್ಕೆ ಬಂದು ಭಿಕ್ಷಾನ್ನದಿಂದ ಹೊಟ್ಟೆಹೊರೆದುಕೊಳ್ಳುತ್ತ ಎಂಟ್ರೆನ್ಸ್ ತರಗತಿಯಲ್ಲಿ ಓದುತ್ತಿದ್ದನು. ಒಪ್ಪತ್ತು ಉಪವಾಸ ತಂಗಳು ಹಳಸಲು ಎಲ್ಲಾ ಅವನಿಗೆ ಚಿರಪರಿಚಿತವಾಗಿದ್ದುವು. ಈ ಪ್ರಪಂಚದಲ್ಲಿ ಎಷ್ಟೋ ಸಹಸ್ರಜನ ತನಗಿಂತಲೂ ಹೆಚ್ಚು ಕಷ್ಟಪಡುತ್ತಿರುವರೆಂದೂ, ನಿಲ್ಲುವುದಕ್ಕೆ ನೆಲೆಯಿಲ್ಲದ ನಿರ್ಗತಿಕರು ಎಷ್ಟೋಮಂದಿ ಇರುತ್ತಿರುವರೆಂದೂ, ತನ್ನನ್ನು ದೇವರು ಅವರೆಲ್ಲರಿಗಿಂತಲೂ ನೂರುಪಾಲು ಉತ್ತಮಸ್ಥಿತಿಯಲ್ಲಿಟ್ಟಿರುವನೆಂದೂ ಹೇಳಿಕೊಳ್ಳುವನು. "ನಾನು ಜೋಳಿಗೆ ಹಾಕಿಕೊಂಡು ಹೋದರೆ 'ಭಿಕ್ಷಾನ್ನದ ಹುಡುಗ' ಎಂದು ಯಾರಾದರೂ ನಾಲ್ಕುಜನ ಅನ್ನಹಾಕುತ್ತಾರೆ; ಬೀದಿಯಲ್ಲಿ ನರಳುತ್ತ ಬಿದ್ದಿರುವ ಕುಂಟರೂ ಕುರುಡರೂ ಕುಷ್ಠರೋಗಿಗಳೂ ಇದ್ದಾರಲ್ಲ ಇವರ ಗತಿಯೇನು?" ಎಂದು ಪದೇಪದೇ ಯೋಚನೆಯು ಬರುವುದು. ಆಗ ಹುಡುಗರು ಹೆದರಿಕೆಗೆ ಕಣ್ಣುಮುಚ್ಚಿಕೊಂಡುಬಿಡುವಂತೆ ಮುಂದೆ ಏನೂ ತೋರದೆ ಸೊರಗಿ ಸುಮ್ಮನಾಗುವನು.

ಅವನ ಕಥೆಯನ್ನು ಕೇಳಿ ನಾಗೇಶರಾಯರಿಗೂ ಶಾರದಮ್ಮನವರಿಗೂ ಬಹಳ ವ್ಯಸನವಾಯಿತು ; ಅಲ್ಲಿಂದ ಮುಂದೆ ಆ ಮನೆಯಲ್ಲಿ ಅವನು "ಹೋಗಿ ಬಿಟ್ಟು ಬರ"ಬೇಕಾಗಲಿಲ್ಲ. ನಿತ್ಯವೂ ಅನ್ನದ ಜೊತೆಗೆ ಸ್ವಲ್ಪ ತುಪ್ಪವೂ ಹಬ್ಬಹರಿ ದಿನಗಳಲ್ಲಿ ತಿಂಡಿಗಳೂ ಸಿಕ್ಕುತ್ತ ಬಂದವು.

"ಅಮ್ಮ, ಆ ಹುಡುಗ ಯಾರೇ ?" ಎಂದು ಸೀತೆಯು ಒಂದುದಿನ ಕೇಳಿದಳು.

ಶಾರದಮ್ಮ—"ಭಿಕ್ಷಾನ್ನದ ಹುಡುಗ ಕಣೇ !"

ಸೀತೆ—ಹೌದಮ್ಮ, ಭಿಕ್ಷಾನ್ನದ ಹುಡುಗ. ಅವನು ಯಾರೂ ಅಂತ ಕೇಳಿದೆ. ಅವನಿಗೆ ತಿಂಡೀ ಎಲ್ಲಾ ಕೊಡುತೀಯಲ್ಲಾ ಅದಕ್ಕೆ."

ಶಾರದಮ್ಮ—"ಯಾರಾದರೇನು ? ನೀಯೇನು ಮದುವೆಮಾಡಿಕೊಳ್ಳಬೇಕೇನು?"

ನಮ್ಮ ಹೆಂಗಸರಿಗೆ ಅಡಿಗೆ, ಒಡವೆ, ಮದುವೆ, ಇದರಲ್ಲಿ ಎಲ್ಲವೂ ಮುಗಿದು ಹೋಗುವುದು. ಈಗ ಸೀತೆಯ ಮಾತೂ ಇಲ್ಲಿಯೇ ನಿಂತುಹೋಯಿತು. ಅಂತು ದಿನದಿನಕ್ಕೆ ಎಲ್ಲರಿಗೂ ಮಾಧುವಿನ ಮೇಲೆ ವಿಶ್ವಾಸವು ಹೆಚ್ಚಿತು. ಸೀತೆಯು ತಾನೇ ಒಂದೊಂದುದಿನ ಅನ್ನವನ್ನು ಹಾಕುವಳು ; ತಿಂಡಿಮಾಡಿದ ದಿನವಂತೂ ಅದನ್ನು ಮತ್ತಾರೂ ಹಾಕಲೇಕೂಡದು ; ದಿನಕ್ಕೊಂದುಸಾರಿಯಾದರೂ ಮನೆಯಲ್ಲಿ ಅವನ ಪ್ರಸ್ತಾಪ ಬರದೇ ಇರುತ್ತಿರಲಿಲ್ಲ. ಈ ಸಂದರ್ಭದಲ್ಲಿ ಮಾಧು ಇಷ್ಟಪಟ್ಟಿದ್ದರೆ ನಾಗೇಶರಾಯರಿಂದ ಬೇಕಾದ ಸಹಾಯವನ್ನೆಲ್ಲಾ ಪಡೆದು ಸುಖವಾಗಿರಬಹುದಾ ಗಿತ್ತು. ಆದರೆ ಅವನ ಪ್ರಕೃತಿಯು ಅಷ್ಟು ಸಡಿಲವಾಗಿರಲಿಲ್ಲ.

ಒಂದುದಿನ ರಾತ್ರಿ ನಾಗೇಶರಾಯರು ಊಟಕ್ಕೆ ಕುಳಿತಿರಲು ಅವರಿಗೆ ಅನ್ನ ಬಡಿಸಿ ತುಪ್ಪ ಹಾಕುವಾಗ ಶಾರದಮ್ಮನವರಿಗೆ ಮಾಧುವಿನ ಜ್ಞಾಪಕ ಬಂತು ; ಆಗ ಅವರು

"ಪಾಪ, ಮಾಧೂಗೆ ಬಹಳ ಕಷ್ಟ !" ಎಂದರು.

"ಹೌದು ; ಏನುಮಾಡುವುದು ? ನಾನೂ ನನ್ನ ಕೈಲಾದ ಸಹಾಯವ ನ್ನೆಲ್ಲಾ ಮಾಡುತ್ತಿದೇನೆ. ಯಾವುದೋ ಎರಡುಮೂರು ಪುಸ್ತಕಗಳು ಬೇಕಾಗಿ ದ್ದುವೆಂದು ತಿಳಿಯಿತು ; ತೆಗೆಸಿಕೊಟ್ಟೆ ; ಒಂದೆರಡು ಬಟ್ಟೆ ಕೊಡಿಸಿದೆ ; ಬಹಳ ಕಷ್ಟವಾಗಿದ್ದರೆ ನಮ್ಮ ಮನೆಯಲ್ಲಿಯೇ ಬಂದಿರುವ ಹಾಗೆ ಹೇಳಿದೆ........"

"ಅದಕ್ಕೆ ಅವನೇನಂದ ?"

"ನನಗೆ ಈಗ ಅಷ್ಟೇನೂ ಕಷ್ಟವಿಲ್ಲ—ಎಂದ."

"ಅವನ ತಂದೆತಾಯಿಗಳು ತೀರ ಬಡವರಂತೆ."

"ಹೌದು; ಮೊನ್ನೆ, ಅವರಿಗೆ ಕಳುಹಿಸುವ ಹಾಗೆ ಹೇಳಿ ಹತ್ತುರೂಪಾಯಿ ಕೊಟ್ಟೆ."

"ಏನೋ ನಮ್ಮ ಕೈಲಾದಷ್ಟು ಮಾಡುವುದು. ದೇವರೇ ಅವನನ್ನು ಮುಂದಕ್ಕೆ ತರಬೇಕು."

(೨)

ಪರೀಕ್ಷೆಯು ಹತ್ತಿರ ಬಂದುಬಿಟ್ಟಿತಲ್ಲಾ ಎಂದು ಕಳವಳಪಡುವ ಹುಡುಗರೇ ಹೆಚ್ಚುಮಂದಿ; ಆದರೆ ಮಾಧುವು ಆ ಗುಂಪಿಗೆ ಸೇರಿದವನಾಗಿರಲಿಲ್ಲ. "ಪರೀಕ್ಷೆಯು ಇನ್ನೂ ಎರಡು ತಿಂಗಳಿದೆಯಲ್ಲಾ—ಎಂದಿಗೆ ಕಳೆಯುವುದೋ!" ಎಂದು ಯೋಚಿಸುತ್ತಿರುವನು; ಪರೀಕ್ಷೆ ಮುಗಿದಮೇಲೆ ಹೇಗಾದರೂ ತನ್ನ ಕಷ್ಟ ಸ್ವಲ್ಪ ತಪ್ಪೀತು ಎಂದು ಅವನ ಯೋಚನೆ.

ಹಾಗೂ ಹೀಗೂ ಒಂದುತಿಂಗಳು ಕಳೆಯಿತು; ಆಗ ಅವನಿಗೆ ಮಲೇರಿಯಾ ಜ್ವರ ಬಂದು ಹಾಸಿಗೆ ಹಿಡಿದು ಮಲಗಿಬಿಟ್ಟನು. ದಿನಬಿಟ್ಟುದಿನ ಜ್ವರ ಬರುವುದಕ್ಕೆ ಆರಂಭವಾಗಿ ದೇಹದಲ್ಲಿದ್ದ ಬಲವನ್ನೆಲ್ಲಾ ಹಿಂಡಿ ತೆಗೆದುಬಿಟ್ಟಿತು. ಏಳುವುದಕ್ಕೆ ತ್ರಾಣವಿಲ್ಲ. ಆ ಕಾಲದಲ್ಲಿ ಅವನ ಸ್ನೇಹಿತ ಕೃಷ್ಣಮೂರ್ತಿ ಎಂಬ ಹುಡುಗನು ನಿತ್ಯವೂ ತನ್ನ ಮನೆಯಿಂದ ಗಂಜಿ ಹಾಲು ಎಲ್ಲಾ ತಂದುಕೊಡುತ್ತಿದ್ದ. ಯಾರೋ ಪಂಡಿತರಿಗೆ ದಮ್ಮಯ್ಯಗುಡ್ಡೆ ಹಾಕಿ ಔಷಧಿಗೆ ಏರ್ಪಾಡುಮಾಡಿದ. ಆದರೂ ಮಾಧುಗೆ ಒಂದುಕಡೆ ಜ್ವರದ ತಾಪ, ಒಂದುಕಡೆ ಪರೀಕ್ಷೆಯ ಯೋಚನೆ; ಇವೆರಡೂ ಸೇರಿ ಅವನ ಮನಸ್ಸಿನಲ್ಲಿ ಶಾಂತಿಯಿಲ್ಲದ ಹಾಗೆ ಮಾಡಿದುವು. ಆದರೂ ಅವನು ತನ್ನ ಕಾಯಿಲೆಯ ಸಮಾಚಾರವನ್ನು ಯಾರಿಗೂ ತಿಳಿಸಲಿಲ್ಲ; ತಿಳಿಸುವುದಕ್ಕೆ ಆಗಲೂ ಇಲ್ಲ—ಯಾರೂ ಇರಲೂ ಇಲ್ಲ. ಇದ್ದ ಕೃಷ್ಣಮೂರ್ತಿಯೊಬ್ಬನು ನೆರವಾಗಿ ಬಂದ; ತಂದೆತಾಯಿಗಳು ಗಾಬರಿಪಟ್ಟಾರೆಂದು ಅವರಿಗೆ ಬರೆಯಲಿಲ್ಲ. ಆದರೆ ತಂದೆತಾಯಿಗಳಿಗಿಂತ ಹೆಚ್ಚಾಗಿ ನಾಗೇಶರಾಯರಿಗೂ ಶಾರದಮ್ಮನವರಿಗೂ ಕಳವಳಕ್ಕೆ ಆರಂಭವಾಯಿತು. "ಪಾಪ, ಮಾಧು ಸ್ವಸ್ಥವಾಗಿದ್ದಾನೆಯೋ ಇಲ್ಲವೋಂದ್ರೆ! ಆಗಲೇ ಎಂಟುಹತ್ತು ದಿನವಾಯಿತು, ಭಿಕ್ಷಾನ್ನಕ್ಕೆ ಬಂದು; ಪರೀಕ್ಷೆ ಬೇರೇ ಹತ್ತಿರವಾಯಿತು" ಎಂದು ಶಾರದಮ್ಮನವರು ಗಂಡನ ಕೈಲಿ ಪ್ರಸ್ತಾಪವನ್ನೆತ್ತಿದರು.

ನಾಗೇಶರಾಯರು ಮಾಧುವನ್ನು ನೋಡಿಕೊಂಡು ಬರುವುದಕ್ಕೆ ಅವನಿದ್ದ ಕೊಠಡಿಗೆ ಹೋದರು. ಕೊಠಡಿಯ ಬಾಗಿಲು ಓರೆಯಾಗಿತ್ತು; ಒಳಗೆ ಮಾಧುವು

ಹಾಸಿಗೆಯ ಮೇಲೆ ಮಲಗಿದ್ದ. ನಾಗೇಶರಾಯರು ಹೊರಗೇ ನಿಂತುಕೊಂಡು "ಮಾಧೂ!" ಎಂದು ಕೂಗಿದರು. ಮಾಧುವು ಮಲಗಿಕೊಂಡೇ "ಯಾರು!" ಎಂದು ಕೇಳಿದನು.

ರಾಯರು "ನಾನು" ಎಂದರು.

ಈಗ ಧ್ವನಿಯಿಂದ ನಾಗೇಶರಾಯರೆಂದು ತಿಳಿದುಕೊಂಡು, ಕಷ್ಟದಿಂದ ಎದ್ದು ಬಾಗಿಲು ತೆಗೆದನು. ಅವರು ಒಳಗೆ ಬಂದು

"ಏನಯ್ಯಾ, ಮಲಗಿಬಿಟ್ಟಿದ್ದೀಯೆ! ಏನು ಕಾಯಿಲೆ? ಹ್ಯಾಗಿದೆ ಈಗ? ನನಗೆ ಹೇಳಿಕಳುಹಿಸಬಾರದಾಗಿತ್ತೇ?" ಎಂದರು.

"ಚಳಿಜ್ವರ ಬರುತ್ತ ಇತ್ತು; ಈಗ ಸ್ವಲ್ಪ ಇಳಿದಿದೆ. ಬಹಳ ನಿಶ್ಶಕ್ತಿ"

"ನನಗೇಕೆ ಹೇಳಿಕಳುಹಿಸಲಿಲ್ಲ?"

"ಅಯ್ಯೊ, ಸುಮ್ಮನೆ ತೊಂದರೆ!"

"ಮತ್ತೆ, ಔಷಧಿ ಪಥ್ಯ?"

"ನನ್ನ ಸ್ನೇಹಿತ ಕೃಷ್ಣಮೂರ್ತಿ ಎಂತ ಇದಾನೆ; ಅವನು ಸ್ವಲ್ಪ ಗಂಜಿ ಹಾಲು ತಂದುಕೊಡುತ್ತ ಇದಾನೆ."

"ಆಗಲಿ; ಗಾಳಿಗೆ ಮೈಬಿಟ್ಟುಕೊಂಡಿರಬೇಡ; ಹೊದ್ದುಕೊಂಡು ಮಲಗಿಕೊ. ಇಲ್ಲದಿದ್ದರೆ ನಮ್ಮ ಮನೆಗೇ ಬಂದುಬಿಡು, ಗಾಡಿ ತರುತ್ತೇನೆ."

"ಇಲ್ಲ, ಇಲ್ಲೇ ಇರುತ್ತೇನೆ; ಇವತ್ತು ಸ್ವಲ್ಪ ವಾಸಿ."

ನಾಗೇಶರಾಯರು ಅಲ್ಲಿಂದ ಮನೆಗೆ ಬಂದವರು ಡಾಕ್ಟರ್ ವೆಂಕಟರಾಯರಿಗೆ ಒಂದು ಚೀಟಿ ಬರೆದು ಕಳುಹಿಸಿದರು. ಅದನ್ನು ನೋಡಿ ಡಾಕ್ಟರು ಮಾಧುವಿನ ಕೊಠಡಿಗೆ ಹೋಗಿ ಅವನ ದೇಹಸ್ಥಿತಿಯನ್ನು ಪರೀಕ್ಷಿಸಿ ಔಷಧಿ ಕಳುಹಿಸಿಕೊಟ್ಟರು. ನಾಗೇಶರಾಯರ ಮನೆಯಿಂದ ಗಂಜಿ ಬಿಸಿನೀರು ಕಾಫಿ ಇವೂ ಬಂದವು. ನಿತ್ಯವೂ ರಾಯರೂ ಡಾಕ್ಟರೂ ಬಂದು ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು. 'ಅಯ್ಯೊ, ಈ ಭಿಕಾರಿಗೆ ಇವರು ಸುಮ್ಮನೆ ಇಷ್ಟು ಒದ್ದುಕೊಳ್ಳುತ್ತಾರಲ್ಲ!' ಎಂದು ಮಾಧುಗೆ ಬಹಳ ಸಂಕೋಚ; ಅಂತೂ ಸುಮಾರು ಒಂದುವಾರದಲ್ಲಿ ರೋಗವು ಗುಣಮುಖವಾಯಿತು.

ಒಂದುತಿಂಗಳು ಕಳೆಯಿತು; ಪರೀಕ್ಷೆ ಬಂತು; ಅದೂ ಕಳೆಯಿತು. ಪ್ಯಾಸೂ ಆಯಿತು. ಅದನ್ನು ಕೇಳಿ ಅವನಿಗೆ ತಲೆಯಮೇಲಿನಿಂದ ಒಂದು ದೊಡ್ಡ ಬೆಟ್ಟವನ್ನು ಇಳಿಸಿದಂತಾಯಿತು. ಕೂಡಲೆ ಕೊಠಡಿಗೆ ಓಡಿಬಂದು ತಾನು ಪೂಜಿಸುತ್ತಿದ್ದ ಸರಸ್ವತೀಪಟದ ಮುಂದೆ ನಮಸ್ಕಾರಮಾಡಿ "ತಾಯಿ, ನಿನ್ನ ಪ್ರಸಾದ!" ಎಂದನು.

ಮುಂದಿನ ತಿಂಗಳಿನ ಗೆಜಿಟ್ಟಿನಲ್ಲಿ, ಅವನು ಸಂಸ್ಥಾನದಲ್ಲಿ ಎರಡನೆಯವನಾಗಿ ಪ್ಯಾಸುಮಾಡಿದ್ದಂತೆ ಪ್ರಕಟವಾಗಿತ್ತು. ಇದನ್ನು ನೋಡಿ ಅವನಿಗೆ ಆದ ಸಂತೋಷವು ವಿದ್ಯಾರ್ಥಿಗಳಾಗಿದ್ದವರಿಗೇ ಗೊತ್ತು. ತಾನು ಪಟ್ಟ ಶ್ರಮಕ್ಕೆ ತಕ್ಕ ಫಲ ದೊರೆಯಿತೆಂದು ಅವನಿಗೆ ಅಷ್ಟು ಸಂತೋಷವಲ್ಲ; ಮುಂದೆ ತನಗೆ ತಿಂಗಳಿಗೆ ಇಪ್ಪತ್ತುರೂಪಾಯಿ ವಿದ್ಯಾರ್ಥಿವೇತನ ಬರುವುದು; ಅದರಲ್ಲಿ ಹತ್ತುರೂಪಾಯನ್ನಾದರೂ ತಮ್ಮ ತಾಯಿತಂದೆಗಳಿಗೆ ಕಳುಹಿಸಬಹುದು—ಎಂದು. ವೇತನವು ಬಂತು. ಜೊತೆಗೆ ಎಲ್ಲಿಯೋ ಒಂದುಕಡೆ ಪಾಠಹೇಳುತ್ತ ತಿಂಗಳಿಗೆ ಐದಾರು ರೂಪಾಯಿ ಸಂಪಾದಿಸಿ ಅದನ್ನು ಪುಸ್ತಕ ಮುಂತಾದ ಹೆಚ್ಚು ಖರ್ಚುಗಳಿಗೆ ಉಪಯೋಗಿಸುವನು. ಭಿಕ್ಷಾನ್ನವು ತಪ್ಪಿತು.

ಆದರೆ ನಾಗೇಶರಾಯರ ಮನೆಗೆ ಮಾತ್ರ ಹೋಗಿ ಬರುತ್ತಿದ್ದನು. ಹಬ್ಬ ಹರಿದಿನಗಳಲ್ಲಿ ಊಟಕ್ಕೆ ಅಥವಾ ತಿಂಡಿಗೆ ಹೋಗುವುದು ಪೂರ್ವದಂತೆ ನಡೆದುಕೊಂಡುಬರುತ್ತಿತ್ತು. ಹಿಂದೆ ಇದ್ದ ಕಷ್ಟವು ಈಗ ಇಲ್ಲ. ಆದ್ದರಿಂದ ಮತ್ತೆ ಮೂರು ವರ್ಷಗಳು ಅನಾಯಾಸವಾಗಿ ಕಳೆದುಹೋದವು. ಬಿ. ಎ. ಪರೀಕ್ಷೆಯೂ ಆಯಿತು. ಅದರಲ್ಲಿ ಮಾಧು ಮೊದಲನೆಯ ತರಗತಿಯಲ್ಲಿ ತೇರ್ಗಡೆಹೊಂದಿ ಒಂದು ಭಂಗಾರದ ಪದಕವನ್ನು ಸಂಪಾದಿಸಿದನು. ಅದನ್ನು ಮೊದಲು ನಾಗೇಶರಾಯರಿಗೂ ಶಾರದಮ್ಮನವರಿಗೂ ತೋರಿಸಬೇಕೆಂಬ ಆತುರ; ಅದನ್ನು ಶಾರದಮ್ಮನವರು ಕೈಲಿ ಹಿಡಿದುಕೊಂಡು ತೂಗುತ್ತಾ "ಚೆನ್ನಾಗಿದೆ! ಏನು ಎರಡು ಸವರನ್ ಇರಬಹುದು" ಎಂದು ಹೇಳಿ ಹಿಂತಿರುಗಿಕೊಟ್ಟು, "ಎಲ್ಲಿಯಾದರೂ ಚೆನ್ನಾಗಿರಪ್ಪ; ನಮ್ಮ ಕಣ್ಣು ಮುಂದಿನ ಹುಡುಗ, ಎಷ್ಟೋ ಕಷ್ಟಪಟ್ಟಿದ್ದೀಯೆ" ಎಂದು ಹರಸಿದರು. ಮನಸಿನಲ್ಲಿ 'ಅವನ ತಾಯಿತಂದೆಗಳ ಪುಣ್ಯವೇ ಪುಣ್ಯ' ಎಂದುಕೊಂಡರು. ಮಾಧುವಿಗೆ ಅವರ ಅಂತಃಕರಣವನ್ನು ನೋಡಿ ಕಣ್ಣುತುಂಬ ನೀರು ತುಂಬಿತು. "ನಿಮ್ಮ ಆಶೀರ್ವಾದ, ಅಮ್ಮ!" ಎಂದು ಅವರಿಗೆ ನಮಸ್ಕಾರ ಮಾಡಿದನು.

ಸೀತೆಯು ತಾಯಿಯ ಬಳಿಯೇ ಅವರ ಸೆರಗನ್ನು ಹಿಡಿದುಕೊಂಡು ನಿಂತು ನೋಡುತ್ತಿದ್ದಳು. ತಾಯಿಯು ಪದಕವನ್ನು ಹಿಂತಿರುಗಿ ಕೊಟ್ಟಮೇಲೆ "ಎಲ್ಲಿ ಮಾಧು, ನೋಡೋಣ" ಎಂದು ತಾನು ಅದನ್ನು ತೆಗೆದುಕೊಂಡು ಅಂಗೈಯಲ್ಲಿಟ್ಟುಕೊಂಡು ನೋಡಿದಳು. ಥಳಥಳನೆ ಹೊಳೆಯುತ್ತಿತ್ತು. ಅದನ್ನು ನೋಡಿ ಅವಳ ಮುಖವು ಅರಳಿತು. ಮಾಧುವು ನೋಡಿ, "ಏನು ಸೀತಾ! ನಿನಗೆ ಬೇಕೇನು ಅದು? ನೀನೂ ಬಿ. ಎ. ಪ್ಯಾಸುಮಾಡು ನಿನಗೂ ಸಿಕ್ಕುತ್ತೆ; ಇಲ್ಲದಿದ್ದರೆ ನಾಳೆ ನಿನ್ನ ಗಂಡ ಬರುತ್ತಾನಲ್ಲ ಅವನು ತಂದುಕೊಡುತ್ತಾನೆ" ಎಂದನು.

(೩)

ಮಾಧೂಗೆ ಈಗ ದೊಡ್ಡ ಕೆಲಸ; ದೊಡ್ಡ ಸಂಬಳ; ದೊಡ್ಡಮನೆ; ಮನೆಯಲ್ಲಿ ಕೈಗೊಬ್ಬರು ಕಾಲಿಗೊಬ್ಬರು ಆಳುಗಳು. ತಾಯಿತಂದೆಗಳ ಯೋಗಕ್ಷೇಮವನ್ನು ನೋಡಿಕೊಳ್ಳುವುದಕ್ಕಾಗಿಯೇ ಒಬ್ಬ ಅಡಿಗೆಯ ಪರಿಚಾರಕನೂ ಆಳೂ ಇದ್ದರು. ಅವರು ಹಳ್ಳಿಗೆ ಹೋಗಬೇಕೆಂದರೆ ಅನುಕೂಲವಾಗುವಂತೆ ಒಂದು ಗಾಡಿಯನ್ನೂ ಒಂದು ಜೊತೆ ಎತ್ತನ್ನೂ ಕೊಂಡುಕೊಂಡಿದ್ದನು. ಯಾವ ವಿಷಯದಲ್ಲಿಯೂ ಅವರಿಗೆ ವ್ಯಥೆಯಾಗಬಾರದೆಂಬುದೇ ಅವನ ಆಸೆ. ಅದಕ್ಕಾಗಿ ಅವನು ಎಷ್ಟೆಷ್ಟೋ ತೊಂದರೆಪಟ್ಟುಕೊಳ್ಳುತ್ತಿದ್ದನು, ಆದರೆ ಅವರು ಒಂದು ಸಾರಿ ಪ್ರೇಮಪುರಸ್ಸರವಾಗಿ "ಮಾಧೂ!" ಎಂದು ಕರೆದರೆ ಅವನು ಪಟ್ಟ ಶ್ರಮಕ್ಕೆಲ್ಲಾ ಫಲ ಬಂದಂತಾಗುತ್ತಿತ್ತು.

ಒಂದು ದಿನ ತನಗೆ ಕೆಲಸವಾದ ಮೇಲೆ ಮಾಧುವು ನಾಗೇಶರಾಯರ ಮನೆಗೆ ಹೋದನು. ಆಗ ಮಧ್ಯಾಹ್ನ; ನಾಗೇಶರಾಯರೂ ಶಾರದಾಬಾಯಿಯೂ ಮಾತನಾಡುತ್ತ ಕುಳಿತಿದ್ದರು. ಮಾಧು ಇಬ್ಬರಿಗೂ ನಮಸ್ಕಾರಮಾಡಿದನು. ಅವರು ಅವನನ್ನು ಹರಸಿ ಕೆಲಸವಾದದ್ದನ್ನು ಕೇಳಿ ಸಂತೋಷಪಟ್ಟರು. ಶಾರದಾಬಾಯಿಯು "ಏನಪ್ಪ, ಮಾಧು! ಈಗ ನೀನು ದೊಡ್ಡವನಾದೆ; ದೊಡ್ಡ ಕೆಲಸಕ್ಕೆ ಬಂದೆ, ಕೈ ತುಂಬ ಸಂಬಳ ತರುತ್ತಿದ್ದೀಯೆ; ಇನ್ನುಮೇಲೆ ನಿನ್ನನ್ನು ಮಾಧವರಾಯರೇ ಎಂದು ಕರೆಯಬೇಕು ಅಂತ ಕಾಣುತ್ತದೆ." ಎಂದರು.

"ನಾನು ದೊಡ್ಡವನಾದರೂ ನಿಮಗೆ ಚಿಕ್ಕವನೇ; ಮಾಧುವೇ; ನೀವು ಸಾಕಿ ಸಲಹಿದ ಹುಡುಗ 'ರಾಯರು' ಹೇಗಾದಾನು?"

"ನಾವು ಸಾಕಿಸಲಹಿದ್ದು ಅಷ್ಟರಲ್ಲೇ ಇರಲಿ; ಆದರೆ ನೀನು ಮದುವೆಯಾಗಿ ನಿನಗೆ ಒಬ್ಬ ಹುಡುಗನಾಗುವವರೆಗೂ ನೀನು ಹುಡುಗನೇ; ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗ ಬಂದು ಆಕ್ಷೇಪಣೆಮಾಡಿದರೆ ಆಮೇಲೆ ಬೇಕಾದರೆ ಬಹುವಚನದಲ್ಲಿ ಕರೆಯೋಣವಂತೆ!"

ಮಾಧೂಗೆ ಈ ಮಾತನ್ನು ಕೇಳಿ ಏನೋ ಸಂಕೋಚವಾಗಿ ಸ್ವಲ್ಪ ತಲೆ ಬಗ್ಗಿಸಿಕೊಂಡನು. ಸ್ವಲ್ಪಹೊತ್ತು ಎಲ್ಲರೂ ಸುಮ್ಮನೆ ಇದ್ದಮೇಲೆ, ಮಾಧು ತಟ್ಟನೆ "ಸೀತೆಯೆಲ್ಲಿ, ಕಾಣಿಸಲಿಲ್ಲ!" ಎಂದನು. ಶಾರದಾಬಾಯಿಯು "ಎಲ್ಲೋ ಒಳಗಿರಬಹುದು!" ಎಂದು, "ಸೀತಾ ಸೀತಾ" ಎಂದು ಕೂಗಿದರು. ಕೂಡಲೆ ಒಳಗೆ "ಧಡ ಧಡ" ಎಂದು ಸದ್ದಾಯಿತು; ಕೈ ಬಳೆಗಳ ಶಬ್ದ; ಕಾಲುರುಳಿಯ ಶಬ್ದ. ಸೀತೆಯು ಓಡಿಬರುತ್ತಿದ್ದಳು; ಬಂದು ಬಾಗಿಲಲ್ಲಿ

ತಟ್ಟನೆ ನಿಂತುಬಿಟ್ಟಳು; ತಮ್ಮ ತಾಯಿ ತಂದೆಗಳು ಇಬ್ಬರೇ ಇದ್ದರೆಂದುಕೊಂಡಿದ್ದಳು; ಆದರೆ ಬಾಗಿಲ ಹತ್ತಿರಕ್ಕೆ ಬಂದ ಕೂಡಲೆ, ಸರಿಗೆರುಮಾಲು ಹಾಕಿಕೊಂಡಿದ್ದ ದೊಡ್ಡಮನುಷ್ಯರೊಬ್ಬರು ಬೇರೆ ಇದ್ದರು. ಆದ್ದರಿಂದ ತಟ್ಟನೆ ಬಾಗಿಲಲ್ಲೇ ನಿಂತಳು. ಸೀತೆ ಅಲ್ಲೇ ನಿಂತದ್ದನ್ನು ನೋಡಿ, ಮಾಧು ಅವಳಕಡೆ ತಿರುಗಿ ನಗುತ್ತಾ 'ಸೀತಾ!' ಎಂದು ಕರೆದನು.

ಸೀತೆ ಮಾತಾಡಲಿಲ್ಲ.

ಶಾರದಾಬಾಯಿ "ಮಾತಾಡೇ ಸೀತಾ!" ಎಂದರು.

ಸೀತೆ ಇನ್ನೂ ಹಿಂದಕ್ಕೆ ಸರಿದಳು; ಮಾತನಾಡಲಿಲ್ಲ.

ಮಾಧು ಪುನಃ "ಸೀತಾ!" ಎಂದು ಕೂಗಿದನು. ಉತ್ತರವಿಲ್ಲ.

ಮಾಧು—"ಯಾಕೆ ಸೀತಾ, ಮಾತೇ ಇಲ್ಲ? ನಾಚಿಕೆ ಬಂದುಬಿಟ್ಟಿತೇನು ಆಗಲೇ? ಹೋಗಲಿ, ಅಲ್ಲಿಂದಲೇ ಮಾತನಾಡು"

ಮಾತಿಲ್ಲ.

"ಹೋಗಲಿ ಬಿಡಮ್ಮ! ನಿನಗೆ ಜಂಭ ಬಂದಿದೆ. ಬಡವರನ್ನು ಕಂಡರೆ ನಿನಗೆ ಉದಾಸೀನ! ಯಾರಾದರೂ ಐಶ್ವರ್ಯವಂತ ಗಂಡಸನ್ನು ಗೊತ್ತುಮಾಡಿಕೊಂಡು ಬಂದಿದ್ದಾರೊ?"

ಅದಕ್ಕೂ ಮಾತಿಲ್ಲ; ಮಾತಿಗೆ ಬದಲಾಗಿ ಸೀತೆ ಪುನಃ ಒಳಕ್ಕೆ ಹೊರಟು ಹೋದಳು. ಮಾಧು ಇನ್ನೊಂದು ಗಳಿಗೆ ಮಾತ್ರ ಅಲ್ಲಿಯೇ ಮಾತಾಡುತ್ತಿದ್ದ; ಅವರ ಮನೆಯಲ್ಲಿಯೇ ಕಾಫಿ ತಿಂಡಿ ಎಲ್ಲಾ ಆಯಿತು.

ಮಾಧು ಹೊರಟುಹೋದಮೇಲೆ ಗಂಡಹೆಂಡಂದಿರು ಏನೇನೋ ಮಾತನಾಡುತ್ತಿದ್ದರು. ಮಾಧುವಿನ ಮಾತೇ ಹೆಚ್ಚು; ಒಬ್ಬರು 'ಎಂಥ ಬುದ್ಧಿವಂತ!' ಎಂದರು; ಮತ್ತೊಬ್ಬರು 'ಅಷ್ಟು ದೊಡ್ಡ ಸಂಬಳ ತಂದರೂ ಒಂದು ಚೂರೂ ಜಂಭವಿಲ್ಲ' ಎಂದರು. ಅಷ್ಟುಹೊತ್ತಿಗೆ ಗಡಿಯಾರದಲ್ಲಿ "ಡಿಂಗ್ ಡಿಂಗ್" ಎಂದು ಗಂಟೆಹೊಡೆಯಿತು. ಕೂಡಲೆ ಶಾರದಮ್ಮನವರು ಗಂಡನನ್ನು ಕುರಿತು ತಟ್ಟನೆ, "ಈಗ ನನ್ನ ಮನಸ್ಸಿನಲ್ಲೇನಿತ್ತು ಬಲ್ಲಿರಾ?" ಎಂದು ಆಶ್ಚರ್ಯದಿಂದ ಕೇಳಿದರು.

"ಹೆಂಗಸರಿಗಿನ್ನೇನು ಯೋಚನೆ? ಮಾಧೂ ಮದುವೆ ಯಾವಾಗ ಎಂತ ಯೋಚಿಸಿರಬಹುದು!"

"ಹೌದು ಅಂದ್ರೆ! ನಿಜವಾಗಿಯೂ ಅದೇ; ನಿಮಗೆ ಹ್ಯಾಗೆ ಗೊತ್ತಾಯಿತು? ನಿಜವಾಗಿಯೂ ಮಾಧೂಗೆ ನಮ್ಮ ಸೀತೂನ ಕೊಟ್ಟು ಯಾಕೆ ಮದುವೆ

ಮಾಡಿಬಿಡಬಾರದು ಎಂದು ಯೋಚನೆಮಾಡುತ್ತಿದ್ದೆ; ಅಷ್ಟುಹೊತ್ತಿಗೆ ಸರಿಯಾಗಿ ಘಂಟೆ ಹೊಡಿಯಿತು. ”

ನಾಗೇಶರಾಯರು ನಕ್ಕುಬಿಟ್ಟರು.

“ ಇನ್ನೇನು ಮದುವೆಯಾದ ಹಾಗೇ ಹಾಗಾದರೆ ? ”

“ ಹಾಸ್ಯ ಮಾಡಬೇಡೀಂದ್ರೆ ; ವಿಚಾರಿಸಿ.”

ಕೂಡಲೆ ಇಬ್ಬರೂ ಎದ್ದರು. ತಾಯಿಯ ಮನಸ್ಸಿನ ತುಂಬ ಮಗಳ ಮದುವೆಯ ಯೋಚನೆಯೇ. ಆಕೆಯು ಒಳಕ್ಕೆ ಹೋಗಲು ಸೀತೆಯು ತಾಯಿಯನ್ನು ನೋಡಿ “ ಅಮ್ಮಾ ಬಾರೆ, ಕವಡೆ ಆಡೋಣ ” ಎಂದಳು. ಅದಕ್ಕೆ ಆಕೆ ಹೂ ಕಣೇ ! ನನಗೆ ಬೇರೆ ಕೆಲಸವೇ ಇಲ್ಲ ! ನಾಳೇ ಬರ್ತ್ತಾನಲ್ಲಾ ನಿನ್ನಗಂಡ ಅವನ ಕೈಲಿ ಬೇಕಾದರೆ ಆಡು ” ಎಂದರು. ಅಷ್ಟಕ್ಕೆ ಸುಮ್ಮನಾಗಬೇಕೋ ಇಲ್ಲವೊ ? ತುಂಟಹುಡುಗಿ ! “ ಆಡೇ ಆಡ್ತೀನಿ ಬಿಡ್ತೀನೇನು ? ” ಎಂದು ಬಿಟ್ಟಳು. ತಾಯಿಗೆ ಆಶ್ಚರ್ಯವಾಯಿತು. “ ಅಲ್ಲ ಕಣೇ, ಇಷ್ಟು ಮಾತಾಡುವವಳಿಗೆ, ಪಾಪ ! ಮಾಧು ‘ ಸೀತಾ ಸೀತಾ ’ ಎಂದು ಕೂಗಿದಾಗ ಎಲ್ಲಿ ಹೋಗಿತ್ತೇ ಬಾಯಿ ? ಅಷ್ಟು ಕೂಗಿದರೂ ಮಾತೇ ಆಡಬಾರದೇ ? ” ಎಂದರು. ಸೀತೆಯು “ ಹೊಗೇ ! ” ಎಂದು ಬಿಟ್ಟಳು. ಮುಖವು ಕೆಂಪೇರಿತು. ಮಾತು ಮರೆಸುವುದಕ್ಕಾಗಿ “ ಅಮ್ಮ ! ಈ ಕವಡೆ ಚೆನ್ನಾಗಿಲ್ಲ ; ಬೇರೆ ಇದ್ದರೆ ಕೊಡೇ ” ಎಂದಳು. ಸಫಲವಾಗಲಿಲ್ಲ. ಆಕೆಯು “ ಇರಲಿ, ನಾಳೆ ನಿನ್ನ ಮಾಧೂಗೇ ಕೊಟ್ಟು ಮದುವೇಮಾಡುವುದು ! ಆಗಲೋ, ಮಾತಾಡ್ತೀಯೋ ಬಿಡ್ತೀಯೋ ? ” ಎಂದು ಹಾಸ್ಯಮಾಡಿದರು.

ಸೀತೆ—“ ನೀನು ಅಪ್ಪನ್ನ ಮದುವೆಮಾಡಿಕೊಂಡಾಗ ಏನು ಮಾಡಿದ್ದೆ ? ಅವನ ಕೂಡ ಮಾತಾಡಿದ್ದೆಯೋ ಬಿಟ್ಟಿದ್ದೆಯೋ ? ”

ತಾಯಿ ಮಗಳ ಮಾತಿಗೆ ಬೆರಗಾಗಿಹೋಗಿ “ ಅಬ್ಬಬ್ಬ ! ಗಂಡುಬೀರಿ ! ನಿನಗ್ಯಾರೇ ಇದನ್ನೆಲ್ಲಾ ಹೇಳಿಕೊಟ್ಟವರು ? ” ಎಂದು ಹೇಳಿ ನಕ್ಕುಬಿಟ್ಟರು.

(೪)

ಇಷ್ಟೆಲ್ಲಾ ಆದದ್ದು ಮದುವೆಯಾಗದೆ ಇರುತ್ತದೆಯೆ ? ಮದುವೆಯೂ ಆಯಿತು. ಮದುವೆಯ ವರ್ಣನೆಯು ಅನಾವಶ್ಯಕ ; ಏಕೆಂದರೆ ಮದುವೆಯನ್ನು ನೋಡದವರಾರು ? ಆದರೆ ಮಾಧುವಿನ ಮದುವೆಯಲ್ಲಿ ಒಂದು ವಿಶೇಷ ಸಂಗತಿ ಮಾತ್ರ ನಡೆಯಿತು; ಅದನ್ನು ಇಲ್ಲಿ ತಿಳಿಸಬೇಕು. ಅವನು ಹುಡುಗಿಗೆ ಸೀರೆ ಕುಪ್ಪಸ ಒಡವೆವಸ್ತು ಇವೆಲ್ಲಾ ತಕ್ಕಮಟ್ಟಿಗೆ ಮಾಡಿಸಿಕೊಟ್ಟಿದ್ದನು. ಅವುಗಳಲ್ಲಿ ತಾನು

ಬಹುಮಾನವಾಗಿ ಪಡೆದ ಪದಕವು ಮುಖ್ಯವಾದದ್ದು ; ಅದಕ್ಕೆ ಅವನು ಒಂದು ಸರವನ್ನು ಮಾಡಿ ಹಾಕಿಸಿದ್ದನು. ಉರುಟಣೆಯ ರಾತ್ರಿ ತಾನೂ ಸೀತೆಯೂ ಉಯ್ಯಾಲೆಯ ಮೇಲೆ ಕೂತು ಹೂವಿನಚಂಡಾಡುತ್ತ ಇದ್ದಾಗ ಅವನು ಆ ಪದಕ ವನ್ನು ಅವಳ ಕೊರಳಿಗೆ ಹಾಕಿಬಿಟ್ಟನು. ಅಲ್ಲಿದ್ದ ಹೆಂಗಸರ ಗುಂಪಿಗೆ ಗುಂಪೇ ನಕ್ಕುಬಿಟ್ಟಿತು. ಅವಳು ಮೊದಲೇ ತಲೆಯನ್ನು ಬಗ್ಗಿಸಿಕೊಂಡು ಕುಳಿತಿದ್ದಳು ; ಅದು ನಾಚಿಕೆಯಿಂದ ಇನ್ನೂ ಬಾಗಿತು. ಅವಳು ನಸುನಗುತ್ತ ಆ ಪದಕವನ್ನು ಕೈಯಲ್ಲಿ ಹಿಡಿದು ನೋಡಿದಳು. ಅಲ್ಲಿದ್ದವರಲ್ಲಿ ಒಬ್ಬರು " ಏನೇ ದಾನಾಕೊಟ್ಟ ಎಮ್ಮೇನ ಹಲ್ಲುಹಿಡಿದು ನೋಡ್ತಿಯಾ ? " ಎಂದು ಕೇಳಿದರು. ಅವಳು ಸುಮ್ಮನೆ ಪದಕವನ್ನು ಕೈಯಲ್ಲಿ ಹಿಡಿದುಕೊಂಡಿದ್ದಳು; ಒಂದುಕಡೆ ಇಂಗ್ಲಿಷಿನಲ್ಲಿ ಏನೇನೋ ಬರೆದಿತ್ತು ; ಮತ್ತೊಂದುಕಡೆ " ಶ್ರೀಸೀತಾದೇವಿ " ಎಂದು ಬರೆದಿತ್ತು. ಮಾಧು ಸ್ವಲ್ಪದಿನದ ಕೆಳಗೆ " ನಿನ್ನ ಗಂಡ ಪದಕವನ್ನು ತಂದುಕೊಡುತ್ತಾನೆ " ಎಂದು ಹೇಳಿದ ಮಾತು ಈಗ ಅವಳಿಗೆ ಜ್ಞಾಪಕಕ್ಕೆ ಬಂದಿತೆಂದು ತೋರುತ್ತದೆ.

ಇದೆಲ್ಲಾ ಆಗಿ ಈಗ ಐದಾರು ವರ್ಷಗಳಾಗಿಹೋಗಿವೆ. ಈಗ ಸೀತೆಯು ಗಂಡನಮನೆಯಲ್ಲಿ ಸಂಸಾರಮಾಡಿಕೊಂಡಿದ್ದಾಳೆ. ಮನೆಯಲ್ಲಿ ಅಡಿಗೆಯವನಿಲ್ಲ ; ಅವಳಿಗೆ ಅಡಿಗೆಮಾಡಿ ಬಡಿಸುವುದರಲ್ಲಿ ಬಲು ಆದರ; ಮಾಧುವಿಗೂ ಅವನ ತಾಯಿ ತಂದೆಗಳಿಗೂ ಅವಳು ಅಡಿಗೆಮಾಡಿ ಬಡಿಸಿದರೇ ತೃಪ್ತಿ. ಅವರು ಅವಳಿಗೆ ತಾಯಿ ತಂದೆಗಳಿಗಿಂತಲೂ ಹೆಚ್ಚಾಗಿದ್ದರು. ಹೀಗೆ ಅವಳ ಸುಖಕ್ಕೆ ಯಾವ ಅಂಶದಲ್ಲಿಯೂ ಕುಂದು ಇರಲಿಲ್ಲ ; ಗಂಡನು ಅವಳಲ್ಲಿ ಪೂರ್ಣ ಪ್ರೇಮವನ್ನಿಟ್ಟಿದ್ದನು ; ಆ ಪ್ರೇಮ ವೃಕ್ಷವು ಒಂದು ಫಲವನ್ನೂ ಬಿಟ್ಟಿತು ; ಅದರ ಹೆಸರು " ಕೃಷ್ಣಮೂರ್ತಿ " (ಉರುಫ್—ಮೂರ್ತಿ, ರಾಜ, ದೊರೆ ಇತ್ಯಾದಿ.)

ಮಾಧುವಿನ—ಮಾಧವರಾಯರ—ಮನೆಯಲ್ಲಿ ಈಗ ಮೂರುನಾಲ್ಕುಜನ ವಿದ್ಯಾರ್ಥಿಗಳು ಊಟಮಾಡಿಕೊಂಡಿದ್ದರು. ಅವರು ತಮ್ಮ ಮನೆಯಲ್ಲಿ ಊಟ ಮಾಡಿಕೊಂಡಿದ್ದಾರೆಂದು ಅವರಿಗೆ ಯಾವ ಕೆಲಸವನ್ನೂ—ಸೀತಮ್ಮನಾಗಲಿ ಮಾಧವರಾಯನಾಗಲಿ—ಹೇಳುತ್ತಿರಲಿಲ್ಲ. ಅವರಿವರ ಮನೆಯಲ್ಲಿ ಊಟಮಾಡಿ ಕೊಂಡಿರುವ ಕೆಲವು ಹುಡುಗರನ್ನು ನಾನು ನೋಡಿದ್ದೇನೆ ; ಹೊರಗಿನವರಿಗೆ ಇವರು ಎಷ್ಟೋ ಸುಖವಾಗಿದ್ದಾರೆಂದೂ ಭಿಕ್ಷಾನ್ನ ವಾರಗಳ ಪರದಾಟ ಅವರಿಗಿಲ್ಲವೆಂದೂ ಭಾವನೆ ; ಮನೆಯ ಯಜಮಾನರು ತಿಳಿದುಕೊಂಡಿರುವುದೂ ಹಾಗೆಯೇ ; ಆದರೆ ನೂರಕ್ಕೆ ತೊಂಬತ್ತೊಂಬತ್ತುಕಡೆ ಹುಡುಗರ ಅನುಭವ ಹಾಗಿರುವುದಿಲ್ಲ. ಏಕೆಂದರೆ,

ಮುಂದೆ ತಮ್ಮ ಮಗಳನ್ನೋ ನಾದಿನಿಯನ್ನೋ ಭಾವಮೈದುನನ ಮಗಳನ್ನೋ ಕೊಟ್ಟು ಮದುವೆಮಾಡುವ ಅಭಿಸಂಧಿಯಿಟ್ಟುಕೊಂಡು ಅನ್ನದಾನ ಮಾಡುವ ಪುಣ್ಯವಂತರೇ ಹೆಚ್ಚುಮಂದಿ; ಇದಲ್ಲದಿದ್ದರೆ ಆ ಹುಡುಗರಿಗೆ ನಿತ್ಯ ಮಾರ್ಕೆಟ್ಟಿಗೆ ಹೋಗಿಬರುವ ಕೆಲಸವೋ ಪಂಚೆ ಒಗೆದುಹಾಕುವ ಕೆಲಸವೋ ಇರುತ್ತದೆ. ನನ್ನ ಸ್ನೇಹಿತನೊಬ್ಬನಿಗೆ ಹೀಗೆ ಕಾಗದಬರೆಯುವ ಕೆಲಸವಿತ್ತು; ಮನೆಯ ಯಜಮಾನನಿಗೆ ಕೈ ನಡುಗುವುದೆಂದು ನೆವ; ಅವರು ಕಾಗದ ಬರೆಸುವುದಕ್ಕೆ ಕೂತರೆ ಮಧ್ಯೆ ನಾಲ್ಕುಸಲ ಎದ್ದುಹೋಗಿ ಹತ್ತುಸಲ ಮಾತನಾಡಿ ಹೇಳಿದ್ದನ್ನೇ ಹೇಳಿ ಓದಿದ್ದನ್ನೇ ಓದಿಸಿ ಕೊನೆಗೆ ಮೂರು ಗಂಟೆಯಹೊತ್ತಿಗೆ ಹಾಗೂ ಹೀಗೂ ಮಾಡಿ ಕಾಗದವನ್ನು ಬರೆಸಿ ಮುಗಿಸುವರು. ಹೀಗೆ ವಾರಕ್ಕೆ ಎರಡು ಮೂರು ಕಾಗದಗಳಿದ್ದೇ ಇರುವುವು. ಇದರಂತೆ "ಸ್ವಲ್ಪ" ಸೌದೆ ಒಡೆದುಹಾಕಿಬಿಡುವುದು, ಮಗುವನ್ನು ಎತ್ತಿಕೊಳ್ಳುವುದು ಇಂಥ ಪ್ರಕರಣಗಳೂ ಉಂಟು.

ಮಾಧವರಾಯನ ಮನೆಯಲ್ಲಿದ್ದ ಹುಡುಗರಿಗೆ ಇಂಥ ಕೆಲಸವೊಂದೂ ಇರುತ್ತಿರಲಿಲ್ಲ; ಅವರಿಗೆ ಯಾವ ಕೆಲಸವನ್ನೂ ಹೇಳಕೂಡದೆಂದು ಖಂಡಿತವಾಗಿ ಅಪ್ಪಣೆ ಮಾಡಿದ್ದನು. ಭಿಕ್ಷಾನ್ನದವರು ಯಾರು ಬಂದರೂ ಹೋಗೆನ್ನುತ್ತಿರಲಿಲ್ಲ; ಇವುಗಳ ಜೊತೆಗೆ ತಿಂಗಳಿಗೆ ಸುಮಾರು ಐವತ್ತು ರೂಪಾಯಿಗಳವರೆಗೂ ಅವರಿಗೆ ನಗದಾಗಿ ಸಹಾಯಮಾಡುತ್ತಿದ್ದನು. ಯಾರೋ ಬೀದಿಯಲ್ಲಿ ಹೋಗುವವರಿಗಾಗಿ ಇಷ್ಟು ಖರ್ಚಾಗಿಬಿಡುವುದಲ್ಲಾ ಎಂದು ಒಂದು ದಿನವಾದರೂ ಅವನಾಗಲಿ ಅವನ ಹೆಂಡತಿಯಾಗಲಿ ಭಾವಿಸಿದವರಲ್ಲ. ಸ್ವಾರ್ಥವನ್ನು ಬಿಟ್ಟು ನಿಜವಾದ ಧರ್ಮಬುದ್ಧಿಯಿಂದ ಖರ್ಚುಮಾಡಿದಷ್ಟೂ ದೇವರು ಹೆಚ್ಚುಹೆಚ್ಚಾಗಿ ಕೊಡುವನೆಂದು ಅವನಿಗೆ ಒಂದು ಗೊಡ್ಡುನಂಬಿಕೆಯಿತ್ತು; ಅದರಂತೆ ಅವನಿಗೆ ಒಂದುವರ್ಷವಾಗಲಿ ಯಾವುದಾದರೂ ಒಂದು ವಿಧದಲ್ಲಿ ಹಿಂದಕ್ಕಿಂತ ಹೆಚ್ಚಾಗಿ ಸಂಪಾದನೆಯಾಗದೇ ಇರುತ್ತಿರಲಿಲ್ಲ. ಕೊನೆಗೆ ಅವನು ಧರ್ಮಾರ್ಥವಾದ ಒಂದು ವಿದ್ಯಾರ್ಥಿನಿಲಯವನ್ನು ಏರ್ಪಾಡುಮಾಡಿ ಅದನ್ನು ನಡೆಸುತ್ತ ಬಂದನು. ಇದು ಬಹಳ ವರ್ಷಗಳಾದ ಮೇಲೆ ನಡೆದ ಮಾತು. ಇದಕ್ಕೆ ಮುಂಚೆ ಅವನು ಸಂಸಾರ ಹೂಡಿದ ಹೊಸದರಲ್ಲಿ ಒಂದು ಸಂಗತಿ ನಡೆಯಿತು. ಅದರಿಂದ ಅವನ ಮತ್ತು ಸೀತಮ್ಮನ ಮನಸ್ಸು ಬಡವಿದ್ಯಾರ್ಥಿಗಳ ಕಷ್ಟವನ್ನು ನೋಡಿ ಹೇಗೆ ಬೆಣ್ಣೆಯಂತೆ ಕರಗಿಹೋಗುತ್ತಿತ್ತೆಂದೂ, ತಮ್ಮ ಸುಖವನ್ನಾದರೂ ಒತ್ತರಿಸಿ ಹೇಗೆ ಅವರು ಹುಡುಗರ ಸುಖವನ್ನು ನೋಡುತ್ತಿದ್ದರೆಂದೂ ಗೊತ್ತಾಗುತ್ತದೆ.

ಒಂದುದಿನ ಮಧ್ಯಾಹ್ನಕ್ಕೆ ಸರಿಯಾಗಿ ಮಾಧವರಾಯನು ಎಲ್ಲಿಂದಲೋ ತುಂಬ ಆಯಾಸಪಟ್ಟು ಮನೆಗೆ ಬಂದನು. ಮೈತುಂಬ ಬೆವರು ಹರಿಯುತ್ತಿತ್ತು. ಸೀತಮ್ಮನು ಲಾವಂಚದ ಬೀಸಣಿಗೆಗೆ ಹೂಜಿಯ ನೀರನ್ನು ಹಾಕಿ ಬೀಸಿಕೊಳ್ಳುವುದಕ್ಕೆ ಕೊಟ್ಟು ನಿಂಬೆಹಣ್ಣಿನ ಪಾನಕ ಮಾಡುತ್ತಿದ್ದಳು. ಅಷ್ಟುಹೊತ್ತಿಗೆ ಸರಿಯಾಗಿ ಒಬ್ಬ ಹುಡುಗನು ಹೊರಗೆ "ಭವತಿ ಭಿಕ್ಷಾಂ ದೇಹಿ!" ಎಂದು ಕೂಗಿದನು. ಸೀತಮ್ಮನು "ಹೋಗಿಬಿಟ್ಟು ಬಾಪ್ಪ" ಎಂದಳು. ಅದು ಅವನಿಗೆ ಕೇಳಲಿಲ್ಲವೋ ಏನೋ, ಪುನಃ "ಭವತಿ ಭಿಕ್ಷಾಂ ದೇಹಿ" ಎಂದನು. ಸೀತಮ್ಮನು ಸ್ವಲ್ಪ ಬೇಸರಪಟ್ಟುಕೊಂಡು "ಕೈಯಲ್ಲಿ ಕೆಲಸವಿದೆ, ಒಂದುದಿನ ಹೋಗಿಬಾ ಅಂದರೆ ಹೋಗಬಾರದೇನೋ?" ಎಂದು ಸ್ವಲ್ಪ ಗದರಿಸಿದಳು. ಗಂಡನು ತುಂಬ ಆಯಾಸಪಟ್ಟು ಬಂದಿರುವಾಗ ತಾನು ಪಾನಕ ಮಾಡುತ್ತಿರುವುದನ್ನು ಬಿಟ್ಟು ಎದ್ದುಹೋಗಲು ಅವಳಿಗೆ ಮನಸ್ಸು ಬರಲಿಲ್ಲ. ಕೂಡಲೆ ಮಾಧುವು ಮೆಲ್ಲಗೆ 'ಸೀತಾ!' ಎಂದನು.

ಸೀತೆಯು ಕತ್ತೆತ್ತಿ ನೋಡಿದಳು.

"ಅದನ್ನು ಅಲ್ಲಿಡು; ಎದ್ದುಹೋಗಿ ಮೊದಲು ಆ ಹುಡುಗನಿಗೆ ಅನ್ನಹಾಕಿಬಿಟ್ಟು ಬಾ! ಪಾನಕವನ್ನು ನಾನು ಮಾಡಿಕೊಳ್ಳುತ್ತೇನೆ."

"ಇಷ್ಟುಹೊತ್ತಿಗೆ ಆ ಹುಡುಗ ಹೊರಟುಹೋಗಿರಬಹುದು."

"ಹೋಗಿ ನೋಡು; ಮಗ್ಗಲು ಮನೆಗೆ ಹೋಗಿದ್ದರೆ ಕರೆ."

ಸೀತಮ್ಮನು ಹೊರಗೆ ಬಂದುನೋಡಲು ಆ ಹುಡುಗನು ಇನ್ನೂ ನಿಂತಿದ್ದನು. ಹುಡುಗ ಇನ್ನೂ ಚಿಕ್ಕವನು—ಸುಮಾರು ಹತ್ತು ಹನ್ನೆರಡು ವರ್ಷವಿರಬಹುದು. ಕೈಯಲ್ಲಿ ಒಂದು ಒದ್ದೆಯ ಜೋಳಿಗೆ, ಒಂದು ಸಣ್ಣ ಅಲ್ಯೂಮಿನಮ್ ಬಟ್ಟಲು; ಒಂದು ಪದರದ ಒಂದು ಕೊಳೆಯ ಬಟ್ಟೆಯನ್ನು ಉಟ್ಟುಕೊಂಡಿದ್ದನು; ಹೊದ್ದುಕೊಂಡಿದ್ದದ್ದೂ ಹಾಗೇ ಇತ್ತು; ತಲೆಯು ಒಂದು ಪೊದೆಯಾಗಿಯೂ ಮುಖವು ಒಣಗಿದ ನಿಂಬೇಕಾಯಿನಂತೆಯೂ ಇದ್ದುವು. ಅವನು ಅಲ್ಲಿಯೇ ಇದ್ದದ್ದನ್ನು ನೋಡಿ ಸೀತಮ್ಮನು ಅನ್ನವನ್ನು ತಂದುಹಾಕಿದಳು. ಅಷ್ಟುಹೊತ್ತಿಗೆ ಮಾಧವರಾಯನೂ ಎದ್ದುಬಂದು ಆ ಹುಡುಗನನ್ನು ನೋಡಿ "ನಿನ್ನ ಹೆಸರೇನೋ ಹುಡುಗ?" ಎಂದು ಕೇಳಿದನು. "ನನ್ನ ಹೆಸರು ಶಿವು" ಎಂದು ಆ ಹುಡುಗನು ಉತ್ತರ ಕೊಟ್ಟನು.

ಮಾಧವರಾಯನು ಪಾನಕವನ್ನು ಮಾಡಿಕೊಂಡಿರಲಿಲ್ಲವಾದಕಾರಣ ಸೀತಮ್ಮನು ಪುನಃ ಬಂದು ಅದನ್ನು ಮಾಡಿ ಒಂದು ಬೆಳ್ಳಿಯ ಲೋಟಕ್ಕೆ ಹಾಕಿ

ಗಂಡನ ಕೈಗೆ ಕೊಡುವುದಕ್ಕೆ ಹೋದಳು; ಆಗ ಅವನ ಮುಖದಲ್ಲಿ ಆಯಾಸದ ಚಿಹ್ನೆಯಿರಲಿಲ್ಲ ; ಏನೋ ಯೋಚನೆ ಮಾಡುವನಂತಿದ್ದನು. ಲೋಟವನ್ನು ಕೈಗೆ ತೆಗೆದುಕೊಂಡು " ಸೀತಾ ! " ಎಂದನು.

" ಏನು ? "

" ನಿನಗೆ ಆ ಹುಡುಗನ ಮೇಲೆ ಸಿಟ್ಟು ಬಂತೇನು ? "

" ಸಿಟ್ಟೇನೂ ಇಲ್ಲ ; ನೀವು ದಣಿದು ಆಯಾಸಪಟ್ಟು ಬಂದಿದ್ದಿರಿ ; ನಿಮಗೆ ಸ್ವಲ್ಪ ಪಾನಕಮಾಡಿ ಕೊಡೋಣವೆಂದು ಹೋದಾಗಲೇ ಅವನು ಬಂದನಲ್ಲಾ, ಅದಕ್ಕೆ 'ಹೋಗಿಬಿಟ್ಟು ಬಾ ' ಎಂದೆ, ಅಷ್ಟೆ "

" ಅವರ ಮೇಲೆ ಸಿಟ್ಟುಮಾಡಬಾರದು. ಸೀತಾ ! ಪಾಪ, ಆ ಹುಡುಗರು ಓದಬೇಕೆಂಬ ಆಸೆಯಿಂದ ಎಷ್ಟೆಷ್ಟೋ ಬಳಲುತ್ತಾರೆ; ಅವರಿಗೆ ಹೊತ್ತಿಗೆ ಗೊತ್ತಿಗೆ ಅನ್ನವಿಲ್ಲ ನೀರಿಲ್ಲ, ಹೀಗಿರುತ್ತಾರೆ; ಒಂದೊಂದು ದಿನ ಉಪವಾಸ ಕೂಡ ಇದ್ದು ಬಿಡುತ್ತಾರೆ. ಏನೋ, ದೇವರು ನಮಗೆ ಒಂದು ತುತ್ತು ಅನ್ನವನ್ನು ಕೊಟ್ಟಿರುವುದರಿಂದ ಅವರು ನಮ್ಮ ಮನೆಯ ಬಾಗಿಲಿಗೆ ಬರುತ್ತಾರೆ; ಅಂಥವರಿಗೆ ನಾವು ಕೊಡದೇ ಇನ್ನಾರು ಕೊಡಬೇಕು ? ಅವರು ತಾಯಿತಂದೆಗಳನ್ನು ಬಿಟ್ಟು ಬಂದಿರುತ್ತಾರೆ; ಅನೇಕರಿಗೆ ತಾಯಿತಂದೆ ಯಾರೂ ಇರುವುದಿಲ್ಲ ; ಅಂಥವರಿಗೆ ನಾವೇ ತಾಯಿ ತಂದೆ ಎಲ್ಲ. ಅಂಥವರಿಗೆ ಸಿಡುಕಿನಿಂದ ಅನ್ನಹಾಕಿದರೆ ಅದು ಅವರ ಮೈಗೆ ಹತ್ತುವುದಿಲ್ಲ. ನಮಗೆ ಅನ್ನದಾನದ ಫಲವೂ ಬರುವುದಿಲ್ಲ. ಸೀತಾ ! ಇನ್ನು ಮೇಲೆ ನೀನು ನನಗೋಸ್ಕರವಾದರೂ ಆ ಬಡಪಾಯಿಗಳ ಮೇಲೆ ಯಾವ ಕಾರಣದಿಂದಲೂ ಸಿಟ್ಟುಮಾಡಬೇಡ."

ಸೀತೆ ಅವನ ಪಕ್ಕದಲ್ಲಿಯೇ ಸುಮ್ಮನೆ ಮಾತಿಲ್ಲದೆ ನಿಂತಿದ್ದಳು ; ಮುಖ ತಗ್ಗಿಹೋಗಿತ್ತು.

" ನಾನು ಹೀಗೆ ಹೇಳುತ್ತಾನೆಂದು ಕೋಪವೇ, ಸೀತಾ ? "

ಸೀತೆ ಸುಮ್ಮನಿದ್ದಳು.

" ಸೀತಾ, ನಾನು ಹೀಗೆ ಹೇಳಿದೆನೆಂದು ನೊಂದುಕೊಳ್ಳಬೇಡ ; ನಿನ್ನಲ್ಲಿ ತಪ್ಪೆಣಿಸುವುದಕ್ಕೆ ಹೀಗೆ ಹೇಳಿದೆನೆಂದು ಭಾವಿಸಬೇಡ ; ಏನೋ, ಅವರ ಕಷ್ಟಗಳೆಲ್ಲಾ ನನಗೆ ಚೆನ್ನಾಗಿ ಗೊತ್ತು ; ಆದುದರಿಂದ ಹೀಗೆ ಹೇಳಿದೆ. ಒಂದಾನೊಂದು ಕಾಲದಲ್ಲಿ ನಾನೂ ಜೋಳಿಗೆ ಹಿಡಿದು ಹೀಗೆ ಬೀದಿಬೀದಿ ಅಲೆಯುತ್ತಿದ್ದೆ. ನಿಮ್ಮ ಮನೆಗೂ ಭಿಕ್ಷಾನ್ನಕ್ಕೆ ಬರುತ್ತಿದ್ದೆ. ಆಗ ನೀನು ಇನ್ನೂ ಸಣ್ಣ ಹುಡುಗಿ; ಒಂದು ದಿನ ಭಿಕ್ಷಾನ್ನಕ್ಕಾಗಿ ನಿಮ್ಮ ಮನೆಯ ಬಾಗಿಲಗೆ ಬಂದೆ; ಆಗ ನಿಮ್ಮ ತಾಯಿ

ಏನೋ ತಿಂಡಿಯನ್ನು ತೆಗೆದುಕೊಂಡು ಹೋಗಿ ಹಾಕು ಎಂದರು. ನೀನು ಆಟದ ಲ್ಲಿದ್ದದ್ದರಿಂದ ನನ್ನನ್ನು “ನಿಂತುಕೊಂಡಿರೋ ಬಂದೆ!” ಎಂದು ಗದರಿಸಿದೆ. ನಾನು ಕಾದಿರಬೇಕಾಯಿತು. ಇದೇನೋ ಬಹಳ ಹಿಂದಿನ ಮಾತು; ನಿನಗೆ ಮರೆತು ಹೋಗಿದೆ; ಆದರೆ ನಾನು ಮರೆತಿಲ್ಲ.”

ಸೀತೆಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಮಾಧು ಪುನಃ ಹೇಳ ತೊಡಗಿದನು.

“ಸೀತಾ, ನಿನ್ನ ತಂದೆ ತಾಯಿಗಳ ಗುರುತು ಆಗುವುದಕ್ಕೆ ಮೊದಲು ನನಗೆ ಬಹಳ ಕಷ್ಟವಾಗುತ್ತಿತ್ತು; ಕೆಲವು ಮನೆಯಲ್ಲಿ ತಂಗಳನ್ನವನ್ನು ಹಾಕುತ್ತಿದ್ದರು, ಮತ್ತೆ ಕೆಲವರು ಹಳಸಿದ ಅನ್ನವನ್ನು ಕೂಡ ಹಾಕಿಬಿಡುತ್ತಿದ್ದರು. ಬರಿಯ ಹೊಟ್ಟೆಯಲ್ಲಿ ಎಷ್ಟೋ ರಾತ್ರಿಗಳನ್ನು ಕಳೆದಿರುವೆನು. ಈಗ ಅವುಗಳನ್ನು ನೆನೆಸಿಕೊಂಡರೆ ಕಣ್ಣಿನಲ್ಲಿ ನೀರು ಬರುವುದು; ದೇವರ ದಯದಿಂದ ನಿನ್ನ ತಂದೆ ತಾಯಿಗಳ ಗುರುತು ಆಯಿತು. ಆಮೇಲೆ ನನಗೆ ಎಷ್ಟೋ ಸುಲಭವಾಯಿತು; ನಿನ್ನ ತಂದೆಯಿಂದ ನನಗೆ ಎಷ್ಟೋ ವಿಧದಲ್ಲಿ ಸಹಾಯವಾಯಿತು; ಅವರೇ ನನ್ನ ಭಾಗದ ದೇವರಾಗಿದ್ದರು.”

ಸೀತೆಗೆ ಇನ್ನು ತಡೆಯಲಾಗಲಿಲ್ಲ; ಕಣ್ಣಿನಿಂದ ನೀರು ಹರಿದುಹೋಯಿತು; ಅವಳು ಸುಮ್ಮನೆ ನೆಲವನ್ನು ನೋಡುತ್ತ ಕೇಳುತ್ತಿದ್ದಳು. ಮಾಧು ಪುನಃ ಪ್ರಾರಂಭಿಸಿದನು.

“ಸೀತಾ, ಮೂರು ವರ್ಷಗಳ ಕಾಲ ಮಲಗುವುದಕ್ಕೆ ಹಾಸಿಗೆ ಇಲ್ಲದೆ ಬರೀ ಗೋಣೀತಟ್ಟಿನ ಮೇಲೆ ಮಲಗಿ ಕಾಲಕಳೆದೆ. ಒಂದು ಇಟ್ಟಿಗೆಯ ಮೇಲೆ ಹರಳೆಣ್ಣೆಯ ಹಣತೆಯೊಂದನ್ನು ಇಟ್ಟುಕೊಂಡು ರಾತ್ರಿಯ ಹೊತ್ತು ಓದುತ್ತಿದ್ದೆ. ನಾನು ಇದ್ದ ಕೊಠಡಿಯು ಚಿಕ್ಕದು; ಮೂಲೆಯಿಂದ ಮೂಲೆಗೆ ಮಲಗಬೇಕಾಗಿತ್ತು. ಒಂದು ಮೂಲೆಯಲ್ಲಿ ಹಣತೆ; ಒಂದು ಮೂಲೆಯಲ್ಲಿ ಪುಸ್ತಕ; ಮತ್ತೊಂದು ಮೂಲೆಯಲ್ಲಿ ಒಂದು ತುಂಡುಪೊರಕೆ; ಹೊದಿಯುವುದಕ್ಕೆ ಒಂದು ಪಂಚೆ ಬಿಟ್ಟರೆ ಮತ್ತೊಂದಕ್ಕೆ ಗತಿಯಿರಲಿಲ್ಲ; ಅಂಗಿಯೊಳಗೆ ಒಂದೆರಡು ಪುಸ್ತಕಗಳನ್ನು ಸುತ್ತಿ ಅದನ್ನೇ ತಲೆಯಕೆಳಗೆ ಇಟ್ಟುಕೊಳ್ಳುತ್ತಿದ್ದೆ. ಪುಸ್ತಕಕ್ಕೆ ದುಡ್ಡಿಲ್ಲ; ಪರೀಕ್ಷೆಗೆ ಹಣಕಟ್ಟುವುದಕ್ಕೆ ದುಡ್ಡಿಲ್ಲ; ಯಾರಾರನ್ನೋ ಅಂಗಲಾಚಿ ಬೇಡಿದೆ, ಒಂದು ಕಾಸೂ ಸಿಕ್ಕಲಿಲ್ಲ; ನಿರಾಶನಾಗಿ ಊರಿಗೆ ಹೋಗಬೇಕೆಂದಿದ್ದೆ; ಆಗ ನಿನ್ನ ತಂದೆಯು ನನ್ನ ಭಾಗದ ದೇವರ ಹಾಗೆ ಬಂದು ಸಹಾಯಮಾಡಿದರು......”

* * * *

ಆದಿನ ರಾತ್ರೆ ಸುಮಾರು ಹನ್ನೆರಡು ಗಂಟೆಯ ಸಮಯ ; ಮಾಧವರಾಯನು ಇನ್ನೂ ಒಂದು ಪುಸ್ತಕವನ್ನು ಹಿಡಿದುಕೊಂಡು ಓದುತ್ತಿದ್ದಾನೆ; ದೀಪವು ಉರಿಯುತ್ತಿದೆ; ಮಗ್ಗುಲಲ್ಲಿ ಕೃಷ್ಣಮೂರ್ತಿಯೂ ಸೀತೆಯೂ ಮಲಗಿ ನಿದ್ದೆ ಹೋಗುತ್ತಿದ್ದಾರೆ; ಸೀತೆಯು ಇದ್ದಕ್ಕಿದ್ದ ಹಾಗೆ ಕನವರಿಸಿಕೊಂಡಳು—

" ಬಾಪ್ಪ, ಬಾ ನನ್ನಕಂದ ! ಇಲ್ಲೇ ಊಟಮಾಡು ಬಾಮ್ಮ ! "

ಮಾಧು ತಿರುಗಿನೋಡಿದನು, ಯಾರೂ ಇರಲಿಲ್ಲ; ಮೂರ್ತಿಯು ಮಲಗಿತ್ತು; ಆದ್ದರಿಂದ ಕನವರಿಕೆಯೆಂದು ತಿಳಿದು " ಸೀತಾ, ಸೀತಾ ! ಎಚ್ಚರ ಮಾಡಿಕೊಳ್ಳೆ ; ಕಂದ ಯಾರೆ ? ಊಟ ಯಾರು ಮಾಡಬೇಕೆ ? " ಎಂದನು. ಅವಳು ಕಣ್ಣಿನಿಂದ ನೀರು ಸುರಿಸುತಾ್ತ ಅರ್ಧ ಎಚ್ಚರಿನಲ್ಲಿ, " ಶಿವು, ಭಿಕ್ಷಾನ್ನಕ್ಕೆ ಬಂದಿದ್ದ ; ಇವತ್ತು ಎಲ್ಲಿಯೂ ಸಿಕ್ಕಲಿಲ್ಲ ತಾಯಿ ಎಂದ—ನೀವು ಹೇಳಿದ್ದೆಲ್ಲಾ ಜ್ಞಾಪಕಕ್ಕೆ ಬಂತು ; ಇಲ್ಲೇ ಊಟಮಾಡು ಏಳು ಎಂದೆ " ಎಂದಳು.

" ಇದ್ಯಾಕೆ ಅಳುತ್ತೀಯೇ ? ಶಿವು ಎಲ್ಲಿದ್ದಾನೆಯೇ, ಎಚ್ಚರಮಾಡಿಕೊಳ್ಳೇ ! "—ಎಂದು ಮಾಧುವು ಸ್ವಲ್ಪ ತಣ್ಣೀರನ್ನು ತಂದು ಅವಳ ಕಣ್ಣುಗಳನ್ನು ಒರೆಸಿದನು.

ಸೀತೆಗೆ ಎಚ್ಚರವಾಯಿತು; ನಾಚಿಕೆಯಿಂದ ನಕ್ಕು ಮುಸುಕು ಹಾಕಿಕೊಂಡು ಮಲಗಿಬಿಟ್ಟಳು.

ಮರುದಿನ ಎಂದಿನಂತೆ ಶಿವು ಭಿಕ್ಷಾನ್ನಕ್ಕೆ ಬಂದು—

" ಭವತಿ ಭಿಕ್ಷಾಂ ದೇಹಿ ! " ಎಂದು ಕೂಗಿದನು.

ಅದನ್ನು ಕೇಳಿ ಸೀತಮ್ಮನು ತಟ್ಟನೆ ಎದ್ದುಹೋಗಿ, ಆದರದಿಂದ ಅವನ ತಲೆಯನ್ನು ಸವರಿ ಬೆನ್ನುತಟ್ಟಿ, " ಶಿವು, ಇನ್ನುಮೇಲೆ ನೀನು ಭಿಕ್ಷಾನ್ನಕ್ಕೆ ಹೋಗಬೇಡ ; ನಮ್ಮ ಮನೆಯಲ್ಲಿಯೇ ಇದ್ದುಬಿಡು ; ಅವರು ನಿನಗೆ ಬೇಕಾದ ಪುಸ್ತಕ ಒಟ್ಟೆಬರೆಗಳನ್ನೆಲ್ಲಾ ಕೊಡಿಸುವರು " ಎಂದಳು.

ಅವನಿಗೆ ಆಶ್ಚರ್ಯವಾಯಿತು. ಅಲ್ಲಿಂದ ಮುಂದಕ್ಕೆ ಅವನು ಸೀತಮ್ಮನ ಇಷ್ಟದಂತೆ ಅವರ ಮನೆಯಲ್ಲಿಯೇ ನಿಂತನು. ಅಂದು ಹುಡುಗನಿಗೆ ಬಡಿಸುತ್ತ ಸೀತಮ್ಮನು

" ಶಿವು ನಿಮ್ಮ ಊರು ಯಾವುದು ? " ಎಂದು ಕೇಳಿದಳು.

" ನಂಗೊತ್ತಿಲ್ಲ."

" ನಿಮ್ಮ ಅಪ್ಪ ಅಮ್ಮ ಎಲ್ಲಿದಾರೆ ? "

" ನೀವೇ ನನ್ನ ಗೋಪು ಅಪ್ಪ ಅಮ್ಮ ಎಲ್ಲ. "

" ಏನು ? ನಿನಗೆ ತಂದೆ ತಾಯಿ ಯಾರೂ ಇಲ್ಲವೇ ? "

" ಗೋಪು ಒಂದು ದಿನ, ನಮ್ಮ ಅಪ್ಪ ಅಮ್ಮ ಸತ್ತು ಏಳೆಂಟು ವರ್ಷ ಆಯಿತೆಂದು ಹೇಳಿ ಅತ್ತ ; ನಾನೂ ಅತ್ತೆ ; ಅಷ್ಟೆ ; ನೀವೇ ನನ್ನ ಗೋಪು ಅಪ್ಪ ಅಮ್ಮ ಎಲ್ಲ."

ಸೀತೆಯ ಕಣ್ಣಿನಲ್ಲಿ ನೀರು ಬಂತು.

" ಗೋಪು ಯಾರು ? "

" ಗೋಪು ನನ್ನ ಅಣ್ಣ "

" ಅವರೆಲ್ಲಿದಾರೆ ? "

" ಅವನು ಆಸ್ಪತ್ರೇಲಿ ಸತ್ತುಹೋದ ; ಅವನೇ ಸಾಯುವಾಗ ನನ್ನ ಕರೆದು ' ಇನ್ನುಮೇಲೆ ನಿನಗೆ ಯಾರು ಅನ್ನಹಾಕುತ್ತಾರೆಯೋ ಅವರೇ ನಿನ್ನ ಗೋಪು ಅಪ್ಪ ಅಮ್ಮ ಎಲ್ಲ ; ನಾನು ಹೋಗುತ್ತೇನೆ " ಎಂದು ಹೇಳಿದ.

ಸೀತಮ್ಮನು ಕಣ್ಣೀರನ್ನು ಒರಸಿಕೊಂಡು " ಶಿವು, ಹಾಗಾದರೆ ನಿನಗೆ ಯಾರೂ ಇಲ್ಲವೇ ? " ಎಂದು ಕೇಳಿದಳು.

" ಇದಾರೆ "

" ಯಾರು ? "

" ನೀವೇ—ನನ್ನ ಗೋಪು ಅಪ್ಪ ಅಮ್ಮ ಎಲ್ಲಾ ! "



# ಕಾವ್ಯಾವಲೋಕನ

**ಸೋಮೇಶ್ವರಶತಕ**—ಕರ್ಣಾಟಕಸಾಹಿತ್ಯ ಪರಿಷತ್ತಿನಿಂದ ಪ್ರಕಟಿಸಲ್ಪಟ್ಟದ್ದು; ಕ್ರೌನ್ ಪುಟಗಳು xii + ೧೩೨: ಬೆಲೆ ೮ ಆಣೆ.

ಈ ಪುಸ್ತಕದಲ್ಲಿ ಸುಪ್ರಸಿದ್ಧವಾದ ಸೋಮೇಶ್ವರಶತಕವೂ, ಪ್ರತಿಪದ್ಯಕ್ಕೂ ತಾತ್ಪರ್ಯ ಟಿಪ್ಪಣಿಗಳೂ ಕೊನೆಯಲ್ಲಿ ಪೂರ್ವಕಥೆಗಳೂ ಅವುಗಳ ಮಧ್ಯೆ ಅಲ್ಲಲ್ಲಿ ಚಿತ್ರಗಳೂ ಕೊಡಲ್ಪಟ್ಟಿವೆ. ಈ ಕಥಾಭಾಗವೇ ಸುಲಭಶೈಲಿಯ ಸಣ್ಣ ಒಂದು ಗದ್ಯ ಕಥಾಗ್ರಂಥದಂತಿದ್ದು ಹುಡುಗರಿಗೆ ಓದುವುದಕ್ಕೆ ಬಹು ಸ್ವಾರಸ್ಯವಾಗಿದೆ. ಮುದ್ರಣ ಮುಂತಾದವುಗಳು ಅತ್ಯುತ್ತಮವಾಗಿವೆ. ಇದಕ್ಕೆ ಇಟ್ಟಿರುವ ಬೆಲೆಯೂ ಅತಿಸುಲಭವೆಂದೇ ಹೇಳಬಹುದು.

---

**ವಿಂಧ್ಯಾಚಲ** (ದ್ವಿತೀಯಖಂಡ)—ಲೇಖಕರು ಮು. ಗೋ. ಹ. ಹೊಸೂರ, “ಕರ್ನಾಟಕ ವಿದ್ಯಾವಿನೋದಿ” ಡೆಮ್ಮಿ ಪುಟಗಳು ೪೭ ಬೆಲೆ ೮ ಆಣೆ.

ಇದು ಮ|| ನಾರಾಯಣರಾವ ಹೊಸೂರ ಇವರಿಂದ ಅಗಡಿಯಲ್ಲಿ ಪ್ರಕಾಶಿಸಲ್ಪಡುತ್ತಿರುವ ವಿದ್ಯಾರಣ್ಯಮಾಲೆಯು ಹನ್ನೊಂದನೇ “ಪುಷ್ಪ” ಮತ್ತು “ಪ್ರೊ. ಶಿವರಾಮಪಂತ ಪರಾಂಜಪೆಯವರ ಕಾವ್ಯಮಯಕೃತಿಯ ಕನ್ನಡ ಅನುವಾದ”; ಮರಾಠರ ಇತಿಹಾಸಕ್ಕೆ ಸಂಬಂಧಪಟ್ಟ ಒಂದು ಕಾದಂಬರೀರೂಪವಾದ ಕಥೆಯು ಇದರಲ್ಲಿ ಉಕ್ತವಾಗಿದೆ. ಈ ಪುಸ್ತಕದಲ್ಲಿ ಕೊಟ್ಟಿರುವ ಮೂರು ಚಿತ್ರಗಳು ಚೆನ್ನಾಗಿವೆ.

---

**ಸಹ್ಯಾಚಲಾರೋಹಣ** (ಮಹಾಬಳೇಶ್ವರ)—ಶ್ರೀ ಬಲಭೀಮ ಗ್ರಂಥಮಾಲಿ ಕಾಗವಾಡ, ಪುಷ್ಪ ೧: ಕ್ರೌನ್ ಪುಟಗಳು ೬೨ ಬೆಲೆ ೮ ಆಣೆ.

ಇದು ಮಹಾಬಲೇಶ್ವರದ ಸೌಂದರ್ಯವನ್ನೂ ಐತಿಹಾಸಿಕ ಪ್ರಾಶಸ್ತ್ಯ ಮುಂತಾದವುಗಳನ್ನೂ ವರ್ಣಿಸುವ ಒಂದು ಚಿಕ್ಕಗ್ರಂಥ. ಗ್ರಂಥಕರ್ತರಾದ ಮ|| ಗಣೇಶ ಜೀವಾಜಿ ಸುರಪುರ, ಮತ್ತು ನಾರಾಯಣ ಹಣಮಂತ ಶೇಡಬಾಳಕರ ಇವರು ಈ ಸೌಂದರ್ಯವನ್ನು ತಾವು ಅನುಭವಿಸಿದಮೇಲೆ ಅದರ ಪರಿಚಯವು

ಇತರರಿಗೂ ಆಗಲೆಂಬ ಉದ್ದೇಶ್ಯದಿಂದ ಈ ಗ್ರಂಥವನ್ನು ಬರೆದಿದ್ದಾರೆ. ಮಹಾಬಲ ಗಿರಿಯ ಯಾತ್ರೆ ಮಾಡತಕ್ಕವರಿಗೆ ಈ ಪುಸ್ತಕವು ಅತ್ಯಂತ ಉಪಯುಕ್ತವಾದದ್ದು.

---

**ಕರ್ಣಾಟಕ ಭಾಷೋತ್ತೇಜಕ ಗ್ರಂಥಮಾಲಾ,** ಪುಷ್ಪ ೧
**ಬೆಲೆ ೬ ಆಣೆ.**

ಇದು "ಭಾರತಮಾತೆಯ ನೈಜಸ್ಥಿತಿಯೂ ಮತ್ತು ರಾಷ್ಟ್ರೀಯ ಉನ್ನತಿಯನ್ನು ನಿಖರಕ್ಕೆ ತಲಪಿಸಲು ನಾವು ಕೈಕೊಳ್ಳಬೇಕಾದ ಮಹತ್ತಾದ ಕಾರ್ಯಗಳೂ ಅವನ್ನು ಸಫಲಗೊಳಿಸುವ ಉಪಾಯಗಳೂ" ಯಾವುವೆಂದು ತೋರಿಸಲು ಪ್ರಯತ್ನಪಟ್ಟ ಮ|| ರಾಘವೇಂದ್ರರಾವ ರಂಗರಾವ ಚಾಕಲಬ್ಬಿಯವರು ಬರೆದಿರುವ ಒಂದು ಉಪನ್ಯಾಸ.

---

**ಕರ್ನಾಟಕ ಪ್ರಬಂಧಮಾಲಾ** (ನಂಬರ ೨)—"ಕರ್ನಾಟಕದ ಜಾಗ್ರೆತಿಯು" ಉಪನ್ಯಾಸ; ಮ|| ರಾಘವೇಂದ್ರರಾವ ಚಾಕಲಬ್ಬಿ ವಕೀಲ ಇವರು ಕೊಟ್ಟದ್ದು.

---

**ಪ್ರಕೃತಿಪಾಠ**—ಲೇಖಕರು ಮ|| ಎ. ಸೀತಾರಾಮಯ್ಯ: ಕ್ರೌನ್ ಪುಟಗಳು ೮೪
**ಬೆಲೆ ೮ ಆಣೆ.**

ಸಸ್ಯಸ್ವರೂಪವನ್ನು ತಿಳಿಸುವ ಒಂದು ಸಣ್ಣಗ್ರಂಥ. ಪಾಠಶಾಲೆಗಳಲ್ಲಿ ಸಸ್ಯಶಾಸ್ತ್ರವನ್ನು ಬೋಧಿಸುವ ಉಪಾಧ್ಯಾಯರ ಅನುಕೂಲ್ಯಕ್ಕೋಸ್ಕರ ಬರೆದದ್ದು.

---

**ಆಗಿಹೋಯಿತು ಹಬ್ಬವು!**—ಕೆಲವು ಪದ್ಯಗಳು; ಲೇಖಕರು, ಮ|| ಡಿ. ಹೆಚ್. ಹನುಮು.

---

ಈ ಗ್ರಂಥಗಳಲ್ಲದೆ ಮ|| ಶ್ರೀನಿವಾಸರ "ಸಣ್ಣಕಥೆಗಳು" (ದ್ವಿತೀಯ ಭಾಗ), ಮ|| ಡಿ. ವಿ. ಗುಂಡಪ್ಪನವರ "ಗೋಖಲೆಯವರ ಚರಿತ್ರೆ," ಮ|| ಎಸ್. ಕೆ. ನರಸಿಂಹಯ್ಯನವರ "ಮಾಗಡಿ ಕೆಂಪೇಗೌಡ" ಮುಂತಾದ ಇನ್ನು ಕೆಲವು ದೊಡ್ಡಗ್ರಂಥಗಳೂ ಬಂದಿವೆ. ಇವುಗಳಮೇಲಣ ವಿಮರ್ಶೆಯನ್ನು ಈ ಸಂಚಿಕೆಯಲ್ಲಿ ಕೊಡಲು ಸ್ಥಳಸಂಕೋಚದಿಂದ ಸಾಧ್ಯವಾಗದಿರುವುದಕ್ಕಾಗಿ ವಿಷಾದಿಸುವೆವು.

---



# ವ ಸ್ತು ಕೋ ೯ ಶ

ಪರೀಕ್ಷೆಯು ವಿದ್ಯಾಬುದ್ಧಿಸಾಮರ್ಥ್ಯಗಳನ್ನು ಅಳೆಯಬಲ್ಲ ಒಂದು ವಿಧವಾದ ಸೇರು ಅಥವಾ ಕೊಳಗದಂತೆ ಭಾವಿಸಲ್ಪಟ್ಟಿರುತ್ತದೆಯಷ್ಟೆ. ಶಿಕ್ಷಣಶಾಸ್ತ್ರ ಪ್ರವೀಣರು, ಈ ಸೇರು ಒಡಕುಸೇರು ಎಂದೂ ಇದರಲ್ಲಿ ಅಳೆಯುತ್ತಿರುವ ಕ್ರಮವು ತೃಪ್ತಿಕರವಾಗುವುದಿಲ್ಲವೆಂದೂ ಗೊಣಗುತ್ತಲೇ ಇದ್ದಾರೆ. ಆದರೂ ಮತ್ತೊಂದು ಒಳ್ಳೆಯ ಸೇರು ಸಿಕ್ಕಿ ಅದರಲ್ಲಿ ಅಳೆಯುವ ಕ್ರಮವು ಸರಿಯಾಗಿ ಏರ್ಪಟ್ಟ ಹೊರತು, ಇರುವುದನ್ನು ಬಿಡುವುದಕ್ಕಾಗುವುದಿಲ್ಲ. ನಮ್ಮ ಕಣ್ಣುಮುಂದೆ ಬಿದ್ದಿರುವ ರಾಶಿಗಳನ್ನು ಅಳೆದ ಶಾಸ್ತ್ರಮಾಡಿ ಉಪಯೋಗಿಸಿಕೊಳ್ಳದೆ ಬಿಡುವುದಕ್ಕೆ ಆಗುವಂತಿಲ್ಲ. ದೊಡ್ಡರಾಶಿಗಳೇನೋ ಉನ್ನತ ಗಿರಿಶಿಖರಗಳಂತೆ ಸ್ಥೂಲದೃಷ್ಟಿಗೇ ಗೊತ್ತಾಗಿಬಿಡುವುವು. ಒಂದು ಹಿಡಿ ಹೆಚ್ಚುಕಡಿಮೆ ಇರತಕ್ಕ ಸಣ್ಣ ರಾಶಿಗಳ ನಿಷ್ಕೃಷ್ಟವಾದ ಪ್ರಮಾಣವು ಗೊತ್ತಾಗಿ ಆಗಬೇಕಾದದ್ದು ಅಷ್ಟರಲ್ಲೇ ಇದೆ. ಅಂತೂ ಇಂತೂ ಈ ಒಡಕು ಸೇರಿನಿಂದ ಏನುಪ್ರಯೋಜನವೋ!—ಶಂಖದ ಬಾಯಲ್ಲಿ ನೀರುಬಿದ್ದ ಹಾಗೆ, ವಸಿಷ್ಠರು ಬ್ರಹ್ಮರ್ಷಿ ಎಂದ ಹಾಗೆ ಅದಕ್ಕೆ ಒಂದು ಪ್ರಾಮಾಣ್ಯದಾಯಕತ್ವವು ಬರುವುದು.

ಇದಕ್ಕೆ ಈಗಿನ ಇಂಗ್ಲಿಷ್ ವಿದ್ಯಾಭ್ಯಾಸಕ್ರಮವು ರೂಢಿಗೆ ಬಂದಾಗಿನಿಂದ ಎಲ್ಲಾ ವಿಧವಾದ ಉದಾಹರಣೆಗಳೂ ದೊರೆಯುತ್ತವೆ. ಪ್ರಕೃತದಲ್ಲಿ, ಮ|| ಎಚ್. ಏ. ವರದರಾಜಯ್ಯಂಗಾರ್ಯರು ಒಂದು ಒಳ್ಳೆಯ ಉದಾಹರಣೆಯಾಗಿದ್ದಾರೆ. ಮ|| ವರದರಾಜಯ್ಯಂಗಾರ್ಯರು ಈಗ ಕೆಲವು ವರ್ಷಗಳ ಕೆಳಗೆ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗಮಾಡುತ್ತಿದ್ದರು. ಆಗಲೇ ಅವರು ಒಳ್ಳೆಯ ಮೇಧಾವಿಗಳೆಂದು ಎಲ್ಲರ ಗಮನಕ್ಕೂ ಬಂದಿದ್ದರು. ಅವರನ್ನು ಬಿ. ಎಸ್ ಸಿ. ಪರೀಕ್ಷೆಯಲ್ಲಿ ಅಳೆದುದಾಯಿತು. ಅನಂತರ ಅವರು ಬೊಂಬಾಯಿಗೆ ಹೋದರು. ದೀಪವನ್ನು ತಂದಿಟ್ಟರೆ ಬೆಳಕಾಗುವುದು ಎಷ್ಟುಹೊತ್ತು? ಅಲ್ಲಿ ಅವರ ವಿದ್ಯಾಬುದ್ಧಿಸಾಮರ್ಥ್ಯಗಳು ಪ್ರಕಾಶಕ್ಕೆ ಬಂದು ದೊಡ್ಡದೊಡ್ಡ ತರಗತಿಗಳಿಗೆ ಪಾಠ ಹೇಳುವುದಕ್ಕಾಗಿ ನಿಯಮಿಸಲ್ಪಟ್ಟರು. ಕೊನೆಗೆ ಈ ವರ್ಷ ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಮೊದಲನೆಯವರಾಗಿ ಉತ್ತೀರ್ಣರಾದರು. ಬೆಳೆ

ಯುವ ಪೈರು ಮೊಳಕೆಯಲ್ಲಿಯೇ ತಿಳಿದಿದ್ದದ್ದರಿಂದ ಇಂಥ ಫಲವು ಅನಿರೀಕ್ಷಿತವಲ್ಲ ದಿದ್ದರೂ ಅತ್ಯಂತ ಸಂತೋಷದಾಯಕವೇ ಸರಿ. ಮ|| ವರದರಾಜಯ್ಯಂಗಾರ್ಯರು ಮೈಸೂರು ದೇಶದವರು, ಕನ್ನಡನಾಡಿನವರು, ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿ ಗಳು, ಪ್ರಬುದ್ಧ ಕರ್ಣಾಟಕದ ಪೋಷಕರು ಮತ್ತು ಅಭಿಮಾನಿಗಳು, ಆದ್ದರಿಂದ ಅವರ ಜಯಸಂತೋಷಗಳಲ್ಲಿ ನಾವೂ ಭಾಗಿಗಳಾಗಿ ಸಂತೋಷಿಸಿ ಅವರನ್ನು ಅಭಿ ನಂದಿಸುತ್ತೇವೆ.

ಮ|| ಅಯ್ಯಂಗಾರ್ಯರು ಮುಂದೆ ದೊಡ್ಡಪದವಿಗೆ ಬರಬಹುದು ; ಅಧಿಕಾರ ನಿಮಿತ್ತವಾಗಿ ಎಲ್ಲೆಲ್ಲಿಯೋ ಇರಬೇಕಾಗಬಹುದು ; ಹೇಗಿದ್ದರೂ, ಎಲ್ಲಿದ್ದರೂ ತಾವು ಮೈಸೂರು ದೇಶೀಯರೆಂದೂ ಕನ್ನಡಿಗರೆಂದೂ ಮರೆಯದೆ ಅವುಗಳ ಗೌರವ ಅಭಿವೃದ್ಧಿಗಳನ್ನು ತಮ್ಮ ದೃಷ್ಟಿಪಥದಲ್ಲಿಟ್ಟುಕೊಂಡಿರಲೆಂದು ಹಾರೈಸುತ್ತೇವೆ.

---

**ಕರ್ಣಾಟಕ ಕವಿಚರಿತೆ**

ಪ್ರಾಕ್ತನವಿಮರ್ಶ ವಿಚಕ್ಷಣ ರಾವ್‌ಬಹದ್ದೂರ್ ಆರ್. ನರಸಿಂಹಾಚಾ ರ್ಯರು ಎಂದಿನಂತೆ ಕರ್ಣಾಟಕ ಸಂಘದಮೇಲೆ ಅಭಿಮಾನವಾತ್ಸಲ್ಯಗಳನ್ನಿಟ್ಟು "ಶಾಸನಪದ್ಯಮಂಜರಿ" ಮತ್ತು "ಕವಿಚರಿತೆ"ಯ ಪ್ರಥಮ ಸಂಪುಟ (ಪರಿಷ್ಕೃತಮುದ್ರಣ) ಇವುಗಳ ಒಂದೊಂದು ಪ್ರತಿ ಯನ್ನು ಕಳುಹಿಸಿಕೊಟ್ಟಿದ್ದಾರೆ. ಇದಕ್ಕಾಗಿ ಸಂಘವು ಆಚಾರ್ಯರಿಗೆ ಅತ್ಯಂತ ಕೃತಜ್ಞವಾಗಿದೆ.

ಕನ್ನಡದಲ್ಲಿ ಗ್ರಂಥಗಳು ದ್ವಿತೀಯ ಮುದ್ರಣವಾಗುವ ಸ್ಥಿತಿಗೆ ಬಂದು ವೆಂದು ಕೇಳುವುದೇ ಒಂದು ಅಪೂರ್ವ ಮತ್ತು ಶುಭಸಂಗತಿ. ಆದ್ದರಿಂದ ಕವಿಚರಿತೆ ಯಂಥ ಪುಸ್ತಕವು ಎರಡನೆಯ ಸಾರಿ ಮುದ್ರಿತವಾಗಿ ಕನ್ನಡಿಗರ ಕೈಸೇರಿರುವು ದೆಂಬ ವಿಷಯವು ತುಂಬಾ ಸಂತೋಷಕರವಾಗಿದೆ. ಮ|| ರಾ|| ಎಸ್. ಜಿ. ನರ ಸಿಂಹಾಚಾರ್ಯರವರೂ, ಆರ್. ನರಸಿಂಹಾಚಾರ್ಯರವರೂ ಈ ಗ್ರಂಥರಚನೆಯಿಂದ ಕನ್ನಡಕ್ಕೆ ಮಾಡಿರುವ ಉಪಕಾರವು ಅಷ್ಟಿಷ್ಟೆಂದು ಹೇಳುವಹಾಗಿಲ್ಲ. ಈ ಗ್ರಂಥವು ಮೊದಲು ಪ್ರಕಾಶಕ್ಕೆ ಬಂದು ಸುಮಾರು ಹದಿನೈದು ವರ್ಷಗಳಾದರೂ ಅದೇ ವಿಷ ಯದಮೇಲೆ ಅಂಥ ಮತ್ತೊಂದು ಪುಸ್ತಕವು ಇನ್ನೂ ಹುಟ್ಟಿಲ್ಲ. ಆದಕ್ಕೋಸ್ಕರವೇ ಇಂಥ ಉತ್ತಮಗ್ರಂಥಕ್ಕೆ ಬೆಲೆಯು ಮೂರುರೂಪಾಯಿಯಾಗಲಿ ನಾಲ್ಕುರೂಪಾ ಯಿಯಾಗಲಿ, ಕೊಂಡುಕೊಳ್ಳುವವನು ಬಡವನಾಗಲಿ ಐಶ್ವರ್ಯವಂತನಾಗಲಿ (ಕನ್ನ ಡಿಗರಲ್ಲಿ ಇರುವ ಐಶ್ವರ್ಯವು ಗೊತ್ತೇ ಇದೆ!) ಅದು ಹೆಚ್ಚಲ್ಲವೆಂದು ಭಾವನೆ ಯಿದೆ. ಮೈಸೂರು ವಿಶ್ವವಿದ್ಯಾಲಯದವರು ಈ ಗ್ರಂಥದ ಮಹತ್ವವನ್ನು ಅರಿತೇ

ದ್ವಿತೀಯಮುದ್ರಣ ಮಾಡಿಸುವುದಕ್ಕಾಗಿ ೫೦೦ ರೂಪಾಯಿಗಳನ್ನು ಸಹಾಯಮಾಡಿದರು. ಈ ಕಾರಣದಿಂದಲಾದರೂ ಈ ಪುಸ್ತಕದ ಬೆಲೆಯನ್ನು ಸ್ವಲ್ಪ ಕಡಿಮೆಮಾಡಿದ್ದರೆ ಚೆನ್ನಾಗಿತ್ತು—ಕೊನೆಗೆ ಪ್ರಥಮಮುದ್ರಣಕ್ಕೆ ಇಟ್ಟಿದ್ದ ಮೂರು ರೂಪಾಯನ್ನೇ ಇಟ್ಟಿದ್ದರೂ ಸಾಕಾಗಿತ್ತು. ಇದು ಗ್ರಂಥಕರ್ತರ ಮತ್ತು ಮುದ್ರಣದ ಕಷ್ಟಸುಖಗಳನ್ನು ಅರಿಯದ ಸ್ವಾರ್ಥಪರರಾದ ಜನರ ಅಭಿಪ್ರಾಯ ! ಅಕ್ಕಿಯ ಮೇಲೆ ಆಸೆ, ನೆಂಟರಮೇಲೆ ಇಷ್ಟ.

ಜನಸಾಮಾನ್ಯರ ಬಗೆಯೇ ಹೀಗೆ ; ತಮ್ಮ ಮನಸ್ಸು ಬಂದಂತೆ ಹಿಂದು ಮುಂದು ನೋಡದೆ ಮಾತನಾಡುವರು. ಆದಕ್ಕೆ ಈ ಸಂದರ್ಭದಲ್ಲಿಯೇ ಇನ್ನೊಂದು ಅಂಶವನ್ನು ಉದಾಹರಿಸಬಹುದು. ಈ ಪರಿಷ್ಕೃತ ಮುದ್ರಣದಮೇಲೆ ಗ್ರಂಥಕರ್ತೃಗಳು ಪ್ರಾಕ್ತನೇತ್ಯಾದಿ ಬಿರುದಾಂಕಿತರಾದ ನರಸಿಂಹಾಚಾರ್ಯರೆಂದು ಮುದ್ರಿಸಲ್ಪಟ್ಟಿದೆ ; ಮ|| ಎಸ್. ಜಿ. ನರಸಿಂಹಾಚಾರ್ಯರ ಹೆಸರು ಬಿಟ್ಟುಹೋಗಿದೆ. ಇದು ಪ್ರಥಮಮುದ್ರಣದಲ್ಲಿದ್ದದ್ದನ್ನು ನೋಡಿದ್ದ ಮತ್ತು ಎಸ್.ಜಿ. ನರಸಿಂಹಾಚಾರ್ಯರಲ್ಲಿ ಪಕ್ಷಪಾತಿಗಳಾದ ಜನರು ಈ ಮುದ್ರಣವನ್ನು ನೋಡಿ ತಾವು ಏನೋ ಗಂಟು ಕಳೆದುಕೊಂಡಂತೆಯೂ ಪ್ರಪಂಚವೇ ಮುಳುಗಿಹೋದಂತೆಯೂ ಗುಸುಗುಟ್ಟಿಕೊಳ್ಳುತ್ತಿದ್ದಾರೆ. ಇದೇನು ಪ್ರಮಾದ ! ರಾ|| ನರಸಿಂಹಾಚಾರ್ಯರಿಗೆ ನಾವು ಬುದ್ಧಿಹೇಳಿಕೊಡುವ ಸ್ಥಿತಿಯಲ್ಲಿದ್ದೇವೆಯೇ ? ಪರಮಪೂಜ್ಯರೂ ಭೀಷ್ಮಾಚಾರ್ಯರಂತೆ ವೃದ್ಧಪಿತಾಮಹರೂ ಆದ ಮ|| ಆಚಾರ್ಯರ ಕಾರ್ಯದಲ್ಲಿ ದುರಭಿಸಂಧಿಯನ್ನು ಎಣಿಸುವುದು ಕೀಳುತನ ; ಕೇವಲ ಪಾಪಕರ. ಮ|| ಎಸ್. ಜಿ. ನರಸಿಂಹಾಚಾರ್ಯರ ಹೆಸರನ್ನು ಉದ್ದೇಶಪೂರ್ವಕವಾಗಿಯೇ ಬಿಟ್ಟಿದ್ದರೂ ಅವರಿಗೆ ಏನು ಪುರುಷಾರ್ಥಸಾಧನೆಯಾದೀತು ? ಇದರ ಮೇಲೆ ಎಸ್. ಜಿ. ನರಸಿಂಹಾಚಾರ್ಯರ ಹೆಸರು ಇದರಿಂದಲೇ ಶಾಶ್ವತವಾಗಿ ನಿಲ್ಲಬೇಕಾಗಿದೆಯೊ ? ಇದನ್ನು ಜನರು ಯೋಚಿಸಬೇಕು.

ವಸ್ತುಸ್ಥಿತಿಯೇನೋ ನಾವು ಕಾಣೆವು. ಆದರೆ ಜನರ ಬಾಯಿ ಕೆಟ್ಟದು ; ಆದಕ್ಕೆ ಕಟ್ಟಿಲ್ಲ. ನಮ್ಮಲ್ಲಿಯೂ “ ಅದು ಕೂಗಿದರೆ ಕೂಗಿಕೊಳ್ಳಲಿ ! ನಾಯಿ ಬೊಗಳಿದರೆ ದೇವಲೋಕವು ಹಾಳೇ ? ” ಎಂದು ಹೇಳುವಷ್ಟು ಅಭಿಮಾನರಾಹಿತ್ಯವೂ ಅಹಂಕಾರಮಮಕಾರಶೂನ್ಯತೆಯೂ ಕೀರ್ತಿಪರಾಙ್ಮುಖತೆಯೂ ಇರುವುದಿಲ್ಲ. ಆದ್ದರಿಂದ ಮ|| ಎಸ್. ಜಿ. ನರಸಿಂಹಾಚಾರ್ಯರ ಕರ್ತೃತ್ವವನ್ನು ಈ ಮುದ್ರಣದ ಮೇಲೂ ನಿರ್ದೇಶಿಸಿದ್ದರೆ ಚೆನ್ನಾಗಿರುತ್ತಿತ್ತು.—ಈ ಕೂಗಾದರೂ ತಪ್ಪುತ್ತಿತ್ತು.

ಹಿಂದೆ ಹೇಳಿದ ಪಂಗಡದ ಜನರು ಇದನ್ನೂ ಮನಸ್ಸಿಗೆ ತಂದುಕೊಳ್ಳುವುದು ಉತ್ತಮ :—ಇದೆಲ್ಲಾ ತುಚ್ಛವಿಷಯ ; ಇವುಗಳಿಂದ ಮ|| ಆಚಾರ್ಯರಂಥವರ ಉದಾತ್ತಸ್ವಭಾವವನ್ನು ಕಳಂಕಿತವನ್ನಾಗಿ ಮಾಡಬಾರದು. ಇದನ್ನೇ ಮ|| ಆಚಾರ್ಯರು ಪರಿಷ್ಕರಿಸಿ ಎರಡನೆಯ ಸಾರಿ ಮುದ್ರಿಸಿರುವ 'ಶಬ್ದಾನುಶಾಸನ' ಮತ್ತು 'ಶ್ರವಣಬೆಳಗೊಳದ ಶಾಸನಗಳು' ಇವುಗಳಿಗೂ ಅನ್ವಯಿಸಿಕೊಳ್ಳಬೇಕು. ಅವುಗಳ ಮೇಲೆ ಮೊದಲನೆಯಸಾರಿ ಮುದ್ರಿಸಿದ ಮೆ|| ರೈಸ್‌ರವರ ಹೆಸರಿಲ್ಲ ; ಅಷ್ಟುಮಾತ್ರಕ್ಕೇ ಆದದ್ದೇನು ? ಪರಿಷ್ಕರ್ತರ ಶ್ರಮವು ಗ್ರಂಥಕರ್ತರ ಅಥವಾ ಪ್ರಥಮಶೋಧಕರ ಶ್ರಮಕ್ಕೆ ಸದೃಶವಾಗಿದ್ದರೆ ತಮ್ಮ ಹೆಸರನ್ನೇ ಏಕೆ ಹಾಕಿಕೊಳ್ಳಬಾರದು ? ಮ|| ಆಚಾರ್ಯರ ಪಾಂಡಿತ್ಯಕ್ಕೆ ಜಯಸ್ತಂಭ ಸದೃಶವಾಗಿರುವ "ಕಾವ್ಯಾವಲೋಕನ" ಗ್ರಂಥವನ್ನೂ ನಾಳೆ ಮತ್ತಾರಾದರೂ ಹೀಗೇ ಪರಿಷ್ಕರಿಸಿ ತಮ್ಮ ಹೆಸರನ್ನು ಹಾಕಿಕೊಳ್ಳಬಹುದು. ಇದರಿಂದ ಆಚಾರ್ಯರ ವಿದ್ವತ್ತಿಗೂ ಕೀರ್ತಿಗೂ ಕುಂದುಂಟಾಗುವುದೇ ? ಹೊಸಬರಿಗೆ ಪ್ರತಿಷ್ಠೆ ಬಂದೀತೋ ? ಅವರು ತಾನೇ ಅದಕ್ಕೆ ಆಕ್ಷೇಪಣೆ ಮಾಡಿಯಾರೋ ?—ಸುಮ್ಮನೆ ಕಂಠಶೋಷಣೆ!

---

ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ (ಪ್ರಾಚ್ಯಸಂಶೋಧನ ಮಂದಿರದ) ವಿದ್ವಾಂಸರು ಶ್ರೀಮನ್ ಮಹಾಭಾರತದಲ್ಲಿನ ಪ್ರಕ್ಷಿಪ್ತಭಾಗಗಳನ್ನು ತೆಗೆದುಹಾಕಿ ಅದನ್ನು ಪರಿಷ್ಕರಿಸಿ ಪ್ರಕಟಿಸಬೇಕೆಂದು ಪ್ರಯತ್ನ ಮಾಡುತ್ತಿದ್ದಾರಷ್ಟೆ. ಈ ಮಹಾಭಾರತಪರಿಷ್ಕರಣ ವಿಷಯವಾಗಿ ಡಾ|| ವಿನ್‌ಟರ್‌ನಿಟ್ಸ್ ಎಂಬ ಪಾಶ್ಚಾತ್ಯವಿದ್ವಾಂಸರು ಬೊಂಬಾಯಿ ರಾಯಲ್ ಏಷಿಯಾಟಿಕ್ ಸೊಸೈಟಿಯಲ್ಲಿ ಒಂದು ಉಪನ್ಯಾಸವನ್ನು ಕೊಟ್ಟರು (೧೧-೧೦-೧೯೨೩.) ಅದರ ಸಾರಾಂಶವನ್ನು ಇಲ್ಲಿ ಕೊಟ್ಟಿದ್ದೇವೆ :—*

**ಮಹಾಭಾರತ ಪರಿಷ್ಕರಣ.**

"ಭಾರತದಲ್ಲಿಲ್ಲದ್ದು ಭರತಖಂಡದಲ್ಲಿಲ್ಲ" ಎಂಬುದು ನಿಜ. ಹಿಂದೂಸಾಹಿತ್ಯವಾಗಲಿ ಚರಿತ್ರೆಯಾಗಲಿ, ಧರ್ಮವಾಗಲಿ ದರ್ಶನವಾಗಲಿ, ಎಲ್ಲದಕ್ಕೂ ಮಹಾಭಾರತದಲ್ಲಿ ಹೇಳದೆಇದ್ದ ವಿಷಯವಿಲ್ಲ. ಅದು ಒಂದು ಅಮೂಲ್ಯ ಆಕರಗ್ರಂಥವಾಗಿದೆ. ಆದರೆ ಇದನ್ನು ಉಪಯೋಗಿಸಿಕೊಳ್ಳುವುದು ಕಷ್ಟವಾಗಿದೆ. "ಇದು ಆಗಲೇ ಮಹಾಭಾರತದಲ್ಲಿ ಬಂದಿದೆ" ಎಂದು ಇದರ ವಿಚಾರವಾಗಿ ಅದರ ವಿಚಾರವಾಗಿ ನಾವು ಆಗಾಗ್ಯೆ ಓದುತ್ತೇವೆ. ಆದರೆ

---

* ಬೊಂಬಾಯಿ ಶಾಖೆಯ ರಾಯಲ್ ಏಷಿಯಾಟಿಕ್ ಸೊಸೈಟಿ ಪತ್ರಿಕೆ (೧೯೨೨—೨೪) ಯನ್ನು ನೋಡಿ.

ಅದು ಮಹಾಭಾರತದ ಯಾವ ಭಾಗದಲ್ಲಿ—"ಪರ್ವ" ಯಲ್ಲಿ—ಬರುತ್ತದೆ, ಆ ಭಾಗವು ಯಾವಕಾಲದ್ದು ಎಂಬುದನ್ನು ತಿಳಿದುಕೊಳ್ಳದಿದ್ದರೆ ಉಪಯೋಗವೇನಾಯಿತು ?

ಈಗ ನಮ್ಮಲ್ಲಿರುವ ಮಹಾಭಾರತದ ಆನುಪೂರ್ವಿಯು ಭಾರತಯುದ್ಧವನ್ನು ವರ್ಣಿಸಿದ್ದ ಮೂಲಭಾರತಗ್ರಂಥವಲ್ಲವೆಂಬುದರಲ್ಲಿ ಸಂದೇಹವಿಲ್ಲ. ಮೂಲದಲ್ಲಿ ೨೪೦೦೦ ಶ್ಲೋಕಗಳೇ ಇದ್ದುವೋ, ೮೮೦೦ ಶ್ಲೋಕಗಳೇ ಇದ್ದುವೋ ಅವು ಯಾವುವೋ ಅವುಗಳನ್ನೇ ನಿಷ್ಕೃಷ್ಟವಾಗಿ ತೆಗೆದಿಡುವುದು ಸಾಧ್ಯವಲ್ಲದಿದ್ದರೂ ನಾವು ಎರಡು ಕೆಲಸ ಮಾಡಬಹುದು :—(೧) ನಕಲು ಮಾಡುವವರು ಅಜಾಗರೂಕತೆಯಿಂದಾಗಲಿ ಬೇಕೆಂದಾಗಲಿ ಮೂಲಗ್ರಂಥದಲ್ಲಿ ಈಚೆಗೆ ಸೇರಿಸಿದ ಅಥವಾ ತಿದ್ದಿದ ಭಾಗಗಳನ್ನು ಕಂಡುಹಿಡಿಯುವುದು. (೨) ಭಾರತದ ಕಥೆಯನ್ನೂ ಉಪಕಥೆಗಳನ್ನೂ ನೈತಿಕಭಾಗಗಳನ್ನೂ ಐತಿಹಾಸಿಕ ಮತ್ತು ಸಾಹಿತ್ಯದೃಷ್ಟಿಯಿಂದ ವಿಮರ್ಶಮಾಡಿ, ಒಂದು ಭಾಗಕ್ಕೂ ಮತ್ತೊಂದು ಭಾಗಕ್ಕೂ ಅಸಾಮಂಜಸ್ಯವಿದೆಯೇ ನೋಡುವುದು ; ಅಥವಾ ನಮಗೆ ತಿಳಿದಿರುವಷ್ಟು ಮಟ್ಟಿನ ಭಾರತೀಯ ಸಾಮಾಜಿಕ ಮತ್ತು ಧಾರ್ಮಿಕಚರಿತ್ರೆಯನ್ನು ನೋಡಿ ಭಾರತದ ಪ್ರಾಚೀನ ಮತ್ತು ಅರ್ವಾಚೀನಭಾಗಗಳನ್ನು ಕಂಡುಹಿಡಿಯುವುದು.

...ಇಂಡಿಯಾ ದೇಶದ ನಾನಾ ಭಾಗಗಳಿಂದ ಹಸ್ತಪ್ರತಿಗಳನ್ನು ತರಿಸಿ ಹೋಲಿಕೆಮಾಡಿ ಶೋಧಿಸಿದರೆ ಸುಮಾರು ಕ್ರಿ. ಶ. ನಾಲ್ಕನೆಯ ಶತಮಾನದಲ್ಲಿದ್ದಿರಬಹುದಾದ ಮಹಾಭಾರತಗ್ರಂಥವು ದೊರೆಯಬಹುದೆಂದು ಊಹಿಸಲಾಗಿದೆ. ಆದರೆ, ಮಹಾಭಾರತದ ಪ್ರಾಚೀನತಮವಾದ ಭಾಗಗಳು ಕ್ರಿ. ಪೂ. ನಾಲ್ಕನೆಯ ಶತಮಾನದ ಹಿಂದಿನವರೆಗೂ ಹೋಗುತ್ತವೆ. ಈ ಹಳೆಯ ಭಾಗವಾವುದು ಹೊಸಭಾಗವಾವುದು ಎಂದು ಕಂಡು ಹಿಡಿಯುವುದು ಹೇಗೆ? ಈ ಪ್ರಶ್ನೆಗೆ ಉತ್ತರವಾಗಿ ಇಲ್ಲಿ ಒಂದೆರಡು ಉದಾಹರಣೆಗಳನ್ನು ಮಾತ್ರ ತೆಗೆದುಕೊಂಡು ವಿಚಾರಮಾಡಬಹುದು.

ಮಹಾಭಾರತ ಕಥೆಯಲ್ಲಿ, ದ್ರೌಪದಿಯು ಪಂಚಪಾಂಡವರನ್ನು ಮದುವೆ ಮಾಡಿಕೊಂಡದ್ದು ಒಂದು ಮುಖ್ಯವಾದ ಘಟನೆ. ಈಗಿರುವ ಮಹಾಭಾರತದಲ್ಲಿ ಬರುವ ಈ ಘಟನಾವರ್ಣನೆಯಲ್ಲಿ ಬಹಳ ಅನುಪಪತ್ತಿಗಳು ಬರುತ್ತವೆ; ಮೂಲ ಇತಿಹಾಸದಲ್ಲಿ ಕಥೆಯು ಹೀಗೆಯೇ ಇದ್ದಿರಲಾರದು.

ಆದಿಪರ್ವದ ೧೬೯ ನೆಯ ಅಧ್ಯಾಯದಲ್ಲಿ ವ್ಯಾಸರು ಪಾಂಡವರನ್ನು ಕಂಡು ಒಬ್ಬ ಋಷಿಪುತ್ರಿಯು ಪತಿಪ್ರಾಪ್ತಿಗಾಗಿ ಶಿವನನ್ನು ಕುರಿತು ತಪಸ್ಸುಮಾಡಿ ಐದುಸಲ 'ಗಂಡನನ್ನು ಕೊಡು' ಎಂದು ಕೇಳಿದಳೆಂದೂ ಆದ್ದರಿಂದ ಅವಳಿಗೆ

ಐದುಜನ ಗಂಡಂದಿರನ್ನು ಶಿವನು ವರಕೊಟ್ಟನೆಂದೂ, ಅವಳು ಈಗ ದ್ರೌಪದಿಯಾಗಿ ಹುಟ್ಟಿದ್ದಾಳೆಂದೂ ಅವಳು ಪಾಂಡವರಿಗೇ ಉದ್ದಿಷ್ಟಳಾದದ್ದರಿಂದ ಅವರೆಲ್ಲರೂ ಪಾಂಚಾಲರಾಜನ ಪಟ್ಟಣಕ್ಕೆ ಹೋಗಬೇಕೆಂದೂ ಹೇಳುವರು. ಆಮೇಲೆ ದಾರಿಯಲ್ಲಿ ಹೋಗುತ್ತಿದ್ದಾಗ ಕೆಲವು ಬ್ರಾಹ್ಮಣರು ಸಿಕ್ಕಿದರೆಂದೂ, ದ್ರುಪದರಾಜನು ನಡೆಸುವ ಮಹೋತ್ಸವಕ್ಕೆ ಅವರನ್ನೂ ಕರೆದರೆಂದೂ, ಆಗ ಯುಧಿಷ್ಠಿರನು ತಾವೂ ಹೋಗಬೇಕೆಂದು ನಿಷ್ಕರ್ಷಿಸಿದನೆಂದೂ ಮತ್ತೊಂದು ಕಥೆಯು ಬರುತ್ತದೆ. ಇದನ್ನು ನೋಡಿದರೆ ಬ್ರಾಹ್ಮಣರು ಈ ವರ್ತಮಾನವನ್ನು ಕೊಡುವುದಕ್ಕೆ ಮುಂಚೆ ಪಾಂಡವರಿಗೆ ದ್ರೌಪದೀಸ್ವಯಂವರ ವಿಚಾರವೇ ಗೊತ್ತಿರಲಿಲ್ಲವೆಂದು ತೋರುತ್ತದೆ.......

ಪಾಂಡವರು ಐದುಜನವೂ ದ್ರೌಪದಿಯನ್ನು ಮದುವೆಮಾಡಿಕೊಳ್ಳುವುದಕ್ಕೆ ದ್ರುಪದರಾಜನು ಆಕ್ಷೇಪಿಸುವನು. ಇದು ಶಾಶ್ವತವಾಗಿ ಬಂದ ಧರ್ಮ (ಏಷ ಧರ್ಮೋ ಧ್ರುವಃ) ಎಂದು ಹೇಳುವನು. ಆದರೂ ದ್ರುಪದರಾಜನು ಒಪ್ಪದೆ, ಯುಧಿಷ್ಠಿರ ಕುಂತಿ ಧೃಷ್ಟದ್ಯುಮ್ನ ಈ ಮೂವರೂ ಸೇರಿ ಅದು ಧರ್ಮವೇ ಅಲ್ಲವೇ ಎಂದು ವಿಚಾರಮಾಡಬೇಕಾಗಿ ಹೇಳುವನು. ಅವರು ವಿಚಾರಮಾಡುತ್ತಿದ್ದಾಗ ವ್ಯಾಸರು ಬಂದು, ಯುಧಿಷ್ಠಿರನು ಹೇಳುವುದು ಸರಿಯೆಂದೂ ಇಂಥ ಧರ್ಮವುಂಟೆಂದೂ ಹೇಳಿದರು ; ಆಮೇಲೆ ದ್ರುಪದರಾಜನನ್ನು ಬೇರೆ ಕರೆದು ಅವನಿಗೆ 'ಪಂಚೇಂದ್ರೋಪಾಖ್ಯಾನ' ವನ್ನು ಹೇಳಿದರು:—(ಇಂದ್ರನು ಒಂದುಸಲ ಈಶ್ವರನಲ್ಲಿ ಅಪರಾಧಮಾಡಲು, ಇಂದ್ರನು ಐದುಭಾಗವಾಗಿ ಭೂಲೋಕದಲ್ಲಿ ಹುಟ್ಟಬೇಕೆಂದೂ, ಲಕ್ಷ್ಮಿಯ ಅವತಾರಳಾದ ಒಬ್ಬ ಸ್ತ್ರೀಯನ್ನು ಮದುವೆಯಾಗಬೇಕೆಂದೂ ಶಿವನು ಇಂದ್ರನಿಗೆ ಶಾಪಕೊಟ್ಟನು. ಇಂದ್ರನೇ ಪಂಚಪಾಂಡವರು ; ದ್ರೌಪದಿಯೇ ಲಕ್ಷ್ಮಿ—ಇತ್ಯಾದಿ.) ಆಮೇಲೆ ವ್ಯಾಸರು ದ್ರುಪದರಾಜನಿಗೆ, 'ಪತಿಂ ದೇಹಿ' ಎಂದು ಐದುಸಾರಿ ಋಷಿಪುತ್ರಿಯು ಬೇಡಿಕೊಂಡ ಕಥೆಯನ್ನೂ ಹೇಳುವರು. ಈ ಪಂಚೇಂದ್ರೋಪಾಖ್ಯಾನವು ಅಸಂಬದ್ಧವಾಗಿಯೂ ಅನುಪಪನ್ನವಾಗಿಯೂ ಇದೆ ; ಆದರೆ ಮಾರ್ಕಂಡೇಯ ಪುರಾಣದಲ್ಲಿ ಉಕ್ತವಾಗಿರುವ ಇದೇ ಕಥೆಯು ಎಷ್ಟೋ ಉತ್ತಮವಾಗಿದೆ. 'ಪತಿಂ ದೇಹಿ' ಕಥೆಯೂ ಬ್ರಹ್ಮವೈವರ್ತಪುರಾಣದಲ್ಲಿದೆ. (ಈ ಪುರಾಣದಲ್ಲಿ 'ಪತಿಂ ದೇಹಿ' ಎಂದು ಆಕನ್ಯೆಯು ಐದುಸಾರಿ ಕೇಳುವಳು ; ಭಾರತದಲ್ಲಿ 'ಪತಿಂ ಸರ್ವಗುಣೋಪೇತಮಿಚ್ಛಾಮಿ' ಎಂದು ಮಾತ್ರ ಹೇಳುವಳು.)

ಬಹುಪತಿವಿವಾಹದ ಸಾಧುತ್ವವನ್ನು ಸಾಧಿಸುವ ಈ ಮೂರು ಕಥೆಗಳೂ ಈಚಿನ ಪೌರಾಣಿಕ ಕಥೆಗಳೆಂದೂ ಇವು ಮೂಲಭಾರತದಲ್ಲಿರಲಿಲ್ಲವೆಂದೂ ಹೇಳ

ಬಹುದು. ಏಕೆಂದರೆ ಬಹುಪತಿವಿವಾಹವು ಹಿಂದೂ ದೇಶದಲ್ಲಿ ಸರ್ವಸಾಮಾನ್ಯವಾಗಿ ಇರತಕ್ಕ ಪದ್ಧತಿಯಲ್ಲ; ಆದರೆ ದ್ರೌಪದೀಪಾಂಡವವಿವಾಹವಿಲ್ಲದೆ ಭಾರತಕಥೆ ನಡೆಯುವ ಹಾಗಿಲ್ಲ. ಆದ್ದರಿಂದ ಈಚೆಗೆ ಮೇಲಣ ಕಥೆಗಳನ್ನು ತಂದು ಸೇರಿಸಿ ಅದರ ಸಾಧುತ್ವವನ್ನು ಸಾಧಿಸಿರಬೇಕು; ಇವುಗಳು ಸರಿಯಾಗಿ ಹೊಂದುವಂತೆ ಸಂಬಂಧವನ್ನು ಮಾತ್ರ ಕಲ್ಪಿಸಿಲ್ಲ.

ಈ ಪದ್ಧತಿಯು 'ಧರ್ಮೋ ಧ್ರುವಃ' 'ಸನಾತನೋ ಧರ್ಮಃ' ಎಂದು ಮೇಲಿಂದ ಮೇಲೆ ಹೇಳಿರುವುದನ್ನು ನೋಡಿದರೆ ಇದು ಪಾಂಡವವಂಶದಲ್ಲಿ ಹಿಂದಿನಿಂದ ನಡೆದು ಬಂದದ್ದೆಂದು ತೋರುತ್ತದೆ; ಈ ಪದ್ಧತಿಯು ಹಿಂದೂ ದೇಶಕ್ಕೆಲ್ಲಾ ಅನ್ವಯಿಸುವುದಿಲ್ಲ; ದ್ರೌಪದೀ ಸ್ವಯಂವರದ ಬೌದ್ಧ ಜೈನ ಪಾಠಗಳಲ್ಲಿ, ದ್ರೌಪದಿಯು ಐದುಜನರನ್ನೂ ಏಕಕಾಲದಲ್ಲಿ ವರಿಸಿದಳೆಂದು ಹೇಳಿದೆ.

ಆಂತರ ಸಾಮಗ್ರಿಗಳನ್ನು ವಿಮರ್ಶೆಮಾಡಿ ಪ್ರಾಚೀನ ಅರ್ವಾಚೀನಭಾಗಗಳನ್ನು ಕಂಡುಹಿಡಿಯುವುದಕ್ಕೆ ಭೀಷ್ಮಮರಣವರ್ಣನೆಯೂ ಒಂದು ಉದಾಹರಣೆ; ಈಗಿನ ಭಾರತದಲ್ಲಿ, ಭೀಷ್ಮರೊಡನೆ ಯುದ್ಧಮಾಡಿ ಸೋತು ಪಾಂಡವರು ಭೀಷ್ಮರನ್ನು ಕೊಲ್ಲುವುದು ಹೇಗೆಂದು ಅವರನ್ನೇ ಕೇಳುವರು. ಅದಕ್ಕೆ ಅವರು 'ಶಿಖಂಡಿಯು ಯುದ್ಧಕ್ಕೆ ಬರಲಿ. ಅವನ ಹಿಂದೆ ಅರ್ಜುನನು ನಿಂತು ಯುದ್ಧಮಾಡಲಿ' ಎಂದು ಹೇಳುವರು. ಅದೇ ಅಧ್ಯಾಯದಲ್ಲಿ ಈ ಉಪಾಯವನ್ನು ಕೃಷ್ಣನು ಅರ್ಜುನನಿಗೆ ಹೇಳಿಕೊಡುತ್ತಾನೆ. ಭೀಷ್ಮಾರ್ಜುನರ ಕಾಳಗದಲ್ಲಿ ಭೀಷ್ಮರು ತಟ್ಟನೆ ವೈರಾಗ್ಯವನ್ನು ತಾಳಿ ತಮ್ಮನ್ನು ಸೋಲಿಸಿಬಿಡಬೇಕೆಂದು ಯುಧಿಷ್ಠಿರನಿಗೆ ಹೇಳುವರು. ಅರ್ಜುನನು ಶಿಖಂಡಿಯ ಹಿಂದಿನಿಂದ ಭೀಷ್ಮರನ್ನು ಹೊಡೆಯುವನು. ಅವರು ಬಿದ್ದಾಗ ಮೈತುಂಬಾ ಬಾಣಗಳೇ ಚುಚ್ಚಿಕೊಂಡಿದ್ದದ್ದರಿಂದ ಶರಾಸನದಲ್ಲಿ ಬಿದ್ದರು. ಆಗ ದಕ್ಷಿಣಾಯನವಾಗಿತ್ತು. ಉತ್ತರಾಯಣ ಬರುವುದಕ್ಕಿಂತ ಮುಂಚೆ ಸತ್ತರೆ ಸದ್ಗತಿಯಾಗುವುದಿಲ್ಲವೆಂದು ಆಕಾಶವಾಣಿಯಾದ್ದರಿಂದ ಅವರು ಜೀವವನ್ನು ಹಿಡಿದುಕೊಂಡಿದ್ದು, ಶಾಂತಿಪರ್ವ ಅನುಶಾಸನಪರ್ವಗಳಲ್ಲಿ ಬರುವ ಧರ್ಮೋಪದೇಶವನ್ನೆಲ್ಲಾ ಯುಧಿಷ್ಠಿರನಿಗೆ ಹೇಳುವರು.

ಮೊದಲಿದ್ದ ಕಥೆಯಲ್ಲಿ, (೧) ಕೃಷ್ಣನೇ ಭೀಷ್ಮಸಂಹಾರೋಪಾಯವನ್ನು ಅರ್ಜುನನಿಗೆ ಹೇಳಿಕೊಟ್ಟಿರಬೇಕು--ಭೀಷ್ಮರಲ್ಲ. (೨) ಭೀಷ್ಮರು ಜುಗುಪ್ಸೆಹೊಂದಿ ಯುಧಿಷ್ಠಿರನನ್ನು ತಮ್ಮ ಪ್ರಾಣ ತೆಗೆಯಬೇಕೆಂದು ಕೇಳಲಿಲ್ಲ. (೩) ಭೀಷ್ಮರು ಕರ್ಣದುರ್ಯೋಧನರಿಗೆ ಕೆಲವು ಬುದ್ಧಿಮಾತುಗಳನ್ನು ಹೇಳುವಷ್ಟು ಕಾಲ ಮಾತ್ರ ಬದುಕಿದ್ದರು——ಎಂದು ಹೇಳಬಹುದು.........

ಈಗಿನ ಮಹಾಭಾರತದಲ್ಲಿ ಹೇಳಿರುವಂತೆ ಭೀಷ್ಮರು ಉತ್ತರಾಯಣದಲ್ಲಿ ಸ್ವರ್ಗಸ್ಥರಾದದ್ದು ಶಂಕರಾಚಾರ್ಯರಿಗೆ (ಎಂಟನೆಯ ಶತ.) ಗೊತ್ತಿತ್ತು. ಆದ್ದರಿಂದ ಹೊಸದಾಗಿ ಸೇರಿರಬಹುದಾದ ಭಾಗಗಳು ಕೇವಲ ಈಚೆಗೆ ಸೇರಿದವುಗಳಲ್ಲ.......... ..........ಮಹಾಭಾರತದ ಕೆಲವು ಕೇವಲ ಪ್ರಾಚೀನ ಪ್ರತಿಗಳು ದೊರೆತು ಅವುಗಳಲ್ಲಿ, ಇದುವರೆಗೂ ಆಂತರ ಪ್ರಮಾಣಗಳಿಂದ ಯಾವ ಭಾಗಗಳು ಪ್ರಕ್ಷಿಪ್ತಗಳಾಗಿರಬಹುದೆಂದು ಹೇಳಿದೆವೋ ಅವು ಇಲ್ಲದಿದ್ದರೆ, ಇದು ಬರಿಯ ಊಹೆಯಲ್ಲ, ಪ್ರಮಾಣಸಿದ್ಧವಾದ ಹಾಗೆ ಎಂದು ಹೇಳಬಹುದು. ಆದರೂ ಪ್ರಾಚೀನ ಹಸ್ತಪ್ರತಿಗಳೇ ನಮಗೆ ಸರಿಯಾದ ಪ್ರಮಾಣ; ಉದಾ—ಭಾರತದ ಆದಿಯಲ್ಲಿ ಬರುವ ಗಣೇಶಕರ್ತೃಕ ಲೇಖನ ವಿಚಾರವನ್ನು ಹೊಸದಾಗಿ ಸೇರಿದ್ದೆಂದು ಎಷ್ಟು ವಾದ ಮಾಡಿದರೂ ತೋರಿಸುವುದಕ್ಕಾಗುವುದಿಲ್ಲ. ಕೆಲವು ಶ್ಲಾಘ್ಯವಾದ ಪ್ರಾಚೀನಪ್ರತಿಗಳಲ್ಲಿ ಈ ಘಟನೆಯು ಬರದೇ ಇರುವುದರಿಂದ ಇದು ಪ್ರಕ್ಷಿಪ್ತವೆಂದು ನಿಶ್ಚಯವಾಗಬೇಕಾಗುತ್ತದೆ. ವಿರಾಟಪರ್ವದಲ್ಲಿರುವ ದುರ್ಗಾಸ್ತೋತ್ರವೂ ಹೀಗೇ—ಪ್ರಾಚೀನ ಪ್ರತಿಗಳಲ್ಲಿಲ್ಲ. ಬೇರೆ ಕಾರಣಗಳಿಂದ ಇದು ಅರ್ವಾಚೀನವೆಂದು ತೋರಿಸುವುದಕ್ಕಾಗುವುದಿಲ್ಲ. ಸಭಾಪರ್ವದಲ್ಲಿ 'ನಾಟಕ' ಎಂಬ ಶಬ್ದವು ಬರುತ್ತದೆ. ಪ್ರಾಚೀನ ಪ್ರತಿಗಳನ್ನು ನೋಡಿದರೆ ಈ ಪದ ಬರುವ ಶ್ಲೋಕವೇ ಪ್ರಕ್ಷಿಪ್ತವೆಂದು ಗೊತ್ತಾಗುತ್ತದೆ. (ಆದ್ದರಿಂದ 'ನಾಟಕದ ವಿಚಾರ ಆಗಲೇ ಮಹಾಭಾರತದಲ್ಲಿ ಉಕ್ತವಾಗಿದೆ' ಎಂದು ಹೇಳುವುದು ಕಾರ್ಯಕಾರಿಯಲ್ಲ.)

ಹೀಗೆ ಪರಿಷ್ಕೃತವಾದ 'ಮಹಾಭಾರತ'ವು ಬಂದರೆ ಅದರ ಪ್ರಾಮಾಣ್ಯವನ್ನು ಅಂಗೀಕರಿಸಿ ಈಗ ಮಾಡಿರುವ ಅನೇಕ ಸಿದ್ಧಾಂತಗಳು ಬದಲಾಗುವುವು.

---

ಮೊದಲನೆಯ ಭಾರತೀಯವಿದ್ವತ್ಸಮ್ಮೇಲನದಲ್ಲಿ ಸರ್ ರಾ|| ಗೋ|| ಭಂಡಾರ್ಕರವರು ಮಾಡಿದ ಆರಂಭಭಾಷಣದ ಸಾರಾಂಶ:—

ನಮ್ಮ ವಿದ್ವಾಂಸರಲ್ಲಿ ಎರಡುವಿಧ—ಹಿಂದಿನ ತರದ ಪಂಡಿತರು, ಮತ್ತು ತುಲನಪೂರ್ವಕವಾಗಿಯೂ ಸವಿಮರ್ಶವಾಗಿಯೂ ಸಾಹಿತ್ಯಶಾಸನ ಮುಂತಾದವುಗಳನ್ನು ವ್ಯಾಸಂಗಮಾಡುತ್ತಿರುವ ಹೊಸತರದವರು. ಇವರಲ್ಲಿ ಪಂಡಿತರು ಈಗ ವ್ಯಾಕರಣ ನ್ಯಾಯಶಾಸ್ತ್ರಗಳನ್ನು ಓದುತ್ತಿರುವುದು ಹೆಚ್ಚು; ಆದರೆ ವ್ಯಾಕರಣ ಓದುವವರು ಮಹಾಭಾಷ್ಯದ ಒಂದು ಭಾಗವನ್ನು ಮಾತ್ರ ಓದುತ್ತಾರೆ. ಈ ಗ್ರಂಥದ ಪ್ರಾಶಸ್ತ್ಯವನ್ನು ನೋಡಿದರೆ ಅದನ್ನು ಪೂರ್ತಿಯಾಗಿ ಓದಲೇಬೇಕು. ನ್ಯಾಯಶಾಸ್ತ್ರದ ವ್ಯಾಸಂಗದಲ್ಲಿ ಪರಿಷ್ಕಾರಗಳೂ ದಂಡಕ

ಸಂಸ್ಕೃತವ್ಯಾಸಂಗ ಪದ್ಧತಿ

ಗಳೂ ಬಹಳ ಹೆಚ್ಚಾಗಿ ಬಂದಿವೆ. ಇದರಿಂದ ಒಂದು ವಿಧವಾಗಿ ಮೇಧಾಶಕ್ತಿಯು ಹೆಚ್ಚಾದರೂ ಅದು ಹೆಚ್ಚು ಫಲಕಾರಿಯಲ್ಲ. ಈ ಪದ್ಧತಿಯಿಂದ ಪ್ರಾಚೀನತರ್ಕವೂ ಗೌತಮರ ನ್ಯಾಯದರ್ಶನವೂ ಮೂಲೆಗೆ ಬಿದ್ದುಹೋಗಿದೆ. ಇದು ಅನ್ಯಾಯ. ಉದ್ಯೋತ, ವಾರ್ತಿಕ ತಾತ್ಪರ್ಯಟೀಕಾ, ತಾತ್ಪರ್ಯಪರಿಶುದ್ಧಿ ಮುಂತಾದ ಗ್ರಂಥ ಗಳು ಸ್ವಾರಸ್ಯವಾಗಿಯೂ ಫಲದಾಯಕವಾಗಿಯೂ ಇರುತ್ತವೆ. ಸಾಹಿತ್ಯ ವೈದ್ಯ ಜ್ಯೋತಿಷಗಳನ್ನೂ ಅನೇಕರು ಓದುತ್ತಾರೆ. ಆದರೆ ಸಾಹಿತ್ಯವಿದ್ಯಾರ್ಥಿಗಳು ಕುವ ಲಯಾನಂದ ರಸಗಂಗಾಧರ ಕಾವ್ಯಪ್ರಕಾಶ ಇವುಗಳನ್ನು ಓದುವುದೇ ಹೆಚ್ಚು; ಇವುಗಳ ಜೊತೆಗೆ ಈ ಗ್ರಂಥಗಳಲ್ಲಿ ನಿರ್ದಿಷ್ಟವಾದ ಮತ್ತೆ ಕೆಲವು ಗ್ರಂಥಗಳನ್ನೂ ವ್ಯಾಸಂಗಮಾಡುವುದು ಒಳ್ಳೆಯದು. ಧರ್ಮಶಾಸ್ತ್ರ ಮೀಮಾಂಸಗಳನ್ನೂ ಅವು ಗಳ ಸಂಬಂಧದಲ್ಲಿ ಶಾಬರಭಾಷ್ಯ ಕುಮಾರಿಲವಾರ್ತಿಕಗಳನ್ನೂ ವ್ಯಾಸಂಗ ಮಾಡಬೇಕು.

ಎರಡನೆಯ ಪಂಗಡದವರು ವ್ಯಾಸಂಗಮಾಡುತ್ತಿರುವ ಪದ್ಧತಿಯು ಪಾಶ್ಚಾತ್ಯ ಪದ್ಧತಿ; ಆದ್ದರಿಂದ ನಾವು ಪಾಶ್ಚಾತ್ಯ ವಿದ್ವಾಂಸರು ಅನುಸರಿಸುತ್ತಿರುವ ಕ್ರಮ ವನ್ನು ಗಮನಿಸಿ ಅದರಲ್ಲಿ ಉಚಿತವಾದ ರೀತಿಯನ್ನು ಹಿಡಿಯಬೇಕು. ಈ ಎರಡು ಪಂಗಡದವರ ಉದ್ದೇಶವೂ ತತ್ತ್ವಾನ್ವೇಷಣೆಯಾದ್ದರಿಂದ ಇವರಿಬ್ಬರೂ ಪರಸ್ಪರ ಹೊಂದಿಕೊಂಡು ಹೋಗಬೇಕು—ಪ್ರತಿಕಕ್ಷಿಗಳಾಗಿ ಹೊಡೆದಾಡುವುದರಲ್ಲಿ ಪ್ರಯೋ ಜನವಿಲ್ಲ. ನಾವು ನಮ್ಮ ಶಾಸ್ತ್ರಗಳು ಸ್ವತಂತ್ರ ಮತ್ತು ಪ್ರಾಚೀನವಾದವುಗ ಳೆನ್ನುವುದು; ಪಾಶ್ಚಾತ್ಯರು ಇವಕ್ಕೆ ಗ್ರೀಕ್ ರೋಮನ್ ಮುಂತಾದ ಸಾಹಿತ್ಯಗಳ ಸಂಸ್ಕಾರವಿದೆ, ಅವು ಅಷ್ಟು ಪ್ರಾಚೀನಗಳಲ್ಲ ಎನ್ನುವುದು-ಇವಕ್ಕೆ ಅವರವರಲ್ಲಿರುವ ದೌರ್ಬಲ್ಯ ವಿಶೇಷವೇ ಕಾರಣ. ಇದು ಮನುಷ್ಯಮಾತ್ರನಲ್ಲಿ ಇರುವುದೆಂದು ತೋರು ತ್ತದೆ. ಆದರೆ ಇಂಥ ವಿಷಯಗಳನ್ನು ನಿಷ್ಪಕ್ಷಪಾತಿಯಾದ ನ್ಯಾಯಾಧಿಪತಿಯಂತೆ ವಿಚಾರಮಾಡಿ ತೀರ್ಮಾನಮಾಡಬೇಕು. ಆದರೆ ನ್ಯಾಯಾಧಿಪತಿಯೂ ಮನುಷ್ಯ ಮಾತ್ರನಾದವನು—ಅವನಿಗೂ ಇರುವ ಕೆಲವು ದೌರ್ಬಲ್ಯಗಳು ಇದ್ದೇ ಇರುತ್ತವೆ.

ಈ ಪಾಶ್ಚಾತ್ಯ ಪದ್ಧತಿಯನ್ನು ಅನುಸರಿಸಿ ವ್ಯಾಸಂಗಮಾಡಿದ ವಿಷಯ ಗಳಲ್ಲಿ ವೇದಾರ್ಥವಿಚಾರವು ಮುಖ್ಯವಾಗಿದೆ. ಇದರಲ್ಲಿ ಪಾಶ್ಚಾತ್ಯರು ಪರಿಶ್ರಮ ಪಡುತ್ತಿರುವಷ್ಟು ನಾವು ಪಡುತ್ತಿಲ್ಲ; ಆದರೆ ಇನ್ನು ಮುಂದಾದರೂ ಪಡಬೇಕು. ಪಾಶ್ಚಾತ್ಯ ವಿದ್ವಾಂಸರಲ್ಲಿ ಕೆಲವರು ವೇದಾರ್ಥವನ್ನು ಸರಿಯಾಗಿ ಗ್ರಹಿಸದೆ ವೇದ ಋಷಿಗಳ ಉದ್ದೇಶ್ಯವು ಐಹಿಕಭೋಗಸಾಧನವೆಂದೂ ಸೂತ್ರವಿಹಿತವಾದ ಸಂಸ್ಕಾ

ರಾದಿಗಳು ಅನಾಗರಿಕ ಕರ್ಮವೆಂದೂ ವಾದಿಸುತ್ತಾರೆ. ಇಂಥವರು ಒಬ್ಬಿಬ್ಬರು; ಇವರನ್ನು ಮಿಕ್ಕವರು ತಿದ್ದುತ್ತಾರೆ. ಆದರೂ ನಾವು ಈ ವಿಚಾರಕ್ಕೆ ಪ್ರವೇಶ ಮಾಡಬೇಕು. ನಾವು ಇವುಗಳನ್ನು ನ್ಯಾಯ್ಯವಾಗಿ ವಿಚಾರಮಾಡುವುದಕ್ಕೆ ಸಾಧ್ಯ ವಾಗಿರುವಷ್ಟು ಪಾಶ್ಚಾತ್ಯರಿಗೆ ಸಾಧ್ಯವಾಗಿಲ್ಲ. ಆದರೆ ಅವರ ಕ್ರಮವನ್ನು ಚೆನ್ನಾಗಿ ಗ್ರಹಿಸದೆ ನಾವು ಈ ಕಾರ್ಯದಲ್ಲಿ ಪ್ರವರ್ತಿಸಿದರೆ ಬಹಳ ತಪ್ಪುಗಳಿಗೆ ಕಾರಣವಾ ಗುತ್ತದೆ.

ವೇದಾಂತವನ್ನು ವ್ಯಾಸಂಗಮಾಡುವ ಪಾಶ್ಚಾತ್ಯ ವಿದ್ಯಾರ್ಥಿಗಳು ಶಂಕರ ಮತಾನುಸಾರಿಯಾದ ಪಾಲ್‌ಡಾಯಿಸರ್ ಪಂಡಿತನ ಅಭಿಪ್ರಾಯಗಳನ್ನು ಒಪ್ಪಿ ಕೊಂಡುಬಿಡುತ್ತಾರೆ. ಆದರೆ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿ ಇರುವುದು ಒಂದು ಮತವಲ್ಲ. ಈ ಸಂದರ್ಭದಲ್ಲಿ ಮಹಾಯಾನ ಬೌದ್ಧರಿಗೂ ಬ್ರಾಹ್ಮಣರಿಗೂ ನಡೆದ ವಿಚಾರಗಳನ್ನು ವ್ಯಾಸಂಗಮಾಡಿದರೆ ಫಲವುಂಟು. ಶಂಕರಾಚಾರ್ಯರ ಮಾಯಾ ವಾದಕ್ಕೆ ಬೀಜವು ಮಹಾಯಾನ ಬೌದ್ಧರ ಶೂನ್ಯವಾದದಲ್ಲಿ ದೊರಕಬಹುದು.

ಶಾಸನಗಳ ವ್ಯಾಸಂಗವು ಕ್ರಿ.ಶ. ದಲ್ಲಿ ನಡೆದ ಅನೇಕ ಸಂಗತಿಗಳ ಕಾಲ ವನ್ನು ನಿರ್ಣಯಿಸುವುದಕ್ಕೆ ಅಮೂಲ್ಯವಾದ ಸಾಧನವಾಗಿದೆ ಇದರಿಂದ ಶಾಲಿ ವಾಹನಶಕ, ವಿಕ್ರಮಶಕ, ಗುಪ್ತಶಕಗಳು ವಿಚಾರಕ್ಕೆ ಬಂದಿವೆ. ಗುಪ್ತ ಶಕವು ಶಾಲಿವಾಹನಶಕ ೨೪೨ ರಲ್ಲಿ ಆರಂಭವಾಯಿತೆಂದು ಆಲ್ಬರೂನಿಯು ಹೇಳಿದ್ದಾನೆ. ಉಜ್ಜಯಿನಿಯನ್ನು ಗೆದ್ದ ಮತ್ತು ಶಕಾರಿಯಾದ ವಿಕ್ರಮಾದಿತ್ಯನು ಸಿಂಹಾಸನಕ್ಕೆ ಬಂದದ್ದು ಕ್ರಿ.ಶ. ಸು. ೪೦೦. ಗ್ರೀಕ್ ಗ್ರಂಥಕಾರರು ಚೀನಾ ಸಾಹಿತ್ಯ ಮುಂತಾ ದವುಗಳಿಂದ ಚಂದ್ರಗುಪ್ತನ ಕಾಲವು ಕ್ರಿ.ಪೂ. ಸು ೩೨೫—೩೧೫ ಎಂದೂ, ಅಶೋಕನ ಪಟ್ಟಾಭಿಷೇಕವಾದದ್ದು ಕ್ರಿ.ಪೂ. ಸು ೨೬೯ ಎಂದೂ, ಈಶ್ವರ ಕೃಷ್ಣರ ಸಾಂಖ್ಯಕಾರಿಕೆಗಳು ವ್ಯಾಖ್ಯಾನದೊಡನೆ ಕ್ರಿ.ಶ. ೫೫೭—೫೬೯ರಲ್ಲಿ ಚೀನಾ ಭಾಷೆಗೆ ತರ್ಜುಮೆಮಾಡಲ್ಪಟ್ಟವೆಂದೂ, ಪುಲಕೇಶಿಯು ಕ್ರಿ.ಶ. ೬೧೦ರಲ್ಲಿ ಪಟ್ಟಕ್ಕೆ ಬಂದನೆಂದೂ ಇವನನ್ನು ಜಯಿಸುವುದು ಶಿಲಾದಿತ್ಯ ಅಥವಾ ಹರ್ಷವರ್ಧನನಿಗೆ ಸಾಧ್ಯವಾಗಲಿಲ್ಲವೆಂದೂ ಗೊತ್ತಾಗುತ್ತದೆ. ಕಾನಿಷ್ಕನ ವಂಶವನ್ನು ಸರಿಯಾಗಿ ಗೊತ್ತುಮಾಡುವುದು ಕಷ್ಟವಾಗಿದೆ. ವೈಷ್ಣವ ಮತವು ಕ್ರಿ.ಶ. ಎರಡನೆಯ ಶತ ಮಾನಕ್ಕೆ ಹಿಂದೆಯೇ ಹುಟ್ಟಿತ್ತೆಂದು ಗೊತ್ತಾಗುತ್ತದೆ. ಈ ವಿಚಾರಗಳ ವ್ಯಾಸಂ ಗವು ಫಲಕಾರಿಯಾಗುವುದರಲ್ಲಿ ಸಂದೇಹವಿಲ್ಲ.*

---

* ಈ ಲೇಖನದ ಇಂಥ ಅಂಶಗಳಿಗೆ ಅವರಿಂದ ಇಂಗ್ಲಿಷಿನಲ್ಲಿ ರಚಿತವಾದ "ವೈಷ್ಣವಮತ ಮತ್ತು ಶೈವಮತ" ಎಂಬ ಗ್ರಂಥವನ್ನು ಅವರು ನಮ್ಮ ಗಮನಕ್ಕೆ ತರುತ್ತಾರೆ.

ಈಗ ಇನ್ನೂ ಇತ್ಯರ್ಥವಾಗದೇ ಇರುವುದು ಅರ್ಥಶಾಸ್ತ್ರದ ಕರ್ತೃತ್ವ—ಇದು ಕೌಟಿಲ್ಯ ಅಥವಾ ಚಾಣಕ್ಯನೇ ಬರೆದದ್ದೇ ಅಲ್ಲವೇ ಎಂಬ ವಿಚಾರ. ಚಂದ್ರಗುಪ್ತಮೌರ್ಯನ ಕಾಲದಷ್ಟು ಹಿಂದೆ ಇದು ಬರೆದದ್ದಲ್ಲವೆಂದೂ ಅಲ್ಲಿಂದೀಚೆಗೆ (ಎಂದರೆ ಸು. ಕ್ರಿ.ಶ. ಮೊದಲನೆಯ ಅಥವಾ ಎರಡನೆಯ ಶತಮಾನದಲ್ಲಿ) ಬರೆದದ್ದೆಂದೂ ಹೇಳಬೇಕೆನ್ನುವುದು ನನ್ನ ಆಶಯ. ಅಲ್ಲದೆ ಈ ಶಾಸ್ತ್ರವು ಕೌಟಿಲ್ಯಾನುಮತವೇ ಹೊರತು ಕೌಟಿಲ್ಯಕೃತವಲ್ಲ.* (ಇದಕ್ಕೆ ಸಾಧಕಬಾಧಕಗಳು ಹೇಳಲ್ಪಟ್ಟಿವೆ.)

ಅವೆಸ್ತ ಅಥವಾ ಪಾರ್ಶೀಧರ್ಮಗ್ರಂಥಗಳ ವ್ಯಾಸಂಗವು ಸಂಸ್ಕೃತ ವ್ಯಾಸಂಗದ ಜೊತೆಗೆ ಬರುತ್ತಿದೆ. ಇವೆರಡಕ್ಕೂ ಭಾಷಾಸಾಹಿತ್ಯಗಳಲ್ಲಿ ಸೌದರ್ಯ ಎದೆ. ಇದರ ವ್ಯಾಸಂಗವು ಮೊದಲು ಆರಂಭವಾದದ್ದು ೧೮ನೆಯ ಶತಮಾನದಲ್ಲಿ–ಒಬ್ಬ ಫ್ರೆಂಚ್ ವಿದ್ವಾಂಸನಿಂದ. ಈಚೆಗೆ ನಮ್ಮಲ್ಲಿಯೂ, ಕೆ. ಆರ್. ಕಾಮ, ಜೆ.ಜೆ. ಮೋಡಿ ಮುಂತಾದ ಪಾರ್ಶಿ ಜನಗಳು ಇದರಲ್ಲಿ ಹೆಚ್ಚು ಆಸಕ್ತಿವಹಿಸುತ್ತಿರುವರು. ಪಾರ್ಶಿಗಳು ಇದಕ್ಕೆ ಈಗಿಗಿಂತಲೂ ಹೆಚ್ಚು ಗಮನವನ್ನು ಕೊಡಬೇಕು

ಅರಬ್ಬಿ ಪಾರ್ಶಿ ಸಾಹಿತ್ಯಗಳ ವ್ಯಾಸಂಗವೂ ನಮಗೆ ಉಪಯೋಗಕರವೇ. ಆಲ್ಬರೂನಿ ಮುಂತಾದ ಪಾರ್ಶಿ ಮತ್ತು ಅರಬ್ಬಿ ಲೇಖಕರು ತಮ್ಮ ಕಾಲದಲ್ಲಿ ಪ್ರಚಾರವಾಗಿದ್ದ ಭಾರತೀಯ ಇತಿಹಾಸ ಧರ್ಮ ಆಚಾರ ರೀತಿ ನೀತಿಗಳ ವಿಚಾರವಾಗಿ ಅನೇಕ ಸಂಗತಿಗಳನ್ನು ತಿಳಿಸುತ್ತಾರೆ. ನಾವು ಮಾತನಾಡುತ್ತಿರುವ ದೇಶಭಾಷೆಗಳಲ್ಲಿ ಅನೇಕಗಳು ಈ ಭಾಷೆಗಳಿಂದ ಅನೇಕ ಶಬ್ದಗಳನ್ನು ತೆಗೆದುಕೊಂಡಿವೆ. ಇವುಗಳ ವಿಚಾರವು ತತ್ವತಃ ತಿಳಿಯಬೇಕಾದರೆ ಈ ಭಾಷೆಗಳ ವ್ಯಾಸಂಗವು ಬೇಕೇ ಬೇಕು.

ಇದರಂತೆ ಚೈನಾ ಮುಂತಾದ ಮತ್ತೆ ಕೆಲವು ಭಾಷೆಗಳ ವ್ಯಾಸಂಗವೂ ಆವಶ್ಯಕ. ಅದಿಲ್ಲದಿದ್ದರೆ ಪ್ರಾಚ್ಯವಿಚಾರ ವ್ಯಾಸಂಗವು ಸಂಪೂರ್ಣವಾಗಲಾರದು.

---

* ಡಾ|| ಸ್ಟೀನ್‌ರವರು ಬರೆದ "ಮೆಗಾಸ್ತನೀಸ್ ಮತ್ತು ಕೌಟಿಲ್ಯ" ಎಂಬ ಗ್ರಂಥದಿಂದ ಮೆಗಾಸ್ತನೀಸನ ಹೇಳಿಕೆಗೂ ಅರ್ಥಶಾಸ್ತ್ರದಲ್ಲಿ ಹೇಳಿರುವ ವಿಚಾರಗಳಿಗೂ ಐಕ್ಯವಿಲ್ಲವೆಂದೂ, ಅವರಿಬ್ಬರೂ ಸಮಕಾಲಿಕರಾಗಿರಲಾರರೆಂದೂ ಗೊತ್ತಾಗುತ್ತದೆ. ಅರ್ಥಶಾಸ್ತ್ರವು ಕೌಟಿಲ್ಯ ಕೃತವೇ ಅದರಲ್ಲಿ ಪ್ರತಿಪಾದಿತವಾಗಿರುವ ದೇಶಸ್ಥಿತಿಯು ಯಾವಕಾಲದ್ದು ಎಂಬ ವಿಚಾರಗಳಲ್ಲಿ ಭಿನ್ನಾಭಿಪ್ರಾಯಗಳಿವೆ. ಅಕ್ಟೋಬರ್ ೧೯೨೩ ನೆಯ ರಾ. ಏ. ಸೊ. ಪತ್ರಿಕೆ (ಲಂಡನ್) ಪುಟ ೬೨೩ ನ್ನು ನೋಡಿ. ಅರ್ಥಶಾಸ್ತ್ರ ಗ್ರಂಥವು ಕ್ರಿ.ಪೂ. ನಾಲ್ಕನೆಯ ಶತಮಾನದಷ್ಟು ಹಿಂದಿನದಲ್ಲವೆಂದು ಡಾ|| ವಿಂಟರ್‌ನಿಟ್ಸ್ ಮುಂತಾದ ಮತ್ತೆ ಕೆಲವು ವಿದ್ವಾಂಸರೂ ಅಭಿಪ್ರಾಯಪಡುತ್ತಾರೆ.—ಸಂ.

ಸಂಸ್ಕೃತ ಮತ್ತು ಅವೆಸ್ತ (ಪಾರ್ಶಿ) ಭಾಷೆಗಳನ್ನೂ ಹಿಂದೂ ಮತ್ತು ಪಾರ್ಶಿಜನರ ದೇವತೆಗಳ ಹೆಸರುಗಳನ್ನೂ ಹೋಲಿಸಿನೋಡಿದರೆ ಈಗಿನ ಹಿಂದೂ ಪಾರ್ಶಿಜನರ ಪೂರ್ವಿಕರು ಒಂದೇ ಕಡೆಯಲ್ಲಿ ವಾಸವಾಗಿದ್ದು ಒಂದೇ ಧರ್ಮವನ್ನು ಅನುಸರಿಸುತ್ತಿದ್ದರೆಂದು ಹೇಳಬಹುದು. (ಉದಾ.—ಅಸುರ, ಮಿತ್ರ, ಇಂದ್ರ ಇತ್ಯಾದಿ) ಆದರೆ ಈ ಪೂರ್ವಿಕರು ಎಲ್ಲಿದ್ದರು ಎಂಬುದು ಇನ್ನೂ ನಿಷ್ಕರ್ಷೆಯಾಗಿಲ್ಲ; ಅಂತೂ ಅವರು ಹಿಂದೂ ದೇಶದಲ್ಲಿ ಇರಲಿಲ್ಲವೆಂದು ಹೇಳಬಹುದು. ಏಕೆಂದರೆ ಋಗ್ವೇದದಲ್ಲಿ ವರ್ಣಿತ ವಾಗಿರುವ ಅನೇಕ ವಿಷಯಗಳು ನಮ್ಮ ದೇಶಕ್ಕೆ ಸಂಬಂಧಪಡತಕ್ಕುವಲ್ಲ. ಅವರು ಋಗ್ವೇದ ಭಾಷೆಗಿಂತಲೂ ಪ್ರಾಚೀನತರವಾದ 'ಗೀರ್ವಾಣ' ಭಾಷೆಯನ್ನು ಮಾತನಾಡುತ್ತಿದ್ದು ಯಾವುದೋ ಒಂದು ಕಾರಣದಿಂದ ವೈಮನಸ್ಯಹುಟ್ಟಲು ಬೇರೆಯಾಗಿ ಒಬ್ಬರನ್ನೊಬ್ಬರು ದ್ವೇಷಿಸುವುದಕ್ಕೆ ಮೊದಲುಮಾಡಿದರೆಂದು ತೋರುತ್ತದೆ. ಸಂಸ್ಕೃತದಲ್ಲಿ 'ಅಸುರ' ನೆಂದರೆ ರಾಕ್ಷಸನೆಂದರ್ಥವಷ್ಟೆ. ಆದರೆ ಅವೆಸ್ತದಲ್ಲಿ ಇದಕ್ಕೆ 'ದೇವತೆ' (ಅಹುರ) ಎಂದು ಅರ್ಥ. ಋಗ್ವೇದದಲ್ಲಿಯೂ ೧೦೫ ಅಸುರ ಶಬ್ದಗಳಲ್ಲಿ ೯೦ಕ್ಕೆ 'ದೇವತೆ' ಯೆಂಬ ಅರ್ಥವೂ ೧೫ ಕ್ಕೆ ಮಾತ್ರ ರಾಕ್ಷಸನೆಂಬ ಅರ್ಥವೂ ಸಂಗತವಾಗುತ್ತದೆ. ಇದನ್ನು ನೋಡಿದರೆ ಅಸುರಶಬ್ದಕ್ಕೆ ಮೊದಲು ಒಳ್ಳೆಯ ಅರ್ಥವಿದ್ದು ಹಿಂದೂ ಪಾರ್ಶಿಜನಗಳಿಗೆ ಜಗಳವಾಗಿ ದ್ವೇಷ ಹುಟ್ಟಿದಮೇಲೆ ಕ್ರಮವಾಗಿ ಅದಕ್ಕೆ ವಿರುದ್ಧಾರ್ಥವು ಬಂದಂತೆ ತೋರುತ್ತದೆ.

ಪಾರ್ಶಿಜನರು ಮತ್ತು ಮಗಬ್ರಾಹ್ಮಣರು.

ಈ ದ್ವೇಷಕ್ಕೂ ಜಗಳಕ್ಕೂ ಪೂಜಾಕ್ರಮದಲ್ಲಿ ಭಿನ್ನಾಭಿಪ್ರಾಯವೇ ಕಾರಣವೆಂದು ತೋರುತ್ತದೆ. ಇಬ್ಬರೂ ಸೂರ್ಯಾಗ್ನಿಗಳನ್ನು ಆರಾಧಿಸುತ್ತಿದ್ದರು. ಪಾರ್ಶಿಗಳು ಈ ದೇವತೆಗಳಿಗೆ ದೇವಸ್ಥಾನಗಳನ್ನು ಕಟ್ಟಬೇಕೆಂದೂ ಪುರಾತನಾರ್ಯರು ದೇವಾಲಯಗಳು ಆವಶ್ಯಕವಲ್ಲನೆಂದೂ ಜಗಳವಾಡಿರಬಹುದು. ಇದಕ್ಕೆ ಮುಂದೆ ಹೇಳುವ ಕಾರಣಗಳಿವೆ:—

ಭರತಖಂಡದಲ್ಲಿ ಸೂರ್ಯದೇವಾಲಯಗಳು ಬಹಳ ಕಡಿಮೆ. ಸೂರ್ಯದೇವಾಲಯವನ್ನು ಕಟ್ಟಿಸುವುದು ಒಳ್ಳೆಯದಲ್ಲವೆಂಬ ನಂಬಿಕೆಯೂ ಇದೆ. ಇಂಥ ದೇವಾಲಯದಲ್ಲಿ ದೇವತಾಪ್ರತಿಷ್ಠೆ ಮುಂತಾದ ಕಾರ್ಯಗಳನ್ನು 'ಮಗ' ಅಥವಾ 'ಭೋಜಕ' ಜಾತಿಯ ಬ್ರಾಹ್ಮಣರೇ ಮಾಡಬೇಕೆಂಬ ವಿಧಿಯಿದೆ.

ಈ 'ಮಗ' ಬ್ರಾಹ್ಮಣರು ಯಾರು ? ಇವರು ಪೂರ್ವದಲ್ಲಿ ಶಾಕದ್ವೀಪ ಅಥವಾ ಶಾಕಸ್ಥಾನದಲ್ಲಿ ಇದ್ದರಂತೆ. (ಇದು ಈಗ ಪರ್ಷಿಯಾದೇಶದಲ್ಲಿರುವ

"ಷಿಸ್ತಾರ್ಕ" ಎಂಬ ಪ್ರದೇಶ.) ಭವಿಷ್ಯ ಮಹಾಪುರಾಣದ ಬ್ರಹ್ಮಪರ್ವದಲ್ಲಿ ಇವರ ವಿಚಾರವು ಬರುತ್ತದೆ. ಆ ಭಾಗದಿಂದ ತಿಳಿದುಬರುವುದೇನೆಂದರೆ:—

ಶ್ರೀಕೃಷ್ಣನ ಮಗನಾದ ಶಾಂಬನು ದೂರ್ವಾಸರ ಶಾಪದಿಂದ ಕುಷ್ಠರೋಗ ಪೀಡಿತನಾದನು. ಆಗ ನಾರದರ ಹೇಳಿಕೆಯ ಪ್ರಕಾರ ಸೂರ್ಯೋಪಾಸನೆಮಾಡಿ ಅದನ್ನು ವಾಸಿಮಾಡಿಕೊಳ್ಳುವುದಕ್ಕಾಗಿ ಅವನು ಚೀನಾಬ್ (ಚಂದ್ರಭಾಗಾ) ನದಿಯ ತೀರದಲ್ಲಿರುವ ಮುಲ್ತಾನ್ (ಮಿತ್ರವನ) ದಲ್ಲಿ ಒಂದು ಸೂರ್ಯದೇವಾಲಯ ವನ್ನು ಕಟ್ಟಿಸಿದನು. ಆದರೆ ದೇವತಾಪ್ರತಿಷ್ಠೆಮಾಡುವದಕ್ಕೆ ಬ್ರಾಹ್ಮಣರಾರೂ ಒಪ್ಪಲಿಲ್ಲ. ಆಗ ಗೌರಮುಖಋಷಿಗಳಿಂದ 'ಮಗ' ಬ್ರಾಹ್ಮಣರ ವೃತ್ತಾಂತವು ತಿಳಿಯಿತು. ಮಗಬ್ರಾಹ್ಮಣರು 'ಜರಸಷ್ಟ' (ಜೋರೋಆಸ್ಟರ್) ನ ವಂಶದಲ್ಲಿ ಹುಟ್ಟಿದವರು. ಜರಸಷ್ಟನು ಸೂರ್ಯನಿಂದ 'ನಿಕ್ಷುಭ'ಳಲ್ಲಿ ಹುಟ್ಟಿದವನು. ನಿಕ್ಷುಭಳು ಮಿಹಿರಗೋತ್ರೋತ್ಪನ್ನನಾದ ಋಜ್ಜಿಹ್ವನ ಮಗಳು. ಈ ಮಗಬ್ರಾಹ್ಮಣರೇ ಸೂರ್ಯಪ್ರತಿಷ್ಠಾಪೂಜಾದಿಗಳನ್ನು ಮಾಡಲು ಯೋಗ್ಯರು.—ಇತ್ಯಾದಿ. ಅನಂತರ ಸೂರ್ಯನಿಂದಲೇ ಮಗಬ್ರಾಹ್ಮಣರ ವಾಸಸ್ಥಾನ ಮುಂತಾದ ಸಂಗತಿಗಳು ತಿಳಿದುವು:—ಅವರು ಜಂಬೂದ್ವೀಪದ ಎದುರಿಗೆ ಇರುವ ಶಕದ್ವೀಪದಲ್ಲಿರುತ್ತಾರೆ. ಅಲ್ಲಿಯ ಜನರಲ್ಲಿ ಮಗ, ಮಗಗ, ಮನಗ ಮತ್ತು ಮಂಗಗ ಎಂದು ನಾಲ್ಕು ಭೇದಗಳಿವೆ. ಇವರು ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ...... ಶಾಂಬನು ಶಕದ್ವೀಪದಿಂದ ಹದಿನೆಂಟು ಜನ ಮಗಬ್ರಾಹ್ಮಣರನ್ನು ಕರೆತಂದು ತಾನು ಕಟ್ಟಿಸಿದ್ದ ಸೂರ್ಯದೇವಾಲಯದಲ್ಲಿ ದೇವರನ್ನು ಪ್ರತಿಷ್ಠಿಸಿ ಪೂಜಿಸಿದನು. ಅವನ ರೋಗವು ವಾಸಿಯಾಯಿತು. ಮಿತ್ರವನಕ್ಕೆ ಶಾಂಬಪುರವೆಂದು ಹೆಸರಿಟ್ಟು ಅದನ್ನು ಆ ಬ್ರಾಹ್ಮಣರಿಗೆ ಧಾರೆಯೆರೆದನು. ಅವರು ಭೋಜವಂಶದಲ್ಲಿ ಹೆಣ್ಣನ್ನು ತಂದರು. ಅವರ ವಂಶೀಯರಿಗೆ ಭೋಜಕರೆಂದು ಹೆಸರಾಯಿತು.

ಮಹಾಭಾರತದ ಭೀಷ್ಮಪರ್ವದಲ್ಲಿಯೂ ಈ ಪ್ರಸ್ತಾಪವು ಬರುತ್ತದೆ. ಆದರೆ ಅಲ್ಲಿ ಈ ಜನರು ಮಂಗ, ಮಶಕ, ಮಾನಸ, ಮಂದಗ ಎಂದು ವಿಭಾಗಿಸಲ್ಪಟ್ಟಿದ್ದಾರೆ. ಅವರಲ್ಲಿ ರಾಜನು ಇರಲಿಲ್ಲವೆಂದೂ ಆ ಜನರು ತಮ್ಮ ರಾಜ್ಯವನ್ನು ತಾವೇ ಆಳಿಕೊಳ್ಳುತ್ತಿದ್ದರೆಂದೂ ಒಂದು ಹೆಚ್ಚು ಅಂಶವು ಭಾರತದಿಂದ ತಿಳಿದುಬರುತ್ತದೆ. ಭೀಷ್ಮಪರ್ವದ ಮತ್ತೊಂದು ಭಾಗದಿಂದ, ಉತ್ತರ ಕುರುವಿನಲ್ಲಿ (ಉತ್ತರಪರ್ಷಿಯ, ಮೆಸೆಪೋಟೊಮಿಯ ?) ಭಾರುಂಡ ಪಕ್ಷಿಗಳು ಶವಗಳನ್ನು ಎತ್ತಿಕೊಂಡು ಹೋಗಿ ದೊಡ್ಡಹಳ್ಳದಲ್ಲಿ ಹಾಕುತ್ತಿದ್ದುವು ಎಂದು ಗೊತ್ತಾಗುತ್ತದೆ. ಇದನ್ನು ನೋಡಿದರೆ ಆ ಜನರು ಈಗಿನ ಪಾರ್ಶಿಕರ ಮೂಲಪುರುಷರಿರಬಹುದೆಂದು ತೋರುತ್ತದೆ.

ಮಹಾಭಾರತದಲ್ಲಿ ಮಗಬ್ರಾಹ್ಮಣರು ಇಂಡಿಯಾದೇಶಕ್ಕೆ ಬಂದದ್ದರ ವರ್ಣನೆಯಿಲ್ಲ; ಆದ್ದರಿಂದ ಅವರು ಮಹಾಭಾರತಲೇಖನದ ಅನಂತರ ಬಂದಿರಬೇಕು. ವರಾಹಮಿಹಿರನು ಬೃಹತ್ಸಂಹಿತೆಯಲ್ಲಿ (ಆರನೆಯ ಶತ) ಮಗಬ್ರಾಹ್ಮಣರು ಸೂರ್ಯಪೂಜೆಗೆ ಸರ್ವೋತ್ತಮರೆಂದು ಹೇಳುತ್ತಾನೆ. ಇದನ್ನೂ ಶಾಸನಗಳನ್ನೂ ನೋಡಿದರೆ ಕ್ರಿ. ಶ. ಐದು ಆರನೆಯ ಶತಮಾನಗಳಲ್ಲಿ ಮಗಬ್ರಾಹ್ಮಣರು ಹಿಂದೂಗಳಲ್ಲಿ ಬೆರೆತು ಗಣ್ಯರಾಗಿದ್ದಂತಿದೆ. ಇವರ ವಂಶಸ್ಥರು ಈಗ ಕಚ್, ಸಿಂಧೂದೇಶ, ಮಾರ್ವಾರ, ಕಾಶ್ಮೀರ ಮುಂತಾದ ಕಡೆಗಳಲ್ಲಿ ಇರುತ್ತಾರೆ. ಅವರಿಗೆ ಭೋಜಕರು, ಸೇವಕರು ಅಥವಾ ಮಗಬ್ರಾಹ್ಮಣರು ಶಾಕದ್ವೀಪಬ್ರಾಹ್ಮಣರು ಎಂದು ಹೆಸರು.

ಈ ಮಗ ಬ್ರಾಹ್ಮಣರನ್ನು ಬೈಬಲ್‌ನಲ್ಲಿ (Magi-ಮ್ಯಾಗೈ) 'ಪೂರ್ವದೇಶದ ಪಂಡಿತರು' ಎಂದು ನಿರ್ದೇಶಿದಂತಿದೆ. ಇವರು ಉತ್ತರ ಪರ್ಷಿಯಾದಲ್ಲಿ ಬಹಳ ಪ್ರಬಲರಾಗಿದ್ದರು.*

---

ರಾಯಲ್ ಏಷಿಯಾಟಿಕ್ ಸೊಸೈಟಿಯ ಬೊಂಬಾಯಿ ಶಾಖೆಯ ಪತ್ರಿಕೆಯಲ್ಲಿ (೧೯೨೨-೨೩) ಮ|| ವಿ. ಎಸ್. ಸುಕ್ತರ್ಣಕರ್ ಅವರು ಭಾಸನ ಗ್ರಂಥಗಳ ವಿಚಾರವಾಗಿ ಒಂದು ಲೇಖನವನ್ನು ಬರೆದಿರುತ್ತಾರೆ. ಅದರಲ್ಲಿ, ಈ ಗ್ರಂಥಗಳು ಎಲ್ಲೆಲ್ಲಿ ಮುದ್ರಿತವಾಗಿವೆ ಯಾರಾರಿಂದ ಯಾವ ಯಾವ ಭಾಷೆಗಳಿಗೆ ಪರಿವರ್ತಿತವಾಗಿವೆ, ಅವುಗಳ ಕಾಲ ಕರ್ತೃ ಮುಂತಾದವುಗಳ ವಿಚಾರವಾಗಿ ಪ್ರಾಚ್ಯ ಮತ್ತು ಪಾಶ್ಚಾತ್ಯ ಪಂಡಿತರು ಏನು ಅಭಿಪ್ರಾಯಪಟ್ಟಿದ್ದಾರೆ ಎಂಬುದನ್ನೆಲ್ಲಾ ಅವರು ತಿಳಿಸಿದ್ದಾರೆ. ಆ ಲೇಖನದಿಂದ ಕೆಲವು ಅಂಶಗಳನ್ನು ಸಂಗ್ರಹಿಸಿ ಇಲ್ಲಿ ಕೊಟ್ಟಿದ್ದೇವೆ.—

**ಭಾಸನ ನಾಟಕಗಳು**

ಪಂಡಿತ ಗಣಪತಿಶಾಸ್ತ್ರಿಗಳು ದಕ್ಷಿಣ ದೇಶದಲ್ಲಿ ತಮಗೆ ದೊರೆತ ಕೆಲವು ದೃಶ್ಯಕಾವ್ಯಗಳನ್ನು ಪ್ರಕಟಿಸಿದ ಮೇಲೆ ಅವುಗಳ ವಿಷಯವಾಗಿ ಸಂಸ್ಕೃತವಿದ್ವಾಂಸರು ವಿಚಾರಮಾಡುತ್ತಿದ್ದಾರೆ. ಆದರೆ ಇನ್ನೂ ಯಾರೂ ಯಾವ ಸಿದ್ಧಾಂತಕ್ಕೂ ಬಂದಿಲ್ಲ. ಕೆಲವರು ಈ ರೂಪಕಗಳು ಕ್ರಿ.ಪೂ. ಐದನೆಯ ಶತಮಾನದವುಗಳೆನ್ನುವರು; ಕೆಲವರು ಕ್ರಿ.ಶ. ಹತ್ತನೆಯ ಶತಮಾನದವುಗಳೆನ್ನುವರು; ಕೆಲವರು ಇವು ಸುಪ್ರಸಿದ್ಧನಾದ ಭಾಸನಿಂದ ರಚಿತವಾ

---

*ರಾಯಲ್ ಏಷಿಯಾಟಿಕ್ ಸೊಸೈಟಿ ಬೊಂಬಾಯಿ ಶಾಖೆಯ ಪತ್ರಿಕೆಯಲ್ಲಿ (೧೯೨೨-೨೩) ರಾವ್‌ಬಹದ್ದೂರ್ ಪಿ. ಬಿ. ಜೋಷಿಯೆಂಬವರು ಬರೆದಿರುವ 'Side Lights on the past History of the Parsis' ಎಂಬ ಲೇಖನದ ಆಧಾರದ ಮೇಲೆ ಬರೆದದ್ದು.

ದವುಗಳೆನ್ನುವರು; ಮತ್ತೆ ಕೆಲವರು ಇವು ಯಾರೋ ಅನಾಮಧೇಯನಿಂದ ರಚಿತವಾದವುಗಳು, (ಅವನ ಹೆಸರೂ ಕೂಡ ಈಗ ಮರೆತುಹೋಗಿದೆ) ಎನ್ನುವರು, ಇವು ಭಾಸಕರ್ತೃಕವಾಗಿದ್ದರೂ ಆಗಿರಬಹುದು, ಆದರೆ ಹೀಗೇ ಎಂದು ನಿರ್ಧರವಾಗಿ ಹೇಳುವುದಕ್ಕೆ ಇದುವರೆಗೆ ದೊರೆತಿರುವ ಪ್ರಮಾಣಗಳು ಸಾಲವೆಂದು ಕೆಲವರು ಹೇಳುತ್ತಾರೆ. ಹೀಗೇ ಇವುಗಳಲ್ಲಿ ಸ್ವಾರಸ್ಯವಿದೆ ಎಂದು ಕೆಲವರು; ಇಲ್ಲವೆಂದು ಕೆಲವರು.*

ಇವು ಭಾಸಕರ್ತೃಕವೆಂದು ಹೇಳುವುದಕ್ಕೆ ಕಾರಣಗಳು:—

(೧) ಈ ಗ್ರಂಥಗಳಿಗೆಲ್ಲಾ ಕೆಲವು ಲಕ್ಷಣಗಳು ಸಾಮಾನ್ಯವಾಗಿವೆ; ರೀತಿಯೂ ಸಂಗತಿಗಳೂ ಒಂದೇ ಜಾತಿಯವಾಗಿವೆ; ಅನೇಕ ಅಭಿಪ್ರಾಯಗಳೂ ಪಂಕ್ತಿಗಳೂ ಒಂದರಂತೆ ಮತ್ತೊಂದಿರುತ್ತವೆ. ಇವುಗಳನ್ನೆಲ್ಲಾ ನೋಡಿದರೆ ಇವು ಏಕಕರ್ತೃಕವೆಂದು ಹೇಳಬಹುದಾಗಿದೆ. ಇವುಗಳಲ್ಲಿ 'ಸ್ವಪ್ನವಾಸವದತ್ತ' ವೂ ಒಂದು; ಭಾಸನು ಈ ಹೆಸರಿನ ನಾಟಕ ಒಂದನ್ನು ಬರೆದಿದ್ದನೆಂಬುದು ಗೊತ್ತಿದೆ.

(೨) ಬಾಣನು ಹರ್ಷಚರಿತೆಯಲ್ಲಿ ಭಾಸನಾಟಕಗಳ ಪ್ರಸ್ತಾವನೆಯ ಕೆಲವು ವೈಲಕ್ಷಣ್ಯಗಳನ್ನು ತಿಳಿಸಿದ್ದಾನೆ; ಅವು ಈ ಗ್ರಂಥಗಳ 'ಸ್ಥಾಪನೆ' ಗಳಲ್ಲಿ ಕಂಡುಬರುತ್ತವೆ.

(೩) ಇವುಗಳ 'ಸ್ಥಾಪನೆ' ಯಲ್ಲಿ ಕವಿಯ ಹೆಸರು ಬರುವುದಿಲ್ಲ. ಇದನ್ನು ನೋಡಿದರೆ ಈ ಗ್ರಂಥಗಳು ಬಹು ಪ್ರಾಚೀನವೆಂದು ತೋರುತ್ತದೆ. ಇವುಗಳಲ್ಲಿ ಬರುವ ಆರ್ಷಪ್ರಯೋಗಗಳೂ ವಿಶೇಷ ಲಕ್ಷಣಗಳೂ ಈ ಅಭಿಪ್ರಾಯವನ್ನೇ ಸ್ಥಾಪಿಸುತ್ತವೆ.

---

* ಇಲ್ಲಿ ಕೆಲವು ಅಭಿಪ್ರಾಯಗಳನ್ನು ಸೂಚಿಸಬಹುದು:—

| | | |
|---|---|---|
| ಭಿಡೆ | ಕ್ರಿ. ಪೂ. | ೫ ನೆಯ ಶತ |
| ಗಣಪತಿಶಾಸ್ತ್ರಿಗಳು | ,, | ೨ ಅಥವಾ ೩ ನೆಯ ,, |
| ಜಯಸ್ವಾಲ್ ಮತ್ತು ಚೌಧುರಿ | ,, | ೧ ,, |
| ಕೋನೋ, ಸ್ವಾಲಿ | ಕ್ರಿ. ಶ. | ೨ ನೆಯ ಶತ |
| ಬಾನರ್ಜಿಶಾಸ್ತ್ರಿ, ಜಾಲಿ, ಜಾಕೋಬಿ | ,, | ೩ ಅಥವಾ ೪ ನೆಯ ,, |
| ಲೆಸ್ನಿ, ವಿಣ್ಟರ್‌ನಿಟ್ಸ್ | ,, | ೪ ನೆಯ ಶತ |
| ಬಾರ್ನೆಟ್ | ,, | ೭ ನೆಯ ,, |
| ಕಾಣೆ | ,, | ೯ ನೆಯ ಶತ |
| ರಾಮಾವತಾರಶರ್ಮ ಪಾಂಡೆಯ | ,, | ೧೦ ನೆಯ ಶತ |
| ರಂಗಾಚಾರ್ಯ ರೆಡ್ಡಿ | ,, | ೧೧ ನೆಯ ಶತ |

(೪) ಇವು ಸುಪ್ರಸಿದ್ಧವಾಗಿದ್ದದ್ದರಿಂದ ಭಾಮಹ ದಂಡಿ ವಾಮನ ಮುಂತಾದ ಲಾಕ್ಷಣಿಕರು ಅವುಗಳಿಂದ ಕೆಲವು ಶ್ಲೋಕಗಳನ್ನು ಅನುವಾದ ಮಾಡಿದ್ದಾರೆ; ಆಕರ (Source) ಗಳ ಹೆಸರನ್ನು ಮಾತ್ರ ಹೇಳಿಲ್ಲ.

(೫) ಕಾಳಿದಾಸ ಭವಭೂತಿ ಮುಂತಾದ ಕವಿಗಳು ಇವುಗಳಿಂದ ರಮಣೀಯವಾದ ಮಾತುಗಳನ್ನೂ ಉಪಮಾನಗಳನ್ನೂ ತೆಗೆದುಕೊಂಡಿದ್ದಾರೆ.

ಇವು ಅತ್ಯುತ್ತಮವಾದ ರೂಪಕಗಳಾಗಿಯೂ ಭಾಸನ ಹೆಸರಿಗೆ ಗೌರವವನ್ನು ತರತಕ್ಕವುಗಳಾಗಿಯೂ ಇವೆ.

ಪ್ರತಿಪಕ್ಷದವರು ಹೇಳುವುದೇನೆಂದರೆ:—

(೧) ಕೆಲವು ಆಲಂಕಾರಿಕರು ಸ್ವಪ್ನವಾಸವದತ್ತದ್ದೆಂದು ಅನುವಾದ ಮಾಡುವ ಶ್ಲೋಕಗಳು ಈ "ಸ್ವಪ್ನವಾಸವದತ್ತ" ದಲ್ಲಿಲ್ಲ. ಆದ್ದರಿಂದ ಅವರು ಅನುವಾದಮಾಡುವ ಶ್ಲೋಕಗಳು ಭಾಸಕರ್ತೃಕವಾಗಿಯೂ ಇದಕ್ಕೆ ಮೂಲವಾಗಿಯೂ ಇರುವ ಬೇರೆ ಗ್ರಂಥದಲ್ಲಿ ಇದ್ದಿರಬೇಕು. ಇದರಂತೆ ಭಾಸನ ಶ್ಲೋಕಗಳೆಂದು ಅಲ್ಲಲ್ಲಿ ಅನುವಾದಮಾಡಿರುವ ಶ್ಲೋಕಗಳು ಈ ನಾಟಕಗಳಲ್ಲಿ ದೊರೆಯುವುದಿಲ್ಲ.

(೨) ಬಾಣನ ಹರ್ಷಚರಿತದಿಂದ ತೆಗೆದ ಶ್ಲೋಕಕ್ಕೆ ಅಪಾರ್ಥಮಾಡಿದ್ದಾರೆ; ಮತ್ತು ಪ್ರಕೃತ ವಿಚಾರಕ್ಕೂ ಅದಕ್ಕೂ ಸಂಬಂಧವೇ ಇಲ್ಲ.

(೩) ಕಾಳಿದಾಸಾದಿಗಳ ಗ್ರಂಥಗಳಿಗೂ ಈ ಗ್ರಂಥಗಳಿಗೂ ಸಾಮ್ಯಸಾದೃಶ್ಯಾದಿಗಳಿರುವುದನ್ನು ನೋಡಿದರೆ ಈತನು ಎಷ್ಟು ನಿರ್ಲಜ್ಜನಾಗಿ ಇತರರ ಗ್ರಂಥಗಳಿಂದ ಚೌರ್ಯಮಾಡಿದನೆಂಬುದು ಗೊತ್ತಾಗುತ್ತದೆ.

(೪) ಇವುಗಳಲ್ಲಿರುವ ಅಕ್ರಮ ವೈಲಕ್ಷಣ್ಯಗಳೂ ಬಹಳವಾದ ಅಸಾಧು ಪ್ರಯೋಗಗಳೂ ಸಾಧಾರಣ ಕವಿಯೂ ಮಾಡತಕ್ಕವುಗಳಲ್ಲ; ಭಾಸನಂಥ ಕವಿಯು ಸುತರಾಂ ಮಾಡತಕ್ಕವುಗಳೇ ಅಲ್ಲ. ಇವುಗಳ ಯೋಗ್ಯತೆಯೂ ಸಾಧಾರಣವಾಗಿದೆ. ಭಾಸನಂಥ ಕವಿಯ ಗ್ರಂಥಗಳಲ್ಲಿ ಇರಬೇಕಾದಷ್ಟು ಇಲ್ಲ.

ಈಚೆಗೆ 'ಮತ್ತವಿಲಾಸ' ಮುಂತಾದ ಮತ್ತೆ ಕೆಲವು ರೂಪಕಗಳು ಸಿಕ್ಕಿವೆ. ಇವೂ ಈ 'ಭಾಸ' ನಾಟಕಗಳಂತೆಯೇ ಇವೆ; ಇವು ಭಾಸಕರ್ತೃಕವೇ ಆಗಲಿ ಬಿಡಲಿ ಇವುಗಳ ರೀತಿಯೇ ಒಂದು ಮಾದರಿಯಾಗಿರುವುದರಿಂದ ಇವುಗಳನ್ನು ವ್ಯಾಸಂಗಮಾಡುವುದರಿಂದ ಫಲವುಂಟು; ಯಾವನೋ ಒಬ್ಬ ಕವಿಯ ಚೌರ್ಯವೆಂದು ಹೇಳಿ ಇವುಗಳನ್ನು ತಳ್ಳಿಬಿಡುವುದರಿಂದ ಪ್ರಯೋಜನವಿಲ್ಲ.

---




ರಕ್ತಾಕ್ಷಿ ಸಂವತ್ಸರ —೨೦— ದೀಪಾವಳಿಯ ಸಂಚಿಕೆ

ಸಂಪುಟ ೬] ವಿಷಯ ಸೂಚಿಕೆ [ಸಂಚಿಕೆ ೨

೧. ಕವನ— ಶ್ರೀನಿವಾಸ

೨. ಸಾಹಿತ್ಯದಲ್ಲಿ ವಿಮರ್ಶೆಯ ಕಾರ್ಯ—ಮ|| ಎಂ. ವೆಂಕಟೇಶಯ್ಯಂಗಾರ್ ಎಂ.ಎ.

೩. ಕರ್ಣಾಟಕ ಸ್ವಪ್ನವಾಸವದತ್ತನಾಟಕಂ— ವೇ|| ದೇ|| ಅಳಸಿಂಗ್ರಾಚಾರ್ಯರು.

೪. ಮೈಸೂರು ದೇಶದ ವಾಸ್ತುಶಿಲ್ಪ— ಮ|| ಬಿ. ವೆಂಕೋಬರಾವ್, ಬಿ. ಎ.

೫. ಕಾವ್ಯದ ಅನಾದರ—(ರವೀಂದ್ರನಾಥಠಾಕೂರರವರ ಪ್ರಬಂಧದ ಭಾಷಾಂತರ.)— ಮ|| ಟಿ. ಎಸ್. ವೆಂಕಣ್ಣಯ್ಯ, ಎಂ.ಎ.

೬. "ಶಾನುಭೋಗನ ಪುಣ್ಯ" (ಒಂದು ಸಣ್ಣಕಥೆ)— "ಶ್ರೀಪತಿ."

೭. "ಕಾವ್ಯಾವಲೋಕನ"

೮. "ವಸ್ತುಕೋಶ"

ಬೆಂಗಳೂರು
ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಟಿಸಲ್ಪಟ್ಟಿದೆ.
೧೯೨೪

# ೩೯ ನೇ ಹಿಂದೀ ರಾಷ್ಟ್ರೀಯ ಮಹಾಸಭೆ, ೧೯೨೪.

## ಬೆಳಗಾಂವಿ.

೧. ಬರುವ ಡಿಸೆಂಬರ್ ತಿಂಗಳಿನಲ್ಲಿ ಬೆಳಗಾಂವಿಯಲ್ಲಿ ಸೇರುವ ರಾಷ್ಟ್ರೀಯ ಮಹಾಸಭೆಯಲ್ಲಿ ಹಾಡುವುದಕ್ಕೆ ಎರಡು ಸ್ವಾಗತಗೀತಗಳು ಬೇಕಾಗಿವೆ. ಇವುಗಳಲ್ಲಿ ಒಂದು ಕನ್ನಡ ಭಾಷೆಯಲ್ಲಿಯೂ, ಒಂದು ಸಂಸ್ಕೃತ ಭಾಷೆಯಲ್ಲಿಯೂ ಇರಬೇಕು.

೨. ಹಾಗೆಯೇ ಎರಡು ರಾಷ್ಟ್ರಗೀತಗಳೂ ಬೇಕಾಗಿವೆ. ಇವೆರಡೂ ಕನ್ನಡ ಭಾಷೆಯಲ್ಲಿರಬೇಕು. ಇವುಗಳಲ್ಲಿ ಒಂದು ಭಾರತಮಾತೆಯ ಸ್ತೋತ್ರ ರೂಪವಾಗಿಯೂ, ಇನ್ನೊಂದು ಕರ್ನಾಟಕಮಾತೆಯ ಸ್ತೋತ್ರರೂಪವಾಗಿಯೂ ಇರಬೇಕು.

೩. ಮೇಲ್ಕಂಡ ನಾಲ್ಕು ಗೀತಗಳೂ ಶುದ್ಧವಾದ ಕರ್ನಾಟಕ ಗಾಯನ ಶಾಸ್ತ್ರವನ್ನನುಸರಿಸಿರಬೇಕು. ಗೀತೆಗಳು ಸ್ವದೇಶಾಭಿಮಾನ ಪ್ರೋದ್ದೀಪಕವಾಗಿಯೂ, ಭಾವೋತ್ತೇಜಕವಾಗಿಯೂ, ಗಂಭೀರವಾಗಿಯೂ, ಲಲಿತವಾಗಿಯೂ ಇರಬೇಕು. ಅಲ್ಲದೆ ಬಹುಜನರು ಕೂಡಿಕೊಂಡು ಏಕತಾನಸ್ವರದಿಂದ ಹಾಡುವುದಕ್ಕೆ ಅನುಕೂಲವಾಗಿರಬೇಕು. ಇಂಥ ಗೀತೆಗಳನ್ನು ಕರ್ನಾಟಕದೊಳಗಿನ ಕವಿಗಳು ರಚಿಸಿ ಕಳಿಸಬೇಕೆಂದು ಬಿನ್ನಹವಿದೆ.

೪. ಹೀಗೆ ಬಂದ ಗೀತಗಳಲ್ಲಿ ಯೋಗ್ಯವಾದವುಗಳನ್ನು ಆರಿಸಿ ಉಪಯೋಗಿಸುವ ಸಂಪೂರ್ಣ ಸ್ವಾತಂತ್ರ್ಯವನ್ನು ಈ ಉಪಸಭೆಯವರು ಇಟ್ಟುಕೊಂಡಿರುತ್ತಾರೆ. ಆರಿಸಲ್ಪಟ್ಟ ಗೀತಗಳು ಮುಂದೆ ಅಖಿಲಕರ್ನಾಟಕ ದೇಶಕ್ಕೆ ರಾಷ್ಟ್ರಗೀತಗಳಾಗಿ ಉಪಯೋಗಿಸಲ್ಪಡುವವು.

೫. ಕರ್ನಾಟಕದ ಬೇರೆಬೇರೆ ಭಾಗಗಳಲ್ಲಿರುವ ಪ್ರತಿಭಾಸಂಪನ್ನಕವಿಗಳೆಲ್ಲರೂ ರಾಷ್ಟ್ರದೇವತೆಯ ಸೇವೆಮಾಡುವ ಈ ಸುಸಂಧಿಯನ್ನು ಮನದಂದು ಮೇಲ್ಕಾಣಿಸಿದ ಗೀತಗಳನ್ನು ರಚಿಸಿ, ಬರುವ ಸೆಪ್ಟಂಬರ್ ೧೫ ನೇ ತಾರೀಖಿನೊಳಗಾಗಿ ಧಾರವಾಡದಲ್ಲಿರತಕ್ಕ ಕಾರ್ಯದರ್ಶಿಗಳ ವಿಳಾಸಕ್ಕೆ ಮುಟ್ಟುವಂತೆ ಕಳುಹಿಸಬೇಕಾಗಿ ಪ್ರಾರ್ಥನೆ.

ಮುದ್ವೇಡಕರ ಕೃಷ್ಣರಾವ್,
ಕಾರ್ಯದರ್ಶಿ,
ಸಂಗೀತಶಾಖಾ,
೩೯ ನೇ ರಾಷ್ಟ್ರೀಯ ಮಹಾಸಭೆ.



ಪುಟ ೭೧.





# ಕವನ.

ಎನ್ನ ಕವನ ಅವನ ಕವನ ಎಂದು ನಾವು ಎಂಬದೆಲ್ಲ
ಸಸ್ನುತಾ ನೋಡಲಾಗಿ ನಿನ್ನ ಕವನವೇ ||ಪ||

ಎನ್ನ ಮನದೆ ಅವನ ಮನದೆ ಎಲ್ಲಮನದೆ ನೀನು ಸುಳಿದು
ನಿನ್ನ ಕೊಳಲ ನುಡಿಸಲಾಗಿ ಕವನವಪ್ಪುದು
ಎನ್ನದೇನು ಅವನದೇನು ಎಲ್ಲವೂ ನಿನ್ನದೆಂದು
ಚೆನ್ನಕೇಶವಾ ಅರಿವನೆನಗೆ ಕೊಡುವುದು ||೧||

ವೀಣೆಯೊಂದು ತಂತಿ ಬಹಳ ತಂತಿಗಳಲಿ ಮನೆಯು ಬಹಳ
ವಾಣಿ ಬರುವುದೊಮ್ಮೆಗೊಂದು ಮನೆಯ ಮೀಂಟಲು
ಕೇಣವೇಕೆ ಮನೆಗೆ ಮನೆಗೆ ನಾನು ತಾನು ಎಂಬದಾಗಿ
ಜಾಣರದನು ವೀಣೆ ನುಡಿವುದೆಂದು ಪೇಳ್ವರು ||೨||

ಎಲ್ಲರೊಳೂ ನೀನೆ ಇರುವೆ ಎಲ್ಲವ ನೀ ವ್ಯಾಪಿಸಿರುವೆ
ಎಲ್ಲ ನಿನ್ನ ಸತ್ವದಿಂದ ನುಡಿದು ನಡೆವುದು
ಹುಲ್ಲಿನಂತೆ ಹಗುರ ನಾವು ಎಲ್ಲ ನೀನೆ ಎಂದು ಅರಿದು
ಎಲ್ಲವ ನಿನ್ನಡಿಯೊಳಿಡಲು ಎನಗೆ ಕಲಿಪುದು ||೩||

ಶ್ರೀನಿವಾಸ.

# ಸಾಹಿತ್ಯದಲ್ಲಿ ವಿಮರ್ಶೆಯ ಕಾರ್ಯ.

ಇದರಿಂದ ಸಾಹಿತ್ಯದಲ್ಲಿ ವಿಮರ್ಶೆಯ ಕಾರ್ಯವು ಎಷ್ಟು ಮುಖ್ಯವಾದದ್ದೆಂದು ನಾವು ಊಹಿಸಬಹುದು, ಅದಕ್ಕೆ ಬೇಕಾದ ತಿಳಿವೂ ಬುದ್ಧಿಶಕ್ತಿಯೂ ಎಂಥವು ಎಂದೂ ಯೋಚಿಸಬಹುದು. ಕವಿಯು ಎಂತವನೇ ಆಗಲಿ ಅವನ ಆವೇಶದ ವಿಷಯದಲ್ಲಿ ಯಾವ ವಿಮರ್ಶಕನಿಗಿಂತಲೂ ಅವನಿಗೇ ಹೆಚ್ಚು ತಿಳಿವಳಿಕೆ ಇರಬೇಕಷ್ಟೆ. ಈ ತಿಳಿವಳಿಕೆಗೆ ಪ್ರತಿಯಾಗಿ ವಿಮರ್ಶಕನಲ್ಲಿ ಊಹೆಯೂ ಪ್ರತಿಭೆಯೂ ಇರಬೇಕು. ಎಂದರೆ ಪ್ರಪಂಚದ ವಿಷಯದಲ್ಲಿ ಕವಿಗೆ ಯಾವ ಶಕ್ತಿಯು ಇರಬೇಕೋ ಕಾವ್ಯದ ವಿಷಯದಲ್ಲಿ ವಿಮರ್ಶಕನಿಗೆ ಆ ಶಕ್ತಿಯಿರಬೇಕು. ಈ ಶಕ್ತಿಯೊಂದಿಗೆ ಕವಿಯ ಆಶಯವನ್ನು ತಿಳಿಯುವುದಕ್ಕೆ ತಾಳ್ಮೆಯೂ ಔದಾರ್ಯವೂ ಇರಬೇಕು. ತಾಳ್ಮೆ ಔದಾರ್ಯಗಳಂತೂ ವಿಮರ್ಶಕನಲ್ಲಿ ಬಹಳ ಆವಶ್ಯಕವಾಗಿ ಇರಲೇಬೇಕಾದ ಗುಣಗಳು. ಕವಿಯಲ್ಲಿ ದೋಷವಿದೆ ಎಂದು ಹೇಳುವುದರಲ್ಲಿ ಮಾತ್ರ ಇವು ಎಷ್ಟು ಆವಶ್ಯಕವಾದುವೆಂದು ಹೇಳುವುದು ಸಾಧ್ಯವಲ್ಲ. ಗ್ರಹಣಶಕ್ತಿಯೂ ಔದಾರ್ಯವೂ ಅಲ್ಲದೆ ವಿಮರ್ಶಕನಿಗೆ ಕಾವ್ಯವು ತನ್ನಲ್ಲಿ ಉಂಟಾಗಿಸಿದ ಭಾವಗಳನ್ನು ವಿವರಿಸುವ ಶಕ್ತಿ ಇರಬೇಕು. ಕವಿಯ ಅಭಿಪ್ರಾಯಗಳನ್ನು ತಪ್ಪುಎನ್ನುವುದಕ್ಕಾದರೆ ಕಾವ್ಯದಲ್ಲಿರುವ ವಿಚಾರವನ್ನು ಕುರಿತು ಅವನಿಗೆ ಕವಿಗೆ ತಿಳಿದಿರುವಷ್ಟು ವಿಚಾರವಾದರೂ ತಿಳಿದಿರಬೇಕು. ಎಂದರೆ ವಿಮರ್ಶೆ ಬರೆಯುವೆನೆನ್ನುವವರಿಗೆ ಬಹಳ ಶಕ್ತಿಯೂ ಅನೇಕ ಗುಣಗಳೂ ಇರಬೇಕು ಎಂದ ಹಾಗಾಯಿತು. ಇದರಲ್ಲೇನೂ ಆಶ್ಚರ್ಯಕ್ಕೆ ಕಾರಣವಿಲ್ಲ. ಸಂಗೀತದಲ್ಲಿ ರುಚಿಯುಳ್ಳ ಯಾರಾದರೂ ತಮಗೆ ಸುಖವಾಗಿರುವ ಯಾವ ಸ್ವಲ್ಪಭಾಗವನ್ನಾದರೂ ರಾಗದಲ್ಲಿ ಎಳೆದು ತೋರಿಸಬಹುದು ; ಇದಕ್ಕೆ ಸಂಗೀತದಲ್ಲಿ ನೈಪುಣ್ಯ ಬೇಕಾದದ್ದಿಲ್ಲ. ಆದರೆ ಅದು ಇಂತ ಸ್ವರಗಳಿಂದ ಕೂಡಿದೆ ಎಂದು ಹೇಳುವುದಕ್ಕೆ ಸಂಗೀತದ ವಿವರ ತಿಳಿದವನಾಗಬೇಕು. ಹೀಗೆಯೇ ಸಾಹಿತ್ಯದಲ್ಲಿ ವಿಮರ್ಶಕನಿಗೆ ಸಾಹಿತ್ಯದ ವಿಷಯವು ವಿವರವಾಗಿ ತಿಳಿದಿರಬೇಕು. ಅವನು ಅದಕ್ಕೆ ಸ್ವರಹೇಳುವುದನ್ನು ಬಲ್ಲವನಾಗಿರಬೇಕು. ಅದರ ರಾಗದಲ್ಲಿ ತಪ್ಪುಸ್ವರ ಸೇರಿದ್ದರೆ ಅದನ್ನು ತೆಗೆದು ತೋರಿಸುವವನಾಗಿರಬೇಕು. ಇದಿಷ್ಟನ್ನು ಮಾಡಬಲ್ಲ ವಿಮರ್ಶಕನೇ ಸರಿಯಾದ ವಿಮರ್ಶಕನು. ಇದಿಷ್ಟನ್ನು ಮಾಡಬೇಕಾದರೆ ಅತ್ಯುತ್ತಮವಾದ ಶಕ್ತಿಯೂ ಗುಣವೂ ವಿಮರ್ಶಕನಲ್ಲಿ ಸೇರಿರಬೇಕು. ಇದು ಎಲ್ಲರೂ ಒಪ್ಪುವ ವಿಷಯ.

ಇದಕ್ಕೆ ಕೆಲವರು ಒಂದು ಮಾತನ್ನು ಹೇಳಬಹುದು. ಇಷ್ಟು ಊಹೆಯೂ ಪ್ರತಿಭೆಯೂ ಈ ತಾಳ್ಮೆಯೂ ಔದಾರ್ಯವೂ ಈ ವಿಷಯಪರಿಜ್ಞಾನವೂ ಶಾಸ್ತ್ರ ಪರಿಚಯವೂ ಇರುವಂತ ಮನುಷ್ಯನು ವಿಮರ್ಶೆಯನ್ನು ಏಕೆ ಬರೆಯಬೇಕು ? ಕಾವ್ಯ ವನ್ನು ಬರೆಯಬಾರದೆ ? ಹೀಗೆನ್ನುವವರ ಅಭಿಪ್ರಾಯದಲ್ಲಿ ಕಾವ್ಯವನ್ನು ಬರೆಯು ವುದಕ್ಕಿಂತ ವಿಮರ್ಶೆಯನ್ನು ಬರೆಯುವುದು ಬೀಳಾದ ಕೆಲಸವೆಂದಂತಾಯಿತು. ಹಾಗಲ್ಲದಿದ್ದರೆ ಈ ಪ್ರಶ್ನೆಯನ್ನು ಕೇಳಬೇಕಾದದ್ದೇ ಇಲ್ಲ. ಇದರಲ್ಲಿ ತಿಳಿಯಬೇ ಕಾದದ್ದೇನೆಂದರೆ, ಕಾವ್ಯವೆಲ್ಲ ಒಳ್ಳೆಯದು ಅದರ ವಿಮರ್ಶೆಯೆಲ್ಲ ಅದಕ್ಕಿಂತ ಬೆಲೆ ಯಲ್ಲಿ ಕಡಿಮೆಯಾದುದು ಎಂದು ಹೇಳುವುದು ಸರಿಯಲ್ಲ. ಒಬ್ಬನು ಬರೆದ ಕಾವ್ಯವು ನೀರಸವಾಗಿರಬಹುದು. ಇನ್ನೊಬ್ಬನು ಆ ಕಾವ್ಯದ ವಿಷಯದಲ್ಲಿ ಬರೆದ ವಿಮರ್ಶೆಯು ರಸಭರಿತವಾದ ಉಪನ್ಯಾಸವಾಗಬಹುದು. ಇದು ಅವರವರ ತಿಳಿವು ಮತ್ತು ಶಕ್ತಿಯನ್ನು ಅನುಸರಿಸುತ್ತದೆ. ಇದು ಹಾಗಿರಲಿ. ಕಾವ್ಯವು ಉತ್ತಮವಾ ದುದಾದರೆ ಅದರಮೇಲಣ ವಿಮರ್ಶೆಯು ಅದಕ್ಕೆ ಸಮಾನವಾಗಲಾರದೆನ್ನುವಾ ಗಲೋ? ಷೇಕ್ಸ್‌ಪಿಯರ ನಾಟಕದ ವಿಷಯದಲ್ಲಿ ಯಾವ ವಿಮರ್ಶಕನು ಬರೆದ ವಿಮ ರ್ಶೆಯೂ ಆ ನಾಟಕಕ್ಕೆ ಸಮವಾಗಲಾರದು. ಷೇಕ್ಸ್‌ಪಿಯರು ಕಾಳಿದಾಸ ಮುಂತಾದ ಉತ್ತಮಕವಿಗಳು ಅವರ ವ್ಯಾಖ್ಯಾನಕಾರರಿಗಿಂತ ಅಧಿಕರು. ಆದರೆ ಇಂತ ಸಂದರ್ಭದಲ್ಲಿಯೂ ವಿಮರ್ಶಕನು ಬೇರೇ ಕಾವ್ಯವನ್ನು ಬರೆಯುವುದಕ್ಕೆ ಬದಲಾಗಿ ವಿಮರ್ಶೆಗೆ ಕೈಹಾಕುವುದಕ್ಕೆ ಹಲವು ಕಾರಣಗಳಿರಬಹುದು. ಇವುಗಳಲ್ಲಿ ಕೆಲವನ್ನು ಇಲ್ಲಿ ವಿಚಾರಮಾಡೋಣ.

ಕಾವ್ಯವನ್ನು ಹೇಳುವುದಕ್ಕೆ ಒಂದು ಅವಸ್ಥೆಯು ಆವಶ್ಯಕವೆಂದು ಉದ್ದಕ್ಕೂ ಹೇಳುತ್ತ ಬಂದಿದೆಯಷ್ಟೆ. ರಾಗಗಳ ಈ ಅವಸ್ಥೆಯು ಎಲ್ಲರಿಗೂ ಬರುವುದಿಲ್ಲ. ಪ್ರಾಯಶಃ ಉತ್ತಮವಾದ ಕಾವ್ಯವನ್ನು ಬರೆಯುವುದೆಂಬ ಶಕ್ತಿಯು ಮನುಷ್ಯನ ಜನ್ಮದಲ್ಲಿ ಸೇರಿಬಂದಿರಬೇಕು. ಅದನ್ನು ಹೊರಗಣಿಂದ ಕಲಿಯುವುದು ಸಾಧ್ಯವಲ್ಲ ವೆಂದು ಹೇಳಬಹುದು. ಹೀಗೆ ಕಾವ್ಯವನ್ನು ಬರೆಯಬೇಕಾಗುವ ರಾಗದ ಅವ ಸ್ಥೆಯು ಮನುಷ್ಯನಿಗೆ ಬರದೆ ಇದ್ದರೂ ಅವನಲ್ಲಿ ಊಹೆಯೂ ಪ್ರತಿಭೆಯೂ ಅನೇಕ ವಿಧಶಕ್ತಿಯೂ ಕವಿಗಿಂತ ಯಾವ ಅಂಶದಲ್ಲೂ ಕಡಿಮೆಯಿಲ್ಲದೆ ಇರಬಹುದು. ಅನೇಕವೇಳೆ ಸಾಮಾನ್ಯಕವಿಯಾದ ಒಬ್ಬನಿಗಿಂತ ಕವಿಯೇ ಅಲ್ಲದ ಇನ್ನೊಬ್ಬನಿಗೆ ಈ ಅಂಶಗಳಲ್ಲಿ ಆಧಿಕ್ಯವೇ ಇರಬಹುದು. ಆಗ್ಯೆ ಅವನು ಬರೆಯುವ ಗ್ರಂಥದಲ್ಲಿ ರಾಗದ ಭಾಗವು ಕಡಿಮೆಯಾಗಿರುವುದು. ಬುದ್ಧಿಯ ಭಾಗವು ಹೆಚ್ಚಾಗುವುದು ; ಅವನಿಗೆ ಕಾವ್ಯವನ್ನು ಬರೆಯುವುದಕ್ಕಿಂತ ಉಪನ್ಯಾಸಗಳನ್ನು ಬರೆಯುವುದರಲ್ಲಿ ಸೌಕರ್ಯ

ಹೆಚ್ಚು. ಅಂತಹವನಿಗೆ ವಿಮರ್ಶೆಯು ಸ್ವಭಾವಸಿದ್ಧವಾಗುವುದು. ಇನ್ನು ಕೆಲವರಿಗೆ ರಾಗದ ಅವಸ್ಥೆಸಾಧ್ಯವಾದರೂ ಹೇಳುವ ದಾರಿ ತಿಳಿಯದೆ ಇರಬಹುದು. ಆದರೆ ಯಾರಾದರೂ ಹೇಳಿದ್ದನ್ನು ಇಂತವರು ಚೆನ್ನಾಗಿ ತಿಳಿಯುವರು. ಇವರಂತೆಯೇ ಇನ್ನು ಕೆಲವರು ಅವಸ್ಥೆಬರಬಹುದಾದರೂ ಹೇಳುವ ದಾರಿ ತಿಳಿದಿದ್ದರೂ ಆಳವಾದ ಸ್ವಭಾವ ಉಳ್ಳವರಾದದ್ದರಿಂದ ಆತ್ಮಾನುಭವದ ಉದ್ವೇಗಯಾವುದನ್ನೂ ವಿವರಿಸು ವುದಕ್ಕೆ ಒಪ್ಪುವುದಿಲ್ಲ. ಇವರಿಗೂ ಕಾವ್ಯರಸಗ್ರಹಣದಲ್ಲಿ ಬಹಳ ಸೌಲಭ್ಯ ಉಂಟು. (ಇತರರಿಗೆ ಏನೂ ಹೇಳದವರೆಲ್ಲ ಆಳವಾದ ಸ್ವಭಾವವುಳ್ಳವರೆಂದು ನನ್ನ ಅಭಿಪ್ರಾ ಯವಲ್ಲ. ಅನೇಕರು ಇತರರಿಗೆ ಏನನ್ನೂ ಹೇಳದೆ ಇರುವುದರ ಕಾರಣ ಅವರಲ್ಲಿ ಏನೂ ಇಲ್ಲದೇ ಇರವುದೇ. ಆದರೆ ವಿಮರ್ಶೆಗೆ ಬೇಕೆಂದು ಹೇಳಿದ ಊಹೆಯೂ ಪ್ರತಿಭೆಯೂ ಇದ್ದು ಕಾವ್ಯರಚನೆಗೆ ಬೇಕಾದ ವಿಷಯ ಪರಿಜ್ಞಾನವುಳ್ಳವರಾದರೂ ಕಾವ್ಯಬರೆ ಯದೆ ಇರತಕ್ಕವರು ಈರೀತಿಯ ಮೌನವನ್ನು ಹೊಂದಿರಬಹುದೆಂಬುದು ಇಲ್ಲಿಯ ಭಾವ) ಹೀಗೆ ರಾಗಶಕ್ತಿಗಿಂತಲೂ ಬುದ್ಧಿಶಕ್ತಿ ಅಧಿಕವಾಗಿದ್ದು ರಾಗಶಕ್ತಿ ಸಾಮಾ ನ್ಯವಾಗಿರುವುದರಿಂದಲೋ ಭಾವಗಳನ್ನು ಕಾವ್ಯರೂಪವಾಗಿ ವ್ಯಂಜಿಸಲು ಸೌಕರ್ಯ ವಿಲ್ಲದ ಕಾರಣದಿಂದಲೋ, ಇಲ್ಲ ವ್ಯಂಜಿಸುವುದರಲ್ಲಿ ಮನಸ್ಸುಪ್ರವರ್ತಿಸದೆ ಇರು ವುದರಿಂದಲೋ ಕೆಲವರು ಕಾವ್ಯಕ್ಕೆ ಬೇಕಾದ ವಸ್ತುಪರಿಜ್ಞಾನ ಊಹೆಪ್ರತಿಭೆಗಳು ಎಷ್ಟು ಇದ್ದರೂ ಕಾವ್ಯರಚನೆಯಲ್ಲಿ ತೊಡಗದಂತವರು ಇರುವರು. ಇವರು ಕಾವ್ಯದ ರಸವನ್ನು ಗ್ರಹಿಸಬಲ್ಲರು, ಅದರ ವಿಷಯವನ್ನು ತಿಳಿಸಬಲ್ಲರು. ಎಂದರೆ ಇವರು ಕಾವ್ಯವನ್ನು ಓದುವವರಲ್ಲಿ ಉತ್ತಮವರ್ಗದವರಲ್ಲಿ ಸೇರುವರು, ಕವಿಯಕಾರ್ಯವನ್ನು ಸಾರ್ಥಕವನ್ನಾಗಿಮಾಡುವರು. ಇಂತವರು ತಮಗೆ ಕಾವ್ಯದಿಂದ ತೋರಿದ ವಿಷ ಯವನ್ನೂ ಕಾವ್ಯದ ವಿಚಾರದಲ್ಲಿ ತಮ್ಮ ಅಭಿಪ್ರಾಯವನ್ನೂ ತಮ್ಮ ಸ್ವಭಾವಕ್ಕೆ ವಿರೋಧವಾಗಿ ನಡೆಯದೆ ಪ್ರಾಯಶಃ ಸ್ವಭಾವಕ್ಕೆ ಅನುಸಾರವಾಗಿ ವರ್ತಿಸಿಯೇ ವ್ಯಕ್ತಗೊಳಿಸಬಹುದು. ಆಗ್ಯೆ ಅದು ವಿಮರ್ಶೆಯಾಗುವುದಲ್ಲದೆ ಉತ್ತಮವಾದ ವಿಮರ್ಶೆಯೂಗುವುದು.

ಕೆಲವರ ಸ್ವಭಾವವು ವಿಮರ್ಶೆಗೆ ತಕ್ಕದ್ದಾಗಿರುವುದರಿಂದ ಅವರು ವಿಮರ್ಶೆ ಯಲ್ಲಿ ಉದ್ಯುಕ್ತರಾಗಬೇಕು ಎಂದ ಹಾಗಾಯಿತು. ಇಂತವರು ಕೇವಲ ತಮ ಗಾಗಿ ಮಾತ್ರವಲ್ಲದೆ ಇತರರಿಗಾಗಿಯೂ, ಕಾವ್ಯವನ್ನು ಬರೆಯುವುದಕ್ಕೆ ಬದಲಾಗಿ ವಿಮರ್ಶೆಯನ್ನು ಬರೆಯುವುದು ಆವಶ್ಯಕ. ಈಗ ಒಂದು ಉತ್ತಮಕಾವ್ಯಏದೆ ಆದರಲ್ಲಿ ದೋಷವಿಲ್ಲ ಎನ್ನೋಣ. ಅಂತ ಕಾವ್ಯವನ್ನು ಸರಿಯಾಗಿ ಗ್ರಹಿಸುವ ಶಕ್ತಿ ಎಲ್ಲರಿಗೂ ಇರುವುದಿಲ್ಲ. ಪುಸ್ತಕಗಳನ್ನು ಓದುವ ಜನರು ಕೊಳಕ್ಕೆ ನೀರಿ

ಗಾಗಿ ಹೋಗುವವರಂತೆ ತಾವು ತೆಗೆದುಕೊಂಡುಹೋದ ಪಾತ್ರೆ ಹಿಡಿಯುವಷ್ಟು ನೀರನ್ನು ಮಾತ್ರ ತೆಗೆದುಕೊಂಡು ಬರಬಹುದು. ಕೆಲವರ ಪಾತ್ರೆ ಬಹಳ ಸಣ್ಣದು. ಕೆಲವುವೇಳೆ ಪಾತ್ರೆ ಅವರ ಶಕ್ತಿಗೆ ಮೀರಿ ಸ್ವಲ್ಪ ದೊಡ್ಡದಾದರೆ ಪಾತ್ರೆಯನ್ನು ನೀರಿನಿಂದ ತುಂಬಿ ಅದನ್ನು ಕೊಳದಲ್ಲೇ ಬಿಟ್ಟು ಬರುವರು. ಇದು ಹೇಗೆ ಎನ್ನಬಹುದು. ಷೇಕ್ಸ್‌ಪಿಯರ ನಾಟಕಗಳಲ್ಲಿ ಎಲ್ಲಿಯೂ ಯಾವ ತಪ್ಪೂ ಇಲ್ಲವೆನ್ನುವವರು ಈ ಗುಂಪಿನ ಜನರು. ಇವರಲ್ಲಿ ಕೆಲವರು ಕವಿಯು ವರ್ಣಿಸಿರುವ ಹುಚ್ಚರ ನಡೆನುಡಿಗಳಿಂದ ಈಗ ಪ್ರಪಂಚದಲ್ಲಿ ಕಾಣುವ ಹುಚ್ಚರ ನಡೆನುಡಿಗಳನ್ನು ನೋಡಿ ಇವರ ಹುಚ್ಚು ಸರಿಯಾದದ್ದೇ ತಪ್ಪಾದದ್ದೇ ಎಂದು ವಿಚಾರಿಸುವರು. ಷೇಕ್ಸ್‌ಪಿಯರು ಪ್ರಕೃತಿಯಿಂದ ವಿಷಯವನ್ನು ತಿಳಿದನೆಂಬುದನ್ನು ಮರೆತು ಇವರು ಪ್ರಕೃತಿಯು ಷೇಕ್ಸ್‌ಪಿಯರನ್ನನುಸರಿಸಿತೇ ಇಲ್ಲವೇ ಎಂದು ನೋಡುವರು. ಇಂತವರು ನಮ್ಮಲ್ಲೂ ಇದಾರೆ. ಇವರು ಹಿಂದಣ ಸಾಹಿತ್ಯವನ್ನೆಲ್ಲ ಉತ್ತಮವಾದುದೆನ್ನುವರು. ಅಕ್ಷರಅಕ್ಷರಕ್ಕೆ ಅಲಂಕಾರವನ್ನು ಆರೋಪಿಸುವರು. ಅಕ್ಷರಅಕ್ಷರದಲ್ಲಿ ಅರ್ಥವನ್ನು ಊಹಿಸುವರು. ಭಾವವನ್ನು ಒಂದುಕಡೆಗಿಟ್ಟು ಮಾತಿಗೆ ಹೊಡೆದಾಡುವರು. ಹೀಗೆ ಪಾತ್ರೆಯೇ ಇಲ್ಲದೆ ಬರಿಯ ಕೈಯಲ್ಲಿ ಹೋಗುವುದರಿಂದ ನೀರನ್ನು ಪಡೆಯಲಾರದವರಿಗೂ ಶಕ್ತಿಮೀರಿದ ಪಾತ್ರೆಯನ್ನು ತೆಗೆದುಕೊಂಡು ಹೋಗಿ ಅದನ್ನು ಕೊಳದಲ್ಲಿ ಬಿಟ್ಟು ನೀರಿಲ್ಲದೆ ಹೋಗುವವರಿಗೂ ಮಧ್ಯೆ ಕಾವ್ಯದ ವಿಷಯವನ್ನು ಸರಿಯಾಗಿ ಗ್ರಹಿಸಿ ಅದರ ರಸವನ್ನು ತಮಗಾಗಿಯೂ ಈ ಇನ್ನೆರಡು ಗುಂಪಿನವರಿಗಾಗಿಯೂ ತರಬಲ್ಲ ರಸಗ್ರಾಹಿಗಳು ಇರಲೇಬೇಕು. ಇವರು ವಿಮರ್ಶೆಯನ್ನು ಬರೆಯಬೇಕು. ಇವರಿಂದ ಅಪ್ರಬುದ್ಧರು ರಸಗ್ರಹಣಶಕ್ತಿಯನ್ನೂ ಅತಿಪ್ರಬುದ್ಧರು ಮಿತಗ್ರಾಹಿತ್ವವನ್ನೂ ಕಲಿಯಬೇಕು; ಎಂದರೆ ಇಂತ ವಿಮರ್ಶಕರು ಸಾಮಾನ್ಯಜನಕ್ಕೆ ಬುದ್ಧಿಯ ಸಂಸ್ಕಾರವನ್ನು ಹೆಚ್ಚಿಸಿ ಭಾವಿಗೆ ಸೋಪಾನವನ್ನು ಕಟ್ಟಿ ಅದರ ಜಲವನ್ನು ಸುಗಮವಾಗಿಸುವಂತೆ ಕಾವ್ಯದ ವಿಷಯವನ್ನು ಇತರರಿಗೆ ಸುಲಭವಾಗಿ ಮಾಡುವರು. ಕಾವ್ಯದ ಪದ್ಧತಿಯು ಸೂಚನಪದ್ಧತಿ. ಸಂಗೀತದಲ್ಲಿ ಎರಡು ಸ್ವರಗಳ ಬಾಜನದಿಂದ ಅವುಗಳ ನಡುವಣ ಶೂನ್ಯವನ್ನು ತುಂಬಿಕೊಳ್ಳುವಂತೆ ಕವಿಯ ಎರಡುಮಾತುಗಳ ಮೂಲಕ ಅವುಗಳ ನಡುವಣ ಸ್ಥಲವನ್ನು ತುಂಬಿಕೊಂಡು ನಾವು ಕವಿಯ ಭಾವವನ್ನು ಗ್ರಹಿಸಬೇಕು. ಹೀಗೆ ಮಾಡುವುದಕ್ಕೆ ಬೇಕಾದ ಊಹೆ ಪ್ರತಿಭೆ ಇವುಗಳನ್ನು ವಿಮರ್ಶಕನು ಇತರರಿಗೆ ತೋರಿಸಿಕೊಡಬೇಕು. ಇದರಲ್ಲಿ ಕವಿಯು ಪ್ರಪಂಚವಿವರಣದಲ್ಲಿ ಮಾಡುವ ಸೇವೆಯನ್ನು ವಿಮರ್ಶಕನು ಕಾವ್ಯದ ವಿಷಯದಲ್ಲಿ ಮಾಡುವನು, ಅದರಲ್ಲಿ ಇತರರಿಗೆ

ಕಾಣದ ವಿಷಯವನ್ನು ಉದ್ಧರಿಸಿ ಹೇಳುವನು. ಮುಖ್ಯವಾಗಿ ವಿಮರ್ಶೆಯ ಈ ಕಾರ್ಯವು ಕವಿಯು ಕಾವ್ಯದಲ್ಲಿ ಗ್ರಹಿಸಿಡುವ ತೇಜಸ್ಸನ್ನು ತಾವೇ ಪಡೆಯಲಾರದ ಜನರಿಗೆ ಸುಲಭವಾದದ್ದನ್ನಾಗಿ ಮಾಡತಕ್ಕದ್ದೇ ವಿಮರ್ಶೆಯ ಈ ಕಾರ್ಯ. ಚಕ್ಕುಮುಕ್ಕಿಯನ್ನು ಬಡಿದರೆ ಅಗ್ನಿ ಉಂಟಾಗುವುದು. ಅದರ ಬಳಿ ಇರುವ ಹತ್ತಿ ಆ ಅಗ್ನಿಯನ್ನು ಧರಿಸಿ ಅಭಿವೃದ್ಧಿಗೊಳಿಸುವುದು. ಆ ಹತ್ತಿಯ ಸೂಕ್ಷ್ಮಗ್ರಹಣ ಶಕ್ತಿಯ ಸಹಾಯದಿಂದ ಹತ್ತಿರದ ಸ್ಥೂಲವಸ್ತುಗಳೂ ಆಮೇಲೆ ಅಗ್ನಿಯನ್ನು ಪಡೆಯಬಹುದು. ಸೂಕ್ಷ್ಮವಾದ ಹತ್ತಿಯಿಂದ ಸ್ಥೂಲವಾದ ಕೊರಡಿನವರೆಗೆ ಎಲ್ಲಕ್ಕೂ ಸಂಸ್ಕಾರ ಬೇಕು. ಇದರಿಂದ ಕೊರಡಿಗೂ ಚಕ್ಕುಮುಕ್ಕಿಗೂ ನಡುವೆ ಒಂದಕ್ಕಿಂತ ಒಂದು ಸೂಕ್ಷ್ಮವಾದ ಹತ್ತಾರು ದ್ರವ್ಯಗಳು ಇರಬೇಕು. ಕಾಳಿದಾಸನಿಂದ ಸಾಮಾನ್ಯನವರೆಗೆ ಕಾವ್ಯದ ತೇಜಸ್ಸು ತಗುಲಬೇಕಾದರೆ ಒಂದು ಅಂತಸ್ತಿನ ವಿಮರ್ಶೆಯೇ ಅಲ್ಲ. ಹತ್ತಾರು ಅಂತಸ್ತಿನ ವಿಮರ್ಶೆಯು ಬೇಕಾಗುತ್ತದೆ. ಇದಿಷ್ಟೂ ಉತ್ತಮಕಾವ್ಯದ ಮಾತಾಯಿತು. ಉತ್ತಮವಲ್ಲದ ಕಾವ್ಯದ ವಿಷಯದಲ್ಲೂ ವಿಮರ್ಶಕನ ಕೆಲಸವು ಇದೇ ರೀತಿಯದು. ಎಲ್ಲರೂ ಕಾವ್ಯವನ್ನೇ ಬರೆಯುತ್ತ ಹೋದರೆ ಸಾಹಿತ್ಯದ ಕೆಲಸವು ಮುಗಿಯುವುದಿಲ್ಲ. ಕಾವ್ಯದ ಭಾವವು ಅನೇಕರಿಗೆ ತಿಳಿದು ಜನದಲ್ಲಿ ತಿಳಿವಿನ ಮಟ್ಟವು ಏರಬೇಕು. ತಿಳಿವಿನ ಮಟ್ಟವು ಏರಬೇಕಾದರೆ ಅಭಿಪ್ರಾಯಗಳ ಚರ್ಚೆಯು ಆವಶ್ಯಕವಾಗಿ ನಡೆಯಬೇಕು. ಬರೆಯಬಲ್ಲ ಪ್ರತಿಯೊಬ್ಬನೂ ಸಾಮಾನ್ಯವಾದ ಒಂದು ಗ್ರಂಥವನ್ನು ಬರೆದು ಅದರಲ್ಲಿ ತನ್ನ ಅಭಿಪ್ರಾಯಗಳನ್ನು ಹುಗಿದಿಡುವುದಕ್ಕೆ ಆರಂಭಮಾಡಿದರೆ ಇಂತ ಚರ್ಚೆಯೇ ಇಲ್ಲವಾಗುವುದು. ಆ ಸದಭಿಪ್ರಾಯಗಳಿಗೆ ಸಾಕಾದ ನಿರೋಧವಿಲ್ಲದೆ ಹೋಗುವುದು. ಇದರಿಂದ ವಿಮರ್ಶೆಯು ವಿಮರ್ಶಕನ ಪ್ರವೃತ್ತಿಗಳ ಸಲುವಾಗಿಯೇ ಅಲ್ಲದೆ ಇತರರಿಗಾಗಿಯೂ ಆವಶ್ಯಕವಾದ ಕಾವ್ಯಶಾಖೆಯೆಂದು ಹೇಳಬೇಕು.

ಶಕ್ತರಾದ ವಿಮರ್ಶಕರಿಂದ ಇರುವ ಸಾಹಿತ್ಯವು ಎಲ್ಲರಿಗೂ ಚೆನ್ನಾಗಿ ತಿಳಿಯುವುದಲ್ಲದೆ ಮುಂದಕ್ಕೆ ಒಳ್ಳೆಯ ಸಾಹಿತ್ಯವು ಬರುವುದು ಸಾಧ್ಯವಾಗುವುದು. ಮನುಷ್ಯನ ಬುದ್ಧಿಯೂ ರಾಗವೂ ವ್ಯವಹಾರಕ್ಕೆ ಬೇರೆಯೇ ಹೊರತು ಜೀವನದಲ್ಲಿ ಎರಡೂ ಬೆರೆತೇ ಕೆಲಸಮಾಡಬೇಕು. ಎರಡನ್ನೂ ಜತೆಯಾಗಿ ನಯಮಾಡುವುದು ನಮ್ಮ ಕರ್ತವ್ಯ. ಮನುಷ್ಯನ ಪುರೋಗಮನದ ಸಾರವೇ ಇದು : ರಾಗದಿಂದ ತಿಳಿದದ್ದನ್ನು ಬುದ್ಧಿಯು ಗ್ರಹಿಸಬೇಕು ; ಬುದ್ಧಿಯಿಂದ ತಿಳಿದದ್ದನ್ನು ರಾಗವು ಗ್ರಹಿಸಬೇಕು. ಮೊದಲು ಹಸಿವನ್ನು ತಿಳಿದ ಪ್ರಾಣಿಗಳು ಅದಕ್ಕೆ ಒಂದು ಹಸ

ರನ್ನು ಇಟ್ಟುದೂ, ಸುಖವನ್ನು ತಿಳಿದವು ಅದಕ್ಕೆ ಇನ್ನೊಂದು ಹೆಸರನ್ನು ಇಟ್ಟುದೂ ಮನುಷ್ಯನ ಆತ್ಮಜ್ಞಾನದಲ್ಲಿ ಒಂದೊಂದು ಹೆಜ್ಜೆ. ಆ ಆರಂಭದ ಅವಸ್ಥೆಯಿಂದ ಮನುಷ್ಯನು ಈಗ್ಯೆ ಬಹಳದೂರ ಪ್ರಯಾಣಮಾಡಿ ಬಂದಿದಾನೆ. ಬಹಳದೂರ ಬಂದಿರುವುದರಿಂದ ಆ ಆರಂಭದ ಅವಸ್ಥೆ ಒಂದು ಇದ್ದಿರಬೇಕೆಂಬುದನ್ನು ಊಹಿಸುವುದು ಕೂಡ ಅವನಿಗೆ ಸಾಧ್ಯವಲ್ಲದೆ ಆಗಿದೆ. ಆದರೆ ಸ್ವಲ್ಪ ಪರಾಮರ್ಶದಿಂದ ನೋಡಿದೆವಾದರೆ ಹಿಂದೆ ಆ ಅವಸ್ಥೆ ಇದ್ದುದೇ ಅಲ್ಲದೆ ಈಗ ನಡೆಯುವ ಭಾವ ವಿವರಣದ ನ್ಯಾಸವೂ ಕೂಡ ಅದೇ ನ್ಯಾಸವೆಂದು ತಿಳಿಯುವುದು. ಕಲೆಯೆಲ್ಲ ರಸ ವ್ಯಕ್ತಿಗಾಗಿ ನಡೆಯುವ ಕೆಲಸ. ಒಬ್ಬನಿಗೆ ಬಂದ ಅನುಭವವನ್ನು ಇನ್ನೊಬ್ಬನಿಗೆ ತಿಳಿಸುವುದೇ ಆದರ ಉದ್ದೇಶ. ಅದು ಆಂತರ್ಯದ ಅನುಭವಕ್ಕೆ ಇಡುವ ಒಂದು ಹೆಸರು: ಸರಳವಾದ ಮೂರಕ್ಷರದ ಹೆಸರಲ್ಲ, ಸ್ವಲ್ಪ ಕಷ್ಟವಾಗಿ ತಿಳಿಯುವ ಹೆಸರು. ಆದದ್ದರಿಂದ ಈ ಹೆಸರನ್ನು ಹೇಳುವುದೇ ಅಲ್ಲದೆ ಅದು ಅನೇಕರಿಗೆ ತಿಳಿಯುವ ಹಾಗೆ ಮಾಡುವುದರಿಂದ ಜನರಲ್ಲಿ ತಿಳಿವು ವಿಸ್ತಾರವಾಗುತ್ತದೆ, ಪರಿಷ್ಕಾರವಾಗುತ್ತದೆ. ಸಾಹಿತ್ಯವು ಈ ಹೆಸರು; ವಿಮರ್ಶೆಯು ಈ ವಿವರಣ; ವಿಮರ್ಶೆಯು ಸಾಹಿತ್ಯಸಮಷ್ಟಿಯ ಅಂಗೋಪಾಂಗಗಳನ್ನೂ ಜೀವನಾತ್ಮಾದಿ ನಿಗೂಢತತ್ವಗಳನ್ನೂ ವಿವರಿಸಿ ಪ್ರತ್ಯೇಕಿಸಿ ಅದರ ಅರ್ಥವನ್ನೂ ಉದ್ದೇಶವನ್ನೂ ಸರ್ವರಿಗಾಗಿ ಸ್ಪಷ್ಟಗೊಳಿಸಿದ ಹಾಗೆಲ್ಲ ಜನರಲ್ಲಿ ಸಾಹಿತ್ಯವು ಉತ್ತಮವಾಗುವುದಕ್ಕೆ ಆವಶ್ಯಕವಾದ ಅವಸ್ಥೆಯು ಮತ್ತೆಮತ್ತೆ ಹತ್ತಿರವಾಗುವುದು. ಒಂದು ತಲೆಮಾರಿನಲ್ಲಿ ಕೆಲವರಿಗೆ ಮಾತ್ರ ತಿಳಿದ ವಿಷಯವು ಇನ್ನೊಂದು ತಲೆಮಾರಿನಲ್ಲಿ ಹತ್ತು ಜನರಿಗೆ ತಿಳಿಯುವುದು. ಒಂದು ತಲೆಮಾರಿನಲ್ಲಿ ಒಂದು ವಿಷಯ ತಿಳಿದರೆ ಇನ್ನೊಂದರಲ್ಲಿ ಹತ್ತು ತಿಳಿದಿರುವುದು. ಒಂದು ಸರಿಯೆಂದು ತಿಳಿದಿದ್ದ ವಿಷಯಕ್ಕೆ ಹತ್ತು ಆಕ್ಷೇಪಗಳು ತೋರಿಬಂದು ಇನ್ನೊಂದು ತಲೆಮಾರಿನ ಜನ ಸಾಹಿತ್ಯಜ್ಞಾನದಲ್ಲಿ ಅವರಿಗಿಂತ ಮುಂದಾಗುವರು. ಕವಿಯು ಸುತ್ತಣ ಪ್ರಸ್ಥಭೂಮಿಯ ನಡುವೆ ಇರುವ ಪರ್ವತಶಿಖರ. ವಿಮರ್ಶೆಯಿಂದ ಈ ಪ್ರಸ್ಥಭೂಮಿ ಉಂಟಾಗುವುದು. ಅದರ ನಡುವೆ ಕವಿಯು ಸಾಧ್ಯವಾಗುವನು. ಜನಾಂಗದ ಮನಸ್ಸು ಕಾವ್ಯಾವೇಶದ ಸಮೀಪಸ್ಥಳಗಳಲ್ಲಿ ಸುಳಿಯುವುದು ವಾಡಿಕೆಯಾಗುವುದು.

ಇದೆಲ್ಲ ಸಾಹಿತ್ಯದ ಏಳ್ಗೆಗೆ ಬೇಕಾದ ಕಾರ್ಯ, ಜನಾಂಗದ ಪುರೋಭಿವೃದ್ಧಿಯಲ್ಲಿ ಮುಖ್ಯವಾದ ಕಾರ್ಯ. ಆದದ್ದರಿಂದ ವಿಮರ್ಶೆಯನ್ನು ಬರೆಯುವುದಕ್ಕೆ ಬದಲಾಗಿ ಕಾವ್ಯವನ್ನು ಬರೆಯಬಾರದೆ ಎಂದು ನಾವು ಕೇಳಬಾರದು. ಕಾವ್ಯ

ನಿರ್ಮಾಣಶಕ್ತಿ ಇರುವವರೂ ಕೂಡ ಈ ಕಾರ್ಯದಲ್ಲಿ ಕೈಹಾಕುವುದು ವ್ಯರ್ಥವಲ್ಲ. ಅಂತವರು ವಿಮರ್ಶೆಗೆ ಕೈಹಾಕಿದರೆ ಅದಕ್ಕೆ ಒಂದು ಹೊಸಕಳೆ ಬರುವುದು. ಇದೂ ಈ ಸಂದರ್ಭದಲ್ಲಿ ನಾವು ಜ್ಞಾಪಕದಲ್ಲಿಟ್ಟುಕೊಳ್ಳಬೇಕಾದ ವಿಷಯ. ಕಾವ್ಯವು ಸಾಹಿತ್ಯದ ಉನ್ನತರೂಪವಾದದ್ದರಿಂದ ಅದನ್ನು ವಿಮರ್ಶೆಯಿಂದ ಬೇರೆಯೆಂಬಂತೆ ಹೇಳುತ್ತಿದೆ. ಆದರೆ ವಿಮರ್ಶೆಯೂ ಒಂದುರೀತಿಯ ಉಪನ್ಯಾಸ ಅದು ಸಾಹಿತ್ಯದಲ್ಲಿಯ ಒಂದುಶಾಖೆ ಎಂದು ಮೊದಲೇ ಹೇಳಿದೆ. ವಿಮರ್ಶಕನು ಸಾಮಾನ್ಯನಾದರೆ ಅವನು ಸಾಮಾನ್ಯ ಉಪನ್ಯಾಸಕಾರನಂತಾಗುವನು; ಪ್ರತಿಭಾಶಾಲಿಯಾದರೆ ಉಪನ್ಯಾಸವು ಉತ್ತಮವಾದ ಉಪನ್ಯಾಸವಾಗುವುದು. ಪ್ರತಿಭಾಶಾಲಿಯ ವಿಮರ್ಶೆಯಲ್ಲಿಯೇ ಕವಿಯ ತತ್ವಬೋಧೆಯಲ್ಲಿಯಂತೆ ವಿವರಣವು ರಸಯುಕ್ತವಾಗುವುದು. ಅಂಥ ವಿಮರ್ಶೆಯೂ ಕಾವ್ಯವೇ ಸರಿ. ನಮ್ಮಲ್ಲಿ ಈರೀತಿಯ ಬರವಣಿಗೆ ಬೆಳೆಯದೆ ಇರುವುದರಿಂದ ನಮಗೆ ಈ ಮಾತು ಅರ್ಥವಾಗದೆ ಹೋಗಬಹುದು. ಆದರೆ ಪಶ್ಚಿಮದೇಶಗಳ ಸಾಹಿತ್ಯದಲ್ಲಿ ವಿಮರ್ಶೆಯು ಧರಿಸಿರುವ ರೂಪಗಳನ್ನು ನೋಡಿದರೆ ಈ ವಿಷಯದಲ್ಲಿ ಸಂದೇಹಬರುವುದಿಲ್ಲ. ಮ್ಯಾತ್ಯು ಆರ್ನಾಲ್ಡ್, ಲೆಸ್ಲೀಸ್ಟೀವರ್, ಜಾರ್ಜ್ ಮಾರ್ಲೀ ಮೊದಲಾದ ವಿಮರ್ಶಕವರ್ಯರು ಇಂಗ್ಲೀಷಿನಲ್ಲಿ ಬರೆದಿರುವ ಉಪನ್ಯಾಸಗಳು ಸಾಹಿತ್ಯದಲ್ಲಿ ಅತ್ಯುನ್ನತವಾದ ಸ್ಥಾನಕ್ಕೆ ಅರ್ಹವಾದವು. ಅವುಗಳಲ್ಲಿ ಅವರ ಜೀವನದ ಉತ್ತಮ ಸಂಸ್ಕಾರವೆಲ್ಲದರ ಛಾಯೆಯೂ ರೂಪುಗೊಂಡಿದೆ. ಉತ್ತಮಕವಿಯ ಕಾವ್ಯ ಒಂದನ್ನು ಓದಿದ್ದರಿಂದ ನಮಗೆ ಯಾವಸುಖ ಉಂಟಾಗಬಹುದೋ ಯಾವಸಂಸ್ಕಾರ ಉಂಟಾಗಬಹುದೋ ಆ ಸಂಸ್ಕಾರವು ಈ ಮಹನೀಯರ ವಿಮರ್ಶ ಉಪನ್ಯಾಸಗಳನ್ನು ಓದುವುದರಿಂದ ಉಂಟಾಗುವುದು. ಪ್ರಪಂಚಜ್ಞಾನವನ್ನುಂಟುಮಾಡಿ ರಾಗಗಳನ್ನು ಶೋಧಿಸಿ ಬುದ್ಧಿಯನ್ನು ವಿಕಾಸಗೊಳಿಸುವ ಇವರ ಉಪನ್ಯಾಸಗಳನ್ನು ಓದಿ ಆಶ್ಚರ್ಯಪಡುವುದಾದರೆ ಈ ಮಹನೀಯರು ಫ್ರಾನ್ಸಿನ ವಿಮರ್ಶಕರ ವಿಷಯದಲ್ಲಿ ಹೇಳಿರುವ ಮಾತನ್ನು ಕೇಳಿದರೆ ಮತ್ತಷ್ಟು ಆಶ್ಚರ್ಯವಾಗಬೇಕು. ಫ್ರಾನ್ಸಿನಲ್ಲಿಯ ವಿಮರ್ಶೆಯ ಎತ್ತರಕ್ಕೆ ಇಂಗ್ಲೀಷರ ವಿಮರ್ಶೆಯು ಹೋಗಿಲ್ಲವೆಂದು ಇವರು ಅಭಿಪ್ರಾಯಪಡುತ್ತಾರೆ. ಹಾಗಾದರೆ ವಿಮರ್ಶೆ ಇನ್ನು ಎಷ್ಟು ಉತ್ತಮವಾದ ಕಾವ್ಯವಾಗುವುದು ಸಾಧ್ಯ ಎಂದು ಹೇಳಬೇಕಾದದ್ದಿಲ್ಲ. ಆದದ್ದರಿಂದ ವಿಮರ್ಶೆಯು ಎಂತಶಕ್ತನಾದ ಲೇಖಕನಾದರೂ ಕೈಹಾಕಬಹುದಾದ ಕೆಲಸ. ಅದು ಕಾವ್ಯಬರೆಯುವ ಸಂಸ್ಕಾರ ಉಳ್ಳವನು ಬರೆದದ್ದಾದರೆ ಬಹುಮಟ್ಟಿಗೆ ಕಾವ್ಯವೇ ಆಗುವುದು. ಆ ಸಂಸ್ಕಾರವಿಲ್ಲದೆ ಉಳಿದ ಊಹೆ ಪ್ರತಿಭೆ ಇರುವವನು ಬರೆದದ್ದಾದರೆ ಸಾಹಿತ್ಯದ

ಅರ್ಥವನ್ನು ಜನರಿಗೆ ತಿಳಿಸುವುದರಲ್ಲಿಯೂ, ಸಾಹಿತ್ಯದ ಏಳ್ಗೆಗೆ ಸಹಾಯವಾಗುವುದರಲ್ಲಿಯೂ ಜನರಿಗೂ ಜನಾಂಗಕ್ಕೂ ಉಪಯುಕ್ತವಾಗುವುದಲ್ಲದೆ ಲೇಖಕನ ಸಂಸ್ಕಾರವನ್ನು ಪೂರ್ತಿಗೊಳಿಸುವ ಬುದ್ಧಿಪ್ರಮುಖವಾದ ಉಪನ್ಯಾಸವಾಗುವುದು.

೫

ಸಾಹಿತ್ಯದ ವಿಷಯದಲ್ಲಿ ಸಾಕಾದ ಜ್ಞಾನವೂ ಪರಿಶ್ರಮವೂ ಇಲ್ಲದೆ ವಿಮರ್ಶೆಯು ಎಷ್ಟು ಉನ್ನತವಾದ ಕಾರ್ಯವೆಂಬುದನ್ನೂ ತಿಳಿಯದೆ ಬರೆಯುವ ವಿಮರ್ಶೆಯು ಕೇವಲ ವ್ಯರ್ಥಮಾತ್ರ ಆಗುವುದಲ್ಲದೆ ಹಾನಿಯನ್ನುಂಟುಮಾಡುವುದು. ಅಲ್ಪಜ್ಞಾನ ಅಲ್ಪಪರಿಶ್ರಮದಿಂದ ಉಂಟಾದ ಕಾವ್ಯಕ್ಕಿಂತ ಅಲ್ಪಜ್ಞಾನ ಅಲ್ಪಪರಿಶ್ರಮದಿಂದ ಉಂಟಾಗುವ ವಿಮರ್ಶೆಯಿಂದ ಬರುವ ಹಾನಿ ಹೆಚ್ಚು. ಕಾವ್ಯವು ಒಳ್ಳೆಯದಾಗದೆ ಅದರಿಂದ ಇತರರಿಗೆ ರಾಗ ಸಂಸ್ಕಾರ ಉಂಟಾಗದೇ ಹೋದರೂ ತೊಂದರೆ ಇಲ್ಲ. ಅಲ್ಲದೆ ಅದರಲ್ಲಿಯ ದೋಷವನ್ನು ಓದುವವನ ಹೃದಯವು ಸುಲಭವಾಗಿ ಅರಿಯುವುದು. ವಿಮರ್ಶೆಯಾದರೆ ಬುದ್ಧಿಯ ಆಡಂಬರದಿಂದ ಕೂಡಿರುವುದರಿಂದ ಸಾಮಾನ್ಯರಿಗೆ ಅದರ ದೋಷ ಅಷ್ಟು ಸುಲಭವಾಗಿ ತಿಳಿಯುವುದಿಲ್ಲ. ಕಾವ್ಯದ ರಚನೆ ಅರ್ಧ ಕವಿಗಾಗಿ ಅರ್ಧ ಪಾಠಕರಿಗಾಗಿ; ಕ್ಷುದ್ರಕಾವ್ಯವು ಇತರರಿಗೆ ಸುಖಕೊಡದೆ ಇದ್ದರೂ ಅದರಿಂದ ಕವಿಯ ದಾಹವಾದರೂ ಶಮನವಾದ ಹಾಗಾಯಿತು. ವಿಮರ್ಶೆಯು ಕ್ಷುದ್ರವಾಗಲಿ ಅಲ್ಲದೆ ಇರಲಿ ಕೇವಲ ಅಥವಾ ಬಹಳಮಟ್ಟಿಗೆ ಪಾಠಕರಿಗಾಗಿ ಉದ್ದೇಶಿಸಲ್ಪಟ್ಟದ್ದು. ಬುದ್ಧಿವಿಕಾಸದಿಂದ ಆದದ್ದೆಂದು ಹೆಸರಿಟ್ಟುಕೊಂಡು ಅದು ಮಡ್ಡಿತನದಿಂದ ಉಂಟಾಗಿದ್ದರೆ ಅದು ತಿಳಿಯದವರನ್ನು ಮೋಸಗೊಳಿಸುವುದು. ವಿಮರ್ಶೆಯು ಕೌಶಲ್ಯಾಪೇಕ್ಷೆಯಲ್ಲಿ ನೇತ್ರವೈದ್ಯದಂತೆ; ನೇತ್ರವ್ಯಾಧಿಗೆ ಶಸ್ತ್ರವೈದ್ಯವನ್ನು ಮಾಡಲು ಕವಿರಾಜನಾದರೂ ಹಿಂಜರಿಯಬೇಕು; ಇಂತದರಲ್ಲಿ ಕೊಡಲಿಯಿಂದ ಸೌದೆಸೀಳಲು ಕಲಿತ ಕೈಯಿಂದ ಕಣ್ಣು ಸರಿಮಾಡುವೆನೆಂದು ಶಲ್ಯವನ್ನು ತರುವರೆ? ವಿಮರ್ಶೆಯು ಕಾವ್ಯವನ್ನು ತಿರಸ್ಕರಿಸುವುದರಲ್ಲಿಯೂ ಪುರಸ್ಕರಿಸುವುದರಲ್ಲಿಯೂ ಇದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ತನ್ನ ಕೆಲಸದಲ್ಲಿ ಅತಿ ಜಾಗ್ರತೆಯಿಂದ ಪ್ರವರ್ತಿಸಬೇಕು.

ವಿಮರ್ಶೆಯ ವಿಷಯವಿದೆಂದು ತಿಳಿಯದೆ ಅದಕ್ಕೆ ಆವಶ್ಯಕವಾದ ಸಂಸ್ಕಾರವಿಲ್ಲದೆ ಬರೆಯುವ ವಿಮರ್ಶೆಯು ಹಾನಿಕರವಾಗುವುದನ್ನು ನಾವು ಸಾಹಿತ್ಯ ಚರಿತ್ರೆಯಲ್ಲಿಯೂ ಪ್ರಾಯಶಃ ನಮ್ಮಲ್ಲಿ ಈಗ ಇರುವ ಬಹುಭಾಗದ ವಿಮರ್ಶೆಯಿಂದಲೂ ತಿಳಿಯಬಹುದು. ಆಂಗ್ಲೇಯ ಸಾಹಿತ್ಯದಲ್ಲಿ ಹದಿನೆಂಟನೆಯ ಶತಮಾನದ

ಕೊನೆಯಲ್ಲಿ ವಿಮರ್ಶೆಯು ಹೆಚ್ಚು ವಾಡಿಕೆಗೆ ಬಂತು. ಹೊಸರೀತಿಯ ಕಾವ್ಯಗಳು ಬಂದಂತೆ ಹೊಸರೀತಿಯ ವಿಮರ್ಶೆಯೂ ಬಂದು ಕೆಲವರು ತಮ್ಮ ಕೆಲಸ ಕವಿಯನ್ನು ಹಿಡಿದು ತೂಕಮಾಡುವುದು ಅಥವಾ ನ್ಯಾಯಾಧಿಕಾರಿಯು ಅಪರಾಧಿಯ ತಪ್ಪನ್ನು ನಿರ್ಧರಿಸುವ ಹಾಗೆ ಕವಿಯ ಕಾವ್ಯದ ತಪ್ಪನ್ನು ನಿರ್ಧರಿಸುವುದು ಎಂದು ತಿಳಿದಿದ್ದಂತೆ ಕಾಣುತ್ತದೆ. ಈ ನಿರ್ಧರಣ ಕಾರ್ಯದಲ್ಲಿ ಅವರು ಈಗ ಆಂಗ್ಲಸಾಹಿತ್ಯದಲ್ಲಿ ಉತ್ತ ಮರೆಂದು ಗಣಿಸಿರುವ ವರ್ಡ್ಸ್‌ವರ್ತ್ ಕೀಟ್ಸ್ ಎಂಬ ಇಬ್ಬರು ಕವಿಗಳನ್ನು ಅತಿ ಹೀನವಾಗಿ ಬಯ್ದರು. ಆ ತಪ್ಪು ಆ ವಿಮರ್ಶಕರಲ್ಲಿ ಅಕ್ಷಮ್ಯವೆಂದು ನಾವು ಹೇಳಲಾಗುವುದಿಲ್ಲ; ಆಗ್ಯೆ ಅವರಿಗೆ ತಿಳಿದದ್ದು ಅಷ್ಟು. ಈಗ ನಾವು ಏನುಮಾಡ ಬೇಕೆಂದರೆ ವಿಮರ್ಶೆಯ ವಿಷಯವನ್ನು ಸರಿಯಾಗಿ ತಿಳಿದುಕೊಂಡು ಒಂದುಸಲ ಅಲ್ಲಿ ನಡೆದ ತಪ್ಪನ್ನು ಇಲ್ಲಿ ಮತ್ತೆ ನಡೆಸದಂತೆ ಜಾಗ್ರತೆಯಿಂದ ನೋಡಿಕೊಳ್ಳ ಬೇಕು. ನಮ್ಮ ಸೀಮೆಯ ಈಗಣ ವಿಮರ್ಶೆಯಲ್ಲಿ ಈ ತಿಳಿವಿನ ಚಿಹ್ನೆ ಕಾಣಲಿಲ್ಲ. ಓದುವ ಪುಸ್ತಕದಲ್ಲಿ ಇದು ಸರಿಯಾಗಿದೆ ಇದು ಸರಿಯಾಗಿಲ್ಲ ಎನ್ನುವುದು ಮಾತ್ರ ವಿಮರ್ಶೆ; ಅಥವಾ ಈ ಪದವು ವ್ಯಾಕರಣಕ್ಕೆ ಸರಿಯಾಗಿದೆ ಅಥವಾ ಇಲ್ಲ ಎನ್ನುವುದು ವಿಮರ್ಶೆ. ವಿಷಯ ಸಣ್ಣದಾದರೆ ಹೋಗಲಿ ಅದನ್ನು ಮರ್ಯಾದೆಯಿಂದ ಹೇಳಿದರೆ ಒಂದು ಮಾದರಿ; ವಿಮರ್ಶೆಯಲ್ಲಿ ತಿರುಳಿಲ್ಲದಿದ್ದರೂ ಲಕ್ಷಣವಾದರೂ ಇದೆ ಎನ್ನಬಹುದು. ಕೆಲವು ವಿಮರ್ಶೆಯಲ್ಲಿ ಇದೂ ಇರುವುದಿಲ್ಲ. ಕುಹಕ, ಕುಚೋದ್ಯ, ಭಾವಲಾಘವ, ಉಕ್ತಿಲಾಘವ, ಅಪ್ರಬುದ್ಧರು ಪರಸ್ಪರ ಅವಹೇಳನ ದಲ್ಲಿ ಉಪಯೋಗಿಸುವ ಆಹಹಾ ಉಹುಹೂ ಎಂಬಂತ ಮಾತುಗಳು. ಇದು ವಿಮ ರ್ಶೆಯ ದಾರಿಯಲ್ಲ. ಆಹಹಾ ಎಂದು ಅವಹೇಳನ ಮಾಡಬೇಕಾದಷ್ಟು ನಿಕೃಷ್ಟ ವಾದ ಗ್ರಂಥವನ್ನು ಕುರಿತಾದರೂ ವಿಮರ್ಶಕನು ಅದರ ತಗ್ಗಿಗೆ ಇಳಿದು ಬರೆಯ ಬಾರದು. ವಿಮರ್ಶಕನು ಹಾಸ್ಯಮಾಡಬಾರದೆಂದು ಅಭಿಪ್ರಾಯವಲ್ಲ. ಯಾವು ದನ್ನೂ ಭಾವಗೌರವ ಉಕ್ತಿಗೌರವದಿಂದ ಮಾಡಬೇಕೆಂದು ಮಾತ್ರ. ಈ ಕೆಲ ಸವೇ ಇಷ್ಟರಮಟ್ಟಿಗೆ ಆದಮೇಲೆ ವಿಮರ್ಶೆಯ ಇತರ ಕಾರ್ಯದಲ್ಲಿ ಎಷ್ಟು ಸ್ವಲ್ಪ ವನ್ನೂ ನಮ್ಮಲ್ಲಿಯ ಈಗಣ ವಿಮರ್ಶೆಯ ಬಹುಭಾಗವು ಮಾಡುತ್ತಿಲ್ಲವೆಂದು ಹೇಳ ಬೇಕಾದದ್ದಿಲ್ಲ. ಇದೆಲ್ಲದರ ಕಾರಣ ವಿಮರ್ಶೆಗೆ ಬೇಕಾದ ತಿಳಿವು ಇಲ್ಲದವರು ವಿಮರ್ಶೆಯಲ್ಲಿ ಉದ್ಯುಕ್ತರಾಗಿರುವುದು. ಇದೆಲ್ಲದರಿಂದ ತಿಳಿಯಬೇಕಾದುದು ಕವಿ ಗಿಂತಲೂ ವಿಮರ್ಶಕನು ತನ್ನ ಶಕ್ತಿಯ ವಿಷಯದಲ್ಲಿ ಅಧಿಕವಾದ ಯೋಚನೆಯು ಳ್ಳವನಾಗಿರಬೇಕು; ತಾನು ಹೇಳುವುದು ಸರಿಯೇ ತಾನು ಮಾಡುವುದು ಸರಿಯೇ ಎಂದು ಪರಾಮರ್ಶವುಳ್ಳವನಾಗಿರಬೇಕು ಎಂಬುದು.

ಇದು ವಿಮರ್ಶಕನ ಮಾತಾಯಿತು. ಸಾಹಿತ್ಯವು ಮುಂದುವರಿಯಬೇಕಾದರೆ ಕವಿಯೂ ಈ ವಿಷಯಗಳಿಗೆ ಗಮನಕೊಡಬೇಕು. ಉತ್ತಮಕವಿಯಲ್ಲಿ ಅವನ ಆವೇಶಕ್ಕೆ ತಕ್ಕ ವಿಮರ್ಶೆಯೂ ಇರುವುದೆಂದು ಈ ಚರ್ಚೆಯಲ್ಲಿ ಹೇಳುತ್ತಬಂದಿದೆ. ಈ ಆವೇಶಶುದ್ಧಿ ಇರುವುದು ಎಲ್ಲ ಕವಿಗಳಿಗೂ ಅಲ್ಲವೆಂಬುದನ್ನು ಚೆನ್ನಾಗಿ ತಿಳಿಯಬೇಕು. ಇದನ್ನು ಕವಿಯು ತಿಳಿಯುವುದು ಅತ್ಯಾವಶ್ಯಕ. ಕಾವ್ಯವು ಸಾರ್ಥಕವಾಗಬೇಕಾದರೆ ಓದುವವರು ಅದರಿಂದ ಉದ್ದಿಷ್ಟವಾದ ಸಂಸ್ಕಾರವನ್ನು ಪಡೆಯಬೇಕು. ಇದನ್ನು ಪಡೆಯುವರೇ ಇಲ್ಲವೇ ಎಂಬುದನ್ನು ಕವಿಯು ವಿಮರ್ಶಕನ ವಿಮರ್ಶೆಯಿಂದ ಮಾತ್ರ ತಿಳಿಯಬಹುದು. ವಿಮರ್ಶಕನು ಕವಿಗಿಂತ ಹೆಚ್ಚು ತಿಳಿವಳಿಕೆಯುವನಾದರೂ ಕಡಿಮೆ ತಿಳಿವಳಿಕೆಯುವನಾದರೂ ಅವನು ಸಾವಧಾನವಾಗಿ ಯೋಚಿಸಿ ತನ್ನಲ್ಲಿ ನಿಜವಾಗಿಯೂ ಉಂಟಾದ ಅಭಿಪ್ರಾಯವನ್ನು ಬರೆದರೆ ಅದನ್ನು ನಿರಾಕರಿಸುವುದಕ್ಕೆ ಕವಿಗೆ ಅಧಿಕಾರವಿಲ್ಲ. ವಿಮರ್ಶಕನ ಮಾತನ್ನು ಗ್ರಹಿಸಿ ಅದರಿಂದ ತಾನು ಏನು ತಿಳಿಯಬೇಕೆಂಬುದನ್ನು ನೋಡುವುದಕ್ಕೆ ಮಾತ್ರ ಅವನಿಗೆ ಅಧಿಕಾರ ಉಂಟು. ಯೋಚನೆ ಮಾಡಿ ಆ ಅಭಿಪ್ರಾಯವನ್ನು ಒಪ್ಪದೆ ಇದ್ದರೆ ಬಿಡಲಿ; ಆದರೆ ಬಿಡುವ ಮೊದಲು ಯೋಚನೆಮಾಡುವುದು ಆವಶ್ಯಕ. ಕೆಲವುವೇಳೆ ವಿಮರ್ಶಕನು ಹೇಳುವ ಮಾತು ಕವಿಗೇ ಮೊದಲು ತೋರಿ ಇದ್ದಿರಬಹುದು ; ಆಗ್ಯೆ ವಿಮರ್ಶಕನು ಯೋಜನಾಪರನೆಂದೇ ಆಯಿತು. ಅನೇಕವೇಳೆ ವಿಮರ್ಶಕನ ಮಾತು ಕವಿಗೆ ತೋರದೆ ಇದ್ದಿರಬಹುದು ; ಅದು ಆಗ್ಗೆ ಪಾಠಕರ ಕಡೆಯಿಂದ ಕಾವ್ಯ ಹೇಗೆ ಕಾಣುವುದೆಂಬುದನ್ನು ಕವಿಗೆ ತೋರಿಸುವುದು. ತನ್ನ ವಾಚಕಸಮುದಾಯದ ಸ್ವಭಾವವನ್ನು ತಿಳಿಯುವುದು ಕವಿಗೆ ಆವಶ್ಯಕವಾದದ್ದರಿಂದ ಇದಕ್ಕೂ ಕವಿಯು ಮನಸ್ಸನ್ನು ಬಗ್ಗಿಸಬೇಕು. ಹೀಗೆ ಮಾಡಿಯೇ ಕಾವ್ಯವು ಸಾರ್ಥಕವಾಗಬಹುದು.

ಸಾಹಿತ್ಯದ ಆತ್ಮಜ್ಞಾನವಾದ ವಿಮರ್ಶೆಯ ವಿಚಾರವನ್ನು ಸ್ವಲ್ಪಮಟ್ಟಿಗೆ ಚರ್ಚಿಸಲು ಯತ್ನಮಾಡಿರುವ ಈ ಉಪನ್ಯಾಸದಲ್ಲಿ ಈಗ ನಮ್ಮ ಸಾಹಿತ್ಯದಲ್ಲಿ ವಿಮರ್ಶೆಯಿಂದ ನಡೆಯಬೇಕಾಗಿರುವ ಕೆಲಸ ಯಾವುದೆಂದು ಸಂಕ್ಷೇಪವಾಗಿ ಸೂಚಿಸಬಹುದು. ಈಗ ನಮ್ಮ ಸಾಹಿತ್ಯವು ಎರಡನೆಯ ಬಾಲ್ಯಾವಸ್ಥೆಯಲ್ಲಿ ಇದೆ. ಅದು ಇನ್ನೊಂದು ಜೀವನದ ಪಥವನ್ನು ನಡೆಯಬೇಕಾಗಿದೆ. ಹಿಂದಣ ಗ್ರಂಥಗಳು ಎಷ್ಟೇ ಒಳ್ಳೆಯವಾದರೂ ಹಿಂದೆ ನಡೆದ ಪಥವನ್ನೇ ಮತ್ತೆ ನಡೆಯುತ್ತೇವೆ ಹಿಂದಣ ಗ್ರಂಥಗಳನ್ನೇ ಪ್ರತಿಮಾಡುತ್ತೇವೆ ಎಂದರೆ ಸಾಹಿತ್ಯವು ಜನಾಂಗದ

ಜೀವನದಲ್ಲಿ ಯಾವ ಕಾರ್ಯವನ್ನು ನೆರವೇರಿಸಬೇಕೋ ಆ ಕಾರ್ಯವನ್ನು ನೆರವೇರಿಸಲಾರದು. ಅಲ್ಲದೆ ಮನುಷ್ಯನ ಸ್ವಭಾವವು ಬೇರೆಯಾಗದೆ ಆಸೆಗಳು ಬೇರೆಯಾಗದೆ ಇದ್ದರೂ ಯೋಚನೆಯೂ ಅಭಿಪ್ರಾಯಗಳೂ ಹಿಂದಿನವೇ ಈಗಲೂ ಇಲ್ಲ. ಇವು ಬೇರೆಯಾದ ಹಾಗೆ ಇವುಗಳನ್ನು ಕುರಿತ ಸಾಹಿತ್ಯವೂ ಬೇರೆಬೇರೆಯ ರೀತಿಯಲ್ಲಿ ತನ್ನ ಕಾರ್ಯಕ್ಕೆ ಕೈಹಾಕಬೇಕು. ಜೀವವುಳ್ಳ ಜನಾಂಗದಲ್ಲಿ ಜೀವವುಳ್ಳ ಸಾಹಿತ್ಯದಲ್ಲಿ ಈ ಹೊಸರೀತಿಯು ತಾನಾಗಿ ಕಾಲಕ್ರಮದಲ್ಲಿ ಬರುವುದು; ಆದರೆ ಅದು ಜಾಗ್ರತೆಯಲ್ಲಿ ಬರುವಂತೆ ಮಾಡುವುದೂ ಸಾಧ್ಯ. ಇದನ್ನು ವಿಮರ್ಶೆಯು ಮಾಡಬೇಕು. ಹೀಗೆ ಸಾಹಿತ್ಯವು ಹೊಸಮುಖವಾಗಿ ಪರಿಣಮಿಸುವಂತೆಯೂ ಹೊಸಮುಖವಾಗಿ ಬಂದಿರುವ ಜೀವನದ ಪ್ರಶ್ನಾಂಶಗಳಿಗೆ ಉತ್ತರಕೊಡುವಂತೆಯೂ ಮಾಡಿಸುವುದಕ್ಕೆ ವಿಮರ್ಶೆಯು ನಮ್ಮಲ್ಲಿ ಈಗ ಮಾಡಬೇಕಾದ ಕೆಲಸ ನಾನಾಮುಖವಾಗಿದೆ. ಅದು ನಮ್ಮ ಸೀಮೆಯ ಪ್ರಕೃತಕಾಲದ ಜೀವನದ ಅವಸ್ಥೆಗಳನ್ನು ಪರಿಶೀಲಿಸಿ ಅವುಗಳ ಲಕ್ಷಣಗಳನ್ನು ತಿಳಿಸಬೇಕು; ಅದರಲ್ಲಿಯ ಉತ್ತಮಭಾವಗಳನ್ನು ಎತ್ತಿ ಪ್ರಶಂಸಿಸಬೇಕು, ದುಷ್ಟಭಾಗವನ್ನು ಸಮಾಧಾನವಾಗಿ ಆಕ್ರೋಶವಿಲ್ಲದೆ ಖಂಡಿಸಬೇಕು; ಸಾಹಿತ್ಯಕ್ಕೆ ಸಾಮಗ್ರಿಯಾವುದಿದೆ ಎಂದು ನಿರ್ದೇಶಿಸಬೇಕು, ಅಂತಹ ಸಾಮಗ್ರಿಯನ್ನು ಕವಿಯು ಉಪಯೋಗಿಸಿದಾಗ್ಯೆ ಜನರು ಅದನ್ನು ಸ್ವೀಕರಿಸುವುದು ಸಾಧ್ಯವಾಗುವಂತೆ ಅವರ ಬುದ್ಧಿಯನ್ನು ತಿದ್ದಬೇಕು, ಹಿಂದೆ ನಮ್ಮ ಸಾಹಿತ್ಯದಲ್ಲಿ ಉಪಯೋಗಿಸಲ್ಪಟ್ಟ ಆಕಾರಗಳಲ್ಲದೆ ಇತರ ಆಕಾರಗಳನ್ನು ಜನರ ಪರಿಚಯಕ್ಕೆ ತರಬೇಕು, ಕವಿಗೆ ಉಪಯೋಗವಾಗುವಂತೆ ವಿವರಿಸಬೇಕು; ಸಾಹಿತ್ಯದ ಸಾಧನವಾದ ಭಾಷೆಯಲ್ಲಿ ಯಾವ ವಿಧವಾದ ಕೆಲಸವೆಲ್ಲ ಸಾಧ್ಯವೆಂದು ಪರ್ಯಾಲೋಚನೆ ಮಾಡಬೇಕು; ಇನ್ನೂ ಅದರ ಬಲಾಬಲಗಳನ್ನು ನಿರ್ಧರಿಸಬೇಕು; ಅದನ್ನು ಪುಷ್ಟಿಗೊಳಿಸುವ ದಾರಿಯನ್ನು ನೋಡಬೇಕು; ಮುಖ್ಯವಾಗಿ ನಾವು ಎಲ್ಲರೂ ಎದುರುನೋಡುತ್ತಿರುವ ನಮ್ಮ ದೇಶದ ಮುಂದಣ ಸಾಹಿತ್ಯಕ್ಕೆ ದಾರಿಯನ್ನು ಸರಿಮಾಡಿ ಅದು ಬರುವುದಕ್ಕೆ ಮೊದಲು ಜನರಲ್ಲಿ ಉಂಟಾಗಬೇಕಾದ ಜನಸಾಮಾನ್ಯದ ಬುದ್ಧಿಸಂಸ್ಕಾರವನ್ನೂ ವಿಕಾಸವನ್ನೂ ತರಲು ಶ್ರದ್ಧೆಯಿಂದ ತೊಡಗಬೇಕು. ಆಂಗ್ಲೇಯ ವಿಮರ್ಶಕರಲ್ಲಿ ಅಗ್ರಗಣ್ಯನಾದ ಮ್ಯಾತ್ಯೂ ಆರ್ನಾಲ್ಡ್ ಎಂಬಾತನು ಕಾವ್ಯದ ಲಕ್ಷಣವನ್ನು ವಿವರಿಸುವುದರಲ್ಲಿ ಕಾವ್ಯವು ಜೀವನದ ವಿಮರ್ಶೆ ಎಂದು ಹೇಳಿದನು. ಅನೇಕರು ಈ ಮಾತನ್ನು ಒಪ್ಪುವುದಿಲ್ಲ: ಕಾವ್ಯವು ಜೀವನದ ವಿಮರ್ಶೆಮಾತ್ರ ಅಲ್ಲ, ಇನ್ನೂ ಅಧಿಕವಾದ ಕಲೆಯೆಂದು ಅವರ ಅಭಿಪ್ರಾಯ. ಆರ್ನಾಲ್ಡ್ ಹೇಳಿದ ಮಾತು ಕಾವ್ಯದ ಸಂಪೂರ್ಣ ಲಕ್ಷಣ

ವನ್ನು ಹೇಳಿತೆನ್ನದಿದ್ದರೂ ವಿಮರ್ಶೆಯು ಎಷ್ಟು ಉನ್ನತವಾದ ಕಾರ್ಯವೆಂಬುದನ್ನು ಹೇಳಿದಂತಾಯಿತೆಂದು ತೋರಬಹುದು. ಜೀವನಕ್ಕೆ ಕಾವ್ಯವು ಏನನ್ನು ಮಾಡುವುದೋ ಅದೇ ಕಾರ್ಯವನ್ನು ವಿಮರ್ಶೆಯು ಸಾಹಿತ್ಯಕ್ಕೆ ಮಾಡುವುದು. ಕಷ್ಟನಿಷ್ಠುರದಲ್ಲಿ ಸುಖದಲ್ಲಿ ಸೌಭಾಗ್ಯದಲ್ಲಿ ಮನುಷ್ಯನ ನಾನಾ ಅವಸ್ಥೆಗಳು ಒಂದೊಂದರಲ್ಲಿ ಎಲ್ಲದರಲ್ಲಿಯೂ ಸಾಹಿತ್ಯವು ಅವನಿಗೆ ಸಮಾಧಾನವನ್ನೋ ಆನಂದವನ್ನೋ ತರುವುದು ; ಬುದ್ಧಿರಾಗಗಳನ್ನು ಸ್ತಿಮಿತದಲ್ಲಿಡುವುದು ; ಸುಖದಾಯಕಗಳನ್ನಾಗಿ ಮಾಡುವುದು. ವಿಮರ್ಶೆಯು ಸಾಹಿತ್ಯಕ್ಕೆ ಇದನ್ನು ಮಾಡಬೇಕು. ಸಾಹಿತ್ಯವು ಏಳ್ಗೆಯಲ್ಲಿರಬಹುದು, ತಗ್ಗಿನಲ್ಲಿರಬಹುದು ; ಕರ್ತವ್ಯವನ್ನರಿತಿರಬಹುದು ಅರಿಯದೆ ಇರಬಹುದು ; ಸರಿಯಾದ ದಾರಿಯಲ್ಲಿರಬಹುದು ಇಲ್ಲದೆ ಇರಬಹುದು ; ಇದು ಹೇಗಾದರೂ ವಿಮರ್ಶೆಯು ಸಾಹಿತ್ಯದ ಜತೆಯಲ್ಲಿ ನಿಂತು ಅದು ಉತ್ಸಾಹದಿಂದ ಅತಿಗೆ ಹೋಗದಂತೆಯೂ ಉತ್ತಾನತೆಯಿಂದ ಭೂಗತವಾಗದಂತೆಯೂ ಅದಕ್ಕೆ ಸಹಾಯವಾಗಿದ್ದು ಅದರ ಸ್ಥಿರವಾದ ಶ್ರೇಯಸ್ಸು ಮತ್ತೆಮತ್ತೆ ಸ್ಥಿರವಾಗುವಂತೆ ಮತ್ತೆಮತ್ತೆ ಬರುವಂತೆ ಯತ್ನದಲ್ಲಿ ನಿಲ್ಲಬೇಕು. ನಮ್ಮ ಸಾಹಿತ್ಯದ ಈಗಣ ಅವಸ್ಥೆಯು ಕಷ್ಟಾವಸ್ಥೆಯಾಗಿರುವುದರಿಂದ ವಿಮರ್ಶೆಯು ಈ ಸಂದರ್ಭದಲ್ಲಿ ಮಾಡಬೇಕಾದ ಕೆಲಸವು ಸಾಹಿತ್ಯದ ಒಳ್ಳೆಯ ಸ್ಥಿತಿಯಲ್ಲಿ ಮಾಡಬೇಕಾದದ್ದಕ್ಕಿಂತಲೂ ಕಷ್ಟವಾದ ಕೆಲಸ. ಈ ಕೆಲಸವನ್ನರಿತು ಸಾಹಿತ್ಯದ ಏಳ್ಗೆಗೆ ಬೇಕಾದ ಎಲ್ಲಾ ಮುಖ್ಯವಾದ ಪ್ರಯತ್ನವನ್ನೂ ನಮ್ಮಲ್ಲಿಯ ವಿಮರ್ಶೆಯು ಈಗ ಮಾಡಬೇಕಾಗಿದೆ.

---

# ಸಮರ್ಪಣ

ರಾಗ ಕಮಾಚು

ಪದತಲದೊಳಿದನರ್ಪಿಸುವೆ ||ಪ||

ಹೆ ಸದಯ | ಗುರುದೇವ ||ಅನು||

ಹೃದಯದ ಬಿಸಿರಕುತವ ಬಸಿದು |
ಪದವಿಯ ಭೋಗಭಾಗ್ಯಗಳನು ತೊರೆದು ||
ಮದಿಸಿ ಮೇಲ್ಕವಿವಾಸೆಗಳನು ಬಿಗಿದು |
ಕುದಿದು ಕಂಗೆಡುವೀ ಪಾಳುಬಾಳನು ತೊಳೆದು ||೧||

ಜನಪದದೇಳಿಗೆಯೊಂದನೆ ನೆನೆದು |
ಘನತರಕಾರ್ಯಮರ್ಮಗಳನು ಅರಿದು ||
ಅನುವಿನೊಳೆಲ್ಲ ಸೋದರರನು ಗೆಲಿದು |
ಅನವರತವು ಸೇವೆಯೊಳು ಮೈಮರೆದು ||೨||

ಅಚಲಮಾನಸವೃತ್ತಿಯೊಳು |
ಉಚಿತವೆಂದೆನಿಸಿಹ ನಡೆನುಡಿಗಳೊಳು ||
ಸುಚರಿತಸಜ್ಜನಸಂಗದೊಳು ನಾ |
ನರ್ಚಿಸುತೆ—ಚಾನಿಸುತೆ—ವಂದಿಸುತೆ ||೩||

ವಿ. ಸೀ.

# ನಿವೇದನ

ವಸಂತಕುಸುಮಾಂಜಲಿ ಮುಂತಾದ ಗ್ರಂಥಗಳನ್ನು ರಚಿಸಿರುವ

**ಮ|| ಡಿ. ವಿ. ಗುಂಡಪ್ಪನವರಿಂದ**

ರಚಿತವಾಗಿ ಕರ್ಣಾಟಕ ಸಂಘದಿಂದ ಪ್ರಕಟಿಸಲ್ಪಟ್ಟಿದೆ.

ಕನ್ನಡನಾಡಿನ ರಮಣೀಯಪ್ರದೇಶಗಳನ್ನೂ ವಸ್ತುವಿಶೇಷಗಳನ್ನೂ

ವರ್ಣಿಸಿರುವ ಪದ್ಯಗಳೂ, ಮನೋಹರವಾದ ಗೀತಿಕೆಗಳೂ

ಇರುವ ಸುಂದರವಾದ ಗ್ರಂಥ.

ಪುಸ್ತಕದ ತುಂಬ ಹಾಫ್‌ಟೋನ್ ಚಿತ್ರಗಳಿವೆ.

ಬೆಲೆ ರೂ. ೧—೦—೦.

**ಕಾರ್ಯದರ್ಶಿ**

ಕರ್ಣಾಟಕ ಸಂಘ ಸೆಂಟ್ರಲ್ ಕಾಲೇಜ್, ಬೆಂಗಳೂರು.

# ದ್ವಿತೀಯಾಂಕಂ

(ಚೇಟಿಯು ಪ್ರವೇಶಿಸುವಳು.)

ಚೇಟಿ—ಕುಂಜರಿಕೆ! ಕುಂಜರಿಕೆ! ಎಲ್ಲಿ, ರಾಜಕುಮಾರಿ ಪದ್ಮಾವತಿಯೆಲ್ಲಿರುವಳು? ಏನು ಹೇಳುವೆ? ಮಾಧವೀಲತಾಮಂಟಪದ ಪಕ್ಕದಲ್ಲಿ ರಾಜಪುತ್ರಿಯು ಚೆಂಡಾಡುತ್ತಿರುವಳೆಂದೋ? ಸರಿ! ಅಲ್ಲಿಗೇ ಹೋಗುವೆನು. (ಮುಂದೆ ಹೋಗಿನೋಡಿ) ಇದೋ! ರಾಜಕುಮಾರಿಯು ಚೆಂಡನ್ನು ಪುಟಹಾರಿಸುತ್ತ ಇತ್ತಲಾಗಿಯೇ ಬರುತ್ತಿರುವಳು. ಆಹಾ! ಮೇಲಕ್ಕೆ ಒತ್ತರಿಸಿಟ್ಟ ಕರ್ಣಾವತಂಸದಿಂದಲೂ ಚಿತ್ರಿಸಿದಂತೆ ತೋರುವ ಸ್ವೇದಬಿಂದುಗಳಿಂದಲೂ ಕೂಡಿದ ಇವಳ ಮುಖವು ಚೆಂಡಾಟದ ಶ್ರಮದಿಂದ ಒಂದು ಅಪೂರ್ವ ಸೌಂದರ್ಯವನ್ನು ಬೀರುತ್ತ ಎಷ್ಟು ಮನೋಹರವಾಗಿರುವುದು! ಇರಲಿ! ಸಮೀಪಕ್ಕೆ ಹೋಗುವೆನು.

(ಹೋಗುವಳು.)

ಇದು

## ಪ್ರವೇಶಕವು

---

(ಅನಂತರದಲ್ಲಿ ಪದ್ಮಾವತಿಯು ಸಪರಿವಾರಳಾಗಿ ವಾಸವದತ್ತೆಯೊಡನೆ ಚೆಂಡಾಡುತ್ತ ಪ್ರವೇಶಿಸುವಳು.)

ವಾಸವದತ್ತೆ—ಸಖಿ! ಇದೋ ನೋಡು! ಇಲ್ಲಿ ನಿನ್ನ ಚೆಂಡು.

ಪದ್ಮಾ—ಆರ್ಯೆ! ಈಗ್ಗೆ ಈ ಆಟವು ಸಾಕು.

ವಾಸವದತ್ತೆ—ಸಖಿ! ಬಹಳ ಹೊತ್ತಿನಿಂದ ಚೆಂಡನ್ನು ಹೊಡೆದು ರಾಗಯುಕ್ತವಾದ ನಿನ್ನ ಕೈಗಳು ನಿನ್ನ ಸ್ವಾಧೀನ ತಪ್ಪಿದಂತೆ ತೋರುವುವು.

ಚೇಟಿ—ರಾಜಕುಮಾರೀ! ಆಡು! ಆಡು! ಈಗಲೇ ನಿನ್ನ ಮನಸ್ಸಿಗೆ ತೃಪ್ತಿಯಾಗುವವರೆಗೆ ಆಡಿಬಿಡು! ಆಡುವುದಕ್ಕೆ ಅನುಕೂಲವಾದ

ಇಂತಹ ಸಮಯವು, ನಿನ್ನ ಕನ್ಯಾಭಾವವು ಕಳೆದುಹೋದಮೇಲೆ ದೊರೆಯಲಾರದು.

ಪದ್ಮಾ—ಏನಮ್ಮ ! ನೀವು ನನ್ನನ್ನು ಪರಿಹಾಸ್ಯ ಮಾಡುವಂತಿದೆ ?

ವಾಸವದತ್ತೆ—ಸಖಿ ! ಇಲ್ಲ ! ಇಲ್ಲ ! ನಾವೇನೂ ನಿನ್ನನ್ನು ಪರಿಹಾಸ ಮಾಡಲಿಲ್ಲ. ಈ ದಿನವೇನೋ ನೀನು ನಮ್ಮ ಕಣ್ಣಿಗೆ ಒಂದು ವಿಧವಾದ ಅಪೂರ್ವ ಸೌಂದರ್ಯದಿಂದ ಕಾಣಿಸುತ್ತಿರುವೆ. ನಿನ್ನ ಅಕ್ಕಪಕ್ಕಗಳಲ್ಲಿ ಯಾವಕಡೆ ನೋಡಿದರೂ ನಿನ್ನವರ ಮುಖವೇ ಕಾಣಿಸುವಂತಿರುವುದು.

ಪದ್ಮಾ—ಇರಲಿ! ಸುಮ್ಮನೆ ಹೋಗು ! ನೀನೇನೂ ನನ್ನನ್ನು ಹಾಸ್ಯ ಮಾಡಬೇಡ !

ವಾಸವದತ್ತೆ—ಆಗಲಮ್ಮ ! ಮಹಾಸೇನನ ಸೊಸೆಯೆ ! ಹಾಗೆಯೇ ಆಗಲಿ ! ಇನ್ನು ನಾನು ಬಾಯನ್ನೇ ಎತ್ತುವುದಿಲ್ಲ.

ಪದ್ಮಾ—ಏನು ? ಏನು ? ಯಾರವನು ಮಹಾಸೇನನೆಂಬವನು ?

ವಾಸವದತ್ತೆ—ಉಜ್ಜಯಿನಿಯಲ್ಲಿ ಪ್ರದ್ಯೋತನೆಂಬ ರಾಜನಿರುವನಷ್ಟೆ ? ಅವನಿಗಿರತಕ್ಕ ಸೇನಾಸಮೃದ್ಧಿಯಿಂದ ಅವನಿಗೇ ಮಹಾಸೇನನೆಂಬ ಈ ನಾಮಾಂತರವು ಪ್ರಸಿದ್ಧವಾಗಿರುವುದು.

ಚೇಟಿ—ನಮ್ಮ ರಾಜಕುಮಾರಿಗೆ ಆ ಸಂಬಂಧವೇನೂ ಅಷ್ಟೊಂದು ಪ್ರಿಯವಲ್ಲ.

ವಾಸವದತ್ತೆ—ಹಾಗಿದ್ದರೆ ಇವಳಿಗೆ ಇಷ್ಟವಾದ ಸಂಬಂಧವಾವುದು ?

ಚೇಟಿ—ಉದಯನನೆಂಬ ವತ್ಸರಾಜನಿರುವನು ; ಅವನ ಗುಣಾತಿಶಯಗಳನ್ನು ಕೇಳಿ ಇವಳು ಅವನಲ್ಲಿ ಅನುರಕ್ತಳಾಗಿರುವಳು.

ವಾಸವದತ್ತೆ—(ಆತ್ಮಗತಂ) ಓಹೋ ! ಈಕೆಯು ಆರ್ಯಪುತ್ರನನ್ನೇ ಆಶಿಸುತ್ತಿರುವಳು. (ಪ್ರಕಾಶಂ) ಕಾರಣವೇನು?

ಚೇಟಿ—ಅವನು ಬಹುದಯಾಳು; ಮತ್ತು ಪ್ರಣಯಸ್ವಭಾವವುಳ್ಳವನೆಂದು.

ವಾಸವದತ್ತೆ—(ಸ್ವಗತಂ) ಬಲ್ಲೆನು, ಬಲ್ಲೆನು. ಅವನ ವಿಷಯದಲ್ಲಿ ನನಗೆ ಇಷ್ಟೊಂದು ಹುಚ್ಚುಹಿಡಿದಿರುವುದಕ್ಕೂ ಅದೇ ಕಾರಣವು.

ಚೇಟಿ—ರಾಜಪುತ್ರಿ ! ಒಂದು ವೇಳೆ ಅವನು ಕುರೂಪಿಯಾಗಿದ್ದರೆ ?

ವಾಸವದತ್ತೆ—ಛೀ ಛೀ ಎಂದಿಗೂ ಇಲ್ಲ ! ವಾಸ್ತವದಲ್ಲಿ ಅವನು ಬಹಳ ರೂಪವಂತನು.

ಪದ್ಮಾ—ಅಮ್ಮಾ ! ನೀನು ಇದನ್ನು ಹೇಗೆ ಬಲ್ಲೆ ?

ವಾಸವದತ್ತೆ—(ಭಯದಿಂದ; ಸ್ವಗತಂ) ಅಯ್ಯೋ ! ಇದೇನು? ಆರ್ಯಪುತ್ರನಲ್ಲಿರುವ ಪಕ್ಷಪಾತದಿಂದ ಮೈಮರೆತು, ಹದ್ದುಮೀರಿ ಮಾತಾಡಿಬಿಟ್ಟೆನಲ್ಲಾ ? ಇನ್ನೇನು ಗತಿ ! ಇರಲಿ ! (ಪ್ರಕಾಶಂ) ಸಖಿ ! ಉಜ್ಜಯಿನೀನಗರದ ಜನರು ಹೀಗೆಂದು ಮಾತಾಡಿಕೊಳ್ಳುತಿದ್ದುದನ್ನು ಕೇಳಿದ್ದೆನು.

ಪದ್ಮಾ—ಸರಿ ! ಇರಬಹುದು ! ಉಜ್ಜಯಿನಿಯಲ್ಲಿರತಕ್ಕವರಿಗೆ ಅವನು ಆಗಾಗ ಕಾಣಿಸಿಕೊಳ್ಳುತ್ತಲೇ ಇರಬೇಕಲ್ಲವೆ ? ಸೌಂದರ್ಯವೆಂಬುದು ಎಂತವರ ಮನಸ್ಸನ್ನಾದರೂ ಆಕರ್ಷಿಸದಿರಲಾರದು.

(ಧಾತ್ರಿಯು ಪ್ರವೇಶಿಸುವಳು)

ಧಾತ್ರಿ—ರಾಜಪುತ್ರಿಗೆ ಜಯವಾಗಲಿ! ಭರ್ತೃದಾರಿಕೆ ! ಆಗಲೇ ನಿನ್ನನ್ನು ಕೊಟ್ಟಾಯಿತು !

ವಾಸವದತ್ತೆ—ಆರ್ಯೆ ! ಯಾರಿಗೆ ?

ಧಾತ್ರಿ—ವತ್ಸರಾಜನಾದ ಉದಯನನಿಗೆ !

ವಾಸವದತ್ತೆ—ಹಾಗಿದ್ದರೆ ಆ ಮಹಾರಾಜನು ಕ್ಷೇಮದಿಂದಿರುವನೆ ?

ಧಾತ್ರಿ—ಅವನು ಕ್ಷೇಮದಿಂದ ಇಲ್ಲಿಗೆ ಬಂದುದು ಮಾತ್ರವಲ್ಲ. ಈ ನಮ್ಮ ರಾಜಕುಮಾರಿಯನ್ನು ಪ್ರತಿಗ್ರಹಿಸಿಯೂ ಇರುವನು !

ವಾಸವದತ್ತೆ—ಆಹಾ ! ಏನನ್ಯಾಯವಿದು ?

ಧಾತ್ರಿ—ಇಲ್ಲಿ ಅನ್ಯಾಯವೇನಿರುವುದು ?

ವಾಸವದತ್ತೆ—ಅಂತದೇನೂ ಇಲ್ಲ! ಆದರೆ ತನ್ನ ಪ್ರಥಮಪತ್ನಿಗಾಗಿ ಅಷ್ಟೊಂದು ಪರಿತಪಿಸುತ್ತಿದ್ದ ಆ ರಾಜನು, ಆಕಸ್ಮಾತ್ತಾಗಿ ಹೀಗೆ ಅವಳ ವಿಷಯದಲ್ಲಿ ಉದಾಸೀನನಾಗಿ ಬಿಟ್ಟನಲ್ಲವೆ ?

ಧಾತ್ರಿ—ಅಮ್ಮಾ, ಮಹಾಪುರುಷರ ಸ್ವಭಾವವೇ ಇದು! ಅವರ ಹೃದಯವು ಶಾಸ್ತ್ರಬೋಧೆಗಳಿಗೂ ಸ್ನೇಹಿತರ ಹಿತವಾದಗಳಿಗೂ ಬಹು ಸುಲಭವಾಗಿ ಈಡಾಗುವುದರಿಂದ, ಅಂತಹ ಧೀರರ ಮನಸ್ಸನ್ನು ಸಮಾಧಾನಕ್ಕೆ ತರುವುದೇನೂ ಕಷ್ಟವಲ್ಲ.

ವಾಸವದತ್ತೆ—ಅಮ್ಮಾ ! ಅದು ಹೋಗಲಿ, ಆ ಮಹಾರಾಜನು ನಿಮ್ಮ ರಾಜಪುತ್ರಿಯನ್ನು ತಾನಾಗಿಯೇ ಬಂದು ಆಸೆಪಟ್ಟು ಕೇಳಿದನೇನು ?

ಧಾತ್ರಿ—ಇಲ್ಲವಮ್ಮಾ ! ವತ್ಸರಾಜನು ಏನೋ ಕಾರ್ಯಾಂತರದ ಮೇಲೆ ಇಲ್ಲಿಗೆ ಬಂದಿದ್ದಾಗ, ಅವನ ಕುಲ, ರೂಪ, ವಯಸ್ಸು, ಜ್ಞಾನ, ಇವುಗಳನ್ನೆಲ್ಲಾ ನೋಡಿ, ನಮ್ಮ ಮಹಾರಾಜನು ತಾನಾಗಿಯೇ ಇವಳನ್ನು ಅವನಿಗೆ ವಾಗ್ದಾನಮಾಡಿಬಿಟ್ಟನು.

ವಾಸವದತ್ತೆ—(ಆತ್ಮಗತಂ) ಹಾಗಿದ್ದರೆ ಈ ವಿಚಾರದಲ್ಲಿ ಆರ್ಯಪುತ್ರನ ತಪ್ಪೆಣಿಸುವಹಾಗಿಲ್ಲ !

(ಬೇರೊಬ್ಬ ಚೇಟಿಯು ಸಂಭ್ರಮದಿಂದ ಪ್ರವೇಶಿಸುವಳು)

ಚೇಟಿ—ಅಮ್ಮಾ! ಹೊರಡು ! ಹೊರಡು ! ಈಗಲೇ ಒಳ್ಳೆಯ ಶುಭ ಮುಹೂರ್ತವಂತೆ! ಈಗಲೇ ವಿವಾಹಮಹೋತ್ಸವವು ನಡೆದು ಹೋಗಬೇಕೆಂದು ಮಹಾರಾಣಿಯವರ ಆಜ್ಞೆಯಾಗಿದೆ.

ವಾಸವದತ್ತೆ—(ಸ್ವಗತಂ) ಈ ವಿವಾಹಕಾರ್ಯವನ್ನು ತ್ವರೆಗೊಳಿಸಿದಷ್ಟೂ ನನ್ನ ಹೃದಯವು ಶೂನ್ಯಪ್ರಾಯವಾಗಿ ಕಳವಳಿಸುತ್ತಿದೆ.

ಧಾತ್ರಿ—ರಾಜಪುತ್ರಿ ! ನಡೆ ! ನಡೆ! ಹೋಗುವೆವು !

(ಎಲ್ಲರೂ ಹೋಗುವರು)

ಇದು

## ದ್ವಿತೀಯಾಂಕಂ

---

# ತೃತೀಯಾಂಕಂ

(ಚಿಂತಾಕುಲೆಯಾದ ವಾಸವದತ್ತೆಯು ಪ್ರವೇಶಿಸುವಳು.)

ವಾಸವದತ್ತೆ—ವಿವಾಹೋತ್ಸವದ ಸಡಗರದಿಂದ ತುಂಬಿದ ಅಂತಃಪುರದ ತೊಟ್ಟಿಯಲ್ಲಿ ಪದ್ಮಾವತಿಯನ್ನು ಬಿಟ್ಟು, ನಾನು ಕಣ್ಮರೆಯಾಗಿ ಈ ಪ್ರಮದವನಕ್ಕೆ ಬಂದುಬಿಟ್ಟೆನು. ಮಂದಭಾಗ್ಯಳಾದ ನನ್ನ ಮನಸ್ಸಂಕಟವನ್ನು ಇಲ್ಲಿಯಾದರೂ ಆದಷ್ಟುಮಟ್ಟಿಗೆ ಪರಿಹರಿಸಿಕೊಳ್ಳುವೆನು. ಆಹಾ ! ಏನನ್ಯಾಯವಿದು ! ಹಾಗಿದ್ದ ಆರ್ಯಪುತ್ರನೂ ಕೂಡ ಪರಾಧೀನನಾಗಿಬಿಟ್ಟನಲ್ಲವೆ ? ಇರಲಿ ! ಇಲ್ಲಿ ಕುಳ್ಳಿರುವೆನು; ಆಹಾ ! ಲೋಕದಲ್ಲಿ ಚಕ್ರವಾಕ ಸ್ತ್ರೀಯಲ್ಲವೇ ಧನ್ಯೆ ! ಪ್ರಿಯವಿರಹವುಂಟಾದಾಗ ಅದು ಆ ಸಂಕಟವನ್ನು ಅನುಭವಿಸುವ ಕಷ್ಟವಿಲ್ಲದೆ ಬೇಗನೆ ಸಾಯುವುದು. ಮಂದಭಾಗ್ಯಳಾದ ನಾನು ಸಾಯುವುದಕ್ಕೂ ಇಲ್ಲದಂತಾಯಿತು. ಆರ್ಯಪುತ್ರನನ್ನು ತಿರುಗಿ ಎಂದಾದರೂ ನೋಡದೆ ಹೋಗುವೆನೇ ಎಂಬ ಆಶೋತ್ತರದಿಂದ ಪ್ರಾಣವನ್ನಿರಿಸಿಕೊಂಡಿದ್ದೆನು.

(ಪುಷ್ಪಗಳನ್ನು ತೆಗೆದುಕೊಂಡು ಚೇಟಿಯು ಪ್ರವೇಶಿಸುವಳು.)

ಚೇಟಿ—ಆ ಅವಂತಿಸುಂದರಿಯು ಎಲ್ಲಿ ಹೋದಳೋ ತಿಳಿಯಲಿಲ್ಲವಲ್ಲಾ ! (ಅಲ್ಲಲ್ಲಿ ತಿರುಗಿನೋಡಿ) ಅಬ್ಬಾ ! ಮಂಜು ಮುಚ್ಚಿದ ಚಂದ್ರಲೇಖೆಯಂತೆ ಚಿಂತಾಶೂನ್ಯಹೃದಯಳಾಗಿ, ಅಲಂಕಾರವಿಲ್ಲದಿದ್ದರೂ ಸಹಜಸುಂದರವಾದ ರೂಪದೊಡನೆ, ಇದೋ ! ಈ ಗಂಧಫಲೀವೃಕ್ಷದ ಕಲ್ಲುಕಟ್ಟೆಯ ಮೇಲೆ ಕುಳಿತಿರುವಳು. ಇರಲಿ ! ಸಮೀಪಕ್ಕೆ ಹೋಗುವೆನು. ಅಮ್ಮಾ ! ಅವಂತಿಕೆ, ಚೆನ್ನಾಯಿತು ! ಎಷ್ಟು ಹೊತ್ತಿನಿಂದ ನಿನ್ನನ್ನು ಹುಡುಕುತ್ತಿರುವೆನು ಬಲ್ಲೆಯಾ ?

ವಾಸವದತ್ತೆ—ಏತಕ್ಕೆ ?

ಚೇಟಿ—ಅಮ್ಮಾ ಕೇಳು ! ನಮ್ಮ ಮಹಾರಾಣಿಯವರು ಸದ್ವಂಶ ಪ್ರಸೂತಳೂ ನಮ್ಮಲ್ಲಿ ಅಂತರ್ಯವಾದ ಪ್ರೇಮವುಳ್ಳವಳೂ ಮತ್ತು ಮಾಲೆ

ಕಟ್ಟುವ ಕೆಲಸದಲ್ಲಿ ಚತುರಳೂ ಆದ ನಿನ್ನ ಕೈಯಿಂದಲೇ ವರಣ ಮಾಲಿಕೆಯನ್ನು ಕಟ್ಟಿಸಿ ತರಬೇಕೆಂದು ಈ ಬಿಡು ಹೂಗಳನ್ನು ಕಳುಹಿಸಿಕೊಟ್ಟಿರುವರು. ತೆಗೆದುಕೋ! ಇದನ್ನು ಕಟ್ಟಿಕೊಡು!

ವಾಸವದತ್ತೆ—ಯಾರಿಗಾಗಿ ಈಗ ಮಾಲೆಯನ್ನು ಕಟ್ಟಬೇಕು?

ಚೇಟಿ—ನಮ್ಮ ರಾಜಕುಮಾರಿ ಪದ್ಮಾವತಿಗಾಗಿ!

ವಾಸವದತ್ತೆ—(ಸ್ವಗತಂ) ಏನಿದು! ನಾನು ಇದನ್ನೂ ಮಾಡಬೇಕಾಗಿ ಬಂತೆ? ಹಾ! ಮುಖ್ಯವಾಗಿ ನನ್ನಲ್ಲಿ ಯಾವ ದೇವತೆಗಳಿಗೂ ಸ್ವಲ್ಪವೂ ಕನಿಕರವಿಲ್ಲ!

ಚೇಟಿ—ಆರ್ಯೆ! ಬೇಗನೆ ಕಟ್ಟಿಕೊಡು! ಬೇರೆ ಕೆಲಸವನ್ನು ಚಿಂತಿಸುತ್ತ ಕುಳಿತಿರುವುದಕ್ಕೆ ಇದು ಸಮಯವಲ್ಲ! ಈಗಾಗಲೇ ರತ್ನಖಚಿತ ವಾದ ಸ್ನಾನಶಾಲೆಯಲ್ಲಿ ವರನಿಗೆ ಮಂಗಳಸ್ನಾನವು ನಡೆಯು ತ್ತಿರುವುದು. ಮಾಲೆಯು ಸಿದ್ಧವಾಗಲಿ! ಹೊತ್ತು ಮೀರುವುದು!

ವಾಸವದತ್ತೆ—(ಸ್ವಗತಂ) ಇನ್ನು ಚಿಂತಿಸತಕ್ಕುದೇನಿದೆ? ಅಥವಾ ಚಿಂತಿಸಿ ತಾನೇ ಫಲವೇನು? (ಪ್ರಕಾಶಂ) ಸಖಿ! ನೀನು ವರನನ್ನು ನೋಡಿ ದೆಯಾ?

ಚೇಟಿ—ಹೌದು! ನೋಡಿಬಂದೆನು. ರಾಜಕುಮಾರಿಯಲ್ಲಿ ನನಗಿರತಕ್ಕ ಸ್ನೇಹವೂ, ಈ ವಿಷಯದಲ್ಲಿ ನಮ್ಮಂತವರಿಗೆ ಸಹಜವಾದ ಕುತೂ ಹಲವೂ ನಮ್ಮನ್ನು ಸುಮ್ಮನೆ ಇರಿಸುವುದೇ?

ವಾಸವದತ್ತೆ—ವರನು ಹೇಗಿರುವನು?

ಚೇಟಿ—ಅಮ್ಮಾ! ಕೇಳಬೇಕೆ? ಅಂತವನನ್ನು ನಾವು ಇದುವರೆಗೆ ಹಿಂದೆ ಯಾವಾಗಲೂ ನೋಡಿದುದೇ ಇಲ್ಲ.

ವಾಸವದತ್ತೆ—ಸಖಿ! ಹೇಳು! ಹೇಳು! ನೋಡುವುದಕ್ಕೆ ಚೆನ್ನಾಗಿರು ವನೆ?

ಚೇಟಿ—ಅಮ್ಮಾ! ಅವನನ್ನು ಧನುರ್ಬಾಣಗಳಿಲ್ಲದ ಕಾಮದೇವನೆಂದೇ ಹೇಳಬಹುದು.

ವಾಸವದತ್ತೆ—ಇಷ್ಟೇ ಸಾಕು ! ಬಿಡು !

ಚೇಟಿ—ಏಕಮ್ಮಾ ! ಅದೇಕೆ ಅಷ್ಟರಲ್ಲಿಯೇ ಸಾಕೆಂದು ನನ್ನನ್ನು ತಡೆಯುವೆ ?

ವಾಸವದತ್ತೆ—ಬೇರೇನೂ ಇಲ್ಲ. ಪರಪುರುಷರ ವರ್ಣನೆಯನ್ನು ಕೇಳುತ್ತಿರುವುದು ನಮಗೆ ಉಚಿತವಲ್ಲ !

ಚೇಟಿ—ಹಾಗಿದ್ದರೆ ಇನ್ನು ನೀನು ಬೇಗನೆ ಈ ಮಾಲೆಯನ್ನು ಕಟ್ಟಿಕೊಡುವೆಯಷ್ಟೆ ?

ವಾಸವದತ್ತೆ—ಇದೋ ! ಈಗಲೇ ಕಟ್ಟಿಕೊಡುವೆನು. ಎಲ್ಲಿ ! ಹೂಗಳನ್ನು ಇಲ್ಲಿಡು.

ಚೇಟಿ – ಇದೋ ! ಇಟ್ಟಿರುವೆನು.

ವಾಸವದತ್ತೆ—(ಪಕ್ಕದಲ್ಲಿ ಕುಳಿತು ಹೂಗಳನ್ನು ಚೆನ್ನಾಗಿ ನೋಡಿ) ಸಖಿ ! ಇದೇನು, ಇದರಲ್ಲಿ ಕಾಣುವ ಈ ಮೂಲಿಕೆಯಾವುದು ?

ಚೇಟಿ—ಇದನ್ನು "ಅವಿಧವಾಕರಣ" ವೆಂದು ಹೇಳುವರು. ಇದಿದ್ದರೆ ಸ್ತ್ರೀಯರಿಗೆ ವೈಧವ್ಯವು ತಪ್ಪುವುದಂತೆ !

ವಾಸವದತ್ತೆ—(ಸ್ವಗತಂ) ಹಾಗಿದ್ದರೆ ಇದನ್ನು ಹೆಚ್ಚಾಗಿ ಸೇರಿಸಿ ಕಟ್ಟಬೇಕಾದುದು ಆವಶ್ಯವು. ಇದರಿಂದ ಪದ್ಮಾವತಿಗೂ ನನಗೂ ಕ್ಷೇಮವುಂಟು. (ಪ್ರಕಾಶಂ) ಸಖಿ ! ಮತ್ತೊಂದುಜಾತಿಯ ಮೂಲಿಕೆಯಿರುವುದಲ್ಲಾ ! ಇದಾವುದು ?

ಚೇಟಿ – ಇದನ್ನು "ಸಪತ್ನೀಮರ್ದನ" ವೆಂದು ಹೇಳುವರು. ಇದು ಸವತಿಯರನ್ನು ನಿಗ್ರಹಿಸುವ ಶಕ್ತಿಯುಳ್ಳುದಂತೆ !

ವಾಸವದತ್ತೆ—ಹಾಗಿದ್ದರೆ ಇದೇನೂ ಬೇಡ ! ಇದನ್ನು ನಾನು ಮಾಲೆಗೆ ಸೇರಿಸುವುದಿಲ್ಲ.

ಚೇಟಿ—ಏಕೆ ?

ವಾಸವದತ್ತೆ—ವರನಿಗೆ ಬೇರೆ ಹೆಂಡತಿಯಿದ್ದರಲ್ಲವೇ ಈ ಮೂಲಿಕೆಗೆ ಪ್ರಯೋಜನವುಂಟು. ರಾಜನ ಮೊದಲನೇ ಹೆಂಡತಿಯು ಆಗಲೇ ತೀರಿಹೋಗಿರುವಳಲ್ಲವೆ ?

(ಮತ್ತೊಬ್ಬ ಚೇಟಿಯು ಪ್ರವೇಶಿಸುವಳು.)

ಚೇಟಿ—ಅಮ್ಮಾ, ತ್ವರೆಮಾಡು ! ತ್ವರೆಮಾಡು ! ಆಗಲೇ ಸುಮಂಗಲಿಯರು ವರನನ್ನು ವಿವಾಹಮಂಗಲಗೃಹಕ್ಕೆ ಕರೆತರುತ್ತಿರುವರು. ಮಾಲಿಕೆಯೆಲ್ಲಿ ?

ವಾಸವದತ್ತೆ—ಆಗಲೇ ಹೇಳಿದೆನಲ್ಲವೆ ? ಇದನ್ನು ತೆಗೆದುಕೊಂಡು ಹೋಗೆಂದು.

ಚೇಟಿ—ಒಳ್ಳೆಯದು ! ಆರ್ಯೆ ! ಇನ್ನು ನಾವು ಹೋಗಿಬರುವೆವು.

(ಇಬ್ಬರೂ ಹೋಗುವರು.)

ವಾಸವದತ್ತೆ—ಹೊರಟೇಹೋದಳು ! ಆಹಾ! ಏನೀ ವಿಪರೀತವು ? ಆರ್ಯಪುತ್ರನು ಈಗ ನನಗೆ ಪರಕೀಯನಾದನಲ್ಲವೆ ? ಹಾಸಿಗೆಯಲ್ಲಿ ಬಿದ್ದುಕೊಂಡು ಸ್ವಲ್ಪ ದುಃಖಸಮಾಧಾನವನ್ನು ಮಾಡಿಕೊಳ್ಳುವೆನು.—ನಿದ್ರೆಯಾದರೂ ಬರುವುದಾದರೆ.

(ಹೋಗುವಳು.)

ಇದು

## ತೃತೀಯಾಂಕಂ

---

# ಚತುರ್ಥಾಂಕಂ

(ವಿದೂಷಕನು ಪ್ರವೇಶಿಸುವನು)

ವಿದೂ—(ಹರ್ಷದೊಡನೆ) ಭಲೆ! ಭಲೆ! ಅದೃಷ್ಟವಶದಿಂದ ನಮ್ಮ ಮಿತ್ರನಾದ ವತ್ಸರಾಜನಿಗೆ ಅನುರೂಪಳೂ ಇಷ್ಟಳೂ ಆದ ಕನ್ಯೆಯು ದೊರೆತು, ಅವನ ವಿವಾಹಮಹೋತ್ಸವ ಸಂಭ್ರಮಗಳನ್ನೆಲ್ಲಾ ಕಣ್ಣಾರೆ ನೋಡಿ ಆನಂದಿಸುವ ಭಾಗ್ಯವು ನನಗೆ ಲಭಿಸಿತು. ಆಹಾ! ಅಂತಹ ಮಹಾನರ್ಥವೆಂಬ ಪ್ರವಾಹದ ಸುಳಿಯಲ್ಲಿ ಮುಳುಗಿಯೇ ಹೋಗಿದ್ದ ನಾವು ತಿರುಗಿ ಹೀಗೆ ಮೇಲೆದ್ದು ಬರುವೆವೆಂದೂ, ತಿರುಗಿ ನಮಗೆ ಈ ಅರಮನೆಯ ಉಪ್ಪರಿಗೆಗಳಲ್ಲಿ ವಾಸವೂ, ಅಂತಃಪುರದ ಬಾವಿಗಳಲ್ಲಿ ಸ್ನಾನವೂ, ಒಳ್ಳೇ ರುಚಿರುಚಿಯಾಗಿಯೂ, ಬಾಯಿಗೆ ಮೃದುವಾಗಿಯೂ ಇರುವ ಕಡುಬುಮುಂತಾದ ಭಕ್ಷ್ಯಗಳ ಯಥೇಚ್ಛ ಭೋಜನವೂ ಲಭಿಸುವುದೆಂದು ಯಾರುತಾನೇ ಕಂಡಿದ್ದರು? ಮುಖ್ಯವಾಗಿ ಈಗ ನಾನು ಅಪ್ಸರಸಿಯರಿಲ್ಲದ ಉತ್ತರಕುರು (ಸ್ವರ್ಗ) ವಾಸವನ್ನೇ ಅನುಭವಿಸುತ್ತಿರುವೆನು. ಆದರೆ ಈಗ ನನಗೆ ಒಂದು ಮಾತ್ರ ದೊಡ್ಡ ಕೊರತೆಯಿದೆ! ಆಹಾರವು ಸರಿಯಾಗಿ ಜೀರ್ಣವಾಗುವುದಿಲ್ಲ. ಮೆತ್ತಗೆ ಹಾಸಿದ ಹಾಸುಗೆಯಲ್ಲಿ ಮಲಗಿದರೂ ಕಣ್ಣಿಗೆ ನಿದ್ರೆ ಹತ್ತುವುದಿಲ್ಲ! ಅಜೀರ್ಣವಾತವು ಅಂಗಾಂಗದಲ್ಲಿ ಕೀಲುಕೀಲುಗಳನ್ನೆಲ್ಲಾ ವ್ಯಾಪಿಸಿದಂತಿದೆ. ಏನು ಮಾಡಲಿ! ಛೀ! ಹೀಗೆ ಅಜೀರ್ಣಕ್ಕೆ ಹೆದರಿ ಬಾಯಿಗೆ ಬೇಕಾದ ಆಹಾರಪದಾರ್ಥಗಳನ್ನು ಪುಷ್ಕಲವಾಗಿ ತಿನ್ನುವುದಕ್ಕಿಲ್ಲದೆ, ಬಾಯಿಕಟ್ಟಿ ಬದುಕುವ ಈ ಬಾಳು ಸುಖವಲ್ಲ!

(ಚೇಟಿಯು ಪ್ರವೇಶಿಸುವಳು.)

ಚೇಟಿ—ಆರ್ಯವಸಂತಕನೆಲ್ಲಿ ಹೋಗಿರುವನೋ ಕಾಣೆನಲ್ಲಾ! (**ಸುತ್ತಿ ನೋಡಿ**) ಓಹೋ! ಇಲ್ಲಿಯೇ ಇರುವನು. ಆರ್ಯವಸಂತಕ! ಎಷ್ಟು ಹೊತ್ತಿನಿಂದ ನಿನ್ನನ್ನು ಹುಡುಕುವುದು?

ವಿದೂ—ಏಕಮ್ಮ? ನನ್ನನ್ನು ನೀನು ಹುಡುಕಬೇಕಾದ ಕಾರ್ಯವೇನು?

ಚೇಟಿ—ನಮ್ಮ ಮಹಾರಾಣಿಯು ಅಳಿಯನಿಗೆ ಸ್ನಾನವಾಯಿತೋ ಇಲ್ಲವೋ ತಿಳಿದು ಬಾ ಎಂದು ಹೇಳಿ ಕಳುಹಿಸಿರುವಳು.

ವಿದೂ—ಏತಕ್ಕಾಗಿ ಅವಳು ಹಾಗೆ ಕೇಳಿರುವಳು!

ಚೇಟಿ—ಬೇರೇನಿದೆ? ಅವನ ದೇಹಾಲಂಕರಣಾರ್ಥವಾಗಿ ಗಂಧಪುಷ್ಪಾದಿಗಳನ್ನು ಕಳುಹಿಸಿಕೊಡುವುದಕ್ಕೆ!

ವಿದೂ—ಹಾಗಿದ್ದರೆ ರಾಜನಿಗೆ ಸ್ನಾನವಾಯಿತೆಂದು ತಿಳಿಸು ಹೋಗು! ಹೂವೋ ಗಂಧವೋ ಯಾವುಗಿದ್ದರೆ ಅವೆಲ್ಲವನ್ನೂ ತಂದೊಪ್ಪಿಸು. ಆದರೆ ಭೋಜನವನ್ನು ಮಾತ್ರ ತರಬೇಡ!

ಚೇಟಿ—ಅದೇಕೆ? ಭೋಜನವನ್ನು ಮಾತ್ರ ತರಬಾರದೆಂಬುದೇಕೆ?

ವಿದೂ—ಭದ್ರೆ! ನಾನೇನು ಹೇಳಲಿ? ಮಂದಭಾಗ್ಯನಾದ ನನಗೆ ಅಜೀರ್ಣವಾಗಿ, ಅದರಮೇಲೆ ಕೋಗಿಲೆಗಳ ಕಣ್ಣುಗಳಂತೆ ಹೊಟ್ಟೆಯು ಬಹಳವಾಗಿ ತೊಳಸುತ್ತಿದೆ.

ಚೇಟಿ—ನಿನಗೆ ಹಾಗೆಯೇ ಆಗಬೇಕು. ಯಾವಾಗಲೂ ಹಾಗೆಯೇ ಇರು.

ವಿದೂ—ಇನ್ನು ನೀನು ಹೋಗು! ನಾನೂ ರಾಜನ ಬಳಿಗೆ ಹೋಗುವೆನು.

(**ಹೋಗುವರು.**)

ಇದು

## ಪ್ರವೇಶಕವು

(**ಪದ್ಮಾವತಿಯು ತನ್ನ ಚೇಟಿಯರೊಡನೆಯೂ ಅವಂತಿಕನ್ಯಾವೇಷವುಳ್ಳ ವಾಸವದತ್ತೆಯೊಡನೆಯೂ ಪ್ರವೇಶಿಸುವಳು.**)

ಚೇಟಿ—ರಾಜಪುತ್ರಿ! ನೀನು ಈಗ ಈ ಉದ್ಯಾನಕ್ಕೆ ಬಂದ ಕಾರಣವೇನೋ ತಿಳಿಯಲಿಲ್ಲವಲ್ಲಾ!

ಪದ್ಮಾ—ನಮ್ಮ ತೋಟದಲ್ಲಿದ್ದ ಶೇಫಾಲಿಕಾಲತೆಯು ಪುಷ್ಪಿಸಿತೋ ಇಲ್ಲವೋ ನೋಡಬೇಕೆಂದು ಬಂದೆನು

ಚೇಟಿ—ರಾಜಪುತ್ರಿ! ಅವು ಚೆನ್ನಾಗಿ ಪುಷ್ಪಿಸಿ, ನಡುನಡುವೆ ಹವಳಗಳನ್ನು ಪೋಣಿಸಿದ ಮುತ್ತಿನ ಹಾರದಂತೆ ಕಾಣಿಸುತ್ತಿವೆ.

ಪದ್ಮಾ—ಹಾಗಿದ್ದರೆ ತಡವೇಕೆ? ಅವುಗಳನ್ನು ಬೇಗನೆ ಕುಯ್ದು ತರಬಾರದೇ?

ಚೇಟಿ—ಇದೋ ಈಗಲೇ ಕುಯ್ದು ತರುವೆನು. ಸ್ವಲ್ಪಹೊತ್ತು ಈ ಶಿಲಾತಲದಮೇಲೆ ಕುಳಿತಿರು!

ಪದ್ಮಾ—ಪೂಜ್ಯಳೆ! ಇಲ್ಲಿ ಕುಳಿತು ಸ್ವಲ್ಪ ವಿಶ್ರಮಿಸಿಕೊಳ್ಳುವೆವೇ?

ವಾಸವದತ್ತೆ—ಆಗಲಿ.

(ಇಬ್ಬರೂ ಕುಳ್ಳಿರುವರು.)

ಚೇಟಿ—(ಹೂಗಳನ್ನು ಕುಯ್ದು ತಂದು) ರಾಜಕುಮಾರೀ! ಇದೋ! ಮಣಿಶಿಲೆಯ ಹರಳುಗಳಂತೆ ನನ್ನ ಕೈಯಲ್ಲಿರುವ ಈ ಹೂಗಳನ್ನು ನೋಡು.

ಪದ್ಮಾ—ಆಹಾ! ಇವು ಎಷ್ಟು ವಿಚಿತ್ರವಾಗಿರುವುವು! ಆರ್ಯೇ! ನೋಡಿದೆಯಾ ಈ ಹೂಗಳನ್ನು?

ವಾಸವದತ್ತೆ—(ನೋಡಿ) ಆಹಾ! ಇವು ಎಷ್ಟು ಮನೋಹರವಾಗಿರುವುವು?

ಚೇಟಿ—ರಾಜಕುಮಾರೀ! ನಿನಗಾಗಿ ಇನ್ನಷ್ಟು ಹೂಗಳನ್ನು ಕುಯ್ದು ತಂದುಕೊಡಲೇನು?

ಪದ್ಮಾ—ಸಖಿ! ಬೇಡ! ಬೇಡ! ಇಷ್ಟೇ ಸಾಕು! ಇನ್ನು ಆ ಗಿಡದಲ್ಲಿ ಹೂಗಳನ್ನು ಕುಯ್ಯಬೇಡ!

ವಾಸವದತ್ತೆ—ಸಖಿ! ಅದೇಕೆ ಬೇಡವೆನ್ನುವೆ?

ಪದ್ಮಾ—ಆರ್ಯೇ! ನನ್ನ ಪ್ರಿಯನು ಇಲ್ಲಿಗೆ ಬಂದಾಗ ಆ ಪುಷ್ಪಸಮೃದ್ಧಿಯನ್ನು ನೋಡಿ ಸಂತೋಷಪಟ್ಟರೆ ನನಗೆ ಅದೊಂದು ದೊಡ್ಡ ಬಹುಮಾನವಲ್ಲವೆ?

ವಾಸವದತ್ತೆ—ಸಖೀ! ಈಗಾಗಲೇ ನಿನಗೆ ನಿನ್ನ ಕಾಂತನಲ್ಲಿ ಅಷ್ಟೊಂದು ಪ್ರೇಮವಿಶೇಷವೇ?

ಪದ್ಮಾ—ಆರ್ಯೆ! ಅದೇನೋ ಕಾಣೆನು. ಅವನನ್ನು ಸ್ವಲ್ಪಹೊತ್ತು ಕಾಣದಿದ್ದರೂ ನನ್ನ ಮನಸ್ಸು ತಪಿಸುವುದು!

ವಾಸವದತ್ತೆ—(ಸ್ವಗತಂ) ಇವಳೇ ಹೀಗೆ ಹೇಳಬೇಕಾದರೆ, ಈಗ ನಾನು ನಡೆಸುತ್ತಿರುವುದು ಅತಿ ದುಷ್ಕರವಾದ ಕಾರ್ಯವಲ್ಲವೆ?

ಚೇಟಿ—ರಾಜಪುತ್ರಿಯು ತನ್ನ ಕಾಂತನು ತನಗೆ ಅತ್ಯಂತ ಪ್ರಿಯನೆಂದು ಹೇಳುವುದು ಅವಳ ಗುಣಕ್ಕೆ ಉಚಿತವೇ ಅಲ್ಲವೆ?

ಪದ್ಮಾ—ಆದರೆ ನನಗೆ ಮಾತ್ರ ಒಂದು ಸಂದೇಹವುಂಟು.

ವಾಸವದತ್ತೆ—ಏನದು? ಆ ಸಂದೇಹವೇನು?

ಪದ್ಮಾ—ಈಗ ನನ್ನ ಪ್ರಿಯನು ನನ್ನ ವಿಷಯದಲ್ಲಿ ಹೇಗಿರುವನೋ ಹಾಗೆಯೇ ಮೊದಲು ಅವನ ಪ್ರಥಮಭಾರ್ಯೆಯಾದ ವಾಸವದತ್ತೆಯ ವಿಷಯದಲ್ಲಿಯೂ ಪ್ರೀತಿಯನ್ನು ತೋರಿಸುತ್ತಿದ್ದಿರಬಹುದೆ?

ವಾಸವದತ್ತೆ—ಇದಕ್ಕಿಂತಲೂ ಹೆಚ್ಚಾಗಿ ಅವಳನ್ನು ಪ್ರೀತಿಸುತ್ತಿದ್ದನು.

ಪದ್ಮಾ—ಅದನ್ನು ನೀನು ಹೇಗೆ ಬಲ್ಲೆ?

ವಾಸವದತ್ತೆ—(ಸ್ವಗತಂ) ಅಯ್ಯೋ! ಈಗೇನುಮಾಡಲಿ! ಕಾಂತನಲ್ಲಿರುವ ಪಕ್ಷಪಾತದಿಂದ ನಾನು ನನ್ನ ಸ್ಥಿತಿಯನ್ನುಯೋಚಿಸದೆ ಹದ್ದುಮೀರಿ ಮಾತಾಡಿಬಿಟ್ಟೆನಲ್ಲಾ! ಇರಲಿ! ಈಗ ಹೀಗೆಂದು ಹೇಳುವೆನು. (ಪ್ರಕಾಶಂ) ಸಖಿ! ಈಗಲೂ ರಾಜನು ಆ ಪ್ರಥಮಭಾರ್ಯೆಯನ್ನು ಕುರಿತು ದುಃಖಿಸುವುದರಿಂದಲೇ ಊಹಿಸಬಹುದಲ್ಲವೆ? ಪ್ರೇಮವು ಅಲ್ಪವಾಗಿದ್ದರೆ ಅವಳಿಗಾಗಿ ಇಷ್ಟೊಂದು ದುಃಖಿಸುತಿದ್ದನೇನು?

ಪದ್ಮಾ—ಸರಿಯೆ! ಇರಬಹುದು!

ಚೇಟಿ—ರಾಜಪುತ್ರೀ! ಈಗ ನೀನೂ ನಿನ್ನ ಕಾಂತನನ್ನು "ನನಗೂ ವೀಣೆಯನ್ನು ಕಲಿಸಿಕೊಡು" ಎಂದು ಮೆಲ್ಲಗೆ ಕೇಳಬಾರದೇಕೆ?

ಪದ್ಮಾ—ಸಖಿ ! ನಾನು ಆಗಲೇ ಕೇಳಿದೆನು.

ವಾಸವದತ್ತೆ—ಅದಕ್ಕವನೇನು ಹೇಳಿದನು ?

ಪದ್ಮಾ—ಮಾತಾಡದೆ, ಸ್ವಲ್ಪ ದೊಡ್ಡದಾಗಿ ನಿಟ್ಟುಸಿರನ್ನು ಮಾತ್ರ ಬಿಟ್ಟು, ಸುಮ್ಮನಿದ್ದನು.

ವಾಸವದತ್ತೆ—ಅದಕ್ಕೇನು ಕಾರಣವಿರಬಹುದೆಂದು ನೀನು ಊಹಿಸುವೆ ?

ಪದ್ಮಾ—ಆಗ ಅವನಿಗೆ ಪೂಜ್ಯಳಾದ ವಾಸವದತ್ತಾದೇವಿಯ ಗುಣಗಳು ನೆನಪಿಗೆ ಬರಲು, ಅದರಿಂದ ದುಃಖಾವಿಷ್ಟನಾಗಿರಬಹುದು. ಆ ವಿಚಾರವನ್ನು ಕುರಿತು ನನ್ನ ಮುಂದೆ ಪ್ರಸ್ತಾವಿಸುವುದು ಸರಿಯಲ್ಲವೆಂದು ತಿಳಿದು, ಹೇಗೋ ಆ ದುಃಖವನ್ನು ತನ್ನಲ್ಲಿಯೇ ಅಡಗಿಸಿಕೊಂಡು ಮಾತಾಡದೆ ಸುಮ್ಮನಿದ್ದನೆಂದು ನಾನು ಊಹಿಸುವೆನು.

ವಾಸವದತ್ತೆ—(ಸ್ವಗತಂ) ಇದು ನಿಜವಾಗಿದ್ದರೆ ನಾನಲ್ಲವೇ ಧನ್ಯಳು ?

(ಇಷ್ಟರಲ್ಲಿ ವತ್ಸರಾಜನು ವಿದೂಷಕನೊಡನೆ ಪ್ರವೇಶಿಸುವನು.)

ವಿದೂ—ಹಿ ! ಹಿ ! ಹಿ ! ಹಿ ! ಸಮೃದ್ಧವಾಗಿ ಉದಿರಿ ಬಿದ್ದಿರುವ ಬಂದುಗೆಯ ಪುಷ್ಪಗಳಿಂದ ಈ ವನಭೂಮಿಯು ಎಷ್ಟು ವಿಚಿತ್ರವಾಗಿ ಕಾಣುತ್ತಿರುವುದು ! ಮಹಾರಾಜನೆ ! ಇತ್ತ ದಯೆಮಾಡಿಸಬೇಕು!

ರಾಜಂ – ಮಿತ್ರವಸಂತಕಾ ! ಇದೋ ! ಬರುತ್ತಲೇ ಇರುವೆನಷ್ಟೆ ? ಅದಿರಲಿ ! ಮಿತ್ರನೆ !

ಅಂದಾನುಜ್ಜಯಿನೀಪುರಕ್ಕೆ ಪಯಣಂಗೆಯ್ವಲ್ಲಿ ಭೂಭೃತ್ಸುತಾ |
ಸೌಂದರ್ಯಾಹೃತಚಿತ್ತನಾದ ಪದದೊಳ್ ತನ್ನೈದುಬಾಣಂಗಳಿಂ ||
ಕಂದರ್ಪಂ ಬಿಡದೆಚ್ಚುದೆನ್ನೆರ್ದೆಯೊಳಿನ್ನುಂ ನಾಂಟಿರಲ್ಕೀಗಳಿ |
ನ್ನೊಂದಂಬಂ ಮಗುಳ್ದೆಚ್ಚನೆಂತೊದವಿತೋ ಪಂಚೇಷುಗಾರಂಬುಗಳ್!

ವಿದೂ—ಪೂಜ್ಯಳಾದ ಪದ್ಮಾವತಿಯು ಈಗ ಎಲ್ಲಿರಬಹುದು ? ಒಂದುವೇಳೆ ಲತಾಮಂಟಪಕ್ಕೆ ಹೋಗಿರಬಹುದು. ಅಲ್ಲದಿದ್ದರೆ, ಅಲ್ಲಲ್ಲಿ

ವಿಶೇಷವಾಗಿ ಉದಿರಿ ಬಿದ್ದ ಬಂದುಗೆ ಹೂಗಳಿಂದ ಹುಲಿಯ ಚರ್ಮವನ್ನು ಹಾಸಿದಂತೆ ಕಾಣಿಸುವ "ಪರ್ವತತಿಲಕ" ವೆಂಬ ಕಲ್ಲುಬಂಡೆಯ ಬಳಿಗೆ ಹೋಗಿರಬಹುದು! ಅಥವಾ ಬಹಳ ಒಗರು ವಾಸನೆಯುಳ್ಳ ಏಳೆಲೆ ಬಾಳೆಯ ತೋಟಕ್ಕೆ ಹೋಗಿದ್ದರೂ ಇರಬಹುದು. ಅದೂ ಇಲ್ಲದಿದ್ದರೆ, ನಾನಾಜಾತಿಯ ಮೃಗಪಕ್ಷಿಗಳ ಆಕೃತಿಗಳಿಂದ ಚಿತ್ರಿಸಲ್ಪಟ್ಟಿರುವ "ದಾರುಪರ್ವತ" ವೆಂಬ ಕೃತ್ರಿಮವಾದ ಮರದ ಗುಡ್ಡದಮೇಲೆ ಏರಿ ಕುಳಿತಿರಬಹುದು. (ಮೇಲೆ ನೋಡಿ ಸಂತೋಷದಿಂದ) ಹಿ! ಹಿ! ಹಿ! ಹಿ! ಮಿತ್ರನೆ! ನೋಡು! ನೋಡು! ಅದೋ ಮೇಲೆ ನೋಡಿದೆಯಾ! ಶರತ್ಕಾಲ ನಿರ್ಮಲವಾದ ಆಕಾಶದಲ್ಲಿ ಉದ್ದಕ್ಕೆ ನೀಡಿದ ಬಲದೇವನ ಬಾಹುದಂಡದಂತೆ ದರ್ಶನೀಯವಾಗಿ ಈ ಸಾರಸಪಕ್ಷಿಗಳು ಸಾಲಾಗಿ ಹಾರುತ್ತಿರುವುವು ನೋಡು!

ರಾಜಂ — ಮಿತ್ರನೆ! ನಾನೂ ಅದನ್ನೇ ನೋಡುತ್ತಿರುವೆನು. ಕೇಳು:—

ಸರಳಂ ದೀರ್ಘಮುಮುನ್ನತಾವನತಮುಂ ಸಪ್ತರ್ಷಿತಾರಾಳಿಯಂ |
ತಿರೆ ವಕ್ರಾಕೃತಿ ದಾರಿಯಂ ತಿರುಗುವಂದೀಸಾರಸಶ್ರೇಣಿ ಮೈ ||
ಪರೆಯುಚ್ಚೈರ್ದ್ಧ ಫಣೀಂದ್ರಭೋಗಕೆಣೆವಪ್ಪೀ ನಿರ್ಮಲಾಕಾಶದೊಳ್ |
ಕುರುಪಿಟ್ಟೆರ್ದ್ಧ ವಿಭಾಗರೇಖೆಯಿದೆ ತಾನೆಂಬಂದದಿಂದೊಪ್ಪುಗುಂ ||೧೮||

ಚೇಟಿ—ರಾಜಕುಮಾರೀ! ನೋಡು! ನೋಡು! ನೈದಿಲೆಹೂವಿನ ಮಾಲೆಯಂತೆ ಮನೋಹರವಾದ ಈ ಸಾರಸಪಕ್ಷಿಗಳ ಸಾಲು ಯಥೇಚ್ಛವಾಗಿ ಹಾರಿಹೋಗುತ್ತಿರುವುದು! (ಮುಂದೆ ಹೋಗುತ್ತ) ಓಹೋ! ಮಹಾರಾಜನು!

ಪದ್ಮಾ—ಏನು? ಆರ್ಯಪುತ್ರನೆ! ಹೌದು! ಇಲ್ಲಿಯೇ ಬರುತ್ತಿರುವನು. ಆರ್ಯೆ! ನೀನಿರುವಾಗ, ನಾನು ಇಲ್ಲಿ ಆರ್ಯಪುತ್ರನನ್ನು ಕಾಣಿಸಿಕೊಳ್ಳುವುದು ಸರಿಯಲ್ಲ! ಆದುದರಿಂದ ನಿನಗಾಗಿ ನಾನೂ ಮರೆಸಿಕೊ

ಳ್ಳುವೆನು. ಇದೋ! ಈ ಮಾಧವೀ ಮಂಟಪದೊಳಕ್ಕೆ ಹೋಗು ವೆವೇ ?

ವಾಸವದತ್ತೆ—ಸರಿ. ಹಾಗೆಯೇ ಆಗಲಿ. **(ಇಬ್ಬರೂ ಹೋಗುವರು.)**

ವಿದೂ—ಪೂಜ್ಯಳಾದ ಪದ್ಮಾವತಿಯು ಇಲ್ಲಿಗೆ ಬಂದು ಹೋಗಿರಬಹುದು.

ರಾಜ—ನೀನು ಹೇಗೆ ಬಲ್ಲೆ ?

ವಿದೂ—ಇದೋ ಈ ಶೇಫಾಲಿಕಾ ಲತೆಯ ಕುಡಿಗಳನ್ನು ನೋಡು. ಇದ ರಲ್ಲಿ ಹೂಗಳನ್ನು ಕುಯ್ದಿದ್ದಂತಿದೆ.

ರಾಜ—ಆಹಾ! ಏನೀಪುಷ್ಪಗಳ ವೈಚಿತ್ರ್ಯವು! ವಸಂತಕ!

ವಾಸವದತ್ತೆ—**(ಸ್ವಗತಂ)** ಈ ವಸಂತಕಶಬ್ದೋಚ್ಚಾರಣದಿಂದ ಈಗ ನಾನು ತಿರುಗಿ ಉಜ್ಜಯಿನಿಯಲ್ಲಿಯೆ ಇರುವ ಹಾಗೆ ಭಾವಿಸುವೆನು.

ರಾಜ—ವಸಂತಕ! ಈ ಶಿಲಾತಲದಲ್ಲಿಯೇ ಕುಳಿತು ಪದ್ಮಾವತೀದೇವಿ ಯನ್ನು ನಿರೀಕ್ಷಿಸುವೆವು.

ವಿದೂ—ಹಾಗೆಯೇ ಆಗಲಿ. **(ಕುಳಿತು, ಒಡನೆಯೇ ಮೇಲೆದ್ದು)** ಅಬ್ಬಬ್ಬ! ಈ ಶರತ್ಕಾಲದ ಬಿಸಲಿನ ತಾಪದಿಂದ ಕಲ್ಲು ಬಹಳವಾಗಿ ಕಾದಿರು ವುದು. ಆದುದರಿಂದ ಇದೋ ಇಲ್ಲಿ ಕಾಣುವ ಮಾಧವೀಮಂಟಪ ವನ್ನು ಪ್ರವೇಶಿಸುವೆವು.

ರಾಜ—ಒಳ್ಳೆಯದು. ಮುಂದೆ ನಡೆ!

ವಿದೂ—ಸರಿ. ಹಾಗೆಯೇ ಆಗಲಿ. **(ಇಬ್ಬರೂ ಮುಂದೆ ಬರುವರು.)**

ಪದ್ಮಾ—ಅಯ್ಯೋ! ಇನ್ನೇನು ಗತಿ! ಈ ಆರ್ಯವಸಂತಕನು ಯಾವ ಭಾಗದಲ್ಲಿಯೂ ಸಿಕ್ಕನ್ನೇ ತಂದಿಡುವನಲ್ಲ! ಈಗೇನು ಮಾಡು ವುದು ?

ಚೇಟಿ—ರಾಜಕುಮಾರಿ! ದುಂಬಿಗಳಿಂದ ತುಂಬಿ ತೂಗಾಡುತ್ತಿರುವ ಈ ಬಳ್ಳಿಯನ್ನು ಆಡಿಸಿ, ಭ್ರಮರಗಳನ್ನೆಬ್ಬಿಸುವುದರಿಂದ ಈಗ ರಾಜನು ಒಳಕ್ಕೆ ಬಾರದಂತೆ ಮಾಡಿಬಿಡಲೇನು ?

ಪದ್ಮಾ—ಸರಿ! ಹಾಗೆಯೇ ಮಾಡು. ಒಳ್ಳೆಯ ಉಪಾಯವೇ.

(ಚೇಟಿಯು ಹಾಗೆ ಮಾಡುವಳು.)

ವಿದೂ—ಅಯ್ಯೋ! ಕೆಟ್ಟೆನು! ಮಿತ್ರನೇ, ನಿಲ್ಲು! ನಿಲ್ಲು!

ರಾಜಂ—ಏಕೆ?

ವಿದೂ—ಈ ಹಾಳುದುಂಬಿಗಳು—ತೊತ್ತಿನಮಕ್ಕಳು—ಮೇಲೆಬಿದ್ದು ಪೀಡಿಸುವುವು!

ರಾಜಂ—ಮಿತ್ರನೆ! ಇರಲಿ! ಹೆದರಬೇಡ! ಹೆದರಬೇಡ! ಈಗ ನಾವು ಈ ದುಂಬಿಗಳನ್ನು ಹೆದರಿಸಿ ಓಡಿಸುವುದು ಸರಿಯಲ್ಲ! ನೋಡು.

ಮದಿಸಿ ಮಧುಪಾನದಿಂ ಮೋ |
ಹದಿನಪ್ಪಿದಸತಿಯರೊಡನೆ ನಲಿವಳಿಗಳ್ನಾಂ ||
ಪದಮಿಡಲಂಜುತುಮೆಮ್ಮಂ |
ದದೆ ಸಿಜದಯಿತಾವಿಯೋಗವೊಂದುಗುಮಲ್ತೇ ||೧೯||

ಆದುದರಿಂದ ನಾವು ಇಲ್ಲಿಯೇ ಹೊರಗೆ ನಿಲ್ಲುವೆವು.

ವಿದೂ—ಆಗಲಿ. (ಇಬ್ಬರೂ ಕುಳ್ಳಿರುವರು.)

ಚೇಟಿ—ರಾಜಪುತ್ರಿ! ಈಗ ನಾವು ಒಳಗೆ ಸಿಕ್ಕಿಬಿದ್ದೆವಲ್ಲಾ! ಏನು ಮಾಡುವುದು?

ಪದ್ಮಾ—ಅದೃಷ್ಟವಶದಿಂದ ಆರ್ಯಪುತ್ರನು (ಒಳಕ್ಕೆ ಬಾರದೆ) ಅಲ್ಲಿಯೇ ಕುಳಿತನು.

ವಾಸವದತ್ತೆ—(ರಾಜನನ್ನು ಚೆನ್ನಾಗಿ ದೃಷ್ಟಿಸಿ ನೋಡಿ ಸ್ವಗತಂ) ದೈವಯೋಗದಿಂದ ಆರ್ಯಪುತ್ರನ ದೇಹವು ಸ್ವಲ್ಪವಾದರೂ ಕಂದಿಲ್ಲದೆ ಸಹಜಸ್ಥಿತಿಯಲ್ಲಿರುವುದು.

ಚೇಟಿ—ರಾಜಪುತ್ರಿ! ನೋಡು! ನೋಡು! ಇದೇನು! ಈ ಪೂಜ್ಯಳು ಕಣ್ಣೀರು ಬಿಡುತ್ತಿರುವಳು. ಕಾರಣವೇನಿರಬಹುದು!

ವಾಸ—ಸಖಿ! ಮತ್ತೇನೂ ಇಲ್ಲ. ಈ ಹಾಳುದುಂಬಿಗಳ ಹಾರಾಟದ ಸಂಭ್ರಮದಿಂದ ಕಾಶಪುಷ್ಪಗಳು ಕದಲಿ, ಅದರ ಪರಾಗಗಳು ನನ್ನ ಕಣ್ಣಿಗೆ ಬಿದ್ದುದರಿಂದ ಕಣ್ಣೀರು ಬಂದಿತು.



ಕಿಕ್ಕೇರಿಯಲ್ಲಿರುವ ಬ್ರಹ್ಮೇಶ್ವರದೇವಾಲಯದ ಉತ್ತರಮುಖ. [ವಾಸ್ತುಶಿಲ್ಪ, ಪುಟ ೫೮.

# ಆರನೆಯ ಅಧ್ಯಾಯ.

ಎರಡನೆಯ ಅಧ್ಯಾಯದಲ್ಲಿ, ಬೇಲೂರಿನ ಚೆನ್ನಕೇಶವ ದೇವಾಲಯವು ಒಂದು ಗರ್ಭಗೃಹವುಳ್ಳ ಹೊಯಿಸಳ ದೇವಾಲಯಗಳಲ್ಲೆಲ್ಲಾ ಅತ್ಯುತ್ತಮವಾದ ಮಾದರಿಯಾಗಿದೆ ಎಂದು ವಿವರಿಸಿದ್ದೇವೆಯಷ್ಟೆ. ಇದರಂತೆ ಒಂದೇ ಗರ್ಭಗೃಹವುಳ್ಳ ದೇವಾಲಯಗಳಲ್ಲಿ ಮುಂದೆ ಹೇಳುವವೂ ಮುಖ್ಯವಾದವುಗಳು.

(೧) ಸೊರಬದ ತಾಲ್ಲೂಕು ಕುಪ್ಪತ್ತೂರಿನಲ್ಲಿರುವ ಕೈಟಭೇಶ್ವರದೇವಾಲಯ.

(೨) ಕೃಷ್ಣರಾಜಪೇಟೆ ತಾಲ್ಲೂಕು ಕಿಕ್ಕೇರಿಯಲ್ಲಿರುವ ಬ್ರಹ್ಮೇಶ್ವರದೇವಾಲಯ.

(೩) ಹಾಸನದ ತಾಲ್ಲೂಕು ಕೋರವಂಗಲದಲ್ಲಿರುವ ಬೂಚೇಶ್ವರದೇವಾಲಯ.

(೪) ತರೀಕೆರೆ ತಾಲ್ಲೂಕು ಅಮೃತಾಪುರದಲ್ಲಿರುವ ಅಮೃತೇಶ್ವರದೇವಾಲಯ.

(೫) ಹರಿಹರದಲ್ಲಿರುವ ಹರಿಹರೇಶ್ವರ ದೇವಾಲಯ.

(೬) ಅರಸೀಕೆರೆಯಲ್ಲಿರುವ ಕತ್ತಮೇಶ್ವರ ದೇವಾಲಯ.

ಇವುಗಳಲ್ಲೆಲ್ಲಾ ಕುಪ್ಪತ್ತೂರಿನ ದೇವಾಲಯವು ಬಹಳ ಹಳೆಯದು ಮತ್ತು ದೊಡ್ಡದು; ಅರಸೀಕೆರೆಯದು ಈಚಿನದು ಮತ್ತು ಸೊಗಸಾದದ್ದು. ಇವೊಂದೊಂದಕ್ಕೂ ಹಿಂದೂ ದೇವಸ್ಥಾನಗಳಲ್ಲಿ ಮುಖ್ಯ ಮೂರು ಭಾಗಗಳಾದ ಗರ್ಭಗೃಹ ಸುಕನಾಸಿ ನವರಂಗಗಳು ಒಂದೊಂದು ಇರುತ್ತವೆ, ಕೆಲವು ಕಡೆಗಳಲ್ಲಿ ನವರಂಗಕ್ಕೆ ಸೇರಿದ ಹಾಗೆ ಒಂದು ಅಥವಾ ಹೆಚ್ಚಾಗಿ ದ್ವಾರಮಂಟಪಗಳೂ, ಇನ್ನೂ ಸ್ವಲ್ಪ ವಿತರಣೆಯಿಂದ ಕಟ್ಟಿದ ಕಡೆಗಳಲ್ಲಿ ಒಂದೊಂದು ಮುಖಮಂಟಪವೂ ಇರುವುದುಂಟು. ಹೀಗೆ ಸ್ಥೂಲವಾದ ವಿನ್ಯಾಸಕ್ರಮದಲ್ಲಿ ಇವುಗಳಿಗೆ ಪರಸ್ಪರ ಹೆಚ್ಚು ವ್ಯತ್ಯಾಸವಿಲ್ಲದಿದ್ದರೂ ಮೇಲುಭಾಗದ ಕಟ್ಟಡದಲ್ಲಿಯೂ ಅದರ ಸಣ್ಣಸಣ್ಣ ಅಂಶಗಳಲ್ಲಿಯೂ ಬಹು ವೈವಿಧ್ಯವೂ ವ್ಯತ್ಯಾಸವೂ ಇರುತ್ತವೆ. ಒಂದೊಂದು ಕಟ್ಟಡಕ್ಕೂ ಒಂದೊಂದು ವಿಶೇಷವಿರುತ್ತದೆ.

ಕುಪ್ಪತ್ತೂರು ಚಂದ್ರಹಾಸನ ರಾಜಧಾನಿಯಾಗಿದ್ದ ಕುಂತಲನಗರವೆಂದು ಹೇಳುತ್ತಾರೆ. ಈ ಊರಿನ ಹೊರಗೆ ಇರುವ ಕಾಳೀದೇವಸ್ಥಾನಕ್ಕೆ ಮಂತ್ರಿಯಾದ ದುಷ್ಟಬುದ್ಧಿಯು ಚಂದ್ರಹಾಸನನ್ನು ಕೊಲ್ಲುವುದಕ್ಕೋಸ್ಕರ ಕಳುಹಿಸಿದನೆಂದೂ, ದೇವಸ್ಥಾನದ ಹೊರಗೆ ಬಿದ್ದಿರುವ ಒಂದು ಕಲ್ಲಿನ ತಲೆಯು ದುಷ್ಟಬುದ್ಧಿಯ ತಲೆಯೆಂದೂ ಆ ಸ್ಥಳದಲ್ಲಿರುವವರು ತೋರಿಸುತ್ತಾರೆ. ಈ ಊರಿನಲ್ಲಿರುವ ಕೈಟಭೇ

ಶ್ವರ ವಿಗ್ರಹವು ಕೋಟೇಶ್ವರನೆಂದು ಶಾಸನಗಳಲ್ಲಿ ಪ್ರಸಿದ್ಧವಾಗಿದೆ; ಈ ಹೆಸರು ಕ್ರಿ. ಶ. ೧೧೭೦ ನೆಯ ವರ್ಷದ ಒಂದು ಶಾಸನದಲ್ಲಿ ಉಕ್ತವಾಗಿರುವುದರಿಂದ ಕೈಟಭೇಶ್ವರ ದೇವಾಲಯವು ಸುಮಾರು ಹತ್ತನೆಯ ಶತಮಾನದಲ್ಲಿ ಕಟ್ಟಿದ್ದಾಗಿರ ಬಹುದೆಂದು ಊಹಿಸಲ್ಪಟ್ಟಿದೆ. ಇದರ ಒಂದೊಂದು ಭಾಗವೂ ವಿಸ್ತಾರವಾಗಿಯೂ ದೊಡ್ಡದಾಗಿಯೂ ಇದೆ. ಅಲ್ಲಿಂದ ಈಚೆಗೆ ಈ ರೀತಿಯಲ್ಲಿ ಕಟ್ಟಿದ ದೇವಸ್ಥಾನ ಗಳು ಇಷ್ಟು ದೊಡ್ಡವಾಗಿಲ್ಲ. ಇದರ ಜಗತಿಯು ಎಂಟುಅಡಿ ಎತ್ತರವಾಗಿಯೂ ವಿಮಾನವು ಒಂಬತ್ತು ಅಂತಸ್ತು ಉಳ್ಳದ್ದಾಗಿ ಬಹು ಭವ್ಯವಾಗಿಯೂ ಇವೆ. ಮಿಕ್ಕಭಾಗಗಳೂ ಇದಕ್ಕೆ ತಕ್ಕಂತೆಯೇ ಇವೆ.

ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯವು ಒಂದನೆಯ ನರಸಿಂಹನ ಕಾಲ ದಲ್ಲಿ ಬಮ್ಮವ್ವೆನಾಯಕಿತ್ತಿ ಎಂಬವಳಿಂದ ಕಟ್ಟಿಸಲ್ಪಟ್ಟಿತು (ಕ್ರಿ. ಶ. ೧೧೭೧). ಈ ಕಟ್ಟಡವು ಊರಿನ ಪೂರ್ವಭಾಗದ ಕೊನೆಯಲ್ಲಿದೆ. ಸುತ್ತಲೂ ಕಲ್ಲಿನ ಪೌಳಿ ಗೋಡೆ, ಮಧ್ಯೆ ಅಂಗಳ, ಅಂಗಳದ ಮಧ್ಯೆ ಕಟ್ಟಡ. ಮೊದಲು ಈ ಅಂಗಳಕ್ಕೆ ಎರಡು ದ್ವಾರಗಳಿದ್ದುವೆಂದು ತೋರುತ್ತದೆ. ಆದರೆ ಪೂರ್ವದಿಕ್ಕಿನ ಗೋಡೆಯು ಪೂರ್ತಿಯಾಗಿ ಬಿದ್ದುಹೋಗಿರುವುದರಿಂದ ಆ ಭಾಗದ ಬಾಗಿಲೂ ಹೋಗಿ ದಕ್ಷಿಣ ದಿಕ್ಕಿನ ದ್ವಾರಮಾತ್ರ ಈಗ ಉಪಯೋಗದಲ್ಲಿದೆ. ಈ ದೇವಸ್ಥಾನದ ನಂದಿ ಮಂಟ ಪವು ಮೊದಲು ಸುತ್ತಲೂ ಬಯಲಾಗಿತ್ತೆಂದು ತೋರುತ್ತದೆ; ಆದರೆ ಈಗ ಸುತ್ತಲೂ ವಿಕಾರವಾದ ಗೋಡೆಗಳನ್ನು ಎಬ್ಬಿಸಿ ಅದನ್ನು ಮುಚ್ಚಿಬಿಟ್ಟಿದ್ದಾರೆ. ಬೇಲೂರಿನಲ್ಲಿರುವಂತೆ ನವರಂಗದ ಮುಂಭಾಗದಲ್ಲಿ, ಒಳಕ್ಕೆ ಬೆಳಕು ಹೋಗುವಂತೆ, ಜಾಲಂದ್ರಗಳಿವೆ. ಇಲ್ಲಿಯೂ ನವರಂಗದಲ್ಲಿ ಕಂಬಗಳ ಮೇಲೆ ಮದನಕೈ ಬೊಂಬೆ ಗಳಿವೆ ಒಂದೊಂದು ಕಂಬಕ್ಕೆ ನಾಲ್ಕರಂತೆ ಇವು ಒಟ್ಟು ಹದಿನಾರು ಇದ್ದಿರ ಬೇಕು. ಆದರೆ ಈಗ ಉಳಿದಿರುವವು ಹನ್ನೊಂದು ಮಾತ್ರ.

ಹೊರಭಾಗದ ಕೆತ್ತನೆಯ ಮತ್ತು ಚಿತ್ರದ ಕೆಲಸವು ಗೋವಿಂದನಹಳ್ಳಿಯ ದೇವಸ್ಥಾನದಲ್ಲಿರುವಂತೆಯೇ ಇದೆ—ಅದೇ ವಿಧವಾದ ಸಣ್ಣ ಗೋಪುರಗಳು, ಮಧ್ಯಸ್ಥಾನದಲ್ಲಿ ವಿಗ್ರಹಗಳು. ಇವುಗಳಲ್ಲಿ ಮೂರುತಲೆಯ ಮೂರ್ತಿಯೊಂದು ಇದೆ; ಇದಕ್ಕೆ ಆರು ಕೈಗಳೂ ಅವುಗಳಲ್ಲಿ ವಿಷ್ಣು ಶಿವ ಸೂರ್ಯ ಇವರ ಆಯುಧ ಗಳೂ ಇವೆ; ಪೀಠದಲ್ಲಿ ಅವರ ವಾಹನಗಳು ಕೆತ್ತಲ್ಪಟ್ಟಿವೆ ಹೀಗೆ ಇದರಲ್ಲಿರುವ ಲಕ್ಷಣಗಳು ಬೇಲೂರು ಮತ್ತು ಗೋವಿಂದನಹಳ್ಳಿಯ ದೇವಾಲಯಗಳ ಲಕ್ಷಣ ಗಳನ್ನು ಹೋಲುತ್ತವೆ; ಇವುಗಳೆಲ್ಲಾ ಶಿಲ್ಪಿಸೂತ್ರಗಳಲ್ಲಿ ಒಂದಾದ "ಮಿತಿ"

(Restraint) ಯನ್ನು ಅನುಸರಿಸಿ ಎಷ್ಟು ಬೇಕೋ ಅಷ್ಟು ಮಾತ್ರ ಇವೆ. ಇದು ಇತರ ಹಿಂದೂ ಕಟ್ಟಡಗಳಲ್ಲಿ ಅಪರೂಪ.

ಕೋರವಂಗಲದ ಬೂಚೇಶ್ವರದೇವಾಲಯವು ಈ ಕಟ್ಟಡಕ್ಕಿಂತಲೂ ಎರಡು ವರ್ಷ ಕಿರಿಯದು ಆದರೆ ಹೆಚ್ಚು ಸುಂದರವಾದದ್ದು. ಇದರ ಪಕ್ಕದಲ್ಲಿ ನೆಟ್ಟಿರುವ ಒಂದು ಶಾಸನವನ್ನು ನೋಡಿದರೆ ಎರಡನೇ ಬಲ್ಲಾಳರಾಜನ ಪಟ್ಟಾಭಿಷೇಕದ ದಿವಸ (ಕ್ರಿ.ಶ. ೧೧೭೩) ಅವನ ಮಂತ್ರಿಯಾದ ಬೂಚಿರಾಜನು ಈ ದೇವಸ್ಥಾನವನ್ನು ಸ್ಥಾಪಿಸಿದನೆಂದು ಗೊತ್ತಾಗುತ್ತದೆ. ಹೊಯಿಸಳ ರೀತಿಯಲ್ಲಿ ಕಟ್ಟಿದ ಒಂದು ಗರ್ಭಗೃಹದ ದೇವಸ್ಥಾನಕ್ಕೆ ಇದು ಒಳ್ಳೆಯ ಉದಾಹರಣೆಯಾಗಿದೆ ಹಳೇಬೀಡು ಬೇಲೂರು ದೇವಸ್ಥಾನಗಳಿಗಿಂತ ಎಷ್ಟೋ ಚಿಕ್ಕದಾಗಿದ್ದರೂ, ಅವುಗಳಲ್ಲಿರುವ ಉತ್ತಮವಾದ ಲಕ್ಷಣಗಳೆಲ್ಲವೂ ಇರುವುದರಿಂದ, ಒಂದು ವಿಧದಲ್ಲಿ ಇದರಂತಹ ಮತ್ತೊಂದು ಕಟ್ಟಡವು ಸಂಸ್ಥಾನದಲ್ಲಿಯೇ ಇಲ್ಲವೆಂದು ಹೇಳಬಹುದು. ಈ ದೇವಾಲಯದಲ್ಲಿ ಒಂದು ಗರ್ಭಗುಡಿ, ಸುಕನಾಸಿ, ನವರಂಗ, ಮುಖಮಂಟಪ ಇವು ಇವೆ. ಮುಖಮಂಟಪದ ಮುಂದೆ ಸೂರ್ಯ ವಿಗ್ರಹವಿರುವ ಒಂದು ಚೌಕವಾದ ಗೃಹವಿದೆ. ನವರಂಗದಲ್ಲಿ ಆರುಗೂಡುಗಳಿವೆ; ಇವುಗಳ ಮೂರರಲ್ಲಿ ಗಣಪತಿ ಸರಸ್ವತಿ ಮತ್ತು ಸಪ್ತಮಾತೃಕೆಗಳ ವಿಗ್ರಹಗಳಿವೆ. ಇವೆಲ್ಲವೂ ಬಹು ಸೊಗಸಾಗಿ ಕೆತ್ತಲ್ಪಟ್ಟಿವೆ; ಅವುಗಳಲ್ಲಿ ಮೊದಲೆರಡಂತೂ ಬಹು ಸುಂದರವಾಗಿವೆ. ಇಂಡಿಯಾ ದೇಶದ ಉತ್ತಮೋತ್ತಮ ವಿಗ್ರಹಗಳಲ್ಲಿ ಇವುಗಳನ್ನು ಸೇರಿಸಬಹುದು. ದೇವಸ್ಥಾನದ ಹೊರಮುಖದಲ್ಲೆಲ್ಲಾ ಒಟ್ಟು ನೂರರ ಮೇಲೆ ಮೂರ್ತಿಗಳು ಕೆತ್ತಲ್ಪಟ್ಟಿವೆ. ಇವುಗಳಲ್ಲಿ ಒಂದು ಫಲಕದೊಳಗೆ ಗಜೇಂದ್ರಮೋಕ್ಷವೂ, ಮತ್ತೊಂದರಲ್ಲಿ ಒಂದನ್ನೊಂದು ನುಂಗುತ್ತಿರುವ ಪ್ರಾಣಿಪಂಕ್ತಿಯೂ ಕೆತ್ತಲ್ಪಟ್ಟಿವೆ. ಈ ಪ್ರಾಣಿಪಂಕ್ತಿಯಲ್ಲಿ ಎಲ್ಲಕ್ಕೂ ಮೊದಲು ಒಂದು ಜಿಂಕೆಯನ್ನು ಒಂದು ಹಾವುನುಂಗುತ್ತಿದೆ. ಆ ಹಾವನ್ನು ಒಂದು ಆನೆಯು ಹಿಡಿದುಕೊಂಡಿದೆ; ಆ ಆನೆಯಮೇಲೆ ಒಂದು ಸಿಂಹವು ಹಾರಿದೆ; ಈ ಸಿಂಹವನ್ನು ಒಂದು ಶರಭವೂ ಆ ಶರಭವನ್ನು ಗಂಡಭೇರುಂಡವೂ ಹಿಡಿದುಕೊಂಡಿವೆ. ಒಬ್ಬ ಗುರುವೂ ಆತನ ಶಿಷ್ಯನೂ ಕತ್ತೆತ್ತಿಕೊಂಡು ಇದನ್ನು ಬೆರಗಾಗಿ ನೋಡುತ್ತ ನಿಂತಿದ್ದಾರೆ. (ಚಿತ್ರವನ್ನು ನೋಡಿ). ಒಟ್ಟಿನ ಮೇಲೆ ಈ ಕಟ್ಟಡದಲ್ಲಿ ಒಂದು ಅಪೂರ್ವ ರಮಣೀಯತೆ ಇದೆ. ಅದರ ಆಯಾ ಭಾಗಗಳನ್ನು ಜೋಡಿಸುವುದರಲ್ಲಿ ಶಿಲ್ಪಿಯು ಮಯಸಾಮ್ಯಾನುಸರಣೆಯನ್ನು ವಿಶೇಷವಾಗಿ ದೃಷ್ಟಿ

ಯಲ್ಲಿಟ್ಟುಕೊಂಡು ಕೆಲಸಮಾಡಿರುವುದೂ, ಅಲಂಕಾರಗಳನ್ನು ಬಹು ಸೂಕ್ಷ್ಮವಾಗಿ ಕೆತ್ತಿರುವುದೂ ಇದಕ್ಕೆ ಕಾರಣವೆಂದು ತೋರುತ್ತದೆ.

ಅಮೃತಾಪುರದ ದೇವಾಲಯವು ಇದಾದ ಮೇಲೆ ಕಟ್ಟಿದ್ದು. (ಕ್ರಿ.ಶ.೧೧೯೬) ಇದನ್ನು ಕಟ್ಟಿಸಿದವನು ಎರಡನೆಯ ಬಲ್ಲಾಳರಾಜನಲ್ಲಿ "ಮಂತ್ರಿಮುಖ್ಯ" ನೂ "ದಂಡನಾಯಕ ಶಿಖಾಮಣಿಯೂ" ಆಗಿದ್ದ ಅಮಿತನೆಂಬವನು. ಈ ದೇವಾಲಯಕ್ಕೂ ಒಂದು ದೊಡ್ಡ ಅಂಗಳವಿದೆ. ಅದರ ಮಧ್ಯದಲ್ಲಿ ಭೈರವ ಮತ್ತು ಸರಸ್ವತಿ ದೇವಾಲಯಗಳೆಂಬ ಎರಡು ಗುಡಿಗಳೂ "ಸೂಳೆಯ ಮಂಟಪ" ವೆಂಬ ಒಂದು ಮಂಟಪವೂ ಇವೆ. ಪ್ರಾಕಾರದ ಗೋಡೆಯು ಸುಮಾರು ಏಳು ಅಡಿ ಎತ್ತರವಾಗಿದೆ. ಹಿಂದೆ ಇದರ ಮೇಲೆ ಉದ್ದಕ್ಕೂ ಕೋಟೆ ತೆನೆಯಂಥ (ಈಗಲೂ ಅಲ್ಲಲ್ಲೇ ಈ ದೇವಸ್ಥಾನದಲ್ಲಿ ಕಂಡುಬರುವಂತೆ) ದುಂಡಾದ ವಿಭಾಗಗಳಿದ್ದುವೆಂದೂ ಇವುಗಳ ಹೊರಭಾಗದಲ್ಲಿ ಚಿತ್ರಕೆಲಸ ಮಾಡಿತ್ತೆಂದೂ ತೋರುತ್ತದೆ.

ಮಿಕ್ಕ ದೇವಾಲಯಗಳಲ್ಲಿರುವಂತೆ ಇದಕ್ಕೂ ಗರ್ಭಗುಡಿ, ಸುಕನಾಸಿ, ನವರಂಗ, ಮುಖಮಂಟಪ ಇವುಗಳಿವೆ. ಮುಖಮಂಟಪದ ಮೇಲೆ ಇರುವ ಲೋವೆ ಕಲ್ಲು ದ್ರಾವಿಡರೀತಿಯಲ್ಲಿರುವಂತೆ ಬಹಳ ದೊಡ್ಡದಾಗಿ ದ್ವಿಭಂಗಿಯುಳ್ಳದ್ದಾಗಿದೆ. ಚಿತ್ರಕೆಲಸದ ಸೂಕ್ಷ್ಮತೆಯೇ ಈ ದೇವಸ್ಥಾನದಲ್ಲಿರುವ ವಿಶೇಷ ಸಂಗತಿ. ಕಟ್ಟಡದ ಹೊರಮುಖದಲ್ಲಿ ಎಲ್ಲಿ ನೋಡಿದರೂ ನಯವಾಗಿ ಕೆತ್ತಿದ ಬಳ್ಳಿಗಳೂ ಸಣ್ಣಸಣ್ಣ ಗೋಪುರಗಳೂ ತುಂಬಿಹೋಗಿವೆ. ಇವುಗಳನ್ನು ನೋಡಿದರೆ ಹೊಯಿಸಳ ಶಿಲ್ಪಿಯ ಉಳಿಗೆಲಸವನ್ನೂ ಅವನ ನೈಪುಣ್ಯವನ್ನೂ ನೆನೆಸಿಕೊಂಡು ಎಂಥವರಾದರೂ ಬೆರಗಾಗುವಂತಿದೆ.

ಹರಿಹರದಲ್ಲಿರುವ ಹರಿಹರೇಶ್ವರದೇವಾಲಯವು ಹಿಂದಿನ ದೇವಾಲಯದಷ್ಟೇ ದೊಡ್ಡದಾಗಿದೆ ಆದರೆ ಅದರಲ್ಲಿ ಅರ್ಧವೂ ಮನೋಹರವಾಗಿಲ್ಲ. ಇದು ಕ್ರಿ.ಶ. ೧೨೨೪ರಲ್ಲಿ ಎರಡನೆಯ ನರಸಿಂಹನ ದಂಡನಾಥನಾದ ಪೋಲಾಳ್ವನಿಂದ ಕಟ್ಟಿಸಲ್ಪಟ್ಟಿತು. ಅಲ್ಲಿ ಇರುವ ಕೆಲವು ಶಾಸನಗಳನ್ನು ನೋಡಿದರೆ ದೇವಸ್ಥಾನವು ಆ ಸ್ಥಳದಲ್ಲಿ ಮೊದಲು ಇತ್ತೆಂದೂ ಅದನ್ನು ಪೋಲಾಳ್ವನು ವಿಸ್ತರಿಸಿಯೋ ಬಿಚ್ಚಿಕಟ್ಟಿಸಿಯೋ ಇರಬೇಕೆಂದು ತೋರುತ್ತದೆ.

ಮುಸಲ್ಮಾನರು ಹದಿನೇಳನೆಯ ಶತಮಾನದಲ್ಲಿ ಈ ದೇವಸ್ಥಾನವನ್ನು ಮುತ್ತಿ ಹರಿಹರ ವಿಗ್ರಹವನ್ನು ಕಿತ್ತು ಹೊಳೆಯೊಳಗೆ ಹಾಕಿಬಿಟ್ಟರಂತೆ ; ಆಮೇಲೆ ಪುನಃ ಅದೇ ವಿಗ್ರಹವನ್ನು ತೆಗೆದು ಅಲ್ಲಿ ಪ್ರತಿಷ್ಠೆಮಾಡಿಸಿದರಂತೆ. ದೇವಸ್ಥಾನದ

ಅಲಂಕಾರವೈಚಿತ್ರ್ಯಗಳು ಬಹಳಮಟ್ಟಿಗೆ ಹೋಗಿದ್ದರೂ, ಕಟ್ಟಡವು ಶತ್ರುಗಳ ಏಟಿಗೆ ಸಿಕ್ಕಿ ನಾಶವಾಗದೆ ಉಳಿದುಕೊಂಡಿದೆ. ಇದು ಸುಂದರವಾದ ಕಟ್ಟಡವೆಂದು ಅದಕ್ಕೆ ಗೌರವಕೊಟ್ಟು, ವಿಮಾನಕ್ಕೆ ಯವನ ರೀತಿಯ ಒಂದು ಬಾಗಿಲನ್ನು ಇಟ್ಟು, ಅದನ್ನು ಮಸೀದಿಯಾಗಿ ಉಪಯೋಗಿಸುತ್ತಿದ್ದರಂತೆ. ಆದರೆ ಈಗ ಆ ಗೋಪುರವೂ ಇಲ್ಲ ಆ ವಿಮಾನವೂ ಇಲ್ಲ; ಈಗ ಇರುವ ಗೋಪುರವು ಇಟ್ಟಿಗೆ ಗಾರೆಯಿಂದ ಕಟ್ಟಲ್ಪಟ್ಟು ಶುದ್ಧ ವಿಕಾರವಾಗಿದೆ; ಇದನ್ನು ಕಟ್ಟಿ ಸುಮಾರು ಒಂದುನೂರು ವರ್ಷವಾಗಿರಬಹುದು.

ಈ ದೇವಾಲಯದಲ್ಲಿಯೂ ಗರ್ಭಗುಡಿ, ಸುಕನಾಸಿ, ನವರಂಗ, ಮುಖಮಂಟಪ, ಇವುಗಳ ಮುಂದೆ ದ್ವಾರಮಂಟಪಗಳೂ ಇವೆ.

ಹರಿಹರವಿಗ್ರಹವು ಸುಮಾರು ಆರು ಅಡಿ ಎತ್ತರವಾಗಿದೆ. ಇದಕ್ಕೆ ಹಿಂದೆ ಪ್ರಭಾವಳಿಯಿಲ್ಲ. ವಿಗ್ರಹದ ಎಡಭಾಗವು ವಿಷ್ಣುವಿನ ಲಕ್ಷಣಗಳುಳ್ಳದ್ದಾಗಿ ಕೈಗಳಲ್ಲಿ ಶಂಖ ಚಕ್ರಗಳನ್ನು ಧರಿಸಿಕೊಂಡಿದೆ; ಬಲಭಾಗವು ಶಿವನ ಲಕ್ಷಣಗಳುಳ್ಳದ್ದಾಗಿ ಕೈಗಳಲ್ಲಿ ತ್ರಿಶೂಲ ಮತ್ತು ಅಕ್ಷಮಾಲೆಗಳನ್ನು ಧರಿಸಿಕೊಂಡಿದೆ. ವಿಷ್ಣುಭಾಗದ ತಲೆಯಮೇಲೆ ಕಿರೀಟವೂ ಶಿವನಭಾಗದ ತಲೆಯಮೇಲೆ ಜಟೆ ಚಂದ್ರಗಳೂ ಇವೆ.

ನವರಂಗದ ಮಧ್ಯೆ ಇರುವ ಭುವನೇಶ್ವರಿಯು ಈಗ ಬರಿದಾಗಿದೆ. ಇದರಲ್ಲಿ ಒಂದು ಹರಿಹರೇಶ್ವರ ವಿಗ್ರಹವಿತ್ತೆಂದೂ ಮುಸಲ್ಮಾನರು ಮೂಲಮೂರ್ತಿಯನ್ನು ಕಿತ್ತುಹಾಕಿದ ಮೇಲೆ, ಭುವನೇಶ್ವರಿಯಲ್ಲಿದ್ದ ಮೂರ್ತಿಯನ್ನು ಗರ್ಭಗುಡಿಯಲ್ಲಿ ಇಟ್ಟರೆಂದೂ, ಹೊಳೆಗೆ ಬೀಸಾಡಿದ್ದ ವಿಗ್ರಹವನ್ನು ತೆಗೆದು ಯಥಾಸ್ಥಾನದಲ್ಲಿ ಪುನಃ ಪ್ರತಿಷ್ಠೆಮಾಡಿದಮೇಲೆ ಈ ಸಣ್ಣ ವಿಗ್ರಹವನ್ನು ತೆಗೆದು ಈ ದೇವಸ್ಥಾನದ ವಾಯುವ್ಯದಿಕ್ಕಿನಲ್ಲಿರುವ ಮತ್ತೊಂದು ಗುಡಿಯಲ್ಲಿ ಪ್ರತಿಷ್ಠೆಮಾಡಿದರೆಂದೂ ಜನರು ಹೇಳುತ್ತಾರೆ.

ಈ ದೇವಾಲಯದ ಪ್ರಾಕಾರದ ಒಳಗೆ ಸಿಕ್ಕಿದ ಒಂದು ಶಾಸನದಲ್ಲಿ ಪೋಲಾಳ್ವನು ಇದನ್ನು ಕಟ್ಟಿಸಿದ ಸಂಗತಿಯು ವರ್ಣಿತವಾಗಿದೆ. ಆ ವರ್ಣನೆಯಿಂದ ಒಂದೆರಡು ಪದ್ಯಗಳನ್ನು ಇಲ್ಲಿ ಅನುವಾದ ಮಾಡಿ ಬರೆದಿದ್ದೇವೆ:—

ದೆಸೆವೆಣ್ಗಳ್ ನೆಲೆಗೊಂಡ ಪುತ್ತಳಿಗಳಂ ಗೋತ್ರಾದ್ರಿಗಳ್ ತುಂಗಕೂ
ಟಸಹಸ್ರಂಗಳನಿಂದುಸೂರ್ಯವಲಯಂಗಳ್ ಪೋಲ್ವಿನಂ ಕಾಂತಿ ಶೋ
ಭಿಸೆ ಚೆಂಬೊಂಗಳಸಂಗಳಂ ಹರಿಹರಶ್ರೀಗೇಹಮಂ ಕೂಡಿ ಮಾ
ಡಿಸಿದಂ ಧಾರ್ಮಿಕಧರ್ಮರಾಜತನಯಂ ಪೋಲಾಳ್ವದಂಡಾಧಿಪಂ ||

ಗಿರಿಯೋ ಕೂಟವೊ ಸೂರ್ಯನೋ ಕಳಶವೋ ದಿಗ್ಭಿತ್ತಿಯೋ ಭಿತ್ತಿಯೋ
ದೊರೆವೆತ್ತಾ ದೆಸೆವೆಣ್ಗಳೋ ಪರಿಲಸತ್ಪಾಂಚಾಳಿಕಾಜಾಳವೋ
ಪಿರಿದುಂ ನಿಟ್ಟಿಸಬಾರದೆಂದೆನೆ ಜನಂ ಪೋಲಾಳ್ವದಂಡೇಶನ
ಚ್ಚರಿಯಪ್ಪಂತಿರೆ ಮಾಡಿದಂ ಹರಿಹರಶ್ರೀದೇವತಾವಾಸವುಂ ‖
ಇದು ಪದ್ಮಾವಸಥಂ ದಿವಾಕರನವೋಲ್ ಕೀರ್ತ್ಯುನ್ನತಂ ಪಾತ್ರದಾ
ನದವೋಲ್ ಸತ್ಕುಮುದಂ ಸರೋವರದವೋಲ್ ಘಂಟಾನ್ವಿತಂ ದಿಗ್ಗಜೇಂ
ದ್ರದವೋಲ್ ತಾನೆನಿಪನ್ನೆಗಂ ಹರಿಹರಶ್ರೀಗೇಹವುಂ ಮಾಡಿದಂ
ಯದುಭೂಪಾಳನ ದಂಡನಾಥತಿಳಕಂ ಪೋಲಾಳ್ವದಂಡಾಧಿಪಂ ‖ *

ಅರಸೀಕೆರೆಯ ಈಶ್ವರದೇವಾಲಯವು ಇವುಗಳಲ್ಲೆಲ್ಲಾ ಕೊನೆಯದು ಮತ್ತು ಈಚಿಗೆ ಕಟ್ಟಿದ್ದು. ಆದರೂ ಶಿಲ್ಪದೃಷ್ಟಿಯಿಂದ ಬಹು ಮುಖ್ಯವಾದದ್ದು. ಇಲ್ಲಿಯ ದೇವರ ಹೆಸರು ಅರಸೀಕೆರೆ ಜನರಿಗೆ ಗೊತ್ತಿಲ್ಲ; ಆದರೆ ಈ ಸ್ಥಳದಲ್ಲಿ ಸಿಕ್ಕಿದ ಒಂದು ಶಾಸನದಿಂದ (ಕ್ರಿ.ಶ. ೧೨೨೦) ಅದರ ಹೆಸರು "ಕತ್ತಮೇಶ್ವರ" ನೆಂದೂ ಹದಿ ಮೂರನೆಯ ಶತಮಾನದ ಆದಿಯಲ್ಲಿ, ಎರಡನೆಯ ನರಸಿಂಹನು ಆಳುತ್ತಿದ್ದಾಗ, ಅಥವಾ ಇನ್ನೂ ಸ್ವಲ್ಪಮುಂಚೆ, ಪ್ರತಿಷ್ಠಿಸಲ್ಪಟ್ಟಿತೆಂದೂ ಊಹಿಸಬಹುದಾಗಿದೆ.

ಇದು ಹಿಂದಿನ ದೇವಸ್ಥಾನಗಳಷ್ಟು ದೊಡ್ಡದಲ್ಲ. ಇದರಲ್ಲಿಯೂ ಗರ್ಭ ಗುಡಿ, ಸುಕನಾಸಿ, ನವರಂಗ, ಮುಖಮಂಟಪ ಇವು ಇವೆ. ನವರಂಗಕ್ಕೂ ಮುಖ ಮಂಟಪಕ್ಕೂ ಮಧ್ಯೆ ಎರಡು ದ್ವಾರಮಂಟಪಗಳಿವೆ. ಒಂದು ಅಡ್ಡಡ್ಡವಾಗಿ ಒಳಗ ಡೆಗೆ ಇದೆ, ಇನ್ನೊಂದು ಚೌಕವಾಗಿ ಹೊರಗಡೆಗೆ ಇದೆ. ಹೊರಮಂಟಪಕ್ಕೆ ಎರಡು ಕಡೆಯಲ್ಲಿಯೂ ಮೆಟ್ಟಲುಗಳಿವೆ. ದೇವಸ್ಥಾನದೊಳಕ್ಕೆ ಇಲ್ಲಿಂದಲೇ ಹೋಗಬೇಕು.

ಈ ಕಟ್ಟಡದಲ್ಲಿ ಬಹು ಸುಂದರವಾಗಿರುವುದು ಅದರ ಮುಖಮಂಟಪ. ಇದರ ವಿನ್ಯಾಸವು ನಕ್ಷತ್ರಾಕಾರವಾಗಿಯೂ ಮೇಲಿನ ಗೋಪುರವು ಅರ್ಧಗೋಳಾ ಕಾರವಾಗಿಯೂ ಇವೆ. ಈರೀತಿಯ ಕಟ್ಟಡಗಳಲ್ಲೆಲ್ಲಾ ಈ ಗೋಪುರವೇ ಅತ್ಯಂತ ದೊಡ್ಡದು. ನವರಂಗದಲ್ಲಿ ಸೊಗಸಾಗಿ ಕೆತ್ತಿದ ಎಂಟು ಗೂಡುಗಳಿವೆ; ಅದರ ಕಂಬಗಳಲ್ಲಿಯೂ ತೊಲೆಗಳಲ್ಲಿಯೂ ಮಣಿಗಳನ್ನು ಮತ್ತು ಬೇಲುಗಳನ್ನು ಬಿಡಿಸಿರು ವುದು ಬಹು ಚೆನ್ನಾಗಿದೆ. ಮಧ್ಯೆ ಇರುವ ಅಂಕಣದ ಒಂದೊಂದು ತೊಲೆಯಲ್ಲಿಯೂ ಒಳಭಾಗಕ್ಕೆ ಹನ್ನೆರಡು ನಿಂತಿರುವ ವಿಗ್ರಹಗಳು ಕೆತ್ತಲ್ಪಟ್ಟಿವೆ.

ದೇವಸ್ಥಾನದ ಮೇಲಿರುವ ಗೋಪುರವು ಬಹು ಸುಂದರವಾಗಿಯೂ ದೃಢ ವಾಗಿಯೂ ಇದೆ; ಆದರೆ ಅದರ ತುದಿಯಲ್ಲಿರುವ ಕಲಶಮಾತ್ರ ಚೆನ್ನಾಗಿಲ್ಲ;

* ದಾವಣಗೆರೆ ತಾಲ್ಲೂಕಿನ ೨೫ನೇ ನಂಬರಿನ ಶಾಸನ.

ಮುಂದೆ ಇಟ್ಟಿರುವ ನಂದಿಯೂ ಅಷ್ಟೇ. ಇವೆರಡೂ ಈಚೆಗೆ ಸೇರಿಸಿದವುಗಳೆಂದು ತೋರುತ್ತದೆ.

ಮುಖಮಂಟಪದ ಮೇಲಿರುವ ಗೋಪುರವು ಅಪೂರ್ವ ರೇಖಾಸಂಯೋಜನಗಳನ್ನು ಒಳಗೊಂಡ ವಿನ್ಯಾಸವುಳ್ಳದ್ದಾಗಿದೆ. ಇದರಲ್ಲಿ ಆರುಸಾಲು ಕೆತ್ತನೆಯ ಕೆಲಸವಿದೆ, ಕೆಳಗಡೆಯದರಲ್ಲಿ ಸಾಲಗೆ ಮೂರ್ತಿಗಳಿವೆ; ಅದರ ಮೇಲಿನದರಲ್ಲಿ ಎಂಟು ಸಣ್ಣ ಗೂಡುಗಳೂ ಅವೆರಡೆರಡರ ಮಧ್ಯೆ ಸಿಂಹಗಳೂ ಇವೆ. ಮಿಕ್ಕ ನಾಲ್ಕು ಸಾಲುಗಳಲ್ಲಿ ಕ್ರಮಕ್ರಮವಾಗಿ ಸಣ್ಣದಾಗಿರುವ ಮೊಗ್ಗುಗಳು ಕೆತ್ತಲ್ಪಟ್ಟಿವೆ. ಮಧ್ಯದಲ್ಲಿ ಒಂದು ದೊಡ್ಡ ತಾವರೆಯಮೊಗ್ಗು ಕೆಲವು ಅಡಿಗಳಷ್ಟು ಉದ್ದವಾಗಿ ಇಳಿಯಬಿದ್ದಿದೆ.

ಮೇಲೆ ಹೇಳಿದ ಆರು ದೇವಸ್ಥಾನಗಳಷ್ಟು ಪ್ರಾಶಸ್ತ್ಯವಿಲ್ಲದ ಈರೀತಿಯ ಕಟ್ಟಡಗಳು ಇನ್ನೂ ಅನೇಕವಿವೆ. ಇಂಥವುಗಳಲ್ಲಿ ಕೆಲವುಗಳನ್ನು ಇಲ್ಲಿ ಸೂಚಿಸಬಹುದು :—

ತಿಪಟೂರು ತಾಲ್ಲೂಕು ಹುಲ್ಲೆಕೆರೆಯ ಚೆನ್ನಕೇಶವದೇವಾಲಯವು ಸೋಮನಾಥಪುರದಲ್ಲಿರುವಂತೆ ಕೈಸಾಲೆ ಮಂಟಪಗಳುಳ್ಳ ಪ್ರಾಕಾರದ ಮಧ್ಯೆ ಇದೆ ಇದನ್ನು ಕಟ್ಟಿದಕಾಲ ಕ್ರಿ.ಶ. ೧೧೬೩.

ಕೃಷ್ಣರಾಜಪೇಟೆ ತಾಲ್ಲೂಕು ತೆಂಗಿನಗಟ್ಟದಲ್ಲಿರುವ ಹೊಯಿಸಳೇಶ್ವರದೇವಾಲಯವು ಕ್ರಿ.ಶ. ೧೧೫೦ ರಲ್ಲಿ ಕಟ್ಟಿದ್ದು. ಇದರ ಭುವನೇಶ್ವರಿಗಳು ಬಹು ರಮಣೀಯವಾಗಿವೆ. ನವರಂಗದ ಮಧ್ಯೆ ಇರುವ ಭುವನೇಶ್ವರಿಯು ಸುಮಾರು ಎರಡು ಅಡಿ ಆಳವಾಗಿದೆ. ಮಧ್ಯೆ ಒಂದು ಸೊಗಸಾದ ತಾವರೆಯಮೊಗ್ಗು ಬಿಡಿಸಲ್ಪಟ್ಟಿದೆ. ಸುತ್ತಲೂ ಎಂಟು ಸಿಂಹಗಳು ಅದನ್ನು ಅವಲಂಬಿಸಿಕೊಂಡು ನಿಂತಿವೆ. ಆಗ್ನೇಯ ದಿಕ್ಕಿನ ಭುವನೇಶ್ವರಿಯಲ್ಲಿ ನಾಲ್ಕು ಹಾವುಗಳು ತಮ್ಮ ಹೆಡೆಗಳಿಂದ ಒಂದು ಕಮಲಪುಷ್ಪದ ಬೀಜಕೋಶವನ್ನು ಊರೆಕೊಟ್ಟು ಹಿಡಿದುಕೊಂಡಿವೆ. ಈ ಕಮಲಪುಷ್ಪವು ಅರಳಿ ನಾಲ್ಕು ಎಸಳುಗಳುಳ್ಳದ್ದಾಗಿದೆ.

ಅರಸೀಕೆರೆ ತಾಲ್ಲೂಕು ಹಾರನಹಳ್ಳಿಯಲ್ಲಿಯೂ ತಿಪಟೂರು ತಾಲ್ಲೂಕು ತುರುವೆಕೆರೆ ನಾಗಲಾಪುರಗಳಲ್ಲಿಯೂ, ಒಂದು ಶೈವ ಒಂದು ವೈಷ್ಣವ ಹೀಗೆ ಎರಡೆರಡು ದೇವಾಲಯಗಳಿವೆ. ವಿಷ್ಣು ದೇವಾಲಯಗಳಲ್ಲಿರುವುದು ಚೆನ್ನಕೇಶವ ದೇವರು. ಶಿವದೇವಾಲಯಗಳ ಪೈಕಿ ಹಾರನಹಳ್ಳಿಯಲ್ಲಿ ಸೋಮೇಶ್ವರನೂ, ತುರುವೇಕೆರೆಯಲ್ಲಿ ಮೂಲೇಶಂಕರೇಶ್ವರನೂ, ನಾಗಲಾಪುರದಲ್ಲಿ ಕೇದಾರೇಶ್ವರನೂ ಇವೆ. ಹಾರನಹಳ್ಳಿ

ಯಲ್ಲಿಯೂ ತುರುವೆಕೆರೆಯಲ್ಲಿಯೂ ಇರುವ ದೇವಾಲಯಗಳು ತಕ್ಕಮಟ್ಟಿಗೆ ಉತ್ತಮ ಸ್ಥಿತಿಯಲ್ಲಿವೆ; ಆದರೆ ನಾಗಲಾಪುರದಲ್ಲಿರುವವು ಮಾತ್ರ ಎಲ್ಲಾ ಪಾಳಾಗಿವೆ. ಮೂಲೇಶಂಕರೇಶ್ವರ ದೇವಾಲಯದ ಗೋಪುರವು ಉತ್ತರದೇಶದಲ್ಲಿರುವ ದೇವಾಲಯಗಳ ಗೋಪುರಗಳ ಮಾದರಿಯಲ್ಲಿ ಕಟ್ಟಲ್ಪಟ್ಟಿದೆ.

ತಿಪಟೂರು ತಾಲ್ಲೂಕು ಅರಳಗುಪ್ಪೆಯ ದೇವಾಲಯವು ಕೆತ್ತನೆಯ ಕೆಲಸ, ಗೋಪುರಗಳ ಆಕಾರ, ಅಲಂಕಾರಾದಿಗಳಲ್ಲಿ ಸೋಮನಾಥಪುರದ ದೇವಾಲಯವನ್ನು ಹೋಲುತ್ತದೆ. ಇಲ್ಲಿ ಗೋಡೆಯ ಹೊರಮುಖಗಳಲ್ಲಿ ಕೆತ್ತಿರುವ ಕೆಲವು ವಿಗ್ರಹಗಳಿಗೆ ಇತರ ಕಡೆಗಳಲ್ಲಿ ಕಾಣಬರದ ಕೆಲವು ಅಪೂರ್ವ ಲಕ್ಷಣಗಳಿವೆ.

ತಲಕಾಡಿನ ಕೀರ್ತಿನಾರಾಯಣ ದೇವಾಲಯವು ಕ್ರಿ.ಶ. ೧೧೧೭ ರಲ್ಲಿ ವಿಷ್ಣುವರ್ಧನನು ಕಟ್ಟಿಸಿದನೆಂದು ಹೇಳುವ ಐದು ನಾರಾಯಣ ದೇವಾಲಯಗಳಲ್ಲಿ ಒಂದು. ಬೇಲೂರು, ಮೇಲುಕೋಟೆ, ತೊಣ್ಣೂರು ಮತ್ತು ಗದಗು ಇವು ಮಿಕ್ಕ ನಾಲ್ಕು ಸ್ಥಳಗಳು. ಈ ಕಟ್ಟಡವು ಮರಳಿನಲ್ಲಿ ಹೂತುಹೋಗಿದೆ. ಶಾಸನದ ಇಲಾಖೆಯವರು ೧೯೧೧ ರಲ್ಲಿ ಇದನ್ನು ಅಗಿಸಿದಾಗ ಅದರ ಸ್ವಲ್ಪ ಭಾಗಮಾತ್ರ ಕಾಣುವಂತಾಯಿತು. ಈಗ ಕಾಣುವಷ್ಟು ಭಾಗವನ್ನು ನೋಡಿದರೆ ಈ ಕಟ್ಟಡವು ಬಹು ಸೊಗಸಾಗಿರಬಹುದೆಂದು ತೋರುತ್ತದೆ.

---



ಅರಸೀಕೆರೆಯಲ್ಲಿರುವ ಈಶ್ವರದೇವಾಲಯದ ವಿನ್ಯಾಸ ಮತ್ತು ಭುವನೇಶ್ವರಿಗಳ ನಕ್ಷೆ.

[ವಾಸ್ತುಶಿಲ್ಪ, ಪುಟ ೬೨.

# ಕಾವ್ಯದ ಅನಾದರ.

ವಾಲ್ಮೀಕಿಮಹಾಕವಿಯು ತನ್ನ ಕಲ್ಪನಾಶಕ್ತಿಯ ಕರುಣಾಜಲವೆಲ್ಲವನ್ನೂ ಜನಕಸುತೆಯ (ಸೀತಾದೇವಿಯ) ಪುಣ್ಯಾಭಿಷೇಕದಲ್ಲಿಯೇ ಮುಗಿಸಿಬಿಟ್ಟಿರುತ್ತಾನೆ. ಕಳೆಗುಂದಿದ ಮುಖವುಳ್ಳವಳೂ ಸಮಸ್ತ ಐಹಿಕ ಸುಖದಿಂದ ವಂಚಿತಳೂ ಆಗಿ ಸೀತಾದೇವಿಯ ಛಾಯೆಯಲ್ಲಿ ಅವಕುಂಠನವತಿಯಾಗಿ ನಿಂತಿರುವ ಮತ್ತೊಬ್ಬ ರಾಜ ಕುಮಾರಿಯ (ಆಕೆಯೂ ಜನಕಸುತೆಯೇ) ಚಿರದುಃಖದಿಂದ ತಪ್ತವಾದ ನಮ್ರ ಲಲಾಟದ ಮೇಲೆ ಕವಿಯು ತನ್ನ ಕಮಂಡಲುವಿನ ಒಂದು ತೊಟ್ಟು ನೀರನ್ನಾದರೂ ಏಕೆ ಚಿಮುಕಿಸುವುದಿಲ್ಲ? ಅಯ್ಯೋ, ಅವ್ಯಕ್ತವೇದನೆಯಾದ ಊರ್ಮಿಳಾದೇವಿ! ನೀನು ಉಷಃಕಾಲದಲ್ಲಿ ಕಣ್ಣಿಗೆ ಬೀಳುವ ನಕ್ಷತ್ರದಂತೆ ಮಹಾಕಾವ್ಯದ ಮೇರು ಶಿಖರದಲ್ಲಿ ಒಂದು ಬಾರಿ ಮಾತ್ರ ಗೋಚರಳಾದೆ; ಆಮೇಲೆ ಅರುಣಕಾಂತಿಯಲ್ಲಿ ಕಣ್ಮರೆಯಾದ ನೀನು ಪುನಃ ಕಾಣಲಿಲ್ಲ. ನಿನ್ನ ಉದಯಾಚಲವೆಲ್ಲಿ, ಅಸ್ತಶಿಖರ ವೆಲ್ಲಿ—ಎಂದು ಕೇಳುವುದನ್ನು ಕೂಡ ಎಲ್ಲರೂ ಮರೆತು ಬಿಟ್ಟಿರುತ್ತಾರೆ.

ಕವಿಗಳಿಂದ ಸಂಪೂರ್ಣವಾಗಿ ಉಪೇಕ್ಷಿತರಾಗಿದ್ದರೂ ಅಮರಲೋಕದಿಂದ ಭ್ರಷ್ಟರಾಗದಿರುವಂತಹ ಒಬ್ಬಿಬ್ಬರು ಸ್ತ್ರೀಯರು ಕಾವ್ಯಪ್ರಪಂಚದಲ್ಲಿರುತ್ತಾರೆ. ಪಕ್ಷಪಾತಿಯೂ ಕೃಪಣವೂ ಆದ ಕಾವ್ಯವು ಅವರ ವಿಷಯದಲ್ಲಿ ಸ್ಥಳಸಂಕೋಚ ವನ್ನು ತೋರಿರುವುದರಿಂದಲೇ ಪಾಠಕರ ಹೃದಯವು ಮುಂದೆ ಬಂದು ಅವರಿಗೆ ಆಶ್ರಯವನ್ನು ಕೊಡುತ್ತದೆ.

ಆದರೆ ಹೀಗೆ ಕವಿಗಳಿಂದ ಉಪೇಕ್ಷಿತರಾದವರಲ್ಲಿ ಯಾರಿಗೆ ಯಾರು ತಮ್ಮ ಹೃದಯದಲ್ಲಿ ಆಶ್ರಯವನ್ನು ಕೊಡುತ್ತಾರೆಂಬುದು ಆಯಾ ಪಾಠಕರ ಪ್ರಕೃತಿ ಯನ್ನೂ ಅಭಿರುಚಿಯನ್ನೂ ಅವಲಂಬಿಸುತ್ತದೆ. ಸಂಸ್ಕೃತಸಾಹಿತ್ಯದ ಕಾವ್ಯಯಜ್ಞ ಶಾಲೆಯ ಪ್ರಾಂತ ಭೂಮಿಯಲ್ಲಿ ಅನಾದರಕ್ಕೆ ಪಾತ್ರರಾಗಿ, ನಮಗೆ ಪರಿಚಿತ ರಾದವರಲ್ಲಿ ಊರ್ಮಿಳಾದೇವಿಗೆ ಪ್ರಧಾನಸ್ಥಾನವು ಸಲ್ಲತಕ್ಕುದೆಂದು ನಮ್ಮ ಭಾವನೆ.

ಹೀಗೆ ಭಾವಿಸುವುದಕ್ಕೆ ಇರುವ ಒಂದು ಕಾರಣ ಇಂತಹ ಮಧುರವಾದ ಹೆಸರು ಸಂಸ್ಕೃತದಲ್ಲಿ ಮತ್ತೊಂದಿಲ್ಲದಿರುವುದೇ. ನಾನು ಹೆಸರನ್ನು 'ಹೆಸರು ಮಾತ್ರ' ಎಂದು ಭಾವಿಸುವವರ ಗುಂಪಿಗೆ ಸೇರಿದವನಲ್ಲ. "ಗುಲಾಬಿಗೆ ಯಾವ ಹೆಸರನ್ನಿಟ್ಟರೇನು? ಅದರ ಮಾಧುರ್ಯದಲ್ಲಿ ಹೆಚ್ಚು ಕಡಿಮೆಯೇನೂ ಆಗುವುದಿಲ್ಲ,"

ಎಂದು ಷೇಕ್ಸ್‌ಪಿಯರ್ ಕವಿಯು ಹೇಳಿರುತ್ತಾನೆ. ಗುಲಾಬಿಯ ಸಂಬಂಧವಾಗಿ ಹಾಗೆ ಹೇಳಿದರೂ ಹೇಳಬಹುದು ; ಏಕೆಂದರೆ ಗುಲಾಬಿಯ ಮಾಧುರ್ಯವು ಚಿಕ್ಕದಾದ ಮೇರೆಯುಳ್ಳದ್ದು. ಅದು ಕೆಲವು ರೇಖೆಗಳ ಸುಸ್ಪಷ್ಟವೂ ಪ್ರತ್ಯಕ್ಷಗಮ್ಯವೂ ಆದ ಗುಣಗಳನ್ನು ಮಾತ್ರ ಅವಲಂಬಿಸುತ್ತದೆ. ಮಾನುಷ ಮಾಧುರ್ಯವಾದರೋ ಹಾಗೆ ಸರ್ವಾಂಶಗಳಲ್ಲಿಯೂ ಗೋಚರವಾಗತಕ್ಕದ್ದಲ್ಲ ; ಅವುಗಳಲ್ಲಿ ಅನೇಕ ಅಂಶಗಳು ಸೂಕ್ಷ್ಮವೂ ಸುಕುಮಾರವೂ ಆದ ಸಮಾವೇಶದಿಂದ ಕೂಡಿ ಅನಿರ್ವಚನೀಯತೆಯನ್ನುಂಟುಮಾಡುತ್ತವೆ. ಆ ಮಾಧುರ್ಯವನ್ನು ನಾವು ಕೇವಲ ಇಂದ್ರಿಯಗಳ ಮೂಲಕವಾಗಿ ಗ್ರಹಿಸುವುದಿಲ್ಲ ; ಕಲ್ಪನೆಯ ಮೂಲಕ ಸೃಷ್ಟಿಸುತ್ತೇವೆ. ಹೆಸರು ಆ ಸೃಷ್ಟಿಕಾರ್ಯಕ್ಕೆ ಸಹಾಯಮಾಡುತ್ತದೆ. ದ್ರೌಪದಿಯ ಹೆಸರು ಊರ್ಮಿಳಾ ಎಂದಾಗಿದ್ದರೆ ಏನಾಗುತ್ತಿತ್ತೆಂದು ಒಂದುಬಾರಿ ಯೋಚಿಸಿ ನೋಡೋಣ : ವೀರರಾದ ಪಂಚಪತಿಗಳಿಂದ ಗರ್ವಿತಳಾದ ಆ ಕ್ಷತ್ರಿಯ ರಮಣಿಯ ಉಜ್ಜ್ವಲವಾದ ತೇಜಸ್ಸು ಈ ತರುಣವೂ ಕೋಮಲವೂ ಆದ ಹೆಸರಿನಿಂದ ಪದೇ ಪದೇ ಭಂಗವನ್ನು ಪಡೆಯುತ್ತಿತ್ತೆಂದು ತೋರುತ್ತದೆ.

ಆದಕಾರಣ, ಊರ್ಮಿಳಾದೇವಿಗೆ ಆ ಹೆಸರನ್ನಿಟ್ಟುದಕ್ಕಾಗಿ ನಾನು ವಾಲ್ಮೀಕಿಗೆ ಕೃತಜ್ಞನಾಗಿದ್ದೇನೆ. ಕವಿಗುರುವು ಆಕೆಯ ವಿಷಯದಲ್ಲಿ ಅನೇಕ ಅನ್ಯಾಯಗಳನ್ನು ಮಾಡಿದ್ದಾನೆ; ಆದರೆ ಅದೃಷ್ಟವಶಾತ್ ಆಕೆಗೆ " ಮಾಂಡವಿ " ಅಥವಾ " ಶ್ರುತಕೀರ್ತಿ " ಎಂಬುದಾಗಿ ಹೆಸರಿಡದೆ " ಊರ್ಮಿಳಾ " ಎಂದಿಟ್ಟಿರುವುದು ಒಂದು ವಿಶೇಷ ಸೌಭಾಗ್ಯ. ಮಾಂಡವಿ ಶ್ರುತಕೀರ್ತಿಗಳ ವಿಚಾರವಾಗಿ ನಮಗೇನೂ ಗೊತ್ತಿಲ್ಲ ; ಗೊತ್ತುಮಾಡಿಕೊಳ್ಳಬೇಕೆಂಬ ಕುತೂಹಲವೂ ಇಲ್ಲ.

ಊರ್ಮಿಳಾದೇವಿಯನ್ನು ನಾವು ನೋಡಿರುವುದು ಒಂದೇ ಒಂದುಸಲ— ವಿದೇಹನಗರಿಯ ವಿವಾಹಸಭೆಯಲ್ಲಿ, ವಧೂವೇಷದಲ್ಲಿ; ಆಮೇಲೆ ಆಕೆಯು ರಘುವಂಶದ ರಾಜರ ಅಂತಃಪುರವನ್ನು ಪ್ರವೇಶಮಾಡಿದಂದಿನಿಂದ ಆಕೆಯನ್ನು ಪುನಃ ಒಂದು ದಿನವಾದರೂ ನೋಡಿದಂತೆ ಮನಸ್ಸಿಗೆ ತೋರುವುದಿಲ್ಲ. ಆಕೆಯ ವಿವಾಹಸಭೆಯ ವಧೂವೇಷದ ಚಿತ್ರವೇ ನಮ್ಮ ಮನಸ್ಸಿನಲ್ಲಿ ನಿಂತುಬಿಟ್ಟಿರುತ್ತದೆ. ಊರ್ಮಿಳಾದೇವಿಯು ಚಿರವಧು—ಮೌನವಾದ ಲಜ್ಜೆಯಿಂದ ಕೂಡಿದವಳು, ನಿಶ್ಶಬ್ದವಾಗಿ ಸಂಚರಿಸತಕ್ಕವಳು. ಭವಭೂತಿಯ ಕಾವ್ಯದಲ್ಲಿ (ಉತ್ತರ ರಾಮಚರಿತ್ರೆಯಲ್ಲಿ) ಆಕೆಯ ಚಿತ್ರವು ಕ್ಷಣಕಾಲ ಮಾತ್ರ ಪ್ರಕಾಶಿತವಾಗುತ್ತದೆ:-ಸೀತಾದೇವಿಯು ಆಕೆಯ ಚಿತ್ರದಮೇಲೆ ತನ್ನ ತರ್ಜನೀಬೆರಳನ್ನಿಟ್ಟು ಮೈದುನನನ್ನು ಕುರಿತು " ವತ್ಸ, ಈಕೆ

ಯಾರು ?'' ಎಂದು ಕೇಳಿದಳು ; ಲಕ್ಷ್ಮಣನು ಲಜ್ಜೆಯಿಂದ ನಗುತ್ತ, '' ಓಹೋ, ಆರ್ಯೆಯು ಊರ್ಮಿಳೆಯ ವಿಷಯವನ್ನು ಕೇಳುತ್ತಾಳೆ'' ಎಂದುಕೊಂಡು ತತ್ಕ್ಷಣವೇ ಲಜ್ಜೆಯಿಂದ ಆ ಚಿತ್ರವನ್ನು ತೆಗೆದುಬಿಟ್ಟನು. ಅದಾದಮೇಲೆ ರಾಮಚಂದ್ರನ ಅಂತಹ ವಿಚಿತ್ರವಾದ ಸುಖದುಃಖದ ಚಿತ್ರಗಳ ಮಧ್ಯದಲ್ಲಿ ಯಾರ ಕುತೂಹಲದ ಬೆರಳಾಗಲಿ ಪುನಃ ಒಂದು ಬಾರಿಯಾದರೂ ಆ ಚಿತ್ರದಮೇಲೆ ಬೀಳಲಿಲ್ಲ. ಆಕೆಯು ಕೇವಲ ವಧೂ ಊರ್ಮಿಳೆಯಾಗಿಯೇ ಉಳಿಯುತ್ತಾಳೆ.

ವಿವಾಹದ ದಿವಸ ತನ್ನ ನವಯೌವನದ ಶುಭ್ರಲಲಾಟದಲ್ಲಿ ಮೊಟ್ಟಮೊದಲು ಕುಂಕುಮಧಾರಣ ಮಾಡಿದ ಊರ್ಮಿಳಾದೇವಿಯು (ನಮ್ಮ ಭಾಗಕ್ಕೆ) ಕೊನೆಯವರೆಗೂ ಆ ದಿನದ ನವವಧುವಾಗಿಯೇ ಇರುತ್ತಾಳೆ ಶ್ರೀರಾಮನ ಅಭಿಷೇಕಕ್ಕಾಗಿ ಅಂತಃಪುರಸ್ತ್ರೀಯರೆಲ್ಲರೂ ಮಂಗಳದ್ರವ್ಯಗಳನ್ನು ಅಣಿಮಾಡುತ್ತಿದ್ದ ದಿವಸ ಈ ವಧುವೂ ಮುಂದಲೆಯಮೇಲೆ ಅರ್ಧಮುಸುಕನ್ನು ಎಳೆದುಕೊಂಡು ರಘುಕುಲ ಕಾಂತೆಯರೊಂದಿಗೆ ತಾನೂ ಪ್ರಸನ್ನವಾದ ಮುಖವುಳ್ಳವಳಾಗಿ ಆ ಮಂಗಳದ್ರವ್ಯಗಳನ್ನು ಸಿದ್ಧಪಡಿಸುವ ಕಾರ್ಯದಲ್ಲಿ ಉದ್ಯುಕ್ತಳಾಗಿರಲಿಲ್ಲವೆ ? ಆಮೇಲೆ, ಯಾವ ದಿವಸ ಅಯೋಧ್ಯೆಯನ್ನು ಅಂಧಕಾರಮಯಮಾಡಿ ರಾಮಲಕ್ಷ್ಮಣರು ಸೀತಾದೇವಿಯೊಡನೆ ತಾಪಸವೇಷದಿಂದ ದಾರಿಯಲ್ಲಿ ಹೊರಟರೋ ಆ ದಿವಸ, ಊರ್ಮಿಳಾದೇವಿಯು ಅರಮನೆಯ ನಿರ್ಜನವಾದೊಂದು ಶಯ್ಯಾಗೃಹದಲ್ಲಿ, ಧೂಳಿಶಯ್ಯೆಯಲ್ಲಿ, ತೊಟ್ಟುಕಳಚಿದ ಮೊಗ್ಗಿನಂತೆ ಮೂರ್ಛಿತಳಾಗಿ ಬಿದ್ದಿದ್ದಳೆಂದು ಯಾರಿಗೆ ಗೊತ್ತು ? ಆ ದಿನದ ವಿಶ್ವವ್ಯಾಪಿಯಾದ ವಿಲಾಪದಲ್ಲಿ ಆ ಕೋಮಲಹೃದಯದ ಬಾಲಿಕೆಯ ಅಸಹನೀಯವಾದ ಶೋಕವನ್ನು ಯಾರು ನೋಡಿದರು ? ಕ್ರೌಂಚವಿರಹಿಣಿಯ ವೈಧವ್ಯದುಃಖವನ್ನು ಮುಹೂರ್ತಕಾಲ ಕೂಡ ಸಹಿಸಲಾರದವನಾಗಿದ್ದ ಋಷಿಕವಿಯೂ ಒಂದು ಬಾರಿಯಾದರೂ ಅತ್ತಕಡೆ ಮನಸ್ಸಿಟ್ಟು ನೋಡಲಿಲ್ಲ.

ಲಕ್ಷ್ಮಣನು ರಾಮಚಂದ್ರನಿಗಾಗಿ ಸರ್ವವಿಧಗಳಲ್ಲಿಯೂ ಸ್ವಾರ್ಥತ್ಯಾಗ ಮಾಡಿದನು. ಆ ಕೀರ್ತಿಯು ಈಗಲೂ ಭರತಖಂಡದಲ್ಲಿ ಮನೆಮನೆಯಲ್ಲಿಯೂ ಕೇಳಬರುತ್ತದೆ. ಆದರೆ ಸೀತಾದೇವಿಗಾಗಿ ಊರ್ಮಿಳಾದೇವಿಯು ಮಾಡಿದ ಸ್ವಾರ್ಥತ್ಯಾಗವು ಜಗತ್ತಿನಲ್ಲಿ ಮಾತ್ರವೇ ಅಲ್ಲ, ಕಾವ್ಯದಲ್ಲಿಯೂ ಕೂಡ ಕಂಡುಬರುವುದಿಲ್ಲ. ಲಕ್ಷ್ಮಣನು ದೇವತಾಸ್ವರೂಪರಾದ ಸೀತಾರಾಮರಿಗಾಗಿ ಸ್ವಾರ್ಥವನ್ನು ಮಾತ್ರ ತ್ಯಾಗಮಾಡಿದನು. ಊರ್ಮಿಳಾದೇವಿಯಾದರೋ ಸ್ವಾರ್ಥಕ್ಕಿಂತಲೂ ಹೆಚ್ಚಾದ ತನ್ನ ಸ್ವಾಮಿಯನ್ನೇ ದಾನಮಾಡಿದಳು. ಕಾವ್ಯವು ಆ ಮಾತನ್ನೇ ಎತ್ತು

ವುದಿಲ್ಲ; ಸೀತಾದೇವಿಯ ಕಣ್ಣೀರಿನಲ್ಲಿ ಊರ್ಮಿಳಾದೇವಿಯು ಸಂಪೂರ್ಣವಾಗಿ ಕೊಚ್ಚಿಕೊಂಡು ಹೋದಳು !

ಲಕ್ಷ್ಮಣನೇನೋ ಹನ್ನೆರಡುವರ್ಷಕಾಲವೂ ಪೂಜಾಯೋಗ್ಯರಾದ ಪ್ರಿಯ ಜನರ ಸೇವಾಕಾರ್ಯದಲ್ಲಿ ನಿರತನಾಗಿದ್ದನು. ಊರ್ಮಿಳಾದೇವಿಯು ತನ್ನ ಸ್ತ್ರೀ ಜೀವನದ ಆ ಹನ್ನೆರಡು ಶ್ರೇಷ್ಠವಾದ ವರ್ಷಗಳನ್ನು ಹೇಗೆ ಕಳೆದಳು ? ಲಜ್ಜಾ ಯುಕ್ತವಾದ ನವಪ್ರೇಮದಿಂದ ಸಂತೋಷವನ್ನು ಹೊಂದಿ ಆಗತಾನೇ ಅರಳುತ್ತಿದ್ದ ಹೃದಯದ ಮೊಗ್ಗೆಯುಳ್ಳವಳಾದ ಊರ್ಮಿಳಾದೇವಿಗೆ, ಯಾವಾಗ ತನ್ನ ಸ್ವಾಮಿ ಯೊಂದಿಗೆ ಪ್ರಥಮತಮವೂ ಮಧುರತಮವೂ ಆದ ಪರಿಚಯಕ್ಕೆ ಆರಂಭವಾಗಬೇ ಕಾಗಿತ್ತೋ, ಆ ಮುಹೂರ್ತದಲ್ಲಿಯೇ ಲಕ್ಷ್ಮಣನು ಸೀತಾದೇವಿಯ ಹೆಜ್ಜೆಯ ಮೇಲೆ ದೃಷ್ಟಿಯನ್ನಿಟ್ಟು ಅರಣ್ಯಕ್ಕೆ ಹೊರಟುಹೋದನು. ಅವನು ಹಿಂದಿರುಗಿ ಬಂದಾಗ, ಪ್ರೇಮದ ಬೆಳಕನ್ನೇ ಕಾಣದ ಆ ನವವಧುವಿನ ಹೃದಯದಲ್ಲಿ ಹಿಂದೆ ಇದ್ದ ನವೀನತೆಯು ಇನ್ನೂ ಉಳಿದಿತ್ತೆ? ಯಾರಾದರೂ ಸೀತಾದೇವಿಯ ದುಃಖ ದೊಂದಿಗೆ ಊರ್ಮಿಳಾದೇವಿಯ ಅತ್ಯಧಿಕವಾದ ದುಃಖವನ್ನು ತ.ಲನಮಾಡಿಯಾ ರೆಂಬ ಶಂಕೆಯಿಂದಲೇ ಕವಿಯು ಸೀತಾದೇವಿಯ ಸ್ವರ್ಣಮಂದಿರದಿಂದ ಈ ಮಹಾ ದುಃಖಿನಿಯನ್ನು ಸಂಪೂರ್ಣವಾಗಿ ಹೊರಗಿಟ್ಟಿರಬಹುದೆ ? ಆಕೆಗೆ ಜಾನಕೀದೇವಿಯ ಪಾದಪೀಠದ ಹತ್ತಿರದಲ್ಲಿ ಕೂಡ ಕೂರುವುದಕ್ಕೆ ಅವಕಾಶವನ್ನು ಕೊಟ್ಟಿಲ್ಲ.

ಸಂಸ್ಕೃತಕಾವ್ಯದ ಇಬ್ಬರು ತಪಸ್ವಿನಿಯರು ನಮ್ಮ ಚಿತ್ತಕ್ಷೇತ್ರದಲ್ಲಿ ತಪೋವನವನ್ನು ರಚಿಸಿಕೊಂಡು ವಾಸಮಾಡುತ್ತಾರೆ. ಅವರು ಯಾರೆಂದರೆ ಪ್ರಿಯಂವದೆ ಮತ್ತು ಅನಸೂಯೆ. ಅವರಿಬ್ಬರೂ ಗಂಡನ ಮನೆಗೆ ಹೋಗುತ್ತಿದ್ದ ಶಕುಂತಳೆಯನ್ನು ಬೀಳ್ಕೊಟ್ಟು, ಮಧ್ಯಮಾರ್ಗದಿಂದ ಅಳುತ್ತಾ ಹಿಂದಿರುಗಿದರು ; ಅವರು ಪುನಃ ನಾಟಕದಲ್ಲಿ ಪ್ರವೇಶಿಸುವುದಿಲ್ಲ. ನಮ್ಮ ಹೃದಯದಲ್ಲಿ ಅವರು ಸಂಪೂರ್ಣ ಆಶ್ರಯವನ್ನು ಪಡೆಯುತ್ತಾರೆ.

ಕಾವ್ಯದಲ್ಲಿ ಎಲ್ಲ ಪಾತ್ರಗಳಿಗೂ ಸಮಾನವಾದ ಪ್ರಾಶಸ್ತ್ಯವು ದೊರೆಯ ಲಾರದೆಂಬುದೇನೋ ನಿಜ. ಕಠಿನಹೃದಯನಾದ ಕವಿಯು ತನ್ನ ಕಾವ್ಯದ ನಾಯಕ ನಾಯಿಕೆಯರಿಗಾಗಿ ಎಷ್ಟು ಅಕ್ಷಯ ಪ್ರತಿಮೆಗಳನ್ನು ತಯಾರುಮಾಡಿ ಮಾಡಿ ನಿರ್ಮಮತೆಯಿಂದ ಬಿಸಾಟು ಬಿಡುತ್ತಾನೆ! ಆದರೆ ಆತನು ಎಲ್ಲಿ ಯಾರನ್ನು ಕಾವ್ಯದ ಆವಶ್ಯಕತೆಗಾಗಿ ನಿಶ್ಶೇಷ ಮಾಡಿಬಿಡುತ್ತಾನೆಯೋ ಅಲ್ಲಿಗೆ ಅವರು ಸಂಪೂರ್ಣವಾಗಿ ಮುಗಿದು ಹೋಗುತ್ತಾರೇನು ? ರೋಷಾವಿಷ್ಟರಾದ ಋಷಿಶಿಷ್ಯ

ರಿಬ್ಬರೂ ಕಣ್ಣೀರಿಡುತ್ತಿದ್ದ ಗೌತಮಿಯೂ ತಪೋವನಕ್ಕೆ ಹಿಂದಿರುಗಿಬಂದು, ಶಕುಂತಳೆಯ ಸುದ್ದಿಯನ್ನು ಕೇಳಬೇಕೆಂದು ಕಳವಳಗೊಂಡಿದ್ದ ಸಖಿಯರಿಗೆ ರಾಜಸಭೆಯ ವೃತ್ತಾಂತವನ್ನು ತಿಳಿಸಿದಾಗ ಅವರ ಮನಸ್ಸಿಗೆ ಹೇಗಾಯಿತು ಎಂಬ ವಿಷಯವು ಶಾಕುಂತಳ ನಾಟಕಕ್ಕೆ ಸಂಪೂರ್ಣವಾಗಿ ಅನಾವಶ್ಯಕವಾದರೂ, ಆ ಅಪಾರವಾದ ಅನುಕ್ತವಾದ ವೇದನೆಯು ಅಲ್ಲಿಗೇ ನಿಂತುಹೋಯಿತೇನು? ನಮ್ಮ ಹೃದಯದಲ್ಲಿ ಛಂದೋಬದ್ಧವಾಗದೆ ಭಾಷೆಯ ಸಹಾಯವನ್ನು ಕೂಡ ಹೊಂದದೆ ಚಿರಕಾಲವೂ ಸ್ವೇಚ್ಛೆಯಾಗಿ ಸುತ್ತುತ್ತಿರುವುದಲ್ಲವೆ?

ಕಾವ್ಯವು ವಜ್ರದ ತುಂಡಿನಂತೆ ಕಠಿನವಾದುದು. ಅನಸೂಯಾ ಪ್ರಿಯಂವದೆಯರು ಶಕುಂತಳೆಗೆ ಎಷ್ಟು ಸಂಬಂಧಿಸಿದ್ದರೆಂಬುದನ್ನು ಯೋಚಿಸಿ ನೋಡಿದರೆ, ಆ ಕಣ್ವಸುತೆಯ ಅತ್ಯಂತ ದುಃಖದ ಸಮಯದಲ್ಲಿಯೇ ಆ ಗೆಳತಿಯರನ್ನು ಶುದ್ಧಾಂಗವಾಗಿ—ಅನಾವಶ್ಯಕವೆಂಬ ಕಾರಣದಿಂದ ಸಂಪೂರ್ಣವಾಗಿ – ಬಿಟ್ಟು ಬಿಟ್ಟದು ಕಾವ್ಯ ದೃಷ್ಟಿಯಿಂದ ನ್ಯಾಯವೂ ವಿಚಾರಯುಕ್ತವೂ ಆದರೂ ಆಗಬಹುದು; ಆದರೂ ಅದು ಅತ್ಯಂತ ಕಠೋರವಾದುದು.

ಶಕುಂತಳೆಯ ಸುಖ ಸೌಂದರ್ಯಗಳನ್ನೂ ಗೌರವ ಮಹತ್ವಗಳನ್ನೂ ವೃದ್ಧಿಪಡಿಸುವುದಕ್ಕಾಗಿಯೇ ಈ ಲಾವಣ್ಯ ಪ್ರತಿಮೆಗಳಿಬ್ಬರೂ ತಮ್ಮ ಸರ್ವಸ್ವದಿಂದಲೂ ಆಕೆಗೆ ವೇಷ್ಟನವನ್ನುಂಟುಮಾಡಿದ್ದರು. ಮೂವರು ಸಖಿಯರು ಜಲಪಾತ್ರೆಗಳನ್ನು ಧರಿಸಿ ಅಕಾಲದಲ್ಲಿ ಹೂಬಿಟ್ಟಿದ್ದ ನವಮಲ್ಲಿಕಾಲತೆಯ ಕೆಳಗೆ ಒಂದು ನಿಂತಾಗ ದುಷ್ಯಂತನು ಏಕಾಂಗಿಯಾದ ಶಕುಂತಳೆಯನ್ನು ಪ್ರೀತಿಸಿದನೇನು? ಆ ಸಮಯದಲ್ಲಿ ಹಾಸ್ಯಪರಿಹಾಸ್ಯಗಳಿಂದ ಶಕುಂತಳೆಯ ನವಯೌವನದ ವಿಲೋಲಮಾಧುರ್ಯವನ್ನು ಸಂಪೂರ್ಣಮಾಡಿದವರಾರು? ಈ ಇಬ್ಬರು ತಾಪಸ ಸಖಿಯರಲ್ಲವೆ? ಏಕಾಂಗಿಯಾದ ಶಕುಂತಳೆಯು ಶಕುಂತಳೆಯ ಮೂರು ಅಂಶಗಳಲ್ಲಿ ಒಂದು ಅಂಶ ಮಾತ್ರ. ಶಕುಂತಳೆಯ ಅಧಿಕಾಂಶ ಅನಸೂಯಾ ಪ್ರಿಯಂವದೆಯರು. ಶಕುಂತಳೆಯು ಅಲ್ಪಾಂಶ ಮಾತ್ರ. ಮುಕ್ಕಾಲುಪಾಲು ಪ್ರೇಮಾಲಾಪವನ್ನು ಕೂಡ ಮನೋಹರವಾದ ರೀತಿಯಲ್ಲಿ ನಡೆಸಿದವರು ಅವರೇ. ತೃತೀಯಾಂಕದಲ್ಲಿ, ಏಕಾಕಿನಿಯಾದ ಶಕುಂತಳೆಯೊಂದಿಗೆ ದುಷ್ಯಂತನ ಪ್ರೇಮಾಕುಲತೆಯು ವರ್ಣಿತವಾಗಿರುವ ಸನ್ನಿವೇಶದಲ್ಲಿ ಕವಿಯು ಬಹುಮಟ್ಟಿಗೆ ದುರ್ಬಲನಾಗಿದ್ದನು. ಏತಕ್ಕಾಗಿಯೋ ಬಹು ಬೇಗ ಗೌತಮಿಯನ್ನು ಬರುವಂತೆ ಮಾಡಿ ಗಡ್ಡೆಗೆ ಬಿದ್ದನು—ಏಕೆಂದರೆ, ಯಾರು ಶಕುಂತಳೆಯನ್ನು ಅವೃತಳನ್ನಾಗಿ ಮಾಡಿ ಸಂಪೂರ್ಣಗೊಳಿಸಿದ್ದರೋ ಆ ಸಖಿಯರು

ಅಲ್ಲಿರಲಿಲ್ಲ. ತೊಟ್ಟುಕಳಚಿದ ಹೂವಿನಮೇಲೆ ಸೂರ್ಯನ ಉಜ್ಜ್ವಲವಾದ ಕಾಂತಿಯು ಬಿದ್ದರೆ ಅದು ಸಹ್ಯವಾಗುವುದಿಲ್ಲ. ತೊಟ್ಟಿನ ಬಂಧನ, ಎಲೆಯ ಸ್ವಲ್ಪಮಟ್ಟಿನ ಮರೆ—ಇವುಗಳಿಲ್ಲದೆ ಹೋದರೆ ಆ ಕಾಂತಿಯು ಹೂವಿನಮೇಲೆ ಅಷ್ಟು ಮನೋಹರ ವಾಗಿ ಕೋಮಲವಾಗಿ ಬೀಳುವುದಿಲ್ಲ. ನಾಟಕದ ಈ ಭಾಗದಲ್ಲಿ ಸಖೀ ವಿರಹಿತ ಳಾದ ಶಕುಂತಳೆಯು ಎಷ್ಟು ಸುಸ್ಪಷ್ಟವಾಗಿ ಅಸಹಾಯಳೂ ಅಸಂಪೂರ್ಣಳೂ ಅನಾವೃತಳೂ ಆಗಿ ಕಾಣುವಳೆಂದರೆ, ಆಕೆಯನ್ನು ಚೆನ್ನಾಗಿ ನೋಡುವುದಕ್ಕೆ ಕೂಡ ಸಂಕೋಚವಾಗುತ್ತದೆ. ಮಧ್ಯದಲ್ಲಿ ಆಕಸ್ಮಿಕವಾಗಿ ಆರ್ಯಗೌತಮಿಯು ಬಂದುದ ರಿಂದ ಪಾಠಕರು ಮನಸ್ಸಿನಲ್ಲಿ ಸ್ವಾಸ್ಥ್ಯವನ್ನು ಹೊಂದುತ್ತಾರೆ.

ರಾಜಸಭೆಯಲ್ಲಿ ದುಷ್ಯಂತನು ಶಕುಂತಳೆಯನ್ನು ಗುರುತಿಸಲಾರದೆ ಹೋದು ದಕ್ಕೆ ಆಕೆಯ ಜತೆಯಲ್ಲಿ ಅನಸೂಯಾಪ್ರಿಯಂವದೆಯರಿಲ್ಲದಿದ್ದುದೇ ಮುಖ್ಯ ಕಾರಣ ವಾಗಿದ್ದಿರಬೇಕೆಂದು ನಮ್ಮ ಮನಸ್ಸಿಗೆ ತೋರುತ್ತದೆ. ಒಬ್ಬಂಟಿಗಳಾಗಿ ತಪೋವ ನದ ಹೊರಗಿರುವ, ಎಂದರೆ ತಪೋವನದಿಂದ ಪ್ರತ್ಯೇಕಿಸಲ್ಪಟ್ಟ, ಶಕುಂತಳೆಯನ್ನು ಗುರುತಿಸುವುದು ಕಠಿಣವಾಗಬಹುದು.

ಶಕುಂತಳೆಯನ್ನು ಕಳುಹಿಸಿಕೊಟ್ಟು ಆಕೆಯ ಸಖಿಯರಿಬ್ಬರೂ ಶೂನ್ಯ ವಾದ ತಪೋವನಕ್ಕೆ ಹಿಂದಿರುಗಿದರಷ್ಟೆ; ಆಗ ಅವರಿಗೆ ಉಂಟಾದುದು ತಮ್ಮ ಬಾಲ್ಯಸ್ನೇಹಿತಳಿಂದ ಅಗಲಿದ ದುಃಖ ಒಂದು ಮಾತ್ರವೇ ? ಶಕುಂತಳೆಯ ಅಭಾವ ಮಾತ್ರವಲ್ಲದೆ ಈ ಮಧ್ಯೆ ತಪೋವನದಲ್ಲಿ ಮತ್ತಾವ ಪರಿವರ್ತನವೂ ಉಂಟಾಗ ಲಿಲ್ಲವೆ? ಅಯ್ಯೋ ಪಾಪ! ಅವರು ಜ್ಞಾನವೃಕ್ಷದ ಫಲವನ್ನು ತಿಂದರು; ಯಾವು ದರ ಜ್ಞಾನವಿರಲಿಲ್ಲವೋ ಅದರ ಜ್ಞಾನವನ್ನು ಪಡೆದುಕೊಂಡರು. ಆ ಜ್ಞಾನವನ್ನು ಪಡೆದುದು ಕಾವ್ಯದ ಕಾಲ್ಪನಿಕ ನಾಯಿಕೆಯ ವರ್ಣನೆಯನ್ನು ಓದಿ ಅಲ್ಲ, ಪ್ರಿಯ ತಮಳಾದ ತಮ್ಮ ಸಖಿಯ ವಿದೀರ್ಣವಾದ ಹೃದಯದಲ್ಲಿ ಪ್ರವೇಶಮಾಡಿ! ಹಾಗಾದಮೇಲೆ ಅಪರಾಹ್ನದಲ್ಲಿ ಗಿಡಗಳ ಪಾತೆಗಳಿಗೆ ನೀರೆರೆಯುತ್ತಿರುವಾಗ ಮಧ್ಯೆ ಮಧ್ಯೆ ಅವರು ವಿಸ್ಮೃತರಾಗುತ್ತಿರಲಿಲ್ಲವೆ? ಆ ಕಾಲದಲ್ಲಿ ಅವರು ಆಗಾಗ ಎಲೆಗಳ ಮರ್ಮರ ಶಬ್ದವನ್ನು ಕೇಳಿ ಚಕಿತರಾಗಿ ಅಶೋಕವೃಕ್ಷದ ಮರೆಯಲ್ಲಿ ಗುಪ್ತನಾಗಿ ಯಾವನೋ ಒಬ್ಬ ಆಗಂತುಕನಿರಬಹುದೆಂದು ಶಂಕೆಪಡುತ್ತಿರಲಿಲ್ಲವೆ? ಇನ್ನು ಜಿಂಕೆಯ ಮರಿಗೆ ಅವರ ಸಂಪೂರ್ಣವಾದ ಆದರವು ದೊರೆಯುವ ಸಂಭವವುಂಟೆ?

ಈಗ ಆ ಸಖೀಭಾವನಿರ್ಮುಕ್ತರೂ ಸ್ವತಂತ್ರರೂ ಆದ ಅನಸೂಯಾ ಪ್ರಿಯಂವದೆಯರನ್ನು ಮರ್ಮರಶಬ್ದದಿಂದ ಕೂಡಿದ ತಪೋವನದಲ್ಲಿ ಅವರ ಸ್ವಂತ

ಜೀವನಸ್ರೋತದ ಸೂತ್ರವನ್ನವಲಂಬಿಸಿ ಹುಡುಕಿ ಹಿಂದಿರುಗುತ್ತೇವೆ. ಅವರೇನೂ ಛಾಯಾಮಾತ್ರರಲ್ಲ; ಶಕುಂತಳೆಯ ಜತೆಗೇ ಅವರು ಒಂದು ದಿಕ್ಕಿನಿಂದ ಮತ್ತೊಂದು ದಿಕ್ಕಿನಲ್ಲಿ ಅಸ್ತವಾಗುವುದೂ ಇಲ್ಲ. ಅವರು ಜೀವಂತರು, ದೇಹವುಳ್ಳವರು. ರಚಿತಕಾವ್ಯದ ಹೊರಭಾಗದಲ್ಲಿ, ಅಭಿನಯಿಸಲ್ಪಡದ ನಾಟ್ಯದ ರಂಗಭೂಮಿಯಲ್ಲಿ, ಈಗಲೂ ಅವರು ಅಭಿವೃದ್ಧಿ ಹೊಂದಿ ಗೋಚರಿಸುತ್ತಾರೆ; ಗಟ್ಟಿಯಾಗಿ ಬಿಗಿದ ನಾರುಸೀರೆಯಿಂದ ಅವರು ತಮ್ಮ ಯೌವನವನ್ನು ಬಂಧಿಸಲು ಇನ್ನು ಅಶಕ್ತರಾಗಿದ್ದಾರೆ; ಈಗ ಅವರ ಮಂದಹಾಸದಮೇಲೆ ಅಂತರ್ಘನಭಾವದ ಆವೇಗವು ವರ್ಷಋತುವಿನ ಪ್ರಥಮ ಮೇಘಮಾಲೆಯಂತೆ ಅಶ್ರುಗಂಭೀರವಾದ ಛಾಯೆಯನ್ನು ಬೀರಿದೆ. ಈಗ ಆ ಅನ್ಯಮನಸ್ಕರ ಪರ್ಣಶಾಲೆಯ ಅಂಗಳಕ್ಕೆ ಬಂದ ಅತಿಥಿಯು ಹಿಂದಿರುಗಿ ಹೋಗುತ್ತಾನೆ; ನಾವೂ ಹಿಂದಿರುಗುತ್ತೇವೆ.

ಸಂಸ್ಕೃತಸಾಹಿತ್ಯದಲ್ಲಿ ಮತ್ತೊಬ್ಬಳು ಉಪೇಕ್ಷೆಗೀಡಾಗಿದ್ದಾಳೆ. ಪಾಠಕರಿಗೆ ಆಕೆಯ ಪರಿಚಯವನ್ನು ಮಾಡಿಕೊಡಲು ನಾವು ಹಿಂದೆಗೆಯುತ್ತೇವೆ. ಆಕೆಯೇನು ಅಷ್ಟು ದೊಡ್ಡವಳಲ್ಲ—ಕಾದಂಬರೀಕಥೆಯ ಪತ್ರಲೇಖೆ. ಆಕೆಯು ಯಾವ ಸ್ಥಳಕ್ಕೆ ಬಂದು ಅತಿ ಸ್ವಲ್ಪಸ್ಥಾನವನ್ನು ಆಶ್ರಯಿಸಿದಳೋ ಅಲ್ಲಿಗೆ ಆಕೆಯು ಬರಬೇಕಾದ ಆವಶ್ಯಕತೆಯೇನೂ ಇರಲಿಲ್ಲ. ಆ ಸ್ಥಾನವು ಆಕೆಗೆ ಅತಿ ಇಕ್ಕಟ್ಟಾದದ್ದು; ಕಾಲನ್ನು ಸ್ವಲ್ಪ ಅತ್ತ ಇತ್ತ ಕದಲಿಸಿದರೂ ಮಹಾಸಂಕಟ.

ಈ ಒಂದು ಆಖ್ಯಾಯಿಕೆಯಲ್ಲಿ ಪತ್ರಲೇಖೆಯು ಯಾವ ಸುಕುಮಾರ ಸಂಬಂಧಸೂತ್ರದಿಂದ ಕಟ್ಟಲ್ಪಟ್ಟಿರುವಳೋ ಅಂತಹ ಸಂಬಂಧವನ್ನು ಮತ್ತಾವ ಸಾಹಿತ್ಯದಲ್ಲಿಯೂ ನಾವು ಕಂಡಿಲ್ಲ. ಆದರೆ ಕವಿಯು ಈ ಅಪೂರ್ವಸಂಬಂಧವನ್ನು ಎಷ್ಟು ಸಹಜವಾಗಿಯೂ ಸರಳಚಿತ್ತದಿಂದಲೂ ನಿರೂಪಿಸುವನೆಂದರೆ ಈ ಊರ್ಣತಂತು* ಎಲ್ಲಿ ಹರಿದುಹೋಗುವುದೋ ಎಂಬ ಆಶಂಕೆಗೆ ಎಡೆಗುಡುವ ಒಂದು ತೊಡಕು ಕೂಡ ಬೀಳುವುದಿಲ್ಲ.

ಯುವರಾಜನಾದ ಚಂದ್ರಾಪೀಡನು ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ರಾಜಭವನಕ್ಕೆ ಹಿಂದಿರುಗಿ ಬಂದಮೇಲೆ ಒಂದಾನೊಂದು ಪ್ರಾತಃಕಾಲದಲ್ಲಿ ಕೈಲಾಸನೆಂಬ ಒಬ್ಬ ಕಂಚುಕಿಯು ಆತನ ಕೊಠಡಿಯೊಳಕ್ಕೆ ಬಂದನು. ಅವನ ಹಿಂದೆ ಹಿಂದೆಯೇ ಒಬ್ಬ ಕನ್ಯೆಯು ಬಂದಳು. ಆಕೆಗೆ ಆಗತಾನೇ ಯೌವನಪ್ರಾದು

* ಜೇಡರ ಹುಳುವಿನ ದಾರ.

ಭಾರ್ಗವಸಮಯ ; ಆಕೆಯ ತಲೆಯಮೇಲೆ ಮಿಂಚುಹುಳುವಿನಂತೆ ಕೆಂಪಾದ ಮೇಲು ಮುಸುಕು ; ಹಣೆಯಲ್ಲಿ ಚಂದನದ ತಿಲಕ ; ನಡುವಿನಲ್ಲಿ ಬಂಗಾರದ ಡಾಬು; ಕೋಮಲವಾದ ತನುಲತೆಯಲ್ಲಿ ಪ್ರತಿಯೊಂದು ರೇಖೆಯೂ ಆಗತಾನೇ ಹೊಸದಾಗಿ ಗುರುತುಮಾಡಿದಂತಿತ್ತು. ಇಂತಹ ಕನ್ಯೆಯು ತನ್ನ ಲಾವಣ್ಯಕಾಂತಿಯ ಪ್ರಭಾವ ದಿಂದ ಅರಮನೆಯನ್ನು ತುಂಬುತ್ತ ದನಿಗುಡುವ ಮಣಿನೂಪುರಗಳುಳ್ಳ ಹೆಜ್ಜೆಗಳನ್ನಿ ಡುತ್ತ ಕಂಚುಕಿಯ ಹಿಂದೆ ಹಿಂದೆ ಬಂದಳು.

ಕಂಚುಕಿಯು ಯುವರಾಜನಿಗೆ ಪ್ರಣಾಮ ಮಾಡಿ ನೆಲದಮೇಲೆ ತನ್ನ ಬಲ ಗೈಯನ್ನಿಟ್ಟು ಹೀಗೆ ವಿಜ್ಞಾಪಿಸಿದನು :—" ಕುಮಾರ, ನಿಮ್ಮ ತಾಯಿ ವಿಲಾಸ ವತೀ ಮಹಾದೇವಿಯವರು ಈ ರೀತಿ ತಿಳಿಸುತ್ತಾರೆ.—' ಈ ಕನ್ಯೆಯು ಪರಾಜಿತ ನಾದ ಕುಲೂತೇಶ್ವರನ ಮಗಳು ; ಸೆರೆಸಿಕ್ಕಿದವಳು. ಈಕೆಯ ಹೆಸರು ಪ್ರತಲೇಖೆ. ಅನಾಥೆಯಾದ ಈ ರಾಜಕುಮಾರಿಯನ್ನು ನನ್ನ ಮಗಳಂತೆಯೇ ನಾನು ಇಷ್ಟು ದಿವಸವೂ ಸಲಹಿದೆ ; ಈಗ ಈಕೆಯನ್ನು ನಿನ್ನ ತಾಂಬೂಲದ ಊಳಿಗದವಳನ್ನಾಗಿ ಗೊತ್ತುಮಾಡಿ ಕಳುಹಿದ್ದೇನೆ. ಈಕೆಯನ್ನು ಸಾಮಾನ್ಯ ಸೇವಕಳಂತೆ ಕಾಣಬೇಡ ; ಬಾಲಿಕೆಯಂತೆ ಲಾಲಿಸಿ ನಿನ್ನ ಚಿತ್ತವೃತ್ತಿಯಂತೆ ಚಾಪಲ್ಯದಿಂದ ನಿವಾರಿಸು ; ಶಿಷ್ಯ ಳಂತೆ ನೋಡು; ಸ್ನೇಹಿತಳಂತೆ ಈಕೆಯನ್ನು ಎಲ್ಲಾ ರಹಸ್ಯವಿಚಾರಗಳಲ್ಲಿಯೂ ಸೇರಿಸಿಕೊ ; ಮತ್ತು ಈ ಮಂಗಳಾಂಗಿಯು ನಿನ್ನ ಅತಿಥಿಗಳಿಗೆ ಸೇವಕಳಾಗಿ ಯಾವಯಾವ ಕೆಲಸವನ್ನು ಮಾಡಬೇಕಾಗುತ್ತದೆಯೋ ಅದೆಲ್ಲವನ್ನೂ ಇವಳಿಂದ ಮಾಡಿಸು.'' ಕೈಲಾಸನು ಈ ಮಾತನ್ನು ಮುಗಿಸುತ್ತಲೇ ಪತ್ರಲೇಖೆಯು ಯುವ ರಾಜನಿಗೆ ಉಚಿತರೀತಿಯಲ್ಲಿ ಪ್ರಣಾಮಮಾಡಿದಳು. ಚಂದ್ರಾಪೀಡನು ಆಕೆಯನ್ನು ಸ್ವಲ್ಪ ಹೊತ್ತಿನವರೆಗೂ ಎವೆಯಿಕ್ಕದೆ ನೋಡಿ ಅನಂತರ ಕಂಚುಕಿಯನ್ನು ಕುರಿತು " ಮಾತೃಶ್ರೀಯವರು ಹೇಗೆ ಆಜ್ಞೆಮಾಡಿದ್ದಾರೆಯೋ ಹಾಗೆಯೇ ಆಗಲಿ ! '' ಎಂದು ಹೇಳಿ ಅವನನ್ನು ಕಳುಹಿಸಿದನು.

ಪತ್ರಲೇಖೆಯು ಪತ್ನಿಯಲ್ಲ, ಪ್ರಿಯಳಲ್ಲ, ಸೇವಕಿಯೂ ಅಲ್ಲ ; ಪುರುಷನ ಸಹಚರಿ. ಈರೀತಿಯಾದ ಅಪೂರ್ವ ಸಖೀತ್ವವು ಎರಡು ಸಮುದ್ರಗಳ ಮಧ್ಯೆ ಇರುವ ಒಂದು ಮರಳು ದಿಣ್ಣೆಯಂತೆ—ಅದು ಉಳಿಯುವ ಬಗೆ ಹೇಗೆ ? ನವಯೌವನ ಶಾಲಿಗಳಾದ ಸ್ತ್ರೀಪುರುಷರಲ್ಲಿ ಅನಾದಿಯೂ ಚಿರಂತನವೂ ಪ್ರಬಲವೂ ಆಗಿ ಇರುವ ಆಕರ್ಷಣವು ಎರಡು ಕಡೆಯಿಂದಲೂ ಈ ಚಿಕ್ಕದಾದ ಕಟ್ಟೆಯನ್ನು ಧ್ವಂಸಮಾಡಿ ಮೇಲೆ ನುಗ್ಗದಿರುವುದು ಹೇಗೆ ?

ಆದರೆ ಕವಿಯು ಅನಾಥಳಾದ ಈ ರಾಜಕುಮಾರಿಯನ್ನು ಈ ಅಪ್ರಶಸ್ತ
ವಾದ ಆಶ್ರಯದಲ್ಲಿಯೇ ಶಾಶ್ವತವಾಗಿ ಸೇರಿಸಿಬಿಟ್ಟಿದ್ದಾನೆ. ಈ ಎಲ್ಲೆಯಿಂದ
ಒಂದು ಗೆರೆಯಷ್ಟಾದರೂ ಆಕೆಯನ್ನು ಹೊರಗೆ ಹೋಗಗೊಡಿಸಿಲ್ಲ. ಹತಭಾಗಿನಿ
ಯಾಗಿ ಸೆರೆಸಿಕ್ಕಿದವಳ ವಿಷಯದಲ್ಲಿ ಕವಿಯು ಇದಕ್ಕಿಂತಲೂ ಹೆಚ್ಚಾಗಿ ತೋರಿಸ
ಬಹುದಾದ ಅನಾದರವು ಇನ್ನಾವುದಿರಬಲ್ಲುದು ? ಒಂದು ಸೂಕ್ಷ್ಮವಾದ ಪರ
ದೆಯ ಅಂತರದಲ್ಲಿ ವಾಸಮಾಡುತ್ತಿದ್ದರೂ ಆಕೆಯು ತನಗೆ ಸ್ವಾಭಾವಿಕವಾಗಿ
ಸಲ್ಲಬೇಕಾದ ಸ್ಥಾನವನ್ನು ಪಡೆಯಲಿಲ್ಲ. ಪುರುಷನ ಹೃದಯದ ಪಾರ್ಶ್ವದಲ್ಲಿಯೇ
ಆಕೆಯು ಜಾಗರಿತಳಾಗಿ ಇದ್ದಳು. ಆದರೆ ಒಳಗೆಮಾತ್ರ ಹೆಜ್ಜೆಯನ್ನಿಡಲಿಲ್ಲ.
ವಿಚಾರಶೂನ್ಯವಾದ ವಸಂತಮಾರುತದಿಂದಲಾದರೂ ಒಂದು ದಿನವೂ ಈ ಸಖೀ
ತ್ವದ ಪರದೆಯ ಒಂದು ತುದಿಯಾದರೂ ಓರೆಯಾಗಲಿಲ್ಲ.

ಅಲ್ಲದೆ ಅವರ ಗೆಳೆತನದಲ್ಲಿ ಲೇಶಮಾತ್ರವಾದರೂ ಅಂತರಾಳವಿರಲಿಲ್ಲ. ಕವಿಯ
ಮಾತಿನಂತೆ, ಪತ್ರಲೇಖೆಯು ಚಂದ್ರಾಪೀಡನ ದರ್ಶನಮಾತ್ರದಿಂದಲೇ ಆತನ ಸೇವೆ
ಯಲ್ಲಿ ಅನುರಕ್ತಳಾಗಿ ಆ ಪ್ರಥಮದಿನದಿಂದಲೂ ಹಗಲೆನ್ನದೆ ರಾತ್ರಿಯೆನ್ನದೆ ಕುಳಿ
ತಿರುವಾಗಲೂ ನಿಂತಿರುವಾಗಲೂ ಸಂಚರಿಸುತ್ತಿರುವಾಗಲೂ ನೆರಳೋ ಎಂಬಂತೆ
ಆತನ ಪಾರ್ಶ್ವವನ್ನು ಬಿಡದೆ ಇರುತ್ತಿದ್ದಳು. ಆಕೆಯನ್ನು ನೋಡಿದಂದಿನಿಂದ
ಚಂದ್ರಾಪೀಡನಿಗೂ ಆಕೆಯಲ್ಲಿ ಕ್ಷಣಕ್ಷಣಕ್ಕೂ ಹೆಚ್ಚುತ್ತಿದ್ದ ಮಹತ್ಪ್ರೀತಿಯುಂಟಾ
ಯಿತು. ಯಾವಾಗಲೂ ಆಕೆಗೆ ಆದರವನ್ನು ತೋರಿಸುತ್ತಿದ್ದನು ; ವಿಶ್ವಾಸಾರ್ಹ
ವಾದ ಎಲ್ಲ ಕಾರ್ಯಗಳಲ್ಲಿಯೂ, ತನ್ನ ಹೃದಯ ಬೇರೆಯಲ್ಲ ಆಕೆ ಬೇರೆಯಲ್ಲ
ಎಂದು ಭಾವಿಸಲಾರಂಭಿಸಿದನು.

ಈ ಸಂಬಂಧವು ಅಪೂರ್ವ ಮಧುರವಾದದ್ದು; ಆದರೆ ಇದರಲ್ಲಿ ನಾರೀ-ಅಧಿ
ಕಾರದ ಸಂಪೂರ್ಣತೆಯಿಲ್ಲ. ಹೆಂಗಸಿಗೆ ಹೆಂಗಸಿನಲ್ಲಿ ಲಜ್ಜಾಸಂಕೋಚಗಳಿಲ್ಲದ
ಯಾವ ಸ್ನೇಹಸಂಬಂಧವಿರಬಹುದೋ ಅಂತಹ ಸಂಕೋಚರಹಿತವೂ ಅನವಚ್ಛಿ
ನ್ನವೂ ಆದ ಸಾಮೀಪ್ಯಸಂಬಂಧವು ಪತ್ರಲೇಖೆಗೆ ಪುರುಷನೊಡನೆಯೂ ಇರು
ವಂತೆ ಮಾಡಿ ಕಾದಂಬರೀಕಾವ್ಯವು ಸ್ತ್ರೀಮರ್ಯಾದಾವಿಷಯದಲ್ಲಿ ತೋರಿಸುವ
ಅವಜ್ಞೆಯು ಪಾಠಕರ ಮನಸ್ಸನ್ನು ನೋಯಿಸುವುದಿಲ್ಲವೇ ? ಏತರಿಂದ ನೋಯಿ
ಸುತ್ತದೆ ? ಆಶಂಕೆಯಿಂದಲ್ಲ, ಸಂಶಯದಿಂದಲ್ಲ ; ಏಕೆಂದರೆ, ಕವಿಯು ಸಂಶಯ
ಮತ್ತು ಆಶಂಕೆಗಳಿಗೆ ಲೇಶಮಾತ್ರವಾದರೂ ಅವಕಾಶವನ್ನು ಕೊಟ್ಟಿದ್ದ ಪಕ್ಷದಲ್ಲಿ
ಅದನ್ನು ಪತ್ರಲೇಖೆಯ ಸ್ತ್ರೀತ್ವಕ್ಕೆ ಆತನು ತೋರಿಸಿದ ಒಂದು ರೀತಿಯ ಗೌರವ
ವೆಂದೇ ನಾವು ಎಣಿಸುತ್ತಿದ್ದೆವು. ಆದರೆ ಈ ಯುವಕ ಯುವತಿಯರಲ್ಲಿ ಲಜ್ಜೆ

ಆಶಂಕೆ ಸಂಕೋಚಗಳ ಸ್ನಿಗ್ಧಚ್ಛಾಯೆಯ ಸುಳಿವು ಕೂಡ ಇಲ್ಲ. ಪತ್ರಲೇಖೆಯು ಈ ಅಪೂರ್ವವಾದ ಸಂಬಂಧವಿದ್ದದ್ದರಿಂದ ಅಂತಃಪುರವನ್ನಂತೂ ತ್ಯಾಗಮಾಡಿದಳು. ಆದರೆ ಸ್ತ್ರೀಪುರುಷರು ಪರಸ್ಪರ ಸಮೀಪವರ್ತಿಗಳಾದಾಗ, ಸಂಕೋಚ ಸಂಭ್ರಮ ಮಂದಹಾಸ ಛಲ ಇವುಗಳಿಂದ ಸಲೀಲವೂ ಸಕಂಪವೂ ಆದ ಯಾವ ಮಾನಸಿಕ ಅಂತರಾಳವು ತಾನಾಗಿ ತಾನು ಹುಟ್ಟಬಹುದೋ ಅದೂ ಇವರಲ್ಲಿ ಉಂಟಾಗುವುದಿಲ್ಲ. ಆದಕಾರಣವೇ ಈ ಅಂತಃಪುರಚ್ಯುತಳಾದ ಅಂತಃಪುರಸ್ತ್ರೀಯಲ್ಲಿ ಸರ್ವದಾ ದುಃಖವುಂಟಾಗುತ್ತದೆ.

ಚಂದ್ರಾಪೀಡನಿಗೂ ಪತ್ರಲೇಖೆಗೂ ಇರುವ ಸಾಮೀಪ್ಯವೂ ಅಸಾಮಾನ್ಯವಾದದ್ದು. ದಿಗ್ವಿಜಯಯಾತ್ರಾಸಮಯದಲ್ಲಿ ರಾಜಕುಮಾರನು ಒಂದೇ ಆನೆಯ ಮೇಲೆ ಪತ್ರಲೇಖೆಯನ್ನು ಮುಂದೆ ಕೂರಿಸಿಕೊಂಡು ಕುಳಿತುಕೊಂಡನು. ಶಿಬಿರದಲ್ಲಿ ರಾತ್ರಿಯಹೊತ್ತು ಚಂದ್ರಾಪೀಡನು ತನ್ನ ಹಾಸಿಗೆಯ ಸಮೀಪದಲ್ಲಿ ಮಲಗಿದ್ದ ತನ್ನ ಸ್ನೇಹಿತನಾದ ವೈಶಂಪಾಯನನೊಂದಿಗೆ ಮಾತನಾಡುತ್ತಿದ್ದಾಗಲೂ, ಸಖಿಯಾದ ಪತ್ರಲೇಖೆಯು ಹತ್ತಿರದಲ್ಲಿಯೇ ರತ್ನಗಂಬಳಿಯಮೇಲೆ ಮಲಗಿದ್ದಳು.

ಕೊನೆಗೆ, ಕಾದಂಬರಿಯೊಂದಿಗೆ ಚಂದ್ರಾಪೀಡನಿಗೆ ಪ್ರೇಮಸಂಘಟನೆಯಾದಾಗಲೂ ಪತ್ರಲೇಖೆಯು ತನ್ನ ಸ್ವಲ್ಪಸ್ಥಾನದಲ್ಲಿ ನಿರುಪಾಧಿಕವಾಗಿ ನಿಂತಳು. ಇದಕ್ಕೆ ಕಾರಣವೇನೆಂದರೆ ಪುರುಷನ ಮನಸ್ಸಿನಲ್ಲಿ ಸ್ತ್ರೀಗೆ ದೊರೆಯಬಹುದಾದ ಸ್ಥಾನದಲ್ಲಿ ಆಕೆಗೆ ಅತ್ಯಂತ ಸ್ವಲ್ಪಸ್ಥಾನ ಮಾತ್ರ ದೊರೆತಿತ್ತು. ಆ ಮನಸ್ಸಿನಲ್ಲಿ ಮಹಾಮಹೋತ್ಸವಕ್ಕಾಗಿ ಸ್ಥಳವನ್ನು ಏರ್ಪಡಿಸಬೇಕಾದಾಗಲೂ ಆಕೆಯನ್ನು ಈ ಸ್ವಲ್ಪಸ್ಥಳದಿಂದ ತಪ್ಪಿಸುವ ಅಗತ್ಯವೇ ಇರಲಿಲ್ಲ.

ಪತ್ರಲೇಖೆಯಮೇಲೆ ಕಾದಂಬರಿಗೆ ಮಾತ್ಸರ್ಯದ ಆಭಾಸವು ಕೂಡ ಇರಲಿಲ್ಲ. ಅಷ್ಟೇಕೆ ? ಚಂದ್ರಾಪೀಡನೊಂದಿಗೆ ಪತ್ರಲೇಖೆಗೆ ಪ್ರೀತಿಸಂಬಂಧವಿರುವುದೆಂದೇ ಕಾದಂಬರಿಯು ಆಕೆಯನ್ನು ತನ್ನ ಪ್ರಿಯಸಖಿಯೆಂದು ಆದರದಿಂದ ಸ್ವೀಕರಿಸಿದಳು. ಕಾದಂಬರೀಕಾವ್ಯದಲ್ಲಿ ಪತ್ರಲೇಖೆಯು ಯಾವ ಭಾಗದಲ್ಲಿದ್ದಳೋ ಆ ಭೂಭಾಗದಲ್ಲಿ ಈರ್ಷೆ ಸಂಶಯ ಸಂಕಟ ವೇದನೆ ಯಾವುದೂ ಇಲ್ಲ ; ಅದು ಸ್ವರ್ಗದಂತೆ ನಿಷ್ಕಂಟಕವಾದದ್ದು; ಆದರೆ ಅಲ್ಲಿ ಸ್ವರ್ಗದ ಅಮೃತಬಿಂದುವೆಲ್ಲಿಯದು ?

ಯಥೇಚ್ಛವಾದ ಪ್ರೇಮಾಮೃತಪಾನವು ಆಕೆಯ ಎದುರಿಗೇ ನಡೆಯುತ್ತದೆ. ಎಂದಾದರೂ ಒಂದು ದಿವಸ ಅದರ ಸುವಾಸನೆಯಿಂದಾದರೂ ಆಕೆಯ ಒಂದು ರಕ್ತನಾಳದಲ್ಲಿನ ರಕ್ತವು ಚಂಚಲವಾಗುವುದಿಲ್ಲವೇ ? ಆಕೆಯೇನು ಚಂದ್ರಾಪೀಡನ ನೆರಳು

ಮಾತ್ರವೇ ? ಕವಿಯು ಈ ಪ್ರಶ್ನೆಗೆ ಉತ್ತರಕೊಡುವುದಕ್ಕೆ ಕೂಡ ತಾತ್ಸಾರ ಮಾಡಿದ್ದಾನೆ; ಕಾವ್ಯಸೃಷ್ಟಿಯಲ್ಲಿ ಆಕೆಯು ಇಷ್ಟು ಉಪೇಕ್ಷಿತಳು.

ಪತ್ರಲೇಖೆಯು ಕೆಲವು ಕಾಲ ಕಾದಂಬರಿಯೊಡನೆ ವಾಸಮಾಡುತ್ತಿದ್ದು, ಆಕೆಯ ವರ್ತಮಾನದೊಂದಿಗೆ ಚಂದ್ರಾಪೀಡನ ಬಳಿಗೆ ಹಿಂದಿರುಗಿಬಂದು ಮುಗುಳು ನಗೆಯೊಡನೆ ದೂರದಿಂದಲೇ ಚಂದ್ರಾಪೀಡನಲ್ಲಿ ತನಗಿರುವ ಪ್ರೀತಿಯನ್ನು ಪ್ರಕಾಶ ಪಡಿಸಿ ನಮಸ್ಕಾರಮಾಡಿದಾಗ ಪತ್ರಲೇಖೆಯು ಸ್ವಭಾವತಃ ಪ್ರಿಯಳಾಗಿದ್ದರೂ ಕಾದಂಬರಿಯಿಂದ ಅನುಗ್ರಹವನ್ನು ಪಡೆದ ಅದೃಷ್ಟಶಾಲಿನಿಯಂತೆ ಹೆಚ್ಚು ಪ್ರಿಯ ಳಾದಳು. ಯುವರಾಜನು ಆಕೆಗೆ ಹೆಚ್ಚು ಆದರವನ್ನು ತೋರಿಸಿ ಪೀಠದಿಂದೆದ್ದು ಆಕೆಯನ್ನು ಆಲಿಂಗನಮಾಡಿಕೊಂಡನು.

ಚಂದ್ರಾಪೀಡನ ಈ ಆದರ ಈ ಆಲಿಂಗನಗಳ ಮೂಲಕವೇ ಪತ್ರಲೇಖೆಯು ಕವಿಯ ಅನಾದರಕ್ಕೆ ಪಾತ್ರಳಾದವಳಾಗಿದ್ದಾಳೆ. ನಾವು ಕವಿಯನ್ನು ಕಣ್ಣುಕಾ ಣದೇ ಹೋಗಿರುವ ಕುರುಡನೆಂದು ಕರೆಯುತ್ತೇವೆ. ಕಾದಂಬರೀ ಮಹಾಶ್ವೇತೆಯರ ಕಡೆಗೆ ಒಂದೇ ಸಮನಾಗಿ ದೃಷ್ಟಿಸಿ ನೋಡುತ್ತಿದ್ದು ಆತನ ಕಣ್ಣು ಮಂಜಾಗಿ ಹೋಯಿತು. ಈ ಕ್ಷುದ್ರಳಾದ ಸೆರೆಸಿಕ್ಕಿದವಳನ್ನು ಆತನು ಕಾಣಲಾರದೇ ಹೋದನು. ಆಕೆಯಲ್ಲಿಯೂ ಪ್ರಣಯತೃಷಾರ್ತವೂ ಚಿರವಂಚಿತವೂ ಆದ ನಾರೀ ಹೃದಯವಿದೆಯೆಂಬುದನ್ನು ಆತನು ಸಂಪೂರ್ಣವಾಗಿ ಮರೆತುಬಿಟ್ಟನು. ಬಾಣಭಟ್ಟನ ಕಲ್ಪನೆಯು ಮುಕ್ತಹಸ್ತವಾದದ್ದು; ಅಸ್ಥಾನದಲ್ಲಿಯೂ ಅಪಾತ್ರದಲ್ಲಿಯೂ ಕೂಡ ಆತನು ಅದನ್ನು ಸಂತತವಾಗಿ ಸುರಿಸಿ ಹೋಗಿದ್ದಾನೆ. ಆತನ ಕೃಪಣತೆಯೆಲ್ಲವೂ ಈ ಅನಾಥಳಾದ ರಾಜಕುಮಾರಿಯೊಬ್ಬಳ ವಿಷಯದಲ್ಲಿ ಮಾತ್ರವೆ. ಆತನು ಪಕ್ಷ ಪಾತದೂಷಿತವಾದ ಗಾಢಾಂಧಕಾರವಶನಾಗಿ ಪತ್ರಲೇಖೆಯ ಹೃದಯದ ನಿಗೂಢ ತಮವಾದ ವಿಷಯವನ್ನು ಸ್ವಲ್ಪವೂ ತಿಳಿದುಕೊಳ್ಳಲಿಲ್ಲ. ಆತನು ಮನಸ್ಸಿನಲ್ಲಿ ಎಂದುಕೊಂಡದ್ದೇನೆಂದರೆ, ''ಸಮುದ್ರದ ಅಲೆಗೆ ತಾನು ಎಷ್ಟುದೂರ ಬರಬಹುದೆಂದು ಅನುಮತಿಯನ್ನಿತ್ತನೋ ಅದು ಅಷ್ಟುದೂರ ಮಾತ್ರ ಬಂದು ನಿಂತಿದೆ—ಪೂರ್ಣ ಚಂದ್ರೋದಯವಾದಾಗಲೂ ಅದು ತನ್ನ ಆಜ್ಞೆಯನ್ನು ಮೀರುವುದಿಲ್ಲ'' ಎಂದು. ಆದಕಾರಣವೇ ಕಾದಂಬರಿಯನ್ನು ಓದಿದಮೇಲೆ ನಮ್ಮ ಮನಸ್ಸಿನಲ್ಲಿ '' ಮಿಕ್ಕ ಎಲ್ಲಾ ನಾಯಿಕೆಯರ ಕಥೆಯೂ ಅನಾವಶ್ಯಕವಾದ ಬಾಹುಳ್ಯದಿಂದ ವರ್ಣಿತವಾ ಗಿದೆ. ಪತ್ರಲೇಖೆಯ ಕಥೆಯು ಮಾತ್ರ ಸ್ವಲ್ಪವೂ ವರ್ಣಿತವಾಗಿಲ್ಲ '' ಎನ್ನಿಸುತ್ತದೆ.

---

# ಶಾನುಭೋಗನ ಪುಣ್ಯ.

" ತಾಯಿ ! "

" ಯಾರಪ್ಪ? "

" ನಾನು ತಾಯಿ ; ಬಾಗಿಲು ! "

ಬಾಗಿಲು ತೆಗೆಯಿತು ; ಮುಸುಕುಹಾಕಿಕೊಂಡು ಹೊರಗೆ ನಿಂತಿದ್ದವನೊಬ್ಬನು ಹೆದರಿಕೊಂಡಿದ್ದವನಂತೆ ಆಕಡೆ ಈಕಡೆ ನೋಡಿ ಒಳಕ್ಕೆ ಹೋಗಿ ಬಾಗಿಲು ಅಗಣಿಯನ್ನು ಹಾಕಿಕೊಂಡನು.

" ಏನಪ್ಪ ಇಷ್ಟುಹೊತ್ತಿನಲ್ಲಿ ಬಂದೆ ? "

" ಇನ್ನೇನು ಮಾಡೋದು ತಾಯಿ ? ಹಗಲು ಹೊತ್ತು ಸರ್ಕಾರಿ ದಪೇದಾರ‍್ರು ನಿಮ್ಮೂರಿಗೆ ಬಂದು ಬದುಕಬಹುದೇ ? "

" ಮತ್ತೆ ನಾವು ಯಾವಾಗಲೂ ಇಲ್ಲಿಯೇ ಹ್ಯಾಗಿರಬೇಕು ? "

" ಅದು ಹ್ಯಾಗಿದ್ದೀರೋ ತಾಯಿ ! ನಿಮ್ಮ ಪುಣ್ಯ ಒಳ್ಳೇದು ; ರಾಮಣ್ಣನವರು ಆಗುವಹೊತ್ತಿಗೆ ಈ ಶಾನುಭೋಗಿಕೆ ನಡೆಸುತ್ತಾರೆ; ಇಲ್ಲದೆ ಇದ್ದರೆ ಸರ್ಕಾರದವರು ಕೈಮುಗಿದು ಹೊರಟು ಹೋಗೋದೇ ! "

" ಅದಿರಲಿ ಜವರಪ್ಪ, ಕೈಕಾಲುತೊಳಕೊ ಏಳು, ಊಟ ಮಾಡುವೆಯಂತೆ ; ಆಗಲೆ ಹತ್ತುಗಂಟೆ ಹೊಡೆದು ಹೋಯಿತು. "

" ನನಗೆ ಊಟವಾಗಿದೆ ಕಣವ್ವ ; ಶಾನುಭೋಗರನ್ನ ಈಗಲೇ ನೋಡಬೇಕಾಗಿತ್ತಲ್ಲವ್ವ; ಎಲ್ಲಿ ಅವರು ? ಹಳ್ಳೀಕಡೆಗೆ ಯಾವಾಗ ಬರೋಣ ಕೇಳಿಕೊಂಡು ಬಾ ಅಂತ ಹೇಳಿ ಕಳುಹಿಸವ್ರೆ, ಸಾಹೇಬರು "

" ಯಾವ ಸಾಹೇಬರು ? "

"ಸಬ್‌ಡಿವೀಜನ್ ಸಾಹೇಬರು ಡೆಪ್ಟೀಕಮೀಶನ್ ಸಾಹೇಬರು ಇಬ್ಬರೂ. . ."

" ಇಲ್ಲಿಗೆ ಬಂದಿದಾರೇನು ? "

" ಇಲ್ಲಿಗೆ ಹೇಗೆ ಬಂದಾರು ತಾಯಿ ಶಾನುಬೋಗರು ಹೇಳದೆ ! ದಾರೀಲಿ ತಲೆಗಿಲೆ ಒಡೆಸಿಕೊಳ್ಳೋಕೆ ! "

" ಸಾವಿರ ರೂಪಾಯಿ ಸರ್ಕಾರದ ಸಂಬಳ ತಿನ್ನೋರಿಗೇ ಹೀಗಾದಮೇಲೆ ನಾವು ಹೆಣ್ಣು ಹೆಂಗಸರು ಚಿಕ್ಕಪುಟ್ಟ ಮಕ್ಕಳನ್ನು ಕಟ್ಟಿಕೊಂಡು ಹ್ಯಾಗೆ ಇರು

ವದು ? ನೋಡಪ್ಪ ಅರ್ಧರಾತ್ರಿಯಾಗಿದೆ, ಇನ್ನೂ ಶಾನುಭೋಗರು ಬಂದಿಲ್ಲ; ಒಂದೊಂದು ದಿನ ಬಂದರೆ ಬಂದರು ಇಲ್ಲದಿದ್ದರೆ ಇಲ್ಲ.''

" ಅಷ್ಟಲ್ಲದೆ ಈ ಸಂಸಾರ ನಡೀತದೇನವ್ವಾ; ಆ ಶಾನುಭೋಗರಿಗೆ ತಕ್ಕ ಹೆಂಡತಿಯೇ ಕಣವ್ವ ನೀನೂವೆ ; ಏನೂ ಅಡ್ಡಿ ಇಲ್ಲ''

ಲಕ್ಷ್ಮೀದೇವಮ್ಮನಿಗೆ ನಗು ಬಂತು ; ಕೂಡಲೆ ಸ್ವಲ್ಪ ಗಂಭೀರವಾಗಿ

" ನಾನೇನು ಮಾಡುತೇನಪ್ಪ ! ನಮ್ಮ ನಡೆನುಡಿ ಚೆನ್ನಾಗಿಟ್ಟುಕೊಂಡಿದ್ದರೆ ಕಾಪಾಡುವ ದೇವರು ಹ್ಯಾಗೋ ಕಾಪಾಡುತಾನೆ.''......

(೨)

ಲಕ್ಷ್ಮೀದೇವಮ್ಮನು ಶಾನುಭೋಗ ರಾಮಣ್ಣನವರ ಹೆಂಡತಿ. ಈಗ ಶಾನುಭೋಗ ರಾಮಣ್ಣನವರು ಯಾರೋ ಯಾರೂ ಅರಿಯರು. ಅವರ ಮನೆತನವು ಈಗ ಸಿಡಿಲುಬಡಿದ ಮರದಂತೆ ಎಲ್ಲಾ ಬೋಳಾಗಿ ಎಲ್ಲೋ ಒಂದು ಕುಡಿ ಅಂಟಿಕೊಂಡಿದೆ. ಆದರೆ ಈಗ್ಗೆ ಸುಮಾರು ಮುವ್ವತ್ತು ನಲವತ್ತು ವರ್ಷದ ಕೆಳಗೆ ನಮ್ಮ ಪ್ರಾಂತದಲ್ಲಿ ಅವರ ಹೆಸರನ್ನು ಕೇಳದಿದ್ದವರೇ ಇರಲಿಲ್ಲ. ಸರ್ಕಾರದಲ್ಲಿ ಅವರ ಹೆಸರು ದಿವಾನರವರೆಗೂ ಪರಿಚಯವಾಗಿತ್ತು. ಅಮಲ್ದಾರರು ಡೆಪ್ಯುಟೀ ಕಮಿಷನರೂ ಅವರ ಗ್ರಾಮಕ್ಕೆ ಬರಬೇಕಾದರೆ ಮುಂಚೆ ರಾಮಣ್ಣನವರಿಗೆ ಹೇಳಿಕಳುಹಿಸಿದಲ್ಲದೆ ಬರುತ್ತಿರಲಿಲ್ಲ. ಏಕೆಂದರೆ ಆ ಸುತ್ತೆಲ್ಲಾ ಬಹು ಪುಂಡುಕೊಂಪೆ. ಹಗಲು ಹೊತ್ತೇ ದರೋಡೆಗಳು ನಡೆದುಬಿಡುವುವು. ಸರ್ಕಾರದ ನೌಕರರು ವಸೂಲಿ ಹರಾಜು ಜಮಾಬಂದಿ ಮುಂತಾದವುಗಳಿಗೆ ಬರೋಣವೆಂದರೇನು ! ಅಂಥ ಕೊಂಪೆಯನ್ನು ರಾಮಣ್ಣನವರು ನಯಭಯಗಳಿಂದ ತಮ್ಮ ಕೈಯಲ್ಲಿಟ್ಟುಕೊಂಡಿದ್ದರು. ಆದ್ದರಿಂದ ಸರ್ಕಾರದ ನೌಕರರು ಆತನನ್ನು ಬೆನ್ನಹಿಂದೆ ಇಟ್ಟುಕೊಳ್ಳದೆ ಅಲ್ಲಿಗೆ ಕಾಲಿಡುತ್ತಿರಲಿಲ್ಲ. ಆತನ ದರ್ಪವೂ ಧಾರಾಳವೂ ಅದಕ್ಕೆ ತಕ್ಕಂತೆಯೇ ಇದ್ದುವು. ಆದರೂ ಸ್ವಲ್ಪ ಹಿಂದಿನ ವಾಂಛಿಲ್ಯ ಹೆಚ್ಚು; ಸ್ನಾನ ಆಹ್ನಿಕ ಪೂಜೆಗಳಿಲ್ಲದೆ ಹೊರಕ್ಕೆ ಹೊರಡುತ್ತಿರಲಿಲ್ಲ ; ಸ್ನಾನಮಾಡಿ ದೇವರ ಮನೆಗೆ ಹೊರಟುಹೋದನೆಂದರೆ ಡೆಪ್ಯುಟೀ ಕಮಿಷನರು ಹೇಳಿಕಳುಹಿಸಿದರೂ ' ಸ್ನಾನಮಾಡಿದ್ದಾರೆ, ಈಗ ಮಾತನಾಡುವುದಿಲ್ಲ ' ಎಂದು ಉತ್ತರ ಬರುತ್ತಿತ್ತು, ಅವರೂ ಇಂಥ ಉತ್ತರಗಳಿಗೆ ಪರಿಚಿತರಾಗಿದ್ದರು. ಮನೆಯೂ ಮನೆಯ ನಡೆವಳಿಕೆಯೂ ಡೆಪ್ಯುಟಿಕಮಿಷನರುಗಳನ್ನು ಇಳಿಸಿಕೊಂಡು ಉಪಚಾರ ಮಾಡುವುದಕ್ಕೆ ಯೋಗ್ಯವಾದವುಗಳೇ ಆಗಿದ್ದುವು. ಮನೆಯಲ್ಲಿ ಯಾವಾಗಲೂ ಐವತ್ತು ದನಗಳಿರುತ್ತಿದ್ದುವು. ಈಗಿನ ಕಾಲದಲ್ಲಿ ಆದರೆ ಸಾವಿರ

ರೂಪಾಯಿನ ಸಂಬಳ ತರುವವನಾದರೂ ಅಷ್ಟು ಕರಾವನ್ನು ಮನೆಯಲ್ಲಿ ಕಾಣನು. ಅದು ಮನೆಯೇ ?—ಒಂದು ಛತ್ರ. ಹೋಗುವವರು ಬರುವವರು ಲೆಕ್ಕವೇ ಇಲ್ಲ. ಹೋಟಲುಗಳಿಲ್ಲದ ಆ ಕಾಲದಲ್ಲಿ, ಹೋಟಲುಗಳಿಗೆ ಸುರಿಯುವುದಕ್ಕೆ ದುಡ್ಡು ಕೊಡಲಾರದ ಆ ಕಾಲದಲ್ಲಿ, ಹೋಟಲಿಗೆ ಹೋದರೆ ಪ್ರಾಣಾಂತ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದಿದ್ದ ಆ ಕಾಲದಲ್ಲಿ, ಆ ಛತ್ರವು ಅಲ್ಲಿಗೆ ಒಂದು ಖಾಸಗಿ ''ಪೂರ್ಣಯ್ಯನ ಛತ್ರ'' ವಾಗಿತ್ತು. ಮನೆಯಲ್ಲಿ ಅಡಿಗೆಯವರಾಗಲಿ ಪರಿಚಾರಕರಾಗಲಿ ಇಲ್ಲದಿದ್ದರೂ, ಬೀದಿಯಲ್ಲಿ ಹೋಗುವವರಿಗೆಲ್ಲಾ ಬೇಯಿಸಿ ಎಳೆಯಬೇಕಲ್ಲಾ ತಮಗೆ ಬಂಗಾರದ ಡಾಬೂ ವಜ್ರದ ಓಲೆಯೂ ಇಲ್ಲವಲ್ಲಾ ಎಂದು ಹೆಂಗಸರು ಸಂಕಟಪಡುತ್ತಿರಲಿಲ್ಲ. '' ಸಾಸವೆಬಣ್ಣದ '' ಸೀರೆ ಹೊರತು ಕುತ್ನಾಲದ ಸೀರೆಯನ್ನೂ ಅವರು ಕಂಡು ಅರಿಯರು. ''ಈ ದೇಹವಿರುವುದು ಯಾಕೆ ? ಗಂಧದ ಕೊರಡನ್ನು ತೆಯ್ದಂತೆ ತೆಯ್ದು ಸವೆಸುವದಕ್ಕೆ ತಾನೆ !'' ಎಂದು ಕೇಳುವರು. ಒಂದು ದಿನವೂ ಒಬ್ಬರಾದರೂ ಮನೆಯಲ್ಲಾಗಲಿ ಹೊರಗಾಗಲಿ ಸಿಡುಕಿನಿಂದ ಮಾತನಾಡಿದುದಿಲ್ಲ ; ಮನೆಯ ಯಜಮಾನಿಯು ಗೃಹಲಕ್ಷ್ಮಿಯಂತಿದ್ದಳು. ಆಕೆಯನ್ನು ಕಣ್ಣಾರ ಕಂಡಿದ್ದ ಮುದುಕರು ಒಬ್ಬಿಬ್ಬರು ಈಗಲೂ ಇದ್ದಾರೆ. ಅವರು ಆಕೆಯನ್ನು ವರ್ಣಿಸುವ ಕ್ರಮವನ್ನು ನೋಡಿದರೆ ಈಗಿನ ಸ್ತ್ರೀ ವಿದ್ಯಾಭ್ಯಾಸವೂ ಅದರ ಪ್ರೋತ್ಸಾಹಕ್ಕಾಗಿ ಸ್ಕಾಲರ್‌ಷಿಪ್‌ಗಳೂ ಗಾಡಿಗಳೂ ಆಳುಕಾಳುಗಳೂ ಆಟಪಾಟಗಳೂ ವೀಣೆ ಹಾರ್ಮೋನಿಯಂಗಳೂ ಬಿಂಕಬಿನ್ನಾಣಗಳೂ ಯಾಕೆ ಬರುತ್ತಿವೆಯೋ ಎಂದು ಒಂದು ವಿಧವಾದ ಅಸಹ್ಯ—ಹೌದು, ಅಸಹ್ಯವೇ !—ಉಂಟಾಗುತ್ತದೆ. ಆಕೆಯು ಒಳ್ಳೆಯ ಲಕ್ಷಣವಂತೆ ; ಅಗಲವಾದ ದುಂಡುಮುಖ ; ವಿಶಾಲವಾದ ಹಣೆ ; ಹಣೆಯಲ್ಲಿ ಅಡ್ಡಕುಂಕುಮವಲ್ಲದೆ ಒಂದು ಸಲವಾದರೂ ಬೊಟ್ಟನ್ನು ಇಟ್ಟುಕೊಂಡಿದ್ದಾಗಲಿ ಬರಿಯ ಹಣೆಯಲ್ಲಿ ಇದ್ದದ್ದಾಗಲಿ ಇಲ್ಲವೇ ಇಲ್ಲ. ಕೆನ್ನೆ ಕೈಕಾಲುಗಳಲ್ಲಿ ಯಾವಾಗಲೂ ಹಚ್ಚಗೆ ಅರಿಸಿನ. ಕಿವಿಯಲ್ಲಿ ತಪ್ಪಲೆಯೋಲೆ; ಅವುಗಳನ್ನು ಎತ್ತಿ ಕಟ್ಟಿರುವ ಮೂರೆಳೆಯ ಹಳೆಯಕಾಲದ ಕೆನ್ನೆಯಸರಪಣಿ; ಇದು ಮತ್ತು ಮಾಂಗಲ್ಯ ಇವಿಷ್ಟೇ ಮೈಮೇಲಿದ್ದ ಚಿನ್ನ. ನೋಡುವುದಕ್ಕೆ ಬಹು ಸೌಮ್ಯಮೂರ್ತಿ ; ಮಾತನಾಡುವುದು ಬಹುನಿದಾನ ; ಈಗಿನ ಗಡಬಿಡಿಯ ಅವಾಂತರದ ಕಾಲದಲ್ಲಿ ಯಾರಾದರೂ ಅಷ್ಟುನಿದಾನವಾಗಿ ಮಾತನಾಡಿದ್ದನ್ನು ನಾವು ಕೇಳಿದರೆ ''ಇದೇನು ನೀಲಾಂಬರೀ ರಾಗ ಎಳೆಯುತಾರಪ್ಪ!'' ಎಂದುಕೊಳ್ಳುವೆವು. ಮನೆತುಂಬ ಮಕ್ಕಳು; ಆದರೂ ಮಕ್ಕಳ ಅವಾಂತರವಿಲ್ಲ; ಅವರು ಪರಸ್ಪರ ಜಗಳವಾಡಿಯರಿಯರು; ಗಟ್ಟಿಯಾಗಿ ಮಾತನಾಡಿಯರಿಯರು. ಸೊಸೆಯರೂ ಹೆಣ್ಣುಮಕ್ಕಳೂ ಹಾಗೆಯೇ—

ಆಕೆಯು ಪ್ರತಿಬಿಂಬದಂತಿದ್ದರು. ಶರತ್ಕಾಲದ ಬೆಳದಿಂಗಳಲ್ಲಿ ತಳತಳನೆ ಹೊಳೆಯುತ್ತ ಶಾಂತವಾಗಿ ಪ್ರವಹಿಸುವ ನದಿಯಂತೆ ಆ ಸಂಸಾರವು ನಡೆಯುತ್ತಿತ್ತು.

ಮನೆಯಲ್ಲಿ ಪ್ರತಿದಿನವೂ ಒಂದು ಹಬ್ಬದಂತಿರುವುದು ; ತೃಪ್ತರಾದ ಜನರು, ಬೇಕಾದಷ್ಟು ಅತಿಥಿ ಅಭ್ಯಾಗತರು; ಸಂತೋಷವಾಗಿರುವ ಹುಡುಗರು ಮಕ್ಕಳು; ಹಾಲು ತುಪ್ಪಗಳ ಸೂರೆ;—ಇದಕ್ಕಿಂತ ಹಬ್ಬಬೇಕೆ? ಸಾಲಸೂಲಗಳನ್ನು ಮಾಡಿ ಮನಸ್ಸಿಲ್ಲದಿದ್ದರೂ ತುಪ್ಪ ಸಕ್ಕರೆ ಬೆಲ್ಲಗಳನ್ನು ಕೊಂಡುತಂದು ಖರ್ಚುಮಾಡಿ ಹೊತ್ತುಮೀರಿ ಮಿತಿಮೀರಿ ತಿಂದು ಸಂಕಟಪಡುವುದು ಹಬ್ಬವೇ? ಅದಿರಲಿ; ರಾಮಣ್ಣನವರ ಮನೆಯಲ್ಲಿ ನಿತ್ಯವೂ ಒಂದೊಂದು ಹಬ್ಬದಂತೆ ವಿಜೃಂಭಣೆ ನಡೆಯುತ್ತಿದ್ದರೆ ಹಬ್ಬದ ದಿನಗಳಲ್ಲಿ ಕೇಳಬೇಕೆ? ಆದರೆ ಅವರಲ್ಲಿ ದೀಪಾವಳಿ ಹಬ್ಬಮಾಡುವ ಪದ್ಧತಿಯಿಲ್ಲ; ಏಕೆಂದರೆ ಇದೇ ಮನೆತನದಲ್ಲಿಯೇ ಹಿಂದೆ ಶಾನುಭೋಗರಾಗಿದ್ದವರು ಒಬ್ಬರು ಯಾವುದೋ ಒಂದು ಹಳ್ಳಿಯಿಂದ ಬರುತ್ತಾ ದಾರಿಯಲ್ಲಿ ಕೆಲವು ಪುಂಡರ ಕೈಗೆ ಸಿಕ್ಕಿ ಆ ದಿವಸ ತಲೆ ಒಡೆಸಿಕೊಂಡು ಸತ್ತರಂತೆ; ಅಂದಿನಿಂದ ದೀವಳಿಗೆಯ ಹಬ್ಬದ ದಿವಸ ಮನೆಯಲ್ಲಿ ಎಳ್ಳು ಹಬ್ಬಕ್ಕೆ ಆರಂಭವಾಯಿತು. ಹೀಗೆ ಒಂದುಸಲ ನಿಂತುಹೋದ ಹಬ್ಬವು ಉದ್ದಕ್ಕೂ ನಿಂತೇಹೋಯಿತು. ಈಗಲೂ ಅದೇ ಮನೆತನ, ಅದೇ ಶಾನುಭೋಗತನ, ಅದೇ ಪುಂಡುಕೊಂಪೆ ; ಅಂಥಾದ್ದೇ ಒಂದು ಕೊಲೆಯೂ ಹಬ್ಬದ ದಿವಸ ಆಗಬೇಕಾಗಿತ್ತು; ಆದರೆ ಲಕ್ಷ್ಮೀದೇವಮ್ಮನ ಮಾಹಾತ್ಮೆಯಿಂದ ಅದು ನಿವಾರಣೆಯಾಯಿತು. ಈಗ ಅಂಥ ಹೆಂಗಸರನ್ನೂ ಕಾಣೆ; ಅಂಥ ಶಾನುಭೋಗರನ್ನೂ ಕಾಣೆ; ಶಾನುಭೋಗರ ಮಾತಿರಲಿ, ಆಕೆಯು ತನ್ನ ಗಂಡನ ಪ್ರಾಣವನ್ನು ಕಾಪಾಡಿದ ಸಂಗತಿಯನ್ನು ಇಲ್ಲಿ ತಿಳಿಸುತ್ತೇನೆ; ಅದನ್ನು ಆಕೆಯ ಮಾಹಾತ್ಮೆಯೆಂದು ಬೇಕಾದರೂ ಎನ್ನಿ, ಬುದ್ಧಿವಂತಿಕೆಯೆಂದು ಬೇಕಾದರೂ ಎನ್ನಿ; ಸದ್ಗುಣವೆಂದು ಬೇಕಾದರೂ ಎನ್ನಿ.

(೩)

ಪುಷ್ಯಶುದ್ಧ ಹುಣ್ಣಿಮೆ; ಆ ದಿವಸ ಬನಶಂಕರಿಯ ಪೂಜೆಮಾಡುವುದು ಈಗಲೂ ಅನೇಕರಲ್ಲಿ ಆಚರಣೆಯಿದೆ. ಆ ಪೂಜೆಯನ್ನು ರಾಮಣ್ಣನವರ ಮನೆಯಲ್ಲಿ ಬಹು ಕಟ್ಟುನಿಟ್ಟಿನಿಂದ ನಡೆಸುತ್ತಿದ್ದರು ; ಬನಶಂಕರಿಯು ಅವರ ಮನೆದೇವತೆ ; ಆಕೆಯು ಅವರ ಮನೆಯಲ್ಲಿ ಸಶರೀರಳಾಗಿ ಓಡಿಯಾಡುತ್ತಿದ್ದಳಂತೆ. ಇದನ್ನೆಲ್ಲಾ ನಮ್ಮ ತಾಯಿ ಒಂದು ದಿನ ಹೇಳಿದರು. ನಾನು, "ದೇವತೆಯೆಲ್ಲಾದರೂ ಮನುಷ್ಯರ ಹಾಗೆ ಓಡಾಡುವುದುಂಟೇ? ಎಲ್ಲಾ ಕಥೆ! ಇಲ್ಲ, ಯಾರನ್ನು ನೋಡಿ

ಹೀಗೆ ಹೇಳಿದರೋ!! '' ಎಂದೆ. ಅದಕ್ಕೆ ನಮ್ಮ ತಾಯಿಯು '' ಇಲ್ಲ ಮಗೂ, ನಿಜವಾಗಿಯೂ ಓಡಿಯಾಡುತಿದ್ದಳಂತೆ! '' ಎಂದರು.

'' ನೀನು ನೋಡಿದ್ದೆಯೋ ? ''

'' ನಾನು ನೋಡಿರಲಿಲ್ಲಪ್ಪ ! ''

'' ಸರಿ ಮತ್ತೆ; ದೇವರುಗಳು ಪಿಶಾಚಿಗಳು ಇವೆಲ್ಲಾ ನೋಡಿದವರೊಬ್ಬರನ್ನೂ ಕಾಣೆ; ಅವರು ನೋಡಿದರು ಇವರು ನೋಡಿದರು ಎಂದು ಎಲ್ಲರೂ ಹೇಳುವವರೇ ಹೊರತು ' ನಾನು ನೋಡಿದೆ ' ಎಂದು ಹೇಳುವವರು ಒಬ್ಬರೂ ಇಲ್ಲ.''

'' ಹಾಗಾದರೆ ನಮ್ಮ ಅಜ್ಜಿ ನೋಡಿದ್ದದ್ದು ಸುಳ್ಳೇನೋ ? ನಾನು ಕಂಡ ಹಾಗೇ ಮನೆಗೆ ಬೆಂಕಿಬಿದ್ದು ಎಲ್ಲಾ ಸುಟ್ಟುಹೋಗುವವರೆಗೂ ದೇವರ ಸಂಪುಟದಲ್ಲಿ ಅಮ್ಮನವರ ಸೀರೆಯ ಸೆರಗನ್ನು ಇಟ್ಟು ಪೂಜೆಮಾಡುತಿದ್ದದ್ದೂ ಸುಳ್ಳೇ ? ''

ಅದೊಂದು ಸಣ್ಣ ಉಪಕಥೆ; ಒಂದು ದಿನ ಅವರ ಅಜ್ಜಿಯು ಹುಡುಗರಿಗೆಲ್ಲಾ ಬೆಳಗ್ಗೆ ಅನ್ನಬಡಿಸಿ ಸಾರುಹಾಕಿ ಅವರು ಅದನ್ನು ಊಟಮಾಡುವುದರೊಳಗಾಗಿ ನೀರು ತೆಗೆದುಕೊಂಡು ಬರುತ್ತೇನೆಂತ ಕೊಡವನ್ನು ಕೊಂಕಳಿಗೆ ಹಾಕಿಕೊಂಡು ಬಾವಿಗೆ ಹೋದರಂತೆ; ಅಲ್ಲಿ ಯಾರ ಕೈಯಲ್ಲೋ ಮಾತಿಗೆ ನಿಂತು, ಬರುವದು ಸ್ವಲ್ಪ ಹೊತ್ತಾಯಿತಂತೆ ; ಇಷ್ಟು ಹೊತ್ತಿಗೆ ಮಕ್ಕಳು ಊಟಮಾಡಿ '' ಅಮ್ಮಾ ಮಜ್ಜಿಗೆ! ಅಮ್ಮಾ ಮಜ್ಜಿಗೆ !!'' ಎಂದು ಕೂಗಿಕೊಳ್ಳುವುದಕ್ಕೆ ಹಿಡಿದರಂತೆ. ಆಗ ಆಕೆಯ ಹಾಗೇ ಇದ್ದ ಒಬ್ಬ ಹೆಂಗಸು ಮನೆಯಲ್ಲಿ ಬನಶಂಕರೀಹಬ್ಬಕ್ಕೆಂದು ಮೀಸಲುಮಾಡಿಟ್ಟಿದ್ದ ಹಾಲು ಮಸರನ್ನೆಲ್ಲಾ ತೆಗೆದುಕೊಂಡು ಬಂದು ಕೇಳಿದಷ್ಟು ಬಡಿಸುತ್ತಿದ್ದಳಂತೆ; ಎಲೆಯಲ್ಲಿ ಹಾಲು ಮಸರು ಕೋಡಿ ಹರಿಯುತ್ತಿತ್ತಂತೆ; ಹುಡುಗರು ಇನ್ನಷ್ಟು ಇನ್ನಷ್ಟು ನನ್ನಕೈಗೆ ಅಷ್ಟು ತನ್ನಕೈಗೆ ಅಷ್ಟು ಎಂದು ಹೇಳಿ ಸುರಿದುಕೊಳ್ಳುತ್ತಿದ್ದರಂತೆ ; ಅಷ್ಟುಹೊತ್ತಿಗೆ ಅವರ ಅಜ್ಜಿಯು ಬಂದು ನೋಡಿ '' ಯಾರದು ! '' ಎಂದು ಕೂಗಲು, ಬಡಿಸುತ್ತಿದ್ದಾಕೆಯು ದೇವರ ಮನೆಗೆ ಹೋಗಿ ಬಾಗಿಲ ಹಿಂದೆ ಅವಿತುಕೊಂಡಳಂತೆ; ಮನೆಯ ಯಜಮಾನಿಯು ಓಡಿಹೋಗಿ ಬಾಗಿಲ ಹಿಂದಿನಿಂದ ಸರಿಗೆಯ ಸೆರಗು ಕಾಣುತ್ತಿರಲು ಅದನ್ನು ಹಿಡಿದು ಎಳೆದುಕೊಂಡಳಂತೆ ; ಅದಷ್ಟೇ ಹರಿದು ಕೈಗೆ ಬಂದುಬಿಟ್ಟಿತಂತೆ ; ಬಾಗಿಲು ತೆಗೆದು ನೋಡಲು ಹಿಂದೆ ಯಾರೂ ಇರಲಿಲ್ಲವಂತೆ ; ಅವತ್ತಿನ ರಾತ್ರಿ ಬನಶಂಕರೀದೇವಿಯೇ ಅವರ ಕನಸಿನಲ್ಲಿ ಬಂದು, ತಾನೇ ಆ ಕೆಲಸಮಾಡಿದಳೆಂತಲೂ, ಮಕ್ಕಳು ಗಂಟಲು ಒಣಗುವಂತೆ ಕೂಗುತ್ತಿದ್ದದ್ದನ್ನು ಕೇಳಿ ಸುಮ್ಮನೆ ಇರಲಾರದೆ ಆ ಕೆಲಸ ಮಾಡಿದ

ಳೆಂತಲೂ, ಮಿಕ್ಕ ಹಾಲು ಮೊಸರುಗಳನ್ನೇ ಹಬ್ಬದಲ್ಲಿ ಉಪಯೋಗಿಸಬಹುದೆಂದೂ ಧೈರ್ಯ ಹೇಳಿದಳಂತೆ. ಅಲ್ಲಿಂದಾಚೆಗೆ ಅವರ ಮನೆಯಲ್ಲಿ ಆ ಸೆರಗನ್ನು ದೇವರ ಸಂಪುಟದಲ್ಲಿ ಇಟ್ಟು ಪೂಜೆಮಾಡುತ್ತಿದ್ದರಂತೆ; ಈಚೆಗೆ ಮನೆಮನೆಗೇ ಬೆಂಕಿಬಿದ್ದು ಎಲ್ಲಾ ಸುಟ್ಟುಹೋಯಿತಂತೆ.

"ದೇವರೇ ಓಡಾಡುವ ಮನೆ ಯಾಕೆ ಸುಟ್ಟುಹೋಯಿತು ಮತ್ತೆ ?" ಎಂದು ನಾನು ಕೇಳಿದೆ.

"ಶ್ವಪಚರು, ಮಗು ! ಶ್ವಪಚರು; ಮಡಿಯಿಲ್ಲ, ಮೈಲಿಗೆ ಇಲ್ಲ ; ದಾನವಿಲ್ಲ ಧರ್ಮವಿಲ್ಲ; ನಿಮ್ಮ ಮಾವ ಇದಾನೆ ನೋಡು, ಅವನ ಮುಖ ನೋಡಬಹುದೇ ? ಕೈಬಿಟ್ಟು ಕೊಟ್ಟರೆ ಬರುತ್ತೋ ಕೂಡಿಟ್ಟರೆ ಬರುತ್ತೋ ಮಗು ? ಬರುವದು ಹ್ಯಾಗೋ ಹೋಗುವುದೂ ಹಾಗೇ ! ಮೂರುಹೊತ್ತೂ ತಾರಾತಂಟಲು, ತಗರು ಬುಗರು, ಸುಳ್ಳು ತಟವಟ, ಜೂಜು ದುರ್ಮಾರ್ಗತನ ಮನೆಹಾಳುತನ ಇವೆಲ್ಲಾ ಕಲಿತುಕೊಂಡರೆ ದೇವರು ಹ್ಯಾಗಿರುತಾನೋ ಮನೇಲಿ ?"

"ಮತ್ತೆ ದೇವರಲ್ಲಿ ಅಷ್ಟು ಮಹತ್ವವಿದ್ದರೆ, ಇದನ್ನೆಲ್ಲಾ ಮಾಡದ ಹಾಗೆ ಬುದ್ಧಿ ಕೊಡಬೇಕು."

"ನೀವೆಲ್ಲಾ ಇಂಗ್ಲಿಷ್ ಓದಿದ ಹುಡುಗರಪ್ಪ ! ನಿಮಗೆ ನಾನು ಜವಾಬು ಕೊಡುವುದಕ್ಕಾಗುವುದಿಲ್ಲ."

(೪)

ಉಪಕಥೆ ಸ್ವಲ್ಪ ದೊಡ್ಡದಾಯಿತು. ಬನಶಂಕರಿ ಹಬ್ಬದ ಪ್ರಸ್ತಾಪ ಬಂದ ದ್ದರಿಂದಲೂ, ಲಕ್ಷ್ಮೀದೇವಮ್ಮನಲ್ಲಿ ಬನಶಂಕರಿಯ ಅಂಶವಿತ್ತೆಂದು ಈಗಲೂ ಆಕೆಯ ಹೆಸರಿನಲ್ಲಿ ನಮ್ಮ ಬಂಧು ಬಳಗದವರ ಮನೆಯಲ್ಲೆಲ್ಲಾ ಆಕೆಯು ಹುಟ್ಟಿದ ದಿವಸ ಹೂವೀಳ್ಯವನ್ನು ಮಾಡುವುದರಿಂದಲೂ ಈ ವಿಚಾರವನ್ನು ಸಂದರ್ಭ ಬಂದಾಗ ಸ್ವಲ್ಪ ವಿಸ್ತಾರವಾಗಿ ಹೇಳಬೇಕಾಯಿತು.

ಪುಷ್ಯ ಶುದ್ಧ ಹುಣ್ಣಿಮೆ; ಬನಶಂಕರಿಯ ಹಬ್ಬ; ಮನೆಯಲ್ಲಿ ಬೇಕಾದಷ್ಟು ಸಂಭ್ರಮ ; ಒಳ್ಳೆಯ ಮಧ್ಯಾಹ್ನ ಹನ್ನೆರಡು ಗಂಟೆಹೊತ್ತು ; ಲಕ್ಷ್ಮೀದೇವಮ್ಮನು ಒಳಗೆ ಅಡಿಗೆ ಮಾಡುತ್ತಿದ್ದಾಳೆ. ದೇವರ ಕೋಣೆಯಲ್ಲಿ ಸಹಸ್ರನಾಮ ಪೂಜೆಯಾ ಗುತ್ತಿದೆ. ಹುಡುಗರೆಲ್ಲಾ ಸಾಲಾಗಿ ಕೈ ಕಟ್ಟಿಕೊಂಡು ಪೂಜೆಯನ್ನು ನೋಡುತ್ತ ಕುಳಿತಿದ್ದಾರೆ. ಆಗ ಹತ್ತು ಹದಿನೈದು ಜನ ರೈತರು ಆ ಮನೆಯ ಕಡೆಗೆ ಬಹು ಕ್ಷುಭಿತರಾಗಿ ದುಡುದುಡನೆ ಬರುತ್ತಿದ್ದರು. ಅದನ್ನು ಅಡಿಗೆಯ ಮನೆಯಲ್ಲಿದ್ದ ಲಕ್ಷ್ಮೀದೇವಮ್ಮನು ಕಿಟಿಕಿಯಿಂದ ನೋಡಿ ಸ್ವಲ್ಪ ಗಾಬರಿ ಪಟ್ಟಳು. ಕೂಡಲೆ

ಯಾರಿಗೂ ಏನೂ ಹೇಳದೆ ಕೆಂಪಗೆ ಶುಭ್ರವಾಗಿ ಬೆಳಗಿದ ಒಂದು ಕೊಡವನ್ನು ಕಂಕುಳಲ್ಲಿ ಇಟ್ಟುಕೊಂಡು ಇನ್ನೊಂದು ಕೈಯಲ್ಲಿ ಎರಡು ಚಂಬುಗಳನ್ನು ಹಿಡಿದು ಕೊಂಡು ನೀರಿಗೆ ಹೋಗುವವಳಂತೆ ಹೊರಟಳು. ಅದನ್ನು ನೋಡಿ ಆಕೆಯ ಅತ್ತಿಗೆಯು "ಇದ್ಯಾಕೆ ಅತ್ತಿಗೆ ಈಗ ನೀರಿಗೆ ಹೊರಟೆ! ನೀರು ಇನ್ನೂ ಈ ಹಂಡೆಯ ತುಂಬ ಇದೆಯಲ್ಲ; ಊಟ ಮಾಡಿಕೊಂಡು ಹೋಗಿ ಎಲ್ಲರೂ ಒಂದೊಂದು ದಾರಿ ತಂದರಾಯಿತು; ಮಂಗಳಾರತಿಯಾಗುವ ಹೊತ್ತು, ಈಗ ಎಲ್ಲಿಗೆ ಹೋಗುತೀಯೆ" ಎಂದಳು. ಲಕ್ಷ್ಮೀದೇವಮ್ಮನು ಯಾವ ಮಾತನ್ನೂ ಆಡದೆ ಪಾತ್ರೆಗಳನ್ನು ತೆಗೆದುಕೊಂಡು ಬಾಗಿಲಿಗೆ ಬಂದಳು. ಅಷ್ಟುಹೊತ್ತಿಗೆ ರೈತರು ಬಾಗಿಲಿಗೆ ಸರಿಯಾಗಿ ಬಂದು ಒಳಗೆ ನುಗ್ಗುವದರಲ್ಲಿದ್ದು ಆಕೆಯನ್ನು ಕಂಡು ತಟ್ಟನೆ ನಿಂತರು. ಅವರು ಬಂದ ರಭಸದಲ್ಲಿ ಮತ್ತಾರಾದರೂ ಬಾಗಿಲಲ್ಲಿ ನಿಂತಿದ್ದರೆ ಅವರನ್ನು ತಳ್ಳಿಕೊಂಡು ಒಳಕ್ಕೆ ನುಗ್ಗಬೇಕು. ಆದರೆ ಆಕೆಯ ಮುಖವನ್ನು ನೋಡಿದ ಕೂಡಲೆ ಅವರೆಲ್ಲರೂ ಅರ್ಧ ತಣ್ಣಗಾಗಿಹೋದರು. ಯಾರಿಗೂ ಮಾತು ಹೊರಡಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಅವರಲ್ಲಿ ಒಬ್ಬನು "ಶಾನುಭೋಗರೆಲ್ಲಮ್ಮ?" ಎಂದು ಕೇಳಿದನು. ಆಕೆಯು ಎಲ್ಲವನ್ನೂ ಮೊದಲೇ ಊಹಿಸಿಕೊಂಡಿದ್ದವಳು ಬಾಗಿಲಲ್ಲಿಯೇ ನಿಂತುಕೊಂಡು "ಇನ್ನೂ ಮನೆಗೆ ಬಂದಿಲ್ಲಪ್ಪ; ಬರ್ತಾರೆ, ಒಳಗೆ ಬನ್ನಿ ; ಏನಾಗ ಬೇಕು? ಪಾಪ! ಒಳ್ಳೆಯ ಬಿಸಿಲಲ್ಲಿ ಬಂದರಲ್ಲಪ್ಪಾ; ಬನ್ನಿ ಒಳಗೆ; ದಿವಾನಖಾನೆಯೊಳಗೆ ಕೂತುಕೊಳ್ಳಿ ; ನೀರಿಗೆ ಹೋಗೋಣ ಅಂತ ಇದ್ದೆ; ಅದಿರಲಿ;" ಎಂದು ಪಾತ್ರೆಗಳನ್ನು ಅಲ್ಲಿಯೇ ಇಟ್ಟು ದಿವಾನಖಾನೆಯೊಳಕ್ಕೆ ಹೋಗಿ ಒಂದೆರಡು ಮಂದಲಿಗೆಗಳನ್ನು ಹಾಸಿ "ಬನ್ನಿ ಗೌಡರೇ ಕೂತುಕೊಳ್ಳಿ" ಎಂದಳು. ಇಷ್ಟು ಹೊತ್ತೂ ಸೆಡೆತು ನಿಂತುಕೊಂಡಿದ್ದವರು ಈಗ ಹಿಂದು ಮುಂದು ನೋಡುತ್ತ ಒಬ್ಬರ ಮುಖವನ್ನು ಒಬ್ಬರು ನೋಡುತ್ತ ಒಬ್ಬೊಬ್ಬರಾಗಿ ಒಳಗೆ ಬಂದು ಕುಳಿತುಕೊಂಡರು.

ಲಕ್ಷ್ಮೀದೇವಮ್ಮ—"ಏನು ಪಟೇಲರೇ, ನಿಮ್ಮ ಮನೆಯಲ್ಲಿ ಮಕ್ಕಳುಮರಿ ಎಲ್ಲಾ ಚೆನ್ನಾಗಿದ್ದಾರೆಯೇ ?—"

ಉತ್ತರವಿಲ್ಲ ; ತಿರುಗಿ

"ಪಾಪ, ಬಹಳ ಆಯಾಸಪಟ್ಟಿರುವ ಹಾಗಿದೆ; ಬೀಸಣಿಗೆ ತಂದುಕೊಡುತ್ತೇನೆ."

ಹೀಗೆಂದು ಹೇಳಿ ಲಕ್ಷ್ಮೀದೇವಮ್ಮನು ಒಳಕ್ಕೆ ಹೋಗಿ ಕೂಡಲೆ ಒಂದು ತಟ್ಟೆಯೊಳಗೆ ಒಂದು ಸೇರಿನಷ್ಟು ಹುರಿಗಾಳು ಒಂದು ಚಿಪ್ಪು ಬಾಳೆಯಹಣ್ಣು

ಹತ್ತುಹದಿನೈದು ಹೋಳಿಗೆ ಒಂದು ಚಂಬು ನೀರು ಎರಡು ಬೀಸಣಿಗೆ ಇವುಗಳನ್ನು ಅವರ ಮುಂದೆ ತಂದಿಟ್ಟು, ಬಾಗಿಲಿನಹತ್ತಿರವೇ ಕುಳಿತುಕೊಂಡಳು.

"ಸ್ವಲ್ಪ ಫಲಾರ ಮಾಡುತ ಇರಿ; ಯಜಮಾನರು ಬಂದಕೂಡಲೆ ತಿಳಿಸುತ್ತೇನೆ. ಪಾಪ ಏನು ಕೆಲಸವಾಗಿ ಬಂದಿರೋ ಏನೋ!" ಹೀಗೆಂದು ಹೇಳಿ ಪುನಃ ಒಬ್ಬೊಬ್ಬರನ್ನಾಗಿ ಹೆಸರುಹಿಡಿದು ಅವರ ಮನೆ ಬಾಗಿಲು ಹೆಂಡತಿ ಮಕ್ಕಳು ಮಳೆಬೆಳೆ ಇವುಗಳ ವಿಚಾರಗಳನ್ನೆಲ್ಲಾ ಕೇಳುವುದಕ್ಕೆ ಮೊದಲು ಮಾಡಿದಳು. ಆಕೆಯ ಸೌಮ್ಯವಾದ ಮಾತುಗಳನ್ನು ಕೇಳುತ್ತಾ ಕೇಳುತ್ತಾ ಒಬ್ಬೊಬ್ಬರಾಗಿ ತಟ್ಟೆಗೆ ಕೈಚಾಚಿ ಅದನ್ನು ಬರಿದುಮಾಡುತ್ತ ಬಂದರು; ಅದು ಮುಗಿದ ಕೂಡಲೆ ಆಕೆಯು "ಇಲ್ಲದಿದ್ದರೆ, ಯಜಮಾನರು ಬರುವ ಹೊತ್ತಿಗೆ ನೀವೆಲ್ಲರೂ ಊಟ ಮಾಡಿಬಿಡಿ; ಪಾಪ! ಹಸಿದುಕೊಂಡು ಯಾಕೆ ಕಾದುಕೊಂಡಿರಬೇಕು?" ಎಂದು ಹೇಳಿ, ಬೇಕು ಬೇಡ ಎಂದು ಹೇಳುವಷ್ಟರೊಳಗಾಗಿ ಸೊಗಸಾದ ದೊಡ್ಡದೊಡ್ಡ ಬಾಳೆಯ ಎಲೆಗಳನ್ನು ತಂದು ಹಾಕಿಯೇ ಬಿಟ್ಟಳು. ಒಳಗೆ ಹಬ್ಬಕ್ಕೆಂದು ಮಾಡಿದ್ದ ಅಡಿಗೆಗಳೆಲ್ಲಾ ಒಂದೊಂದಾಗಿ ಅವರ ಎಡೆಗೆ ಬಂದುವು. ತಾನೇ ಸ್ವಂತವಾಗಿ ನಿಂತು ಸ್ವಲ್ಪವೂ ಕಳವಳ ತೋರಿಸದೆ ಶಾಂತಳಾಗಿ ಉಪಚಾರದ ಮಾತನಾಡುತ್ತ ಭಕ್ಷ್ಯಭೋಜ್ಯಗಳನ್ನೆಲ್ಲಾ ತಂದು ಬಡಿಸಿದಳು. ಸಂಕೋಚಪಡುತ್ತಾ ಕೈಹಾಕಿ ಅವರೆಲ್ಲರೂ ಊಟಕ್ಕೆ ಕುಳಿತರು; ಆದಕ್ಕೆ ಮುಂಚೆ ಒಬ್ಬನು "ಏನಮ್ಮ ಇವತ್ತು ಬಂದ ಹುಣ್ಣಿಮೆ; ಶಾನುಭೋಗರು ಇಳಿವೊತ್ತಾದರೂ ಇನ್ನೂ ಬಂದಿಲ್ವಾ?" ಎಂದು ಕೇಳಿದನು. ಆಕೆಯು ಅದಕ್ಕೆ ಉತ್ತರ ಕೊಡದೆ, ಅದು ತನ್ನ ಕಿವಿಗೇ ಬೀಳದಂತೆ ಬಡಿಸುತ್ತಿದ್ದಳು. ಅವನೂ ಪುನಃ ಆ ಮಾತನ್ನೆತ್ತಲಿಲ್ಲ.

ಈ ಮಧ್ಯೆ ಈ ಸಂಗತಿಗಳ ಸುಳಿವೆಲ್ಲಾ ಒಳಗೆ ಗೊತ್ತಾಗಿ ಪೂಜೆ ಊಟಗಳೆಲ್ಲವೂ ಸದ್ದಿಲ್ಲದೆ ನಡೆದುಹೋದುವು. ರಾಮಣ್ಣನು ಹಿಂದಿನಮನೆಯ ಕೊಟಡಿಯಲ್ಲಿ ಅವಿತುಕೊಂಡನು. ಹೊರಗೂ ಊಟವಾಯಿತು. ಎಲೆಯಡಿಕೆ ಹೊಗೆಸೊಪ್ಪು ಎಲ್ಲವನ್ನೂ ಅಗಿದದ್ದಾಯಿತು. ಗಂಟುಹಾಕಿಕೊಂಡಿದ್ದ ಮುಖಗಳೆಲ್ಲವೂ ನಗುಮುಖಗಳಾದುವು. ಧಾರಾಳವಾದ ಮಾತಿಗೆ ಆರಂಭವಾಯಿತು. ಆಮೇಲೆ ಒಬ್ಬೊಬ್ಬರಾಗಿ ಎದ್ದು ಹೊರಟುಬಂದು ಹೊರಗೆ ನಿಂತು ಮುಚ್ಚಿಟ್ಟುಕೊಂಡಿದ್ದ ಮಚ್ಚುಗಳನ್ನು ಹೊರಕ್ಕೆ ತೆಗೆದು ತೋರಿಸಿ "ಅಮ್ಮಾ ಇವತ್ತು ನಿನ್ನ ಗಂಡನ್ನ ಬದುಕಿಸಿಕೊಂಡೆ, ಹೋಗು; ನಿನ್ನ ತಾಳೀ ಪುಣ್ಯ ಚೆನ್ನಾಗಿತ್ತು. ಹಾಲು ತುಪ್ಪ ಇಟ್ಟು ನಮ್ಮನ್ನು ಕೊಂದೆ" ಎಂದರು.

ಲಕ್ಷ್ಮೀದೇವಮ್ಮನು ಮೊದಲೇ ಇಂಥ ಅನಾಹುತವನ್ನು ಊಹಿಸಿಕೊಂಡಿದ್ದಳಾದ್ದರಿಂದ ಅವರ ಮಾತು ಆಕೆಗೆ ಅಷ್ಟೇನೂ ಆಶ್ಚರ್ಯವನ್ನು ಉಂಟುಮಾಡಲಿಲ್ಲ. ಅನಂತರ

" ಏನೋಪ್ಪ, ಸರ್ಕಾರದ ನೌಕರಿಯೇ ಕೆಟ್ಟದು ; ಹಿಂದೆ ಕೆರೆ ಮುಂದೆ ಬಾವಿ ; ನಿಮ್ಮ ಕಡೆ ಸೇರಿದರೆ, ಸುಬೇದಾರರು ಎಳಕೊಂಡುಬಾ ಶಾನಭೋಗನ್ನ ಅಂತಾರೆ ; ಅವರಿಗೆ ಸಹಾಯವಾದರೆ ನೀವು, ಬನ್ನಿ ಒಡೆಯೋಣ ಶಾನುಭೋಗನ ತಲೇನ ಅಂತೀರಿ. ಶಾನುಭೋಗರಿಲ್ಲದಿದ್ದರೆ ಒಂದುಗಳಿಗೆ ನಡೆಯುವ ಹಾಗಿಲ್ಲ ; ಶಾನುಭೋಗರು ನಿಮಗೂ ಬೇಕು, ಸರ್ಕಾರಕ್ಕೂ ಬೇಕು ; ಸರ್ಕಾರದ ಕೆಲಸ ಹುಟ್ಟುವದು ನಡೆಯುವದು ಮುಗಿಯುವದು ಎಲ್ಲಾ ಶಾನುಭೋಗರಿಂದಲೇ ; ಆದರೂ ಅವರು ಮಾತ್ರ ಯಾವಾಗ ಏನೋ ಎಂತ ಎಡಗೈಲಿ ಜೀವ ಹಿಡಿದುಕೊಂಡು ಕೆಲಸಮಾಡಬೇಕು. ಇಷ್ಟಾದರೂ, ಶಾನುಭೋಗರು ಸುಲುಕೊಂಡು ತಿಂತಾರೋ ಅಂತ ದೂರು ಮಾತ್ರ ತಪ್ಪುವುದಿಲ್ಲ. ನಿಮ್ಮ ಹತ್ತಿರವೆಲ್ಲಾ ಸುಲುಕೊಂಡು ತಿಂದು ನಾವು ಮನೆಯಮೇಲೆ ಹಾಕಿಸಿಕೊಂಡಿರುವ ಬಂಗಾರದ ಕಳಶಗಳನ್ನು ನೀವು ಕಾಣಿರಾ ? ನಮಗೇನು ನಿಮ್ಮ ಮೇಲೆ ಹೊಟ್ಟೆಯುಕಿಚ್ಚೇನಪ್ಪ ? ನಮ್ಮ ಕಿಟ್ಟಪ್ಪ ಬೇರೆಯೇ ನೀವು ಬೇರೆಯೇ ? ನಾನು ನಿಮಗೆ ಹಾಲು ತುಪ್ಪ ಇಟ್ಟೆ ಅಂದಿರಿ. ಹಾಲು ತುಪ್ಪಕ್ಕೆ ಏನು ಕಮ್ಮಿ ಅಪ್ಪಾ ! ನಿಮ್ಮ ಮನೆಗೆ ಈಗ ನಾನು ಬಂದರೆ ನನಗೆ ನೀವು ಒಬ್ಬೊಬ್ಬರೂ ಹತ್ತುಸೇರು ಹಾಲು ಕೊಡಬಲ್ಲಿರಿ " ಎಂದಳು. ಈ ಮಾತುಕೇಳಿ ಅವರಲ್ಲೆಲ್ಲಾ ಮುದುಕನಾದವನೊಬ್ಬನು ಕಣ್ಣಿನಲ್ಲಿ ನೀರು ತಂದುಕೊಂಡು " ಇಲ್ಕಣಮ್ಮಾ ಇನ್ನು ಹೀಗೆ ಮಾಡಾಕಿಲ್ಲ ; ನಾನು ಬದುಕಿರೋಗಂಟ ನಿನ್ನ ಗಂಡನ್ನ ಕೊಲ್ಲಾಕಿಲ್ಲ ; ಅವನು ಏನಾನ ಮಾಡ್ಕಳ್ಳಿ " ಎಂದು ಹೇಳಿದನು. ಬದಲುಮಾತನಾಡದೆ ಎಲ್ಲರೂ ಹೊರಟುಹೋದರು.

ಹೀಗೆ ಬಂದ ಗಂಡಾಂತರವು ತಪ್ಪಿತು. ರಾಮಣ್ಣನವರ ಕಾಲದಲ್ಲಿಯೇ ಪುಂಡರು ಬಹಳ ಮಟ್ಟಿಗೆ ನಯಭಯಗಳಿಂದ ಸಾಭ್ಯಸ್ಥರಾದರು ; ಲಕ್ಷ್ಮೀದೇವಮ್ಮನು ಬನಶಂಕರಿಹಬ್ಬದ ದಿನ ಅವರ ಮುಖಂಡರಿಗೆ ಊಡಿದ ಅಮೃತವು ಎಲ್ಲರಿಗೂ ಮಂಗಳವನ್ನು ಉಂಟುಮಾಡಿತು.

* * *

ಈಗ ಆವೂರು ಪಾಳುಬಿದ್ದಿದೆ ; ಹಾಲುಮೊಸರುಗಳ ಕೋಡಿ ಹರಿಯುತ್ತಿದ್ದ ಕಡೆ ಕಣ್ಣೀರು ಹೊರತು ಬೇರೆ ನೀರುಸಹ ಇಲ್ಲ. ಅಲ್ಲಿ ಇದ್ದ ದೊಡ್ಡ ದೊಡ್ಡ ಕುಳಗಳೆಲ್ಲರೂ ಸತ್ತು ಕೆಟ್ಟು ಹೋದರು. ಹಿಂದೆ ಹೇಳಿದಂತೆ ರಾಮಣ್ಣನ ಮಗನ

ಕಾಲಕ್ಕೆ ಆ ಮನೆಗೆ ಬೆಂಕಿಬಿದ್ದು ಎಲ್ಲ ಸುಟ್ಟು ಹೋಯಿತು ; ದನಕರುಗಳೆಲ್ಲವೂ ಸತ್ತುಹೋದುವು ; ಸಾಲವಾಗಿ ಹೊಲಗದ್ದೆಗಳೆಲ್ಲವೂ ಸಾಲಗಾರರ ಪಾಲಾದವು. ರಾಮಣ್ಣನ ವಂಶಸ್ಥರು ಮನೆಮಾರಿಕೊಂಡು ಆ ವೂರನ್ನೇ ಬಿಟ್ಟು ಬೇರೆ ಎಲ್ಲಿಯೋ ಸೇರಿಕೊಂಡಿದ್ದಾರೆ; ಆ ವಂಶಕ್ಕೆ ಈಗ ಇರುವವನು ಒಬ್ಬ ಮಗ; ಅವನ ಹೊಟ್ಟೆಯಲ್ಲಿ ಮಕ್ಕಳಿಲ್ಲ; ಹತ್ತಾರು ಮಕ್ಕಳು ಹಾಲು ಮಸರಿನಲ್ಲಿ ಕೈತೊಳೆಯುತ್ತಿದ್ದ ಮನೆಯಲ್ಲಿ ಮಕ್ಕಳೂ ಇಲ್ಲ, ಹಾಲೂ ಇಲ್ಲ, ಮಸರೂ ಇಲ್ಲ; ತಿನ್ನುವುದಕ್ಕೆ ಅನ್ನ ಹುಟ್ಟಿಸಿಕೊಳ್ಳುವುದೂ ಕಷ್ಟವಾಗಿದೆ. ನಿರ್ಭಾಗ್ಯದೇವತೆಯು ಮನೆಯಲ್ಲಿ ಓಡಿಯಾಡುತ್ತಿದ್ದಾಳೆ.

ಜನರು ಕಾಲ ಕೆಟ್ಟುಹೋಯಿತು ಕಾಲ ಕೆಟ್ಟುಹೋಯಿತು ಎನ್ನುತ್ತಾರೆ. ಕಾಲ ಕೆಟ್ಟುಹೋಯಿತೋ ನಾವೇ ಕೆಟ್ಟುಹೋದೆವೋ? "ನಮ್ಮ ನಡೆನುಡಿ ಚೆನ್ನಾಗಿದ್ದರೆ ಕಾಪಾಡುವ ದೇವರು ಹ್ಯಾಗೋ ಕಾಪಾಡುತಾನೆ." ಅದನ್ನು ಕೆಡಿಸಿಕೊಂಡರೆ ?—

---

# ಕಾ ವ್ಯಾ ವ ಲೋ ೯ ಕ ನ

**ಸಣ್ಣ ಕತೆಗಳು**—ಶ್ರೀನಿವಾಸನು ಬರೆದುವು; ಕ್ರೌ೯ ಪುಟಗಳು ೮೦; ಬೆಲೆ ೮ಆಣೆ.

ಆಧುನಿಕ ಕರ್ಣಾಟಕ ಸಾಹಿತ್ಯ ಪ್ರಪಂಚಕ್ಕೆ ಶ್ರೀನಿವಾಸರು ಹೊಸಬರಲ್ಲ; ವಿಮರ್ಶೆಗಳು ಗೀತಗಳು ಪ್ರಬಂಧಗಳು ರೂಪಕಗಳು ಇತ್ಯಾದಿಗಳನ್ನು ರಚಿಸಿ ಅವರು ನಮ್ಮ ಸಾಹಿತ್ಯವು ನಾನಾ ಮುಖವಾಗಿ ಮುಂದುವರಿಯಲು ಪ್ರಯತ್ನ ಪಟ್ಟಿರುತ್ತಾರೆ. ಅವರ "ಕೆಲವು ಸಣ್ಣ ಕತೆಗಳು" ಈಗ್ಗೆ ಸುಮಾರು ನಾಲ್ಕು ವರ್ಷಗಳ ಕೆಳಗೆ ಪ್ರಕಟಿಸಲ್ಪಟ್ಟಿತು. ಈಗ "ಸಣ್ಣ ಕತೆಗಳು" ಎಂಬ ಅದೇ ಜಾತಿಯ ಮತ್ತೊಂದು ಗ್ರಂಥವು ಪ್ರಕಟವಾಗಿದೆ. ಅದರ ಪರಿಚಯವನ್ನು ಪ್ರಬುದ್ಧ ಕರ್ಣಾಟಕದ ಪಾಠಕರಿಗೆ ಮಾಡಿಕೊಡಲು ಇಲ್ಲಿ ಉದ್ದೇಶಮಾಡಿದ್ದೇವೆ.

ಈ ಎರಡು ಕಥಾಪುಸ್ತಕಗಳೂ ಅಣ್ಣ ತಮ್ಮಂದಿರಂತಿವೆ. ಒಂದನ್ನು ಬಿಟ್ಟು ಒಂದು ಇರುವಂತಿಲ್ಲ. ನಮಗೂ, ಪ್ರಥಮಪರಿಚಯದಿಂದಲೋ ಮತ್ತಾವ ಕಾರಣ ದಿಂದಲೋ, "ಕೆಲವು ಸಣ್ಣ ಕತೆ" ಗಳಲ್ಲಿ ಮೈತ್ರಿಯುಂಟಾಗಿ ಬೆಳೆದು ಬಂದಿರುವುದರಿಂದ ಅದರ ಪ್ರಸ್ತಾಪವನ್ನೆತ್ತದೆ ಕೇವಲ ಈ "ಸಣ್ಣ ಕತೆ"ಗಳ ವಿಚಾರವನ್ನೇ ಹೇಳುವುದು ಸ್ವಲ್ಪ ಕಷ್ಟವಾಗಿದೆ. ಆದ್ದರಿಂದ ಇವೆರಡರ ವಿಚಾರವನ್ನೂ ಬೆರೆಸಿ ಕೊಂಡೇ ಹೇಳಬೇಕಾಗಿದೆ. ಇದಕ್ಕೆ ಮೊದಲೇ ಪಾಠಕರ ಕ್ಷಮೆಯನ್ನು ಬೇಡುತ್ತೇವೆ

"ಈ ಸಣ್ಣ ಪುಸ್ತಕದಲ್ಲಿರುವ ನಾಲ್ಕು ಕತೆಗಳಲ್ಲಿ ಮೊದಲನೆಯದು ಕೆಲವು ವರ್ಷಗಳ ಹಿಂದೆ ಮೈಸೂರಿನ ಮಧುರವಾಣಿ ಪತ್ರಿಕೆಯಲ್ಲಿ ಪ್ರಕಟವಾಯಿತು. ಎರಡನೆಯದೂ ಕೊನೆಯದೂ ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಎರಡು ಸಂಚಿಕೆ ಗಳಲ್ಲಿ ಅಚ್ಚಾದುವು; ಮೂರನೆಯದು ಜಯಕರ್ಣಾಟಕದಲ್ಲಿ...ಅಚ್ಚಾಯಿತು."

"ಸಣ್ಣಕಥೆ" ಎಂಬುದು ಇಂಗ್ಲಿಷ್ ಸಾಹಿತ್ಯದಿಂದ ಈಚೆಗೆ ಬಂದಿರುವ ಸಾಹಿತ್ಯ ವಿಶೇಷ; ಇಂಗ್ಲಿಷ್ ಸಾಹಿತ್ಯದಲ್ಲಿಯೂ ಇದು ಹುಟ್ಟಿ ಕಥೆ ಕಾದಂಬರಿ ಗಳಿಂದ ಬೇರೆಯಾಗಿ ಸ್ವತಂತ್ರವಾಗಿ ಬೆಳೆಯುತ್ತಿರುವುದು ಸುಮಾರು ಐವತ್ತು ವರ್ಷ ಗಳಿಂದ. ನಮಗ ಪಂಚತಂತ್ರ ಹಿತೋಪದೇಶ ಶುಕಸಪ್ತತಿ ಯವನಯಾಮಿನೀ

ವಿನೋದಗಳು ಪೌರಾಣಿಕ ಉಪಾಖ್ಯಾನಗಳು ಇಂದಿರಾ ನೀರದೆ ಮುಂತಾದ ಗ್ರಂಥಗಳು ಮತ್ತು ಚಿಕ್ಕ ಚಿಕ್ಕಕಥೆಗಳು ಚಿರಪರಿಚಿತವಾದವುಗಳು. ಆದರೆ ಇವು ಸಣ್ಣವಾಗಿರಬಹುದಾದರೂ ಇವುಗಳಲ್ಲಿ "ಸಣ್ಣಕಥೆ" ಗಳಲ್ಲಿರುವ ಲಕ್ಷಣಗಳಿರುವುದಿಲ್ಲ.

ನಮ್ಮ ದಿನಚರಿಯ ವ್ಯಾವಹಾರಿಕ ಪ್ರಪಂಚದಲ್ಲಿ ಅನೇಕ ವಿಧವಾದ ಶೀಲಸ್ವಭಾವ ನಡೆನುಡಿಗಳುಳ್ಳ ಜನರು ವಿಧವಿಧವಾದ ಸಂಬಂಧಗಳಲ್ಲಿ ಬೆರೆತು ಕಾಲದೇಶವರ್ತಮಾನಗಳಿಗೆ ಅನುಗುಣವಾಗಿ ವರ್ತಿಸುತ್ತಾರೆ. ಇಂಥ ವರ್ತನಗಳಿಂದ ಅವರ ಪರಸ್ಪರ ಸಂಬಂಧಗಳು ಕೆಲವು ವೇಳೆ ಹುರಿಗೊಳ್ಳುವುವು; ಕೆಲವು ವೇಳೆ ಮುರಿದು ಬೀಳುವುವು. ಜನಸಾಮಾನ್ಯರ ಸುಖ, ದುಃಖ, ಉದ್ದೇಶ, ಆಶಯ, ಭಾವ ವಿಭಾವ ಇವುಗಳು ಎಲ್ಲರಿಗೂ ಒಂದೇ ಸ್ವಭಾವದವುಗಳಾಗಿದ್ದರೂ ಕೆಲವು ಸನ್ನಿವೇಶಗಳಲ್ಲಿ ಕೆಲವರಿಗೆ ಅವು ತೀವ್ರವಾಗಿ ಕಾಣುವುವು. ಮನುಷ್ಯರ ಈ ರೀತಿಯಾದ ಅನುಭವಗಳನ್ನೊ, ಅವುಗಳ ಉಜ್ವಲ ಚಿತ್ರಗಳನ್ನೊ ಒದಗಿಸಿ ಅವನ್ನು ಇತರರ ಅನುಭವಕ್ಕಾಗಿ ರಚಿಸುವುದು ಕತೆಗಳನ್ನು ಬರೆಯುವವನ ಕೆಲಸ. ದೊಡ್ಡಕಾದಂಬರಿಗಳಲ್ಲಿ ಪಾತ್ರಗಳ ಜೀವನ ಚರಿತ್ರೆಗಳೂ, ಸಂಧಾನಗಳೂ ಶೀಲಸ್ವಭಾವಗಳೂ ಕ್ರಮೇಣ ಅಭಿವ್ಯಕ್ತವಾಗಿ ನಾನಾಮುಖವಾಗಿ ಅಭಿವೃದ್ಧಿಹೊಂದಿ, ಫಲಪ್ರಾಪ್ತಿಯಾಗುವಂತೆ ಪ್ರತಿಪಾದಿತವಾಗುತ್ತವೆ. ಸಣ್ಣ ಕತೆಗಳಲ್ಲಿ ಅಷ್ಟು ಅವಕಾಶವಿಲ್ಲ. ವಿವಿಧವ್ಯಾಪಾರಗಳಿಗೆ ಸ್ಥಳವಿಲ್ಲ. ಅವು ಅತ್ಯಲ್ಪ ಅವಕಾಶದಲ್ಲಿ ಅತ್ಯವಸರದಿಂದ ಯಾವುದಾದರೊಂದು ಚಿತ್ರವನ್ನೊ, ಭಾವವನ್ನೊ, ಸಂಘಟನೆಯನ್ನೊ ಎದುರಿಗೆ ತಂದು ನಿಲ್ಲಿಸಿ ಭಾವೋದ್ರೇಕಮಾಡಿ ಮನಸ್ಸನ್ನಾಕರ್ಷಿಸುವುವು. ಇಲ್ಲಿರುವಷ್ಟು ಸಂಗ್ರಹವೂ, ತೀವ್ರತೆಯೂ, ಏಕಾಗ್ರತೆಯೂ ಕಾದಂಬರಿಯಲ್ಲಿ ಪ್ರಾಯಃ ಇಲ್ಲ; ಅಲ್ಲಿನ ವಿಸ್ತಾರ ವೈವಿಧ್ಯ ಅವಕಾಶಗಳು ಸಣ್ಣಕತೆಗಳಲ್ಲಿಲ್ಲ.

ಮಿಕ್ಕಕಥಾಗ್ರಂಥಗಳಲ್ಲಿರುವಂತೆಯೆ ಸಣ್ಣಕತೆಗಳಲ್ಲಿಯೂ ಕಥಾವಸ್ತುವಿದೆ. ಆದರೆ ಇಲ್ಲಿ ಕೇವಲ ಕಥಾಭಾಗಕ್ಕೇ ಪ್ರಾಮುಖ್ಯತೆಯಿಲ್ಲ. ಕಾದಂಬರಿಗಳಲ್ಲಿಯೂ ಇತರ ಚಿಕ್ಕಕಥೆಗಳಲ್ಲಿಯೂ ಕಥೆಗೇ ಪ್ರಾಧಾನ್ಯ. ಅವು ಕಥೆಗಳಾಗಿ ಪ್ರಾರಂಭವಾಗಿ, ಕಥೆಗಳಾಗಿಯೇ ಪರಿಸಮಾಪ್ತಿಹೊಂದುವುವು. ಅದಕ್ಕೆ ಹೆಚ್ಚಿನದೇನಾದರೂ ಇದ್ದರೆ, ಅದು ಓದುವವರ ಪುಣ್ಯ; ಆದರೆ ಕಥೆಗಳ ಜೀವನಕ್ಕೆ ಅದು ಅತ್ಯಾವಶ್ಯಕವಲ್ಲ. ಸಣ್ಣಕತೆಗಳಲ್ಲಿ ಕಥೆಯೇ ಮುಖ್ಯವೆಂದು ಹೇಳುವವರು ಅತಿಧೈರ್ಯಶಾಲಿಗಳು. ಹೇಳುವ ರೀತಿಯೂ, ಮೂಲೋದ್ದೇಶ ಅಥವಾ ಭಾವವನ್ನು ಸುಲಭವಾಗಿ ಚಿತ್ರಿಸುವ ಕಲಾಚಾತುರ್ಯವೂ ಅಲ್ಲಿ ಮುಖ್ಯ. ಅನಂತ ವಿಸ್ತಾರವಾಗಿ ಪ್ರ

ಸರಿಸಿರುವ ವಸ್ತುವ್ಯಾಪಾರ ಜೀವನಗಳಲ್ಲಿ ಯಾವುದೋ ಒಂದು ಅಂಶವು, ಒಂದು ದೃಶ್ಯವು, ಒಂದು ಸನ್ನಿವೇಶವು, ಸ್ವಲ್ಪಮಟ್ಟಿಗೆ, ಸ್ವಲ್ಪಕಾಲಮಟ್ಟಿಗೆ ಮಾತ್ರ, ಗೋಚರಿಸಿ ಅನುಭವವೇದ್ಯವಾಗುವುದು. ತತ್ಸಂಬಂಧವಾದ ಇತರ ಅಂಶಗಳೂ ಒಡನೆಯೆ ಇರುವ ಸಂಭವವಿದ್ದರೂ, ನಮ್ಮ ದೃಷ್ಟಿಯೂ ಗಮನವೂ ಆ ಒಂದು ಪ್ರಧಾನವಿಷಯದಕಡೆಯೇ ನೆಟ್ಟಿರುವುದರಿಂದ ಅವುಗಳ ಪ್ರಜ್ಞೆ ನಮಗಿರುವುದಿಲ್ಲ. ಈ ಪ್ರಧಾನ ವಿಷಯವೊಂದರ ನಿರೂಪಣೆ ವರ್ಣನೆಗಳನ್ನೂ, ಅವುಗಳನ್ನು ಸಂಪೂರ್ಣವಾಗಿ ಪೋಷಿಸುವ ಅಂಗಾಂಗಳನ್ನೂ ಬಿಟ್ಟು, ಉಳಿದ ಯಾವ ಅಂಶಕ್ಕೂ ವಿಚಾರಕ್ಕೂ ಕತೆಯಲ್ಲಿ ಕೊಂಚವೂ ಎಡೆಯಿಲ್ಲ. ವರ್ಣನೆ ಸಂಭಾಷಣೆ, ವ್ಯಾಖ್ಯಾನ ವಿಮರ್ಶೆ ಮೊದಲಾದ ಅಂಗಗಳು ಪ್ರತಿಯೊಂದೂ ಮುಖ್ಯಭಾವದ ನಿಷ್ಠುರವಾದ ಏಕತ್ವವನ್ನು ಕಾಪಾಡಿ, ಅದರ ಪ್ರಕಾಶವನ್ನು ಉಜ್ವಲಗೊಳಿಸುವಂತೆ ಇರಬೇಕಲ್ಲದೆ, ಎಳ್ಳಷ್ಟೂ ಹದ್ದುಮೀರಿ, ಸ್ವತಂತ್ರವಾಗಿ ವರ್ತಿಸಕೂಡದು. ಎಂದರೆ ಕತೆಯಲ್ಲಿನ ಕ್ರಿಯೆಯೂ ಆಶಯವೂ, ಪರಿಣಾಮವೂ ಒಂದೇ ಒಂದು. ಒಟ್ಟು ಫಲಸ್ವಾರಸ್ಯವನ್ನು ದೊರಕಿಸುವಂತೆ–ಸಾಧಿಸುವಂತೆ–ಇರದಿದ್ದರೆ ಅದು ಕತೆಯ ದೊಡ್ಡ ಅವಗುಣ. ಕಾದಂಬರಿಯಲ್ಲಿ ವಿಸ್ತಾರ ವರ್ಣನೆಯಿರುವುದರಿಂದ ಅಲ್ಲಿ ಗ್ರಂಥಕರ್ತೃವು ತನಗೆಬೇಕಾದ ಸಾಮಗ್ರಿಗಳನ್ನು ಬೇಕಾದಹಾಗೆ ಒದಗಿಸಿಕೊಂಡು ನಿದಾನವಾಗಿ ಬರೆಯುವುದಕ್ಕೆ ಅವಕಾಶವುಂಟು. ಕತೆಗಳಲ್ಲಿ ಮೂಲಭಾವ, ಕೊನೆಯ ಪರಿಣಾಮ, ಇವುಗಳು ನಿಶ್ಚಿತವಾಗಿಬಿಟ್ಟರೆ ಸಾಕು; ಮಿಕ್ಕ ಎಲ್ಲಾ ಅಂಗೋಪಾಂಗಗಳೂ ಒಂದು ವಿಧವಾದ ನಿರ್ಬಂಧದಿಂದ ಅವನ್ನು ಚಾಚೂ ತಪ್ಪದೆ ಅನುಸರಿಸಬೇಕಾಗಿ ಬರುವುದರಿಂದ ಕರ್ತೃವಿನ ಚಮತ್ಕಾರ ಕೌಶಲಗಳೆಲ್ಲವೂ ಅತ್ಯಲ್ಪ ಅವಕಾಶದಲ್ಲಿ, ಪೂರ್ಣಫಲವನ್ನು ಗಳಿಸಿ ಕಲಾದೃಷ್ಟಿಯಲ್ಲಿ ಶೋಭಿಸುವಂತಿರಬೇಕು. ಆದುದರಿಂದಲೆ ಕೆಲವರು ಸಣ್ಣಕತೆಗಳನ್ನು ಬರೆಯುವುದು ಕಾದಂಬರಿಗಳನ್ನು ಬರೆಯುವುದಕ್ಕಿಂತಲೂ ಕಷ್ಟತರವಾದುದೆಂದೂ, ಅಲ್ಲಿ ರಚನಾ ರೀತಿಯೇ ಮುಖ್ಯವೆಂದೂ ಅದು "ಕಾದಂಬರಿಯ ಮರಿ" ಮಾತ್ರವಲ್ಲವೆಂದೂ ಹೇಳುತ್ತಿರುವುದು !

ಶ್ರೀನಿವಾಸರ ಕತೆಗಳಲ್ಲಿ ಸಣ್ಣಕತೆಗಳ ಪ್ರಪಂಚದ ಪ್ರಸರವೆಂಥದೆಂಬುದೂ, ಅಲ್ಲಿ ವಿಷಯಕ್ಕಿಂತ ರಚನಾರೀತಿಯೇ ಮುಖ್ಯವೆಂಬುದೂ ಚೆನ್ನಾಗಿ ತಿಳಿದುಬರುವುದು. ಅವರ ಕತೆಗಳಲ್ಲಿ ವಸ್ತುವೈವಿಧ್ಯವೂ, ವರ್ಣನಾವೈವಿಧ್ಯವೂ, ರಸವೈವಿಧ್ಯವೂ ಇರುವುವು. "ರಂಗನ ಮದುವೆ" ಯ ಗುಂಪಿಗೆ ಸೇರಿದ ಕತೆಗಳೂ "ವೆಂಕಟರಾಯನ ಪಿಶಾಚ" ವೂ ಕೇವಲ ಒಂದುತೆರದ ಚಿತ್ರಗಳು. ಇವುಗಳಲ್ಲಿ

ಸರಸವಾದ ಹಾಸ್ಯವಿನೋದಗಳಿವೆ; ವರ್ಣನಾಚಾತುರಿಯಿದೆ; ಹೃದಯವನ್ನಾಕರ್ಷಿಸುವ ಶಕ್ತಿಯಿದೆ. ಕಥಾಭಾಗವು ಏನೇನೂ ಇಲ್ಲವೆಂದೇ ಹೇಳಬಹುದು. ಆದರೂ ಅವನ್ನು ಓದಿದಮೇಲೆ ನಮಗೆ ಅಸಂತುಷ್ಟಿಯಾಗಲಿ ಯಾವ ವಿಧವಾದ ಅಪೂರ್ಣತೆಯ ಅನುಭವವಾಗಲಿ ಆಗದಿರುವುದರಿಂದ, ಇವನ್ನು ಸಣ್ಣಕತೆಗಳ ಜಾತಿಗೆ ಸೇರಿಸಬೇಕು. ಈ ಗುಂಪಿನ ಕತೆಗಳು, ಕೇವಲ ಚಿತ್ರಕ್ಕೂ ಸಣ್ಣಕತೆಗೂ ನಡುವೆ ಇರುವ ಅತಿಸೂಕ್ಷ್ಮವಾದ ಸೀಮಾವಿಭೇದವೆಂಥದೆಂಬುದನ್ನು ಸೂಚಿಸುತ್ತವೆ. "ರಂಗಸಾಮಿಯ ಅವಿವೇಕ" "ನಮ್ಮ ಮೇಷ್ಟರು" ಇವುಗಳು ಮೊದಲಿನ ಕತೆಗಳಿಗಿಂತಲೂ ಹೆಚ್ಚು ಧ್ವನಿವಿಶಿಷ್ಟವಾಗಿ ಗಭೀರವಾಗಿವೆ. ಎರಡನೆಯ ಗುಂಪಿಗೆ ಸೇರಿದುವು "ಬಾದಹಷನ ನ್ಯಾಯ—ದಂಡನೆ"* "ಇಲ್ಲಿಯತೀರ್ಪು" ಇತ್ಯಾದಿಗಳು. ಇವುಗಳಲ್ಲಿ ಚಮತ್ಕಾರವಿದೆ; ನ್ಯಾಯೈಕಪರತೆ ಮೊದಲಾದ ಗುಣಗಳ ಪ್ರಶಂಸೆಯಿದೆ. ನ್ಯಾಯವಿಮರ್ಶಾಪದ್ಧತಿಯ ಜಾಣ್ಮೆಯಿದೆ ಇಲ್ಲಿ ಕಥಾಭಾಗವು ಮೊದಲಿನ ಕತೆಗಳಿಗಿಂತಲೂ ಸ್ವಲ್ಪಹೆಚ್ಚಾಗಿದೆ. ಮೂರನೆಯ ಗುಂಪಿನ ಕತೆಗಳಲ್ಲಿ ಪ್ರಧಾನವಾಗಿ ಮನುಷ್ಯರ ಮನೋಭಾವ ಮನೋಗತಿಗಳಿಂದ ಉದ್ಭವಿಸಿದ ಸನ್ನಿವೇಶಗಳೂ, ಮನೋಭಾವವಿಮರ್ಶವಿವರಣಗಳೂ ಇವೆ. "ಒಂದು ಹಳೆಯ ಕತೆ" "ಇಂದಿರೆಯೊ ಅಲ್ಲವೊ" ಎಂಬವುಗಳು ಈ ಗುಂಪಿಗೆ ಸೇರಿರುತ್ತವೆ. ಇಂಥ ಕತೆಗಳನ್ನು ಹೇಳುವುದರಲ್ಲಿ ಶ್ರೀನಿವಾಸರು ನೆರೆಮನೆಗೆ ಹೊಕ್ಕು ಸ್ವಂತಮನೆಯ ಧಾರಾಳ ಸ್ವಾತಂತ್ರ್ಯವನ್ನು ಕಳೆದುಕೊಂಡವರಂತೆ ಕಂಡುಬರುವರು. ತಮ್ಮ ಮತ್ತು ಇತರರ (ಉದಾ. ಕೋರ್ಟ್ನೀ, ಘರ್ಕ್ಯುವರ್ ಸಾಹೇಬರುಗಳ) 'ಡೈರಿಗಳಿಂದ' ಉದ್ಧರಿಸಲ್ಪಟ್ಟ ಅವುಗಳ ಆಧಾರದಮೇಲೆ ಬರೆದ ಕತೆಗಳು ನಾಲ್ಕನೆಯ ಗುಂಪಿನವು; "ಕೃಷ್ಣಮೂರ್ತಿಯ ಹೆಂಡತಿ" "ಮಸುಮತ್ತಿ" ಇವು ಇದಕ್ಕೆ ಉದಾಹರಣೆ. ಮೊದಲನೆಯ ಪುಸ್ತಕದಲ್ಲಿ "ಬೀದಿಯಲ್ಲಿ ಹೋಗುವ ನಾರಿ" ಎಂಬುದೂ ಎರಡನೆಯ ಪುಸ್ತಕದಲ್ಲಿ "ಕೃಷ್ಣಮೂರ್ತಿಯ ಹೆಂಡತಿ" ಎಂಬುದೂ ಈ ವಿಧವಾದ ರಚನೆಯಲ್ಲಿ ಶ್ರೀನಿವಾಸರಿಗಿರುವ ಅತಿಶಯವಾದ ಕಲಾಕುಶಲತೆಯನ್ನೂ, ದಕ್ಷತೆಯನ್ನೂ ತೋರಿಸುವುವು. ಎರಡೂ ಬೇರೆಬೇರೆ ಜಾತಿಗೆ ಸೇರಿದುವಾದರೂ ವಿಷಯಗೌರವದಿಂದಲೂ, ವರ್ಣನಾರೀತಿಯಿಂದಲೂ, ಧ್ವನಿಭಾವಪೂರ್ಣತೆಯಿಂದಲೂ

---

* ಬಾದಷಹನ ದಂಡನೆಯು ಬಾದಷಹನ ಕಟ್ಟುನಿಟ್ಟನ್ನು ತೋರಿಸುವುದೊಂದಲ್ಲದೆ, ಸೂಚಿತವಾದ ಕೆಲವಂಶಗಳ ಆಧಾರದಮೇಲೆ ವಿಸ್ತಾರವಾಗಿ ಕತೆಯನ್ನು ಬೆಳೆಸಬಲ್ಲ ಶ್ರೀನಿವಾಸರ ಶಕ್ತಿಯನ್ನು ತೋರಿಸುವುದು. ಇದು ಲೀ ಹಂಟ್ ಕವಿಯ "ಮಹಮ್ಮದ್" ಎಂಬ ಕವನವನ್ನು ಆಧಾರವಾಗಿಟ್ಟುಕೊಂಡು ಆದರ ಕಥೆಯನ್ನು ವಿಸ್ತರಿಸಿ ಪುಷ್ಟೀಕರಿಸಿದಂತೆ ತೋರುವುದು.

ಉತ್ತಮಲಕ್ಷಣಲಕ್ಷಿತವಾಗಿವೆ. "ಬೀದಿಯಲ್ಲಿ ಹೋಗುವ ನಾರಿ" ಯಲ್ಲಿ ಸ್ವಾರಸ್ಯ, ಹಾಸ್ಯ, ಭಾವಪುಷ್ಟಿ, ಧ್ವನಿ, ತತ್ತ್ವಸೂಚನೆ ಇವು ಅತಿಸುಂದರವಾಗಿ ಒಂದು ಗೂಡಿ ಕತೆಯನ್ನು ಸಿಂಗರಿಸಿವೆ. ಎರಡನೆಯ ಕತೆಯ ರಚನಾರೀತಿಯೂ ಅಸಾಮಾನ್ಯವಾದದ್ದೇ. ಲಕ್ಷ್ಮಿ ಎಂಬ ಹುಡುಗಿಯು, ತನ್ನ ಗಂಡ ಸತ್ತನೆಂದು 'ತಿಳಿದು' ಬರಲು, ಭಾವಿಯೊಳಗೆ ಬಿದ್ದು ಪ್ರಾಣಬಿಟ್ಟ ಸಂಗತಿಯೇ ಇಲ್ಲಿಯ ಕಥಾವಿಷಯ. ಇಷ್ಟು ಸಂಗತಿಯನ್ನು ಸುಮಾರು ೨೫-೩೦ ಪುಟಗಳಷ್ಟು ವಿಸ್ತರಿಸಿ ಎಲ್ಲಿಯೂ ಮನಸ್ಸಿಗೆ ಬೇಸರತೋರದಂತೆ, ಕತೆಯ ರಂಜಕತೆಯು ಕಡಿಮೆಯಾಗದಂತೆ, ಮಾಡಿರುವುದು ಅವರ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ.

ಶ್ರೀನಿವಾಸರು ಮೊದಲು ಪ್ರಕಟಿಸಿದ ಸಣ್ಣ ಕತೆಗಳ ಕಾಂಡಕಾಂಡದಲ್ಲಿ ತಾಂಡವವಾಡುತ್ತಿದ್ದ ತಿಳಿಹೃದಯದ ಹಾಸ್ಯವಿನೋದಗಳು, ಈ ಎರಡನೆಯ ಭಾಗದಲ್ಲಿ ಸಂಪೂರ್ಣವಾಗಿ ಇಲ್ಲದಾಗಿರುವುದು ಒಂದು ವಿಧದಲ್ಲಿ ದುಃಖಕರವೇ ಸರಿ. ಏಕೆಂದರೆ ನಮ್ಮಲ್ಲಿ ಹಾಸ್ಯರಸಪ್ರಧಾನವಾದ ಸಾಹಿತ್ಯವು,--ಸರಳವಾಗಿ, ಸ್ವಚ್ಛಂದವಾಗಿ ನಮ್ಮಲ್ಲಿ ನಗುವಿನ ತರಂಗಗಳನ್ನೆಬ್ಬಿಸಿ ಮನಸ್ಸನ್ನು ಒಲಿಸಿಕೊಳ್ಳುವ ಗ್ರಂಥರಚನೆಯು—ಅಪರೂಪ. ಅಂಥ ಬರವಣಿಗೆಯನ್ನು ಬರೆಯುತ್ತಿದ್ದವರ, ಬರೆಯಬಲ್ಲವರ, ರಚನೆಯಲ್ಲಿ ಆವಿಲಾಸವು ನಿಂತುಹೋಗುತ್ತಿರುವುದನ್ನು ನೋಡಿದರೆ ಯಾರಿಗೆ ತಾನೆ ವ್ಯಸನವಾಗದಿರದು! ಈ ಕತೆಗಳು ಅವರ ಮನಸ್ಸು ಎಷ್ಟು ಹೆಚ್ಚು ಪರಿಪಕ್ವವಾಗುತ್ತಿರುವುದೆಂಬುದನ್ನು ಸ್ಪಷ್ಟಪಡಿಸಿವೆ. ಇದು ಒಂದು ವಿಧವಾದ ಲಾಭವೂ ಹೌದು; ಇಲ್ಲಿನ ವಿಷಯಗಳು ಹೆಚ್ಚು ಗಂಭೀರವಾಗಿವೆ; ಶೈಲಿಯು ಹೆಚ್ಚು ಕಲಾನುಸಾರಿಯಾಗಿದೆ. ಹಿಂದಿನಂತೆಯೆ ಲಲಿತವಾಗಿಯೂ ಸರಳವಾಗಿಯೂ ಇದ್ದರೂ ಅತಿ ಎಚ್ಚರಿಕೆಯಿಂದ ತೂಕಮಾಡಿ ಬರೆದಿರುವಂತೆ ಭಾವವಾಗುತ್ತದೆ. ಹಿಂದಿನ ಕತೆಗಳಲ್ಲಿಲ್ಲದ—ಆದರೆ ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಕಾಣಬರುವ—ಜೀವಿಗಳ ಮೂಕಯಾತನೆಯೊಂದರ ಅನುಭವವೂ, ಅವರ ಹೃದಯ ಮತ್ತು ದೃಷ್ಟಿರೀತಿಗಳಲ್ಲಿ ಬಹಳಮಟ್ಟಿಗೆ ಉಂಟಾಗಿರುವ ಒಂದು ಮಾರ್ಪು ಈ ಕತೆಗಳಲ್ಲಿ ಪ್ರತಿಬಿಂಬಿಸಿರುವಂತೆ ತೋರುವುದು. ಹಿಂದಿನ ಸರಳತಾಪೂರ್ಣವಾದ ತಿಳಿಯಾದ, ದುಃಖಲೇಶದ ಅರಿವಿಲ್ಲದ ಮನೋಧರ್ಮವು ಈಗ ಕದಡಿ ಹೋಗಿ, ಕೆಲವು ಚಿಂತೆಗಳಿಂದ ಅಧೀರವಾಗಿ ವ್ಯಸ್ತವಾಗಿರುವಂತೆ ತೋರುವುದು. ನಮ್ಮ ಸ್ನೇಹಿತರೊಬ್ಬರು ಈ ಪರಿವರ್ತನೆಯನ್ನು "ತಿಳಿಯಾದ ಕಬ್ಬಿನ ಹಾಲು ಕಾದು ಬೆಲ್ಲದ ಮುದ್ದೆಯಂತಾಗಿ ಹೋಗಿದೆ" ಎಂದು ಹೋಲಿಸಿ ಹೇಳಿದರು.-ಎರಡರಲ್ಲಿಯೂ ಸಿಹಿಯಿದೆ; ಉಪಯೋಗವಿದೆ; ಆದರೆ ಇದರ ಸ್ವರೂಪಕ್ಕೂ ಅದರ ಸ್ವರೂಪಕ್ಕೂ ಎಷ್ಟುವ್ಯತ್ಯಾಸ!

ಅವರ ವರ್ಣನಾಶಕ್ತಿಯೂ ಮೊದಲಿಗಿಂತಲೂ ಹೆಚ್ಚು ಭಾವಪುಷ್ಟವಾಗಿ ಹೆಚ್ಚು ಸಂಸ್ಕೃತವಾಗಿರುವಂತೆ ತೋರುವದು. ಆದರೆ ಕೆಲವು ಕಡೆಗಳಲ್ಲಿ ಸಂಸ್ಕೃತವಷ್ಟೇ ಅಲ್ಲ, ಸ್ವಲ್ಪಕ್ಲಿಷ್ಟವಾಗಿ ಕೃತಕವಾಗಿ ವಿದ್ವತ್ಪ್ರದರ್ಶಕವಾಗಿ ಕಂಡುಬರುತ್ತದೆ. ಅವರ ಶೈಲಿಯ ಪ್ರವಾಹವೂ, ಪದಬಂಧವೂ, ತೊಡಕಿಲ್ಲದೆ ಮುಂದುವರಿದು ಹೋಗುವುದು. ಆದರೆ ಹಿಂದಿನ ಕತೆಗಳಲ್ಲಿ ಕಾಣಬರುವ ಲೇಖನಿಯ ಓಟವು ಸ್ವಚ್ಛಂದವಾದದ್ದು;—ಆಕಾಶದಲ್ಲಿ ಹಾರಾಡುವ ಹಕ್ಕಿಯ ಗಮನದಂತೆ. ಇಲ್ಲಿನ ಓಟದಲ್ಲಿ ಹಿಡಿತವಿದೆ—ಕಾಲಿಗೆ ಹೊಂದದ ಜೋಡನ್ನು ಹಾಕಿಕೊಂಡು ತಿರುಗುವವರ ನಡಿಗೆಯಂತೆ.

ಕೆಳಗಣ ಉದಾಹರಣೆಗಳಿಂದ ಈ ಮಾರ್ಪು ಯಾವ ರೀತಿಯಾಗಿದೆಯೆಂಬುದನ್ನು ಸ್ವಲ್ಪಮಟ್ಟಿಗೆ ತಿಳಿಯಬಹುದು.

ಮೊದಲನೆಯ ಪುಸ್ತಕದಲ್ಲಿ:—

" ಹಸುವಿನ ಬಳಿಗೆ ಕರು ಬರುವಂತೆ—ಎಮ್ಮೆಯ ಹತ್ತಿರಕ್ಕೆ ಎಮ್ಮೆಯಕರು ಬರುವ ಹಾಗೆ, ನಿಮ್ಮ ಹೆಂಡತಿ ಬಂದರಲ್ಲ—ಆಗ ನೀವು ಬಂದಿರುವುದು ತಿಳಿದಿದ್ದರೂ, ತಿಳಿಯದಿದ್ದ ಹಾಗೆ ಅವರು ನಟಿಸಿದರು—ನೀವು ಏನುಮಾಡಲಾಯಿತು ? "..........." ಮದುವೆಯ ದಿನ ಹಸೆಯ ಮೇಲೆ ಕುಳಿತರೆ (ಅವರ) ಮೊಣಕಾಲೆ ನಿಮ್ಮ ದೇವರು—ನೀವು ಅದನ್ನು ನೂರಾರುಸಲ ವಿಶ್ವಾಸದಿಂದಲೂ....ಭಕ್ತಿಯಿಂದಲೂ....ನೋಡಿದಿರಿ. ಮುಖವನ್ನು ನೋಡದೆ ಇದ್ದರೂ ಅದರ ಹಿಂದೆ ಮುಖವಿದೆಯೆಂದು ಧೈರ್ಯ—ನಿಮಗೆ"........" ಬರವಣಿಗೆಯೊ ಹೆಂಗಸರ ಮನಸ್ಸಿನಂತೆ ಡೊಂಕು ಡೊಂಕು; ಅಕ್ಷರಗಳಿಗೆ ಹೊಟ್ಟೆಯೇನೋ ದಪ್ಪ ; ಆದರೆ ಶಕ್ತಿಸಾಲದು. ಸಾಹುಕಾರರ ಹಾಗೆ " ......." ಶಿಪಾಯಿ ಮೀಸೆಯನ್ನು ಹುರಿಮಾಡುವ ಹಾಗೆ ರಂಗಪ್ಪನು ತನ್ನ ಮನಸ್ಸನ್ನು ಗಟ್ಟಿಮಾಡಿಕೊಂಡನು ".

" ವೇಶ್ಯೆಯನ್ನೂ ಹಜಾಮನನ್ನೂ ನೋಟದಿಂದ ಗುರುತಿಸಬೇಕೇ ಹೊರತು ಪ್ರಶ್ನೆಮಾಡಲಾಗದು. ಬೀದಿಯಲ್ಲಿ ಹೋಗುವವನನ್ನು " ನೀನು ಹಜಾಮನೇ " ಎಂದರೆ ಆಗಿದ್ದರೇನೋ ಪರವಾ ಇಲ್ಲ, ಆಗದೆ ಇದ್ದರೆ, " ನಿಮ್ಮಪ್ಪ ಹಜಾಮ " ಎನ್ನುವನು; ವೇಶ್ಯೆಯೂ ಹೀಗೆಯೆ " ಇತ್ಯಾದಿ.

ಎರಡನೆಯ ಭಾಗದಲ್ಲಿ :—

" ಒರಟು ಜನರೆನ್ನುವರ ಮನಸ್ಸು ವಸಂತದ ಕೋಗಿಲೆಯ ಕೂಗಿಗೆ ನಲಿಯುವುದು ; ಅದು ಕೇವಲ ಒಂದು ಸ್ವರ ಮಾತ್ರ; ನಮ್ಮ ಮನಸ್ಸು ನಲಿಯಲು ಬೀಟ್ಹೊವನಿನ ಸಿಂಫನಿಗಳೂ ಸಾಲವು ".

"ಇಷ್ಟು ಅನುಕೂಲವಾದ ಜಾಗದಲ್ಲಿ ಈ ಕೊರತೆಯೊಂದು ಇದೆಯಲ್ಲ ! ಪ್ರಪಂಚವು ಸೋಮನಾಥಪುರದ ದೇವಾಲಯವೇ ಸರಿ...."ಇತ್ಯಾದಿ—

ಒಟ್ಟಿನಲ್ಲಿ ಈ ಕತೆಗಳಲ್ಲಿ ಕಂಡುಬರುವ ಅವರ ಮನೋಧರ್ಮವನ್ನು ಅವರೇ ಬೇರೊಂದು ಪ್ರಕರಣದಲ್ಲಿ ಹೇಳಿರುವ ವ್ಯತ್ಯಾಸಕ್ಕೆ ಹೋಲಿಸಬಹುದು.

" ಅಯ್ಯೋ ಪಾಪ ! ಇನ್ನೂ ಮಗುವಾಗಿದ್ದಾಗ ಮದುವೆಯ ಹಸೆಯಮೇಲೆ ಕುಳಿತು ಹಾಸ್ಯದ ಹಾಡುಗಳನ್ನು ಹೇಳಿ ಹುಡುಗಾಟವಾಡುವಾಗ ಇದ್ದ ಆ ಮುಖದ ಭಾವಕ್ಕೂ, ಏನೋ ಒಂದು ಯೋಚನೆಯಿಂದ ಮುಚ್ಚಿ, ಎಲ್ಲೋ ಇರುವ ದೃಷ್ಟಿಯಿಂದ ಕೂಡಿ, ಆಟವನ್ನು ಮರೆತಂತಿರುವ ಈ ಮುಖದ ಭಾವಕ್ಕೂ ಎಷ್ಟು ವ್ಯತ್ಯಾಸ ! "

ವಿ. ಸೀ.

---

# ವಸ್ತುಕೋಶ

ಈ ವರ್ಷ ಸಂಘದ ಮೊದಲನೆಯ ಚರ್ಚಾಸಭೆಯು ನಮ್ಮ ಉಪಾಧ್ಯಕ್ಷರಾದ ಮ|| ಬಿ. ನಾಗೇಶರಾವ್ ಎಂ. ಎ. ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

**ಸಂಘದಲ್ಲಿ ಈಚೆಗೆ ನಡೆದ ಕಾರ್ಯಗಳು**

"ಹಿಂದೀಭಾಷೆಯು ಇಂಡಿಯಾ ದೇಶದಲ್ಲಿ ಸಾಮಾನ್ಯಭಾಷೆಯಾಗಿರಬೇಕು" ಎಂಬುದೇ ವಿಷಯ. ಮೂರನೆ ಬಿ.ಎ. ತರಗತಿಯ ಮ|| ಡಿ. ಎಂ. ಶೇಷಗಿರಿರಾಯರು ಈ ವಿಷಯದ ಪರವಾಗಿ ಸಕಾರಣವಾಗಿ ಮಾತನಾಡಿ, ಇತ್ಯರ್ಥಪಡಿಸುವುದಕ್ಕಾಗಿ ಸಭಿಕರನ್ನು ಪ್ರಾರ್ಥಿಸಿದರು. ಮೂರನೆ ಬಿ. ಎಸ್‌ಸಿ ತರಗತಿಯ ಮ|| ಎಚ್. ರಾಮಕೃಷ್ಣರಾಯರವರು ಪ್ರತಿಪಕ್ಷವನ್ನು ಹಿಡಿದು ವಾದಿಸಿದರು. ಈ ವಿಷಯವನ್ನು ಅನುಮೋದಿಸಿಯೂ, ಪ್ರತಿಭಟಿಸಿಯೂ ಅನೇಕರು ಮಾತನಾಡಿದನಂತರ 'ಸಮ್ಮತ'ಗಳನ್ನು ಕೇಳುವಲ್ಲಿ, ಮ|| ಶೇಷಗಿರಿರಾಯರ ಪಕ್ಷವೇ ಗೆದ್ದಿತು.

ಸಂಘದ ಪರವಾಗಿ ಇಂಗ್ಲಿಷಿನಲ್ಲಿಯೂ ಒಂದು ಚರ್ಚೆಯು ನಡೆಯಿತು. "ನಮ್ಮ ದೇಶದ ವಿದ್ಯಾಭ್ಯಾಸಕ್ರಮದಲ್ಲಿ ಸಾಹಿತ್ಯದ ಅಭ್ಯಾಸಕ್ಕಿಂತಲೂ, ವಿಜ್ಞಾನಶಾಸ್ತ್ರಗಳ ಅಭ್ಯಾಸಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡಬೇಕು" ಎಂಬ ವಿಷಯದ ಪರವಾಗಿ ಎರಡನೆ ಬಿ.ಎ. ತರಗತಿಯ ಮ|| ಜೆ. ದಾರಾಪಾರವರು ಆರಂಭ ಭಾಷಣಮಾಡಿದರು. ಮೊದಲನೇ ತರಗತಿಯ ಮ|| ಎಚ್. ಭಾಸ್ಕರರಾಯರು ಪ್ರತಿಭಟಿಸಿ ಮಾತನಾಡಿದರು. ಆಗ ನಮ್ಮ ಕಾಲೇಜಿನ ಭೌತಿಕಶಾಸ್ತ್ರಾಧ್ಯಾಪಕರಾದ ಮ|| ಬಿ. ವೆಂಕಟೇಶಾಚಾರ್ ಎಂ. ಎ. ಯವರು ಅಗ್ರಾಸನವನ್ನಲಂಕರಿಸಿದ್ದರು. ಅನೇಕ ಮಂದಿ ಸಭಿಕರು ಚರ್ಚೆಮಾಡಿದನಂತರ, ಬಹುಮತದಿಂದ ಚರ್ಚಾವಿಷಯವು ಅಂಗೀಕರಿಸಲ್ಪಡಲಿಲ್ಲ.

ಸಂಘದ ಎರಡು ಉಪನ್ಯಾಸಗಳು ಮ|| ಟಿ. ಎಸ್. ವೆಂಕಣ್ಣಯ್ಯನವರ ಅಧ್ಯಕ್ಷತೆಯಲ್ಲಿ ನಡೆದುವು. ಆಗ ಧಾರವಾಡದ ಕರ್ಣಾಟಕ ಕಾಲೇಜಿನ, ಮ|| ಆರ್. ಎ. ಕುಲಕರ್ಣಿ ಬಿ. ಎ. ಯವರು "ಕನ್ನಡ ಸಾಹಿತ್ಯದ ಟೀಕಾತ್ಮಕ ನಿರೀಕ್ಷಣ" ಎಂಬ ಉಪನ್ಯಾಸವನ್ನು ಎರಡು ದಿವಸ ಓದಿದರು.

ಪ್ರತಿವರ್ಷದಂತೆ, ಈ ವರ್ಷವೂ ಕಾವ್ಯವಾಚನಸ್ಪರ್ಧೆಯೊಂದು ನಡೆಯಿತು. ಮ|| ಗಳಾದ ಎ. ಎಲ್. ನರಸಿಂಹಯ್ಯನವರೂ, ಬಿ. ನಾಗೇಶರಾಯರೂ, ಪಿ. ಶ್ರೀನಿವಾಸರಾಯರೂ ನ್ಯಾಯಾಧಿಪತಿಗಳಾಗಿದ್ದರು. ಇಪ್ಪತ್ತೆರಡು ಮಂದಿ ಸ್ಪರ್ಧಿಷ್ಣುಗಳಲ್ಲಿ, ಮ|| ಗಳಾದ ವೈ. ಜಿ. ನಂಜುಂಡಯ್ಯನವರಿಗೂ, ಆರ್. ಕೃಷ್ಣಮೂರ್ತಿಗಳಿಗೂ ಬಹುಮಾನವು ಸಲ್ಲತಕ್ಕದೆಂದು ತೀರ್ಮಾನವಾಯಿತು. ನಮ್ಮ ಉಪಾಧ್ಯಕ್ಷರು ಬಹುಮಾನಪಡೆದ ನಮ್ಮ ಮಿತ್ರರನ್ನು ಅಭಿನಂದಿಸಿ, ನ್ಯಾಯಾಧಿಪತಿಗಳಿಗೆ ಕೃತಜ್ಞತೆಯನ್ನು ಸೂಚಿಸಿ, ಸಭಿಕರಿಗೆ ವಂದನೆಗಳನ್ನರ್ಪಿಸಿದುದಲ್ಲದೆ 'ಕಾವ್ಯವಾಚನ' ವಿಚಾರವಾಗಿ ಭಾಷಣಮಾಡಿ ಬಹುಮಾನಿತರಾಗದ ಸ್ಪರ್ಧಿಷ್ಣುಗಳಿಗೆ ಉತ್ತೇಜನ ದಾಯಕವಾದ ಉಪದೇಶವನ್ನು ಮಾಡಿದರು.

ಈ ವರ್ಷ ನಮ್ಮ ಸಂಘದಲ್ಲಿ 'ಸಾಹಿತ್ಯಶಾಖೆ' ಯೊಂದನ್ನು ಏರ್ಪಡಿಸಿರುವೆವು. ಪ್ರತಿ ಶನಿವಾರವೂ ಸಾಹಿತ್ಯಾಭಿಲಾಷಿಗಳಾದ ಸಭಿಕರು ಸಭೆ ಸೇರುವರು. ಐತಿಹಾಸಿಕ ದೃಷ್ಟಿಯಿಂದ ಕನ್ನಡ ಸಾಹಿತ್ಯವನ್ನು ಅಭ್ಯಾಸಮಾಡುವುದೇ ಸಭೆಯವರ ಉದ್ದೇಶ. ಇದು ಎಷ್ಟರಮಟ್ಟಿಗೆ ಫಲಕಾರಿಯಾಗುವುದೆಂಬುದು ನಿರೀಕ್ಷಿಸತಕ್ಕದಾಗಿದೆ.

ಎಂ. ವಿ. ಸೀತಾರಾಮಯ್ಯ,
**ಗೌ|| ಕಾರ್ಯದರ್ಶಿ.**

---

**ವೀರಶೈವರ ವಚನಗಳು.**

ಕ್ರಿ. ಶ. ೧೨ನೆಯ ಶತಮಾನದ ಉತ್ತರಾರ್ಧದ ವೀರಶೈವಮತ ಪ್ರಾಬಲ್ಯದಿಂದ ಕರ್ಣಾಟಕ ಸಾಹಿತ್ಯದಲ್ಲಿ ನವಜೀವನವುಂಟಾಗಿ 'ವಚನ' ಗಳೆಂಬ ಗದ್ಯಪ್ರಭೇದವು ತಲೆದೋರಿತು...ಈ ವಚನಗಳು ಪ್ರಬಲಿಸುವುದಕ್ಕೆ ವೀರಶೈವಮತವು ಬಸವೇಶ್ವರನಿಂದ ಜೀರ್ಣೋದ್ಧಾರವಾದುದೇ ಮುಖ್ಯ ಕಾರಣವಾಗಿರುತ್ತದೆ. ಇತರ ಮತದವರ ದೆಸೆಯಿಂದ ನಮಗೆ ಸಾಹಿತ್ಯದಲ್ಲಿ ಕಾಣದಿರುವ ವಚನಗಳು ವೀರಶೈವರ ದೆಸೆಯಿಂದ ಮಾತ್ರ ಕಂಡುಬರುವುದನ್ನು ನೋಡಿದರೆ ಈ ವಚನರಚನೆಗೆ ವಿಶೇಷ ಕಾರಣಗಳು ಇದ್ದಿರಬಹುದೆಂದು ಧಾರಾಳವಾಗಿ ಹೇಳಬಹುದು. ಇವುಗಳನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳುವುದು ಸಾರ್ಥಕವಾಗದೆ ಹೋಗಲಾರದು.

(೧) ಮೊದಲು ಬ್ರಾಹ್ಮಣರಾಗಿದ್ದು ಅಥವಾ ಜೈನರಾಗಿದ್ದು ತಾವಾಗಿಯೋ ಅಥವಾ ವಾದವಿವಾದಗಳಲ್ಲಿ ಸೋತೋ ವೀರಶೈವವನ್ನು ಅವಲಂಬಿಸಿದ ಪಂಡಿತರುಗಳ ಸಂಖ್ಯೆಯು ಗಣನೀಯವೆಂದು ಹೇಳುವಹಾಗಿಲ್ಲ.

(೨) ವೀರಶೈವಮತ ಪ್ರಾಚುರ್ಯಕಾರ್ಯದಲ್ಲಿ ಉತ್ಸಾಹಶಾಲಿಗಳಾಗಿದ್ದವರೂ ವೀರಶೈವ ಮತಾವಲಂಬನೆಯಲ್ಲಿ ಕುತೂಹಲಿಗಳಾಗಿದ್ದವರೂ ಸಾಮಾನ್ಯವಾಗಿ ಇತರ ಜಾತಿಯವರೆಂಬುದು ವೀರಶೈವ ಪುರಾಣಾದಿಗಳಿಂದಲೇ ವ್ಯಕ್ತಪಡುತ್ತದೆ.

(೩) ಬಸವೇಶ್ವರನು ಜಂಗಮಕೂಟವನ್ನೇರ್ಪಡಿಸಿದಾಗ ಅವರಲ್ಲಿ ಸಂಸ್ಕೃತ ಮತ್ತು ಕರ್ಣಾಟಕ ಭಾಷಾಪಾಂಡಿತ್ಯವನ್ನು ಹೊಂದಿ ವಾದವಿವಾದಗಳಲ್ಲಿ ಗೆದ್ದ ಮಹಾತ್ಮರ ಸಂಖ್ಯೆಯು ಅತ್ಯಲ್ಪವಾಗಿದ್ದಿತೆಂದೂ ಅಕ್ಷರಸ್ಥರಲ್ಲದೆ ಕೇವಲ ಭಕ್ತಿಯಿಂದಲೇ ಪವಾಡಪುರುಷರಾಗಿದ್ದವರ ಸಂಖ್ಯೆಯು ಅಧಿಕವಾಗಿದ್ದಿತೆಂದೂ ತಿಳಿಯಬಹುದಾಗಿದೆ.

(೪) ವೇದೋಪನಿಷತ್ತುಗಳಲ್ಲಿಯೇ ವೀರಶೈವ ತತ್ತ್ವನಿರೂಪಣೆಯು ಬೀಜರೂಪದಲ್ಲಿರುವುದನ್ನು ನೋಡಿರುತ್ತೇವಾದರೂ ವೀರಶೈವರು ತಮ್ಮ ಮತಸಿದ್ಧಾಂತವನ್ನು ಬೆಳಸುವುದಕ್ಕಾಗಿ ಸಂಸ್ಕೃತದಲ್ಲಿ ಅಷ್ಟೊಂದು ಸಾಹಸಪಟ್ಟಿರುವುದನ್ನು ನಾವು ನೋಡಲಾಗುವುದಿಲ್ಲ. ಬ್ರಾಹ್ಮಣ ಮತ್ತು ಜೈನಮತಸ್ಥರ ಗ್ರಂಥಗಳೆಲ್ಲವೂ ಸಂಸ್ಕೃತದಲ್ಲಿವೆ.

ಮೇಲೆ ಹೇಳಿದ ವಿಷಯಗಳನ್ನೆಲ್ಲ ಪರ್ಯಾಲೋಚಿಸಿದರೆ ಬಸವೇಶ್ವರನ ಕಾಲದಲ್ಲಿ ವೀರಶೈವವನ್ನು ಹರಡಲುದ್ಯುಕ್ತರಾದವರೂ ವೀರಶೈವವನ್ನು ಅವಲಂಬಿಸಲು ತೊಡಗಿದವರೂ ಮತತತ್ತ್ವಗಳನ್ನು ತಿಳಿಯುವುದಕ್ಕೂ ಹೇಳುವುದಕ್ಕೂ ದೇಶಭಾಷೆಯಾದ ಕನ್ನಡವನ್ನೇ ಆಶ್ರಯಿಸಬೇಕಾಯಿತೆಂದು ಒಟ್ಟಿನಲ್ಲಿ ಹೇಳಬೇಕಾಗುತ್ತದೆ. ಇಂಥವರು ಛಂದಃಪ್ರಾಸಾದಿ ನಿಯಮಗಳನ್ನು ಬಲ್ಲವರಾಗದೆ ಕೇವಲ ಭಕ್ತಿರಸದಿಂದ ಅಂತರಂಗದಲ್ಲಿ ಹೊಳೆದು ಹೊರಹೊಣ್ಮಿದ ಭಾವಗಳನ್ನು ಹೇಗಾದರೂ ತಿಳಿಸಬೇಕಾಗಿದ್ದುದರಿಂದ, ವಿಜಾತೀಯವಾದ ರಸಯುಕ್ತವಾಗಿರುವ ಗದ್ಯವು ತಲೆದೋರಿತು. ವಚನಕಾರರಲ್ಲಿ ಬಸವೇಶ್ವರ ಚೆನ್ನಬಸವ ಮುಂತಾದವರು ಸಂಸ್ಕೃತವನ್ನು ಬಲ್ಲವರಾಗಿದ್ದರೆಂದು ಅವರ ವಚನಗಳಲ್ಲಿ ಅಲ್ಲಲ್ಲಿ ಉದಾಹರಿಸಿರುವ ಸಂಸ್ಕೃತವಾಕ್ಯಗಳಿಂದ ದೃಢವಾಗಿ ತಿಳಿಯಬಹುದು. ಆದರೆ ನಾನಾಜಾತಿಯವರನ್ನು ಲಿಂಗವಂತರನ್ನಾಗಿ ಮಾಡಬೇಕಾದ ಸಂದರ್ಭದಲ್ಲಿ ದೇಶಭಾಷೆಯಾದ ಕನ್ನಡವನ್ನೇ ಮುಖ್ಯಸಹಕಾರಿಯನ್ನಾಗಿ ಅವರು ಅಂಗೀಕರಿಸಿದರೆಂದು ನಮಗೆ ತಿಳಿದುಬಂದಿರುವ ಸಾಹಿತ್ಯದಿಂದ ಹೇಳಬೇಕಾಗುತ್ತದೆ. ಬಸವೇಶ್ವರನು ಮತತತ್ತ್ವನಿರೂಪಣಕ್ಕಾಗಿ ವಚನಗಳನ್ನು ಪಳಗಿಸಿಕೊಂಡು ಶಾಶ್ವತವಾದ ರೀತಿಯಲ್ಲಿ ಕರ್ಣಾಟಕ ಸಾಹಿತ್ಯಸೇವೆಯನ್ನು ಮಾಡಿರುವನೆಂಬುದಕ್ಕೆ ಯಾವ ಸಂಶಯವೂ ಇಲ್ಲ. ಆತನು ಹಾಕಿದ

ಮಾರ್ಗವನ್ನು ಇತರರೂ ಅನುಸರಿಸಿದುದರಿಂದ ವಚನಗಳು ಅಧಿಕವಾಗಿ ಬೆಳೆಯುವುದಕ್ಕೆ ಕಾರಣವಾಯಿತು.

ವಚನಗಳಲ್ಲಿ ಪ್ರತಿಪಾದಿತವಾಗಿರುವ ವಿಷಯಗಳು ಅಸಂಖ್ಯಾತವಾಗಿದ್ದರೂ ಸ್ಥೂಲದೃಷ್ಟಿಯಿಂದ ನೋಡಿ ಅವುಗಳನ್ನು ಸಂಗ್ರಹಿಸಬಹುದು. ಮುಖ್ಯವಾಗಿ ವೀರಶೈವಮತ ವಿಷಯಗಳು ಅವುಗಳಲ್ಲಿ ಹೇರಳವಾಗಿವೆ. ಆ ಮತವಿಷಯಗಳಲ್ಲಿ ಅಂಗಸ್ಥಲ ೪೪, ಲಿಂಗಸ್ಥಲ ೫೭, ಒಟ್ಟು ನೂರೊಂದು ಸ್ಥಲಗಳು ವೀರಶೈವವನ್ನೆಲ್ಲ ತಿಳಿಸುವುದರಿಂದ ದೀಕ್ಷಾವಿಧಾನಗಳು, ಪೂಜಾವಿಧಾನಗಳು, ಪ್ರಸಾದ ವಿಭೂತಿ ರುದ್ರಾಕ್ಷ ಪಾದೋದಕಾದಿಗಳ ಮಹಿಮಾನಿರೂಪಣಗಳು, ಜಂಗಮಾರ್ಚನೆ, ಸದ್ಭಕ್ತನಮಸ್ಕಾರಾದಿಗಳ ಫಲವಿವರಣೆಗಳು ಮುಂತಾದುವುಗಳನ್ನೆಲ್ಲ ಹೇಳಿ ಜನರು ಪ್ರವೃತ್ತಿಮಾರ್ಗವನ್ನು ಬಿಟ್ಟು ನಿವೃತ್ತಿಮಾರ್ಗಗಾಮಿಗಳಾಗುವಂತೆ ಈ ವಚನಗಳು ಬೋಧಿಸುತ್ತವೆ. ..ಕೆಲವು ವಚನಗಳು ಸ್ತೋತ್ರರೂಪವಾಗಿಯೂ ಕೆಲವು ಕಾಲಜ್ಞಾನವನ್ನು ಹೇಳುವುವಾಗಿಯೂ ಇರುವುದುಂಟು. ಇವುಗಳ ಜೊತೆಗೆ ಲೌಕಿಕ ವಿಚಾರಗಳನ್ನೂ ಸಮಾಜಸುಧಾರಣೆಯ ವಿಷಯಗಳನ್ನೂ ನೀತಿಗಳನ್ನೂ ಸಂದರ್ಭಾನುಸಾರ ವಚನಕಾರರು ತಿಳಿಸುತ್ತಾರೆ. ವಚನಗಳ ಪ್ರತಿಪಾದ್ಯ ವಿಷಯಗಳನ್ನು, ಶಿಷ್ಯರಿಗೆ ಬೋಧಿಸಿದ ವೀರಶೈವ ತತ್ತ್ವಾಮೃತ, ಭಕ್ತಿರಸದಿಂದ ಹೊರಹೊಣ್ಮಿದ ಅಂತರಂಗಭಾವಗಳು ಮತ್ತು ಆಚಾರವ್ಯವಹಾರ ಪೂಜಾಲೋಪಗಳನ್ನು ಕಂಡು ಆಡಿದ ನಿಷ್ಠುರವಾಕ್ಯಗಳು ಎಂದು ಸಂಗ್ರಹರೂಪವಾಗಿ ಹೇಳಬಹುದಾಗಿದೆ.....

ಮತತತ್ತ್ವನಿರೂಪಣಕ್ಕಾಗಿ ಉಪಯೋಗವಾಗಿರುವುದರಿಂದ, ವಚನಗಳಲ್ಲಿ ಅಭಿಪ್ರಾಯವು ಸೂತ್ರಗಳಲ್ಲಿರುವಂತೆ ಅಲ್ಪಾಕ್ಷರಗಳಿಂದ ಪೋಷಿತವಾಗಿ, ಆ ವಚನಗಳು ಮಾತಿನ ಬಿಗಿಕಟ್ಟನ್ನು ಹೊಂದಿವೆ. ಭಕ್ತ್ಯತಿಶಯದಿಂದ ಕವಿತಾವೇಶವು ತಲೆದೋರಿದಾಗ ವಚನಗಳು ಹೊರಹೊರಟುದರಿಂದ ಕಾವ್ಯಲಕ್ಷಣವಾದ ರಸಸ್ಫೂರ್ತಿಯನ್ನು ಅವು ಪಡೆದಿರುತ್ತವೆ. ಈ ರಸಸ್ಫೂರ್ತಿಯ ದೆಸೆಯಿಂದಲೇ ಪ್ರಾಸಾನುಪ್ರಾಸಗಳು ಅನೇಕವಚನಗಳಲ್ಲಿ ನಿರಾಯಾಸವಾಗಿ ಹೊಂದಿಕೊಂಡು ಬಂದಿರುವುವು...

ಈ ವಚನಗಳಲ್ಲಿ ಪ್ರೌಢವ್ಯಾಕರಣ ನಿಯಮಗಳನ್ನು ನೋಡಬೇಕಾದುದಿಲ್ಲ. ಆದರೆ ಓದಿದರೆ ಅರ್ಥವಾಗದಷ್ಟು ನಿಯಮೋಲ್ಲಂಘನೆಗಳನ್ನು ಮಾಡಿರುವರೆಂದು ಇದರಿಂದ ನಿಶ್ಚಯಿಸಬಾರದು. ಕೆಲವುವೇಳೆ ಕರ್ತೃವೇ ಇಲ್ಲದಿರಬಹುದು; ಕೆಲವುವೇಳೆ ಕ್ರಿಯೆಯೇ ಇಲ್ಲದಿರಬಹುದು, ಕೆಲವುವೇಳೆ ಪುರುಷತ್ರಯಗಳೂ ಕಾಲತ್ರಯ

ಗಳೂ ಮನಸ್ಸಿಗೆ ಬಂದಹಾಗೆ ಮಾರ್ಪಾಟಾಗಿ ಹೋಗಿರಬಹುದು; ಇಷ್ಟಾದರೂ ಅರ್ಥಕ್ಕೆ ಎಂದೂ ಚ್ಯುತಿಯಿಲ್ಲ; ಭಾವಸೂಚನೆಯಲ್ಲಿ ಆ ದಿವ್ಯವಾದ ವಾಕ್ಯಶಕ್ತಿಗೆ ಕುಂದಕವಿಲ್ಲ. ವಚನಗಳಲ್ಲಿ ಉಪಯೋಗವಾಗಿರುವ ಪದಗಳು ಹಳಗನ್ನಡವೆಂದು ಹೇಳುವಹಾಗಿಲ್ಲದಿದ್ದರೂ ವಾಕ್ಯಸರಣಿಯು ಕೆಲವುಮಟ್ಟಿಗೆ ಹಳಗನ್ನಡದ ಶೈಲಿಯನ್ನೇ ಅನುಸರಿಸಿದೆಯೆಂದು ಹೇಳಬಹುದು. ವಚನಗಳ ಕೊನೆಯಲ್ಲಿ ಆಯಾ ವಚನಕಾರನ ಹೆಸರು, ಅಥವಾ ಅವನ ಇಷ್ಟಲಿಂಗದ ಹೆಸರು ಬರುತ್ತದೆ.

ವಚನಗಳ ಮತ್ತು ವಚನಕಾರರ ಚರಿತ್ರೆಯನ್ನು ಆಮೂಲಾಗ್ರವಾಗಿ ಪರಿಶೀಲಿಸುತ್ತ ಬಂದರೆ ನಮಗೆ ಕೆಲವು ಸಂಗತಿಗಳು ಗೋಚರವಾಗುತ್ತವೆ. ಬಸವೇಶ್ವರನ ಕಾಲಕ್ಕೆ ಹಿಂದೆಯೇ ವಚನಗಳು ತಲೆದೋರಿದ್ದು ಭಾವನಿರೂಪಣೆಗೂ ತತ್ವೋಪದೇಶಕ್ಕೂ ಉಪಯುಕ್ತವಾದ ಉಪಕರಣಗಳಾಗಿದ್ದುವು. ಆದರೆ ಬಸವೇಶ್ವರನ ಕಾಲಕ್ಕೆ ಇವುಗಳಲ್ಲಿ ಜೀವಕಳೆಯು ತುಂಬಿದಂತಾಗಿ ಸರ್ವರಿಂದಲೂ ಆದರಿಸಲ್ಪಟ್ಟು ವಚನಗಳು ಅಧಿಕವಾಗಿ ಅಭಿವೃದ್ಧಿಯನ್ನೈದಲು ಸಹಕಾರಿಯಾಯಿತು. ಬಸವೇಶ್ವರಾದಿಗಳು ಜೀವಂತರಾಗಿದ್ದ ೧೨ನೆಯ ಶತಮಾನದ ಉತ್ತರಾರ್ಧವೂ ಅವರ ಸಂಬಂಧವನ್ನು ಸಾಕ್ಷಾತ್ತಾಗಿ ಪಡೆದಿದ್ದ ಜಂಗಮಶಿಷ್ಯರು ಜೀವಂತರಾಗಿದ್ದ ೧೩ನೆಯ ಶತಮಾನದ ಪೂರ್ವಾರ್ಧವೂ ವಚನಗಳ ಪರಾಕಾಷ್ಠದಶೆಯ ಕಾಲವಾಗಿ ಅನಂತರ ಅವು ಕ್ರಮೇಣ ಕ್ಷೀಣಿಸುತ್ತ ಭೀಮಕವಿಯ ಕಾಲಕ್ಕೆ ತಮ್ಮ ಪ್ರಾಮುಖ್ಯವನ್ನು ಕಳೆದುಕೊಂಡುವೆಂದು ತೋರಿಬರುತ್ತದೆ. ಮತ್ತೊಮ್ಮೆ ತೋಂಟದ ಸಿದ್ಧಲಿಂಗಯತಿಯ ಕಾಲಕ್ಕೆ ವಚನಗಳು ಅಧಿಕವಾಗಿ ತಲೆದೋರಲು ಸಾಹಸಪಡುವುದನ್ನು ನಾವು ನೋಡುವುದಾದರೂ ಬಸವೇಶ್ವರನ ಕಾಲದಲ್ಲಿ ಮತಪ್ರಾಚುರ್ಯಸಂಬಂಧವಾಗಿ ಉಂಟಾಗಿದ್ದ ಆವೇಗವೂ ಉದ್ರೇಕವೂ ಆತನನಂತರ ಕ್ರಮೇಣ ಕಡಿಮೆಯಾಗುವುದು ಸಹಜವೇ ಆಗಿರುವುದರಿಂದ ವಚನಗಳು ಕ್ಷೀಣಿಸುವುದಕ್ಕೆ ಕಾರಣವಾಯಿತು. ಇದೂ ಅಲ್ಲದೆ ಭೀಮಕವಿಯ ಕಾಲಕ್ಕೆ ವಚನಗಳಲ್ಲಿ ಆಸಕ್ತಿಯು ಕಡಿಮೆಯಾಗಿ ಪುರಾಣಗಳಲ್ಲಿ ಉತ್ಸಾಹವು ಹೆಚ್ಚುತ್ತಬಂದಿರುವುದನ್ನು ಸಾಹಿತ್ಯದಲ್ಲಿ ನೋಡಬಹುದು. ಮೊಟ್ಟಮೊದಲು ವಚನಗಳು ಅಧಿಕವಾಗಿ ಬಂದಿರುವುದಕ್ಕೂ ಅನಂತರ ಅವು ಕಡಿಮೆಯಾಗಿರುವುದಕ್ಕೂ ಕಾರಣಾಂತರಗಳು ಇಲ್ಲದೆ ಹೋಗಿಲ್ಲ.—

(೧) ಬಸವೇಶ್ವರನ ಕಾಲಕ್ಕೆ ಅನೇಕ ಪವಾಡಪುರುಷರಿದ್ದು ಎಲ್ಲರೂ ವಚನಗಳನ್ನು ಬರೆಯತೊಡಗಿದುದರಿಂದ ವಚನಗಳ ಸಂಖ್ಯೆಯೂ ವಚನಕಾರರ ಸಂಖ್ಯೆಯೂ ಅಪರಿಮಿತವಾದುವು.

(೨) ಮಾಚಿದೇವ, ಮಡಿವಳ ಮಾಚಯ್ಯ, ಮೋಳಿಗಯ್ಯ, ಅಂಬಿಗರ ಚೌಡಯ್ಯ ಮೊದಲಾದವರು ವೀರಶೈವ ತತ್ತ್ವವನ್ನು ಒಂದೊಂದು ಬಗೆಯಾಗಿ ತಮ್ಮ ಸಂಸ್ಕಾರ ಜನಿತ ಬುದ್ಧಿಗನುಸಾರವಾಗಿ ವಿಶದಪಡಿಸುತ್ತಬಂದಿರುವುದರಿಂದ ಈ ತತ್ತ್ವನಿರೂಪಣೆಯಲ್ಲಿಯೂ ಕೆಲವು ಭೇದಗಳು ಹುಟ್ಟಿದುವು.

(೩) ಬಿಜ್ಜಳನ ಕೊಲೆಯಾದನಂತರ ಜಂಗಮರಲ್ಲಿ ಬಹುಜನರು ಚದರಿ ಹೋಗಿ ಬೇರೆಬೇರೆ ಸ್ಥಳಗಳಲ್ಲಿ ಶಿಷ್ಯರನ್ನು ಪಡೆದುಕೊಳ್ಳುತ್ತಲೂ ಮಠಗಳನ್ನು ಸ್ಥಾಪಿಸುತ್ತಲೂ ಬಂದರಷ್ಟೆ. ವಚನಗಳನ್ನು ಹೇಳುವುದು ಪವಾಡಪುರುಷರಿಗೆ ಒಂದು ಲಕ್ಷಣವಾದುದರಿಂದಲೂ ವಚನಕಾರರು ಗೌರವಸ್ಥಾನವನ್ನು ಪಡೆಯುತ್ತಿದ್ದುದರಿಂದಲೂ ಜಂಗಮರನೇಕರು ಗುರುಪದಕ್ಕೆ ಅರ್ಹರೆನಿಸಲು ವಚನಗಳನ್ನು ಬರೆದರು.

(೪) ಹೀಗೆ ಪವಾಡಪುರುಷರನೇಕರು ಬರೆದ ವಚನಗಳು ಕಠಿನವಾಗಿದ್ದುದರಿಂದ ಅವುಗಳಿಗೆ ಟೀಕೆಗಳನ್ನು ಬರೆದು ವಿವರಿಸಬೇಕಾದ ಹೊಸ ಕೆಲಸವು ತಲೆದೋರಿತು.

(೫) ...ವಚನಗಳು ಒಮ್ಮೊಮ್ಮೆ ಹಾಡುವುದಕ್ಕೂ ಬರುತ್ತಿದ್ದುದರಿಂದ ವಚನಗಳ ಸ್ವರೂಪವೇ ಬದಲಾಯಿಸಿ ಅವು ಹಾಡುಹಬ್ಬಗಳಲ್ಲಿ ಸೇರಿಹೋದುವು. ಜಂಗಮಮಠಗಳು ಸ್ಥಾಪಿತವಾದ ಮೇಲೆ ಮತೋದ್ಧರಣ ಕಾರ್ಯದಲ್ಲಿ ನಿರತರಾದ ವೀರಶೈವ ವಿದ್ಯಾವಂತರ ಸಂಖ್ಯೆಯು ಹೆಚ್ಚುತ್ತಬಂದಿತು. ಅನ್ಯಮತದ ಪಂಡಿತರುಗಳಂತೆ ತಾವೂ ಸಾಮರ್ಥ್ಯವಂತರಾಗಿ ವೀರಶೈವ ಮತೋತ್ಕೃಷ್ಟತೆಯನ್ನು ವೇದೋಪನಿಷತ್ತುಗಳ ಆಧಾರದಮೇಲೆ ಸ್ಥಾಪಿಸಿ ಸಂಸ್ಕೃತ ಕರ್ಣಾಟಕ ಗ್ರಂಥರಚನೆಯಿಂದ ಪ್ರಶಸ್ತಿಯನ್ನು ಪಡೆಯಬೇಕೆಂಬ ಉತ್ಕಟಾಕಾಂಕ್ಷೆಯು ಉಂಟಾದಂತೆ ಕಂಡುಬರುತ್ತದೆ. ಹೀಗೆ ವೀರಶೈವ ಮತೋತ್ಕೃಷ್ಟತೆಯನ್ನು ಸ್ಥಾಪಿಸಲು ಬದ್ಧಾದರರಾಗಿ ಷಟ್ಪದಿ ಸಾಂಗತ್ಯ ಚಂಪೂಪುರಾಣಗಳನ್ನು ಬರೆದು ವೀರಶೈವ ತತ್ತ್ವಗಳನ್ನು ಅವುಗಳಲ್ಲಿ ಸೇರಿಸುವ ಸಾಮರ್ಥ್ಯವನ್ನು ಹೆಚ್ಚು ಹೆಚ್ಚು ಪಡೆದಹಾಗೆಲ್ಲ, ಮತ್ತು ಸಂಸ್ಕೃತದಲ್ಲಿಯೇ ಗ್ರಂಥಗಳನ್ನೂ ವ್ಯಾಖ್ಯಾನಗಳನ್ನೂ ಬರೆಯುವ ಪಾಂಡಿತ್ಯವನ್ನು ಹೆಚ್ಚುಹೆಚ್ಚು ಸಂಪಾದಿಸಿದ ಹಾಗೆಲ್ಲ, ಮುಂದಿನವರು ವಚನಮಾರ್ಗವನ್ನು ಬಿಡುತ್ತ ಬಂದರು. ಇದರಿಂದ ವಚನಗಳು ಕ್ಷೀಣಿಸುವುದಕ್ಕೆ ಆಸ್ಪದವಾಯಿತು.

...ಕರ್ಣಾಟಕ ಸಾಹಿತ್ಯದಲ್ಲಿ ವಚನಗಳು ಬಹು ಮುಖ್ಯವಾದುವೆಂಬುದನ್ನೂ ಅವುಗಳಿಗೆ ಉತ್ತಮವಾದ ಸ್ಥಾನವು ದೊರೆಯಬೇಕೆಂಬುದನ್ನೂ ಕೆಳಗೆ ಕಾಣಿಸಿರುವ ಕಾರಣಗಳಿಂದ ನಿಶ್ಚಯಿಸಬಹುದಾಗಿದೆ.—

(೧) ಯಾರಾದರೂ ಆಧುನಿಕ ಗದ್ಯದ ಬೆಳವಣಿಗೆಯನ್ನು ಪರಿಶೀಲಿಸಬೇಕಾದರೆ ಮೊಟ್ಟಮೊದಲು ವಚನಗಳನ್ನು ತೆಗೆದುಕೊಳ್ಳಬೇಕು. ಇದಕ್ಕಿಂತಲೂ ಹಿಂದೆಯೇ *ಶಾಸನಗಳಲ್ಲಿ ಗದ್ಯವು ತಲೆದೋರಿರುವುದಾದರೂ ಆಧುನಿಕ ಗದ್ಯದ ಬೆಳವಣಿಗೆಗೆ ಈ ವಚನಗಳು (ಮತ್ತು ಅವುಗಳ ಮೇಲಣ ಟೀಕೆಗಳು) ಮಾಡಿರುವಷ್ಟು ಸಹಾಯವನ್ನು ಮತ್ತಾವ ಕಡೆಯಿಂದಲೂ ಕಾಣಲಾಗುವುದಿಲ್ಲವೆಂದು ನಿಸ್ಸಂಕೋಚವಾಗಿ ಹೇಳಬಹುದು.

(೨) ವಚನಗಳು ತಮಗಿರುವ ಅಪೂರ್ವಶೈಲಿಯ ಲಕ್ಷಣಗಳಿಂದ ಗದ್ಯಪ್ರಭೇದವಾಗಿ ಏರ್ಪಟ್ಟು ಸಾಹಿತ್ಯದಲ್ಲಿ ವೈವಿಧ್ಯವನ್ನು ತೋರಿಸಿರುತ್ತವೆ. ಸಾಹಿತ್ಯದ ಜೀವಕಳೆಯನ್ನು ತೋರಿಸುವುದಕ್ಕೆ ಇಂತಹ ಸೃಷ್ಟಿಗಳೂ ಬೆಳೆವಣಿಗೆಗಳೂ ಮಾರ್ಪಾಟುಗಳೂ ಅತ್ಯಂತಾವಶ್ಯಕವೂ ಸಹಕಾರಿಯೂ ಆಗಿರುವುದರಿಂದ ವಚನಗಳನ್ನು ಸಾಹಿತ್ಯಚರಿತ್ರಕಾರರು ಅಪೂರ್ವ ಸಾಮಗ್ರಿಯನ್ನಾಗಿ ಪರಿಗಣಿಸಿ ಜೋಪಾನಮಾಡಬೇಕಾಗಿದೆ.

(೩) ವಚನಗಳಲ್ಲಿ ಅನೇಕವು ಮಾತನಾಡುವ ಭಾಷೆಯಂತೆಯೇ ಇರುವುದರಿಂದ ಹನ್ನೊಂದನೆಯ ಮತ್ತು ಹನ್ನೆರಡನೆಯ ಶತಮಾನಗಳಲ್ಲಿ ಜನರ ಭಾಷೆಯು ಯಾವರೀತಿ ಇದ್ದಿತೆಂಬುದು ಸುಲಭದಲ್ಲಿ ತಿಳಿಯುತ್ತದೆ. ಹೊಸಗನ್ನಡ, ಹಳಗನ್ನಡ, ತಮಿಳಸಂಪರ್ಕ, ತೆಲುಗಿನ ದೃಢಸಮ್ಮರ್ದನ ಎಂದು ಮುಂತಾಗಿ ಕರ್ಣಾಟಕಭಾಷಾ ಚರಿತ್ರಕಾರರು ಬರೆಯುತ್ತ ಆಯಾ ಭಾಷೆಗಳ ಕಾಲವನ್ನು ನಿರ್ಣಯಿಸಲು ಪ್ರಯತ್ನಪಟ್ಟಿರುವರಷ್ಟೆ. ಈ ವಚನಗಳ ದೃಷ್ಟಿಯಿಂದ ಹೊಸಗನ್ನಡದ ಕಾಲವನ್ನು ನಿಶ್ಚಯಿಸಲು ತೊಡಗಿದರೆ ಅಪೂರ್ವಸಂಗತಿಗಳು ತಿಳಿದುಬರುವುದರಲ್ಲಿ ಸಂದೇಹವಿಲ್ಲ.

(೪) ರಸಸ್ಫೂರ್ತಿಯ ಸಂಬಂಧದಿಂದ ಒಂದುಕಡೆಯಲ್ಲಿ ವಚನಗಳಿಗೂ ಇನ್ನೊಂದುಕಡೆಯಲ್ಲಿ ಷಟ್ಪದಿ ಸಾಂಗತ್ಯಾದಿ ಹಾಡುಗಬ್ಬಗಳಿಗೂ ಪದಬಂಧದ ಮೈತ್ರಿಯಿರುವುದು. ಈ ಸಂಬಂಧದಿಂದ ಹಾಡುಗಬ್ಬಗಳು ವಚನಮೂಲಗಳಿಂದ ಅಭಿವೃದ್ಧಿಯನ್ನೈದಿದುವೆಂದು ತಿಳಿಯಬಹುದಾಗಿದೆ.

(೫) ವಚನಗಳ ಪ್ರಾಶಸ್ತ್ಯಕ್ಕೆ ಮುಖ್ಯವಾದೊಂದು ಕಾರಣವಿರುತ್ತದೆ. ಇವುಗಳಲ್ಲಿ ಪ್ರತಿಪಾದಿತವಾಗಿರುವ ವಿಷಯಗಳು ವೀರಶೈವಕ್ಕೆ ಮುಖ್ಯವಾಗಿ ಸಂಬಂಧಪಟ್ಟು ಪ್ರತಿಯೊಂದು ಮತಕ್ಕೂ ಪೋಷಕಸಾಮಗ್ರಿಗಳನ್ನು ಒದಗಿಸುವ ವೇದೋಪನಿಷತ್ತು ಅಷ್ಟಾದಶಪುರಾಣಗಳೇ ಇದಕ್ಕೆ ಆಧಾರಗಳಾಗಿರುವುದರಿಂದ

* "ಚಾವುಂಡರಾಯಪುರಾಣ" ವೆಂಬ ಗದ್ಯಗ್ರಂಥವು ಹತ್ತನೆಯ ಶತಮಾನದಲ್ಲಿ ಹುಟ್ಟಿತು.

ಅವುಗಳಲ್ಲಿರುವ ಎಷ್ಟೋ ಭಾವಗಳನ್ನು ವಚನಗಳಲ್ಲಿ ಸಾಕ್ಷಾತ್ತಾಗಿ ಕಾಣಬಹುದಾಗಿದೆ. ..ಸಂಸ್ಕೃತದಲ್ಲಿರುವ ವೇದವನ್ನು ತಮಿಳಿಗೆ ಭಾಷಾಂತರಮಾಡಿರುವುದನ್ನು ಕಂಡಿರುವೆವು. ಭಾಷಾಭಿಮಾನದಿಂದಲೊ ಮತ್ತಾವ ಕಾರಣದಿಂದಲೊ ತಮಿಳರು ಮಾಡಿರುವ ಈ ಮಹಾಕಾರ್ಯಕ್ಕೆ ಸಾಟಿಯಾಗಿ ಕನ್ನಡದಲ್ಲಿ ನಾವು ಅಂತಹ ಭಾಷಾಂತರವನ್ನು ತೋರಿಸಲು ಸಾಧ್ಯವಲ್ಲದಿದ್ದರೂ ವೇದೋಪನಿಷದ್ಭಾವ ಭಾಗಗಳನ್ನು ಕನ್ನಡದಲ್ಲಿ ಪ್ರಕಟಿಸಲು ಮಾಡಿದ ವಚನಕಾರರ ಸಾಹಸವನ್ನು ಮುಂದಿಡಬಹುದಾಗಿದೆ....

(೬) ...ಕನ್ನಡದಲ್ಲಿ ಈಗ ಪ್ರಚಾರದಲ್ಲಿರುವ ಎಷ್ಟೋ ಗಾದೆಗಳು ವಚನಗಳಲ್ಲಿ ಅಡಕವಾಗಿರುವುವು. ವಚನಕಾರರು ತಮಗೆ ಯುಕ್ತವೆಂದು ತೋರಿದ ಕಡೆಗಳಲ್ಲೆಲ್ಲ ಅನೇಕ ಗಾದೆಗಳನ್ನು ಪಯೋಗಿಸಿರುವರು. ಇವುಗಳನ್ನೆಲ್ಲ ಶೇಖರಿಸಿದರೆ ಅವರ ಲೋಕಾನುಭವವು ಎಷ್ಟು ಗುರುತರವಾಗಿದ್ದಿತೆಂಬುದನ್ನು ಕಾಣಬಹುದು. ಇದೂ ಅಲ್ಲದೆ, ಅವರ ವಚನಗಳಲ್ಲಿ ಎಷ್ಟೋ ವಾಕ್ಯಗಳು ಗಾದೆಗಳಂತೆ ಮಾತಿನ ಬಿಗಿಕಟ್ಟನ್ನೂ ಅರ್ಥಸೌಷ್ಠವವನ್ನೂ ಹೊಂದಿರುವುವು. ಇವುಗಳು ಅಲ್ಲಿಂದೀಚೆಗೆ ಗಾದೆಗಳಾಗಿ ಪರಿಣಮಿಸಿದ್ದರೂ ಇರಬಹುದು. ಇಂತಹ ಅಪೂರ್ವ ಪದಪ್ರಯೋಗಗಳು ಸಾಮಾನ್ಯವಾಗಿ ಕರ್ಣಾಟಕಸಾಹಿತ್ಯದ ಗದ್ಯ ಪದ್ಯಗಳಲ್ಲಿ ಅತಿ ವಿರಳವೆಂದೇ ಹೇಳಬೇಕು.

(೭) ಕರ್ಣಾಟಕ ಸಾಹಿತ್ಯದಲ್ಲಿ ಹೆಂಗಸರನ್ನು ಭಾಗಿಗಳನ್ನಾಗಿ ಮಾಡಿರುವುದಕ್ಕೆ ಈ ವಚನಗಳು ಮುಖ್ಯ ಸಹಕಾರಿಗಳು. ಚಂಪೂಗ್ರಂಥಗಳನ್ನು ಬರೆದ ಕಬ್ಬಿಗಿತಿಯರನ್ನು ನಾವು ಇನ್ನೂ ಕಾಣೆವಾದರೂ, ಷಟ್ಪದೀ ಸಾಂಗತ್ಯ ಮತ್ತು ಹಾಡುಗಳಲ್ಲಿ ಗ್ರಂಥಗಳನ್ನು ರಚಿಸಿರುವ ಹೆಂಗಸರನ್ನು ಅನೇಕವಾಗಿ ಕಾಣಬಹುದು. ಸಾಹಿತ್ಯದಲ್ಲಿ ವಚನಭಾಗವನ್ನು ತೆಗೆದುಕೊಂಡದ್ದೇ ಆದರೆ ಇಲ್ಲಿ ದೊರೆಯುವಷ್ಟುಮಂದಿ ಹೆಂಗಸರು ಮತ್ತಾವ ಭಾಗದಲ್ಲಿಯೂ ದೊರೆಯುವುದಿಲ್ಲವೆಂಬುದನ್ನು ಧಾರಾಳವಾಗಿ ಹೇಳಬಹುದು. ಕೇವಲ ಭಕ್ತಿಮಾರ್ಗದಿಂದಲೇ ಮುಕ್ತಿಯನ್ನು ಪಡೆಯಬಹುದೆಂಬ ಬಸವೇಶ್ವರನ ಉಪದೇಶದಲ್ಲಿ ಹೆಂಗಸರಿಗೆ ಗ್ರಂಥರಚನಾವಕಾಶವು ದೊರೆಯಿತೆಂದು ಕಾಣುತ್ತದೆ. ಛಂದೋನಿಯಮಗಳ ಶೃಂಖಲೆಯಿಲ್ಲದೆ, ಪ್ರಾಸಸ್ಥಾನದ ಬಂಧನವಿಲ್ಲದೆ, ರಸಸ್ಫೂರ್ತಿಯಿಂದ ಮಾತ್ರ ಬರೆಯಬಹುದಾದ ವಚನಗಳನ್ನು ಭಕ್ತಿರಸೋದ್ರೇಕದಿಂದ ಮೈಮರೆತ ಅನೇಕಮಂದಿ ಹೆಂಗಸರು ಬರೆದಿರುವುದು ಸಹಜವಾಗಿದೆ....

(೮) ಈ ಬಗೆಯ ವಚನಸಾಹಿತ್ಯವು ಇತರ ದ್ರವಿಡಭಾಷೆಗಳ ಸಾಹಿತ್ಯದಲ್ಲಿ ಕಂಡುಬಂದಿರುವಂತೆ ತೋರುವುದಿಲ್ಲ. ವೀರಶೈವರ ಹಳೆಯ ಪುರಾತನರಾದ ಅರವತ್ತುಮೂವರು ಪವಾಡಪುರುಷರು ತಮಿಳುದೇಶದವರಾದರೂ ತಮಿಳುಸಾಹಿತ್ಯದಲ್ಲಿ ವಚನಗಳಿರುವುದನ್ನು ನಾವು ಕಂಡಿಲ್ಲ....ಕನ್ನಡಸಾಹಿತ್ಯದಲ್ಲಿ ಅವು ಬೆಳೆದು ಬಂದಿರುವಂತೆ ಆಂಧ್ರಸಾಹಿತ್ಯದಲ್ಲಿಯೂ ಬೆಳೆದುಬಂದಿಲ್ಲ.

(೯) ...ಕನ್ನಡಸಾಹಿತ್ಯದಲ್ಲಿ ಯಾವ ಕವಿಗಳನ್ನು ತೆಗೆದುಕೊಂಡರೂ, ಯಾವ ಕಾವ್ಯಗಳನ್ನು ತೆಗೆದುಕೊಂಡರೂ, ಗ್ರಂಥಕರ್ತೃಗಳ ಸ್ವಭಾವಶೀಲಗಳನ್ನೂ ಅವರ ಹೃದಯವನ್ನೂ ಅವರ ಕಾವ್ಯಗಳಲ್ಲಿ ನೋಡಲಾಗುವುದಿಲ್ಲ. ಕವಿಯು ಯಾವ ಯಾವ ರಸಗಳಿಂದ ಉದ್ವೇಜಿತನಾಗಿ ಪ್ರಪಂಚದ ವ್ಯವಹಾರದಲ್ಲಿ ಹೇಗೆಹೇಗೆ ವರ್ತಿಸುತ್ತಿರಬಹುದೆಂಬುದನ್ನು ಸುಲಭದಲ್ಲಿ ತಿಳಿಯಲು ಅವಕಾಶವೇ ಇಲ್ಲ. ಕವಿಗೆ ಈಗ ಮನಸ್ಸಿಗೆ ಬೇಸರಿಕೆಯಾಗಿದ್ದಿತು, ಆಗ ಹರ್ಷವಾಗಿದ್ದಿತು, ಕಪಟಿಗಳನ್ನು ನೋಡಿ ಮತ್ತೊಮ್ಮೆ ಕೋಪಬಂದಿದ್ದಿತು ಎಂಬುದಾಗಿ ಆವರವರ ಹೃದಯ ಜನಿತ ಶೋಕ ಮೋಹ ಸುಖದುಃಖಾದಿಗಳನ್ನೂ ಭಕ್ತಿಭಾವಗಳನ್ನೂ ತಮ್ಮ ಗ್ರಂಥಗಳಲ್ಲಿ ಮುದ್ರಿಸಿ ತೋರಿಸುವ ಸಾಹಿತ್ಯವನ್ನು ವಚನಗಳಲ್ಲಿ ಬಿಟ್ಟು ಮತ್ತೆಲ್ಲಿಯೂ ಕಾಣಲಾಗದೆಂಬುದು ನಮ್ಮ ಅಭಿಪ್ರಾಯ...*

---

* ರಕ್ತಾಕ್ಷಿಸಂವತ್ಸರ ಚೈತ್ರಮಾಸದ ಸಾಹಿತ್ಯಪರಿಷತ್ಪತ್ರಿಕೆಯಲ್ಲಿ ಮ|| ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ. ಅವರು ಬರೆದ ಲೇಖನದಿಂದ ತೆಗೆದದ್ದು.




# ಕರ್ಣಾಟಕ

ಕ್ರೋಧನ ಸಂವತ್ಸರ —೨೩— ಮುದ್ದಣನ ಸಂಚಿಕೆ

ಸಂಪುಟ ೭] ವಿಷಯ ಸೂಚಿಕೆ [ಸಂಚಿಕೆ ೧

೧. ಮುನ್ನುಡಿ— ಮ|| ಡಿ. ವಿ. ಗುಂಡಪ್ಪನವರು.

೨. ಶ್ರೀಮಾನ್ ನಂದಳಿಕೆ ಲಕ್ಷ್ಮೀನಾರಣಯ್ಯ— ಪ್ರಾಕ್ತನವಿಮರ್ಶವಿಚಕ್ಷಣ ರಾವ್ ಬಹದ್ದೂರ್ ಮ|| ಆರ್. ನರಸಿಂಹಾಚಾರ್, ಎಂ.ಎ., ಎಂ.ಆರ್.ಎ.ಎಸ್.

೩. ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು— ಮ|| ಪಿ. ಮಂಗೇಶರಾವ್, ಬಿ.ಎ., ಎಲ್.ಟಿ.

೪. ಕವಿಯ ನೆನಪು— ಮ|| ಹುರುಳಿ ಭೀಮರಾಯರು.

೫. ಅದ್ಭುತರಾಮಾಯಣ— ಮ|| ಯು. ಮಂಗೇಶರಾವ್, ಬಿ.ಎ., ಎಲ್.ಟಿ.

೬. ಶ್ರೀರಾಮಪಟ್ಟಾಭಿಷೇಕ—ಮ|| ಪಂಡಿತ ಮಹಾದೇವ ಪ್ರಭಾಕರ ಪೂಜಾರರವರು.

೭. ಶ್ರೀರಾಮಾಶ್ವಮೇಧ— ಮ|| ಎಂ. ವೆಂಕಟೇಶಯ್ಯಂಗಾರ್, ಎಂ. ಎ.

೮. ಅನುಬಂಧ—

"ಜೋ ಜೋ"—ಮ|| ಸೀತಾರಾಮಯ್ಯನವರ ಪತ್ರ.

ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಟಿಸಲ್ಪಟ್ಟಿದೆ.

೧೯೨೫



Printed at the Crown Electric Press, Mysore.



ನಂದಳಿಕೆ ಲಕ್ಷ್ಮೀನಾರಣಪ್ಪನವರು.





## "ಶ್ರೇಯಾಂಸಿ ಬಹುವಿಘ್ನಾನಿ"

ದೇವರು ಅನಂತಕಲ್ಯಾಣಗುಣಪರಿಪೂರ್ಣನೇ? ಹಾಗಿದ್ದರೂ ಆ ಕಲ್ಯಾಣ ಗುಣಗಳಲ್ಲಿ ಕರುಣಾಮಯತೆಯು ಒಂದಾಗಿರಲಾರದು. ಕೆಲವುವೇಳೆ ಕ್ರೌರ್ಯವಾಗಿ ತೋರುವುದೂ ಪರಿಣಾಮದಲ್ಲಿ ಕರುಣೆಯಾಗಿ ಪರಿಣಮಿಸುವುದರಿಂದ ಅಮೃತವಾಗಿ ಪರಿಣಮಿಸುವ ವಿಷದಂತೆ ಈ ಅಪ್ರಿಯವಾದ ಗುಣವು ಅಸದೃಶವಾದ ಮಂಗಳ ಗುಣವೆಂದು ಪ್ರಪನ್ನರು ಹೇಳಬಹುದು. ಇದರಿಂದ, ಪ್ರಪಂಚದಲ್ಲಿ ಕಂಡುಬರುವ ವೈಷಮ್ಯ ನೈರ್ಘೃಣ್ಯಗಳು ಭಯಂಕರವಾದ ಸ್ವಪ್ನದಂತೆ ಇರುವುವೆಂದೂ ಅವು ಸ್ಥಾಯಿಯಾಗಿರುವುದಿಲ್ಲವೆಂದೂ ಹೇಳಿದಂತಾಯಿತೇ ಹೊರತು ಸಾತ್ವಿಕ ಮಾನವ ಜೀವನದಲ್ಲಿಯೂ ಬರುವ ಕ್ಲೇಶಕಷ್ಟಗಳಿಗೆ ಅನುಭವಕಾಲದಲ್ಲಿ ತೀಕ್ಷ್ಣದಂಷ್ಟ್ರಗಳಿಲ್ಲವೆಂದು ಹೇಳಿದಂತಾಗಲಿಲ್ಲ. ವೈದ್ಯನು ಮೊನಚಾದ ಶಸ್ತ್ರವನ್ನು ದೇಹದೊಳಕ್ಕೆ ಚುಚ್ಚಿ ರೋಗಿಗೆ ಹಿತವಾದ ಔಷಧವನ್ನು ರಕ್ತಕ್ಕೆ ಮಿಶ್ರಮಾಡುವಂತೆ,

ದೇವರೂ ಮನುಷ್ಯನನ್ನು ಕಷ್ಟಕ್ಕೆಸಿಕ್ಕಿಸಿ ಆಮೇಲೆ ಸುಖಕೊಡಬೇಕೇ ? ಇನ್ನೊಂದು ತೊಟ್ಟು ಕರುಣೆಯು ವೆಚ್ಚವಾದರೆ ಕರುಣಾಜಲಧಿಯು ಅರಕೆಯಾಗುತ್ತದೆಯೆ ?

ಗುಣದೋಷಸುಖದುಃಖಗಳ ಭೇದವನ್ನೂ ಜಂಜಡವನ್ನೂ ಅನುಭವಮಾಡದ ಜ್ಞಾನಿಗಳ ಮಾತು ನಮಗೇಕೆ ? ನಾವಂತೂ ದೇವರ ಕ್ರೌರ್ಯವನ್ನು ನಿತ್ಯವೂ ಅನುಭವಿಸುತ್ತಿರುವೆವು, ಕಣ್ಣಾರ ನೋಡುತ್ತಿರುವೆವು. ಅವನು ಧೃಷ್ಟರಾದ ದರೋಡೆಯ ಕಳ್ಳರಂತೆ ''ಯಸ್ಯಾನುಗ್ರಹಮಿಚ್ಛಾಮಿ ತಸ್ಯ ವಿತ್ತಂ ಹರಾಮ್ಯಹಂ'' ಎಂದು ಹೇಳಿಹೇಳಿ ಭಕ್ತರ ಸರ್ವಸ್ವವನ್ನೂ ಅಪಹರಿಸುವನು. ಯಾರಮೇಲೆ ಮಮತೆಹುಟ್ಟುವುದೋ ಅವರನ್ನು ಇಹಲೋಕದಲ್ಲಿ ಹೆಚ್ಚುದಿವಸ ಬಿಡದೆ ಬೇಗ ಕೊಂದು ತನ್ನಲ್ಲಿಗೆ ಕರೆದುಕೊಂಡುಬಿಡುವನು. ದೇವತೆಗಳ ಜೊತೆಯಲ್ಲಿ ರಾಕ್ಷಸರನ್ನೂ, ಸಾತ್ವಿಕರ ಜೊತೆಯಲ್ಲಿ ತಾಮಸರನ್ನೂ ಹೂವುಗಳ ಜೊತೆಯಲ್ಲಿ ಹುಳುಹುಬಟೆ ಮುಳ್ಳುಗಳನ್ನೂ ಸೃಷ್ಟಿಸಿ ಗೋಳಾಡಿಸುವನು. ಕೊನೆಗೆ ಒಂದು ಒಳ್ಳೆಯಕೆಲಸಕ್ಕೆ ಕೈಹಾಕಿದರೆ ಅದನ್ನು ಸುಸೂತ್ರವಾಗಿ ನಡೆಯಗೊಡಿಸನು. ಬೇಕಾದಷ್ಟು ಅಡಚಣೆಗಳನ್ನು ತಂದು ಒಡ್ಡಿ " ಶ್ರೇಯಾಂಸಿ ಬಹುವಿಘ್ನಾನಿ '' ಎಂದು ಸಾರುವನು !

ಶ್ರೇಷ್ಠನಾದ ಕನ್ನಡಕವಿಯೊಬ್ಬನಿಗೆ ಆತನು ಬದುಕಿದ್ದಾಗ ನಾವು ತೋರಿಸಬೇಕಾಗಿದ್ದ ಗೌರವವನ್ನು ಈಗಲಾದರೂ ತೋರಿಸೋಣವೆಂದು ಹೊರಟರೆ ಎಷ್ಟು ವಿಘ್ನಗಳು ! ವಿಘ್ನಗಳು ಬಂದಾವೆಂದು ಹೆದರಿಯೇ ಜುಲೈ ತಿಂಗಳ ಮಧ್ಯದಲ್ಲಿ ಕೊಡುತ್ತೇವೆಂದು ಹೇಳಿದ್ದ ಸಂಚಿಕೆಯನ್ನು ವಿಘ್ನೇಶ್ವರನ ಪೂಜೆಮಾಡಿ ಕೊಡೋಣವೆಂದು ಯೋಚಿಸಿದೆವು. ಖಜಾನೆಯ ಅಧಿಕಾರಿಯೂ ಒಂದುಕಾಸು ತೆಗೆದುಕೊಡಬೇಕಾದರೆ ತನಗೆ ಮೇಲ್ಪಟ್ಟ ಅಧಿಕಾರಿಯ ಅಪ್ಪಣೆಯನ್ನು ಪಡೆಯಬೇಕಾಗಿರುವಂತೆ ವಿಘ್ನೇಶ್ವರನು ವಿಘ್ನ ನಿವಾರಣೆಮಾಡುವುದಕ್ಕೂ ತನ್ನ ಮೇಲ್ಪಟ್ಟವನ ಅಪ್ಪಣೆಯನ್ನು ಕಾಯಬೇಕೆಂದು ತೋರುತ್ತದೆ! ಅಂತು ವಿಘ್ನೇಶ್ವರನಿಂದ ವಿಘ್ನನಿವಾರಣೆಯೇನೋ ಆಗಲಿಲ್ಲ. " ಮುದ್ದಣನ ಸಂಚಿಕೆಯು '' ವಿನಾಯಕನ ಹಬ್ಬಕ್ಕೂ ಹೊರಡಲಿಲ್ಲ.

ದೇವರಿಗೆ ಬೇರೆ ಏನೂ ಕೆಲಸವೇ ಇಲ್ಲವೇ ? ಈ ಪ್ರಬುದ್ಧಕರ್ಣಾಟಕ ಮಶಕವು ಸಕಾಲಕ್ಕೆ ಬರದಂತೆ ಅಡ್ಡಿತಂದುಹಾಕುವುದೇ ಅವನ ಕೆಲಸವೇ ? ಎಂದು ಎನ್ನಿಸುವುದು ! ನಿಜ; ಹಾಗಾದರೆ ಈ ತಾಮಸಕ್ಕೆ ಉಪಪತ್ತಿ ಹೇಳುವುದು ಹೇಗೆ? ಆಧುನಿಕಕರ್ಣಾಟ ಸಾಹಿತ್ಯ ಪ್ರಪಂಚದಲ್ಲಿ ಉತ್ತಮಲೇಖಕರೆಂದು ಹೆಸರುಗೊಂಡಿರುವವರು ಈ ಸಂಚಿಕೆಗೆ ಲೇಖನಗಳನ್ನು ಬರೆಯಲು ಒಪ್ಪಿಕೊಂಡರು. ಒಬ್ಬೊ

ಬ್ಬರಿಗೂ ಅಘಟನಘಟನಾಸಾಮರ್ಥ್ಯ ;—ಒಂದೊಂದು ದಿವಸಕ್ಕೆ ಒಂದೊಂದು ಪುಸ್ತಕವನ್ನು ಬೇಕಾದರೂ ಬರೆಯಬಲ್ಲವರು. ಇಂಥವರಿಗೆ ಮೇಲಿಂದ ಮೇಲೆ ಈ ಕಾಲಕ್ಕೆ ಸರಿಯಾಗಿ ಅನಿವಾರ್ಯಗಳು ಬಂದು ಒದಗಿ ಅಭಿಭವವನ್ನುಂಟುಮಾಡಿದರೆ, ಇದನ್ನು ಏನೆಂದು ಹೇಳುವುದು ? ಆ ವಿಘ್ನಗಳಿಗೆ ಹೆದರದೆ ಹಠಸಾಧನೆಮಾಡಿದ ಲೇಖಕರನ್ನು ಎಷ್ಟೆಂದು ಮೆಚ್ಚುವುದು ? ಇವರೆಲ್ಲರಿಗೂ ನಮ್ಮ ಅನಂತಾನಂತ ವಂದನೆಗಳು.

ಇನ್ನೂ ಕೆಲವು ಲೇಖನಗಳು ಬರಬೇಕಾಗಿದ್ದುವು ; ಅವುಗಳನ್ನೂ ಕಾದರೆ ಮುದ್ದಣನ ಸಂಚಿಕೆಯೂ ವಿನಾಯಕನ ಸಂಚಿಕೆಯೂ ಹೋಗಿ ದೀಪಾವಳಿಯ ಸಂಚಿಕೆಯಾದೀತೆಂಬ ಸಂಕೋಚದಿಂದ ಈ ಗ್ರಂಥವು ಇದರ ಪ್ರಕೃತ ಅತೃಪ್ತಿಕರಸ್ಥಿತಿ ಯಲ್ಲಿಯೇ ಕನ್ನಡಿಗರಲ್ಲಿ ಸಮರ್ಪಿಸಲ್ಪಟ್ಟಿದೆ. ಹಬ್ಬದ ರಜಕ್ಕೆ ಬರಬೇಕಾದ ಹುಡುಗನು ನೆವಹಾಕಿಕೊಂಡು ಬರದೇ ನಿಂತುಬಿಡುವುದಕ್ಕಿಂತ ಎರಡುದಿವಸ ಕಳೆದಮೇಲಾದರೂ ಬಂದನಲ್ಲಾ ಎಂದು ಸಂತೋಷಿಸುವ ತಾಯಿತಂದೆಗಳಂತೆ ಕನ್ನಡಿಗರು ತಡಮಾಡಿಕೊಂಡು ಬಂದ ಈ ಸಂಚಿಕೆಯನ್ನು ಆದರಿಸುವರೆಂದು ನಂಬುತ್ತೇವೆ.

ಈ ಪ್ರಬಂಧಗಳನ್ನೆಲ್ಲಾ ಸೇರಿಸಿ ಬೇರೆಯೊಂದು ಗ್ರಂಥವಾಗಿ ಪ್ರಕಟಗೊಳಿಸಬೇಕೆಂಬ ಉದ್ದೇಶವಿದೆ. ಆದ್ದರಿಂದ ಲಕ್ಷ್ಮೀನಾರಣಪ್ಪನವರ ಜೀವನಚರಿತೆಯ ವಿಚಾರವಾಗಿ ಹೆಚ್ಚು ಅಂಶಗಳನ್ನು ತಿಳಿದಿರುವ ಮಹನೀಯರು ತಮತಮಗೆ ತಿಳಿದ ಸಂಗತಿಗಳನ್ನು ಇನ್ನು ಒಂದುತಿಂಗಳ ಒಳಗಾಗಿ ಕಳುಹಿಸಿಕೊಟ್ಟರೆ ಅವುಗಳನ್ನು ಗ್ರಂಥದಲ್ಲಿ ಸೇರಿಸಬಹುದು.

ಇಂತೀ ಕರ್ಣಾಟಕಸಂಘದ ವಿಜ್ಞಾಪನೆಗಳು.

---

# ಮುನ್ನುಡಿ

ಇತರ ದೇವತೆಗಳನ್ನಾರಾಧಿಸುವಾಗಲಂತೂ ನಿರ್ವಿಘ್ನತಾ ಸಿದ್ಧಿಗಾಗಿ ಮೊದಲು ಗಣಪತಿಯನ್ನು ಪೂಜಿಸುವುದು ಸರಿ. ಆದರೆ ಭಾದ್ರಪದ ಶುಕ್ಲ ಚತುರ್ಥಿಯ ದಿನ ಮಾಡುವ ಸಿದ್ಧಿವಿನಾಯಕ ವ್ರತದಲ್ಲಿಯೂ ಮೊದಲು ಬೇರೊಂದು ಗಣಪತಿಪೂಜೆ ನಡೆಯಬೇಕೆ? ಇದೇ ವಿಧವಾದ ಪ್ರಶ್ನೆಯು ಈ ಮುನ್ನುಡಿಯ ವಿಷಯದಲ್ಲಿಯೂ ಹುಟ್ಟುತ್ತದೆ. ಪ್ರಸ್ತಾವನೆಗಳ ಸಂಗ್ರಹವೇ ಆದ ಈ ಪುಸ್ತಕಕ್ಕೂ ಪ್ರಸ್ತಾವನೆಯೊಂದು ಬೇಕೆ?

ಬೇಕಾದರೆ ಅದನ್ನು ಬರೆಯತಕ್ಕವರಾದರೂ ಎಂಥವರಾಗಿರಬೇಕು? ಯಾರ ಜೀವನಕೃತಿಗಳು ಈ ಪುಸ್ತಕಕ್ಕೆ ವಿಷಯವಾಗಿವೆಯೋ ಆತನು ಸ್ವತಃ ಪ್ರಸಿದ್ಧನಾಗಿರುವ ಕವಿ. ಆತನನ್ನು ಕುರಿತು ಇಲ್ಲಿ ಉಪನ್ಯಸಿಸಿರತಕ್ಕವರು ಪ್ರಸಿದ್ಧರಾದ ವಿದ್ವದ್ರಸಿಕರು. ಹೀಗೆ ಸ್ವತಏವ ಪ್ರಶಸ್ತವಾಗಿರತಕ್ಕ ಗ್ರಂಥಕ್ಕೆ ಉಪಕ್ರಮಣಿಕೆಯನ್ನು ಬರೆಯುವುದರಿಂದ ಮತ್ತಷ್ಟು ಪ್ರಶಸ್ತಿಯನ್ನುಂಟುಮಾಡಿಕೊಡುವೆನೆಂದು ಹೊರಡುವವನು ಅವರೆಲ್ಲರಿಗಿಂತ ಪ್ರಸಿದ್ಧಿಯಲ್ಲಿ ಕಡಿಮೆಯಿಲ್ಲದೆಯಾದರೂ ಇರಬೇಕಲ್ಲವೆ?

ಹೀಗಿರುವಲ್ಲಿ, ಈ ಪುಸ್ತಕದ ಪ್ರಕಾಶಕರಾದ ಕರ್ಣಾಟಕಸಂಘದ ಅಧಿಕಾರಿಗಳು ಮುನ್ನುಡಿಯೊಂದು ಆವಶ್ಯಕವೆಂದು ನಿಶ್ಚಯಿಸಿ, ಅದನ್ನು ನಾನು ಬರೆಯಬೇಕೆಂದು ವಿಧಾಯಕಮಾಡಿರುವುದರ ಮರ್ಮವನ್ನು ತಿಳಿಯುವುದು ಕಷ್ಟವಾಗಿದೆ. ಬಹುಶಃ ಅದು ಈ ರೀತಿ ಇರಬಹುದೆ? ಅವರ ಸಂಘದಲ್ಲಿ ಬಹು ದಿನಗಳಿಂದ ಮಮತೆ ಇಟ್ಟುಕೊಂಡಿರುವವರಲ್ಲಿ ನಾನೂ ಒಬ್ಬನು; ಈ ಸಂಗತಿಯನ್ನು ಅವರು ಗಣನೆಗೆ ತೆಗೆದುಕೊಂಡು, ತಮ್ಮ ಪರವಾಗಿ ಈ ಪುಸ್ತಕದ ಲೇಖಕರಿಗೆ ಕೃತಜ್ಞತೆಯನ್ನು ವ್ಯಕ್ತಪಡಿಸುವ ಸಂತೋಷವನ್ನು ನನಗೆ ಅನುಗ್ರಹಿಸುವುದರ ಮೂಲಕ ನನ್ನ ಮೇಲೆ ತಮಗೆ ಇರುವ ಅಭಿಮಾನವನ್ನು ಸೂಚಿಸಿರಬಹುದು. ಇದಿಷ್ಟು ನನ್ನ ಮುನ್ನುಡಿಗೆ ಮುನ್ನುಡಿ.

ಈ ಬಗೆಯ ಗ್ರಂಥನಿರ್ಮಾಣಕ್ಕೆ ಕನ್ನಡದಲ್ಲಿ ಇದೇ ಮೊದಲೆಂಬುದೇ ಈ ವಿಷಯವಿಲ್ಲದ ಪ್ರಬಂಧದಲ್ಲಿ ನಾನು ಮೊದಲು ಹೇಳಬಹು

ದಾಗಿರುವ ವಿಷಯ. ಇಂಥ ಕವಿಪ್ರಶಂಸಾತ್ಮಕವಾದ ಗ್ರಂಥಗಳು ಇಂಗ್ಲಿಷಿನಲ್ಲಿ ಅಪರೂಪವಲ್ಲ. ಕವಿಯನ್ನು ಚೆನ್ನಾಗಿ ಬಲ್ಲ ಬಂಧುಮಿತ್ರರು ಆತನ ನಡೆನುಡಿಗಳಲ್ಲಿ ಜನರ ಗಮನಕ್ಕೆ ಬರಲು ಅರ್ಹವಾದುವೆಂದು ತಮಗೆ ತೋರಿದ ಸಂಗತಿಗಳನ್ನು ವರ್ಣಿಸಿಯೂ, ಆತನ ಕಾವ್ಯಗಳನ್ನು ಪರಿಶೀಲಿಸಿದ ವಿದ್ವಾಂಸರು ಅವುಗಳ ಗುಣಾವಗುಣಗಳನ್ನು ವಿಮರ್ಶಿಸಿಯೂ ಪ್ರಬಂಧಗಳನ್ನು ಬರೆದು ಪ್ರಕಟಗೊಳಿಸುವುದು ಪಾಶ್ಚಾತ್ಯರಲ್ಲಿ ಸಾಮಾನ್ಯವಾದ ಪದ್ಧತಿ. ಇಂತಹ ಗ್ರಂಥಗಳಿಂದ ಹೆಚ್ಚಾದ ಪ್ರಯೋಜನವುಂಟೆಂಬುದು ಸ್ಪಷ್ಟವಾಗಿಯೇ ಇದೆ. ಅವು ಜನಸಾಮಾನ್ಯಕ್ಕೆ ಕವಿಯ ಪ್ರಥಮಪರಿಚಯವನ್ನು ಉಂಟುಮಾಡಿಕೊಟ್ಟು, ಆತನ ಕಾವ್ಯಗಳಲ್ಲಿ ಅವರಿಗೆ ಅಭಿರುಚಿಯನ್ನು ಹುಟ್ಟಿಸುತ್ತವೆ. ಜನರಿಗೆ ಕಾಯಕ್ಲೇಶ ಮನಃಕ್ಲೇಶಗಳು ಹೆಚ್ಚುತ್ತಲೂ ವಿಶ್ರಾಂತಿವ್ಯವಧಾನಗಳು ಕಡಿಮೆಯಾಗುತ್ತಲೂ ಇರುವ ಈ ಕಾಲದಲ್ಲಿ ಪ್ರತಿಯೊಬ್ಬ ಕವಿಯ ಪ್ರತಿಯೊಂದು ಕಾವ್ಯವನ್ನೂ ಪ್ರತಿಯೊಬ್ಬ ಮನುಷ್ಯನೂ ಆಮೂಲಾಗ್ರವಾಗಿ ಓದುವುದು ಸಾಧ್ಯವಲ್ಲ. ಈಗ ವಿದ್ಯಾಪ್ರಾಚುರ್ಯವಿಶೇಷದಿಂದಲೂ ಮುದ್ರಣಸೌಕರ್ಯವಿಶೇಷದಿಂದಲೂ ಗ್ರಂಥಸಂಖ್ಯಾಭಿವೃದ್ಧಿಯು ಹೇರಳವಾಗಿ ಆಗುತ್ತಿದೆ, ಅಥವಾ ಆಗುವಂತಿದೆ. ಇಂತಹ ಕಾಲದಲ್ಲಿ ಕಾವ್ಯರಾಶಿಯೊಳಗಿನ ಉತ್ತಮಕೃತಿಗಳ ಸ್ವಾರಸ್ಯಾಂಶಗಳನ್ನು ಸಂಗ್ರಹಿಸಿ ಜನರ ಮುಂದಿರಿಸಲು ಇಂತಹ ಉಪಾಯವನ್ನವಲಂಬಿಸದಿದ್ದರೆ, ಆ ಕೃತಿಗಳ ಕಡೆಗೆ ಸಾಮಾನ್ಯಲೋಕದ ದೃಷ್ಟಿಯು ತಿರುಗುವುದೇ ಅಸಂಭವವಾಗಬಹುದು. ಇದೂ ಅಲ್ಲದೆ, ಪ್ರೌಢಗಳಾದ ಕಾವ್ಯಗಳನ್ನೋದಿ ತಿಳಿದುಕೊಳ್ಳುವುದಕ್ಕೆ ಆವಶ್ಯಕವಾದ ಪಾಂಡಿತ್ಯವು ಸಾಮಾನ್ಯಜನಕ್ಕೆ ಇರುವುದು ಸಾಧ್ಯವಲ್ಲ. ಅಂಥವರಿಗೆ ಈ ಬಗೆಯ ವಿವರಣಗ್ರಂಥಗಳು ಅತಿಶಯವಾಗಿ ಉಪಕಾರಕಗಳಾಗುವುವು. ಹೀಗೆ ಸಮಯಾನುಕೂಲ್ಯವಿಲ್ಲದೆಯಾಗಲಿ ವ್ಯುತ್ಪತ್ತಿ ಸಾಲದೆಯಾಗಲಿ ಕಾವ್ಯವ್ಯಾಸಂಗವನ್ನು ಬಿಟ್ಟಿರತಕ್ಕ ಜನರಿಗೆಲ್ಲ ಇಂತಹ ಪುಸ್ತಕಗಳು ಅತ್ಯಂತ ಆದರಣೀಯಗಳಾಗುವುವೆಂಬುದಕ್ಕೆ ಸಂದೇಹವಿಲ್ಲ.

ಇನ್ನು ಈ ಗ್ರಂಥದಲ್ಲಿ ಪ್ರಶಂಸಿತನಾಗಿರುವ ಕವಿಯು ಅಷ್ಟು ಉತ್ತಮವರ್ಗಕ್ಕೆ ಸೇರಿದವನೆ?—ಎಂದರೆ ಈ ಬಗೆಯ ಪ್ರಶಂಸಾಗ್ರಂಥವೊಂದಕ್ಕೆ ವಿಷಯನಾಗಲು ತಕ್ಕಷ್ಟು ಮಹತ್ವವು ಆತನಲ್ಲುಂಟೆ?—ಎಂಬ ಪ್ರಶ್ನೆಗೆ ಉತ್ತರವನ್ನು ಇಲ್ಲಿ ಸಂಕ್ಷೇಪವಾಗಿ ಹೇಳಬೇಕಾಗಿದೆ. ಅದಕ್ಕೆ

ತಕ್ಕ ಸಮಾಧಾನವನ್ನು ಕಾವ್ಯತತ್ತ್ವಜ್ಞರಾದ ಪಂಡಿತರು ಮುಂದಿನ ಪ್ರಬಂಧಗಳಲ್ಲಿ ವಿಸ್ತಾರವಾಗಿ ಸಿದ್ಧಗೊಳಿಸಿಟ್ಟಿರುವರು. ಅವರು ವಿವರಿಸಿರ ತಕ್ಕ ಸಂಗತಿಗಳನ್ನೆಲ್ಲ ಒಟ್ಟಾಗಿ ತೆಗೆದುಕೊಂಡು ಪರ್ಯಾಲೋಚನೆಮಾಡಿ ದರೆ ಲಕ್ಷ್ಮೀನಾರಾಯಣ ಕವಿಯ ವಿಶೇಷಗುಣಗಳು--ಅಥವಾ, ವಿಶೇಷ ಮಹತ್ತ್ವದ ಗುರುತುಗಳು—ಎಂದು ನನಗೆ ತೋರಿಬರುವ ಎರಡು ಅಂಶ ಗಳನ್ನು ಇಲ್ಲಿ ಸೂಕ್ಷ್ಮವಾಗಿ ನಿರೂಪಿಸುವೆನು :—

(೧) ಆತನು ಹುಟ್ಟುಕವಿ.

(೨) ಆತನು ನೂತನ ಮಾರ್ಗವನ್ನು ಹುಡುಕಲಾರಂಭಿಸಿದ ಕವಿ.

ಕವಿತಾಬೀಜವು ಆತನಲ್ಲಿ ಆಜನ್ಮಸಿದ್ಧವಾಗಿತ್ತೆಂಬುದು ಆತನ ಜೀವನಚರಿತೆಯಿಂದ ವ್ಯಕ್ತವಾಗುತ್ತದೆ. ಪಂಡಿತವಂಶದಲ್ಲಿ ಹುಟ್ಟಿಯೋ ಅಥವಾ ಇತರ ವಿಧವಾದ ಸನ್ನಿವೇಶಾನುಕೂಲ್ಯದಿಂದಲೋ ಬಾಲ್ಯದಲ್ಲಿ ಕಾವ್ಯಾಭ್ಯಾಸಮಾಡಿದವರು ತಾವೂ ಕಾವ್ಯರಚನೆಮಾಡಿ ತಮ್ಮ ಎದೆಯ ಮೇಲೆ ಒತ್ತುತ್ತಿರುವ ಪಾಂಡಿತ್ಯದ ಹೊರೆಯನ್ನು ಇಳಿಸಿಕೊಳ್ಳಬೇಕೆಂದು ಯತ್ನಿಸುವುದು ಸ್ವಾಭಾವಿಕವಾಗಿದೆ. ಆದರೆ ಬಾಲ್ಯಕಾಲದಲ್ಲಿ ಪಂಡಿತ ಸಂಪರ್ಕವನ್ನೆಷ್ಟು ಮಾತ್ರವೂ ಅರಿಯದಿದ್ದು ಕಸರತ್ ವಿದ್ಯೆಯಿಂದ ಜೀವನ ಸಂಪಾದಿಸಿಕೊಳ್ಳುತ್ತಿದ್ದವನು, ದೊಡ್ಡ ಪೈಲ್ವಾನನೆಂದು ಹೆಸರು ಪಡೆಯಬೇಕೆಂಬ ಆಶೆಗೆ ವಶನಾಗದೆ, ಕಾವ್ಯಪಾಠಕ್ಕೆ ಮನಸೋಲಬೇಕಾ ದರೆ ಆತನಲ್ಲಿ ಎಲ್ಲ ಸತ್ಕಾವ್ಯಕ್ಕೂ ಮಾತೃತೆಯಾದ ರಸಿಕತೆಯು—ಎಂದರೆ ತನ್ನ ಸುತ್ತಮುತ್ತ ಕಾಣುವ ಪ್ರಪಂಚದಲ್ಲಿಯ ಲೋಪದೋಷಗಳ ವಿಷ ಯದಲ್ಲಿ ಬೇಸತ್ತವನಾಗಿ, ಅದಕ್ಕಿಂತ ಉತ್ತಮವಾದ ಬೇರೊಂದು ಪ್ರಪಂ ಚವನ್ನು ಹುಡುಕಿ, ಅದರ ಸೌಂದರ್ಯವನ್ನು ಅನುಭವಿಸಬೇಕೆಂಬ ಭಾವೋ ನ್ನತಿಯೂ ತದನುಗುಣವಾದ ಆರ್ದ್ರಹೃದಯತೆಯೂ—ಇದ್ದೇ ಇದ್ದಿರ ಬೇಕಲ್ಲವೆ ? ಈ ಊಹೆಯನ್ನು ಲಕ್ಷ್ಮೀನಾರಾಯಣ ಕವಿಯ ಕೊನೆಯ ಕಾವ್ಯವಾದ—ಎಂದರೆ ಆತನ ಮನೋಬುದ್ಧಿಗಳು ಪರಿಪಕ್ವಸ್ಥಿತಿಗೆ ಬಂದಾಗ ಬರೆದುದಾದ—" ರಾಮಾಶ್ವಮೇಧ " ವು ಸ್ಥಿರಪಡಿಸುತ್ತದೆ. ಮುದ್ದಣನು ಪಾಂಡಿತ್ಯಪ್ರದರ್ಶನಕ್ಕಾಗಿ ಕಾವ್ಯಹೇಳಹೊರಟವನಲ್ಲ. ಅವನು ಸರಸಸಲ್ಲಾಪಗಳಲ್ಲಿ ಇಷ್ಟವುಳ್ಳವನು. ಕಾವ್ಯಪ್ರಸಿದ್ಧವಾದ ದುಂಬಿಗೆ ಮಕರಂದದಲ್ಲಿ ಹೇಗೆ ಸ್ವಾಭಾವಿಕವಾದ ಆಸಕ್ತಿಯೋ ಹಾಗೆ ಆತನಿಗೆ ಕಾವ್ಯರಸದಲ್ಲಿ ಸ್ವಾಭಾವಿಕವಾದ ಆಸಕ್ತಿ. ಪುಣ್ಯವಶದಿಂದ

ಆತನು ಅನುಕೂಲಳಾದ ಸಹಧರ್ಮಿಣಿಯನ್ನು ಪಡೆದಿದ್ದನು. ಆ ಸರಸಿಯನ್ನು ಸಂತೋಷಗೊಳಿಸುವ ಸಂತೋಷಕ್ಕಾಗಿ ಆತನು ಹೇಳಿದ ಕಥಾವಿಸ್ತಾರವೇ "ರಾಮಾಶ್ವಮೇಧ" ವೆಂಬ ಕಾವ್ಯ. ಅದು ರಸಿಕರಂಜನೆಗಾಗಿ ಹುಟ್ಟಿದ ರಸಿಕವಾಕ್ಯ. ಜೇನು ಮಾರಿ ಹೊಟ್ಟೆಹೊರೆದುಕೊಳ್ಳುವವನಿಗೆ ಮಕರಂದದಲ್ಲಿಯೂ ಒಣಪಂಡಿತನಿಗೆ ಕಾವ್ಯಾಲಾಪದಲ್ಲಿಯೂ ಇರತಕ್ಕ ಆಸಕ್ತಿಯು ನೈಜವಾದುದಲ್ಲ, ಕೃತಕವಾದುದು. ಆ ಬಗೆಯ ಕಾರಣಾಂತರಜನಿತವಾದ ಆಸಕ್ತಿಯ ಹೆಸರು ಪ್ರೀತಿಯಲ್ಲ; ಅದನ್ನು ಲೋಭವೆನ್ನಬಹುದೋ ಏನೋ! ಹೀಗೆ ಹೇಳುವುದರಲ್ಲಿ ನಮ್ಮ ಉದ್ದೇಶ್ಯವು ಪಾಂಡಿತ್ಯದೂಷಣೆಯಲ್ಲ. ಪಾಂಡಿತ್ಯವಿಲ್ಲದೆ ಸತ್ಕಾವ್ಯವಾಗಲಾರದೆಂಬುದನ್ನು ನಾವು ಸರ್ವಾತ್ಮನಾ ಒಪ್ಪಿಕೊಳ್ಳುತ್ತೇವೆ. ಆದರೆ ಕಾವ್ಯನಿರ್ಮಾಣಕ್ಕೆ ಪಾಂಡಿತ್ಯವೊಂದೇ ಸಾಲದೆಂಬುದನ್ನು ಸೂಚಿಸುವುದೇ ಸದ್ಯಃ ನಮ್ಮ ತಾತ್ಪರ್ಯ. ಮಣ್ಣಿಲ್ಲದಿದ್ದರೆ ಮಡಕೆಯಾಗದು. ಆದರೆ ಮಣ್ಣನ್ನು ಒದಗಿಸಿಕೊಳ್ಳ ಬಲ್ಲವರಿಗೆಲ್ಲ ಕುಂಬಾರನಿಗಿರುವ ಹಸ್ತಕೌಶಲವು ಇರುವುದೆ?

ಲಕ್ಷ್ಮೀನಾರಾಯಣಕವಿಯಲ್ಲಿ ಕವಿತಾಂಕುರವು ಪ್ರಕೃತಿಸಿದ್ಧವಾಗಿತ್ತೆಂದು ಹೇಳಿದ ಮಾತ್ರದಿಂದಲೇ ಆತನ ಮೇಲ್ಮೆಯೆಲ್ಲವನ್ನೂ ಬಣ್ಣಿಸಿದಂತೆ ಆಗದು. ಸಹಜವಾದ ಕವಿತಾಚಾತುರಿಯನ್ನು ಪಡೆದವರು ಕನ್ನಡದಲ್ಲಿ ಎಷ್ಟೋಮಂದಿ ಇದ್ದರಲ್ಲವೆ? ಹಿಂದೆ ನೂರಾರು ರಸವತ್ಕಾವ್ಯಗಳನ್ನು ಬರೆದವರು ಆಜನ್ಮಕವಿಗಳಾಗಿಯೇ ಇದ್ದಿರಬೇಕಲ್ಲವೆ? ಪಂಪ, ಕುಮಾರವ್ಯಾಸ, ಷಡಕ್ಷರಿ, ಲಕ್ಷ್ಮೀಶ, ಕನಕದಾಸ—ಇವರೇ ಮೊದಲಾದ ಎಷ್ಟೋಮಂದಿಗೆ ಕವಿತೆಯು, ಸ್ವಲ್ಪ ಹೆಚ್ಚು ಕಡಿಮೆ ಹುಟ್ಟುಗುಣವಾಗಿಯೇ ಬಂದಿರಬೇಕು. ಹಾಗಾದನೇಲೆ ಲಕ್ಷ್ಮೀನಾರಾಯಣಕವಿಯದೇನು ವಿಶೇಷ?—ಎಂಬ ವಿಚಾರವು ಬಂದೇಬರುವುದು. ಇದಕ್ಕೆ ಪ್ರತ್ಯುತ್ತರವು ಮೇಲಣ (೨) ನೆಯ ಗುಣನಿರೂಪಣೆಯಲ್ಲಿ ಅಡಕವಾಗಿದೆ. ಅದು—ಆತನು ನೂತನಮಾರ್ಗಾನ್ವೇಷಿಯೆಂಬುದೇ. ಈಗ ತಾನೆ ನಾವು ಸ್ಮರಿಸಿರುವ ಪಂಪ ಮೊದಲಾದ ಪೂರ್ವಕವಿಗಳಲ್ಲಿ ಕೆಲವರು ಮಾತ್ರವೇ ಕವಿತ್ವದಲ್ಲಿ ನೂತನ ಮಾರ್ಗಗಳನ್ನು ಕಲ್ಪಿಸಿದವರು; ಉಳಿದ ಬಹುಮಂದಿ ತಮಗೆ ಹಿಂದಿದ್ದವರು ಹಾಕಿದ ಮಾರ್ಗಗಳನ್ನು ಅನುಸರಿಸಿ ನಡೆದವರು. ನಮ್ಮ ಲಕ್ಷ್ಮೀನಾರಾಯಣ ಕವಿಯು ನೂತನಮಾರ್ಗ ಪ್ರದರ್ಶಕರಾದ

ಕೆಲಮಂದಿಯ ಪಂಕ್ತಿಗೆ ಸೇರತಕ್ಕವನು; ಆತನ ಪೂರ್ವಿಕರ ಕೃತಿಗಳಲ್ಲಿ ಕಾಣಬಾರದಿರುವ ಲಕ್ಷಣಗಳೊಂದೆರಡು ಆತನ ಕೃತಿಯಲ್ಲಿ ಕಾಣಬರುತ್ತವೆ. ಆ ಲಕ್ಷಣಗಳು ಇನ್ನೂ ಪ್ರಾರಂಭದಶೆಯಲ್ಲಿಯೇ ಇರತಕ್ಕುವು. ಅವು ಪರಿಪೂರ್ಣದಶೆಗೆ ಬಂದು ಶೋಭಿಸಲು ಬೇಕಾದಷ್ಟು ಕಾಲಾವಕಾಶವನ್ನು ವಿಧಿಯು ಆತನಿಗೆ ದಯಗೆಯ್ಯಲಿಲ್ಲ.

ಲಕ್ಷ್ಮೀನಾರಾಯಣಕೃತಿಯ ನವೀನತೆಯು ಕಾವ್ಯದ ವಸ್ತುವಿಗೆ ಸಂಬಂಧಪಟ್ಟುದಲ್ಲ, **ರೀತಿಗೆ** ಸಂಬಂಧಪಟ್ಟುದು. ಆತನು ಹೇಳಿರುವುದೇನೋ ಹಳೆಯ ರಾಮಕಥೆಯನ್ನೇ. ಆದರೆ ಆ ಹೇಳಿಕೆಯ ಪರಿಯು ಹೊಸದು. ಹೀಗೆ ಹೊಸದೊಂದು ದಾರಿಯನ್ನು ಹಿಡಿಯುವ ಪ್ರಯತ್ನವು ಸ್ಪಷ್ಟಗೊಂಡಿರುವುದು "ರಾಮಾಶ್ವಮೇಧ" ದಲ್ಲಿಯೇ. ಆದರ **ರೀತಿನವ್ಯತೆ**ಯು ಮೂರು ಸಂಗತಿಗಳಿಂದ ಉಂಟಾದುದೆಂದು ಹೇಳಬಹುದು. ಅವುಗಳಲ್ಲಿ

(೧) ಅದು ಗದ್ಯಪ್ರಬಂಧವಾಗಿರುವುದೊಂದು;

(೨) ಅದು ಸಂಭಾಷಣೆಯ ರೂಪದಲ್ಲಿರುವುದೊಂದು;

(೩) ರಸಿಕದಂಪತಿಗಳ ಸಲ್ಲಾಪಕ್ಕೆ ಸಹಜವಾದ ಹಾಸ್ಯರಸವು ಅದರಲ್ಲಿ ಅಡಿಗಡಿಗೆ ಉಕ್ಕಿ ಹರಿಯುತ್ತಿರುವುದೊಂದು.

ಇವುಗಳಲ್ಲಿ (೨) (೩) ನೆಯ ಗುಣಗಳು (೧) ನೆಯದಕ್ಕಿಂತಲೂ ಪ್ರಶಸ್ತವಾದುವು. ಏಕೆಂದರೆ ಕನ್ನಡದಲ್ಲಿ ಸಂಭಾಷಣರೂಪದ ಕಾವ್ಯವು "ರಾಮಾಶ್ವಮೇಧ" ಕ್ಕೆ ಹಿಂದೆ ಯಾವುದೂ ಆಗಿದ್ದಂತೆ ತೋರುವುದಿಲ್ಲ. ಅದರಲ್ಲಿಯ ಸಂಭಾಷಣೆಯ ರೀತಿಯು ಆಧುನಿಕ ಕಾದಂಬರಿಗಳಲ್ಲಿ—ಎಂದರೆ "ನಾವೆಲ್" ಗಳಲ್ಲಿ ಕಾಣಬರುವಂತಹುದು. ಅಶ್ಲೀಲವಾಗದೆ ಮರ್ಯಾದೆಯನ್ನು ಮೀರದೆ ಇರುವ ಹಾಸ್ಯರಸಪ್ರಧಾನವಾದ ಗ್ರಂಥವಾದರೋ ಕನ್ನಡದಲ್ಲಿ ಇನ್ನೂ ಅಪರೂಪವೇ.

ಗದ್ಯರಚನೆಯು ಕನ್ನಡದಲ್ಲಿ ಎಷ್ಟೋಹಿಂದಿನಿಂದಲೂ ಆಗಿಬಂದಿದೆ. ಚಂಪೂಕಾವ್ಯಗಳಲ್ಲಿ ಗದ್ಯವಿದ್ದೇ ಇದೆ. ಕೃಷ್ಣರಾಜ ವಾಣೀವಿಲಾಸ ಭಾರತ, ಕಲಾವತೀಪರಿಣಯ, ಮುದ್ರಾಮಂಜೂಷ ಮೊದಲಾದ ಎಷ್ಟೋ ವಚನಗ್ರಂಥಗಳು "ರಾಮಾಶ್ವಮೇಧ" ಕ್ಕಿಂತ ಹಿಂದೆಯೇ ರಚಿಸಲ್ಪಟ್ಟುವು. ಆದರೂ ಒಂದು ಪ್ರೌಢವಾದ ಪದ್ಯಕಾವ್ಯವನ್ನು ಬರೆದಾತನು

ಗದ್ಯಕಾವ್ಯವನ್ನು ಬರೆಯಹೊರಟು "ಪದ್ಯಂ ವಧ್ಯಂ; ಗದ್ಯಂ ಹೃದ್ಯಂ" ಎಂದು ತೀರ್ಮಾನಮಾಡಿದುದನ್ನು ನೋಡಿದರೆ ಆತನು ಬರಬರುತ ಗದ್ಯ ಪಕ್ಷಪಾತಿಯಾಗುತ್ತಿದ್ದನೆಂಬುದು ನಿಸ್ಸಂಶಯವಾಗಿ ತೋರುತ್ತದೆ. ಹಿಂದಿನ ಪದ್ಯರಚನಾಭ್ಯಾಸದಿಂದ ಸಂಪಾದಿತವಾದ ಶಬ್ದಸಂಪತ್ತನ್ನೂ ವಾಗ್ಧೋರಣಿಯನ್ನೂ ಆತನು ಗದ್ಯನಿರ್ಮಿತಿಯಲ್ಲಿ ಉಪಯೋಗಪಡಿಸಿರುವುದರಿಂದ ಆತನ ವಾಕ್ಯಸರಣಿಯಲ್ಲಿ ಅಥವಾ ಶೈಲಿಯಲ್ಲಿ ಒಂದು ಹೊಸ ಸೊಬಗೂ ಶ್ರಾವ್ಯತೆಯೂ ಉಂಟಾಗಿವೆ. ಆ ಶೈಲಿಯಾದರೋ, ಮೇಲೆ ಹೇಳಿರುವಂತೆ, ರಸಿಕಸಹಜವಾದ ಮೃದುಮಧುರ ಹಾಸ್ಯದಿಂದ ತುಂಬಿದ ಸಂಭಾಷಣೆಯ **ರೀತಿ**ಯನ್ನು ತಾಳಿರುವ ಕಾರಣ ಆ ಗದ್ಯದ ಸೊಂಪು ಇಮ್ಮಡಿಯಾಗಿದೆ. ಹೀಗೆ ರೀತಿಯಲ್ಲಿ ಬಹುಮಟ್ಟಿಗೂ ಶೈಲಿಯಲ್ಲಿ ಸ್ವಲ್ಪಮಟ್ಟಿಗೂ ಲಕ್ಷ್ಮೀನಾರಾಯಣಕವಿಯು ಹೊಸದಾರಿಯೊಂದನ್ನು ಹಾಕಲು ಮೊದಲುಮಾಡಿರುವನು.

ಪಾಶ್ಚಾತ್ಯರ ಸಾಹಿತ್ಯಮೀಮಾಂಸೆಯಲ್ಲಿ ಕಾವ್ಯಗಳನ್ನು "ಕ್ಲ್ಯಾಸಿಕಲ್" ಅಥವಾ ಸಾಂಪ್ರದಾಯಿಕ, ಮತ್ತು "ರೊಮ್ಯಾಂಟಿಕ್" ಅಥವಾ ಸ್ವತಂತ್ರ ಎಂದು ಎರಡು ಜಾತಿಗಳಾಗಿ ವಿಂಗಡಿಸುವುದುಂಟು. ಇವುಗಳಲ್ಲಿ ಸಾಂಪ್ರದಾಯಿಕ ಕಾವ್ಯವು ಇತಿಹಾಸ ಸಮ್ಮತಗಳಾದ ಸಂದರ್ಭಗಳಿಂದಲೂ ಉದ್ದಾಮವಾದ ಧೋರಣೆಯಿಂದಲೂ ಪ್ರೌಢವಾದ ವಾಗ್ಗುಂಫನದಿಂದಲೂ ಕೂಡಿ ಲಕ್ಷಣಶಾಸ್ತ್ರಗಳಲ್ಲಿ ಹೇಳಿರತಕ್ಕ ಸಕಲಸಲ್ಲಕ್ಷಣಗಳಿಗೂ ಆದರ್ಶಪ್ರಾಯವಾಗಿರುವುದು. ಸ್ವತಂತ್ರ ರೀತಿಯ ಕಾವ್ಯವಾದರೋ, ನೂತನ ಸನ್ನಿವೇಶಗಳನ್ನು ಕಲ್ಪಿಸಿಕೊಂಡು, ಶಬ್ದಶೈಲಿಗಳಲ್ಲಿ ಹೊಸಹೊಸ ವೈಚಿತ್ರ್ಯಗಳನ್ನು ತೋರಿ, ವಾಚಕರಿಗೆ ಸಾಮಾನ್ಯವಾಗಿ ಬಳಕೆಯಲ್ಲಿರುವ ಮಾತು ಕಥೆಗಳನ್ನೇ ಉಪಯೋಗಿಸಿಕೊಂಡು, ಲಕ್ಷಣಶಾಸ್ತ್ರಗಳ ಕಟ್ಟುಪಾಡಿಗೆ ಅಪ್ಪಾಗಿ ಸಿಕ್ಕದೆ ಇರುವುವು. ಸಾಂಪ್ರದಾಯಿಕ ಕಾವ್ಯಗಳು ಉಪಾಧ್ಯಾಯನಂತೆಯೂ ಯಜಮಾನನಂತೆಯೂ ಗಂಭೀರವಾದ ರೀತಿಯಲ್ಲಿ ಮಾತನಾಡತಕ್ಕುವು. ಸ್ವತಂತ್ರಕಾವ್ಯಗಳು ಒಡನಾಡಿಯಂತೆ ಸಲಿಗೆಯಿಂದ ಮಾತನಾಡತಕ್ಕುವು. ಈ ಎರಡು ಜಾತಿಗಳಲ್ಲಿ ಲಕ್ಷ್ಮೀನಾರಾಯಣಕವಿಯು ಎರಡನೆಯ ಜಾತಿಗೆ ಮೂಲಪುರುಷನಾದವನೆಂದು ನಾವು ಹೇಳಬಹುದು. ಸಾಂಪ್ರದಾಯಿಕ ಕಾವ್ಯವನ್ನು ಬರೆಯಲು ಪ್ರತಿಭೆ ಪಾಂಡಿತ್ಯಗಳೆರಡೂ ಅತಿ ಮುಖ್ಯವಾದುವು; ಸ್ವತಂತ್ರ

ರೀತಿಯ ಕಾವ್ಯರಚನೆಗೆ ಹೊಸದೊಂದು ಮನೋವೃತ್ತಿಯೂ ಧೈರ್ಯವೂ ಇರಬೇಕು. ಇವು ಆತನಿಗೆ ಬಂದಿದ್ದುವು.

ಕವಿಯಾದವನ ಮುಖ್ಯ ಕಾರ್ಯವಾವುದು? (೧) ಸವಿಯಾದ ಮಾತುಗಳಿಂದ ಇಂಪಾದ ಒಂದೆರಡು ಚಿತ್ರಗಳನ್ನು ಚಿತ್ರಿಸಿ, ಅಥವಾ ಹಾಡುಗಳನ್ನು ಹಾಡಿ, ಮನಸ್ಸಿಗೆ ಆಹ್ಲಾದವನ್ನುಂಟುಮಾಡುವುದು ಮಾತ್ರವೆ? ಅಥವಾ (೨) ಹೊಸದೊಂದು ಪ್ರಪಂಚವನ್ನು ಸೃಜಿಸಿ ಅಲ್ಲಿಯ ವ್ಯಾಪಾರಗಳನ್ನು ಕಣ್ಣಮುಂದೆ ತರುವುದರ ಮೂಲಕ ದೊಡ್ಡದೊಂದು ಜೀವನ ತತ್ತ್ವವು, ಅಥವಾ ವಿಶ್ವರಹಸ್ಯವು, ಹೊಸದಾಗಿ ಮನಸ್ಸಿಗೆ ಸ್ಫುರಿಸುವಂತೆ ಮಾಡುವುದೆ?—ಎಂಬೀವಿಚಾರದಲ್ಲಿ ಸಾಹಿತ್ಯಜ್ಞರು ಭಿನ್ನಾಭಿಪ್ರಾಯಗಳುಳ್ಳವರಾಗಿರುವರು. ಆ ಎರಡು ತೆರದ ಕಾರ್ಯಗಳಲ್ಲಿ ನಮ್ಮ ಲಕ್ಷ್ಮೀನಾರಾಯಣ ಕವಿಯು ಎರಡನೆಯದನ್ನು ಕೈಕೊಂಡವನೆಂದು ಹೇಳಲಾಗುವುದಿಲ್ಲ. ಆತನು ತಾನಾಗಿ ಒಂದು ಜಗತ್ತಂತ್ರ ಮರ್ಮವನ್ನು ಕಂಡುಹಿಡಿದು, ಅದನ್ನು ಕಾವ್ಯದ ಮೂಲಕ ಜನರಿಗೆ ಸಾಕ್ಷಾತ್ಕಾರಪಡಿಸುವೆನೆಂದು ಹೊರಟವನಲ್ಲ. ಆದರೆ ಮೊದಲನೆಯ ತೆರದ ಕೆಲಸವನ್ನು ಆತನು ಚೆನ್ನಾಗಿ ಮಾಡಿರುವನು. ಎಲ್ಲರಿಗೂ ತಿಳಿದಿರುವ ವಿಷಯವನ್ನೇ ಆದರೂ, ಹಳಸದೆ ನೀರಸವಾಗದೆ ಇರುವ ಒಂದು ಫಕ್ಕಿಯಿಂದ ಆತನು ಹೇಳಿರುವ ಕಾರಣ ಅದು ಹರ್ಷಜನಕವಾಗಿದೆ. ಇಂತಹವನು ಮಹಾಕವಿಯೆಂದೆನ್ನಿಸಿಕೊಳ್ಳದಿದ್ದರೂ ಸತ್ಕವಿಯೆನ್ನಿಸಿಕೊಳ್ಳುವುದಕ್ಕೆ ಯಾವ ಅಡ್ಡಿಯೂ ಇರದು. ಅನೇಕ ವಿಷಯಗಳಲ್ಲಿ ಆತನು ಹಿಂದಿನ ಸತ್ಕವಿಗಳ ಪಂಕ್ತಿಗೆ ಸೇರತಕ್ಕವನಾಗಿದ್ದಾನೆ. ಒಂದೆರಡು ವಿಷಯಗಳಲ್ಲಿ ಆತನು ನವೀನ ಮಾರ್ಗಾವಲಂಬಿಯಾಗಿಯೂ ಇದ್ದಾನೆ.

ವಿಚಾರಮಾಡಿ ನೋಡಿದರೆ ಪ್ರಕೃತಕ್ಕೆ ಅತ್ಯಂತಾವಶ್ಯಕವಾದ ಜೀವನ ತತ್ತ್ವವೊಂದನ್ನೂ ಲಕ್ಷ್ಮೀನಾರಾಯಣ ಕವಿಯು ಹೊಸದಾಗಿ ಬೋಧಿಸಿರುವನೆಂದು ತೋರುವುದು. ಆ ತತ್ತ್ವವು ಮುದ್ದಣ ಮನೋರಮೆಯರ ಜೀವನ ವಿಧಾನದಿಂದ ಹೊರಪಡತಕ್ಕುದು. ಅವರು ಬಡವರು; ಆದರೂ ಅವರಿಗಿಂತ ಹೆಚ್ಚಾಗಿ ಸುಖವನ್ನನುಭವಿಸಿದ ಭಾಗ್ಯವಂತರು ಎಲ್ಲಿಯೂ ಇರಲಾರರು. ಅವರ ಆ ಸುಖವು ಸರಸತೆಯಿಂದ ಉತ್ಪನ್ನವಾದುದು; ಹಣದಿಂದ ಕೊಂಡುದಲ್ಲ. "ಧನಿಕರಾಗುವುದು ನಿಮಗೆ ಸಾಧ್ಯವೋ ಇಲ್ಲವೋ ನಾನರಿಯೆ. ಆದರೆ ಧನಿಕರಾಗಬೇಕೆಂಬ ಪ್ರಯ

ತ್ನದಲ್ಲಿ ನಿಮ್ಮ ಆತ್ಮವನ್ನು ನೀವು ಅಧೋಗತಿಗೆ ತಳ್ಳುವ ಸಂಭವವುಂಟು. ಆದರೆ ಸ್ವಲ್ಪ ಪ್ರಯಾಸದಿಂದ ರಸಿಕರಾಗುವುದು ನಿಮಗೆ ಸಾಧ್ಯ. ನೀವು ರಸಿಕರಾದರೆ ಧನಿಕರು ಕೊಂಡುಕೊಳ್ಳಬಹುದಾದ ಸುಖಶಾಂತಿಗಳಿಗಿಂತ ಮಿಗಿಲಾದ ಸುಖಶಾಂತಿಗಳನ್ನು ನೀವು ಪಡೆಯಬಹುದಲ್ಲದೆ, ನಿಮ್ಮ ಆತ್ಮವನ್ನು ಅದರಿಂದ ಉನ್ನತಿಗೆ ತಂದುಕೊಳ್ಳಲಾಗುವುದು. ಆದುದರಿಂದ ನಿಮ್ಮ ಮನೆಗಳಲ್ಲಿ ಧನಧಾನ್ಯಸಂಪತ್ತು ಹೆಚ್ಚಾಗಿಯಾದರೂ ಇರಲಿ, ಕಡಿಮೆಯಾಗಿಯಾದರೂ ಇರಲಿ; ಕಾವ್ಯಸಂಪತ್ತು ಮಾತ್ರ ಯಥೇಷ್ಟವಾಗಿರುವಂತೆ ಮಾಡಿಕೊಂಡು ಮುದ್ದಣ ಮನೋರಮೆಯರಂತೆ ಸತ್ಕಥಾ ವಿನೋದದಲ್ಲಿ ಬಾಳಿರಿ''—ಹೀಗೆಂಬುದೇ ಲಕ್ಷ್ಮೀನಾರಾಯಣಕವಿಯು ಕನ್ನಡಿಗರಿಗೆ ಉಪದೇಶಿಸುತ್ತಿರುವ ತತ್ತ್ವವೆಂದು ನಾವು ಭಾವಿಸಬಹುದಲ್ಲವೆ?

**ಡಿ. ವಿ. ಗುಂಡಪ್ಪ.**

**೧೩ನೆಯ ಸೆಪ್ಟೆಂಬರ್ ೧೯೨೫.**





ಪ್ರಾಕ್ತನವಿಮರ್ಶವಿಚಕ್ಷಣ ರಾವ್ ಬಹದ್ದೂರ್

**ಆರ್. ನರಸಿಂಹಾಚಾರ್ಯರು,** ಎಂ.ಎ., ಎಂ.ಆರ್.ಎ.ಎಸ್.

# ಶ್ರೀಮಾನ್ ನಂದಳಿಕೆ ಲಕ್ಷ್ಮೀನಾರಣಯ್ಯ

## ೧೮೬೯—೧೯೦೧.

**(ಪ್ರಾಕ್ತನವಿಮರ್ಶವಿಚಕ್ಷಣ ರಾವ್ ಬಹದ್ದೂರ್ ಮ|| ಆರ್. ನರಸಿಂಹಾಚಾರ್, ಎಂ.ಎ., ಎಂ.ಆರ್. ಎ.ಎಸ್. ಇವರಿಂದ).**

ಈತನು ಬ್ರಾಹ್ಮಣನು. ಇವನ ಪೂರ್ವಿಕರು ಪಾಠಾಳಿಗಳು, ಎಂದರೆ ದೇವಸ್ಥಾನದಲ್ಲಿ ಕಟ್ಟಿಗೆಕೋಲು ಹಿಡಿವ ಕೆಲಸವುಳ್ಳ ಶಿವಬ್ರಾಹ್ಮಣರು. ಈತನು ಉಡುಪಿ ತಾಲ್ಲೂಕು ನಂದಳಿಕೆಯಲ್ಲಿ ೧೮೬೯ ರಲ್ಲಿ (ಶುಕ್ಲ ಸಂ|| ಸೋಮವಾರ ಸ್ವಾತಿ ನಕ್ಷತ್ರ) ಹುಟ್ಟಿದನು. ನಂದಳಿಕೆಯೇ ಪರಂಪರೆಯಾಗಿ ಇವನ ಕುಟುಂಬದವರ ವಾಸಸ್ಥಳ. ಇವನ ತಂದೆ ಪಾಠಾಳಿ ತಿಮ್ಮಯ್ಯ (ಜನನ ೧೮೩೯.) ತಾಯಿ ಮಹಾಲಕ್ಷ್ಮಿ (ಜನನ ೧೮೫೪.) ಚಿಕ್ಕಪ್ಪಂದಿರು ರಾಮಪ್ಪ, ಲಿಂಗಣ್ಣಯ್ಯ; ಸೋದರತ್ತೆ ಇಂದಮ್ಮ; ಸಹೋದರರು (ತಮ್ಮಂದಿರು) ಶಿವರಾಮಯ್ಯ, ರಾಮಕೃಷ್ಣ; ಹೆಂಡತಿ ಕಮಲಾಬಾಯಿ. ತಂದೆಗೆ ೩೦ ವರ್ಷ ತಾಯಿಗೆ ೧೫ ವರ್ಷ ವಯಸ್ಸಾಗಿದ್ದಾಗ ಈತನು ಜನ್ಮಿಸಿದನು. ಬಾಲ್ಯದಲ್ಲಿ ಈತನನ್ನು ತಂದೆ ತಾಯಿಗಳು ಮುದ್ದಣ್ಣ ಎಂದು ಕರೆಯುತ್ತಿದ್ದರು. ಚಿಕ್ಕ ವಯಸ್ಸಿನಲ್ಲಿ ಈತನು ನಂದಳಿಕೆಯಲ್ಲಿ ಮುರೂರು ಚರಡಪ್ಪಯ್ಯನವರು ಸ್ಥಾಪಿಸಿದ್ದ ಪಾಠಶಾಲೆಯಲ್ಲಿ ನಂದಳಿಕೆ ದೇವರಾಯ, ಸಿದ್ದುಸೆಟ್ಟಿ, ಬಾಬು, ಕೆ. ರಾಮಚಂದ್ರಯ್ಯ, ತೇಜಪ್ಪಸೆಟ್ಟಿ, ಕುಪ್ಪಣ್ಣಭಟ್ಟ ಮೊದಲಾದ ಸಹಪಾಠಿಗಳೊಡನೆ ವ್ಯಾಸಂಗಮಾಡುತ್ತಿದ್ದನು. ಅನಂತರ ಟ್ರೈನಿಂಗ್ ಸ್ಕೂಲಿಗೆ ಸೇರಿ ತನ್ನ ೧೮ನೆಯ ವಯಸ್ಸಿನಲ್ಲಿ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಆ ಸ್ಕೂಲ್ ಹೆಡ್ಮಾಸ್ಟರು ಕಸರತ್ತನ್ನು (Gymnastics) ಕಲಿಸುವುದಕ್ಕಾಗಿ ಮದರಾಸಿಗೆ ಕಳುಹಿಸಿಕೊಟ್ಟರು. ಕಸರತ್ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ೧೦ ರೂಪಾಯಿ ಸಂಬಳಕ್ಕೆ ಕಸರತ್ತನ್ನು ಕಲಿಸುವ ಉಪಾಧ್ಯಾಯನಾಗಿ ಉಡುಪಿಗೆ ಹೋದನು.

ಉಡುಪಿಯಲ್ಲಿದ್ದಾಗ ಅಲ್ಲಿಯೇ ಉಪಾಧ್ಯಾಯರಾಗಿದ್ದ ಅನೇಕ ಗ್ರಂಥಕರ್ತರಾದ ಮಳಲಿ ಸುಬ್ಬರಾಯರ ಪರಿಚಯವುಂಟಾಯಿತು. ಇವರ ಸಹವಾಸದಿಂದ ಈತನಿಗೆ ಕಾವ್ಯಪರಿಚಯವೂ ಕವಿತೆಯಲ್ಲಿ ರುಚಿಯೂ ಉಂಟಾದುವು. ಅವರಂತೆಯೇ ತಾನೂ ಅವರ ಸಹಾಯದಿಂದ ಗ್ರಂಥ ರಚನೆ ಮಾಡಬೇಕೆಂಬ ಕುತೂಹಲವು ಹುಟ್ಟಿತು. ಈತನು ಮೊತ್ತಮೊದಲು ೧೮೯೧ರಲ್ಲಿ ತನ್ನ ೨೩ನೆಯ ವಯಸ್ಸಿನಲ್ಲಿ "**ಕುಮಾರವಿಜಯ**"ವೆಂಬ ಯಕ್ಷಗಾನವನ್ನು ಬರೆದು ತನ್ನ ಗುರುವೆನಿಸಿದ ಮಳಲಿ ಸುಬ್ಬರಾಯರಿಗೆ ಅರ್ಪಿತಮಾಡಿದನು. ಈ ಗ್ರಂಥವು ಅಚ್ಚಾಗಿದೆ. ಬಳಿಕ "**ರತ್ನಾವತೀ ಕಲ್ಯಾಣ**" ವೆಂಬ ಮತ್ತೊಂದು ಯಕ್ಷಗಾನವನ್ನು ಬರೆದು ಅದನ್ನು ನಂದಳಿಕೆಯಲ್ಲಿ ಪಾಠಶಾಲೆಯನ್ನು ಸ್ಥಾಪಿಸಿದ ಮುರೂರು ಚರಡಪ್ಪಯ್ಯನವರಿಗೆ ಅರ್ಪಿಸಿದನು. ಇದೂ ಅಚ್ಚಾಗಿದೆ. ೧೮೯೧ರಲ್ಲಿ ಮಳಲಿ ಸುಬ್ಬರಾಯರಿಗೆ ಕುಂದಾಪುರಕ್ಕೆ ವರ್ಗವಾಯಿತು. ಆದರೂ ಇಬ್ಬರಿಗೂ ಕಾಗದಪತ್ರಗಳು ನಡೆಯುತ್ತಲೇ ಇದ್ದುವು. ೧೮೯೩ರಲ್ಲಿ ಲಕ್ಷ್ಮೀನಾರಣಯ್ಯನಿಗೂ ಕುಂದಾಪುರಕ್ಕೆ ೧೫ ರೂಪಾಯಿ ಸಂಬಳಕ್ಕೆ ವರ್ಗವಾದುದರಿಂದ ಗುರುಶಿಷ್ಯರು ಇಬ್ಬರೂ ಪುನಃ ಸೇರಲು ಅವಕಾಶವಾಯಿತು. ಈ ವರ್ಷ(೧೮೯೩)ದಲ್ಲಿಯೇ ೨೫ ವರ್ಷ ವಯಸ್ಸಿನಲ್ಲಿ ಲಕ್ಷ್ಮೀನಾರಣಪ್ಪನಿಗೆ ಮದುವೆಯಾಯಿತು. ಈತನ ಹೆಂಡತಿ ಕಮಲಾಬಾಯಿ ಎಂಬಾಕೆಯು ಮೈಸೂರು ಸೀಮೆಯವಳು—ಶಿವಮೊಗ್ಗ ಡಿಸ್ಟ್ರಿಕ್ಟ್ ಕೂಡ್ಲಕೆರೆ ಮಾಗಣೆ ಕಾಗೆಕೋಡಮಗ್ಗಿ ಗ್ರಾಮದ ನಾರಣಪ್ಪಯ್ಯನ ಮಗಳು.

ಈತನು ೧೮೯೩ರಲ್ಲಿ "**ಅದ್ಭುತರಾಮಾಯಣ**" ವನ್ನು ಬರೆಯಲಾರಂಭಿಸಿ ೧೮೯೪ರಲ್ಲಿ ಮುಗಿಸಿದಂತೆ ತಿಳಿಯುತ್ತದೆ. ಇವನ ಹಸ್ತಾಕ್ಷರದ ಈ ಗ್ರಂಥದ ಪ್ರತಿಯಿಂದ ಗ್ರಂಥವು ಏತತ್ಕೃತವೆಂದೂ ೧೮೯೪ರಲ್ಲಿ ಮುಗಿದುದೆಂದೂ ಸ್ಪಷ್ಟವಾಗುತ್ತದೆ. ಸುಮಾರು ಇದೇ




N Lakshminarayanaiah
High School.
Kundapur

# ಅದ್ಭುತರಾಮಾಯಣಮೆಂಬ

# ನುಡಿಗಬ್ಬಂ

ನಂದಳಿಕೆ ಲಕ್ಷ್ಮೀನಾರಾಯಣನಿಂ ರಚಿಸಲ್ಪಟ್ಟುದು.

೧೮೯೪.

N. Lakshminarayanaiah
Gymnastic Instructor
High School
Kundapur

ಮ|| ಎಚ್. ಚೆನ್ನಕೇಶವಯ್ಯಂಗಾರ್ಯರು ದಯೆಯಿಟ್ಟು ಕೊಟ್ಟಿದ್ದ

ಅದ್ಭುತರಾಮಾಯಣದ ಮೂಲಪ್ರತಿಯ ಮುಖಪತ್ರ.

ಸಮಯದಲ್ಲಿ "**ಶ್ರೀರಾಮಪಟ್ಟಾಭಿಷೇಕ**"ದ ಕೆಲವುಭಾಗಗಳನ್ನು ಬರೆದು ಅದ್ಭುತರಾಮಾಯಣವು ಪೂರೈಸಿದಮೇಲೆ ಆ ಗ್ರಂಥವನ್ನೂ ಸುಮಾರು ೧೮೯೫ ರಲ್ಲಿ ಮುಗಿಸಿದಂತೆ ತೋರುತ್ತದೆ. ಇದನ್ನು ತನ್ನ ತಾಯಿಯಾದ ಮಹಾಲಕ್ಷ್ಮಿಯ ಹೆಸರಿನಲ್ಲಿ ಬರೆದನು. ಅನಂತರ ಮಳಲಿ ಸುಬ್ಬರಾಯರಲ್ಲಿ ಸಂಸ್ಕೃತ **ರಾಮಾಶ್ವಮೇಧ**ವನ್ನು ಓದಿ ಅದನ್ನು ಕನ್ನಡ ಗದ್ಯರೂಪವಾಗಿ ಬರೆದು ೧೮೯೭ ನೆಯ ಅಕ್ಟೋಬರ್ ೯ ಕ್ಕೆ ಪೂರೈಸಿದಂತೆ ಆತನ ಸ್ವಹಸ್ತಾಕ್ಷರದ ಕರಡುಪ್ರತಿಯಿಂದ ತಿಳಿಯುತ್ತದೆ. ಇದನ್ನು ತನ್ನ ಬಾಲ್ಯದ ಮುದ್ದಣ್ಣನೆಂಬ ಹೆಸರಿನಲ್ಲಿ ಬರೆದನು. ಸುಮಾರು ಇದೇ ಕಾಲದಲ್ಲಿ "**ಕುಶವಿಜಯ**" ಎಂಬ ಗ್ರಂಥವನ್ನು ಬರೆಯಬೇಕೆಂಬ ಉದ್ದೇಶವುಂಟಾಯಿತು. ಆದರೆ ೧೮೯೭ ನೆಯ ಕೊನೆಯಭಾಗದಲ್ಲಿ ಕನ್ನಡಪಂಡಿತನಾಗಿ ಉಡುಪಿ ಮಿಷನ್‌ಸ್ಕೂಲಿಗೆ ಹೋದುದರಿಂದ ಮಳಲಿಸುಬ್ಬರಾಯರಲ್ಲಿ ಮೂಲಸಂಸ್ಕೃತಗ್ರಂಥವನ್ನು ಓದಲು ಅವಕಾಶವಿಲ್ಲದೆ ಹೋಗಿ ಆ ಉದ್ದೇಶವು ನೆರವೇರಲಿಲ್ಲ. ಮೇಲೆ ಹೇಳಿದ ಗ್ರಂಥಗಳಲ್ಲದೆ ಇನ್ನೂ ಕೆಲವು ಗ್ರಂಥಗಳನ್ನು ಈತನು ಬರೆದಂತೆ ತಿಳಿಯುತ್ತದೆ. "**ಭಗವದ್ಗೀತೆ**"ಯನ್ನು ಭಾಮಿನೀಷಟ್ಪದಿಯಲ್ಲಿಯೂ "**ಕರ್ಣಾಟಕ ರಾಮಾಯಣ**"ವನ್ನು ವಾರ್ಧಕಷಟ್ಪದಿಯಲ್ಲಿಯೂ ಈತನು ಬರೆದನೆಂದು ಈತನ ಕೈಬರಹದ ಪ್ರತಿಯನ್ನು ನೋಡಿದ್ದ ಉಡುಪಿಯ ವಕೀಲರಾದ ಅಂಗಾರಸೆಟ್ಟರು ಹೇಳುತ್ತಿದ್ದರು. ಆದರೆ ಈ ಪ್ರತಿ ದೊರೆತಿಲ್ಲ. "**ಕಾಮಶಾಸ್ತ್ರ**"ವೆಂಬ ಮತ್ತೊಂದು ಗ್ರಂಥವನ್ನು ಈತನು ಬರೆದುದಾಗಿ ತಿಳಿಯುತ್ತದೆ. ಇದರ ಕೈಬರಹದ ಪ್ರತಿ ಕನರ ಹೈಸ್ಕೂಲ್ ಹೆಡ್ಮಾಸ್ಟರ್ ಪದ್ಮನಾಭಬಾಳಿಗರ ವಶದಲ್ಲಿದೆ ಎಂದು ಲಕ್ಷ್ಮೀನಾರಣಯ್ಯನ ತಮ್ಮ ಶಿವರಾಮಯ್ಯನು ಹೇಳುತ್ತಿದ್ದನು. ಈ ಶಿವರಾಮಯ್ಯನು ಹೆಬ್ರಿ ಬ್ರಾಂಚ್ ಪೋಸ್ಟ್‌ಮಾಸ್ಟರಾಗಿದ್ದನು. ಲಕ್ಷ್ಮೀನಾರಣಯ್ಯನಿಗೆ ಮೂವತ್ತು ವರ್ಷದ ವಯಸ್ಸಿನಲ್ಲಿ (೧೮೯೮ ರಲ್ಲಿ) ಒಬ್ಬ ಮಗನು ಹುಟ್ಟಿ

ದನು. ಈ ಮಗನ ಹೆಸರು ರಾಧಾಕೃಷ್ಣ. ಮತ್ತೊಂದು ಹೆಸರು ಬಾಬು ರಾವ್. ಲಕ್ಷ್ಮೀನಾರಣಯ್ಯನು ೧೯೧೧ನೆಯ ಫೆಬ್ರವರಿ ೧೫ (ಶಾರ್ವರಿ ಸಂ|| ದ ಮಾಘಬಹುಳ ಏಕಾದಶಿ ಶುಕ್ರವಾರ) ಉಡುಪಿಯಲ್ಲಿ ಅಕಾಲ ಮೃತ್ಯುವಿಗೆ ತುತ್ತಾಗಿ ೩೩ನೆಯ ವಯಸ್ಸಿನಲ್ಲಿಯೇ ಕೈಲಾಸವಾಸಿ ಯಾದನು.

ಈತನು "ಶ್ರೀರಾಮಪಟ್ಟಾಭಿಷೇಕ", "ರಾಮಾಶ್ವಮೇಧ", "ಅದ್ಭುತರಾಮಾಯಣ" ಎಂಬ ತನ್ನ ಗ್ರಂಥಗಳನ್ನು ತನ್ನದು ಎಂದರೆ ಅಚ್ಚುಹಾಕಲಾರರು ಎಂಬ ಶಂಕೆಯಿಂದ ಪೂರ್ವಗ್ರಂಥಗಳು ಎಂದು ಹೇಳಿ ಕಾವ್ಯಮಂಜರೀ ಸಂಪಾದಕರಿಗೆ ಕಳುಹಿಸಿ ಅವು ಮುದ್ರಿತವಾದ ಸಂಗತಿ ಪ್ರಾಯಿಕವಾಗಿ ಎಲ್ಲರಿಗೂ ತಿಳಿದೇ ಇರಬಹುದು. ಅನೇಕ ಜನ ರಿಗೆ ಇವು ಪೂರ್ವಗ್ರಂಥಗಳೆಂಬ ಭ್ರಾಂತಿ ಈಗಲೂ ಇದೆ. (ಶ್ರೀರಾಮ ಪಟ್ಟಾಭಿಷೇಕದ ಹೊಸಮುದ್ರಣದ ಪೀಠಿಕೆಯನ್ನು ನೋಡಿ.)

ಹಿಂದೆ ತಿಳಿಸಿದಂತೆ ಇವನ ಸ್ವಹಸ್ತಾಕ್ಷರದ ಅದ್ಭುತರಾಮಾಯಣ ಪ್ರತಿಯಲ್ಲಿ ಗ್ರಂಥವು ತನ್ನಿಂದ ರಚಿತವಾಯಿತೆಂದು ಕಂಠೋಕ್ತವಾಗಿ ಹೇಳಿರುವುದಲ್ಲದೆ ಅಲ್ಲಲ್ಲಿ ಸ್ವಹಸ್ತಾಕ್ಷರದಲ್ಲಿ ತಿದ್ದಿಯೂ ಇದ್ದಾನೆ. 'ಜನ್ನ' ಎಂದು ಬರೆದಿದ್ದುದನ್ನು 'ಗರವಟ' ಎಂದೂ 'ಭಕ್ತಿ' ಎಂಬು ದನ್ನು 'ಶ್ರದ್ಧೆ' ಎಂದೂ ಹೀಗೆಯೇ ಹಲವುಕಡೆ ತಿದ್ದಿದ್ದಾನೆ. ರಾಮಾಶ್ವ ಮೇಧದ ಕೈಬರಹದ ಪ್ರತಿಯಲ್ಲಿ ೧೨ನೆಯ ಆಶ್ವಾಸದ ಕೊನೆಯ ಭಾಗ ದಲ್ಲಿ "ಶತ್ರುಘ್ನನಂ ಕಾಣ್ಬೊಂದು ಕಾತರದಿಂ" ಎಂದು ಬರೆದಿದ್ದು ದನ್ನು ಪುನರ್ವಿಮರ್ಶೆ ಮಾಡಿ "ಇಲ್ಲಿ **ತವಕ** ಎಂದು ಆಗಬೇಡವೇ? **ಕಾತರ**ವೆಂಬುದು ಕಾಮರಸದಲ್ಲಿ ಮಾತ್ರ ಪ್ರಯೋಗವಲ್ಲವೆ?" ಎಂಬ ಟಿಪ್ಪಣಿಯನ್ನು ಸ್ವಹಸ್ತದಲ್ಲಿ ಬರೆದು ತಿದ್ದಿದ್ದಾನೆ. ಶ್ರೀರಾಮಪಟ್ಟಾಭಿಷೇ ಕದಲ್ಲಿ ಸೂಕ್ಷ್ಮವಾಗಿ ತನ್ನ ಕರ್ತೃತ್ವವನ್ನು ಸೂಚಿಸಿರುವಂತೆ ತಿಳಿಯ ಬಹುದಾಗಿದೆ:—ಪೀಠಿಕಾಸಂಧಿ ೮, "ಕನ್ನಡಿತಿಯೊರೆದ ನುಡಿಯೆಂದಿದಂ

ಭಾವಿಸದೆ | ಕನ್ನಡಿಗನೊರೆದ ನುಡಿಯೆಂದು ಸಂಭಾವಿಪುದು.....'' ಅಲ್ಲಲ್ಲಿ ''ಲಕ್ಷ್ಮೀಮನೋಹರ'' ಎಂಬ ಅಂಕಿತವು ಉಪಯೋಗಿಸಿದೆ. ಇದು ''ಲಕ್ಷ್ಮೀನಾರಾಯಣ'' ಎಂದು ಸ್ಪಷ್ಟವಾಗಿ ಹೇಳದೆ ಪ್ರಕಾರಾಂತರದಿಂದ ಸ್ವನಾಮನಿರ್ದೇಶ ಎಂದು ತೋರುತ್ತದೆ.*

---

* ಕೆಲವು ವರ್ಷಗಳ ಹಿಂದೆ ಮ|| ರಾ|| ಕೆ. ಸುಂದರರಾಯರು ಗ್ರಂಥಕರ್ತರ ತಮ್ಮಂದಿರಾದ ಮ|| ರಾ|| ಶಿವರಾಮಯ್ಯನವರಿಂದ ಸಂಗ್ರಹಿಸಿ ಬರೆದ ಟಿಪ್ಪಣಿಗಳೇ ಈ ಲೇಖನಕ್ಕೆ ಮುಖ್ಯ ಆಧಾರವಾಗಿವೆ. ಗ್ರಂಥಕರ್ತರ ಟಿಪ್ಪಣಿಗಳನ್ನೂ ಅದ್ಭುತರಾಮಾಯಣದ ಕೈಬರಹದ ಪ್ರತಿಯನ್ನೂ ತೋರಿಸಿದುದಕ್ಕಾಗಿ ಮ|| ರಾ|| ಚೆನ್ನಕೇಶವಯ್ಯಂಗಾರ್, ಬಿ.ಎ. ಇವರಿಗೆ ಕೃತಜ್ಞನಾಗಿದ್ದೇನೆ.

# ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು.

(ಮ|| ಪಿ. ಮಂಗೇಶರಾವ್, ಬಿ.ಎ., ಎಲ್.ಟಿ. ಯವರಿಂದ.)

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೮೯೨ನೆಯ ಇಸವಿಯ ತನಕ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರ ಹೆಸರು ಮೇಲಕ್ಕೆ ಬಂದಿರಲಿಲ್ಲ. ಅಂದಿನವರ ಅಭಿಪ್ರಾಯದಲ್ಲಿ ಕನ್ನಡ ವಾಙ್ಮಯವು ಸೋಮೇಶ್ವರಶತಕ, ಕನ್ನಡಭಾರತ, ತೊರವೆಯ ರಾಮಾಯಣ, ಜೈಮಿನಿ ಭಾರತ, ಚನ್ನಬಸವ ಪುರಾಣ ಎಂಬೀ ಪಂಚಕಾವ್ಯಗಳಲ್ಲಿ ಕೊನೆಗಂಡು ಸಾಮಾನ್ಯರ ಕೈಗೆ ಸಿಲುಕದ "ಗೂಢಾದ್ಗೂಢರಹಸ್ಯ" ಎಂಬದಾಗಿ ಭಾವಿಸಲ್ಪಟ್ಟಿತ್ತು. ಬಿ. ಎ. ವರೆಗೆ ಕನ್ನಡ ಓದಿದ ಕೆಲವರ ಹೊರತು ಉಳಿದವರು ಪಂಪ ರಾಮಾಯಣ ಎಂದರೆ, ಪಂಪಾಕ್ಷೇತ್ರದ ರಾಮಕಥೆಯಾಗಿರಬೇಕೆಂದು ಊಹಿಸುತ್ತಿದ್ದರು. ನಮ್ಮ ಜಿಲ್ಲೆಯೊಳಗಣ ಕನ್ನಡ ಪಾಂಡಿತ್ಯವು ಗೆರೆ ಸೊಪ್ಪೆ ಶಾಂತಯ್ಯ, ಪಾರ್ತಿ ಸುಬ್ಬಯ್ಯ ಎಂಬವರ ಯಕ್ಷಗಾನ ಪ್ರಸಂಗ ಗಳ ಅರ್ಥಾನುವಾದಗಳಲ್ಲಿಯೂ ವಿಸ್ತರ ವಿವರಣೆಗಳಲ್ಲಿಯೂ ವಿಜೃಂಭಿ ಸುತ್ತಿತ್ತು. ಕವಿತಾಪ್ರೌಢಿಮೆಯು "ಮಧುರರಸಝುರಿಯ" ತರಂಗ ದಲ್ಲಿ ತೇಲಾಡದೆ ಪ್ರಾಸವೈಚಿತ್ರ್ಯದ ರಾಟೆಯಲ್ಲಿ ತಲೆತಿರುಗುವಂತೆ ಉರುಳುತ್ತಿತ್ತು. ಮೈಸೂರಿನ ಬಿ. ವೆಂಕಟಾಚಾರ್ಯರ ಒಂದೆರಡು ಕಾದಂ ಬರಿಗಳು ಉಡುಪಿಯಲ್ಲಿ ನುಸುಳಿಕೊಂಡಿದ್ದರೂ, ಅವು "ಅತಿ ಭಕ್ತಿಯಿಂ ಬಿಡದೋದಿ ಕೇಳ್ವ ಸಜ್ಜನರಿಗಿಷ್ಟಾರ್ಥಮಂ ಕುಡುವ ಪುಣ್ಯಕಥೆಗಳಂತೆ" ಜನಪ್ರೀತವಾಗಿರಲಿಲ್ಲ. ಕರ್ನಾಟಕ ರಾಗರಾಗಿಣಿಗಳ "ಅವಸ್ಥೆಯಂ ಪೇಳ್ವುದೇಂ?" "ಭಿನ್ನಸಂಧಿಯಿಂ ಪಾಡಲೆಮ್ಮತು ಅಂಗಮಿಂತು ಭಿನ್ನ ಭಿನ್ನಮಾದುದು." ಹೀಗಾದುದರಿಂದ ನಮ್ಮ ಜಿಲ್ಲೆಯೊಳಗಿನ ನಾಟ್ಯ ರಂಗವು ಬಸವಪ್ಪಶಾಸ್ತ್ರಿಕೃತ ಕನ್ನಡ ಶಾಕುಂತಳನಾಟಕಕ್ಕೆ ಎಡೆ ಗೊಡದೆ, ಅಣ್ಣಾಜಿ ಕಿರ್ಲೋಸ್ಕರರ ಮರಾಟಿ ನಾಟಕಗಳಿಂದ ಆಕ್ರಮಿಸ

ಲ್ಪಟ್ಟಿತ್ತು. ಕನ್ನಡದ ಮೇಲಿನ ಮಮತೆಯಿಂದ ಮರಾಟಿ ನಾಟಕಗಳನ್ನು ಪರಿವರ್ತಿಸಿ ಕರ್ನಾಟಕಭಾಷಾಸೇವೆಯನ್ನು ಕೈಲಾದಷ್ಟು ಮಾಡುತ್ತಿದ್ದ ಶ್ರೀಯುತ ಕುಬೇರ ಪಾಂಡುರಂಗರಾಯರ ಉದ್ಯಮದ ಬೆಳಕೊಂದು ಶ್ರೀಯುತ ಮಳಲಿ ಸುಬ್ಬರಾಯರ ಸಂಗೀತ ಕೃಷ್ಣಜನ್ಮಾದಿ ಮರಾಟಿ ನಾಟಕಗಳ ಸುಂಟುರುಗಾಳಿಯಲ್ಲಿ ಫುರುಫುರಿಸುತ್ತಿತ್ತು. ಕನ್ನಡ ವಾರ್ತಾ ಪತ್ರಗಳಲ್ಲಿ "ಸುದರ್ಶನ" ವೆಂಬ ಹೆಸರುಳ್ಳ ಉಡುಪಿಯ ಒಂದು ಮಾಸ ಪತ್ರಿಕೆಯು ಮೂರು ತಿಂಗಳುಗಳಿಗೆ ಒಂದು ಸಲ ಅರೆಜೀವದಿಂದ ಹೊರಡುತ್ತಿತ್ತು.

ನಮ್ಮ ಜಿಲ್ಲೆಯಲ್ಲಿ ಕನ್ನಡದ ಪರಿಸ್ಥಿತಿಯು ಹೀಗಿರಲು, ೧೮೯೩ ನೆಯ ಇಸವಿಯಲ್ಲಿ ನಾನು ಬಂಟವಾಳದಲ್ಲಿದ್ದಾಗ ನನ್ನ ಸ್ನೇಹಿತನ ಕೈಯ ಲ್ಲಿದ್ದ ಒಂದು ಪುಸ್ತಕವು ನನ್ನ ಕಣ್ಣಿಗೆ ಬಿತ್ತು. ನಾನು ಅದನ್ನು ಕೈಯಲ್ಲಿ ಹಿಡಿದು ನೋಡಿದೆನು. ಅದು ಅಚ್ಚಾದದ್ದು—ಸುದರ್ಶನ ಮಾಸಪತ್ರಿ ಕೆಯು ಹೊರಡುವ ಪ್ರಭಾಕರ ಮುದ್ರಾಯಂತ್ರದಲ್ಲಿ. ಅದರ ಮುದ್ರಣ ಕಾರ್ಯವು ಆ ಕಾಲಕ್ಕೆ ಪರಿಷ್ಕಾರವಾಗಿಯೇ ಇತ್ತು. ಪುಸ್ತಕದ ಹೆಸರು- ಕುಮಾರವಿಜಯ ಪ್ರಸಂಗ; ರಚಿತವಾದದ್ದು—ನಂದಳಿಕೆ ಲಕ್ಷ್ಮೀನಾರಾ ಯಣಪ್ಪನವರಿಂದ. ನಾನು ಪುಸ್ತಕವನ್ನು ತೆರೆದು ನೋಡಲು,

" ಅಳಿಯಲರಂ ಗಿಳಿ ಪಣ್ಣಂ
" ತಳಿರಂ ಪಿಕನೊಲ್ವ ತೆರದಿ ಕುಜದೊಳ್ ಕೃತಿಯೊಳ್ |
" ವಿಳಸಿತ......"

ಎಂಬೀಪದ್ಯವಿತ್ತು. ಪುಸ್ತಕದ ಪ್ರಥಮ ಪುಟದಲ್ಲಿ ಒಂದು ಕಂದ ಪದ್ಯ ವನ್ನು ಹೀಗೆ ಪ್ರತ್ಯೇಕವಾಗಿ ಎತ್ತಿಟ್ಟದ್ದು ನನಗೆ ನೂತನವಾಗಿ ತೋರಿತು. ಅದರಲ್ಲಿಯೂ ಆ ವರ್ಷದ ನನ್ನ ಪಠ್ಯಪುಸ್ತಕದಲ್ಲಿದ್ದ ಆ ಕಂದಪದ್ಯವೇ ಈ ಮುಖಪತ್ರದಲ್ಲಿ ಎದ್ದುನಿಂತದ್ದರಿಂದ, ನಾನು ಪುಸ್ತಕದ ಮುಖಪತ್ರ ವನ್ನು ಮತ್ತೂ ಮತ್ತೂ ಓದಿದೆನು. ಯಾವಾಗ ಷಡಕ್ಷರಿ ಮಹಾಕವಿಯ

ಶಬರಶಂಕರವಿಳಾಸದೊಳಗಿನ ಆ ಕಂದಪದ್ಯದ ಜತೆಯಲ್ಲಿ ನನ್ನ ನಾಲಗೆಯಿಂದ ಕುಮಾರವಿಜಯ ಪ್ರಸಂಗಕಾರರಾದ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರ ದೊಡ್ಡ ಹೆಸರು ಹೊರಹೊಮ್ಮಿತೋ ಆಗಲೇ ನಮ್ಮ ಜಿಲ್ಲೆಯಲ್ಲಿ ಇರತಕ್ಕ ಕನ್ನಡ ಕವಿಗಳ ವಿಷಯವಾಗಿ ನನ್ನಲ್ಲಿದ್ದ ಕಣ್ಣಿನ ಮಸುಕು ಕಳಚಿಹೋಯಿತು; ಕರ್ನಾಟಕವಿಚೂತವನವನ್ನು ದಾಟಿ ಷಡಕ್ಷರಿಯ ಗಿರಿದುರ್ಗವನ್ನು ಮುಟ್ಟಿದ ಪಂಡಿತಮಹನೀಯರು ನಮ್ಮ ಜಿಲ್ಲೆಯಲ್ಲಿ ಇದ್ದಾರೆಂಬ ಬೆಳಕು ತೋರಿತು; ಆದರೊಂದಿಗೆ ಕುಮಾರವಿಜಯವನ್ನು ಓದಿ ಮುಗಿಸಬೇಕೆಂಬ ಲವಲವಿಕೆಯು ಒತ್ತೊತ್ತಿ ಬಂದಿತು. ನಾನು ಆ ಪುಸ್ತಕವನ್ನು ಓದಿ ಓದಿ ಮರುಳಾದೆನು ; ಅದರೊಳಗಿನ ಹಾಡುಗಳನ್ನು ಹಾಡಿ ಹಾಡಿ ಉರುಹಾಕಿದೆನು ; ಅದರೊಳಗಿನ ನಿರರ್ಗಳವಾದ ಯಮಕಗಳನ್ನೂ ಪ್ರಾಸಗಳನ್ನೂ ಹೆಕ್ಕಿಹೆಕ್ಕಿ ತಲೆಯಲ್ಲಿ ತೂರಿಕೊಂಡೆನು ; ಕಳವೆಂದು ತಿಳಿಯದೆ ಪರಪದಾರ್ಥದ ಬಲದಿಂದ ತುಂಡುಪದಗಳನ್ನು ಕಟ್ಟಿ ಅವನ್ನು ನಾನೇ ಹಾಡಿ, ಅವಕ್ಕೆ ನಾನೇ ಹಿಗ್ಗಿಕೊಂಡೆನು. ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು ಕನ್ನಡದೇವಿಯ ದೇವಸ್ಥಾನದ ಹೊರಸುತ್ತಿನಲ್ಲಿಯೇ ನಿಂತುಕೊಂಡು ಯಕ್ಷಗಾನಸೇವೆಯನ್ನು ಮಾಡುವ ಭಾಗವತರಂತೆ ಇರದೆ, ಆ ಸರಸ್ವತಿಯ ಸಾನ್ನಿಧ್ಯವನ್ನು ಸದ್ಯದಲ್ಲಿಯೇ ಸೇರತಕ್ಕ ಶುದ್ಧೋಪಾಸಕರೆಂದು ನಾನು ಭಾವಿಸುತ್ತ ಬಂದೆನು. ಕುಮಾರವಿಜಯ ಬಿಟ್ಟರೆ ಪ್ರಸಂಗವಿಲ್ಲ, ನಂದಳಿಕೆಯವರನ್ನು ಬಿಟ್ಟರೆ ಕವಿಯಿಲ್ಲ—ಹೀಗೆ ಬಹುಕಾಲದವರೆಗೆ ನನ್ನ ಅಭಿಪ್ರಾಯವಾಯಿತು. ಸಾಲದುದಕ್ಕೆ ಈ ಅಭಿಪ್ರಾಯವನ್ನೇ ನಾನು ೧೯೦೫ರಲ್ಲಿ ಮೆ|| ಸಿ. ಡಿ. ಜೆ. ಪಿಂತೋ ಬಿ. ಎ., ಬಿ. ಎಲ್. ಎಂಬವರ ಅಧ್ಯಕ್ಷತೆಯಲ್ಲಿ ಜರಗಿದ ಒಂದು ಸಭೆಯಲ್ಲಿ ಓದಿದ ಉಪನ್ಯಾಸದಲ್ಲಿ ತಂದು ಹಾಕಿ, ನಂದಳಿಕೆಯವರ ಬೆಳೆಯಸಿರಿಯನ್ನು ಮೊಳೆಯಲ್ಲಿಯೇ ತೋರಿಸತಕ್ಕ ಕುಮಾರವಿಜಯ ಗ್ರಂಥವನ್ನು ಪ್ರಶಂಸಿಸಿದೆನು.

“ಕುಮಾರವಿಜಯ” ವು ಯಕ್ಷಗಾನ ಪ್ರಸಂಗವಾಗಿದ್ದರೂ ನನ್ನ ದೃಷ್ಟಿಯಲ್ಲಿ ಅದಕ್ಕೆ ಇರುವಷ್ಟು ಮಹತ್ವವು ನಂದಳಿಕೆಯವರ ಇತರ ಗ್ರಂಥಗಳಿಗೆ ಇರುವುದಿಲ್ಲ. ಅದ್ಭುತ ರಾಮಾಯಣ, ಶ್ರೀರಾಮಪಟ್ಟಾಭಿಷೇಕ, ರಾಮಾಶ್ವಮೇಧಗಳು ಏತತ್ಕವಿಕೃತವೊ ಅಲ್ಲವೊ ಎಂಬುದು ವಾದಗ್ರಸ್ತ ಸಂಗತಿಯಾಗಿದೆ. ಆದರೆ ಕುಮಾರವಿಜಯದ ಮೇಲೆ ಈ ಅನುಮಾನದ ನೆರಳೂ ಇಲ್ಲ. ಕವಿಯು ತನ್ನ ಹೆಸರನ್ನು ಮರೆಸಿಕೊಂಡು ರಚಿಸಿದ ಆ ಗ್ರಂಥಗಳು “ಶಿವನ ಜಟಾಜೂಟದಿಂ ಕೆಳಗೆ ಜಗುಳ್ದು” ಗುಪ್ತಗಾಮಿಯಾಗಿ ಹರಿಯುವ “ಗಂಗಾಸಲಿಲಬಿಂದುಗಳಂತೆ ಗುಪ್ತಚಾರಿತ್ರಗಂಧಮಂ ತಾಳ್ದಿದುವು.” ಈ ಗುಪ್ತಚಾರಿತ್ರ ಗ್ರಂಥವನ್ನು ಹೊರತಂದು ಗಮಗಮಿಸುವಂತೆ ಚೆಲ್ಲುವುದಕ್ಕೆ ಕುಮಾರವಿಜಯವೇ ಅವರ ಗ್ರಂಥಗಳಲ್ಲಿ ಒತ್ತಾಸೆಮಾಡುತ್ತದೆ. ಆ ಗ್ರಂಥಾದಿಯಲ್ಲಿಯ ಶ್ರೀಕೃಷ್ಣಪರವಾದ ನಾಂದೀಶ್ಲೋಕವೂ ಅದರ ಅಂತ್ಯದಲ್ಲಿಯ ಉಡುಪಿ ಚಂದ್ರಮೌಳೀಶ್ವರ ಮಂಗಲಸ್ತೋತ್ರವೂ ಲಕ್ಷ್ಮೀನಾರಾಯಣಪ್ಪನವರು ಉಡುಪಿಯ ಸ್ಮಾರ್ತಕವಿ ಎಂಬುದಕ್ಕೆ ಸಾಕ್ಷಿಗಳಾಗಿವೆ. ಅವರು ತಮ್ಮ ಹುಟ್ಟೂರಾದ ನಂದಳಿಕೆಯನ್ನು ಬಿಟ್ಟು ಯಾವಾಗ ಉಡುಪಿಗೆ ಒಕ್ಕಲು ಹೋದರೆಂಬುದು ಅಲ್ಲಿಯ ಜನರಿಗೆ ಗೊತ್ತಿಲ್ಲ. ದಕ್ಷಿಣಕನ್ನಡದ ಇತರ ಗ್ರಾಮಗಳಂತೆ ನಂದಳಿಕೆಯು ಬಹು ಸುಂದರವಾದ ಹಳ್ಳಿಯಾಗಿದೆ; ಅಲ್ಲಲ್ಲಿ ಸಣ್ಣಪುಟ್ಟ ಏರುತಗ್ಗುಗಳು ಇವುಗಳ ನಡುವೆ ಹೊಲ ಗದ್ದೆಗಳು ಅವುಗಳ ಪಕ್ಕದಲ್ಲಿ ಮಳೆಗಾಲದಲ್ಲಿ ನೀರುತುಂಬಿ ಹರಿಯುವ ತೋಡುಗಳು, ಗದ್ದೆಗಳ ತೆವರಿಗಳಲ್ಲಿ ತಲೆ ತೂಗುವ ತೆಂಗುಗಳು, ತೆಂಗಿನಗರಿಯ ಮಾಡುಗಳ ಹುಲ್ಲುಚಾವಣಿಯಿಂದ ಹೊಳೆಯುವ ಗುಡಿಕಟ್ಟುಗಳು—ಇವುಗಳಿಂದ ನಂದಳಿಕೆಯು ಅತ್ಯಂತ ರಮಣೀಯವಾಗಿದೆ. ೧೯೧೫ ನೆಯ ಇಸವಿಯಲ್ಲಿ ನಾನು ನಂದಳಿಕೆಗೆ ಹೋಗಿದ್ದಾಗ ಅಲ್ಲಿಯ ಗ್ರಾಮ ದೇವಸ್ಥಾನದ ಪಡುಗಡೆಯಲ್ಲಿ ಈಗ ಪಾಳುಬಿದ್ದಿರುವ ಒಂದು ಮನೆಯಲ್ಲಿ ಅವರು ಜನಿಸಿದರೆಂತಲೂ ರಾಮ

ಹೆಗ್ಗಡೆಯೆಂಬವರು ನಡೆಸುತ್ತಿದ್ದ ಹಳ್ಳಿಯ ಶಾಲೆಯಲ್ಲಿ ಅವರಿಗೆ ಓನಾಮ ವಾಯಿತೆಂತಲೂ ನನಗೆ ತಿಳಿಯಬಂದಿತು. ನಂದಳಿಕೆಯವರು ಯಾವ ಜಾತಿಯವರೆಂದು ನಾನು ಹೇಳುವ ಹಾಗಿಲ್ಲ. ಋಷಿಯ ಕುಲವನ್ನೂ ನದಿಯ ಮೂಲವನ್ನೂ ಹುಡುಕುವುದು ಸರಿಯಲ್ಲವೆನ್ನುತ್ತಾರೆ; ಋಷಿಯ ಕುಲದಂತೆ ಕವಿಯ ಜಾತಿಯನ್ನು—ಇಂದಿನ ಬ್ರಾಹ್ಮಣ ಬ್ರಾಹ್ಮಣೇತರ ಎಂಬ ತರ್ಕತಿಕ್ಕಾಟಗಳ ಕಾಲದಲ್ಲಿ—ಚರ್ಚಾಸ್ಪದವಾಗಿ ಮಾಡಲು ನನ್ನ ಮನಸ್ಸು ಒಪ್ಪುವುದಿಲ್ಲ. ನಂದಳಿಕೆಯ ಲಕ್ಷ್ಮೀನಾರಾಯಣಪ್ಪನವರು ದಕ್ಷಿಣ ಕನ್ನಡ ಜಿಲ್ಲೆಯವರು; ಮೂಗುತಿಯ ಮುತ್ತು ಎಲ್ಲಿ ಹುಟ್ಟಿದ ರೇನು? ಎಲ್ಲಿ ಬೆಳೆದರೇನು? ಅದು ಕನ್ನಡದ ಮೈಕಾಂತಿಯನ್ನೇ ಏರಿಸಿ ಬಿಟ್ಟಿತೆಂದು ಹೇಳಿದರೆ ಸಾಲದೇ?

ನಾರಾಯಣಪ್ಪನವರು ನಂದಳಿಕೆಯ ಹಳ್ಳಿಯ ಶಾಲೆಯಲ್ಲಿ ಐದಾರು ವರ್ಷಗಳವರೆಗೆ ಓದಿರಬಹುದಾದರೂ, ಅವರ ಪಾಂಡಿತ್ಯಕ್ಕೆ ಆ ವಿದ್ಯಾ ಭ್ಯಾಸವು ಕಾರಣವಾಗಿರಲಿಕ್ಕಿಲ್ಲ. ಹಳ್ಳಿಯ ಶಾಲೆಯು ಅವರಿಗೆ ಅಕ್ಷರಾ ಭ್ಯಾಸವನ್ನು ಮಾಡಿಸಿರಬಹುದು. ಆದರೆ ಅಂಗೈ ಅಗಲದಷ್ಟು ಇರುವ ಕೊಟಡಿಯೊಳಗೆ ಮಕ್ಕಳ ಚಟುವಟಿಕೆಯನ್ನು ಸೆರೆಹಾಕಿ, ಹೆಸರು ಹೇಳಿ ದರೆ ಓಕರಿಕೆಯಾಗುವ ತುಂಡು ಪಾಠಗಳ ಗುಟುಕುಗಳನ್ನು ಅವರ ಬಾಯಿಗೆ ಕೊಟ್ಟು, ಅವರನ್ನು ಹಾರಬಿಡದೆ ಪರಾವಲಂಬನದಿಂದ ಜೀವಿ ಸುವ ಹಾಗೆ ಮಾಡುವಂಥ ಹಳ್ಳಿಶಾಲೆಗಳ ಆ ಏರ್ಪಾಡು ಜನ್ಮದ ಧ್ಯೇಯ ವನ್ನು ಬೇರೊಂದಾಗಿ ಮಾಡಿ, ಜ್ಞಾನಾರ್ಜನೆಯನ್ನು ಸ್ಪರ್ಧೆಯಿಂದ ಕಲಂಕಿಸಿ, ನಮ್ಮ ಮನೋಭಾವನೆಗಳನ್ನು ಅಸ್ವಾಭಾವಿಕವಾದ ಕಾಲುವೆ ಗಳಲ್ಲಿ ಹರಿಯುವಂತೆ ಮಾಡಿ, ಜನಜೀವನದಿಂದ ಫಲವತ್ತಾಗತಕ್ಕ ವಾಙ್ಮಯಪ್ರದೇಶವನ್ನು ಪಾಳುಬೀಳುವಂತೆ ಮಾಡುವುದರಿಂದ, ಈ ಹಳ್ಳಿಯ ಶಾಲೆಯ ವಿದ್ಯಾಭ್ಯಾಸದಿಂದ ನಾರಾಯಣಪ್ಪನವರು ದೊಡ್ಡ ಕವಿಯಾದರೆಂದು ಯಾರಾದರೂ ಹೇಳಿದರೆ ನಾನು ಒಪ್ಪಲಾರೆನು. ಅವರ

ಶಿಕ್ಷಣವು ಈಗಲೂ ನಮ್ಮ ಹಳ್ಳಿಗಳಲ್ಲಿ ವಾಡಿಕೆಯಾಗಿರುವ ಹಳೆಯ 'ಕಿಂಡರ್‌ಗಾರ್ಟನ್' ಕ್ರಮವನ್ನು ಅನುಸರಿಸಿತ್ತು. ಈ ಕ್ರಮದಲ್ಲಿ ಇಡೀ ಗ್ರಾಮವೇ ಪಾಠಶಾಲೆ, ಹಳ್ಳಿಯವರೆಲ್ಲರೂ ವಿದ್ಯಾರ್ಥಿಗಳು, ಭಗವಂತನ ಸಾನ್ನಿಧ್ಯಪ್ರಾಪ್ತಿಯೇ ಧ್ಯೇಯವು. ಆ ಧ್ಯೇಯಕ್ಕೆ ಹೊಂದಿಕೊಂಡು ದೇವಸ್ಥಾನದಲ್ಲಿ ಪುರಾಣಶ್ರವಣ; ಆ ಪುರಾಣ ಪುರುಷರ ಪರವಾಗಿ ಕಟ್ಟಿದ್ದ ಯಕ್ಷಗಾನಪ್ರಸಂಗ; ಪ್ರಸಂಗದ ಹಾಡುಗಳನ್ನು ಅಭಿನಯಿಸಿ ತೋರಿಸುವ ದಶಾವತಾರದ ಬೈಲಾಟಗಳು; ಶಿವರಾತ್ರಿ ಕೃಷ್ಣಜಯಂತಿ ಇತ್ಯಾದಿಯಾದ ಹಬ್ಬ ಹುಣ್ಣಿಮೆಗಳ ಸೇವದಿಂದ ಪ್ರಾಚೀನ ವೀರರ ಪೂಜೆ; ಪೂಜಿಸಲಿಕ್ಕೆ ಬೇಕಾದ ಗೌರಿ, ಗಣೇಶ, ಅನಂತ, ದುರ್ಗಾದಿ ಬಿಂಬಗಳ ನಿರ್ಮಾಣ; ದೀಪಾವಳಿ ರಥೋತ್ಸವಾದಿ ಕಾಲದಲ್ಲಿ ಕಲಶ ಕುರುಜುಗಳ ಮತ್ತು ಮಕುಟ ಮಂಟಪಗಳ ಶೃಂಗಾರರಚನೆ; ಹಳ್ಳಿಯ ಆಯನ ಆರಾಟಗಳ ಮೂಲಕ ವ್ಯಾಯಾಮಯುಕ್ತವಾಗಿ ದೊರೆಯುವ ಸೃಷ್ಟಿ ನಿರೀಕ್ಷಣ;—ಹೀಗೆ ಸರ್ವತೋಮುಖವಾಗಿರುವ ಆರ್ಯ ವಿದ್ಯಾಭ್ಯಾಸದಲ್ಲಿ ನಾರಾಯಣಪ್ಪನವರ ಭಾವಿ ಪಾಂಡಿತ್ಯದ ಮೂಲವನ್ನು ಕಂಡುಹಿಡಿಯಬೇಕು.

ನಾರಾಯಣಪ್ಪನವರು ಇಂಗ್ಲಿಷ್ ಕಲಿಯುವುದಕ್ಕಾಗಿ ನಂದಳಿಕೆಯನ್ನು ಬಿಟ್ಟು ಉಡುಪಿಗೆ ಹೋದರೆಂಬುದಕ್ಕೂ, ಇಂಗ್ಲಿಷ್ ಶಾಲೆಯನ್ನು ಸೇರಿದ ಎರಡು ವರ್ಷಗಳಲ್ಲಿಯೇ ಹಣದ ಅಡಚಣೆಯಿಂದ ಶಾಲೆಯನ್ನು ಬಿಟ್ಟರೆಂಬುದಕ್ಕೂ ಸಾಕಾದಷ್ಟು ಆಧಾರವಿದೆ ೧೮೮೭ ರ ವರೆಗೆ ಅವರು ಉಡುಪಿಯಲ್ಲಿ ಏನು ಮಾಡುತ್ತಿದ್ದರೆಂಬುದು ಊಹಾಸ್ಪದವಾಗಿದೆ. ಬಹುಶಃ ಈ ಅವಧಿಯಲ್ಲಿ ಕೃಷ್ಣಾಪುರ ಮಠದ ಆಚಾರ್ಯರಿಂದ ಸಂಸ್ಕೃತದ ಪರಿಚಯವನ್ನೂ ಶ್ರೀಯುತ ಮುಳಲಿ ಸುಬ್ಬರಾಯರಿಂದ ಇಂಗ್ಲಿಷ್ ಭಾಷಾಜ್ಞಾನವನ್ನೂ ಸಂಪಾದಿಸಿರಬಹುದು. ಆದರೆ ಅವರ ಮನಸ್ಸು ಕನ್ನಡಕ್ಕೆ ಒಲಿದಷ್ಟು ಸಂಸ್ಕೃತಕ್ಕೆ ಒಲಿಯಲಿಲ್ಲ. "ಏಂ ಭೋಜಪ್ರ

ಬಂಧಂ? ವಿಕ್ರಮವಿಜಯಂ? ಮಹಾವೀರಚರಿತಂ? ” “ಇಸ್ಸಿ! ಇವಱೊಳಿ ನಗಲ್ಕಿಱಿಲ್ಲಂ” ಈ ಅವಧಿಯಲ್ಲಿ ಅವರು ತುಳುಭಾಷೆಯ ಪದಗಳನ್ನು ಕಟ್ಟಿ ಅವುಗಳನ್ನು ತಮ್ಮ ಗೆಳೆಯರ ಕೂಟದಲ್ಲಿ ರಸಿಕನಂತೆ ಹಾಡುವುದನ್ನೊ ಉಡುಪಿಯ ನಾಟಕಮಂಡಳಿಯವರ ನಾಟಕಗಳಲ್ಲಿ ಒಂದೊಂದು ಸಲ ವಿದೂಷಕನ ವೇಷದಿಂದ ಸಭಿಕರನ್ನು ವಿನೋದಗೊಳಿಸುವುದನ್ನೊ, ‘ತಾಳ ಮದ್ದಳೆ’ ಇರುವ ರಾತ್ರಿಯಲ್ಲಿ ನೆರೆಮನೆಯನ್ನು ಸೇರಿಕೊಂಡು ಅರ್ಥ ಹೇಳುವುದನ್ನೊ, ಉಡುಪಿಯ ಪರ್ಯಾಯ ಎಂಬ ಉತ್ಸವಕಾಲದಲ್ಲಿ “ನೆಲದ ಕೆಲಬಲದಿ ಘಟ್ಟಿಸೆ ನಿಂದ ರನ್ನಗಂಬಂಗಳ ಮೇಲೆ ಬಿಗಿದಿಹ ಸಮುನ್ನತಮಹಾಮಂಡಪಗಳಂ ಚೆಲ್ವಾದ ಬೀದಿಗಳಲ್ಲಿ” ತಿರುಗಾಡುತ್ತಿರುವುದನ್ನೊ ನಾವು ಊಹಿಸಬೇಕಾಗುತ್ತದೆ. ಸುಮಾರು ಈ ಕಾಲದಲ್ಲಿಯೇ ಅವರು ಉಡುಪಿಯ ಬೋರ್ಡ್ ಸ್ಕೂಲಿನ ಲೈಬ್ರೆರಿಯಲ್ಲಿದ್ದ ‘ಶಬ್ದಮಣಿ ದರ್ಪಣ’ ‘ಛಂದೋಂಬುಧಿ’ ‘ಅನುಭವಾಮೃತ’ ‘ಪ್ರಾಕ್ಕಾವ್ಯ ಮಾಲಿಕೆ’ ಎಂಬೀ ಪುಸ್ತಕಗಳನ್ನು ಓದಿ, ಅವನ್ನು ಕರತಲಾಮಲಕವಾಗಿ ಮಾಡಿರಬೇಕು. ಹೀಗೆ ನೆಲದಡಿಯಲ್ಲಿಯ ಸಸ್ಯಾಹಾರವನ್ನು ಸಂಗ್ರಹಿಸಿ ಬೆಳೆಯುತ್ತಲಿದ್ದ ಪಾಂಡಿತ್ಯದ ಬೀಜಾಂಕುರವು ಬಡತನದ ಕಲ್ಲೆಡೆಯಲ್ಲಿ ಸಿಕ್ಕಿಕೊಂಡು ಮೇಲಕ್ಕೆ ಏಳಲಾರದೆ ಬಿಸಿಲ ಮೋರೆಯನ್ನು ಕಾಣಲಾರದೆ ಅಲ್ಲಲ್ಲಿಯೇ ಸುಳಿದಾಡುತ್ತಿತ್ತು. ದೈವವಶಾತ್ ಹಿಂದೂ ಮುದ್ರಣಾಲಯದ ಚಾಲಕರು ಕೈಕೊಟ್ಟು ಕಲ್ಲನ್ನು ಈಚೆಗೆ ಉರುಳಿಸಿಬಿಟ್ಟರು; ನಾರಾಯಣಪ್ಪನವರ ‘ರೇವತೀ ಕಲ್ಯಾಣ’ ‘ಕುಮಾರವಿಜಯ’ ಎಂಬೀ ಎರಡು ಯಕ್ಷಗಾನ ಪ್ರಸಂಗಗಳು ಪ್ರಕಾಶಕ್ಕೆ ಬಂದುವು.

ನಂದಳಿಕೆಯವರ ಇತರ ಗ್ರಂಥಗಳಿಗಿಂತ ಕುಮಾರವಿಜಯಕ್ಕೆ ಹೆಚ್ಚಿನ ಮಹತ್ವವನ್ನು ನಾನು ಕೊಡುತ್ತೇನೆಂಬುದಾಗಿ ನಾನು ಹಿಂದೆ ಹೇಳಿರುವೆನಷ್ಟೆ. ನಂದಳಿಕೆಯವರಿಗೆ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳ ಪರಿಚಯವನ್ನು ತಕ್ಕಷ್ಟು ಮಾಡಿಕೊಟ್ಟ ಪೂರ್ವೋಕ್ತ ಶ್ರೀಯುತ ಮಳಲಿ ಸುಬ್ಬರಾಯರನ್ನು ಕುರಿತು ಹೀಗೆಂದು ಉಲ್ಲೇಖವಿದೆ.—

"ಸರ್ಪಭೂಷನ ಭಕ್ತ ಕವಿತಾ
ದರ್ಪಣಾಬ್ಧಿಗಭೀರ ಗುರುವೆನಿ
ಸಿರ್ಪ ಮಳಲೀ ಸುಬ್ಬರಾಯರಿಗರ್ಪಿಸುವೆನು.''

ಈ ಮಳಲಿ ಸುಬ್ಬರಾಯರೇ ಉಡುಪಿಯ ಬೋರ್ಡ್ ಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದು, ಅನಂತರ ನಂದಳಿಕೆಯವರು ಕುಂದಾಪುರ ಹೈಸ್ಕೂಲಿನಲ್ಲಿ ಅಂಗಸಾಧನೆಯ ಉಪಾಧ್ಯಾಯ ಕೆಲಸದಲ್ಲಿ ಇದ್ದಾಗ ಇವರ ಜತೆಯ ಉಪಾಧ್ಯಾಯರಾದರು. ಈ ಸುಬ್ಬರಾಯರ ಅನುಮೋದನದಿಂದ ನಂದಳಿಕೆಯವರು ಸುಮಾರು ೧೮೯೮ರಲ್ಲಿ 'ತಾಂಡವಮುನಿಯ ಕಥೆ' ಎಂಬ ತೊರವೆಯ ರಾಮಾಯಣದೊಳಗಿನ ಕೆಲವು ಪದ್ಯಗಳಿಗೆ ಟಿಪ್ಪಣಿಯನ್ನು ಬರೆದರೆಂದು ನಾನು ಕೇಳಿರುತ್ತೇನೆ. ನಂದಳಿಕೆಯವರು ಉಡುಪಿಯಲ್ಲಿ ಉಳಿದುಕೊಂಡನಂತರ ೧೮೯೩ರ ವರೆಗೆ ಕನ್ನಡ ಸಾಹಿತ್ಯಸಂಪಾದನೆಯಲ್ಲಿ ಎಲ್ಲಿಯತನಕ ಹೋಗಿದ್ದರೆಂಬುದನ್ನು ಶೋಧಿಸುವುದಕ್ಕೆ ಕುಮಾರವಿಜಯವು ತಕ್ಕಷ್ಟು ಬೆಳಕನ್ನು ಚೆಲ್ಲುತ್ತದೆ. ಪ್ರಸಂಗದ ಅನೇಕ ಹಾಡುಗಳ ದಾಟಿಯನ್ನು ತೋರಿಸುವುದಕ್ಕೆ ಇಟ್ಟ ಸೊಲ್ಲುಗಳು ಉಡುಪಿಯ ಮಾನಪತ್ರವಾದ ಸುದರ್ಶನದಲ್ಲಿ ಪ್ರಕಟವಾಗುತ್ತಿದ್ದ ತುಂಡುಪದಗಳ ಚರಣಗಳು, ಇಲ್ಲವೆ ನಂದಳಿಕೆಯವರೇ ಕಟ್ಟಿದ ತುಳುಹಾಡುಗಳ ಭಾಗಗಳು, ಇಲ್ಲವೆ ಉಡುಪಿಯಲ್ಲಿ ಅಂದು ಆಡಿಸಿ ತೋರಿಸುತ್ತಿದ್ದ ಮರಾಟಿ ಪದಗಳ ಪಲ್ಲವಿಗಳು, ಇಲ್ಲವೆ ಪ್ರಚಾರದಲ್ಲಿದ್ದ ಇತರ ಪ್ರಸಂಗಗಳೊಳಗಿನ ಹಾಡುಗಳು—ಇದರಿಂದ ಯಕ್ಷಗಾನ ಪ್ರಸಂಗಕ್ಕೆ ಬೇಕಾದ ಹಾಡುಗಳನ್ನು ಯಾವ ದಾಟಿಯಲ್ಲಾದರೂ ಕಟ್ಟುವುದಕ್ಕೂ ಹಾಡುವುದಕ್ಕೂ ಅವರು ತಮ್ಮ ೨೦ನೆಯ ವಯಸ್ಸಿನೊಳಗೆ ಶಕ್ತರಾಗಿದ್ದರೆಂದು ಹೇಳಬೇಕಾಗುತ್ತದೆ. ಕುಮಾರವಿಜಯದೊಳಗಿನ ಯಮಕಗಳನ್ನೂ ಶಾಂತಪ್ರಾಸಗಳನ್ನೂ ಲಕ್ಷಿಸಿದರೆ, ಲಕ್ಷ್ಮೀಶನ ಜೈಮಿನಿಭಾರತವು ಅವರಿಗೆ ಮುಖೋದ್ಗೀತವಾಗಿರಬಹುದೆಂಬ ಹಾಗೆ ತೋರುತ್ತದೆ. ಈ ಅಭಿಪ್ರಾಯವು ರಾಮ

ಪಟ್ಟಾಭಿಷೇಕವನ್ನೂ ರಾಮಾಶ್ವಮೇಧವನ್ನೂ ಓದುತ್ತಲೇ ಇನ್ನೂ ಬಲಗೊಳ್ಳುತ್ತದೆ. ಹಳೆಯ ಯಕ್ಷಗಾನ ಪ್ರಸಂಗಗಳಲ್ಲಿ ಹುಡುಕಿದರೆ ದೊರೆಯದ 'ಮಾಳ್ಕೆ' 'ಕಾಗೆ' 'ಇರಲೊಡಂ' 'ಪೊಡಮಟ್ಟು' ಮೊದಲಾದ ಹಳಗನ್ನಡ ವ್ಯಾಕರಣಮರ್ಯಾದೆಗಳೂ 'ಪೊಸದೇಸೆ' 'ಕುಂಬಿಡು' 'ಬೆಸನ' ಮೊದಲಾದ ಶಬ್ದಪ್ರಯೋಗಗಳೂ ಅವರು ಅಂದು ಮಾಡಿದ್ದ ಪ್ರಾಚೀನ ಗ್ರಂಥಪರಿಚಯವನ್ನು ಸೂಚಿಸುತ್ತವೆ. ಕುಮಾರವಿಜಯದಲ್ಲಿ ಹೇರಳವಾಗಿ ಕಂಡುಬರುವ ಇಂಥ ಹಳಗನ್ನಡ ವ್ಯಾಕರಣಪ್ರಯೋಗಗಳು ಶಬ್ದಮಣಿದರ್ಪಣ ಭಾಷಾಭೂಷಣಗಳ ಪುರಶ್ಚರಣೆಯಿಂದ ಅವರ ಬಾಯಿ ಮೀರಿ ಸಿಡಿದು ಬಿದ್ದ ಹಾಗೆ ತೋರುತ್ತವೆಯೇ ಹೊರತು ವ್ಯಾಕರಣ ಪಾಂಡಿತ್ಯದ ಗರ್ವೋದ್ರೇಕದಿಂದ ಇಟ್ಟಹಾಗೆ ಕಾಣುವುದಿಲ್ಲ. "ಪಾಲಿಸುಗೆ ಪಾರ್ವತೀಪರಮೇಶರುಂ" "ಅತ್ರಿಭೃಗು ದುರ್ವಾಸ ವಿಶ್ವಾಮಿತ್ರರೆನೆ. .." ಇತ್ಯಾದಿ ಮಾತುಗಳು ಸಂಸ್ಕೃತದಲ್ಲಿ ಕಾವ್ಯದವರೆಗಾದರೂ ಹೋಗಿರಬೇಕೆಂಬ ಅನುಮಾನವನ್ನು ಹೊರಡಿಸುತ್ತವೆ. ಇದರೊಳಗಿನ ಕಂದಪದ್ಯಗಳಲ್ಲಿ ನಗಣ ಸಗಣಗಳು ಬರಬೇಕಾದಲ್ಲಿ ಬರುವುದಿಲ್ಲವೆಂಬುದು ನಿಜ. ಆದರೆ ಈ ಛಂದೋಲೋಪವು ನಮ್ಮ ಜಿಲ್ಲೆಯ ಕಂದಪದ್ಯಗಳಲ್ಲಿ ಬಹುಕಾಲದವರೆಗೆ ಸಾಮಾನ್ಯವಾಗಿತ್ತು.

ಕುಮಾರವಿಜಯದ ದೆಸೆಯಿಂದ ಲಕ್ಷ್ಮೀನಾರಣಪ್ಪನವರ ಹೆಸರು ನನ್ನ ಕಿವಿಯಲ್ಲಿ ಆಗಾಗ ಜೆನುಗುತ್ತಾ ಇದ್ದರೂ, ೧೮೯೫ರ ವರೆಗೆ ನನಗೂ ಅವರಿಗೂ ಯಾವ ತರದ ಪತ್ರವ್ಯವಹಾರವೂ ನಡೆದಿರಲಿಲ್ಲ. ಹೀಗಿರಲು ೧೮೯೫ನೆಯ ಜುಲೈ ಮಾಸದಲ್ಲಿ ಮಂಗಳೂರ ಗವರ್ನಮೆಂಟ್ ಕಾಲೇಜಿನಲ್ಲಿ ಕನ್ನಡಕ್ಕಾಗಿ ತಿಂಗಳಿಗೆ ೨೦ ರೂಪಾಯಿ ಸಂಬಳದ ಕನ್ನಡ ಪಂಡಿತನ ಕೆಲಸಕ್ಕೆ ಒಂದು ಏರ್ಪಾಡಾಯಿತು. ಯಾರಿಗೂ ಬೇಡವಾದ ಈ ಉದ್ಯೋಗಕ್ಕೆ ನಾವಿಬ್ಬರೇ ಅರ್ಜಿದಾರರಾಗಿದ್ದೆವು. ಕನ್ನಡ ಅರಿಯದ ಇಂಗ್ಲಿಷ್ ಹೆಡ್‌ಮಾಸ್ತರನೊಬ್ಬನು ಕನ್ನಡ ಬಲ್ಲ ನಾರಾಯಣಪ್ಪ

ನವರನ್ನು ಬಿಟ್ಟು, ಇಂಗ್ಲಿಷ್ ಬರುತ್ತದೆಂಬ ಕಾರಣದ ಮೇಲೆ ಆ ಜಾಗವನ್ನು ನನಗೆ ಕೊಟ್ಟರು. ಇದರ ಮರ್ಮವನ್ನು ತಿಳಿಯದ ನಾರಾಯಣಪ್ಪನವರು ನಾನೇನೋ ಕನ್ನಡ ವಾಚಸ್ಪತಿಯಾಗಿರಬಹುದೆಂದು ನೆನಸಿ, ನನ್ನನ್ನು ಅಭಿನಂದಿಸಿ ಒಂದು ಪತ್ರವನ್ನು ಬರೆದರು. ನಾನು ಪ್ರತ್ಯುತ್ತರವನ್ನು ಬರೆಯುವಾಗ "ಬತ್ತದ ಸಿಪ್ಪೆಯನ್ನು ಕುಟ್ಟತಕ್ಕ ಒನಕೆಯನ್ನು ಕನ್ನಡಬರಹವನ್ನು ಬರೆಸುವುದಕ್ಕೆ ತಂದರು; ಚಿತ್ರಬಿಡಿಸುವ ಬಣ್ಣಾದಗರಿಯನ್ನು ಕಿವಿಯ ತುರಿಕೆಗೆ ಕುಗ್ಗಿಕಡ್ಡಿಯನ್ನಾಗಿ ಮಾಡಿದರು" ಎಂದು ಹೇಳಿ, ನಮ್ಮಿಬ್ಬರೊಳಗಿನ ಅಂತರವನ್ನು ಸ್ಪಷ್ಟಪಡಿಸಿದೆನು.

ಸುಮಾರು ಇದೇ ಕಾಲದಲ್ಲಿ ಶ್ರೀಯುತ ಎಂ. ಎ. ರಾಮಾನುಜ ಅಯ್ಯಂಗಾರ್ಯರೂ ಕೈ. ಎಸ್.ಜಿ. ನರಸಿಂಹಾಚಾರ್ಯರೂ ಕನ್ನಡ ವಾಙ್ಮಯದ ಬೀಗಮುದ್ರೆಯನ್ನು ಒಡೆದು, ಅಮೂಲ್ಯವಾದ ಕರ್ನಾಟಕ ಕೃತಿರತ್ನಗಳನ್ನು ಕಾವ್ಯಮಂಜರಿ ಎಂಬ ಮಾಸಪತ್ರದ ಮೂಲಕವಾಗಿ ಕನ್ನಡಿಗರಿಗೆ ದಾನಮಾಡುವ ಪ್ರಚಾರಕ ಕಾರ್ಯವನ್ನು ಕೈಕೊಳ್ಳುವಂಥವರಾದರು. ಅವರು ಬೆಳಕಿಗೆ ತಂದ ಉತ್ಕೃಷ್ಟಗ್ರಂಥಗಳನ್ನು ಮದ್ರಾಸ್ ಯೂನಿವರ್ಸಿಟಿಯವರು ಪಠ್ಯಪುಸ್ತಕಗಳನ್ನಾಗಿ ನಿಯಮಿಸಿ, ಅವರ ಸತ್ಕಾರ್ಯಕ್ಕೆ ತಕ್ಕಷ್ಟು ಆಶ್ರಯ ಕೊಡುವಂಥವರಾದರು. ಎಫ್. ಎ. ಪರೀಕ್ಷೆಗೆ ೧೮೯೭ ರಲ್ಲಿ ರತ್ನಾಕರಾಧೀಶ್ವರಶತಕವೂ ಚಿಕದೇವರಾಜ ವಂಶಾವಳಿಯೂ, ೧೮೯೮ ರಲ್ಲಿ ಶ್ರೀರಾಮಪಟ್ಟಾಭಿಷೇಕವೂ ಅದ್ಭುತರಾಮಾಯಣವೂ ಪಠ್ಯಪುಸ್ತಕಗಳಾಗಿದ್ದು, ಅವನ್ನು ಕಲಿಸುವ (ಕಲಸುವ ?) ಕೆಲಸವು ನನ್ನ ಮೇಲೆ ಬಿದ್ದಿತ್ತು. ಪಟ್ಟಾಭಿಷೇಕದ ಒಂದೆರಡು ಚರಣಗಳ ಅರ್ಥಾನುವಾದವು ನನ್ನನ್ನು ಸೋಲಿಸಿಬಿಟ್ಟದ್ದರಿಂದ, ನನಗೆ ಬಗೆಹರಿಯದ ಕೆಳಗೆ ಕಾಣಿಸಿದ ಭಾಗಗಳಲ್ಲಿ ಒಂದರ ಅರ್ಥವನ್ನೂ ಮತ್ತೊಂದರಲ್ಲಿ ಬಿಟ್ಟುಹೋದ ಪದಗಳನ್ನೂ ಹೇಳಿಕೊಡಬೇಕಾಗಿ ನಾನು ನಂದಳಿಕೆಯವರಿಗೆ ಕಾಗದ ಬರೆದೆನು. ಆಗ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು

ಆದರ ಗ್ರಂಥಕರ್ತರೆಂದು ನನಗೆ ಕನಸಿನಲ್ಲಿ ಕೂಡ ಸಂಶಯವು ಹುಟ್ಟಿರಲಿಲ್ಲ.

೧. ತಂಬೆಲಸೊರ್ಂಕೆ ಬಳ್ಕುವ ಲತಾಂಗಮುದಿಱುಸಿ
ಲಂ ಬೇರೆ ತೆಡೆದುಂಟೆ. ೩. ೫೩

೨. ಪೊಸ ಸೊಗವ ನೀನುಂಡುದೇ
ಕೊಡೆಯು ನಿನ್ನನುಭವಕೆ...ಮೇದಿನಿಯ...ರಾಘವ
೪. ೨೯.

ಮರುಟಪ್ಪಾಲಿಗೆ ಅವರ ಉತ್ತರವು ಬಂದಿತು. "ಇಱುಸಿಲ್" ಎಂಬ ಶಬ್ದಕ್ಕೆ ಅರ್ಥವನ್ನು ಕೊಟ್ಟು, ಆದರ ಸಮರ್ಥನಕ್ಕಾಗಿ ಶಬ್ದಮಣಿದರ್ಪಣದ ಪುಟಸಂಖ್ಯೆಗೆ ನನ್ನ ಲಕ್ಷ್ಯವನ್ನು ಎಳೆದಿದ್ದ ಒಂದು ಟಿಪ್ಪಣಿಯು ಪತ್ರದಲ್ಲಿ ಇತ್ತು. ಗ್ರಂಥಪಾತವೆಂದು ಮೂಲದಲ್ಲಿ ಬಿಟ್ಟುಹೋದ ಪದಗಳು ಬಹುಶಃ ಇಂಥವುಗಳಾಗಿರಬಹುದೆಂದು ಅವರು ಪತ್ರದಲ್ಲಿ ನಿರ್ದೇಶಿಸಿದ್ದರು. ಆ ಪದಗಳನ್ನು ನಾನು ಮರೆತುಬಿಟ್ಟದ್ದೂ ಪತ್ರದ ವಿಷಯದಲ್ಲಿ ಅಜಾಗರೂಕನಾದದ್ದೂ ಎಷ್ಟೋ ಶೋಚನೀಯವಾಗಿದೆ ಎಂದು ನಾನು ಹೇಳಬೇಕಾಗಿಲ್ಲ.

ನನಗೆ ಮೊದಲಿಂದಲೇ ನಂದಳಿಕೆಯವರ ಮೇಲಿದ್ದ ಗೌರವವು ದ್ವಿಗುಣಿತವಾಯಿತು. ನನಗಿದ್ದ ಗೌರವವನ್ನು ಶ್ರುತಪಡಿಸಿ, ಕುಮಾರವಿಜಯವನ್ನು ಶ್ಲಾಘಿಸಿ ನಾನು ಮತ್ತೊಂದು ಕಾಗದವನ್ನು ಬರೆದೆನು. ಅವರು ಆ ಪ್ರಶಂಸನೆಯನ್ನು ಕಿವಿಯಮೇಲೆ ಹಾಕಿಕೊಳ್ಳದೆ, ಪ್ರತ್ಯುತ್ತರದಲ್ಲಿ ಆದರ ಪ್ರಸ್ತಾವನೆಯನ್ನೇ ಬಿಟ್ಟುಬಿಟ್ಟು ನನ್ನ ಅವಗಾಹನೆಗಾಗಿ 'ಮತ್ತೊಂದು ಪುಸ್ತಕವನ್ನು ಕಳುಹಿಸಿರುತ್ತೇನೆ; ಗ್ರಂಥವು ಯೋಗ್ಯವೆಂದಿದ್ದರೆ ಅದನ್ನು ಮುದ್ರಿಸುವುದಕ್ಕೆ ಸಾಧ್ಯವಿದೆಯೇ' ಎಂಬದಾಗಿ ಬರೆದು ಆ ಪತ್ರದೊಂದಿಗೆ ೧೮೯೮ ನೆಯ ಸೆಪ್ಟೆಂಬರ್ ತಿಂಗಳಲ್ಲಿ ಒಂದು ಹಸ್ತಪ್ರತಿಯನ್ನು ನನಗೆ ಕಳುಹಿಸಿಕೊಟ್ಟರು. ಇದೇ—ರಾಮಾಶ್ವಮೇಧದ

ಅವರ ಹಸ್ತಪ್ರತಿ; ಮುಂದೆ ಕಾವ್ಯಕಲಾನಿಧಿಯಲ್ಲಿ ಪ್ರಕಟವಾದ ರಾಮಾಶ್ವಮೇಧಧ ಮಾತೃಕೆಯೂ ಕೂಡ ಇದೇ ಹಸ್ತಪ್ರತಿಯೆಂದು ನಾನು ನೆನಸುತ್ತೇನೆ.

ನನ್ನಲ್ಲಿಗೆ ಕಳುಹಿಸಲಾದ ಪ್ರತಿಯಲ್ಲಿ ಸುಮಾರು ೫೦೦ ಪುಟಗಳು ಇದ್ದಿರಬಹುದು; ಮುತ್ತಿನಂತೆ ದುಂಡಗಾದ ಬರಹ, ಮೋಡಿ ಇಲ್ಲ, ತಪ್ಪುತಿದ್ದುಪಾಟುಗಳು ಕಡಮೆ. ಹೀಗಾದುದರಿಂದ ಕೈಬರೆಹವಾದರೂ ಅದನ್ನು ಓದುವುದಕ್ಕೆ ನನಗೆ ತೊಡಕಾಗಲಿಲ್ಲ. ನಾನು ಓದ ತೊಡಗಿದ್ದೇ ಸರಿ, ಹಸಿವು ನಿದ್ದೆ ಬಿಟ್ಟು, ಅದನ್ನು ಆದ್ಯಂತವಾಗಿ ಎರಡು ದಿವಸಗಳೊಳಗೆ ಮುಗಿಸಿ ಪುನಃ ಓದುವುದಕ್ಕೆ ಹತ್ತಿದೆನು. ಓದಿದಷ್ಟಕ್ಕೆ ಇನ್ನೂ ಓದಬೇಕೆಂಬ ಆಸೆಯಾಗಿ, ಕಂಡಕಂಡವರನ್ನು ಕರೆದು, ಅವರ ಮುಂದೆ 'ವಾಚಕಮಾಡಿದೆನು.' ಆದರೂ ಅದನ್ನು ರಚಿಸಿದವರು ನಂದಳಿಕೆ ಲಕ್ಷ್ಮೀನಾರಣಪ್ಪನವರಾಗಿರಬಹುದೆಂಬ ಶಂಕೆಯು ನನ್ನ ಮೂಢಮನಸ್ಸಿಗೆ ಮೂರುತಿಂಗಳ ತನಕ ಹೊಳೆಯದೆ ಹೋಯಿತು. ನಾನು ಪತ್ರಸಮೇತವಾಗಿ ಆ ಹಸ್ತಪ್ರತಿಯನ್ನು ಅವರಿಗೆ ಹಿಂದಕ್ಕೆ ಕಳುಹಿಸಿದೆನು. ಪತ್ರದಲ್ಲಿ ನನ್ನ ಅಭಿಪ್ರಾಯವು ಇತ್ತು. ಮನೋರಮೆಯು ಗ್ರಂಥದ ವಿಷಯವಾಗಿ ಮುದ್ದಣ್ಣನೊಡನೆ ಯಾವ ಮಾತುಗಳನ್ನು ಆಡಿದಳೊ ಆ ಮಾತುಗಳನ್ನೇ ಇಟ್ಟು, "ಮುದ್ದಣ್ಣನ ಹೆಸರಿನಂತೆ ಮುದ್ದುಮುದ್ದಾಯಿತು, ಹಿಂದಿಲ್ಲ ಮುಂದಿಲ್ಲ" ಎಂಬದಾಗಿ ಕೊಂಡಾಡಿ, "ಗಾಜನ್ನು ಮೆಚ್ಚುವ ಕಾಲದಲ್ಲಿ ವಜ್ರವು ಬಿಕರಿಯಾಗುವುದು ದುರ್ಲಭವಾದ್ದರಿಂದ, ಅಚ್ಚುಹಾಕಿಸಿದಲ್ಲಿ 'ಕೈಟಿತ್ತಿನ ಕಾಸಲಾ ಪೋಂಡ—ವೈಟಿತ್ತಿನ ಮಾಸಲಾ ಪೋಂಡ' ಎಂಬ ತುಳುಗಾದೆಯಂತೆ ಆಗುವ ಸಂಭವವಿದೆ" ಎಂಬಿತ್ಯಾದಿಯಾಗಿ ನನ್ನ ಅಭಿಪ್ರಾಯವನ್ನು ವೇದ್ಯವರಿಸಿದೆನು. ಇದೇ ಪತ್ರದಲ್ಲಿ ರಾಮಾಶ್ವಮೇಧದಿಂದ ಅನೇಕ ವಾಕ್ಯಗಳನ್ನು ಉದ್ಧರಿಸಿಟ್ಟು, ಅವುಗಳ ಅರ್ಥಾನ್ವಯಗಳನ್ನು ನನಗೆ ಹೇಳಿಕೊಡಬೇಕೆಂಬುದಾಗಿಯೂ ಅಪೇಕ್ಷಿಸಿದೆನು.

ಈ ಪತ್ರಕ್ಕೆ ಉತ್ತರವು ಬರಲೇ ಇಲ್ಲ. ಉತ್ಸಾಹಭಂಗದಿಂದಲೊ ಅನಾದರಣೆಯಿಂದಲೊ ಇನ್ನು ಯಾವ ಕಾರಣದಿಂದಲೊ ಅವರು ಬಹುಕಾಲದ ವರೆಗೆ ನನಗೆ ಪತ್ರಬರೆಯುವುದನ್ನು ನಿಲ್ಲಿಸಿಬಿಟ್ಟರು. ಕ್ರಮೇಣ ರಾಮಾಶ್ವಮೇಧವು ಕಾವ್ಯಕಲಾನಿಧಿಯಲ್ಲಿ ಪ್ರಕಟವಾಯಿತು.

ಅಚ್ಚುಹಾಕಿದ ಸಂಪೂರ್ಣ ಪುಸ್ತಕವು ನನ್ನ ಕೈಗೆ ಬೀಳುತ್ತಲೆ ನಾನು ಗ್ರಂಥಕರ್ತೃವಿನ ವಿಚಾರ ಮಾಡತೊಡಗಿದೆನು. ರಾಮಾಶ್ವಮೇಧದ ಕವಿಯು ತುಳುನಾಡಿನವನು ಎಂದು ಊಹಿಸುವುದಕ್ಕೆ ನನಕೆ ಕಷ್ಟವಿರಲಿಲ್ಲ. ಗ್ರಂಥದಲ್ಲಿ ಎಲ್ಲೆಲ್ಲಿಯೂ ಕಣ್ಣಿಗೆ ಹೊಳೆಯುವ 'ಪೊಲಿ' 'ಕುರುಂಬಿಲ್' 'ಆರಾಟ' 'ಬಸದಿ' 'ಇಂದ್ರ' ಮೊದಲಾದ ತುಳು ಶಬ್ದಗಳು ಸಾಕಷ್ಟು ಹೇರಳವಾಗಿದ್ದುವು. ಕುಮಾರವಿಜಯದಲ್ಲಿರುವ ಒಂದೆರಡು ಮಾತುಗಳೇ ಈ ಗ್ರಂಥದಲ್ಲಿ ಇದ್ದುದರಿಂದ, ನಂದಳಿಕೆಯವರೇ ರಾಮಾಶ್ವಮೇಧದ ಕವಿಯಾಗಿರಬಹುದೆಂಬ ಸಂಶಯವು ಹುಟ್ಟಿತು. ಗ್ರಂಥವನ್ನು ಅಗೆದಷ್ಟಕ್ಕೆ ಈ ಶಂಕೆಯು ಬಲವಾಗುತ್ತ ಬಂದಿತು. ಗ್ರಂಥದ ಸರಣಿ, ವಿಸ್ತರಣಕ್ರಮ, ಸಂವಿಧಾನ, ಅಷ್ಟೇಕೆ—ಗ್ರಂಥವು ಆಧುನಿಕವಾಗಿ ತೋರುವಷ್ಟು ಅಪೂರ್ವತೆಯಿಂದ ಬರೆಯಲ್ಪಡುವುದಕ್ಕೆ ಕಾರಣವಾದ ಆ ಕಾಲದ ಪರಿಸ್ಥಿತಿಯ ಸ್ಫುಟವಾದ ಚಿತ್ರವೇ ನನ್ನ ಮನಸ್ಸಿನಲ್ಲಿ ಎದ್ದುನಿಂತಿತು.

ಕುಮಾರವಿಜಯವನ್ನು ಬರೆದ ಲಕ್ಷ್ಮೀನಾರಾಯಣಪ್ಪನವರೇ ಅದ್ಭುತರಾಮಾಯಣ, ಶ್ರೀರಾಮಪಟ್ಟಾಭಿಷೇಕ, ಶ್ರೀರಾಮಾಶ್ವಮೇಧ ಎಂಬ ಗ್ರಂಥತ್ರಯವನ್ನು ಬೇರೆ ಬೇರೆ ಹೆಸರಿನಿಂದ ರಚಿಸುವುದಕ್ಕೆ ಕಾರಣಗಳು ಇಲ್ಲದೆ ಇರಲಿಲ್ಲ. ಕುಮಾರವಿಜಯವು ಪ್ರಸಿದ್ಧ ಯಕ್ಷಗಾನ ಪ್ರಸಂಗವಾಗಿದ್ದರೂ ಅದು ಅವರು ಬದುಕಿದ್ದಾಗ ಜನಪ್ರೀತವಾಗದೆ ಹೋಯಿತು. ಅದು ನವೀನ ಕಥೆಯಾಗಿದ್ದುದರಿಂದಲೊ, ಅಥವಾ ಅದರೊಳಗಿನ ಹಾಡುಗಳ ದಾಟಿಗಳು ಆಗ ವಾಡಿಕೆಯಲ್ಲಿ ಇಲ್ಲದುದರಿಂದಲೊ, ಅಥವಾ ಗ್ರಂಥದಲ್ಲಿಯ ಹಳಗನ್ನಡ ಪದಗಳೂ ಪ್ರಯೋಗ

ಗಳೂ ಹಳ್ಳಿಯವರ ತಲೆಗೆ ಹತ್ತಲಾರದಷ್ಟು ಕ್ಲಿಷ್ಟವಾದುದರಿಂದಲೊ, ಅಥವಾ ಈಗಿನ ಕವಿಗಳೆಲ್ಲಾ ನರಕವಿಗಳೆಂಬದಾಗಿ ರೂಢಿಯಲ್ಲಿರುವ ತಪ್ಪು ಅಭಿಪ್ರಾಯದಿಂದಲೊ ಕುಮಾರವಿಜಯದ ೨,೦೦೦ ಪ್ರತಿಗಳಲ್ಲಿ ಹೆಚ್ಚಿನವು ಹಾಗೆಯೇ ರಾಶಿಯಾಗಿ ಬಿದ್ದಿದ್ದುವು. ಗ್ರಂಥವನ್ನು ಬರೆದರೆ ಅದನ್ನು 'ನೂತನ ಕವಿತೆಯೆಂದು ಕುಂದಿಟ್ಟು' ಜರೆಯುವವರೇ ಹೊರತು 'ಮತ್ಸರವನುಳಿದು ಅದನ್ನು ಆಲಿಸುವವರು' ಇರಲಿಲ್ಲ. ನಿಂತ ಸ್ಥಳದಿಂದ ದೂರವಿರುವ ಬೆಟ್ಟವು ಬಹು ರಮ್ಯವೆಂದು ಹೇಗೆ ನೆನಸುತ್ತಾರೋ ಹಾಗೆಯೇ ತಮ್ಮ ಕಾಲಕ್ಕಿಂತ ಹಿಂದೆ ಬಹು ದೂರ ಆಗಿಹೋದ ಕವಿಗಳೆಲ್ಲಾ ವರಕವಿಗಳೆಂದು ಭಾವಿಸುವುದು ಎಲ್ಲೆಲ್ಲಿಯೂ ವಾಡಿಕೆಯಾಗಿದೆ. ಹೊಸಕವಿ ಎಂಬ ಅವಹೇಳನಕ್ಕೆ ಆಸ್ಪದಕೊಡದೆ ಹೊಸ ಗ್ರಂಥವನ್ನು ಬರೆದು ಪ್ರಕಟಿಸುವ ಉಪಾಯವು ಯಾವುದು ? ಈ ವಿಚಾರವು ನಂದಳಿಕೆಯವರಲ್ಲಿ ಯಾವಾಗ ಎದ್ದಿತೊ ಆ ಸಮಯಕ್ಕೆ ಸರಿಯಾಗಿ ಶ್ರೀಯುತ ಎಂ. ಎ. ರಾಮಾನುಜಯ್ಯಂಗಾರ್ಯರು ಪ್ರಚಾರಪಡಿಸಿದ ರತ್ನಾಕರಾಧೀಶ್ವರಶತಕವು ನಂದಳಿಕೆಯವರ ಕೈಗೆ ಬಿದ್ದಿತು. ನಮ್ಮ ಜಿಲ್ಲೆಯ ಮೂಡಬಿದರೆಯ ಪ್ರಾಂತದವನಾದ ಆ ಕವಿಯ ನಿಜವಾದ ಹೆಸರು ತಿಳಿಯಬರುವುದಿಲ್ಲವೆಂಬದಾಗಿಯೂ ಶೃಂಗಾರಕವಿ ರಾಜಹಂಸ ಎಂಬಿವು ಆತನು ಇಟ್ಟುಕೊಂಡ ಹೆಸರುಗಳೆಂಬದಾಗಿಯೂ ಶತಕದ ಪೀಠಿಕೆಯಲ್ಲಿದ್ದ ಅಭಿಪ್ರಾಯವು ನಂದಳಿಕೆಯವರಿಗೆ ಹೆಸರು ಬದಲಾಯಿಸಿಕೊಳ್ಳುವುದಕ್ಕೆ ಕಲಿಸಿಕೊಟ್ಟಿದ್ದರೂ ಇರಬಹುದು.

ಗ್ರಂಥವನ್ನು "ಆವ ದಾಟಿಯೊಳ್ ಪೇೞ್ವುದು ? ಪದ್ಯದೊಳ್ ಪೇೞ್ವುದೊ ಗದ್ಯದೊಳ್ ಪೇೞ್ವುದೊ ? ಪದ್ಯಂ ವಧ್ಯಂ, ಗದ್ಯಂ ಹೃದ್ಯಂ, ಹೃದ್ಯಮಪ್ಪ ಗದ್ಯದೊಳೆ ಪೇೞ್ವುದು." ಪದ್ಯದಲ್ಲಿ ಹೇಳಿದರೆ ಕನ್ನಡದ ಸೊಗಸನ ಱಿಯಲಾರ್ತೆನಿಲ್ಲೆನಗೆ. ..ಸಕ್ಕದದ ಚೆಲ್ವಿಂದ ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾಗುವುದು. ಅಂದಿನ 'ಪಾಳ್ಬಣ್ಣನೆ

ಯನ್ನು' ತರಬೇಕಾಗುವುದು. ಇಂಥ ಕೃತಿಯನ್ನು ಯಾರು ಮೆಚ್ಚುವರು? ಯಾರು ಉಡುಗೊರೆ ಕೊಡುವರು? ಆ ರಗಳೆಯ ದಿನಗಳು ಎಷ್ಟೋ ಹಿಂದಕ್ಕೆ ಕಳೆದುಹೋದುವು. ಈ ಕಾಲವು ವೆಂಕಟಾಚಾರ್ಯರ ಕಾದಂಬರಿಗಳ ಕಾಲ. ಅವರ ವಿಷವೃಕ್ಷವು ಗ್ರಂಥಮಾಲೆಯಲ್ಲಿ ಪ್ರಕಟವಾಗಿ ನಮ್ಮ ನಂದಳಿಕೆಯವರನ್ನು ಮುಗ್ಧರನ್ನಾಗಿ ಮಾಡಿದೆ. ಕಮಲಮುಖಿಗೂ ಅವಳ ಗಂಡನಿಗೂ ನಡೆದ ಸಂಭಾಷಣೆಯು ಅವರ ಮನಸ್ಸಿನಲ್ಲಿ ರೂಪುಗೊಂಡಿದೆ. ಈ ರೇಖೆಗಳಿಂದ ಮೇಲಕ್ಕೆ ಎದ್ದ ಚಿತ್ರವೇ ಮುದ್ದಣ್ಣ ಮನೋರಮೆ ಎಂಬ ದಂಪತಿಗಳು. ಹಳೆಯ ಗ್ರಂಥಗಳ ಹೊಗಳುಭಟ್ಟರನ್ನು ಮೆಚ್ಚಿಸುವುದಕ್ಕೆ ಇಂದಿನ ಕಾದಂಬರೀ ನಿರೂಪಣ ಪದ್ಧತಿಯೇ ತಕ್ಕದಾದ ಉಪಾಯವೆಂಬದನ್ನು ಅವರು ವಿಷವೃಕ್ಷ, ಶೂರಸೇನಚರಿತ್ರೆ, ಜಯಸಿಂಹರಾಜ ಚರಿತ್ರೆಗಳನ್ನು ಓದಿದಕೂಡಲೇ ಗೊತ್ತುಮಾಡಿಕೊಂಡು ಆ ನೂತನ ಮಾರ್ಗದಲ್ಲಿ ಹರಿಯತಕ್ಕ ಭಾಷೆಯನ್ನು ಪೋಷಿಸುವುದಕ್ಕೆ ಯೋಚಿಸಿರಬೇಕು. ಪುರಾಣಕಥೆಯನ್ನು ಮುದ್ರಾಮಂಜೂಷದ ಹೊಸಗನ್ನಡದಲ್ಲಿ ಹೇಳಿದರೆ, ಮೈಸೂರು ವಿದ್ವಾಂಸರಿಗೆ ಆದರಣೀಯವಾಗುವುದೊ ಎಂಬ ಅನುಮಾನ; ದುರ್ಗೇಶನಂದಿನಿಯಂತಹ ನವೀನ ಕಥೆಯನ್ನು ಹಳಗನ್ನಡದಲ್ಲಿ ಬರೆದು ಮಂಗಳೂರಿನವರನ್ನು ಮೆಚ್ಚಿಸುವ ಎಂದರೆ, ನೂತನ ಕಥಾಸೃಷ್ಟಿಯನ್ನು ಮಾಡುವಷ್ಟು ಪ್ರತಿಭೆಯು ತನ್ನಲ್ಲಿ ಉಂಟೊ ಇಲ್ಲವೊ ಎಂಬ ಅಪನಂಬಿಕೆ; ಇವೆರಡನ್ನೂ ತಪ್ಪಿಸಿಕೊಳ್ಳುವುದಕ್ಕೆ ದಾರಿ ಯಾವುದು? ಹಳೆಯ ಕಥೆಯನ್ನು ಹೊಸ ಆಯದಲ್ಲಿ ಕಟ್ಟಿ, ಇತ್ತ ಹೊಸ ಶೈಲಿಯೂ ಅಲ್ಲ ಅತ್ತ ಹಳೆಯಶೈಲಿಯೂ ಅಲ್ಲ, ಇವೆರಡರ ನಡುವಣ ಸರಣಿಯನ್ನು ಒದಗಿಸಿಕೊಳ್ಳಬೇಕಾಯಿತು. ಈ ಸರಣಿಯನ್ನು ಕಲ್ಪಿಸಿಕೊಳ್ಳುವುದಕ್ಕೆ ಚಿಕದೇವರಾಜ ವಂಶಾವಳಿಯನ್ನು ತೆರೆದದ್ದಾಯಿತು. ಅದರ ಹಳಗನ್ನಡವು ತಲೆ ಒಡೆಯುವಷ್ಟು ಗಟ್ಟಿ; ವಾಣೀವಿಲಾಸ ಗ್ರಂಥಗಳನ್ನು ಬಿಚ್ಚಿದ್ದಾಯಿತು. ಇದರ ಕನ್ನಡವು ಬೆರಳು ಬಿಗಿಯದಷ್ಟು ಪೆಡಸು. ಏನು ಮಾಡಬೇಕಾಯಿತು?

ಒಂದರ ಕಾಠಿನ್ಯವನ್ನೂ ಮತ್ತೊಂದರ ಶೈಥಿಲ್ಯವನ್ನೂ ತೆಗೆದುಹಾಕಿ, ಅವೆರಡನ್ನೂ ಹೊಸೆದು, ತುಳುನುಡಿಗಳನ್ನೂ ಕನ್ನಡಮಾತುಗಳನ್ನೂ ಸಂದರ್ಭಕ್ಕನುಸಾರವಾಗಿ ಹಳಗನ್ನಡದಿಂದ ತಿರುಪಿ, ಎಷ್ಟು ಅರ್ಥಭಾರವನ್ನು ಹಾಕಿದರೂ ಕಡಿದುಹೋಗದಂತೆ ಹಳೆಯ ವ್ಯಾಕರಣಸೂತ್ರಗಳಿಂದ ಗಂಟಿಕ್ಕಿ, ತನ್ನದೇ ಆದ ಒಂದು ಅಪೂರ್ವ ಭಾಷಾಸರಣಿಯನ್ನು ನಿರ್ಮಿಸಿದರು. ಕಿವಿಯಲ್ಲಿ ಮಂಜುಳವಾಗಿ ಧ್ವನಿಸಿ, ಎದೆಯನ್ನು ತಣ್ಣಗೆ ತೋಯಿಸಿ, ಮನಸ್ಸನ್ನು ತಣಿಸುವ ಎಣೆಯಿಲ್ಲದ ಈ ಭಾಷಾಸರಣಿಯು ಇವರನ್ನೇ ಒಲಿದು, ಇವರನ್ನೇ ವರಿಸಿ, ವಿಧೇಯಳಾದ ದಾಸಿಯಂತೆ ಇವರ ವಶವಾಗಿ ಹೋಯಿತು.

ನಾನು ರಾಮಾಶ್ವಮೇಧದ ವಿಷಯವಾಗಿ ಮೇಲೆ ನಿರೂಪಿಸಿದ್ದ ಆಧಾರಗಳನ್ನು ಸಂಕೋಚವಾಗಿ ಹೇಳಿ, ೧೯೦೦ನೆಯ ಫೆಬ್ರವರಿ ಸುಮಾರಕ್ಕೆ ಮತ್ತೊಂದು ಪತ್ರವನ್ನು ಅವರಿಗೆ ಬರೆದೆನು. ಅದಕ್ಕೆ ಅವರು ''ನಾನು ತ್ವರೆಯಲ್ಲಿ ಮಂಗಳೂರಿಗೆ ಬರುವವನಿದ್ದೇನೆ, ಆಗ ಮುಖತಃ ಮಾತನಾಡೋಣ'' ಎಂಬದಾಗಿ ತಿಳಿಸಿದರು. ಅವರ ಆಗಮನವನ್ನೇ ಎದುರ್ನೋಡುತ್ತಿದ್ದ ನನಗೆ ಎಪ್ರಿಲ್ ತಿಂಗಳಿನ ಒಂದುದಿನ ಸಾಯಂಕಾಲ ಮಂಗಳೂರು ಇಂಗ್ಲಿಷ್ 'ಇಗರ್ಜಿಯ' ಬಲಗಡೆಯ ಮೈದಾನಿನಲ್ಲಿ ಅವರ ಭೇಟಿಯಾಯಿತು. ಸುಮಾರು ೫|| ಅಡಿ ಎತ್ತರದ, ಎಣ್ಣೆಕಪ್ಪುಬಣ್ಣದ, ತಕ್ಕಷ್ಟು ಅಗಲದ ಹಣೆಯ, ಕಳೆಗುಂದಿದ ಮೋರೆಯ, ಹರೆಯದ ಕುರುಹುಗಳಿಲ್ಲದೆ ಶಾಂತವಾಗಿರುವ ಮುಖಮುದ್ರೆಯ ಲಕ್ಷ್ಮೀನಾರಾಯಣಪ್ಪನವರನ್ನು ನಾನು ಕಣ್ಣಾರೆ ಕಂಡೆನು. ಕನ್ನಡದ ಪ್ರಸ್ತಾಪವು ಬರುವುದಕ್ಕೆ ಹೊತ್ತು ಹೋಗಲಿಲ್ಲ. ನಾನು ಗದಾಯುದ್ಧದ ಮಾತು ಎತ್ತಿದೆನು; ಕೂಡಲೇ ಒಳಗಿದ್ದ ಉತ್ಸಾಹವು ಚಿವುಟಿದಂತಾಯಿತು; ''ಜತುಗೇಹಾನಲದಿಂ...'' ಎಂಬ ಚರಣವನ್ನು ಪ್ರಾರಂಭಿಸಿ, ಸುಮಾರು ೨೫ ಪದ್ಯಗಳನ್ನು ಹಾಡುವವರೆಗೆ ಅವರ ಉತ್ಸಾಹವು ನಿಲ್ಲಲಿಲ್ಲ. ತರುವಾಯ ನಾನು

ಗ್ರಂಥತ್ರಯಗಳ ವಿಚಾರವನ್ನು ತಂದುಹಾಕಿ, "ಇದಕ್ಕೆ ಏನು ಹೇಳು ವಿರಿ? ನಾನು ಬರೆದುದು ಸರಿಯಲ್ಲವೆ?" ಎಂದು ಕೇಳಿದೆನು. ಅವರು ನಗುತ್ತ ಎರಡು ನಿಮಿಷಗಳ ಮೇಲೆ "ಯದ್ಭಾವಂ ತದ್ಭವತಿ" ಎಂದು ನುಡಿದು ತಮ್ಮ ಸಂಭಾಷಣೆಯನ್ನು ಸ್ಕೂಲುಗಳಲ್ಲಿ ಕನ್ನಡ ಕಲಿಸುವ ಕ್ರಮ ದ ಕಡೆಗೆ ತಿರುಗಿಸಿ, ನನ್ನ ಪ್ರಶ್ನೆಯನ್ನು ತಮ್ಮ ನಗುವಿನಲ್ಲಿ ತೇಲಿಸಿ ಬಿಟ್ಟರು. ಮೈಯ ಜಾಡ್ಯದ ನಿಮಿತ್ತವಾಗಿ ಅವರು ಮಂಗಳೂರಿಗೆ ಬಂದಿದ್ದರೆಂದು ನನಗೆ ಗೊತ್ತಾಯಿತು. ನಾನು ಅವರನ್ನು ಕಂಡದ್ದು ಇದೇ ಮೊದಲು. ಈ ಮೊದಲಿನ ದರ್ಶನವೇ ಕೊನೆಯ ದರ್ಶನವಾ ವಾಯಿತು. ಅನಂತರ ಅವರು ಬಹಳವರ್ಷ ಬದುಕಲಿಲ್ಲ. ಅವರ ಅಕಾಲ ಮರಣದ ದುಃಖಕರವಾದ ಸಮಾಚಾರವು ಸುವಾಸಿನೀ ಮಾಸಪತ್ರಿಕೆಯಲ್ಲಿ ಪ್ರಕಟವಾಯಿತು. ಪತ್ರಿಕೆಯ ಸಂಪಾದಕರಾಗಿದ್ದ ಶ್ರೀಯುತ ಬೆನಗಲ ರಾಮರಾಯರು ತಮ್ಮ ಅಗ್ರಲೇಖನದಲ್ಲಿ ಅವರ ಗುಣಕಥನವನ್ನು ಮಾಡಿ ಅವರ ನಿಧನದಿಂದ ಕನ್ನಡಕ್ಕೆ ತಗಲಿದ ಹಾನಿಯನ್ನು ವಿಸ್ತರಿಸಿ ಬರೆದರು. ಆ ಸಂದರ್ಭದಲ್ಲಿಯೇ ಉಡುಪಿಯ "ಚಕ್ರಧಾರಿ" ಎಂಬ ಹೆಸರಿನಿಂದ 'ಜೋಜೋ' ಮಾತಿನ ಮೇಲೆ ಟಿಪ್ಪಣವನ್ನು ಒಮ್ಮೆ ಸುವಾಸಿನಿಯಲ್ಲಿ ಬರೆದವರು ಲಕ್ಷ್ಮೀನಾರಾಯಣಪ್ಪನವರೇ ಎಂಬದಾಗಿ ಶ್ರೀ ರಾಮರಾ ಯರು ಬಿಚ್ಚಿಹೇಳಿ, ನಂದಳಿಕೆಯವರೇ ಆ ಗ್ರಂಥತ್ರಯಗಳ ಕವಿಗಳೆಂಬು ದನ್ನು ಸೂಚಿಸಿದರು. ಈ ವಿಚಾರವನ್ನು ಸುವಾಸಿನಿಯ ಅಗ್ರಲೇಖನವು ಕನ್ನಡಿಗರ ಲಕ್ಷ್ಯಕ್ಕೆ ತಂದೊಡ್ಡಿದುದರಲ್ಲಿ ಒಂದುಪಾಲು ನನಗೂ ಇತ್ತು. ಈ ಸಂದಿಗ್ಧವಿಷಯವನ್ನು ಕುರಿತು ಆ ಮಾಸಪತ್ರಿಕೆಯ ಅನಂತರದ ಸಂಚಿಕೆಗಳಲ್ಲಿ ಲೇಖಗಳು ಕಾಣುವುದಿಲ್ಲವಾದರೂ, ರಾಮಾಶ್ವಮೇಧದ ಮೇಲೆ ಯಾರೋ ಇಬ್ಬರಿಂದ ಪ್ರಕಟವಾದ ಒಂದು ವಿಮರ್ಶೆಯು ರಾಮಾಶ್ವಮೇಧವನ್ನು ಮೈಸೂರಲ್ಲಿ ಓದತೊಡಗಿದ್ದರೆಂಬುದಕ್ಕೆ ಸಾಕ್ಷಿ ಯಾಗಿತ್ತು. ಆ ರಾಮಾಶ್ವಮೇಧವು ನಾರಾಯಣಕೃತ ಗ್ರಂಥವೆಂದರೆ

ಕಿಡಿಕಿಡಿಯಾಗುತ್ತಿದ್ದ ಮಂಗಳೂರು ಸೆಂಟ್ ಎಲೊಶಿಯಸ್ ಕಾಲೇಜು ಪಂಡಿತರು ಸುವಾಸಿನಿಯ ಅಭಿಪ್ರಾಯವನ್ನು ಒಪ್ಪಿಕೊಂಡು, ಆ ಶಾಲೆಯ ಅಧಿಕಾರಿಗಳ ಮೂಲಕ ಕಾವ್ಯಕಲಾನಿಧಿಯ ಸಂಪಾದಕರಿಗೆ ತಿಳಿಸಲು, ಶ್ರೀಯುತ ಎಂ. ಎ. ರಾಮಾನುಜಯ್ಯಂಗಾರ್ಯರು 'ಈ ಚರ್ಚಾಸ್ಪದವಾದ ವಿಷಯವನ್ನು ನಾರಾಯಣಪ್ಪನವರ ಮಿತ್ರರಿಗೆ ಬಿಟ್ಟಿರುತ್ತೇವೆ' ಎಂಬದಾಗಿ ಮೊದಲು ಇಟ್ಟುಕೊಂಡ ಅಭಿಪ್ರಾಯವನ್ನು ಬಿಟ್ಟು, ಅದ್ಭುತರಾಮಾಯಣದ ದ್ವಿತೀಯ ಮುದ್ರಣದಲ್ಲಿ "ಇವರೇ ಗ್ರಂಥಕರ್ತರಾಗಿದ್ದರೂ ಇರಬಹುದು......ಇವರಷ್ಟು ಸಮರ್ಥರಾದ ಕವಿಗಳು ಈಗ ಇಲ್ಲವೇ ಇಲ್ಲವೆಂದು ಹೇಳಬಹುದು. ಇವರ ಪದಶಕ್ತಿಯು ಅದ್ಭುತವಾದುದು. ಗದ್ಯಗ್ರಂಥಗಳೇ ವಿರಳವಾಗಿದ್ದ ಕಾಲದಲ್ಲಿ ಇಂತಹ ಉತ್ಕೃಷ್ಟ ಗ್ರಂಥಗಳನ್ನು ಬರೆದು ಮಾಡಿದ ಇವರ ಉಪಕಾರವು ಕನ್ನಡ ದೇಶದಲ್ಲಿ ಮರೆಯತಕ್ಕುದಾಗಿಲ್ಲ" ಎಂಬದಾಗಿ ಹೊಗಳಿದರು. ರಾಮಾಶ್ವಮೇಧದ ವಿಷಯವಾಗಿ ಇಂಡಿಯನ್ ರಿವ್ಯೂ ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾದ ಒಂದು ಮನೋರಂಜಕವಾದ ಇಂಗ್ಲಿಷ್ ಲೇಖವು ಆ ಗ್ರಂಥದ ಪರಿಚಯವನ್ನು ಇಂಗ್ಲಿಷ್ ವಾಚಕರ ಲಕ್ಷ್ಯಕ್ಕೆ ತಂದುದನ್ನು ಆಲೋಚಿಸಿದರೆ, ರಾಮಾಶ್ವಮೇಧವು ಆಗಲೇ ಸಕಲರಿಗೂ ಆದರಣೀಯವಾಗುತ್ತ ಬರಹತ್ತಿತ್ತೆಂಬುದು ವ್ಯಕ್ತವಾಗುತ್ತದೆ.

ಕವಿಗಳೂ ಚಿತ್ರಕರೂ ಶಿಲ್ಪಿಗಳೂ ಇಹಲೋಕದಿಂದ ಹೊರಟು ಹೋಗುವುದಕ್ಕೆ ಮುಂಚಿತವಾಗಿಯೇ ಪ್ರಸಿದ್ಧಿಗೆ ಏರಿದ ಅವರ ಕೃತಿಗಳ ಸಂಗತಿಯನ್ನು ಇತಿಹಾಸವು ಹೇಳುತ್ತದೆ. ಈ ಕೃತಿಗಳಲ್ಲಿ ಹೆಚ್ಚಿನವುಗಳು ಅರಸರ ಆಶ್ರಯ, ಹಣವಂತರ ಸಹಾಯ, ಸ್ವಮತಸ್ಥರ ಪಕ್ಷಪಾತಗಳ ಬಲದಿಂದ ಬಿರುಸುಗಳಂತೆ ಬೆಳಬೆಳಗಿ ಬಾನಿಗೆ ಏರಿ, ಏರಿದಹಾಗೆ ಕೆಳಕ್ಕೆ ಬಿದ್ದು, ಕತ್ತಲಲ್ಲಿ ಕಾಣದೆ ಹೋಗುತ್ತವೆ. ಒಂದೆರಡು ಮಾತ್ರವೇ (ಅಂಬಿಗನ ಪಟಿವಾತು, ಬಿಯದಂ ಬರೆದ ಕಬ್ಬ, ಕುಱುಂಬನ ಬಯಲ್ನುಡಿ) ಚಿರ

ಜೀವಿಗಳಾಗಿ ಬದುಕಿ ಲೋಕಯಾತ್ರೆಯಲ್ಲಿ ನಮಗೆ ಬೆಳಕನ್ನು ಕೊಡುತ್ತವೆ. ಇಂಥ ಮಹಾವರಕವಿಗಳ ತಾರಾಮಂಡಲವನ್ನು ಮುಟ್ಟುವಷ್ಟು ಉನ್ನತವಾದ ಪ್ರತಿಭೆ, ಉದಾತ್ತವಾದ ವಿಚಾರಗಳು, ಉತ್ತಮವಾದ ವಿಷಯಜ್ಞಾನ ಇವು ಲಕ್ಷ್ಮೀನಾರಾಯಣಪ್ಪನವರ ಗ್ರಂಥಗಳಲ್ಲಿ ಕಡಮೆ. ಅವರು ಕನ್ನಡ ಗ್ರಂಥಗಳ ಗಂಧಗಾಳಿ ಸೋಂಕದ, ಕನ್ನಡ ವಿದ್ವಾಂಸರ ಸುಳಿವು ಕಾಣದ, ಕನ್ನಡಪ್ರಾಂತದಿಂದ ಬಹು ದೂರವಾದ, ತುಳುನಾಡಿನ ಬಂಜರು ನೆಲದಲ್ಲಿ ತನ್ನಷ್ಟಕ್ಕೆ ಚಿಗುರಿದ ಗಂಧದ ಸಸಿಯಂತೆ ಇದ್ದು, ಬಲಿತು ಬೆಳೆಯುವ ಮೊದಲೇ ಬಿದ್ದುಹೋದರು. ಹೀಗಾದುದರಿಂದ ಅವರ ಅದ್ಭುತವಾದ ಪದಶಕ್ತಿ, ಅನ್ಯಾದೃಶವಾದ ವಾಕ್ಸರಣಿ, ಹೊಸತನ್ನು ಹಳೆಯದಾಗಿಯೂ, ಹಳೆಯದನ್ನು ಹೊಸದಾಗಿಯೂ ಮಾಡುವ ಮಾಟಗಾರಿಕೆ, ಮನಸ್ಸಿಗೆ ಅಸಹ್ಯವಾಗದ ಶೃಂಗಾರ, ಕಲ್ಲೆದೆಯನ್ನು ಕರಗಿಸತಕ್ಕ ಕರುಣೆ—ಇವುಗಳ ನರುಗಂಪೇ ಮೂಗಿಗೆ ಬರುತ್ತದೆ. ರನ್ನಜನ್ನಾದಿಗಳ ಕವಿತಾಸೌಗಂಧವೂ ಶ್ರೀಯುತ ರವೀಂದ್ರನಾಥರ ಪುಷ್ಪಗಂಧವೂ ಈ ಕೃತಿಗಳಲ್ಲಿ ಇಲ್ಲವೆಂದು ತೋರಿದರೂ, ೨೦೦ ವರ್ಷಗಳ ಈಚೆಯಿಂದ ಮುಳ್ಳುಪೊದೆಯಾಗಿ ಬಿದ್ದಿದ್ದ ಕನ್ನಡತೋಟವು ರಾಮಾಶ್ವಮೇಧದಂತಹ ಒಂದು ಹೂವನ್ನಾದರೂ ಲೋಕಕ್ಕೆ ಕೊಟ್ಟಿತೆಂಬದಕ್ಕೆ ನಾವು ಹೆಚ್ಚಾಳಪಡಬೇಕು.

ಗ್ರಂಥಕಾರರ ಆಯುಷ್ಕಾಲದಲ್ಲಿ ಅವರನ್ನು ಕಣ್ಣೆತ್ತಿನೋಡದ ಜನರು ಅವರ ಅವಸಾನಾನಂತರ ಪ್ರಸಿದ್ಧಿಗೆ ಬರುವ ಅವರ ಕೃತಿಗಳನ್ನು ಮೆಲ್ಲಮೆಲ್ಲನೆ ಓದತೊಡಗುವ ಕಾರಣದಿಂದ ವಾಙ್ಮಯವು ಕ್ರಮೇಣ ಕಣ್ಣಿಗೆ ಕಾಣದಂತೆ ಮಾರ್ಪಡುವುದೆಂಬ ಹೇಳಿಕೆಗೆ ರಾಮಾಶ್ವಮೇಧವು ಒಂದು ದೃಷ್ಟಾಂತವಾಗಿದೆ. ಶ್ರೀಯುತ ಮುಳಿಯದ ತಿಮ್ಮಪ್ಪಯ್ಯನವರ "ಚಂದ್ರಾವಳಿ"ಯು ರಾಮಾಶ್ವಮೇಧದ ಅಚ್ಚಿನಲ್ಲಿ ಎರಕಹೊಯ್ದ ಗ್ರಂಥ. ಆರ್. ವೆಂಕಟಸುಬ್ಬರಾಯರ (Kamala's letters to her

husband) ಎಂಬುದರ ಕನ್ನಡ ಅನುವಾದದಲ್ಲಿ ಗಂಡಹೆಂಡಿರು ತಮ್ಮೊಳಗೆ ಪರಸ್ಪರ ಸಂಬೋಧಿಸಿಕೊಳ್ಳುವ ಮೆಚ್ಚಿನ ಮಾತುಗಳು ಬಹುಶಃ ಮುದ್ದಣ ಮನೋರಮೆಯರ 'ಒಲ್ಮೆಯ ನುಡಿಗಳೇ.' ರಾಮಾಶ್ವಮೇಧವು ಕೈಗೆ ಸಿಕ್ಕದೆ ಹೋಗಿದ್ದರೆ, 'ಶ್ರೀನಿವಾಸನ' ನವಿಲ್ಗರಿಯ ಚಿತ್ರದ ಕಡ್ಡಿಯು ವೆಂಕಟಾಚಾರ್ಯರ ಕಾದಂಬರೀ ಭಾಷಾಮಾರ್ಗಕ್ಕೆ ತಿರುಗುತ್ತಿತ್ತೋ ಏನೋ ಯಾರಿಗೆ ಗೊತ್ತು? ಇನ್ನೂ ಶ್ರೀಯುತ ಡಿ. ವಿ. ಗುಂಡಪ್ಪನವರ ಮುತ್ತುಗಳಂತಿರುವ ಮಾತುಗಳಲ್ಲಿಯೂ, ರತ್ನಗಳಂತಿರುವ ಪದ್ಯಗಳಲ್ಲಿಯೂ ಮಿನುಗುವ ಬಣ್ಣಬಣ್ಣದ ಛಾಯೆಗಳು ರಾಮಾಶ್ವಮೇಧವು ಬೆಳಕಿಗೆ ಬಂದುದರ 'ಪ್ರತಿಫಲವೊ' ಎಂಬ ಅನುಮಾನವಾಗುತ್ತದೆ. ಇಂಗ್ಲಿಷ್ ವಿದ್ಯೆಯ ಹುಳಿಯಿಂದ ನಮ್ಮನಾಡಿನ ನಾಲಗೆಯು ಕನ್ನಡವನ್ನು 'ಸವಿದು ನೋಡದೆ' ಅದು ಹಾಳುಹೊಲಸು ಎಂದು ಹಳಿಯುತ್ತ ಬರುತ್ತಿದ್ದಕಾಲದಲ್ಲಿ, ಸಾಹಿತ್ಯಪರಿಷತ್ತೂ ಕನ್ನಡ ಏಕೀಕರಣ ಮಂಡಳವೂ ಕನ್ನಡದ ವಿಜಯಧ್ವಜವನ್ನು ಎತ್ತಿಹಿಡಿದು ಶಂಖನಾದವನ್ನು ಮಾಡುವ ಮೊದಲೇ "ತಿರುಳ್ಗನ್ನಡದಲ್ಲಿ ಬಿಗುವು ಇದೆ, ಇಂಪು ಇದೆ; ಧನಿ ಇದೆ, ಧಾಟಿ ಇದೆ; ಜೀವಾಳ ಇದೆ, ಜೀವಕಳೆ ಇದೆ. ನಾನು ಕೇಳಿದ್ದೇನೆ, ಕಂಡಿದ್ದೇನೆ—ಬೇಕಾದರೆ ಕೊಡುತ್ತೇನೆ" ಎಂದು ತಾಯಿಯನ್ನು ಕಾಣದ ಗುಡ್ಡದಮರೆಯ ಕರುವಿನ ಕೂಗಿನಿಂದ ಕೂಗಿ ನಮ್ಮ ಕಿವಿಗಳನ್ನು ನಿಮಿರಿಸುವ ಹಾಗೆ ಮಾಡಿದ ಪುಣ್ಯವು ಅದ್ಭುತರಾಮಾಯಣ ರಾಮಾಶ್ವಮೇಧಗಳನ್ನು ವಿರಚಿಸಿದ ಕೈಲಾಸವಾಸಿ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರ ಸೆರಗಿಗೆ ಬೀಳಲಿ!

ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು ಯಶಶ್ಶೇಷರಾದರು. ಯಾವ ವಿದ್ವಾಂಸರ ಪುರಸ್ಕಾರವನ್ನು ಪಡೆಯುವುದಕ್ಕಾಗಿ ಅವರು ತಮ್ಮ ಹೆಸರನ್ನು ಆಗಾಗ ಬೇರ್ಪಡಿಸಿದರೋ, "ತಿರುಳ್ಗನ್ನಡಿಗನಡಿದಾವರೆಯ ಬಂಡುಣಿಗಳಪ್ಪ" ಯಾವ "ಕನ್ನಡ ಕಬ್ಬಿಗರ ಮನೆಯೂಳಿಗದವ

ನೆಂದು '' ತೋರಿಸಿಕೊಂಡರೋ, '' ಜಗದಿ ಪುಟ್ಟಿದವರಿಗೆ ಮನದ ಬಯಕೆ ಪಿರಿದು '' ಆದುದರಿಂದ '' ಕನ್ನಡಿತಿಯೊರೆದ ನುಡಿಯೆಂದಿದಂ ಭಾವಿಸದೆ ಕನ್ನಡಿಗನೊರೆದ ನುಡಿಯೆಂದು ಸಂಭಾವಿಪುದೆಂದು '' ಯಥಾರ್ಥವಾಗಿ ಯಾವ ವಿದ್ವಜ್ಜನರೊಂದಿಗೆ ಬೇಡಿಕೊಂಡರೋ, ಆ ಮೈಸೂರು ಕರ್ನಾಟಕಾಭಿಮಾನಿಗಳೇ ಲಕ್ಷ್ಮೀನಾರಾಯಣಪ್ಪನವರ ಯಶಸ್ಸಿನ ಸಮಾರಾಧನೆಯನ್ನು ಕೈಕೊಂಡು, ಅವರ ವಿಷಯವಾದ ಉಪನ್ಯಾಸಗಳನ್ನೂ ಅವರ ಚಿತ್ರಸ್ಥಾಪನೆಯನ್ನೂ, ಅವರ ಹೆಸರಿನಲ್ಲಿ ಪದಕಗಳನ್ನೂ ಉಚಿತಗಳನ್ನೂ ಅಟ್ಟು ಅಳವಡಿಸುತ್ತಿದ್ದಾಗ—ಅವರು ಜನಿಸಿದ ಜಿಲ್ಲೆಯಲ್ಲಿಯೇ ಜನಿಸಿ, ಅವರು ಇದ್ದ ಕಾಲದಲ್ಲಿಯೇ ಇದ್ದು, ಅವರು ಬರೆದ ಗ್ರಂಥಗಳಿಂದ ಉತ್ಕರ್ಷಗೊಂಡ ನನ್ನಂಥವನು ಆ ಯಶಸ್ಸಿನ ಸಮಾರಾಧನೆಗಾಗಿ ಅವರ ಹೊರಗಿನ ಜೀವನಕ್ರಮವನ್ನೂ ಒಳಗಿನ ಅಂತರ್ಯಸ್ಥಿತಿಯನ್ನೂ ತೆರೆದು ತೋರಿಸಲಿಕ್ಕೆ ಸಹಾಯಕವಾದ ಅವರ ಚರ್ಯೆಚೇಷ್ಟೆಗಳನ್ನೂ ಸುಖದುಃಖದ ಸಂದರ್ಭಗಳನ್ನೂ ನಡೆನುಡಿಗಳನ್ನೂ ಕಾಗದ ಪತ್ರಗಳ ಆಧಾರದಿಂದ ಬರೆದಿದ್ದರೆ ಈ ಲೇಖವು ಎಷ್ಟು ರುಚಿಯಾಗುತ್ತಿತ್ತು ! ಆದರೆ ಮಾಡುವುದೇನು ? ನನ್ನಲ್ಲಿ ಬೇಕಾದ ಸಂಗ್ರಹವೂ ಇಲ್ಲದೆ ಬರೆಯುವ ಶಕ್ತಿಯೂ ಸಾಲದೆ, ಕೈ|| ಲಕ್ಷ್ಮೀನಾರಾಯಣಪ್ಪನವರ ವಿಷಯವಾಗಿ ನನಗೆ ಗೊತ್ತಿದ್ದಷ್ಟನ್ನು ಕಲಸಿ; ಈ ಗೊಡ್ಡು ಸಾರನ್ನು ಮಾಡಬೇಕಾಗಿ ಬಂದಿತು.

ಸತ್ತವರ ಆತ್ಮವು ಸ್ಮರಿಸಿದ ಮಾತ್ರಕ್ಕೆ ಕೆಳಕ್ಕೆ ಇಳಿಯುತ್ತದೆಂಬ ಒಂದು ಹಿರಿಯರ ಹೇಳಿಕೆ ಇದೆ. ಸತ್ತವನ ಆತ್ಮವು ತಿರಿಗಿ ಜನ್ಮಕ್ಕೆ ಬೀಳಬಾರದೆಂಬ ಅಭಿಪ್ರಾಯದಿಂದ ಸತ್ತವನನ್ನು ಸ್ಮರಿಸುವುದೇ ಕಡಿಮೆ. ಆತನು ಉಂಡಿದ್ದ ತಟ್ಟೆ, ಉಟ್ಟಿದ್ದ ಬಟ್ಟೆ, ಹಿಡಿದಿದ್ದ ಕಡ್ಡಿ, ಬರೆದಿದ್ದ ಕಾಗದ ಮುಂತಾದುವನ್ನು ಅವನ ಹಿಂದೆಯೇ ದಾನಮಾಡಿಬಿಡುವುದು ರೂಢಿಯಾಗಿದೆ. ಮೃತನ ವಿಷಯವಾಗಿ ಮಾತುಕಥೆಯನ್ನು ಆಡರು ;

ಆತನ ಹೆಸರನ್ನು ಉಚ್ಚರಿಸಲೊಲ್ಲರು. ಮೃತನ ಹೆಸರುಳಿಯದಂತೆ ಮಾಡುವ ಈ ಪದ್ಧತಿಯ ಕೆಲಸವನ್ನು ನಮ್ಮಲ್ಲಿ ಸಹಜವಾಗಿರುವ ಆಲಸ್ಯವೂ ಬಡತನವೂ ಸಂಪೂರ್ಣಮಾಡುತ್ತವೆ. ಇದರ ದೆಸೆಯಿಂದ ಮಹನೀಯರ ಚರಿತೆಗೆ ಬೇಕಾದ ಲೇಖನಸಾಮಗ್ರಿಗಳಿಗೆ ನಮ್ಮಲ್ಲಿ ದೊಡ್ಡ ಅಭಾವವೆಂದು ವಿಷಾದಿಸಬೇಕಾಗಿದೆ. ಆದರೆ ಇನ್ನೊಂದು ದೃಷ್ಟಿಯಿಂದ ನೋಡಿದರೆ, ಈ ಪದ್ಧತಿಯು ಅಷ್ಟೊಂದು ಹಾಳೆಂದು ತಿಳಿಯಲಾಗದು. ಅದು ಅಸೂಯೆಯ ಬಾಯನ್ನು ಮುಚ್ಚುತ್ತದೆ; ಹಗೆಯ ಕೈಯನ್ನು ಕಟ್ಟುತ್ತದೆ. ಸದ್ಗತಿಯನ್ನು ಪಡೆದವರು ಈ ಜನ್ಮದಲ್ಲಿದ್ದಾಗ ಮಾಡಿದ ಕಾರ್ಯಾಕಾರ್ಯಗಳ ವಿಮರ್ಶೆಯನ್ನೂ ಅವರ ವಿವಿಧ ಆಲೋಚನೆಗಳ ಪರಿಶೀಲನವನ್ನೂ ಅವರ ಉದ್ದೇಶಧ್ಯೇಯಗಳ ವಿಚಾರವನ್ನೂ ಮಾಡುವುದಕ್ಕೆ ನಮಗೇನು ಅಧಿಕಾರ? ಅಧಿಕಾರವಿದ್ದರೂ ಆ ಅಧಿಕಾರವನ್ನು ನಡಿಸುವಾಗ ಅಧಿಕಾರಿಯ ರಾಗದ್ವೇಷಗಳಿಂದ ಮೃತನ ಹೆಸರಿನ ಮೇಲೆ ಸಲ್ಲದ ಭೂಷಣೆಯೊ ಇಲ್ಲದ ದೂಷಣೆಯೊ ಬೀಳಲಿಕ್ಕಿಲ್ಲವೆಂದು ಹೇಗೆ ಹೇಳಬಹುದು? ಹೀಗಾದುದರಿಂದ ಕೈ|| ನಂದಳಿಕೆ ಲಕ್ಷ್ಮೀನಾರಾಯಣಪ್ಪನವರಲ್ಲಿ ನನಗಿದ್ದ ಅಭಿಮಾನದಿಂದ ಬರೆಯಲ್ಪಟ್ಟ ಈ ಲೇಖದಲ್ಲಿ ಅವರ ಹೆಸರಿನ ಮೇಲೆ ನನ್ನ ಕೈಯಿಂದ ಪ್ರಮಾದವಶಾತ್ ಮಸಿಯು ಬಟ್ಟುಬಿದ್ದಿದ್ದರೆ, ಅದನ್ನು ತೊಡೆದುಬಿಡಬೇಕಾಗಿ ವಾಚಕರೊಡನೆ ಬಿನ್ನಯಿಸುತ್ತೇನೆ.

---

# ಕವಿಯ ನೆನಪು.

(ಮ|| ಹುರುಳಿ ಭೀಮರಾಯರಿಂದ.)

ಈ ಕವಿಯ ಪರಿಚಯವು ನನಗೆ ಸುಮಾರು ೧೮೯೬ ನೆಯ ಇಸವಿಯಲ್ಲಿ ಆಯಿತು. ಆಗ ಆತನು ಉಡುಪಿಯ ಮಿಷನ್ ಹೈಸ್ಕೂಲಿನ ಕರ್ಣಾಟಕ ಪಂಡಿತನಾಗಿ ಬಂದಿದ್ದನಷ್ಟೆ. ಆತನು ನಮ್ಮ ನೆರೆಯಲ್ಲಿದ್ದು, ನಮ್ಮ ಅಣ್ಣನ ಗುರುತಿನಮೇಲೆ, ಆಗಾಗ ನಮ್ಮ ಮನೆಗೆ ಬಂದು ಹೋಗುತ್ತಿದ್ದುದೇ ಆತನ ಬಳಕೆಯೂ ಪರಿಚಯವೂ ನನಗೆ ಉಂಟಾಗಲು ಕಾರಣ.

ಕವಿಯ ಬಣ್ಣವು ಎಣ್ಣೆಗೆಂಪು, ದೇಹವು ಗಟ್ಟಿಮುಟ್ಟು, ಮಾತುಕತೆಗಳಲ್ಲಾತನು ಬಲುರಸಿಕನು, ಮಿತಭಾಷಿಯೂ ಅಹುದು. ಆತನಿಗೆ ಪಿತ್ರಾರ್ಜಿತವಾದ ಭೋಗಭಾಗ್ಯಗಳೇನೂ ಇರಲಿಲ್ಲ. ಇಪ್ಪತ್ತು ರೂಪಾಯಿನ ತಿಂಗಳ ಸಂಬಳದಿಂದಲೇ ಜೀವನವು ಸಾಗಬೇಕಿದ್ದಿತು.

ಕವಿಯು ಸಣ್ಣದೊಂದು ಗ್ರಂಥಭಾಂಡಾಗಾರವನ್ನು ಇಟ್ಟುಕೊಂಡಿದ್ದನು. ಅದರಲ್ಲಿ ಹಳಗನ್ನಡಗ್ರಂಥಗಳೇ ಬಹಳ. ಗದ್ಯಪುಸ್ತಕಗಳಲ್ಲಿ, "ಗುಲೇಬಕಾವಲಿ" "ಶೃಂಗಾರಶುಕಸಪ್ತತಿ" ಇವೇ ಮೊದಲಾದ ಕೆಲವು ಪುಸ್ತಕಗಳೂ ಇದ್ದುವು.

ಆಗ ದಿವಂಗತ ಬಿ. ವೆಂಕಟಾಚಾರ್ಯರ ಕೆಲಕೆಲವು "ನಾವೆಲ್ಲು" ಗಳು ಪ್ರಕಟವಾಗಿದ್ದುವು. ಕವಿಯು ಅವುಗಳನ್ನು ಉಡುಪಿಯ ವಕೀಲರೊಬ್ಬರಿಂದ ಎರವಾಗಿ ತಂದು, ಅತ್ಯಾತುರದಿಂದ ಓದುತ್ತಿದ್ದನು. ಹೀಗೆ ಓದಿದುದರ ಪ್ರತಿಫಲವಾಗಿ, ಕವಿಯು "ಗೋದಾವರಿ" ಎಂಬ ಚಿಕ್ಕ "ನಾವೆಲ್ಲ"ನ್ನು "ಸುವಾಸಿನಿ"ಗೆ ಕಳುಹಿದ್ದನು. ಆದರೆ ಅದು ಅಪೂರ್ಣವಾದುದರಿಂದ ಅದನ್ನು "ಪೂರ್ಣ" ಮಾಡಲಿಕ್ಕಾಗಿ ಹಿಂದಿರುಗಿಸಲಾಯ್ತು. ಮುಂದೆ ಅದು ಕವಿಯ ಅನನುಕೂಲತೆಯಿಂದ "ಪೂರ್ಣ"

ವಾಗಿ ಬರಲಿಲ್ಲ. ಹೀಗಾಗಿ ಕವಿಯ ಹೊಸಗನ್ನಡದ ಗದ್ಯಶೈಲಿಯ ರೀತಿಯನ್ನೇ, ಕತೆಯನ್ನು ಕಟ್ಟಿಬರೆಯುವ ಚಮತ್ಕಾರಬುದ್ಧಿಯನ್ನೇ, ಕರ್ಣಾಟಕವು ತಿಳಿಯದಂತಾಯಿತು.

ಕವಿಯು ಕ್ಷಣಕಾಲವನ್ನಾದರೂ ಹಾಳುಮಾಡುತ್ತಿರಲಿಲ್ಲ. ಪ್ರಾತಃಕಾಲ ಮೈಸೂರಿಂದ ಬರುತ್ತಿರುವ ತನ್ನ ಗ್ರಂಥಗಳ "ಪ್ರೂಫ" ನ್ನು ತಿದ್ದುವುದು; ಆಮೇಲೆ ಶಾಲೆಯ ಕೆಲಸ; ಸಂಜೆ ಶ್ರೀ ಕೃಷ್ಣದರ್ಶನವನ್ನು ಮಾಡಿ, ಕೊಂಚ ಹೊತ್ತು ಪಿಟೀಲಿನ ಅಭ್ಯಾಸ; ರಾತ್ರಿ ೧೨ ಗಂಟೆಯವರೆಗೆ ಬರೆದೋದುವುದು.—ಇದು ಕವಿಯ ನಿತ್ಯಾಭ್ಯಾಸ.

ಕವಿಯ ತೀಕ್ಷ್ಣಬುದ್ಧಿಯು ಆತನ ಸಂಗೀತಾಭ್ಯಾಸದಿಂದ ವ್ಯಕ್ತವಾಗುತ್ತಿದೆ. ನಾಲ್ಕಾರು ತಿಂಗಳಲ್ಲಿ ಕಲಿಯಬಹುದಾದುದನ್ನು, ಒಂದೇ ತಿಂಗಳಲ್ಲಿ, ಈತನು ಲೀಲಾಜಾಲವಾಗಿ ಕಲಿತನೆಂದರೆ, ಈ ಬುದ್ಧಿಯಾದರೂ ಅದೆಷ್ಟು ಸೂಕ್ಷ್ಮವಾಗಿರಬೇಕು !

ಕವಿಗೆ ಯಕ್ಷಗಾನದ ಹುಚ್ಚು ಬಹಳ. ಪಟ್ಟಣದ ಸಮೀಪದಲ್ಲಿ ಆಗುತ್ತಿದ್ದ ಎಲ್ಲ "ದಶಾವತಾರದ ಆಟ" ಗಳನ್ನೂ ಆತನು ಬಿಡದೆ ನೋಡುತ್ತಿದ್ದನು.

ಕವಿಗೆ ಚಿತ್ರಗಳಮೇಲೆಯೂ ತುಂಬ ಪ್ರೀತಿ ಇರುತ್ತಿದ್ದಿತು. ಆದರೆ ಎಲ್ಲರಂತೆ ಆತನಿಗೆ "ರವಿವರ್ಮನ ಚಿತ್ರ" (ಬಣ್ಣದಿಂದಕೂಡಿದವುಗಳು) ಗಳಂತಹವುಗಳಮೇಲೆ ಅಷ್ಟೊಂದು ಆಪೇಕ್ಷೆ ಇದ್ದಂತೆ ತೋರುವುದಿಲ್ಲ. ಹೆಚ್ಚು ಬೆಲೆಯನ್ನು ಕೊಟ್ಟು, ಬರೇ ಕಪ್ಪುಬಣ್ಣದ ಚಿತ್ರಗಳನ್ನೇ ಆತನು ತರಿಸಿಟ್ಟುಕೊಂಡುದನ್ನು ನಾನು ನೋಡಿದ್ದೇನೆ.

"ಚಾವಡಿ ರಂಗಭಟ್ಟ" "ಮಹಾಲಕ್ಷ್ಮಿ" ಎಂಬೀ ಹೆಸರುಗಳು ಕವಿಯ ಬಾಯಿಂದ ಬರಲು ಏನಾದರೂ ಪ್ರತ್ಯೇಕ ಕಾರಣಗಳುಂಟೇ? ಎಂದು ಕವಿಯ ನಿಧನದ ಎಷ್ಟೋಕಾಲದ ಬಳಿಕ ಅವರ ಸಹೋದರರನ್ನು ಕುರಿತು ಪ್ರಶ್ನಿಸಿದ್ದರಲ್ಲಿ—" ಕವಿ ಉಡುಪಿಯಲ್ಲಿ ಅಂಗಸಾಧನೆಯ ಉಪಾ

ಧ್ಯಾಯನಾಗಿದ್ದಾಗ ಒಂದು ಹೊಟೇಲಿನಲ್ಲಿ ವಾಸಮಾಡುತ್ತಿದ್ದನೆಂದೂ, ಹೊಟೇಲಿನ ಯಜಮಾನನೊಬ್ಬ ಶಿವಳ್ಳಿಯ " ಭಟ್ಟ " ನೆಂದೂ, ಕವಿ ಬರೆದೋದುವುದಕ್ಕೆ ಆ ಹೊಟೇಲಿನ " ಚಾವಡಿ "ಯೇ ಸ್ಥಳವೆಂದೂ, ಭಟ್ಟನಿಗೆ " ಲಕ್ಷ್ಮೀ " ಎಂಬ ಹೆಸರಿನ ಮಗಳೊಬ್ಬಳಿದ್ದಳೆಂದೂ ಉತ್ತರ ದೊರಕಿದ್ದಿತು.

" ರಾಮಾಶ್ವಮೇಧ " ವನ್ನು ಕವಿ ಎಲ್ಲಿಯಾದರೂ, ಯಾವಾಗಲಾದರೂ, ಏತರ ಆಧಾರದಿಂದಲಾದರೂ ಬರೆದಿರಲಿ, ಸಂಸಾರಚಿತ್ರದಲ್ಲಿ ನಿಜವಾದ " ಮುದ್ದಣ-ಮನೋರಮೆ " ಯಾರೆಂದರೆ ಆ ಗಂಡ ಹೆಂಡಿರೇ—ಕವಿ ಮತ್ತು ಆತನ ಹೆಂಡತಿ. ಮನೆಗೆ ಬಂದ ಹೊಸದರಲ್ಲಿ, ಮುಗ್ಧೆಯಾದ ಆ ಚಿಕ್ಕವಳನ್ನು, ಈ ಕವಿ ಬೇಕುಬೇಕೆಂದೇ ಕೆಣಕಿ, ರೇಗಿಸಿ, ಅಳಿಸಿ, ನಗಿಸಿದುದನ್ನು ನಾನು ಕಂಡಿದ್ದೇನೆ. ಬಳಿಕ, ಕೊಂಚ ಕಾಲ ಕಳೆದಮೇಲೆ ಆಕೆಯೇ "ಮನೋರಮೆ" ಯಂತೆ, ಈ "ಮುದ್ದಣ" ನಿಗೆ ಉತ್ತರಕೊಡುವುದನ್ನೂ ಕೇಳಿದ್ದೇನೆ. ಇದನ್ನು ಕಂಡವನು " ರಾಮಾಶ್ವಮೇಧ "ವನ್ನೇನೂ ಓದಬೇಕಿಲ್ಲ. " ಕವಿ " ಯಾರೆಂದು ವಿಚಾರಿಸುವುದಕ್ಕಾದರೂ " ಲಕ್ಷ್ಮೀನಾರಾಯಣ "ನ ನೆಲೆಯೊಂದೇ ಸಾಕು.

ಕವಿಗೆ " ಸ್ವತಂತ್ರವಾದ ಅಚ್ಚಿ "ಗೆ ಬೇಕಾದ ಧನಬಲವಿರಲಿಲ್ಲ. ಹೆಸರನ್ನು ಕೊಟ್ಟರೆ " ಹಳೆಯ ಕವಿಗಳದಲ್ಲ " ವೆಂದು ಎಲ್ಲಿ ಹಿಂದಿರುಗುವುದೋ, ಮೂಲೆಗೆ ಬೀಳುವುದೋ ಎಂಬ ಭೀತಿಯೊಂದುಕಡೆ ; ಹೊಸಕವಿಯಾದುದರಿಂದ, ತಪ್ಪೊಪ್ಪುಗಳೆಷ್ಟಿವೆಯೋ ಎಂಬ ಚಿತ್ತಚಾಂಚಲ್ಯವೊಂದು ಕಡೆ. ಈ ಮುಖ್ಯಕಾರಣಗಳಿಂದಲೇ ಕವಿ ತನ್ನ ಕಾವ್ಯಗಳಿಗೆ ನಿಜವಾದ ಹೆಸರನ್ನು ಕೊಟ್ಟಿಲ್ಲವೆಂದು ನಾನು ತಿಳಿಯುತ್ತೇನೆ.

---



ಮ|| ಪಂಡಿತ ಮಹಾದೇವ ಪ್ರಭಾಕರ ಪೂಜಾರರವರು.



ಮ|| ಯು. ಮಂಗೇಶರಾಯರು, ಬಿ.ಎ., ಎಲ್.ಟಿ.




# ಅದ್ಭುತರಾಮಾಯಣ.

(ಮ|| ಯು. ಮಂಗೇಶರಾವ್ ಬಿ. ಎ., ಎಲ್. ಟಿ., ಯವರಿಂದ)

ಅದ್ಭುತರಾಮಾಯಣವು ಕವಿವರ್ಯ ನಂದಳಿಕೆ ಲಕ್ಷ್ಮೀನಾರಣಪ್ಪನವರ ಮೂರು ಗ್ರಂಥಗಳೊಳಗೆ ಪ್ರಥಮಪ್ರಯತ್ನವೆಂಬುದರಲ್ಲಿ ಸಂಶಯವಿಲ್ಲ. ರಾಮಾಶ್ವಮೇಧದ ವಚನಮಾಧುರ್ಯವೂ ರಾಮಪಟ್ಟಾಭಿಷೇಕದ ಅರ್ಥಗಾಂಭೀರ್ಯವೂ ಇದರಲ್ಲಿ ಕಾಣವಾದರೂ ಪದಲಾಲಿತ್ಯದಲ್ಲಿಯೂ ಭಾಷಾಸರಲತೆಯಲ್ಲಿಯೂ ಇದು ಅವಕ್ಕೆ ಕಡಿಮೆಯಲ್ಲ. ರಾಮಾಶ್ವಮೇಧದಲ್ಲಿ ಪೌರಾಣಿಕನಾಗಿಯೂ ರಾಮಪಟ್ಟಾಭಿಷೇಕದಲ್ಲಿ ವರ್ಣಕಕವಿಯಾಗಿಯೂ ವಹಿಸಿದ ಸ್ವಾತಂತ್ರ್ಯವನ್ನು ಕೇವಲ ಅನುವಾದವಾದ ಅದ್ಭುತರಾಮಾಯಣದಲ್ಲಿ ಕವಿ. ಕೈಕೊಳ್ಳಲಾರದೆ ಸಂಸ್ಕೃತಮೂಲಗ್ರಂಥವನ್ನು ಬಹಳವಾಗಿ ಅನುಸರಿಸಿದರೂ ಸಮಯೋಚಿತವಾದ ವರ್ಣನೆಗಳಿಂದ ಪುರಾಣದ ಛಾಂದಸಿಕೆಯನ್ನು ತೊಲಗಿಸಿ ಅದನ್ನು ಒಂದು ಶ್ರೇಷ್ಠವಾದ ವಚನಕಾವ್ಯವನ್ನಾಗಿ ಮಾಡಿರುವನು.

ಸಂಸ್ಕೃತ ಮೂಲಗ್ರಂಥವು ಪುರಾಣರೂಪವಾಗಿದೆ. ಶ್ರೋತೃಗಳಿಗೆ ಮತಾಭಿಮಾನವೂ ದೈವಭಕ್ತಿಯೂ ಅಧಿಕವಾಗುವಂತೆ ನೀತಿಬೋಧಕವಾದ ಒಂದು ಸತ್ಕಥೆಯನ್ನು ನಿರೂಪಿಸುವುದೇ ಪುರಾಣದ ಮುಖ್ಯೋದ್ದೇಶವಾದಾಗ, ಸತ್ಕಾವ್ಯವು ಈ ಉದ್ದೇಶದೊಂದಿಗೆ ವಾಚಕರ ಮನೋರಂಜನವನ್ನು ಮಾಡುವ ಧ್ಯೇಯವನ್ನು ಇಟ್ಟುಕೊಳ್ಳುವುದರಿಂದ, ಪುರಾಣವು ತತ್ವೋಪದೇಶದ ಕಡೆಗೆ ಅಧಿಕಾಸಕ್ತಿಯನ್ನು ತೋರುವಾಗ ಕಾವ್ಯವು ರಸನಿರೂಪಣದ ಕಡೆಗೆ ಲಕ್ಷ್ಯ ಕೊಡುವುದು ಸಹಜವಾಗಿದೆ. ಮೂಲಗ್ರಂಥದ ರಾಮನು ಹನುಮಂತನಿಗೆ ಉಪದೇಶಿಸಿದ ಸಾಂಖ್ಯಯೋಗ, ಭಕ್ತಿಯೋಗ ಮುಂತಾದ ಪುರಾಣೋಚಿತವಾದ ಭಾಗಗಳನ್ನು ಬಿಟ್ಟು, ಕಾವ್ಯಯೋಗ್ಯವಾದ ವಾಲ್ಮೀಕಿಋಷ್ಯಾಶ್ರಮ, ಶ್ರೀಮತೀಸೌಂದರ್ಯ, ರಾಮವನವಾಸ, ಸೀತಾವಿಯೋಗ ಮೊದಲಾದುವುಗಳನ್ನು ಸಮಯ

ವರಿತು ಕಥೆಯೊಂದಿಗೆ ಹೆಣೆದು ಕವಿ ತನ್ನ ಕಾವ್ಯವನ್ನು ಸುಶ್ರಾವ್ಯವನ್ನಾಗಿ ಮಾಡಿರುವನು.

ಅದ್ಭುತರಾಮಾಯಣವು ಒಂದು ಶಾಕ್ತೇಯ ಪುರಾಣವಾದುದರಿಂದ ಇದರಲ್ಲಿ ರಾಮನಿಗಿಂತಲೂ ಸೀತೆಗೆ ಹೆಚ್ಚಿನ ಪ್ರಾಧಾನ್ಯವು ಹೇಳಲ್ಪಟ್ಟಿರುವುದು. ದಶಕಂಠರಾವಣನನ್ನು ಜಯಿಸಿದ ರಾಮನಿಗೆ ಸಹಸ್ರಕಂಠರಾವಣನೊಡನೆ ಯುದ್ಧವು ಕಠಿನವಾಗಿ ಪರಿಣಮಿಸಿದಾಗ ಸೀತೆ ಅದ್ಭುತರೂಪವನ್ನು ತಾಳಿ ಆ ದೈತ್ಯನನ್ನು ಸಂಹಾರಮಾಡಿದುದನ್ನು ವರ್ಣಿಸಿರುವುದರಿಂದ ಈ ಗ್ರಂಥಕ್ಕೆ ಅದ್ಭುತರಾಮಾಯಣನಾಮವು ಸಾರ್ಥಕವಾಯಿತು. ಈ ಪುರಾಣಭಾಗವು ಬ್ರಹ್ಮಲೋಕದ ಶತಕೋಟಿರಾಮಾಯಣದಲ್ಲಿ ಪುಣ್ಯಪ್ರದವಾದುದೆಂದು ಹೇಳಿ ಮೂಲಕವಿ ಇದಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿರುವಾಗ ಅನುವಾದಕನು ಬ್ರಹ್ಮಲೋಕದಿಂದ ಕೆಳಗಿಳಿದ ಪಂಚವಿಂಶತಿಸಾಹಸ್ರರಾಮಾಯಣದಲ್ಲಿ—'ಧರೆಯಂ ಪೊರ್ದೆ ಸ್ವಾರಸ್ಯಂ ಗುಂದಿದ ಸ್ವರ್ಧುನೀಜಲಲೇಶಂಗಳ ತೆರದೆ ಸೀತಾಮಾಹಾತ್ಮ್ಯ ಮಾಧುರ್ಯಂ ಸಂಪೂರ್ಣಂ ಕಾಣಿಸದು' ಎಂಬ ಕೊರತೆಯನ್ನು ಕಾಣಿಸಿ ಅದ್ಭುತರಾಮಾಯಣದ ಶ್ರೇಷ್ಠತ್ವವನ್ನೇ ಸಮರ್ಥಿಸಿರುವನು.

ಅದ್ಭುತರಾಮಾಯಣದಲ್ಲಿ ಇತರ ರಾಮಾಯಣಗಳ ಕಥಾಸರಣಿಯಿಲ್ಲವಾಗಿ ಅದರ ಕ್ರಮವು ಬಹಳ ವಿಚಿತ್ರವಾಗಿ ಕಾಣಿಸುವುದು. ಪ್ರಾರಂಭದ ಪೀಠಿಕಾರೂಪದ ಎಂಟು ಆಶ್ವಾಸಗಳಲ್ಲಿ ಸೀತಾರಾಮರ ಅವತಾರಕಾರಣಗಳೂ ರಾಮಾಯಣದ ಕಥಾಕ್ರಮವೂ ವಿವರಿಸಲ್ಪಟ್ಟಿವೆ. ಶ್ರೀಮತೀಸ್ವಯಂವರ ಕಾಲದಲ್ಲಿ ನಾರದಪರ್ವತರನ್ನು ವಂಚಿಸಿ ವಿಷ್ಣು ಶ್ರೀಮತಿಯನ್ನು ಕೊಂಡೊಯ್ದುದರಿಂದ ಕುಪಿತರಾದ ಋಷಿಗಳಿಬ್ಬರೂ, ನಾರಾಯಣನು ಯಾವ ನರರೂಪದಿಂದ ತಮ್ಮನ್ನು ವಂಚಿಸಿದನೋ ಅದೇ ರೂಪದಿಂದ ಅಂಬರೀಷನ ಕುಲದಲ್ಲಿ ಜನಿಸಬೇಕೆಂದೂ ಶ್ರೀಮತಿಯೂ ಭೂಮಿಯಲ್ಲವತರಿಸಿ ಜನಕರಾಜನಲ್ಲಿ ಸೇರಬೇಕೆಂದೂ ತಮ್ಮನ್ನು ವಂಚಿಸಿ ಶ್ರೀಮ

ತಿಯನ್ನು ಕರೆದುಕೊಂಡುಹೋದ ಹಾಗೆಯೇ ಒಬ್ಬ ರಾಕ್ಷಸನು ಆತನ ಪತ್ನಿಯನ್ನು ಕದ್ದುಯ್ಯಬೇಕೆಂದೂ ಶಪಿಸಿ ರಾಮಾಯಣದ ಕಥಾಕ್ರಮ ವನ್ನು ನಿರ್ಧರಿಸಿದರು ಅಂತೆಯೇ ಭಗವದ್ಧ್ಯಾನಮಹಿಮೆಯಿಂದ ಸಾವಿಾಪ್ಯಪದವಿಯನ್ನು ಹೊಂದಿದ ಕೌಶಿಕನ ಉತ್ಸವಕಾಲದಲ್ಲಿ ಸಿರಿಯ ಪಡಿಯರತಿಯರಿಂದ ಮಾನಭಂಗವಡೆದ ನಾರದನ ಶಾಪದಿಂದ ಲಕ್ಷ್ಮಿ ಮಂದೋದರಿಯ ಮಗಳಾಗಿ, ಪಡೆದ ತಾಯಿಂದ ದೂರವಾಗಿ, ಜನಕರಾಜನಲ್ಲಿ ಸೀತೆಯಾಗಿರುವಂತೆಯೂ ನಿಶ್ಚಯವಾಯಿತು. ಪೀಠಿಕಾನಂತರ ಕಥಾಪ್ರವೇಶವೇ ಸಹಜವಾಗಿದ್ದಾಗ ನಾರದನ ಗಾನವಿದ್ಯಾಭ್ಯಾಸಕಥನವು ಅಪ್ರಕೃತವಾದರೂ ಚಮತ್ಕಾರವಾಗಿರುವುದರಿಂದ ಮನೋರಂಜಕವಾಗಿಯೇ ಇದೆಯೆನ್ನಬಹುದು ತದನಂತರ ಸೀತಾಕಲ್ಯಾಣ, ರಾಮಪಿತೃವಾಕ್ಯಪರಿಪಾಲನ, ಸೀತಾಪಹರಣ, ಸುಗ್ರೀವಸಖ್ಯ, ರಾವಣಸಂಹಾರಗಳನ್ನು ಒಂದೆರಡು ಮಾತುಗಳಲ್ಲಿ ಸೂಚಿಸಿ (ಮೂಲಗ್ರಂಥದಲ್ಲಿ ಮಾತ್ರ ಸುಗ್ರೀವಸಖ್ಯದ ಮೊದಲು ಹನೂಮಂತನಿಗೆ ರಾಮನು ದಿವ್ಯರೂಪವನ್ನು ತೋರಿದಾಗ ಮಾಡಿದ ತತ್ವೋಪದೇಶವು ಐದಾರು ಆಶ್ವಾಸಗಳಲ್ಲಿ ವರ್ಣಿತವಾಗಿದೆ.) ಕವಿ ಉತ್ತರರಾಮಚರಿತ್ರೆಯನ್ನುಪಕ್ರಮಿಸುವನು. ಸಭೆಯಲ್ಲಿ ಕೂಡಿದ ಋಷಿಗಳು ರಾಮನ ಸಾಹಸಕೃತ್ಯಗಳನ್ನು ಹೊಗಳಿದಾಗ ಸೀತೆ ಅವನ್ನು ಕಡೆಗಣಿಸಿ ಸಹಸ್ರಕಂಠರಾವಣನ ಪರಾಕ್ರಮವನ್ನು ಕೊಂಡಾಡಲು, ರಾಮನು ವೀರಾವೇಶದಿಂದ ಆತನನ್ನು ಜಯಿಸುವೆನೆಂದು ಸೇನಾಸಮೇತನಾಗಿ ಹೋಗಿ ಆತನೊಡನೆ ಘೋರಯುದ್ಧವನ್ನು ಮಾಡಿ ತಾನೇ ಸೋತುಹೋಗಲಾಗಿ, ಸೀತೆ ಕರಾಳರೂಪವನ್ನು ತಾಳಿ ಸಹಸ್ರಕಂಠನ ರುಂಡಗಳನ್ನು ಚೆಂಡಾಡಿ ರಾಮನಿಂದಲೂ ಸಮಸ್ತದೇವತೆಗಳಿಂದಲೂ ಕೊಂಡಾಡಿಸಿಕೊಂಡುದೇ ಮುಂದಿನ ಕಥಾಸಾರಾಂಶವಾಗಿದೆ.

ಪ್ರಸ್ತುತ ಕವಿ ಈ ಪುರಾಣಕಥೆಯನ್ನು ಹಳಗನ್ನಡದಲ್ಲಿ ಬರೆದರೂ ಪ್ರಾಚೀನಕವಿಗಳ ದೀರ್ಘವಾಕ್ಯಪದ್ಧತಿಯನ್ನನುಸರಿಸದೆ ತಿರುಳ್ಗನ್ನಡದ

ಬಿರುನುಡಿಗಳಿಂದೊಡಗೂಡಿದ ಹೊಸ ಬೆಡಗಿನ ವಾಕ್ಯಸರಣಿಯಿಂದ ವಾಚಕರ ಚಿತ್ತವನ್ನಾಕರ್ಷಿಸುವನು. ಪದಗಳ ನುಣ್ಪು ನುಡಿಗಳ ಬಿಣ್ಪು ಮಾತಿನ ಇಂಪೂ ರಸದ ಪೆಂಪೂ ಈ ಕಾವ್ಯದಲ್ಲಿ ಗುಂಪುಗುಂಪಾಗಿ ದೊರೆಯುವುದರಿಂದ ಅವಕ್ಕೆ ದೃಷ್ಟಾಂತಗಳನ್ನು ಕೊಡುವ ಉದ್ಯೋಗವು ಸಮಗ್ರ ಗ್ರಂಥವನ್ನು ಬರೆದಿಡುವಷ್ಟೇ ಪ್ರಯಾಸಕರವಾಗಿ ಪರಿಣಮಿಸೀತು. ಆದರೂ ದಿಙ್ಮಾತ್ರವಾಗಿ ಕೆಲವನ್ನು ಇಲ್ಲಿ ಕೊಡುವೆನು.

*'ಬರೆಯಬಾರದ ತಿದ್ದಬಾರದ ಕಡೆದರೆ | ದೊರೆಯಬಾರದ ರೂಪಿನಭವ'ನನ್ನು—

**"ಕಾಲ್ಗಳಿಲ್ಲದೆಯುಂ ಪರಿದಪಂ; ಕೆಯ್ಗಳಿಲ್ಲದೆಯುಂ ಪಿಡಿದಪಂ; ಕಣ್ಗಳಿಲ್ಲದೆಯುಂ ಕಂಡಪಂ; ಕಿವಿಗಳಿಲ್ಲದೆಯುಂ ಕೇಳ್ದಪಂ; ಅಂತಾತಂ ವಿಶ್ವಮೆಲ್ಲಮಂ ತಿಳಿದೊಡಂ ವಿಶ್ವಮೆಂತುಮವನನಱಿಯದು."**

ಎಂದು ದೇವರನ್ನು ಬಣ್ಣಿಸದೆ ಬಣ್ಣಿಸಿದ ಬಿನ್ನಣದ ನುಡಿ ಯಾರ ಚಿತ್ತವನ್ನು ಸೋಲಿಸದು ?

ಬಾಲೆಯಾದ ಸೀತೆಗೆ ದಶಕಂಠಸಹಸ್ರಕಂಠರ ವೃತ್ತಾಂತವನ್ನರುಹಿದ ಬ್ರಾಹ್ಮಣನು ಅವರನ್ನು ಹಿರಿದಾಗಿ ವರ್ಣಿಸಿ ಕೊನೆಗೆ ಸಂಗ್ರಹವಾಗಿ—

**"ಪೆಣ್ಣೆ! ಆಯಿರ್ವರ ಪೆಸರನೆ ಕೇಳ್ದೊಡಂ ರೋಮಾಂಚಂ ಪುಟ್ಟುಗುಂ. ಅವರೊಳುಂ ಪಿರಿಯನಿಂ ಪಿರಿದು. ಎಂತಿವರ ಪುಟ್ಟೊ; ಪುಟ್ಟಿಗೆಂತೆಂತು ಪೆಸರೊ; ಪೆಸರ್ಗೆಂತೆಂತು ಮೊಗಂಗಳೊ; ಮೊಗಂಗಳ್ಗೆಂತೆಂತು ಮೆಯ್ಯೊ; ಮೆಯ್ಗೆಂತೆಂತು ಬಲವೊ; ಬಲಕ್ಕೆಂತೆಂತು ಬೀರಮೊ; ಮೇಣಾಬೀರಕಿನ್ನೆಂತೆಂತು ಪೆಂಪೊ ಕಾಣೆಂ, ಕೇಳೆಂ ಶಿವಶಿವಾ!"**

ಎಂದು ಆಡಿದ ಮಾತುಗಳು 'ಈಗಳುಮೆನ್ನ ಮನದೊಳ್ತಗುಳ್ದಿರ್ಕುಂ' ಎಂದು ಸೀತೆ ಹೇಳಿದುದರಲ್ಲಿ ಆಶ್ಚರ್ಯವೇನು ? ಅಂತಹ ಮಾತುಗಳು ಮನಸ್ಸಿನಲ್ಲೇ ನಾಟಿಕೊಳ್ಳುವುದರಲ್ಲಿ ಸಂದೇಹವಿಲ್ಲ.

ರಾಮನ ನರಸೇನೆ ಯುದ್ಧರಂಗದಿಂದ ಮುರಿದೋಡಿದುದನ್ನು—

---

*** ಭರತೇಶವೈಭವ.**

"ಕೆಲರ್ಗೆ ಮನಂ ಮುಂಬರಿಯದು ; ಕೆಲರ್ಗೆ ಮನಂ ಮುಂಬರಿದೊಡಂ ಕಾಲ್ಪರಿಯದು ; ಕೆಲರ್ಗೆ ಮನದೊಡನೆ ಪಜ್ಜೆಯುಂ ಪಜ್ಜೆಗೆಟ್ಟುದು ; ಕೆಲರ್ ಬರುತೆ ಬರುತೆ ಕೈಮುಗಿದರ್; ಕೆಲರ್ ಬೆಂಗೊಟ್ಟರ್ ; ಕೆಲರ್ ಕಾಲ್ಗೆ ಬುದ್ಧಿಯೊರೆದರ್. ಇಂತಾದೊಡಂ ಕೆಲರ್ ದಿಟಮನಂಗೆಯ್ದು ಪಗೆಗಳಂ ಪೊಯ್ಯಲ್ ಪೋದರ್. ಇವರೊಳಮಾಜಿಗೆ ಬರ್ಪನಿತರೊಳ್ ದಿಟ್ಟತನಕಟ್ಟುಡಿದು ತನ್ನಿಂ ತಾನೆ ಕೆಲರ ಕೈದುಗಳ್ ಜಗುಳ್ದುವು. ಕೆಲರ್ ಮಱವಟ್ಟುಪೋದರ್............ಬಯಲ್ನುಡಿಯಿನೇಂ ? ನರಸೇನೆಯುಂ ಸಂಪೂರ್ಣಂ ಸೋಲ್ತುದು."

ಎಂದು ಕವಿ ಆಡಿದ ನುಡಿಗಳು ಯುದ್ಧವು ಅಸಮಬಲವಾದಾಗ ಬಲಗುಂದಿದ ಸೇನೆ ಎದೆಯಳಿದು ಮಾಡುವ ಯುದ್ಧಕ್ರಮವನ್ನು ಸರಸವಾಗಿ ತಿಳಿಸುವುವು.

ರಾಮನು ಯುದ್ಧರಂಗದಲ್ಲಿ ಮೂರ್ಛೆಹೋದಾಗ ರಕ್ಕಸರನ್ನು ಕೊಂದು ತಮ್ಮನ್ನು ಕಾಪಾಡಬೇಕೆಂದು ತಪಸ್ವಿಗಳು ಸೀತೆಯನ್ನು ಬೇಡುತ್ತಿದ್ದಹಾಗೆ

"ತಿರ್ದಿದ ಕೊಂದಲ್ ನಿಗುರ್ದು ಕೆದರ್ದಿರೆ; ಪೆಱನೊಸಲ್ ಪೆರ್ನೊಸಲಾಗಿರೆ; ಎಸಳ್ಗಣ್ ಗುಳಿಗಣ್ಣಾಗೆ ; ನಗೆಮೊಗಂ ಉರಿಮೊಗಮಾಗೆ ; ಸುಲಿಪಲ್ ನಿಡುವಲ್ಲಾಗೆ ; ತಳಿರ್ನಾಲಗೆ ಜೋಲ್ನಾಲಗೆಯಾಗೆ ಸೀತೆ ಕರಾಳಮುಖಿಯಾದಳ್. ಕರ್ಕಶಮಾದ ನಾಲ್ತೋಳುಂ ಕಲ್ಲೆರ್ದೆಯುಂ ಬಲ್ತೊಡೆಗಳುಂ ಮೊಗಕ್ಕೆ ತಕ್ಕುವಾದುವು ಗಳದ ರುಂಡಮಾಲೆಯುಂ ಕೆಯ್ಯ ಎಲ್ವುದೊಡವಂ ದಿಟ್ಟಿಸಲ್ತೀರದು. ಇಂತು ಲೋಕೋತ್ತರ ಸುಂದರಿಯಪ್ಪ ಸೀತೆಯೊಡನೆ ಅದ್ಭುತರೂಪದಿಂ ಮಾಕಾಳಿಯಾಗಿ ದಿಮ್ಮನೆ ತಿರೆಗೆ ಧುಮ್ಮಿಕ್ಕುತೆ, ಕೋರೆವಲ್ಗಳ್ ಮಿನುಗೆ, ತುಟಿಯುಲುಗೆ, ನಾಲಗೆನೀಡೆ ಕಣ್ಪಾಪೆ ಜೂಟಳದಂತೆ ಸುತ್ತ, ಸೂಲಂ ಕಡುಗಂ ತಲೆಯೋಡು ಇಂತಿವುಗಳಂ ಪಿಡಿದು ಪಕ್ಕೆ ವೇಗದಿಂ ರಕ್ಕಸನೆಡೆಗೆ ಸಾರ್ತಂದಳ್."

ಎಂದಾಡಿದ ಕವಿಯ ನುಡಿಗಳು ಸೀತೆಯ ಕರಾಳರೂಪವನ್ನು ವಾಚಕರ ಚಿತ್ತಭಿತ್ತಿಯಲ್ಲಿ ಒತ್ತಿ ಬರೆಯದಿರಲಾರವು.

ವಿಷಯ ಪರಿಪೋಷಕವಾದ ವರ್ಣನಾಭಾಗಗಳಲ್ಲಿಯೂ ಕವಿ ವಿಚಿತ್ರಕಲ್ಪನೆಗಳಿಗೆ ಮನಗೊಡದೆ ವಸ್ತುಪ್ರಕೃತಿಯನ್ನೇ ಪರಿಗಣಿಸಿ ಜಾತ್ಯಲಂಕಾರದಿಂದ ಮನೋಜ್ಞವಾಗಿ ವರ್ಣಿಸಿ ವಿಷಯಪರಿಜ್ಞಾನವನ್ನು

ವಾಚಕರಿಗೆ ನೇರವಾಗುಂಟುಮಾಡುವನು. ಅತಿಶಯೋಕ್ತ್ಯೇಕ್ಷಾದ್ಯಲಂಕಾರಗಳನ್ನರ್ಪಿಸದೆ ಮೃದುಮಧುರವಾದ ವಚನಗಳಿಂದಲೇ ಕವಿತಾವನಿತೆಯನ್ನೊಲಿಸಬಹುದೆಂದು ಈ ಕವಿಯ ವರ್ಣನಾಕ್ರಮದಿಂದ ಧಾರಾಳವಾಗಿ ತಿಳಿದುಕೊಳ್ಳಬಹುದು. ತಮಸಾನದೀತೀರದಲ್ಲಿ ವಾಲ್ಮೀಕಿ ಋಷ್ಯಾಶ್ರಮವಿದ್ದಿತೆಂದೆಂದಷ್ಟೆ ಹೇಳದೆ ಆ ವನಪ್ರದೇಶವು ಮುನಿಜನವಾಸಕ್ಕೆಷ್ಟು ಯೋಗ್ಯವಾಗಿದ್ದಿತೆಂಬುದನ್ನು ವಾಚಕರು ತಿಳಿಯುವಂತೆ ಅಲ್ಲಿಯ ಮರಬಳ್ಳಿಗಳನ್ನೂ ತಾವರೆಗೊಳಗಳನ್ನೂ ಇಂಪಾಗಿ ಹಾಡುವ ಹಕ್ಕಿಗಳನ್ನೂ ಬಣ್ಣಿಸಿದ ಬಳಿಕ—

**"ಅರೆಬರ್ ಒಂದೆಡೆಯೊಳ್ ಪೞವಾತಂ ನುಡಿಯುತೆ ಜನ್ನದಾರವಂ ಪೊಸೆಯುತ್ತಿರ್ಪರ್; ಕೆಲರ್ ಗರವಟದ ಸನ್ನೆಯುವುನಣಿಗೆಯ್ಯುತಿರ್ಪರ್; ಕೆಲರ್ ಸಂದಿಗ್ಧವೇದವಾಕ್ಯಂಗಳಂ ವಿಚಾರಿಸುತಿರ್ಪರ್; ವಟುಗಳೊಳರೆಬರ್ ಪೆಱತೊಂದೆಡೆಯೊಳ್ ಫಲಸವಿತ್ಕುಶಂಗಳಂ ಕೊಯ್ಯುತಿರ್ಪರ್; ಅರೆಬರ್ ನಾರುಡೆಯಂ ನೀರೊಳೊಗೆಯುತಿರ್ಪರ್;....ಕೆಲಬರ್ ಹುಬದೆಯುರ ನೆಗಳ್ತೆಯಂ, ಕೆಲರ್ ಪುಣ್ಯಕಥಾವಿಶೇಷಂಗಳಂ ಬೆಸಗೊಳುತಿರ್ಪರ್; ಪೂಗಿಡುಗಳ ಪಾತೆಗಳ್ಗೆ ನೀರೆಱೆಯುತಿರ್ಪರ್ ಕೆಲರ್."**

ಎಂದು ಕವಿ ಬರೆದ ಆ ಮುನಿಗಳ ದಿನಚಾರಿತ್ರದ ನಿಜಚಿತ್ರವನ್ನು ಕಂಡ ಸಂಸಾರಸಂಕಷ್ಟಸಂತಪ್ತರಾದ ವಾಚಕರ ಹೃದಯವು ಆ ಪ್ರಶಾಂತ ಪ್ರದೇಶದ ಸುಖಜೀವನದ ಸವಿಯಿಂದ ತಂಪಾಗದಿರದು.

ಶ್ರೀಮತೀ ವರ್ಣನೆಯಲ್ಲಿ ಕವಿ ತನ್ನ ಕಲಾಕೌಶಲವನ್ನು ಚೆನ್ನಾಗಿ ಕಾಣಿಸಿರುವನು. ಸ್ವಯಂವರಮಂಟಪಕ್ಕೆ ಕಾಲಿಡುವ ಶ್ರೀಮತಿಯನ್ನು ಮೂಲಕವಿಯು ಛಾಂದಸಿಕೆಯ ಒಂದೆರಡು ಮಾತುಗಳಿಂದ ಬಣ್ಣಿಸಿದುದನ್ನೊಪ್ಪದೆ ನಾರದ ಪರ್ವತೇಶ್ವರರ ಮೋಹಕ್ಕೆ ಕಾರಣವಾದ ಪ್ರಥಮ ದರ್ಶನಸುಖವನ್ನಿತ್ತ ಶ್ರೀಮತಿಯನ್ನು—

**"ಪಱಮೆಯಂತೆ ಕರ್ಪಿಡಿದ ಮುಂಗುರುಳುಂ, ಪಾವಿನ ಪೆಡೆಯಂತೆ ಸರಿಗೊಂಡ ಜಡೆಯುಂ, ಚಂದಿರನಂತೆ ಸಂತಸಮಂ ಪುಟ್ಟಿಪ ಮೊಗಮುಂ, ಕಾವನ ಸಿಂಗಾಡಿಯಂತೆ ಬಾಗಿರ್ಪ ಪುರ್ಬುಂ, ನೀರ್ವೂವೆಸಳಂತೆ ನೀಲಮಪ್ಪ ಕಣ್ಣುಂ........ಕನ್ನಡಿಯಂತೆ**

ಪೊಳೆವ ಕೆಕ್ಕೆಯುಂ, ಬೆಳ್ದಿಂಗಳಂತೆ ಪಸರಿಪ ನಗೆಯುಂ........ಒಂದಱಿವೋಲೊಂದ ಲ್ಕಿಜವುಂ ಪುಟ್ಟುವುವು."

ಎಂದು ಮನೋಹರವಾಗಿ ವರ್ಣಿಸಿ ಮುನಿಗಳ ಚಿತ್ತವನ್ನು ಸೂರೆಗೊಳ್ಳುವ ಸೌಂದರ್ಯಾತಿಶಯವು ಆ ಕನ್ಯಾಮಣಿಯಲ್ಲಿದ್ದಿತೆಂಬುದನ್ನು ವಾಚಕರಿಗೆ ಸ್ಪಷ್ಟಗೊಳಿಸಿರುವನು.

ರಾಮನಿಗೆ ವನವಾಸವು ಪ್ರಾಪ್ತವಾಗಲು ಆತನು ಮನಗುಂದದೆ ಗೋದಾವರೀ ತೀರದಲ್ಲಿ—

"ಕಾಡೇ ನಾಡಾಗೆ, ಎಲೆವನೆಯರಮನೆಯಾಗೆ ಸಂತಸದೊಳಿರ್ದಂ. ಲಕ್ಷ್ಮಣನಣ್ಣನನಯ್ಯನಂತೆ ಸೀತೆಯಂ ಮಾತೆಯಂತೆ ಭಾವಿಸಿ ನಿಚ್ಚಂ ಸೇವಿಸುತಿರ್ಪಂ. ಸೀತೆಯುಂ ಪತಿಯೆ ಗತಿಯೆಂದು ಬಗೆದಾವಗಂ ಪೂಜಿಸುತಿರ್ಪಳ್........ರಾಘವನೋರೊರ್ಮೆ ಮಡದಿಗೆ ವನದಿರವಂ ಬಿತ್ತರಿಪಂ; ಕಣ್ಣಿದಿರೊಳ್ ಬರ್ಪ ಬಗೆಬಗೆಯ ಮಿಗಂಗಳಂ ಬಣ್ಣಿಪಂ; ಪಲವಣ್ಣದ ಪಕ್ಕಿಗಳಂ ತೋಱಿಪಂ; ಪೂವಳ್ಳಿಗಳ ಪೆಸರನೊರೆವಂ; ಸೀತೆ ಪತಿ ಬೇಂಟೆಯಾಡಿ ಬರೆ ಕೆಯ್ಯ ಬಿಲ್ಲಂ ಕೊಂಡಿಟ್ಟು ಆಸನಮನಿತ್ತು ಪಚರಿಸುವಳ್. ಮೇಣ್ ಲಕ್ಷ್ಮಣಂ ಪಣ್ಗಳಂ ತಿಱಿತಂದು ಇವರ್ಗಮರ್ಪಿಸಿ ತಾನಿರುಳೊಳವರ್ಗೆ ಕಾವಲಾಗಿರ್ಪಂ."

ಎಂದು ಚಿತ್ರಿಸಿ ಧೀರನಾದವನು ಎಂತಹ ಕಷ್ಟಗಳಲ್ಲಿಯೂ ಸುಖವಾಗಿ ಸಂತುಷ್ಟಿಯಿಂದಿರಬಹುದೆಂದು ಕವಿ ಚೆನ್ನಾಗಿ ಬೋಧಿಸಿರುವನು.

ಕವಿಯ ವರ್ಣನಾಶಕ್ತಿಯನ್ನೂ ಕಲಾಕೌಶಲವನ್ನೂ ಎಷ್ಟು ಬಣ್ಣಿಸಿದರೂ ಸ್ವಲ್ಪವೇ ಸರಿ. ಆದರೆ ಅತಿವಿಸ್ತರಕ್ಕೆ ಯತ್ನಿಸದೆ ಷೋಡಶ ಕಲೆಗಳಂತಿರುವ ಷೋಡಶಾಶ್ವಾಸಗಳಲ್ಲಿ ತನ್ನ ಇಷ್ಟದೇವತೆಯಾದ ಶ್ರೀರಾಮಚಂದ್ರನ ಲೀಲಾನಾಟಕವನ್ನು ತ್ವರೆಗಟ್ಟಿ "ಪದ್ಯಂ ವದ್ಯಂ, ಗದ್ಯಂ ಹೃದ್ಯಂ" ಎಂಬ ತನ್ನ ತತ್ವವನ್ನು ವ್ಯಕ್ತಗೊಳಿಸಿ ಕರ್ಣಾಟಕ ವಚನ ಸಾಹಿತ್ಯಕ್ಕೆ ಒಂದು ನವಪಥವನ್ನು ತೋರಿರುವನೆಂದು ಹೇಳಿ ಈ ಪ್ರಶಂಸೆಯನ್ನು ಇಲ್ಲಿಗೆ ಮುಗಿಸುವೆನು.

---

# ಶ್ರೀರಾಮಪಟ್ಟಾಭಿಷೇಕ

(ಮ|| ರಾ|| ಪಂಡಿತ ಮಹಾದೇವ ಪ್ರಭಾಕರ ಪೂಜಾರರವರಿಂದ)

**ಯಾತಾ ಯಾಂತಿ ಚ ಯಾತಾರಃ ಲೋಕಾಃ ಶೋಕಾಧಿಕಾ ಭುವಿ |**
**ಕಾವ್ಯಸಮ್ಬಂಧಿನೀ ಕೀರ್ತಿಃ ಸ್ಥಾಯಿನೀ ನಿರಪಾಯಿನೀ ||**

ಈ ಸಂಸಾರಸಾಗರದಲ್ಲಿ ಸುಖದುಃಖರೂಪವಾದ ಅಲೆಗಳ ಹೊಡೆತದಿಂದ ದಿಗ್‌ಭ್ರಮೆ ಹೊಂದಿ ಯಾವ ಉದ್ದೇಶ್ಯವನ್ನೂ ಕೊನೆಗಾಣಿಸದೆ ಲೋಕಯಾತ್ರೆಯನ್ನು ಮುಗಿಸುವವರೇ ಬಹುಜನರು. ವಕ್ತಾರನು ದಶಸಹಸ್ರಕ್ಕೊಬ್ಬನಾಗುವನೆಂದೂ, ದಾತಾರನು ಲಕ್ಷಕ್ಕಾದರೂ ಒಬ್ಬನಾಗುವನೋ ಇಲ್ಲವೋ ಎಂದೂ ಬಲ್ಲವರು ಹೇಳುವುದುಂಟು. ಆದರೆ ಕವಿಯು ಕೋಟಿಗೊಬ್ಬನೂ ಆಗುವುದಿಲ್ಲವೆಂದು ಹೇಳಬಹುದು. ಕವಿಯು ಲೋಕದಮೇಲೆ ಮಾಡುವ ಉಪಕಾರವು ಅಪಾರವಾದುದರಿಂದ ಆತನ ಕೀರ್ತಿಯು ಶಾಶ್ವತಿಕವಾಗಿ ಬೆಳಗಬೇಕಾಗಿದ್ದರೂ ಕೆಲವು ಕವಿಗಳಿಗೆ ಮಾತ್ರ ಈ ಯೋಗವು ವಿಲಂಬದಿಂದ ಬರುವುದುಂಟು. ಅದಕ್ಕೆ ಕವಿಕೃತಿಯ ನ್ಯೂನತೆಯು ಕಾರಣವಾಗಿರದೆ ಹಲವೆಡೆ ಜನತೆಯ ಅಸಹೃದಯತೆಯೇ ಕಾರಣವಾಗುತ್ತಿರುವುದು.

ಶ್ರೀರಾಮಪಟ್ಟಾಭಿಷೇಕವನ್ನು ಬರೆದ ಕವಿಯು ಕನ್ನಡಭಾಷೆಗೆ ಸ್ವಲ್ಪವೂ ಪ್ರಾಶಸ್ತ್ಯವಿಲ್ಲದ ಕಾಲದಲ್ಲಿ ಅದಕ್ಕೆ ಪ್ರಾಶಸ್ತ್ಯವನ್ನುಂಟುಮಾಡುವುದಕ್ಕೆ ಕಾಲೋಚಿತ ಗ್ರಂಥರಚನೆಯಿಂದ ಹೆಣಗಾಡಿದವರಲ್ಲಿ ಅಗ್ರಗಣ್ಯನು. ಈಚೆಗೆ ಕೆಲವು ವರ್ಷಗಳಿಂದ ಈ ಕವಿಗೂ, ಈತನ ಗ್ರಂಥಗಳಿಗೂ ಬೆಲೆ ಬಂದಿರುವುದು ಕನ್ನಡಿಗರಲ್ಲಿ ಸಹೃದಯತೆಯುಂಟಾದುದನ್ನು ವ್ಯಕ್ತಗೊಳಿಸುತ್ತಿರುವುದು.

ಈ ಕವಿಯ ಪರಿಚಯವನ್ನು ಪಾಠಕರು ಈ ಮೊದಲು ಮಾಡಿಕೊಂಡಿರುವರು. ಈ ಕಾಲದಲ್ಲಿ ಆತನ ಕಾವ್ಯಗಳ ಪರಾಮರ್ಶವು ಅಪ್ರಸ್ತುತ

ವಾಗಲಾರದೆಂದು ನಂಬಿ ಆತನ ಕೃತಿಗಳಲ್ಲೊಂದಾದ ಶ್ರೀರಾಮಪಟ್ಟಾಭಿಷೇಕವೆಂಬ ಕಾವ್ಯದ ಪರಿಚಯವನ್ನು ಸ್ವಲ್ಪಮಟ್ಟಿಗೆ ಮಾಡಿಕೊಡಬೇಕೆಂದು ಪ್ರಯತ್ನವು ಮಾಡಲ್ಪಟ್ಟಿದೆ.

ಕವಿಯು ಕಾವ್ಯವನ್ನು ಬರೆವುದಕ್ಕೆ ಮೊದಲುಮಾಡುವಾಗ ತನ್ನ ಕಾವ್ಯವು ಜನದ ಆದರಕ್ಕೆ ಪಾತ್ರವಾದೀತೋ ಇಲ್ಲವೋ, ಬಲ್ಲವರು ಅದನ್ನು ಮೆಚ್ಚುವರೋ ಇಲ್ಲವೋ ಎಂಬಿವೇ ಮೊದಲಾದ ಸಂದೇಹವು ತನ್ನನ್ನು ಬಾಧಿಸಿದರೂ ಆ ಸಂದೇಹವನ್ನು ಬದಿಗಿಡುವನು. ಹಲವುಜನ ಮಹಾಕವಿಗಳು ಕಾವ್ಯಗಳನ್ನು ಬರೆದಿರುವಾಗ ನಿನ್ನ ಕಾವ್ಯದಿಂದೇನು ಪ್ರಯೋಜನ? ಎಂಬಾಕ್ಷೇಪಣೆಗೆ ಆತನು ಅವಕಾಶವನ್ನೇ ಈಯನು. ತಿರುಗಿ—

**ಮೊದಲ ಕವೀಂದ್ರರೊಲ್ದೊರೆದ ಸತ್ಕೃತಿಸಂಚಯಮೀಧರಿತ್ರಿಯೊ |**
**ಳ್ಪುದಿದಿರೆ ನೋಡಿ ತುಷ್ಟಿವಡಲೊಲ್ಲದೆ ಕಬ್ಬಿಗರೇಕೆ ಕಬ್ಬಮಂ ||**
**ಗದಿಪರೊ ಬೇರೆನುತ್ತೆ ನುಡಿವಟ್ಕ್ಯಜಕಾರನವಂಗೆ ಪುತ್ರಸಂ |**
**ಪದದೊದವೇಕೆ ಬೇರೆ ಪರಪುತ್ರರನೀಕ್ಷಿಪ ತುಷ್ಟಿ ಸಾಲದೇ ||**

**(ರಾಜಶೇ. ವಿ. ೧-೩೫)**

ಈಮೇರೆಗೆ ಪ್ರಶ್ನೆಮಾಡುವನು.

ಕವಿಗಳೇನೋ ಹೀಗೆ ಕಾವ್ಯರಚನೆಗೆ ಮುಂದುವರಿವರಾದರೂ ಓದುವವರು ವಿವೇಚನೆಮಾಡಬೇಡವೇ? ಕಾವ್ಯನೆಂದು ಹೆಸರಿದ್ದಮಾತ್ರದಿಂದ ಯಾವುದೊಂದು ಓದುವುದಕ್ಕೆ ತಕ್ಕುದೇ ತಗದುದೇ ಎಂದು ನೋಡಬೇಕಲ್ಲವೇ? ಹೀಗೆ ನೋಡಹೋದರೆ 'ಶ್ರೀರಾಮಪಟ್ಟಾಭಿಷೇಕ' ಎಂಬ ಕಾವ್ಯವೊಂದಿರುವುದೆಂಬುದೇ ಹಲವರಿಗೆ ತಿಳಿಯದಿರುವಾಗ ಆ ಕಾವ್ಯವು ಓದಲು ತಕ್ಕುದೆಂದೂ ವಿಮರ್ಶಿಸಲು ಅರ್ಹವೆಂದೂ ನೀವು ಹೇಳುವುದು ಸರಿಯೇ? ಆದಿಕವಿಯೆನಿಸಿಕೊಂಡ ಪಂಪನ ಜೋಡುಕಾವ್ಯಗಳಿಗೆ ಇದೇನು ಜೋಡಿಯೇ? ಆರಾತೀಯ ಕವಿಗಳಾರೂ ಒಡೆಯಲಾರದ ವಾಗ್ದೇವಿಯ ಭಂಡಾರದ ಮುದ್ರೆಯನ್ನೇ ಒಡೆದು "ಫಣಿಪತಿಯ

ಫಣಾರತ್ನಮುಮಂ, ರನ್ನನ ಕೃತಿರತ್ನಮುಮಂ ಪರೀಕ್ಷಿಪಂಗೆಂಟೆರ್ದೆಯೇ'' ಎಂದು ತನ್ನ ಕಾವ್ಯದ ಪರೀಕ್ಷೆಯುಕೂಡ ಅಪಮಾನಕರವೆಂದು ಹೆಮ್ಮೆ ಬಡುವ ರನ್ನಕವಿಯ ಕೃತಿಗಿದು ಎಣೆಯೇ? ಅಗ್ಗಳನೇಮಿಚಂದ್ರರ ಸರಸ ಕಾವ್ಯಗಳಿಗಿದು ಸಾಟಿಯೇ? ಬೇಡ; ಅರ್ವಾಚೀನ ಕವಿಗಳಾದ ಷಡ ಕ್ಷರಿ ಲಕ್ಷ್ಮೀಶರ ಕಾವ್ಯಗಳನ್ನಾದರೂ ಇದು ಹೋಲುವುದೇ ಎಂದು ಹಲವರು ಸಂದೇಹಪಡಬಹುದು.

ಯಾವುದೊಂದು ಕಾವ್ಯದ ಯೋಗ್ಯತೆಯನ್ನು ನಿರ್ಣಯಿಸುವಾಗ ನಾವು ಅದು ಹುಟ್ಟಿದ ಕಾಲಪರಿಸ್ಥಿತಿಯನ್ನು ಮುಖ್ಯವಾಗಿ ನೋಡ ಬೇಕು; ಬಳಿಕ ಕಾವ್ಯದ ವಿಷಯ, ಕವಿತ್ವಶಕ್ತಿ, ರಸಾಲಂಕಾರಾದಿ ಆಸ್ವಾ ದ್ಯವಿಷಯಗಳು ಇವುಗಳನ್ನು ನೋಡಬೇಕು. ಹೀಗೆ ಕಾವ್ಯವನ್ನು ಪರೀ ಕ್ಷಿಸಿ ಯೋಗ್ಯತೆಯನ್ನು ಕಂಡುಹಿಡಿಯುವುದಾದರೆ 'ಪಟ್ಟಾಭಿಷೇಕ' ಕಾವ್ಯವು ಆದರಣೀಯವಾಗುವುದೆಂದು ಹೇಳಲು ಯಾವ ಸಂಶಯವೂ ಇಲ್ಲ. ಮೊದಲು ಈ ಕಾವ್ಯವು ಹುಟ್ಟಿದ ಕಾಲಪರಿಸ್ಥಿತಿಯನ್ನು ನೋಡುವ. ಈ ಕಾವ್ಯವು ಹುಟ್ಟಿ ಇನ್ನೂ ಅರ್ಧಶತಮಾನವುಕೂಡ ಆಗಿಲ್ಲ. ಸುಮಾರು ಐವತ್ತುವರ್ಷಗಳಾಚೆಯ ಕಾಲವು ಕನ್ನಡಭಾಷೆಗೆ ಕತ್ತಲೆ ಮುಸುಕಿದ ಕಾಲವು. ಎಲ್ಲಿ ನೋಡಿದರಲ್ಲಿ ರಾಜಕೀಯವಾದ ಇಂಗ್ಲಿಷ್‌ಭಾಷೆಗೆ ಪ್ರಾಧಾನ್ಯವು. ಕನ್ನಡವನ್ನು ಕೇಳುವವರೇ ಇಲ್ಲ. ಕನ್ನಡದಲ್ಲಿ ಉದ್ದಾಮ ಕವಿಗಳ ಮಹಾಕಾವ್ಯಗಳು ರಾಶಿರಾಶಿಯಾಗಿ ಇದ್ದರೂ ಓದುವವರೇ ಇಲ್ಲ. ಜೈಮಿನಿಭಾರತ, (ಗದುಗಿನ) ವೀರನಾರಾಯಣಭಾರತ, ರಾಜಶೇ ಖರವಿಲಾಸ ಇವುಗಳನ್ನು ತಿಳಿಯಲಿ ತಿಳಿಯದಿರಲಿ ಅಲ್ಲಲ್ಲಿ ಸಾವಿರಕ್ಕೊ ಬ್ಬರು, ಲಕ್ಷಕ್ಕೊಬ್ಬರು ಓದುವವರು ಕಂಡುಬರುತ್ತಿದ್ದರು. ಪ್ರಾಚೀನ ಕಾವ್ಯಗಳನ್ನು ಅಚ್ಚುಹಾಕಿ ಬಯಲಿಗೆ ತರುವ ಪ್ರಯತ್ನವು ಅದೇ ಆಗ ಆರಂಭವಾಗಿತ್ತು. ಅನ್ಯಭಾಷಾಭ್ಯಾಸಂಗಿಗಳಾದ ಜನರಿಗೆ ಹೊಸತರದ ಕಾವ್ಯಗಳು ಬೇಕು; ಕನ್ನಡದಲ್ಲಿ ಆ ತರದ ಕಾವ್ಯಗಳು ವಿರಲ. ಇಂತಹ

ಸಮಯದಲ್ಲಿ ಈ ಕವಿಯು ಕನ್ನಡಭಾಷೆಯಲ್ಲಿ ಜನರ ಉದಾಸೀನಭಾವವನ್ನು ಹೋಗಲಾಡಿಸಿ ಪ್ರಾಚೀನಮಹಾಕಾವ್ಯಗಳಲ್ಲಿ ಪ್ರವೇಶವಾಗುವಂತೆ ಮಾಡಬೇಕೆಂಬ ವಿಚಾರದಿಂದ ಹೊಸತರದ ಎರಡು ಗದ್ಯಕಾವ್ಯಗಳನ್ನೂ ಒಂದು ಪದ್ಯಕಾವ್ಯವನ್ನೂ ಬರೆದನು.* ಗದ್ಯಗ್ರಂಥರಚನೆಯಲ್ಲಿ ಈ ಕವಿಯು ಸಂಸ್ಕೃತಕ್ಕೆ ಬಾಣಭಟ್ಟನಾದಂತೆ ಕನ್ನಡಕ್ಕೆ 'ಗದ್ಯವಿಧಾತ' ನಾದನೆಂದು ಹೇಳಬಹುದು. ಕನ್ನಡಭಾಷೆಯ ಪದ್ಯಕಾವ್ಯಗಳಲ್ಲಿ ಕಥಾಪ್ರಧಾನವಾದ ವಸ್ತುಕ ಪ್ರಬಂಧಗಳೇ ಹೆಚ್ಚಿಗೆ ಇರುವುದನ್ನು ಕಂಡು ಈ ಕವಿಯು ವರ್ಣನಾಪ್ರಧಾನವಾದ ವರ್ಣಕಪ್ರಬಂಧವನ್ನು ರಚಿಸಬೇಕೆಂದು ಆ ಸಂಸ್ಕೃತದ 'ರಾಮಾಶ್ವಮೇಧ' ಪುರಾಣದ ಆರಂಭದ ಭಾಗವನ್ನು ಮೂಲವಾಗಿಟ್ಟುಕೊಂಡು ಈ 'ಪಟ್ಟಾಭಿಷೇಕ' ಪ್ರಬಂಧವನ್ನು ರಚಿಸಿದನು. ಈ ಭಾಗದಲ್ಲಿ ಕಥೆಯು ಬಹುಸ್ವಲ್ಪ; ಶ್ರೀರಾಮನು ರಾವಣವಧಾನಂತರದಲ್ಲಿ ಪುಷ್ಪಕ ವಿಮಾನದಮೇಲೆ ಕುಳಿತು ಲಂಕೆಯಿಂದ ಹೊರಟವನು ಭರತನನ್ನು ಕಾಣುವುದಕ್ಕಾಗಿ ಮೊದಲು ನಂದಿಗ್ರಾಮಕ್ಕೆ ಬಂದು ಬಳಿಕ ಆತನೊಡನೆ ಅಯೋಧ್ಯೆಗೆ ಬಂದು ಸುಮುಹೂರ್ತದಲ್ಲಿ ಪಟ್ಟಾಭಿಷಿಕ್ತನಾದನೆಂಬುದೇ ಇದರ ಕಥಾಸಾರವು. ನಮ್ಮವರು ಮೂಲವಿಲ್ಲದ ಕಟ್ಟುಕಬ್ಬಗಳನ್ನು ಮೆಚ್ಚರು; ಆದುದರಿಂದ ಮೂಲವನ್ನಿಟ್ಟುಕೊಳ್ಳಬೇಕಾಯಿತಲ್ಲದೆ ಕವಿಗೆ ಸ್ವತಂತ್ರಗ್ರಂಥರಚನಾಸಾಮರ್ಥ್ಯವಿರಲಿಲ್ಲವೆಂಬ ಆಕ್ಷೇಪಣೆಗೆ ಸರ್ವಥಾ ಅವಕಾಶವಿಲ್ಲವೆಂಬುದನ್ನು ಮುಂದೆ ತೋರಿಸುವ ಸುರಸಭಾಗಗಳಲ್ಲಿ ಕಾಣಬಹುದು.

ಪರಭಾಷೆಗೆ ಪ್ರಾಶಸ್ತ್ಯವು ಬಂದುದನ್ನೂ, ಕನ್ನಡ ಕಾವ್ಯಗಳನ್ನೋದುವ ಪಾರಂಪರ್ಯವು ಜನರಲ್ಲಿ ತಪ್ಪಿಹೋದುದರಿಂದ ಓದಿದರೂ ಕೂಡ ಅವು ತಿಳಿಯದಂತಾಗಿರುವುದನ್ನೂ, ಜೈನ ಪುರಾಣಗಳ ಇಲ್ಲವೆ ಹಿಂದುಪುರಾಣಗಳ ತೆರದಲ್ಲಿ ಕಥಾಪ್ರಧಾನವಾಗಿರುವ ಕಾವ್ಯಗಳಿಗಿಂತ

* ಶ್ರೀರಾಮಪಟ್ಟಾಭಿಷೇಕವೂ, ರಾಮಾಶ್ವಮೇಧವೂ, ಅದ್ಭುತರಾಮಾಯಣವೂ ಏಕಕರ್ತೃಕಗಳೆಂಬುದನ್ನು ಇಟ್ಟುಕೊಂಡು ಹೀಗೆ ಬರೆದಿದೆ.

ಭಾವಪ್ರಚುರ ವರ್ಣನಾಪ್ರಧಾನ ಕಾವ್ಯಗಳು ಹೊಸತರದ ಅಭಿರುಚಿಗೆ ಪಾತ್ರವಾಗುವುವೆಂಬುದನ್ನೂ ಕವಿಯು ಆಲೋಚಿಸಿದನು. ಇದಲ್ಲದೆ ತತ್ಕಾಲೀನ ಸಾಮಾನ್ಯ ಜನದ ಅಭಿರುಚಿಯನ್ನು ಅನುಲಕ್ಷಿಸುವುದೂ ಕವಿಗೆ ಆವಶ್ಯಕವಾಯಿತು. ಸಾಮಾನ್ಯಜನವು ಶಬ್ದಚಿತ್ರತೆಯನ್ನು ಹೆಚ್ಚಿಗೆ ಮೆಚ್ಚುವುದು. ಆದುದರಿಂದ ಶಬ್ದಾಲಂಕಾರಗಳನ್ನು ದೂರಕ್ಕಿರಿಸುವುದು ಕವಿಗೆ ಅಭಿಮತವಾಗಲಿಲ್ಲ.

ಎಲ್ಲ ಭಾಷೆಗಳಲ್ಲಿ ಪ್ರಾಚೀನ (ಆದಿ)ಕವಿಗಳ ಕಾವ್ಯಗಳು ರಸಭಾವಪ್ರಧಾನವಾಗಿರುವುವು. ಅವುಗಳಲ್ಲಿ ಕೃತ್ರಿಮವಾದ ಶಬ್ದಚಮತ್ಕಾರಕ್ಕೆ ಪ್ರಾಧಾನ್ಯವು ಕಂಡುಬರುವುದಿಲ್ಲ. ಶಬ್ದಾಲಂಕಾರಗಳು ರಸಭಾವಗಳಿಗಿಂತಲೂ ಅರ್ಥಾಲಂಕಾರಗಳಿಗಿಂತಲೂ ಕೆಳಗಿನ ತರಗತಿಯವೆಂಬ ವಿಷಯದಲ್ಲಿ ಸಂಶಯವಿಲ್ಲ. ಏಕೆಂದರೆ, ಕಾವ್ಯಫಲವು ಆನಂದಾನುಭವವೇ ಎಂದಿರುವಾಗ ರಸಭಾವಗಳಿಂದ ಸಹೃದಯರಿಗಾಗುವ ಆನಂದದ ಪರಿಮಿತಿಯನ್ನೂ ಅದು ನಿಲ್ಲುವ (ಸ್ಥಾಯಿತ್ವದ) ಕಾಲದ ಅವಧಿಯನ್ನೂ ನೋಡಿದರೆ ಅರ್ಥಾಲಂಕಾರಗಳಿಂದ ಆಗುವ ಆನಂದವು ಕೂಡ ಅಲ್ಪಪ್ರಮಾಣವಾದುದೆಂದೂ ಅದು ನಿಲ್ಲುವ ಕಾಲಾವಧಿಯೂ ಅಲ್ಪವೆಂದೂ ಸಹಜವಾಗಿ ಕಂಡುಬರುವುದು. ಹೀಗಿರುವಾಗ ಕರ್ಣಾನಂದವನ್ನು ಮಾತ್ರ ಸ್ವಲ್ಪ ಕಾಲ ಉಂಟುಮಾಡುವ ಶಬ್ದಾಲಂಕಾರಗಳಿಂದ ಕಾವ್ಯಗಳಿಗೆ ಪ್ರಾಶಸ್ತ್ಯವು ಬರುವುದಿಲ್ಲವೆಂಬುದು ಸಹಜವಾಗಿದೆ. ಆದರೂ ಮಧ್ಯಕಾಲೀನ ಸಂಸ್ಕೃತ ಕಾವ್ಯ ವಾಙ್ಮಯದಲ್ಲಿಯೂ, ಅದನ್ನೇ ಮಾದರಿಯಾಗಿಟ್ಟುಕೊಂಡು ಹೊರಟ ಕನ್ನಡ ಕಾವ್ಯವಾಙ್ಮಯದಲ್ಲಿಯೂ ಶ್ಲೇಷಮೂಲಕ-ಅಲಂಕಾರಗಳನ್ನು ಸೇರಿಸುವುದು ವಾಡಿಕೆಯಾಯಿತು. ಮತ್ತು ಜನರಲ್ಲಿಯೂ ಅಂತಹ ಅಲಂಕಾರಗಳಿಂದ ಕೃತ್ರಿಮವಾದ, ಅಲ್ಪಕಾಲಾವಧಿಕವಾದ ಆನಂದದಿಂದಲೇ ತೃಪ್ತಿಯನ್ನು ಹೊಂದುವ ಒಲವು ಉಂಟಾಯಿತು.* “ ಭಿನ್ನ

* ರಸಂ ರಸಜ್ಞಾಃ ಕಲಯಂತಿ ಕಾವ್ಯೇ ಪರೇ ಪದಾರ್ಥಾನಪರೇ ಪದಾನಿ |
ವಸ್ತ್ರಂ ಕುವಿಂದಾ ವಣಿಜೋ ವಿಭೂಷಾಂ ರೂಪಂ ಯುವಾನಶ್ಚ ಯಥಾ ಯುವತ್ಯಾಂ ||

ರುಚಿರ್ಹಿ ಲೋಕಃ''. ಈ ಒಲವು ಬಳೆಬಳೆದು ಕೊನೆಗೆ ಕಾವ್ಯಗಳಲ್ಲಿ ಗೂಢಾರ್ಥಪದ್ಯಗಳು, ಕೂಟಶ್ಲೋಕಗಳು, ಯಮಕಗಳು ಸೇರತೊಡಗಿದುವು ಕನ್ನಡಿಗರು ಪ್ರಾಸಾನುಪ್ರಾಸಗಳನ್ನು ಹೆಚ್ಚಾಗಿ ಮೆಚ್ಚುವರು. ಕಾವ್ಯಭಾಷೆಗೆ ಅವು ಆವಶ್ಯಕವೆಂದು ಅವರು ಭಾವಿಸುವರು. ಪ್ರಾಸಾನುಪ್ರಾಸಗಳು ವಾಗ್ದೇವಿಯ ಮಾಂಗಲ್ಯದ ತೊಡವೆಂದು ಅವರ ಭಾವನೆ. ಇನ್ನು ರಮಣೀಯಾರ್ಥವನ್ನು ಪ್ರತಿಪಾದಿಸುವಾಗ ಶಬ್ದಚಮತ್ಕಾರವೂ ಸೇರಿದರೆ ಸುಗಂಧಪುಷ್ಪಕ್ಕೆ ವರ್ಣವೈಚಿತ್ರ್ಯವೂ ಸೇರಿದಂತೆ ಮೋಹಕವಾಗುವುದೆಂಬುದನ್ನು ಎಲ್ಲರೂ ಒಪ್ಪುವರು. ಆದರೆ ನೀರಸವಾದ ರಚನೆಯು ಎಷ್ಟು ಶಬ್ದಚಮತ್ಕಾರವುಳ್ಳದಾದರೂ ವರ್ಣೋಜ್ವಲತೆಯುಳ್ಳ ನಿರ್ಗಂಧಕಿಂಶುಕಕುಸುಮದಂತೆ ಸೊಗಸನ್ನುಂಟುಮಾಡಲಾರದು. ಆದರೂ ಕನ್ನಡಿಗರು ಕೇವಲ ಕರ್ಣಾನಂದವನ್ನು ಕೊಡುವ ಅನುಪ್ರಾಸವನ್ನು ಪ್ರೀತಿಸಿದುದು ಮಾತ್ರವಲ್ಲದೆ ೨೦, ೨೫ ಅಕ್ಷರಗಳ ಅಂತರದಿಂದ ಪದ್ಯಗಳ ಪ್ರತಿಪಾದದ ದ್ವಿತೀಯಾಕ್ಷರ (ಪ್ರಾಸ)ಸಾಮ್ಯದಿಂದಲೂ ಕರ್ಣಾನಂದವಾಗುವುದೆಂದು ಹೇಳುವಷ್ಟು ಮಟ್ಟಿಗೆ ಶಬ್ದಚಮತ್ಕಾರದಲ್ಲಿ ತಮಗಿರುವ ಆಗ್ರಹದ ಒಲವನ್ನು ತೋರಿಸುತ್ತ ಬಂದಿರುವರು.

ಶಬ್ದಾಲಂಕಾರಗಳಿಗೆ ಪ್ರಾಧಾನ್ಯವು ಬಂದಕಾಲವು ಜನಾಂಗದ ಬುದ್ಧಿಮಾಂದ್ಯದ—ಪ್ರತಿಭಾಶಕ್ತಿಯ ಹ್ರಾಸದ—ಕಾಲವೆಂದು ಬಲ್ಲವರು ಹೇಳುವುದುಂಟು. ಪ್ರಾಚೀನಕಾವ್ಯಗಳಲ್ಲಿ ಶಬ್ದಚಮತ್ಕಾರಪ್ರಧಾನರಚನೆಯು ಪ್ರಾಯಃ ಕಂಡುಬರುವುದಿಲ್ಲವಾದರೂ ಮುಖ್ಯಪ್ರಾಸವು ಕನ್ನಡ ಕವಿತೆಯನ್ನು ಆದಿಕಾಲದಿಂದಲೂ ಅಂಟಿಕೊಂಡಿದೆ. ಶಬ್ದ ಚಮತ್ಕಾರ ಪ್ರಾಧಾನ್ಯವು ಬುದ್ಧಿಮಾಂದ್ಯಸೂಚಕವಾಗಿರಲಿ, ಇಲ್ಲವೆ ಅದು ಕವಿಯ ರಚನಾಕೌಶಲದ್ಯೋತಕವಾಗಿರಲಿ ಅದನ್ನು ಇಲ್ಲಿ ಚರ್ಚಿಸುವುದು ಬೇಡ ; ಆದರೆ ಜನರಲ್ಲಿ ಆಕಡೆಗೆ ಒಲವು ಇದ್ದುದರಿಂದ ಪ್ರಕೃತಕವಿಯು ಶಬ್ದ ಚಮತ್ಕಾರದ ಕಡೆಗೂ ಗಮನಕೊಡಬೇಕಾಗಿ ಬಂತೆಂಬುದನ್ನು ಮಾತ್ರ

ಇಲ್ಲಿ ಹೇಳಬೇಕಾಗಿದೆ. ಇನ್ನು ಭಾರತೀಯರು ಇಹದಲ್ಲಿಯೂ ಪರವನ್ನು ನೋಡುವವರು ; ಪ್ರಪಂಚದಲ್ಲಿಯೂ ಪಾರಮಾರ್ಥವನ್ನು ಸಾಧಿಸುವವರು; ಅವರಿಗೆ ಆಮುಷ್ಮಿಕದ ಮುಂದೆ ಐಹಿಕವು ಎಷ್ಟು ಸೊಗಸಾಗಿದ್ದರೂ ಪ್ರಿಯವಾಗದು. 'ಭಕ್ತಿ ವೈರಾಗ್ಯಸತ್ಕಥೆ' (ಪೀ. ಸಂ. ೮) 'ಗಳನ್ನು ಅವರು ಬಯಸುವರು. ಈ ಎಲ್ಲ ವಿಚಾರಗಳನ್ನಿಟ್ಟುಕೊಂಡು ಕವಿಯು–

**ಯತಿಗಣಾಶ್ರಯಮೆನಿಸಿ ಶಬ್ದಾರ್ಥಭಾವದಿಂ**
**ದತಿರಸಾಲಂಕಾರವೊಪ್ಪೆ ಜೀವಾಕ್ಷರಸು**
**ಗತಿಗಿರ್ಕೆಯಾಗಿ ನವಪದಪುಂಜರಂಜಿತಮನೋಜ್ಞಮೆನೆ ಕೈವಲ್ಯದ ||**
**ನುತಸುಕೃತಪದ್ಯಾವಳಿಯೆ ಇದೆನಿಸುತ್ತ ವಸು**
**ಮತಿಗೆ ವಿಬುಧರ್ಕಳಿಂ ಸಂಭಾವ್ಯಮಾಗೆ ಭಾ**
**ರತಿಯೊಲಿದಜಸ್ರಮೆನಗಿಷ್ಟಾರ್ಥವಿತ್ತು ತಾನಿರ್ಕೆ ಮಜ್ಜಿಹ್ವಾಗ್ರದಿ ||**
**ಪೀ. ಸಂ. ೬.**

ಎಂದು ತನ್ನ ಕವಿತೆಯ ಸ್ವರೂಪವನ್ನು ಹೇಳಿರುವನು.

ಈ ಪದ್ಯದಲ್ಲಿ ಅರ್ಥ, ಭಾವ, ರಸಗಳ ಜತೆಗೆ ಶಬ್ದ, ಜೀವಾಕ್ಷರ (ಪ್ರಾಸ) ಇವುಗಳೂ ತನ್ನ ಕವಿತೆಯಲ್ಲಿ ಇಂಬುವಡೆದಿರುವುವೆಂದು ಹೇಳು ವನು ಅನುಪ್ರಾಸಯಮಕಾದಿ ಶಬ್ದಾಲಂಕಾರಗಳು ಇದ್ದ ಕೂಡಲೆ ಅವು ಕವಿಯ ಇಲ್ಲವೆ ಜನಾಂಗದ ಬುದ್ಧಿಮಾಂದ್ಯವನ್ನೇ ಸೂಚಿಸುವುದೆಂದು ಹೇಗೆ ಹೇಳುವುದು ? ಏಕೆಂದರೆ ಸಂಸ್ಕೃತಕಾವ್ಯ ವಾಙ್ಮಯವು ಉತ್ಕ ರ್ಷಸ್ಥಿತಿಯಲ್ಲಿದ್ದ ಕಾಲಿದಾಸ ಭವಭೂತಿ ಮೊದಲಾದವರ ಕಾಲದಲ್ಲಿಯೂ ಕೂಡ ಶಬ್ದಾಲಂಕಾರಗಳ ಸಮಾವೇಶವು ಅವರ ಕಾವ್ಯಗಳಲ್ಲಿ ಇರಲಿಲ್ಲ ವೆಂದು ಹೇಳುವಂತಿಲ್ಲ. ಕಾಲಿದಾಸನ ರಘುವಂಶಕಾವ್ಯದ ಒಂದು ಸರ್ಗವೇ (೯) ಯಮಕವುಳ್ಳದಾಗಿದೆ. ಹಲವು ಜನ ಮಹಾಕವಿಗಳು ತಮ್ಮ ಕಾವ್ಯಗಳ ಒಂದೊಂದು ಸರ್ಗದಲ್ಲಿ ಖಡ್ಗ ಗೋಮೂತ್ರ ಮುರಜ ಮೊದ ಲಾದ ಶಬ್ದಚಮತ್ಕಾರದ ಬಂಧಗಳನ್ನು ತೋರಿಸಿರುವರು. ಹೀಗೆ ಶಬ್ದ ಚಮತ್ಕಾರವು ಶಿಷ್ಟಸಮ್ಮತವಾದುದರಿಂದ ಈ ಪಟ್ಟಾಭಿಷೇಕ ಕಾವ್ಯದಲ್ಲಿ

ಮಂದಾಧಿಕಾರಿರಂಜನಾರ್ಥವಾಗಿ ಕೇವಲ ಶಬ್ದಚಮತ್ಕಾರವುಳ್ಳ ಪದ್ಯಗಳೂ, ಕವಿಯ ರಚನಾಪ್ರೌಢಿಯನ್ನು ವ್ಯಕ್ತಗೊಳಿಸುವ ಅರ್ಥಸ್ವಾರಸ್ಯಸಹಿತ ಶಬ್ದಚಮತ್ಕಾರವುಳ್ಳ ಪದ್ಯಗಳೂ ಕಂಡುಬರುವುವು.

ಕನ್ನಡಕವಿಗಳು ಕಾವ್ಯಾರಂಭದಲ್ಲಿ ಪೀಠಿಕಾಸಂಧಿಯೊಂದನ್ನು ಬೇರೆಯಾಗಿ ಬರೆವ ವಾಡಿಕೆಯುಂಟು. ಅದರಲ್ಲಿ ತಮ್ಮ ಬಿರುದುಗಳನ್ನು ಹೇಳಿಕೊಳ್ಳುವುದು ಸಜ್ಜನಸ್ತುತಿ ದುರ್ಜನದೂಷಣೆ ಮೊದಲಾದ ವಿಷಯಗಳು ಸಾಮಾನ್ಯವಾಗಿ ಬರುವುವು. ಆದಿಕವಿ ಪಂಪನನ್ನು ಮಾದರಿಯಾಗಿಟ್ಟುಕೊಂಡ ಕನ್ನಡಕವಿಗಳ ಈ ದಾರಿಯನ್ನು ತಪ್ಪಿಸುವಂತೆ 'ಪಟ್ಟಾಭಿಷೇಕ' ಕಾವ್ಯದ ಪೀಠಿಕಾಸಂಧಿಯ ರೀತಿಯು ಬೇರೆಯಾಗಿರುವುದು. "ಗೀರ್ವಾಣಕವಿಗಳಂತೆ ಕಷ್ಟಸಾಧ್ಯವಹ ಕೃತಿಗೆ ಕೈಗೊಟ್ಟಳೆಂದೆನ್ನ ನಗೆಗೀಡುಮಾಡದೆ ಮನ್ನಿಪುದು" ಎಂದು ಕವಿಯು ತನ್ನ ಅಸಮರ್ಥತೆಯನ್ನು ವ್ಯಕ್ತಗೊಳಿಸಿರುವುದು ಕಂಡುಬರುವುದು. ಮತ್ತು—

ಅಂಬಿಗನ ಪಱವಾತನೋದಿದೊಡೆ ಬಱಿಕ ಬಿಯ
ದಂ ಬರೆದ ಶಬ್ದಮಂ ಪಠಿಸಿದೊಡೆ ಬಕರ್ುವೆ ಕು
ಱುಂಬನ ಬಯಲ್ನುಡಿಯನಱಿತೊಡೆ ಸುಪಾಂಡಿತ್ಯವಿಂತೆನಲ್ಕೆನ್ನ ಕಾವ್ಯಂ ||
ಇಂಬಾಗದು (ಪೀ. ಸಂ. ೫)

ಅಂಬಿಗನ (ವ್ಯಾಸನ) ಪಳವಾತನ್ನು (ಭಾರತವನ್ನು) ಪಠಿಸಿದರೂ, ಬಿಯದನ (ವಾಲ್ಮೀಕಿಯ) ಕಾವ್ಯ (ರಾಮಾಯಣ) ವನ್ನು ಓದಿದರೂ, ಕುರುಂಬನ (ಕಾಲಿದಾಸನ) ಬಯಲುನುಡಿಯನ್ನು (ಕಾವ್ಯವನ್ನು) ಭಾವಿಸಿದರೂ ಸುಪಾಂಡಿತ್ಯವು ಬಾರದಿರುವಾಗ ತನ್ನ ಕಾವ್ಯವು ಒಳ್ಳೆಯದಾಗದೆಂದು ಒಪ್ಪಿ ಸ್ವಾಹಂಕಾರಖಂಡನೆಮಾಡಿಕೊಂಡುದು ಕಂಡುಬರುವುದು.

ಕನ್ನಡಭಾಷೆಯು ಬಿರುಸಾದುದೆಂದು ಕೆಲವರು, ಕನ್ನಡಕವಿತೆಗಳಲ್ಲಿ ಅಪರಿಚಿತಶಬ್ದಗಳು ಬರುವುವೆಂದು ಕೆಲವರು, ಹೀಗೆ ಹಲವರು ಹಲವು ವಿಧವಾಗಿ ಆಕ್ಷೇಪಿಸುವರು. ಕನ್ನಡಭಾಷೆಯು ಬಿರುಸೆನಿಸುವುದು ಕನ್ನಡಭಾಷೆಯ ದೋಷವೋ ನಿರಂತರವಾಗಿ ಕರ್ಣಕುಹರದಲ್ಲಿ ಅದು ಸೇರುವು

ದಕ್ಕೆ ಅವಕಾಶಕೊಟ್ಟಿಲ್ಲವೆಂಬುದು ತಮ್ಮ ದೋಷವೋ ಎಂಬುದನ್ನು ಅವರು ಆಲೋಚಿಸುವುದಿಲ್ಲ. ಅಪರಿಚಿತಶಬ್ದಗಳೆಂದು ಹೇಳುವಾಗ ಅಪರಿಚಿತವಾಗಿರುವುದು ಶಬ್ದದೋಷವೋ ಅವುಗಳ ಪರಿಚಯಮಾಡಿಕೊಳ್ಳದಿರುವುದು ತಮ್ಮ ದೋಷವೋ ಎಂಬುದನ್ನು ಅವರು ನೋಡುವುದಿಲ್ಲ. ಇವೇ ಮೊದಲಾದ ಆಕ್ಷೇಪಣೆಗಳಿಗೆ ಉತ್ತರಕೊಡುವವನಾಗಿ ಕವಿಯು ತನ್ನ ಕನ್ನಡಕವಿತೆಯ ಸ್ವರೂಪವನ್ನು ಹೀಗೆ ಹೇಳುವನು :—

**ಮೃದುಪದಾನ್ವಿತೆ ಮಂದಗತಿ ಮಂಜುಭಾಷೆ ಭಾ**
**ಸ್ವದಮಲಿನಸಂಧಿಶೋಭಿತೆ ವರ್ಣಯುಕ್ತೆ ಷ**
**ಟ್ಪದವೇಣಿ ನವರಸಭರಿತ ಸಚ್ಚರಿತೆ ಸುನಯನಾತಿಕರಿನಸ್ವಭಾವೆ ॥**
**(ಪೀ. ಸಂ. ೭)**

ನಾಂದೀಸಂಧಿಯೂ, ಪೀಠಿಕಾಸಂಧಿಯೂ ಮುಗಿದ ತರುವಾಯ ಮೂರನೆಯ ಸಂಧಿಯಲ್ಲಿ ಕಾವ್ಯದ ಮುಖ್ಯಭಾಗವು ಆರಂಭವಾಗುವುದು. ಒಟ್ಟಿಗೆ ಐದುಸಂಧಿಗಳಲ್ಲಿ ಸೇರಿ ಸುಮಾರು ೨೫೦ ಪದ್ಯಗಳು. ಈ ಕಾವ್ಯದ ಕಥೆಗೆ ಸಂಸ್ಕೃತ ರಾಮಾಶ್ವಮೇಧದ ಆರಂಭದ ನಾಲ್ಕು ಅಧ್ಯಾಯಗಳೇ ಮೂಲವು. ಕಥೆಯನ್ನು ಆದಿಶೇಷನು ವಾತ್ಸ್ಯಾಯನಮುನಿಗೆ ನಿರೂಪಿಸುವನು. ಇದೊಂದು ಖಂಡಕಾವ್ಯವು.* ಆದರೂ ಮಹಾಕಾವ್ಯದಂತೆ ಕೆಲವು ವರ್ಣನೆಗಳನ್ನೂ ರಸಭಾವಗಳನ್ನೂ ಒಳಗೊಂಡಿರುವುದು.

ಈ ಕಾವ್ಯದಲ್ಲಿ ಒಂದೇ ಮುಖ್ಯವಾದ ರಸವಿಲ್ಲ. ಕಥಾವಸ್ತುವು ಇತಿಹಾಸರೂಪವಾಗಿರುವುದರಿಂದ† ಆರಂಭದಿಂದ ಕೊನೆಯವರೆಗೆ ಅನುಸ್ಯೂತವಾದ ಒಂದು ರಸವು ಇರುವುದಕ್ಕೆ ಅವಕಾಶವಿಲ್ಲ. ಭರತನಲ್ಲಿರುವ ಅನ್ಯಾದೃಶವಾದ ಭ್ರಾತೃಭಕ್ತಿ, ಪ್ರಜೆಗಳು ದೇವತೆಗಳು ಮುನಿಗಳು

---

*** ಖಂಡಕಾವ್ಯಂ ಭವೇತ್ಕಾವ್ಯಸ್ಯೈಕದೇಶಾನುಸಾರಿ ಚ ॥ ಯಥಾ ಮೇಘದೂತಾದಿ. (ಸಾ. ದ. ೫೬೬).**

**† ರಾಮಚಂದ್ರಮನ ಪಟ್ಟದ ವಿಶೇಷದಿತಿಹಾಸಮಂ ವಾತ್ಸ್ಯಾಯನಂಗೊರೆದಂ (ಸಂ. ೩. ಸೂಚನೆ)**

**ಕಥಾಸುಧೆಯನೀಂಟುಗೆ ಭಕ್ತವೃಂದಂ (ಪೀ. ಸಂ. ೧೦)**

ಇವರಲ್ಲಿರುವ ಶ್ರೀರಾಮಭಕ್ತಿ ಮೊದಲಾದ ಭಾವಗಳೇ ಮುಖ್ಯವಾಗಿ ಆಸ್ವಾದ್ಯವಾಗಿರುವುವು. ಕವಿಯು ತನ್ನ ಕಾವ್ಯದಲ್ಲಿ ಭಕ್ತಿಭಾವಕ್ಕೇ ಪ್ರಾಧಾನ್ಯವಿರುವುದನ್ನು "ರಾಮನಾಮಾಮೃತದ ಬಿಂದಿಗೆಯಿದೆನೆ" (ಪೀ. ಸಂ. ೬) "ಭಕ್ತಿವೈರಾಗ್ಯ ಸತ್ಕಥೆಗಳೆಸೆಯೆ" (ಪೀ. ಸಂ. ೮) ಎಂದು ಕಂಠೋಕ್ತವಾಗಿ ಹೇಳಿರುವನು. ಅಲ್ಲಲ್ಲಿ ಅಂಗಭೂತವಾಗಿ ರಸಗಳು ಬಂದಿವೆ. ವಾತ್ಸಲ್ಯರಸವು ಕೌಸಲ್ಯಾರಾಮರ ದರ್ಶನಾವಸರದಲ್ಲಿ ಅನುಭೂತವಾಗುವುದು. ಆದರೂ ಇದು *ಭಾವಪ್ರಧಾನಕಾವ್ಯವು. ಇದರೊಳಗಿನ ರಸಭಾವಗಳು, ವರ್ಣನಾಚಮತ್ಕಾರಗಳು, ಶಬ್ದಸೌಂದರ್ಯ ಮೊದಲಾದುವುಗಳನ್ನು ಒಳಗೊಂಡ ಕೆಲವು ಸ್ಥಲಗಳನ್ನು ಮುಂದೆ ಅವತರಿಸುವೆವು.

ನಂದಿಗ್ರಾಮದಲ್ಲಿ ಈರೇಳುವರುಷ ಪಾದುಕೆಯ ಸೇವೆಯಲ್ಲಿ ರಾಮಾಗಮನ ನಿರೀಕ್ಷೆಯಿಂದ ಇದ್ದ ಭರತನು ರಾಘವನ ಪೊತ್ತನೀಕ್ಷಿಸಿ ಕಾಣದಿರಲು ಆಲೋಚಿಸುತ್ತಾನೆ†—

ತಪ್ಪಲೊಳ್ ಕಲ್ಲುಱುಳೆ ಗಿಱಿಯುಱುಳೆ ತೆಱೆ ಪೊಱಳೆ
ತೆಪ್ಪ ಬಾನೊಳ್ ಪಾಱೆ ಕಡಲಾಱೆ ನಿಲಲಾಱೆ
ಬಪ್ಪೆನೀಪೊಱ್ತಿಗೆಲೆ ಭರತ ನೆಲೆಯಱಿತು ಸಲೆ ಸಂತಸದೆ ಪೋಪುದೆಂದು ||
ಒಪ್ಪುವಂತೆನ್ನ ಕೈದಟ್ಟಿ ಪುರಕಟ್ಟಿ ತೆರ
ಳಿಪ್ಪ ರಾವಂ ಬಾರದಿಹ ಕಾರಣಂ ತೋಱ
ದಿಪ್ಪುದಿನ್ನುಂ ಕಾಣೆ ತನ್ನಾಣೆಗಿನ್ನೂಣೆಯಂ ತರ್ಪನೆಂತೊ ತಿಳಿಯೆಂ ||
(೩. ೪೬)

ಅನುಪ್ರಾಸದಿಂದ ಬಂದಿರುವ ಸೌಂದರ್ಯವನ್ನೂ ಇಲ್ಲಿ ನೋಡಬಹುದು.

ಇದೇ ಮೊದಲಾದ ೧೫-೧೬ ಪದ್ಯಗಳಲ್ಲಿ ಭರತನಲ್ಲಿರುವ ಭ್ರಾತೃವಿಷಯಕವಾದ ಸ್ಥಾಯಿಯಾದ ಭಕ್ತಿಭಾವವೂ, ಅದನ್ನು ಪುಷ್ಟಿಗೊಳಿ

* ಸಂಚಾರಿಣಃ ಪ್ರಧಾನಾನಿ ದೇವಾದಿವಿಷಯಾ ರತಿಃ |
ಉದ್ಬುದ್ಧಮಾತ್ರಃ ಸ್ಥಾಯೀ ಚ ಭಾವ ಇತ್ಯಭಿಧೀಯತೇ || ಸಾ. ದ.

† ರಾಮಭಕ್ತಿರೂಪವಾದ ಭಾವದ ಚಿಂತಾಖ್ಯ ವ್ಯಭಿಚಾರಿಭಾವವು.

ಸುವ ತದನುಗುಣವಾದ ದರ್ಶನೌತ್ಸುಕ್ಯ, ಚಿಂತೆ, ಶೋಕ ಮೊದಲಾದ ವ್ಯಭಿಚಾರಿಭಾವಗಳೂ ಸಹೃದಯಪರಿತೋಷವನ್ನುಂಟುಮಾಡುವುವು.

ಸೀತಾದೇವಿಯನ್ನು ಕುರಿತು—

ತಂಬೆಲರ್ ಸೋಂಕೆ ಬಳ್ಕುವ ಲತಾಂಗವುದಿಱಿಸಿ
ಲಂ ಬೇಱ್ ತಡೆದುಂಟೆ ಬಗ್ಗದೊವಲಂ ಕಂಡೊ
ಡಂ ಬೆರ್ಚುವೆರಳೆಗಣ್ ಪರಿವ ಪೆರ್ಬುಲಿನೋಟವುಂ ಸಹಿಸಲುಂಟೆ ವನದಿ |
ತುಂಬಿಯುಲಿಗಳ್ಕುವತಸೀಕುಸುಮಕರ್ಣವೆಂ
ತಿಂಬಕ್ಕು ಸಿಂಹಗರ್ಜನೆಗೆ ಬಿದುಗಲ್ಲೆಲದೊ
ಳುಂ ಬಾಡುತಿರ್ಪ ತಳಿರಡಿ ನಡೆಯೆ ಕಾಪಥದೊಳೆಂತಪ್ಪುದವನಿಸುತೆಗೆ ||

(೧. ೫೧)

ಇಲ್ಲಿ ಭರತಗತ ಸೀತಾಲಂಬನಕವಾದ ಭಕ್ತಿಭಾವವೂ, ಅದನ್ನು ಪುಷ್ಟಿಗೊಳಿಸುವ ಚಿಂತಾರೂಪ ವ್ಯಭಿಚಾರಿಭಾವವೂ ಹೃದಯಂಗಮವಾಗಿವೆ. ಇಲ್ಲಿ ಅರ್ಥಸ್ವಾರಸ್ಯವು ಬಹು ಚಮತ್ಕಾರವಾಗಿದೆ. ಲತಾಂಗ, ಎರಳೆಗಣ್ಣು ಮೊದಲಾದ ಉಪಮೆಗಳು ಎಲರಿಗೆ ಬಳ್ಕುವುದು ಬಗ್ಗದೊವಲಿಗೆ ಬೆದರುವುದು ಮೊದಲಾದ ಅರ್ಥಗಳ ಪುಷ್ಟಿಗೆ ಎಷ್ಟು ಔಚಿತ್ಯವನ್ನು ತಂದುಕೊಟ್ಟಿವೆಯೆಂಬುದನ್ನು ನೋಡಬಹುದು.

ಮಾರುತಿಯು ಮುಂದೆ ಬಂದು ಹಿಂದೆ ಶ್ರೀರಾಮನು ಬರುವನೆಂಬುದನ್ನು ಹೇಳಿದೊಡನೆ ನಿರಾಶನಾಗಿದ್ದ ಭರತನಿಗೆ ಉಂಟಾದ ಸಂಭ್ರಮಭಾವವನ್ನು ನೋಡಿರಿ :—

ಆಟವಿಯಿಂ ಪೊರಟಿಹರೆ ಬಹರೆ ದಾರಿಯೊಳೇಂ ಪೊ
ರಟುದಿಲ್ಲವೇ ರಾಮನೊಳ್ಳಿತಾಗಿಹನೆ ಪ
ರ್ಯಟನದಿಂ ಬಾಡಿಹರೆ ಬರುತ್ತುವಿರ್ಪರೆ ಬಹರೆ ಬಂದರೇ ಪೇಱೆಂದನು ||

(೪. ೧)

ಪಡೆದನಂ ಕಂಡಂತೆ ಭರತನೂ, ಒಂದೂರ್ಗೆ ಪೋದೊಡೆಯನಂ ಕಂಡಂತೆ ನೀ ಯರೂ ಅಲರುವೊಡೆಯನಂ ಕಂಡಂತೆ ದ್ವಿಜರೂ ದಿಗ್ವಿಜಯಮಂ ಮಾಡಿ ಬರ್ಪ ಅರಸನಂ ಕಂಡಂತೆ ಮಿಕ್ಕುಳಿದವರೂ ಕಂಡರೂ

(ಸಂ. ೪. ಪ. ೬೫ ಉಲ್ಲೇಖಾಲಂಕಾರ) "ಪಿಂದೆ ಬಲ್ನೋಂಪಿಯೆಸಗಿ ಮುದ್ದುಕಂದನಂ ಪಡೆದೆ ಗಡ! ಈ ವ್ಯೆಯೊಳೇಂ ಪಾಪಮೆಸಗಿದೆನೋ ಕೈಗಮರ್ದ ಮಣಿಯುಡುಗಿದಂತೆ ಅಣುಗಂ ಮಾಯವಾದಂ, ಎಂದಿಗೆ ಮಗುಳ್ದು ರಾಮನಂ ಕಂಡು ಎನ್ನ ಕಣ್ಜಕ್ಕವಕ್ಕಿ ಆನಂದಿಪುದೋ ಎನುತೆ" (ಸಂ. ೫. ಪ. ೨) "ಎಳಗಂದಿಹಸು ಕಣ್ಮರೆಯ ಕಱುವನಾರಯ್ವಂತೆ ಹಂಬಲಿಸುತಿರ್ದ" ಕೌಸಲ್ಯೆ ತನ್ನನ್ನು "ಕವಿದು ರಿಂಗಣಗುಣಿದು ಸುೞಿದಾಡಿ ತಾಯೆಡೆಗೆ ಜವದಿಂ ಮರಳ್ವ ಕಱುವಂತೆ ಸಂತಸದೆ ಬಂದ" ಮಗನನ್ನು ಹೇಗೆ ಕಂಡಳೆಂಬುದನ್ನು ನೋಡುವುದಕ್ಕೆ ಪಾಠಕರು ತವಕಪಡಬಹುದು.

ರಾಮಾಗಮನವಾರ್ತೆಯನ್ನು ಕೇಳಿ ಸಂಭ್ರಮಗೊಳ್ಳುವ ಕೌಸಲ್ಯೆಯ ಸ್ಥಿತಿ:—

ಮುಗಿದರಳ ನೋೞ್ಪ ಕಣ್ಗಳ ಬಿಗಿ ಸಡಿಲ್ವ ಪು
ರ್ವುಗಳ ಬೆಮರೊಡೆದು ನೆಱೆದುಬ್ಬುವಾನನದ ಪೊ
ದರ್ಗೆಗೊಂಡ ಜಡೆಯು ತೊಡವಿಲಿಕೊಡಂಕೆಯು ಕುಗ್ಗಿನೇರವೆೞ್ದಿಪ್ಪಗಳದ ॥
ಸುಗಿದೊಗೆದ ಮೆಯ್ಯುನಿರ್ತರಗೊಂಡು ಭಾವಿಸುವ
ಬಗೆಯ ನಿಜಮಾತೆಯುಂ ರಾಘವಂ ರಾಹು ಕೈ
ದೆಗೆದ ಶಶಿಯಂತೆಸೆವ ರಾಮನಂ ಕುಶಲೆಯುಂ ಕಂಡರೋರೊರ್ವರಾಗ ॥
೫. ೧೯.

ದೃಷ್ಟಿ ಮೊಗ ಇವುಗಳಲ್ಲಿ ಕಾಣುವ ವಾತ್ಸಲ್ಯದ ಕುರುಹುಗಳು, ಶರೀರಕಾರ್ಶ್ಯ ಮೊದಲಾದ ಕೌಸಲ್ಯೆಯ ಸ್ಥಿತಿಯು ಬಹು ನಯವಾಗಿ ಚಿತ್ರಿಸಲ್ಪಟ್ಟಿವೆ. ಅವರಿರ್ವರ ಸ್ಥಿತಿ:—

ಸೆಱೆಗೊರಲ್ ನಡುಕಂ ನಿವಿಗೂರ್ದಲೆಱೆವುನಂ
ಕಿಱುಬೆಮಸೋರ್ಗದ ಕಂಬನಿ ಬನ್ನದಱವು ಬೇ
ಸಱದಱವು ಮೋಹಮೊಗದೊಳ್ಪು ಮೈವೆಳ್ಪು ತಲೆದೋರ್ದುದಿರ್ವರೊಳೊರ್ಮೆಯೆ ॥
ಪಿರಿದೆನೆ ಪರಸ್ಪರ ಮುಖಾವಲೋಕನದಿನೀ
ತೆಱದೊಳನ್ಯೋನ್ಯದರ್ಶನಸುಖಂ ನಾಡೆ ದಾ
ಶರಥಿಕೌಸಲ್ಯೆಯರ ದರ್ಶನದ ಸುಖದಂತೆವೋಲಾದುದೆಣೆಗಾಣದೆ ॥ ೫. ೨೦.

ಬಹುಕಾಲಾಂತರಿತವಾದ ಕೌಸಲ್ಯಾರಾಮರ ಪರಸ್ಪರ ದರ್ಶನ ಸುಖವು ನಿರುಪಮವೆಂಬುದು ಪುನರುಕ್ತವೇ ಸರಿ. ಆದುದರಿಂದಲೇ ಕವಿಯು "ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ" ಎಂಬಂತೆ ಅನನ್ವಯಾಲಂಕಾರದಿಂದ ಅನ್ಯೋನ್ಯದರ್ಶನಸುಖಂ ದಾಶರಥಿ ಕೌಸಲ್ಯೆಯರ ದರ್ಶನದ ಸುಖದಂತೆವೋಲಾದುದೆಂದು ಹೇಳಿರುತ್ತಾನೆ.

ಈ ಕಾವ್ಯದಲ್ಲಿ ಚಮತ್ಕಾರಜನಕವಾದ ವರ್ಣನೆಗಳೂ ಹಲವು ಉಂಟು. ಓದುತ್ತ ನಡೆದಂತೆ ಯಾವಭಾಗವೂ ಅಸ್ವರಸವಾಗಿಲ್ಲವಾದರೂ ಸಮುದ್ರವರ್ಣನೆ, ಲಂಕೆಯಿಂದ ಪುಷ್ಪಕದಮೇಲೆ ಕುಳಿತು ಬರುವಾಗ ರಾಮಚಂದ್ರನು ಸೀತಾದೇವಿಗೆ ಪೂರ್ವಾನುಭೂತಸ್ಥಲಗಳನ್ನು ತೋರಿಸುವುದು, ರಾಮನು ನಿಯತಕಾಲಕ್ಕೆ ಬಾರದಿರುವುದನ್ನು ಕಂಡು ಭರತನು ಶೋಕಿಸುವುದು, ನಂದಿಗ್ರಾಮಪ್ರವೇಶಕಾಲದಲ್ಲಿ ಪುರಜನರ ದರ್ಶನ ಸಂಭ್ರಮ, ರಾಮನು ತಾಯಂದಿರನ್ನು ಕಾಣುವುದು, ಪಟ್ಟಾಭಿಷಿಕ್ತನಾಗಿದ್ದ ಶ್ರೀರಾಮಚಂದ್ರನನ್ನು ಎಲ್ಲರೂ ಬೇರೆಬೇರೆ ಸ್ತುತಿಸುವುದು ಮೊದಲಾದ ಸಂದರ್ಭಗಳಲ್ಲಿ ಕವಿಯ ಪ್ರತಿಭಾವಿಕಾಸವು ಚೆನ್ನಾಗಿ ಕಂಡುಬರುವುದು. ಈ ವರ್ಣನೆಗಳೆಲ್ಲ ಸ್ವತಂತ್ರವಾದುವು, ಅನ್ಯಚ್ಛಾಯಾನುವರ್ತಿಗಳಲ್ಲ. ಲಂಕೆಯಿಂದ ಹೊರಟ ಶ್ರೀರಾಮಾದಿಗಳು ಮೊದಲು ತೆಂಕಣ ಕಡಲನ್ನು ನೋಡುವರು. ಈ ಕಾವ್ಯದಲ್ಲಿ ಬಂದ ಕಡಲ ವರ್ಣನೆಯು ಬಹಳ ಹೃದಯಂಗಮವಾಗಿದೆ. ಈ ಲಘುಕಾವ್ಯಕ್ಕೆ ಇಪ್ಪತ್ತು ಪದ್ಯಗಳಿಂದ ಮಾಡಿದ ಸಮುದ್ರವರ್ಣನೆಯು ಜಡವಾಗಿ ತೋರುವುದಾದರೂ ವರ್ಣನಾವೈಚಿತ್ರ್ಯವನ್ನು ನೋಡುವಾಗ ಪಾಠಕರಿಗೆ ಹೆಚ್ಚಾಯಿತೆಂಬ ವಿಚಾರವೇ ಬಾರದು. ಮಡಿಮಡಿದು ಬರ್ಪ ತೆರೆಗಳು (ಪ. ೧೪) ತಡಿವೊಡೆದು ಮರಳಿ ಪೋಪ ತೆರೆಗಳು (ಪ. ೧೬) ಭೋರ್ಗರೆವ ತೆರೆಗಳು (ಪ. ೧೭-೨೨) ಬಹುಚಮತ್ಕಾರಕಾರಿಯಾಗಿವೆ. ಇತರ ಕವಿಗಳ ವರ್ಣನಾರೀತಿಗಳಲ್ಲದೆ ಹಲವು ಹೊಸರೀತಿಗಳನ್ನು ಅಲ್ಲಿ ಕಾಣಬಹುದು. ಅಂತಹ ಎರಡು ಶ್ಲೋಕಗಳನ್ನು ಇಲ್ಲಿ ಕೊಟ್ಟಿದೆ.—

ಶರಧಿಯು ಭವಶರಧಿಯನ್ನು ಪೋಲ್ತುದು :—

**ಅಡಿಗಡಿಗೆ ಬರ್ಪ ಬಲ್ದೆರೆಗಳೇ ರೋಗಂಗ**
**ಳೊಡನೇಲ್ವ ಕಲ್ಲೋಲಮಾಲೆಯೆ ಬೆದರ್ಕೆ ಸಂ**
**ಗಡಿಸಿರ್ಪ ಸುೞಿಗಳೇ ರಾಗಂಗಳೇೞೆಯೆ ಪಿರಿತನಂ ಬಡತನ ವಲಂ ||**
**ಬಡಬಾನಲಂ ಚಿಂತೆ ದುಃಖಮೆ ಪೊನಲ್ ಬಾಳ್ಕೆ**
**ಗಡ! ಗುಳ್ಳೆ ಬೆಳ್ನೊರೆಯೆ ಸಂತಸಂ ಸುಖಮೆ ಮೇಲ್**
**ಸಿಡಿವ ಸೀರ್ಪನಿಯೆನಲ್ ಶರಧಿ ಭವಶರಧಿಯಂ ಪೋಲ್ತಿಸೆದುದಚ್ಚರಿಯೆನೆ ||**
**೩. ೨೮ ||**

ಸಂಸ್ಕೃತದಲ್ಲಿರುವ ನೀರಿನ ಪರ್ಯಾಯಶಬ್ದಗಳ ಅರ್ಥಾಂತರವನ್ನವಲಂಬಿಸಿ—

**ಸುರರಿಗಮೃತಂ ಬೇಕೆ? ಮನಮುಂಟೆ ಕಾಲಕಂ**
**ಧರಗೆ ವಿಷದೊಳ್? ಬಾಲಚಂದ್ರಂಗೆ ಪಯಮಿಹುದೆ?**
**ಶರಮುಂಟೆ ವೀರರ್ಗೆ? ಕೀಲಾಲಮಸುರರ್ಗೆ ದೊರೆತುದೇ? ಲಾವಣ್ಯಮಂ ||**
**ಸ್ಮರನಿಚ್ಛಿಪನೆ? ಕುಶಮನಱಸುವರೆ ಯಮಿಗಳ್? ಘ**
**ನರಸಮಂ ಕೊಂಡರೆ ರಸಜ್ಞರುಂಟಿನ್ನುಮಾ**
**ದರದೆ ತಾನೀವೆನೆಂದೊರೆವಂತೆ ಮೊೞೆವಂ ತೆಱತೆಱದಿಂದಬ್ಧಿರಾಜಂ ||೩ ೨೯||**

ರನ್ನನು—

**ಒಳಪೊಕ್ಕು ನೋಡೆ ಭಾರತ**
**ದೊಳಗಣ ಕಥೆಯೆಲ್ಲಮಾಗದಾಯುದ್ಧದೊಳಂ |**
**ತೊಳಕೊಂಡತ್ತನೆ ಸಿಂಹಾ**
**ವಲೋಕನಕ್ರಮದಿನಱಿಪಿದಂ ಕವಿರನ್ನಂ ||**

ಎಂದು ಹೇಳಿಕೊಂಡಿರುವನು. ಈ ಕಾವ್ಯದಲ್ಲಿ ಆಕಾಶಯಾನದಿಂದ ಮರಳಿ ಬರುವಾಗ ಸಿಂಹಾವಲೋಕನಕ್ರಮದಿಂದ ಸಂಪಾತಿಯ ಕಥೆ ವಾಲಿಯ ಕಥೆ ಮೊದಲಾದ ಕಿಷ್ಕಿಂಧಾಕಾಂಡ ಸುಂದರಕಾಂಡ ಅರಣ್ಯಕಾಂಡಗಳ ಕಥಾಭಾಗಗಳೆಲ್ಲ ಸೂಚಿತವಾಗಿರುವುವು. ಇತರ ಕಥಾಭಾಗವೂ ಬೇರೆ ಕಡೆಯಲ್ಲಿ* ಬರುವುದರಿಂದ ಪೂರ್ಣರಾಮಾಯಣ ಕಥೆಯು ಇದರಲ್ಲಿ ಅಡಕವಾಗಿರುವುದೆಂದು ಹೇಳಬಹುದು.

---

* ಕೌಸಲ್ಯಾ ಕೈಕೆಯಿಾ ದರ್ಶನಪ್ರಸಂಗಗಳಲ್ಲಿ.

ಸುಗ್ರೀವನ ರಾಜಧಾನಿಯನ್ನು ದಾಟಿ ಮುಂದೆ ಬರಲು ಜಟಾಯು ರಾವಣರ ಕಾಳೆಗದ ಕಣವನ್ನು ಕಂಡು ಸೀತಾದೇವಿಯು—

**ವರ್ಮದಿಂ ಖಳನನಡ್ಡೈಸಲ್ ಜಟಾಯು ನಿಜ**
**ಮರ್ಮಮಂ ಪೇಳ್ದುಳಿದನೆನಲೆತ್ತಲೆಡೆ ಸತ್ಯ**
**ಧರ್ಮಕಿನ್ನಕಟಕಟ ಖಳರಂತರಂಗಮಂ ಬಲ್ಲರಾರಿಳೆಯೊಳಿನ್ನ ||**
**ಕರ್ಮಪಾಕದೊಳಸುರನುಯ್ದೊಡಂ ಕಾವೆನೆಂ**
**ದೊರ್ಮನದೊಳೊದವಿದಾಪದ್ಬಾಂಧವಂಗೆ ಸಾ**
**ಸಿರ್ಮೆ ನೆನೆನೆನೆದೊಡಂ ತೀರದಹಹಾ! ಪರಹಿತೇಚ್ಛುಕರ ಜಸಮದೆಂತೊ ||**
**೩. ೪೦||**

ಜಟಾಯುವಿಗೆ ಸೀತಾದೇವಿಯು ಮಾಡುವ ಧನ್ಯವಾದವು ಪಾಠಕರನ್ನು ಗದ್ಗದಿತರನ್ನಾಗಿ ಮಾಡುವುದು. ಮುಂದೆ ಪಂಚವಟಿಗೆ ಬರಲು ಶ್ರೀರಾಮನು ಸೀತೆಗೆ—

**ಅಂಬುಜಾನನೆ ದನುಜೆ ಕಾಡಿದೆಡೆ ನೋಡಿತ್ತ**
**ಲಂಬಿಂ ಸಹೋದರಂ ಮಾನಗಳೆದಿರ್ಪ ತಾ**
**ಣಂ ಬವರಮುಖದಿ ಖಳರಳಿದ ನೆಲೆ ಪೊನ್ಮೃಗಂ ನಲಿದುದಿಲ್ಲಿತ್ತಲೆಂದು ||**
**೩. ೪೧||**

ಈಮೇರೆಗೆ ತೋರಿಸುತ್ತ ತಾವು ಪೂರ್ವದಲ್ಲಿ ವಾಸಮಾಡಿದುದರಿಂದ ಚಿರಪರಿಚಿತವಾದ ಎಲೆವನೆಯನ್ನೂ ಅದರ ಸಮೀಪದ ದೃಶ್ಯವನ್ನೂ ತೋರುವನಾಗಿ—

**ಅರಗಿಳಿಯನುಳಿದ ಪಂಜರದಂತೆ ಜೀವನಂ**
**ತೊಱೆದ ತನುವಂತೆ ಭಗಣೇಶನಡಗಿರ್ದ ಕಾ**
**ರಿರುಳಿನಾಗಸದಂತೆ ತೋರ್ಪುದೆಲೆವನೆಯುಂದಿನೆಡೆಯ ನೋಡಬ್ಜಾನನೆ ||**
**ಪರೆದು ಕೀಱ್ಮೊಗಗೊಂಡು ಮಾಧವೀಲತೆಯೆ ಮಾ**
**ಮರನೊಳೊಪ್ಪಂ ಬಿಟ್ಟುದಿತ್ತಿತ್ತ ಬಾಡಿದುದು**
**ಕುರುವಕಂ ನೋಡೆಂದು ತೋಱೆ ಬಱಿಕಾರಥಂ ಪರಿದುದುತ್ತರಕೆ ಜವದಿ ||**
**೩. ೪೨||**

ಈ ವರ್ಣನಾಭಾಗವನ್ನು ಓದುವಾಗ ಪಾಠಕರಿಗೆ ರಘುವಂಶದ ಹದಿಮೂರನೆಯ ಸರ್ಗದ ನೆನಪಾಗದಿರದು. ಅಲ್ಲಿಯೂ

"ವೈದೇಹಿ ಪಶ್ಯಾಮಲಯಾದ್ವಿಭಕ್ತಂ ಮತ್ಸೇತುನಾ ಫೇನಿಲಮಂಬುರಾಶಿಂ" ಮೊದಲಾಗಿ ೧೫-೧೬ ಶ್ಲೋಕಗಳಿಂದ ಕಾಲಿದಾಸನು ಸಮುದ್ರವರ್ಣನೆಯನ್ನು ಮಾಡಿದುದು ಕಂಡುಬರುವುದು. ಇದರಿಂದ, ತಕ್ಕವಸ್ತು ದೊರೆತಾಗ ಕವಿಗಳು ತಮಗೆ ತೃಪ್ತಿಯಾಗುವವರೆಗೂ ವರ್ಣಿಸದೆ ಬಿಡರೆಂದೇ ಹೇಳಬೇಕಾಗುವುದು. ಕವಿಯು ಸಂಸ್ಕೃತ ರಾಮಾಶ್ವಮೇಧವನ್ನು ಮೂಲವಾಗಿಟ್ಟುಕೊಂಡು ಸ್ವತಂತ್ರವಾಗಿ ಗ್ರಂಥರಚನೆಯನ್ನು ಮಾಡಿದನೆಂದು ಹಿಂದೆ ಹೇಳಿದೆ. ಮಾದರಿಗಾಗಿ ಇಲ್ಲಿ ಸಂಸ್ಕೃತರಾಮಾಶ್ವಮೇಧದ ಒಂದು ಭಾಗವನ್ನು ಉದ್ಧರಿಸುವೆವು. ಆದರಿಂದ ಕವಿಗೆ ಮೂಲದಿಂದ ಏನಾದರೂ ಸಹಾಯವಾಗಿದೆಯೇ ಎಂಬುದನ್ನು ನೋಡಲನುಕೂಲವಾಗುವುದು.

ಸೀತಾಯೈ ದರ್ಶಯನ್ ಮಾರ್ಗೇ ತೀರ್ಥಾನ್ಯಾಶ್ರಮವಂತಿ ಚ |
ಮುನೀಂಶ್ಚ ಮುನಿಪುತ್ರಾಂಶ್ಚ ಮುನಿಪತ್ನೀಃ ಪತಿವ್ರತಾಃ ||
ಯತ್ರ ಯತ್ರ ಕೃತೋ ವಾಸಃ ಪೂರ್ವಂ ರಾಮೇಣ ಧೀಮತಾ |
ತಾನ್ ಸರ್ವಾನ್ ದರ್ಶಯಾಮಾಸ ಲಕ್ಷ್ಮಣೇನ ಸಮನ್ವಿತಃ |
ಇತ್ಯೇವಂ ದರ್ಶಯನ್ ತಸ್ಯೈ ರಾಮೋದ್ರಾಕ್ಷೀತ್ ಸ್ವಕಾಂ ಪುರೀಂ ||
(ರಾಮಾಶ್ವಮೇಧ ಅಧ್ಯಾಯ ೧, ಶ್ಲೋಕ ೨೪-೨೭)

ಮೂಲದಲ್ಲಿ ಬಂದಿರುವ ಈ ಸ್ವಲ್ಪಭಾಗವನ್ನು ಕವಿಯು ಎಷ್ಟು ಚೆನ್ನಾಗಿ ವಿಸ್ತರಿಸಿರುವನೆಂಬುದನ್ನು ಈ ಕಾವ್ಯವನ್ನೋದಿ ಮನಗಾಣಬಹುದು.

ಕವಿಯ ವರ್ಣನಾಚಾತುರ್ಯವನ್ನು ತೋರ್ಪಡಿಸುವ ಬಂದೆರಡು ಪದ್ಯಗಳನ್ನು ತೋರಿಸಿ ಈ ಭಾಗವನ್ನು ಮುಗಿಸುವೆವು.

ಪಟ್ಟಾಭಿಷೇಕದಿನದ ಪ್ರಾತಃಕಾಲದಲ್ಲಿ "ಕಾ ಕಾ" (ಸಲಹು ಸಲಹು) ಎಂದು ಕೂಗುವ ಕಾಗೆ—

ಪಗೆಯುವಂ ದ್ರೋಹಚಿಂತಕನೆಂದೆಣಿಸದೆ ಮುಳಿ
ವುಗಲೆನ್ನನಿರದೆ ಕಾದವನೆಂದು ರಾಮನಂ
ಪೊಗಲ್ದು ಕಾ ಕಾ ಯೆಂದು ಬೇಡಿಕೊಂಡಪುದೆನಲ್ ಕಾಗೆ ಕೂಗಿದುದಾಗಳೆ ||
ಪ. ೩೬||

ಸಂಸ್ಕೃತಶ್ಲೋಕಗಳ ಭಾವವು ಚೆನ್ನಾಗಿ ಹೊಳೆವಂತೆ ಹೇಗೆ ರಚನೆ ಮಾಡಬೇಕೆಂಬ ಮಾದರಿಯನ್ನು ಕವಿಯು ಒಂದೆರಡು ಶ್ಲೋಕಗಳಲ್ಲಿ ತೋರಿಸಿರುವನು. ಸಂಧ್ಯಾಕಾಲವನ್ನು ವರ್ಣಿಸುವ ಸಂಸ್ಕೃತಶ್ಲೋಕವೊಂದು ಪ್ರಸಿದ್ಧವಾಗಿರುವುದು :—

**ಪಂಪತತಿ ಪಯೋನಿಧೌ ಪತಂಗಃ**
**ಸರಸಿರುಹಾಮುದರೇಷು ಮತ್ತಭೃಂಗಃ |**
**ಉಪವನತರುಕೋಟರೇ ವಿಹಂಗಃ**
**ಯುವತಿಜನೇಷು ಶನೈಃ ಶನೈರನಂಗಃ ||**

ಪ್ರಕೃತಕವಿಯ ಪದ್ಯವು :—

**ಭೃಂಗಾಳಿ ಕಮಲಸಂಕುಲಮನಾಕಾಶಮಂ**
**ತಂಗದಿರನವನೀರುಹಂಗಳಾಶ್ರಯಮಂ ವಿ**
**ಹಂಗಸಂದೋಹಮಬ್ಜಾಂಬಕೀವೃಂದಮನನಂಗಂ ಪ್ರವೇಶಿಸಲ್ಕೆ ||**
**ಪಿಂಗಿ ಪಡುಗಡಲೊಳಡ್ಡಂ ಪೋದನತ್ತಲ್ ಪ**
**ತಂಗನಾಗಳ್ ಸಂಜೆವೆಣ್ಣು ಮಿಂದುಟ್ಟ ಪೊಸ**
**ರಂಗು ಸೀರೆಯ ಸೆಱಗಿನಂತೆ ಸಂಧ್ಯಾರಾಗಮೆಸೆದುದಂತಾದೆಸೆಯೊಳು ||**

**ಸ. ೩೨||**

ಸಂಕ್ಷೇಪರಾಮಾಯಣವೆಂದು ರಾಮಾಯಣದ ಕಥೆಯೆಲ್ಲವನ್ನೂ ಹೇಳುವ "ಆದೌ ರಾಮತಪೋವನಾದಿಗಮನಂ...ಏತದ್ಧಿ ರಾಮಾಯಣಂ" ಎಂಬ ಸಂಸ್ಕೃತಶ್ಲೋಕವನ್ನು ಹಲವರು ಕೇಳಿರಬಹುದು.

ಕೌಸಲ್ಯಾದರ್ಶನಕಾಲದಲ್ಲಿ ರಾಮನು ಆಕೆಯ ಅಡಿದಾವರೆಗೆರಗುವುದನ್ನು ವರ್ಣಿಸುವ ಪದ್ಯದಲ್ಲಿ—

**ಕಿತ್ತಡಿಯ ಜನ್ನಮಂ ಕಾದು ಪೆಣ್ಗೊಂದಡಿಯಿ**
**ನೊತ್ತಿ ಕಲ್ಲಂ ಹರನ ಬಿಲ್ಮುಱಿದು ಭಾರ್ಗವನ**
**ನೊತ್ತಟ್ಟಿಗುಱಿದಯ್ಯನಾಣೆಯಂ ಬಿಡದಡವಿಯಂ ಸಾರ್ದು ಕೀಶರ್ಕಳ ||**
**ಮೊತ್ತಮಂ ಪೊರೆದು ಕಡಲಂ ಕಟ್ಟಿ ದಾನವರ**
**ನೆತ್ತರಂ ಚೆಲ್ಲಿ ಹಿರೆಪೊಱೆಯುಱಿಸಿದ ಜಸವಂ**
**ಪೊತ್ತ ಭಾರಕೆ ಸಿರಂ ಬಾಗಿತೆನೆ ಮಾತೆಯಡಿಗೆಱಗಿದಂ ಶ್ರೀರಾಮನು ||**

**ಸ. ೨೧.**

ರಾಮಾಯಣದ ಮುಖ್ಯ ಕಥಾಭಾಗಗಳನ್ನೆಲ್ಲ ಹೇಳಿರುವನು.

ಈ ಕಾವ್ಯದಲ್ಲಿ ಉಪಮೆ, ಉತ್ಪ್ರೇಕ್ಷೆ ಅರ್ಥಾಂತರನ್ಯಾಸ ಮೊದಲಾದ ಅಲಂಕಾರಗಳು ಸಮಯೋಚಿತವಾಗಿ ಬಂದಿರುವುವು. ಅವುಗಳಲ್ಲಿ ಕೆಲವನ್ನು ಅಲ್ಲಲ್ಲಿ ತೋರಿಸಿರುವುದರಿಂದ ಮತ್ತೆ ಹೆಚ್ಚಿಗೆ ಇಲ್ಲಿ ಹೇಳುವುದಿಲ್ಲ.

ನಂದಿಗ್ರಾಮದಲ್ಲಿ ಸಂಭ್ರಮದಿಂದ ನೆರೆದ ಜನರೆದುರಿನಲ್ಲಿ ರಾಮನು ಗೋಚರವಾದುದು ರಾಮಚಂದ್ರನೆಂಬ ಚಂದ್ರನ ಉದಯವಾಯಿತೆಂದು ಹೇಳುವಾಗ ಚಂದ್ರೋದಯಕಾಲದ ಕಡಲುಕ್ಕು ಮೊದಲಾದ ಇತರ ಕಾರ್ಯಗಳನ್ನು ಈ ಮೇರೆಗೆ ರೂಪಕದಿಂದ ಹೇಳುವನು :—

**ಉರ್ಬೆ ನೆಱ್ ಜನರ ಸಂತಸಗಡಲ್ ನಗೆ ಜೊನ್ನ**
**ಪರ್ಬೆ ಬಾಲರ ಸುಮಂತ್ರಾದಿನಾಯಕರಱಿಳ್**
**ಮರ್ಬಱೆಯೆ ನೀಱೆಯರ ಕಣ್ವಕ್ಕಿ ನಲಿಯಲ್ ಭರತನ ಬಗೆನೈದಿಲರಳೆ ||**
**ಒರ್ಬಗೆ ಬಿಮರ್ವನಿಯುನಿಬರೊಳೆತ್ತಂ ತೋರ್ದು**
**ಪರ್ಬೆ ಮ್ಮೈನವಿರಗೆಯುದೊಪ್ಪಿರಲೊಸಗೆಗಮ್ಮೃ**
**ಲರ್ಬಡದೆ ತೀಡಲಾದುದು ರಾಮಚಂದ್ರೋದಯಂ ಬುಧರ ಬಾಯ್ಸವಿಗೆನೆ ||**

೪. ೨೪

ಸಾವಯವರೂಪಕಾಲಂಕಾರದ ಈ ವರ್ಣನೆಯಲ್ಲಿ ಬೇರೆಬೇರೆ ಜನರಿಗೆ ಹೇಗೆ ಹರ್ಷವಾಯಿತೆಂಬುದನ್ನು ಹೇಳಿರುವುದು ಆ ಸಂದರ್ಭಕ್ಕೆ ಬಹು ಸಮರ್ಪಕವಾಗಿರುವುದು. ಕಾವ್ಯಪಠನಫಲಗಳಲ್ಲಿ ನೀತಿಯೂ ಒಂದೆಂಬುದನ್ನು ಎಲ್ಲರೂ ಒಪ್ಪುವರು. ರಾಮಾಯಣವು ಭರತಖಂಡದಲ್ಲಿ ನೀತಿಗೆ ಆದರ್ಶವಾಗಿರುವುದು ; ಅದರಲ್ಲಿ ಪುತ್ರಧರ್ಮ, ಪತ್ನೀಧರ್ಮ, ಭ್ರಾತೃಧರ್ಮ ಮೊದಲಾದುವುಗಳ ಅತ್ಯುಚ್ಚ ಸ್ವರೂಪಗಳು ಕಂಡುಬರುವುವು. ಈ ಕಾವ್ಯದಲ್ಲಿ ರಾಮಾಯಣದೊಳಗಿನ ಬೇರೆ ನೀತಿಗಳಿಗಿಂತ ರಾಮಭರತರ ಸೌಭ್ರಾತ್ರವನ್ನು ಕವಿಯು ಚೆನ್ನಾಗಿ ಚಿತ್ರಿಸಿರುವನು. ಆ ಸಂದರ್ಭದಲ್ಲಿಯೇ ಈ ಕಾಲದ ಕುಭ್ರಾತೃಭಾವವನ್ನು ಪೂರ್ಣ

ವಾಗಿ ಹಳಿದು ಭ್ರಾತೃಭಾವವು ಹೇಗಿರಬೇಕೆಂಬುದನ್ನು ವಿಶದವಾಗಿ ತೋರ್ಪಡಿಸಿರುವನು. ಇದಲ್ಲದೆ "ಅಹಹ! ಪರಹಿತೇಚ್ಛುಕರ ಜಸಮದೆಂತೋ" "ಚಿತ್ರಮಲ್ತೆ ಧಾರ್ಮಿಕರ ಚರಿತಂ" ಮೊದಲಾದ ವಾಕ್ಯಗಳು ನೀತಿಪರಿಪೋಷಕವಾಗಿ ಬೇರೆಬೇರೆ ಸಂದರ್ಭಗಳಲ್ಲಿ ಬಂದಿರುವುವು. ವನದಿಂದ ಮರಳಿ ಬಂದ ರಾಮನು ತಾಯಂದಿರನ್ನು ಕಾಣುವ ಸಂಧರ್ಭದಲ್ಲಿ ರಾಮಚರಿತದಲ್ಲಿರುವ ನೀತಿಯ ಉಚ್ಚಸ್ವರೂಪವನ್ನು ಕಾಣಬಹುದು. ರಾಮನು ಮೊದಲು ಕೈಕೆಯೀ ಸುಮಿತ್ರೆಯರನ್ನು ಕಂಡು ಬಳಿಕ ಕೌಸಲ್ಯೆಯ ದರ್ಶನಕ್ಕೆ ಹೋಗುವನು. ಇದಲ್ಲವೇ ಸ್ವಭಾವದ ಉದಾತ್ತತೆಯು! ಹೀಗೆಯೇ ರಾಮಾಯಣಕ್ಕನುರೂಪವಾಗಿ ನೀತಿಗೆ ಆದರ್ಶಗಳಾಗುವಂತೆ ಸೀತಾಲಕ್ಷ್ಮಣಾದಿಗಳ ಸ್ವಭಾವಗಳನ್ನೂ ಕವಿಯು ಚಿತ್ರಿಸಿರುವನು.

ಶಬ್ದಚಮತ್ಕಾರದಿಂದ ತೃಪ್ತಿಬಡುವ ಮಂದಾಧಿಕಾರಿಗಳ ರಂಜನಾರ್ಥವಾಗಿ ರಚಿತವಾದ ಪದ್ಯಗಳೂ ಕೆಲವು ಅಲ್ಲಲ್ಲಿ ಕಂಡುಬರುವುವು. ಈ ಮೊದಲು ಉದಾಹರಿಸಿದ ಕೆಲವು ಪದ್ಯಗಳಲ್ಲಿ ಅನುಪ್ರಾಸವು ಇರುವುದು. ಪೀಠಿಕಾಸಂಧಿಯ ಮೊದಲನೆಯ ಪದ್ಯದಲ್ಲಿ ಪೂರ್ವಾರ್ಧವೇ ಅರ್ಥಭೇದದಿಂದ ಉತ್ತರಾರ್ಧವಾಗಿದೆ. ಐದನೆಯ ಸಂಧಿಯ ಎಂಬತ್ತೊಂದನೆಯ ಪದ್ಯವೂ ಸ್ವಲ್ಪ ಹೆಚ್ಚುಕಡಿಮೆಯಾಗಿ ಇದೇ ತೆರದಲ್ಲಿದೆ. ಗೃಹೀತಮುಕ್ತರೀತಿಯ ಶಬ್ದರಚನೆಯನ್ನು

**ಅತಿತನೂರುಹಬಲಂ ಬಲವೈರಿನುತನೆಮ್ಮ**
**ಪಿತಗೆ ಮಿತ್ರಂ ಮಿತ್ರಸೂತಸುತನೂದ್ಭವಂ**
**ಚತುರಂ ವಿಹಂಗರಾಜಂ ರಾಜರಾಜಸಖಸದ್ಭಕ್ತನಪ್ರತಿಮನು ॥ ೩. ೩೫**

ಈ ಪದ್ಯದಲ್ಲಿ ನೋಡಬಹುದು. ಅನುಪ್ರಾಸದ ಅಂದವು ಕೆಳಗಿನ ಪದ್ಯದಲ್ಲಿ ಕಂಡುಬರುವುದು.

**ತೊಟ್ಟಿಲೊಳ್ ಪುಟ್ಟಮಗು ಪಟ್ಟಿರಲ್ ಮುಟ್ಟಿ ಮೆಯ್**
**ನಿಟ್ಟಿಸುತ ಮೊಟ್ಟರೆಂದೊಟ್ಟಿಗನನಿಟ್ಟವನ**
**ಬಿಟ್ಟು ಪಣೆಗಿಟ್ಟು ಪೊಂಬೊಟ್ಟನೆದೆಗಟ್ಟಿಯಾದಿಟ್ಟಿ ಬಿಚ್ಚಟ್ಟಮೊಲೆಗೆ ॥**

ತೊಟ್ಟುಡಿಗೆ ಪಟ್ಟಿ ನೆಱೆದುಟ್ಟುಕೊಂಡಟ್ಟಜದ
ಪಟ್ಟಣಿಗಂಟ್ಟಿಡೆಯ ಬಟ್ಟೆಯಂ ಮೆಟ್ಟಿ ಬರೆ
ದಿಟ್ಟಿಗೆಡೆಗೊಟ್ಟು ಪಿಂದಟ್ಟೂರ್ವಶಟ್ಟಸದಿ ಕೊಟ್ಟುಪೊಱಮಟ್ಟಳಾಗ ||
೪. ೯

ಒಟ್ಟಿನಲ್ಲಿ ನೋಡಲು ಕಾವ್ಯವು ಸಣ್ಣದಾಗಿದ್ದರೂ ಯಾವ ಭಾಗವೂ ವಿರಸವೆನಿಸದಂತೆ ತಕ್ಕ ಸಾಮಗ್ರಿಗಳಿಂದ ರಚಿಸಿದುದು ಕವಿಯ ಕೌಶಲವನ್ನು ತೋರ್ಪಡಿಸುವುದು.

ಈ ಕಾವ್ಯದ ಕೊನೆಯ ಭಾಗವು ಇದಕ್ಕೆ ಪುರಾಣಗಳಿಗಿರುವ ಗೌರವವನ್ನೂ, ತತ್ವಜ್ಞಾನಪ್ರತಿಪಾದಕಗ್ರಂಥಗಳ ಗೌರವವನ್ನೂ ತಂದು ಕೊಟ್ಟಿರುವುದು. ಕವಿಯು ಅದ್ವೈತಸಂಪ್ರದಾಯದವನಾಗಿ ಶಿವಪಾರಮ್ಯವನ್ನು* ಹೇಳುವವನಾಗಿ ಇದ್ದರೂ ಗ್ರಂಥವು ರಾಮಚರಿತಪ್ರತಿಪಾದಕವಾದುದರಿಂದ ಶ್ರೀರಾಮಭಕ್ತಿಭಾವವು ಚೆನ್ನಾಗಿ ಪರಿಪೋಷಗೊಳ್ಳುವಂತೆ ಮಾಡಿರುವನು.

ದಟ್ಟಡಿಯು ಸೋಂಕಿನಿಂ ಕಲ್ಗಳೆನಿತೆನಿತೊ ಕುಡಿ
ದಿಟ್ಟಿಗೆಡೆಗೊಂಡು ಕಾಱ್ಮಿಗಗಳೆನಿತೊ ಮೈ
ಮುಟ್ಟೆಲರ್ ಸೋಂಕೆ ಭೂಜಂಗಳೆನಿತೆನಿತೊ ಪಾವನಮಾದುವಾರಾಮನಿಂ ||
೩. ೫೪

ಎಂದು ಭರತನು ರಾಮಮಹಿಮೆಯನ್ನು ಕೊಂಡಾಡುವನು. ದೇವತೆಗಳೂ, ಬ್ರಹ್ಮನೂ, ಮುನಿಗಳೂ ಪಟ್ಟಾಭಿಷಿಕ್ತನಾಗಿದ್ದ ರಾಮನನ್ನು ಹಲವು ಬಗೆಗಳಿಂದ ಸ್ತೋತ್ರಮಾಡಿರುವರು. ಈಶ್ವರನು ಕೂಡ "ನಿನ್ನ ನರನಟನೆಯಿಂದ ಧರೆಗೆ ಮಂಗಳಮಾಯ್ತು ನಿನ್ನವತರಣೆ ಪೊಸತಾದುದೆಂದು" ಅಭಿವಂದಿಸುವನು.

---

*(೧) ಶಿವನೊಳಂ ತನ್ನೊಳಂ ಭೇದಮೇಂ ತಿಲಮಾತ್ರಮಿಲ್ಲೆಂಬ ಬಿರುದನುಮೋಱಲ್ದು ಸಾರ್ಥಕಮಂ ನೆಗೞ್ಚುವಂತೆ || ೫. ೬೨.

(೨) ಇಂದುಶೇಖರನ ಕೃಪೆ ಮೊದಲೊಳೆಮ್ಮೊಳ್ (ರಾಮಚಂದ್ರನಲ್ಲಿ) ಆಯ್ತು ೫. ೯೨.

(೩) ಗ್ರಂಥಾರಂಭದಲ್ಲಿರುವ ಸ್ತುತಿ.

ಮುನೀಂದ್ರರು ಮಾಡುವ ಸ್ತೋತ್ರಗಳಲ್ಲಿ ಉಪನಿಷತ್ಪ್ರತಿಪಾದ್ಯವಾದ ತತ್ತ್ವಜ್ಞಾನವು ತುಂಬಿರುವುದನ್ನು ನೋಡಬಹುದು. ಐದನೆಯ ಸಂಧಿಯ ಕೊನೆಕೊನೆಗೆ ಒಂದು ಪದ್ಯದಲ್ಲಿ (೬೯) ವೇದಾಂತಮತಕ್ಕೆ ಅನುಕೂಲವಾದ ಅಧ್ಯಾತ್ಮಯೋಗ (ಸಾಧನಯೋಗ) ವನ್ನೂ ಇನ್ನೊಂದು ಪದ್ಯದಲ್ಲಿ (೭೦) ಸೇಶ್ವರಸಾಂಖ್ಯವಿಚಾರವನ್ನೂ ಹೇಳುವನು.

ಪಟ್ಟಾಭಿಷಿಕ್ತನಾದ ರಾಮನನ್ನು ಮುನೀಂದ್ರರು ಸ್ತುತಿಸುವಾಗ ಬಂದಿರುವ ವೇದಾಂತಪರವಾದ ಗೂಢಾರ್ಥಪದ್ಯವೊಂದನ್ನು ಇಲ್ಲಿ ಅವತರಿಸುವೆವು :—

**ಒಂದನೆಡೆಗೆಯ್ದಿಱಡುಭಾವಮಂ ತೊಱೆದು ಮೂ**
**ಱಂದದಿಂ ಪದೆದು ನಾಲ್ಕಱೊಳೈದನಳವಡಿಸಿ**
**ಸಂದಾಱನೊದೆದು ಸದೆದೇೞನೆಂಟುಮನಿಕ್ಕಿ ಹೃದಯಮುಮಾರ್ಂಬರದೊಳು ||**
**ನಿಂದಿರಿಸಿ ಬಿಂದುರೂಪಮನೊಱಲ್ದೊಂಬತ್ತ**
**ಱಂದಱಗಿ ನುತಿಸಿದನಂತಚಿತ್ಸುಖನನಿಂ**
**ತಂದಮಂದಾನಂದದಿಂದೊಂದಿದಮಲಗುಣಸಾಂದ್ರರ್ ಮುನೀಂದ್ರರಂದು ||**

**ಸ. ೬೮**

ಮುಂದಿನ ಸ್ತೋತ್ರಪದ್ಯಗಳು ಉಪನಿಷದ್ವಾಕ್ಯಗಳನ್ನು ಬಹುವಾಗಿ ಸೂಚಿಸುವುವು. ಉದಾಹರಣೆಗಾಗಿ ಕೆಲವನ್ನು ಇಲ್ಲಿ ತೋರಿಸಿದೆ. ವಿಶ್ವವಿಸ್ತರಣಾದಿಹೇತು (ಪ ೬೫)—"ಯತೋವಾ ಇಮಾನಿ ಭೂತಾನಿ ಜಾಯಂತೇ"; ಸತ್‌ಸ್ವರೂಪ—"ಸದೇವ ಸೋಮ್ಯೇದಮಗ್ರ ಆಸೀತ್"; ಚರಾಚರದ ಚೈತನ್ಯಾತ್ಮ (೬೬)—"ಏಕೋ ದೇವಃ ಸರ್ವಭೂತೇಷು ಗೂಢಃ"; ನಿಗಮಯೋನಿ (೬೬)—"ಯಸ್ಯ ನಿಶ್ವಸಿತಂ ವೇದಾಃ"; ಜಲರುಹಭವಾಂಡ ಸರ್ವಸ್ವಮಂ ಪೇರೊಡಲೊಳೊಳಕೊಂಡು ವಿಶ್ವತೋಮೂರ್ತಿಯೆನಿಸಿ (೬೬)—"ವಿಶ್ವಸ್ಯೈಕಂ ಪರಿವೇಷ್ಟಿತಾರಮೀಶಂ ವಿಶ್ವತಶ್ಚಕ್ಷುರುತ ವಿಶ್ವತೋಮುಖಃ"; ಅಣೋರಣೀಯನುಂ ಮಹತೋಮಹೀಯನುಂ (೬೭) —ಅಣೋರಣೀಯಾನ್ ಮಹತೋ ಮಹೀಯಾನ್"

ಜೀವಯೋನಿವ್ರಜಮಂ ಮಾಯಾಬೀಜದೋಜೆಯಿಂ ಸೃಜಿಸಿಂ (೭೮)—
" ಇಂದ್ರೋ ಮಾಯಾಭಿಃ ಪುರುರೂಪ ಈಯತೆ"; ಅವನಕಲಂಕತೇಜೋ
ರಾಜಿಯಿಂ ಪೊದಱ್ದೀವಿಧುವಿಭಾಕರರ್ ಬೆಳಗುವರ್ (೭೯)—" ತಮೇ
ವಭಾಂತಮನುಭಾತಿ ಸರ್ವಂ" ಇತ್ಯಾದಿ.

ಈವರೆಗೆ ಉದಾಹರಿಸಿದ ಅವತರಣಿಗಳಿಂದ ಪಟ್ಟಾಭಿಷೇಕ ಕಾವ್ಯ ವು ಎಂತಹದಿರುವುದೆಂಬುದನ್ನು ಪಾಠಕರು ತಿಳಿಯಬಹುದು. ಅದರಲ್ಲಿ ಸುಲಭತೆಯಿರುವಂತೆ ಕ್ಲಿಷ್ಟತೆಯೂ ಇರುವುದು. ಶಬ್ದಚಮತ್ಕಾರಗಳಿರು ವಂತೆ ಅರ್ಥಚಮತ್ಕಾರಗಳೂ ಕಂಡುಬರುವುವು. ಸರಸಸಲ್ಲಾಪಗಳಿರು ವಂತೆ ತತ್ತ್ವಜ್ಞಾನವೂ ತುಂಬಿರುವುವು. ನೀತಿಯಿರುವಂತೆ ವ್ಯವಹಾರವೂ ಕಂಗೊಳಿಸುವುದು. ಯಾವ ಭಾಗವನ್ನು ನೋಡಿದರೂ ಒಂದೊಂದು ಚಮತ್ಕಾರದಿಂದ ಕೂಡಿಕೊಂಡಿರುವುದು ಕವಿಯ ರಚನಾಕೌಶಲವನ್ನು ತೋರ್ಪಡಿಸುವುದು.

ಸಂಸ್ಕೃತಗ್ರಂಥದ ಅವಲಂಬನದಿಂದ ಹುಟ್ಟಿದ ಕನ್ನಡಗ್ರಂಥಗ ಳಲ್ಲಿ ಮೂಲಕ್ಕಿಂತ ಸರಸವಾದ ಗ್ರಂಥವೆಂದರೆ ಲಕ್ಷ್ಮೀಶನ ಜೈಮಿನಿ ಭಾರತವೊಂದೇ ಎಂಬ ತಿಳಿವಳಿಕೆಯುಂಟು. ಆದರೆ ಈ ಕವಿಯ ಶ್ರೀರಾಮ ಪಟ್ಟಾಭಿಷೇಕವನ್ನೂ ರಾಮಾಶ್ವಮೇಧವನ್ನೂ ಕಾವ್ಯದೃಷ್ಟಿಯಿಂದ ನೋಡಿದಲ್ಲಿ ಇವು ಸಂಸ್ಕೃತರಾಮಾಶ್ವಮೇಧವನ್ನು ಮೀರಿರುವುವೆಂದು ಹೇಳಬಹುದು.

ಉತ್ತಮವಾದ ಕಾವ್ಯಗಳ ಸ್ವಾರಸ್ಯವನ್ನು ಸಹೃದಯರು ಆಮೂ ಲಾಗ್ರವಾಗಿ ಅವನ್ನು ಓದಿ ಗ್ರಹಿಸಬೇಕಲ್ಲದೆ ಹೇಳಿ ತಿಳುಹಲು ಶಕ್ಯವಿಲ್ಲ. ಈವರೆಗೆ ಉದಾಹೃತವಾದ ಭಾಗಗಳು ಕಾವ್ಯದೊಳಗಿನ ಉಚಿತಸ್ಥಲಗ ಳನ್ನು ಸ್ಥಾಲೀಪುಲಾಕನ್ಯಾಯದಂತೆ ತೋರಿಸುವುವೆಂಬುದನ್ನು ಮರೆಯ ಲಾಗದು.

ನಿಜವಾಗಿಯೂ ನೇಮಿಚಂದ್ರನು

ಕಡುಕಂಪಂ ಪಿಡಿಕೆಯ್ಸಲಕ್ಕುಮೆ ಬಱಿಲ್ದ್ರೀತಂದ ತಂಗಾಳಿಯಂ
ಪಿಡಿಯಲ್ ಬರ್ಕುಮೆ ತೃಷ್ಣೆಗೊರ್ಕುಡಿಕೆಯಿಂ ಕೊಂಡಚ್ಚ ವೆಳ್ದಿಂಗಳಂ
ಕುಡಿಯಲ್ ಬರ್ಕುಮೆ ಕೊರ್ವಿತೆಂದು.......................
ನುಡಿಯಲ್ ಬರ್ಕುಮೆ ಬಾರದಿಂತುಟಿ ವಲಂ ಕಾವಾ ಮೃತಾಸ್ವಾದನಂ ||

(ಅರ್ಧನೇಮಿ ಸಂ. ೧. ೩೧)

ಎಂದು ಹೇಳುವಂತೆ ಕಾವ್ಯಾಮೃತಾಸ್ವಾದವು ಸ್ವಸಂವೇದ್ಯವಲ್ಲದೆ ಇತರರು ಹೇಳಿ ತಿಳಿಸತಕ್ಕುದಲ್ಲವೆಂದೂ, ಇದು ಬದಿಗೆ ಉಳಿದುಹೋಗಿರುವ ಪಟ್ಟಾಭಿಷೇಕಕಾವ್ಯದ ಕಡೆಗೆ ಪಾಠಕರ ಲಕ್ಷ್ಯವು ಹತ್ತಲೆಂದು ಮಾಡಿದ ಅಲ್ಪಪ್ರಯತ್ನವೆಂದೂ ಹೇಳಿ ನೀರಸವಾಗಿ ಬಳೆದಿರುವ ಈ ಲೇಖವನ್ನು ಭರತನ ರಾಮಧ್ಯಾನಶ್ಲೋಕವನ್ನು ಹೇಳಿ ಮುಗಿಸುವೆನು.

ರಾಮ ಜಯರಾಮ ದಶರಥರಾಮ ಕೋದಂಡ
ರಾಮ ಸೀತಾರಾಮ ಪಟ್ಟಾಭಿರಾಮ ರಘು
ರಾಮ ಕೋಸಲರಾಮ ನಿತ್ಯಾತ್ಮರಾಮ ಮೋಹನರಾಮ ಮಿತ್ರರಾಮ ||
ರಾಮ ಕೌಶಿಕರಾಮ ಸಾನಂದರಾಮ ಶಿವ
ರಾಮ ಕೌಸ್ತುಭರಾಮ ಕಲ್ಯಾಣರಾಮ ಶ್ರೀ
ರಾಮ ಸುಂದರರಾಮ ಸುಕುಮಾರರಾಮ ಶಾಂತಾರಾಮ ಭದ್ರರಾಮ ||

(ಸಂ. ೩. ಪ. ೬೨)

ಶ್ರೀಮಾತೃಚರಣಾರವಿಂದಾರ್ಪಿತಂ.

---

ಶ್ರೀ

# ಶ್ರೀ ರಾ ಮಾ ಶ್ವ ಮೇ ಧ.

(ಮ|| ಎಂ. ವೆಂಕಟೇಶಯ್ಯಂಗಾರ್, ಎಂ.ಎ. ಇವರಿಂದ)

ಮುದ್ದಣ ಕವಿಯ ಕಾವ್ಯಗಳಲ್ಲಿ ಎಲ್ಲರಿಗೂ ಮೆಚ್ಚಿಗೆಯಾಗುವ ಕಾವ್ಯವೆಂದರೆ ಶ್ರೀರಾಮಾಶ್ವಮೇಧಕಾವ್ಯವೆಂದು ಧಾರಾಳವಾಗಿ ಹೇಳ ಬಹುದು. ಇದಕ್ಕೆ ಕಾರಣವೇನೆಂದು ಈ ಉಪನ್ಯಾಸದಲ್ಲಿ ಸ್ವಲ್ಪಮಟ್ಟಿಗೆ ವಿಶದವಾಗುವುದು. ಕಾವ್ಯವು ಸರ್ವಸಮ್ಮತವಾಗುವುದಕ್ಕೆ ಒಂದು ಕಾರಣ ಅದು ಗದ್ಯರೂಪದಲ್ಲಿರುವುದು ; ಗದ್ಯವಾದರೂ ಸತ್ವವಿಲ್ಲದ ಶೈಲಿಗೆ ಬೀಳದೆ ಭಾವಗರ್ಭಿತವಾದ ಸುಂದರವಾದ ಮಾರ್ಗದಲ್ಲಿ ರಚಿತ ವಾಗಿರುವುದು. ಈ ಕಾರಣದಿಂದ ಪಾಮರರಿಗೆ ರಂಜಕವಾಗಿರುವಂತೆ, ಹಳಗನ್ನಡದಲ್ಲಿ ರಚಿತವಾಗಿರುವುದರಿಂದ ಪಂಡಿತರಿಗೂ ಈ ಕಾವ್ಯವು ಮೆಚ್ಚಾಗಿದೆ. ಕತೆಯನ್ನು ಹೇಳುವುದರಲ್ಲಿಯೂ, ಪ್ರಕೃತಿಯ ಸೌಂದರ್ಯ ವನ್ನು ವರ್ಣಿಸುವುದರಲ್ಲಿಯೂ, ಜೀವನದ ತತ್ವವನ್ನು ವಿಮರ್ಶಿಸುವುದರ ಲ್ಲಿಯೂ, ಪಾಠಕರ ಹೃದಯದಲ್ಲಿ ವಿವಿಧ ಪರಿಣಾಮಗಳನ್ನು ಉಂಟುಮಾ ಡುವುದರಲ್ಲಿಯೂ ಈ ಕವಿಗೆ ಇರುವ ಅಸದೃಶವಾದ ಶಕ್ತಿಯು ಇಲ್ಲಿ ಪೂರ್ಣಪರಿಪಾಕವನ್ನು ಹೊಂದುವುದು ಇವೆಲ್ಲಕ್ಕಿಂತ ಮುಖ್ಯವಾದ ಕಾರಣ. ಈ ಕಾರಣಗಳಿಂದ ಈ ಕಾವ್ಯವು ಬಹುವಿಧವಾದ ಪಾಠಕ ವರ್ಗಕ್ಕೆ ಮೆಚ್ಚಾಗಿ ಈತನ ಇತರ ಕಾವ್ಯಗಳಿಗಿಂತಲೂ ಇಷ್ಟೇ ಅಲ್ಲದೆ ಕನ್ನಡಸಾಹಿತ್ಯದ ಒಂದೆರಡು ಕಾವ್ಯಗಳನ್ನು ಹೊರತು ಇತರ ಎಲ್ಲ ಕಾವ್ಯಗಳಿಗಿಂತಲೂ ಹೆಚ್ಚಾಗಿ ಪಾಠಕರ ಆದರಣೆಯನ್ನು ಸಂಪಾದಿಸಿ ಇದೆ.

ಕತೆ ಹೇಳುವುದರಲ್ಲಿ ಮುದ್ದಣನಿಗೆ ಇರುವ ನೈಪುಣ್ಯವು ಅವನ ಕತೆಯ ಆರಂಭದ ದೃಶ್ಯದಲ್ಲಿಯೇ ಚೆನ್ನಾಗಿ ವ್ಯಕ್ತವಾಗುವುದು. ಈ ನೈಪುಣ್ಯವನ್ನು ವ್ಯಕ್ತಪಡಿಸುವುದಲ್ಲದೆ ಈ ದೃಶ್ಯವು ವಿಷಯವನ್ನು ಸುಂದ

ರವಾಗಿ ಆರಂಭಿಸುವ ಕಾರಣದಿಂದ ಅದನ್ನು ಇಲ್ಲಿ ಸೂಕ್ಷ್ಮವಾಗಿ ಕೊಡುತ್ತೇವೆ. ಮಳೆಗಾಲ ಬಂತು. ಕಾಲಪುರುಷನು ಗುಣವಿಹೀನನಾಗಿ ನಿಸ್ತೇಜನಾಗಿ ಜಡನಾಗಿರುವನು. ನವಿಲು ಸಂತೋಷದಿಂದ ಮೈಯುಬ್ಬಿ ಕುಣಿಯುತ್ತಿದೆ. ಚಾತಕವು ಬಾಯ್ಬಿಟ್ಟು ಮಳೆಯ ಹನಿಗೆ ಕಾದಿದೆ. ಕೆಂಪೇರಿದ ಕಣ್ಣಿನ ಕೋಗಿಲೆಯು ಮಾವಿನಮರದ ಸೆಳೆಗೊಂಬಿನಲ್ಲಿ ಮೂಗನಂತಿದೆ. ಈರೀತಿಯಲ್ಲಿ ಸಂಪ್ರಾಪ್ತವಾದ ವರ್ಷಾಕಾಲದಲ್ಲಿ ಒಂದು ದಿವಸ

**"ಬೈಗುಂಬೊೞ್ತಿನೊಳೆಂದಿನಂತಿರೋಲಗಂ ಪರಿಯೆ ಕಬ್ಬಿಗರ ಬಲ್ಲಹಂ ಮುದ್ದಣನರಮನೆಯಿಂ ಪೊಱಮಟ್ಟು ನೆರೆವೀದಿವಿಡಿದು ಪೊರೆವೀಡಿಂಗೈತರ್ಪುದುಮಾತನ ಮಡದಿ ಮನೋರಮೆ ದೂರದೆ ಕಂಡೆೞ್ದು ಇದಿರ್ವಂದು ಕಾಲ್ಗೆ ನೀರಂ ನೀಡಿ ಮತ್ತಂ ಕೈವಿಡಿದೊಳಚೌಕಿಗುಯ್ದು ಮಣೆಯಿತ್ತು ಕುಳ್ಳಿರಿಸಿ ಒಡನೆಯೆ ತನಿವಣ್ಣಂ ತಿನಲಿತ್ತು ಕೆನೆವಾಲಂ ಕುಡಿವೊಡಿತ್ತು ಉಪಚರಿಸುತಿರ್ದಳ್"**

ಎಂದು ಕವಿಯು ಕತೆಯನ್ನು ಆರಂಭಿಸುವನು. ಈ ಆರಂಭದ ಚಿತ್ರದ ಸೊಗಸನ್ನು ವರ್ಣಿಸಿ ಹೇಳಬೇಕಾದದ್ದಿಲ್ಲ. ಇದರಲ್ಲಿ ಪ್ರಕೃತಿಯ ವರ್ಣನೆ ಸೇರಿದೆ. ಒಂದು ಆಸ್ಥಾನವೂ ಅದಕ್ಕೆ ಸಂಬಂಧಪಟ್ಟ ಒಡ್ಡೋಲಗವೂ ಸೂಚಿಸಲ್ಪಟ್ಟಿವೆ. ಅರಮನೆಯಲ್ಲಿ ಸಂಭಾವಿತನಾಗಿರುವ ಕವಿಯ ಪರಿಚಯವನ್ನು ನಾವು ಮಾಡಿಕೊಳ್ಳುತ್ತೇವೆ. ಅವನ ಸಂಸಾರದ ಭವ್ಯಸುಖದ ಒಂದು ಭಾಗವನ್ನು ಸ್ವಲ್ಪಮಟ್ಟಿಗೆ ನೋಡುತ್ತೇವೆ. ಇಷ್ಟರಲ್ಲಿಯೇ ಕವಿಯ ವಿಷಯದಲ್ಲಿ ಮರ್ಯಾದೆಯೂ ಅವನ ಪತ್ನಿಯ ವಿಷಯದಲ್ಲಿ ಗೌರವವಿಶ್ವಾಸಗಳೂ ಉಂಟಾಗುತ್ತವೆ. ಏಕೆಂದರೆ ಅವನು ಮಾನ್ಯನಾದ ಕವಿ; ಈಕೆ ಸಂಪ್ರದಾಯವಂತೆಯಾದ ಪತಿಪರಾಯಣೆಯಾದ ಅವನ ಗೃಹಲಕ್ಷ್ಮಿ. ಸ್ವಪ್ನದಲ್ಲಿ ಕಂಡ ಯಾವುದೋ ಸುಂದರವಾದ ಸನ್ನಿವೇಶವು ಇಲ್ಲಿ ಕವಿಯ ಜೀವನದಲ್ಲಿ ನಮ್ಮೆದುರಿಗೆ ಬಂದಂತೆ ನಮಗೆ ಭಾವ ಉಂಟಾಗುತ್ತದೆ. ಹೀಗೆ ತನ್ನ ಮತ್ತು ತನ್ನ ಪತ್ನಿಯ ವಿಷಯವನ್ನು ಸ್ವಲ್ಪ ಸೂಚಿಸಿ ಕವಿಯು ಮುಂದಕ್ಕೆ ಹೀಗೆ ಹೇಳುತ್ತಾನೆ.—

"ಈವುಪಚಾರದಿನಾತನ ಪಸಿವುಂ ಬೞಲ್ಕೆಯುಂ ಮುಡಿಯೆ ಕೆಳದಿ ನಱುದಂ ಬುಲವಂ ಸವಿಯಲ್ಕೆಂದು ಮಡಿದೀಯುತುಮಿರೆ ಇಂತು ಸುಖಸಲ್ಲಾಪಂಗೊಳ್ಳುತ್ತಿರ್ದರ್.

ಅದೆಂತೆನೆ :—

ಮನೋರಮೆ—(ಮೆಲ್ನುಡಿಯಿಂ) ನೋೞ್ಪುದೀಪಗಲ್ಗಳಿಂತೂ ಪಿರಿಯವು ಪಗಲುಮಿರುಳುಂ ಸುರಿವ ಬಲ್ಸೋನೆಯ ಜಿನುಂಗಿನತ್ತಣಿನೆನ್ನ ಬಗೆಯುಂ ಬೇಸತ್ತುದು ಅಂತದಱಿನೇನಾನುಮೊಂದು ನಲ್ಗತೆಯಂ ಪೇೞಿ!

ಮುದ್ದಣಂ—ಪ್ರಾಣೇಶ್ವರೀ! ತಡೆಯೇಂ! ಇನಿತೊಂದು ಬಯಕೆ ತಲೆದೋಱಿ ಆವ ಗಹನಂ? ಆದೊಡಮಾವ ನಲ್ಗತೆಯಂ ಪೇೞ್ವೆಂ. ಏಂ ಭೋಜಪ್ರಬಂಧಂ? ವಿಕ್ರಮವಿಜಯಂ? ಮಹಾವೀರಚರಿತಂ?

ಮನೋರಮೆ—ಇಸ್ಸಿ! ಇವರೊಳೆನಗೞ್ಕಱಿಲ್ಲಂ; ಉೞಿದೊಡಮುೞಿದೊಡಂ ಬಟ್ಟೆದೋಱಿಪ ರಸಭರಿತಂ ಚರಿತಮಕ್ಕೆ.

ಮುದ್ದಣಂ—ನಿನಗಾವ ರಸದೊಳಿಷ್ಟಂ? ಶೃಂಗಾರರಸದೊಳೇ? ವೀರರಸದೊಳೇ? ಹಾಸ್ಯರಸದೊಳೇ?

ಮನೋರಮೆ—ಆವ ರಸದೊಳೆಂದೊಡೇಂ? ನವರಸದೊಳಂ.

ಮುದ್ದಣಂ—ಅಂತಿರೆ ಮತ್ತಮಾ ಕತೆಯಾವುದು?

ಮನೋರಮೆ—ರಾಮಾಯಣದೊಳೇನಾನುಮೊಂದು.

ಈ ಕವಿಗೆ ರಾಮಾಯಣದ ವಿಷಯದಲ್ಲಿ ಬಹಳ ಪಕ್ಷಪಾತ. ಇವನ ಮುಖ್ಯವಾದ ಮೂರು ಕಾವ್ಯಗಳೂ ರಾಮಾಯಣದಿಂದ ಉದ್ಧರಿಸಿದ ಆಖ್ಯಾನಗಳು. ಕವಿಯು ಜನಾಂಗದ ಪ್ರತಿನಿಧಿಯೆಂದು ವಿಮರ್ಶೆಯಲ್ಲಿ ಹೇಳುವುದು ವಾಡಿಕೆ. ಮುದ್ದಣನ ಈ ಪಕ್ಷಪಾತಕ್ಕೆ ವಿಮರ್ಶೆಯ ಈ ಸೂತ್ರವು ಸುಲಭವಾಗಿ ಅನ್ವಯಿಸುವುದು. ನಮ್ಮ ಜನಾಂಗದ ಜೀವನದಲ್ಲಿ ಆಳವಾಗಿ ಊರಿರುವ ಪುಣ್ಯಕಥೆಯೆಂದರೆ ರಾಮಾಯಣವೆಂದೇ ಹೇಳಬಹುದು. ಇದರಿಂದಲೇ ನಮಗೆ ಈ ಕಾವ್ಯದ ವಿಷಯದಲ್ಲಿ ಆದರವು ಮೊದಲಲ್ಲೇ ತಲೆದೋರುವುದು. ಅಲ್ಲದೆ ನಮಗೆ ಸಹಾಯವಾಗಿ ಮನೋರಮೆ ನಿಂತಿದಾಳೆ. ನಮಗೂ ಎಲ್ಲ ರಸಗಳಲ್ಲೂ ಇಷ್ಟ. ನಮಗೆ ಬೇಕಾದದ್ದನ್ನು ಮನೋರಮೆ ಕೇಳಿರುವಳು. ಇನ್ನು ಮುಂದೆಯೂ ಕತೆಯು

ಸಾಮಾನ್ಯರಾದ ನಮ್ಮ ಯೋಗ್ಯತೆಗೆ ತಕ್ಕುದಾಗಿರುವಂತೆ ಅವಳು ನೋಡಿ ಕೊಳ್ಳುವುದಕ್ಕೆ ಕಾವಲಿರುತ್ತಾಳೆ. ರಾಮಾಯಣದಲ್ಲಿ ಯಾವ ಭಾಗವನ್ನು ಹೇಳುವುದೆಂದು ಸ್ವಲ್ಪ ಚರ್ಚೆಯಾದ ಮೇಲೆ ಮನೋರಮೆಯು ರಾಮಾಶ್ವಮೇಧದ ಕತೆಯನ್ನು ಕೇಳಬೇಕೆಂದು ಹೇಳುವಳು. ಮುದ್ದಣನು ಆಗಲಿ, ಯಾವ ಧಾಟಿಯಲ್ಲಿ ಹೇಳಲಿ? ಪದ್ಯದಲ್ಲಿ ಹೇಳಲೆ? ಗದ್ಯದಲ್ಲಿ ಹೇಳಲೆ? ಎನಲು ಮನೋರಮೆಯು—"ಪದ್ಯಂ ವಧ್ಯಂ; ಗದ್ಯಂ ಹೃದ್ಯಂ; ಹೃದ್ಯಮಪ್ಪ ಗದ್ಯದೊಳೆ ಪೇೞ್ವುದು" ಎಂದು ಉತ್ತರ ಕೊಡುವಳು. ಮುದ್ದಣನು ಸರಸಿ; ಇನ್ನೂ ಚಿಕ್ಕವಯಸ್ಸೆಂದು ಕಾಣುತ್ತದೆ. ಹೆಂಡತಿಯೊಡನೆ ಇಲ್ಲಿ ಸ್ವಲ್ಪ ಹಾಸ್ಯಮಾಡುತ್ತಾನೆ.

**ಮುದ್ದಣಂ—"(ನಸುನಗೆಯಿಂ) ಅದಂತಿರ್ಕೆ. ಇಂತಪ್ಪ ನಲ್ಗತೆಯಂ ಬಿತ್ತರಿಸಿದೊಡೆ ಅರಮನೆಯೊಳ್ ರನ್ನಗಡಗವಂ ಪೊನ್ನಕಂಠಿಕೆಯಂ ಮೆಚ್ಚನೀವರ್ ನೀನೀವುದೇಂ?**

**ಮನೋರಮೆ—ಪೇೞತೇಂ ಎನ್ನನೇ ನಾನೀವೆಂ"**

ಮುದ್ದಣನು ಕವಿಯಾದರೂ ಪ್ರಪಂಚಜ್ಞಾನವಿಲ್ಲದವನಲ್ಲ. "ಅಱಿಯಾ ಮುನ್ನಮೆ ನಿನ್ನ ತಾಯ್ತುಂದೆವಿರೆನಗಿತ್ತರೆಂಬುದಂ?" ಎನ್ನುವನು. ಅದಕ್ಕೆ ಮನೋರಮೆಯು ಅರಮನೆಯವರು ಕಾವ್ಯವನ್ನು ನೋಡಿದಮೇಲಲ್ಲವೆ ಬಿರುದನ್ನು ಕೊಡುವುದು. ತಾನೂ ಕತೆಯನ್ನು ಕೇಳಿ ಚೆನ್ನಾಗಿದ್ದರೆ ಬಲ್ಲಂತೆ ಸನ್ಮಾನಿಸುವುದಾಗಿ ಹೇಳುವಳು.

**ಮುದ್ದಣಂ—"ಒಳ್ಳಿತೊಳ್ಳಿತು! ಕತೆಯನಾಲಿಸಿ ಬೞಿಕ್ಕವಿವಾಯೆನೋಂದೊಡೆ ಬಿಡೆ ನೋೞ್ಪೆಂ.**

**ಮನೋರಮೆ—"ಆನುಂ ನೋೞ್ಪೆಂ ಕತೆಯ ಪುರುಳೆಂತಿರ್ಕುಮೆಂದು"**

ಹೀಗೆ ಒಪ್ಪಂದವಾದಮೇಲೆ ಕವಿಯು ಕಾವ್ಯವನ್ನು ಆರಂಭಿಸುವನು. "ಸ್ವಸ್ತಿಶ್ರೀಮತ್ಸುರಾಸುರೇಂದ್ರನರೇಂದ್ರ ಮುನೀಂದ್ರ ಫಣೀಂದ್ರ ಮಣಿಮಕುಟತಟಘಟಿತ"—ಈ ಮಾತಿನ ಆಡಂಬರವನ್ನು ಕೇಳಿ ಮನೋರಮೆಯು "ಓ ಓ! ತಡೆ! ತಡೆ! ವಸುಧೆಗೊಡೆಯನಪ್ಪ ರಾಮಚಂದ್ರನ

ಕತೆಯಂ ಪೇೞೆನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತೆಯಂ ಪೇೞ್ವಿದೇಂ? ಸಾಲ್ಗುಂ, ಸಾಲ್ಗುಂ. ಇಂತೆರ್ದೆಗೊಳ್ವ ಕತೆಗೆಂತುಡುಗೊಱೆಯಂಗೆಯ್ವೆನೋ!'' ಎಂದು ಹೇಳುವಳು. ಮುದ್ದಣನು ರಾಮಚಂದ್ರನ ಕತೆಯನ್ನು ಹೇಳುವ "ಸಕ್ಕದದೊಂದು ಚಲ್ವು ಇದು'' ಎಂದು ಹೇಳುವನು. ಕೇವಲ ಪಾಂಡಿತ್ಯಪ್ರದರ್ಶಕವಾದ ಸಂಸ್ಕೃತಭೂಯಿಷ್ಠವಾದ ಕನ್ನಡದ ಶೈಲಿಯು ನಮ್ಮ ಕಾವ್ಯಗಳಲ್ಲಿ ಹೊಸದಲ್ಲ. ಈಗಣ ಜನರಿಗೆ ಅಂಥ ಶೈಲಿಯ ವಿಷಯದಲ್ಲಿ ಎಷ್ಟು ಬೇಸರ ಎಂಬುದು ಸರ್ವವಿದಿತವಾಗಿದೆ. ನಾವು ಯಾರಾದರೂ ಹೇಳುವಂತೆ ಮನೋರಮೆಯು "ಲೇಸು, ಲೇಸು! ನೀರಿೞಿಯದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು; ಕನ್ನಡದ ಸೊಗಸನಱಿಯಲಾರ್ತೆನಿಲ್ಲೆನಗೆ ಸಕ್ಕದದ ಸೊಗಸಂ ಪೇೞ್ವಿದು ಗಡ!'' ಎಂದು ಹೇಳುವಳು.

**ಮುದ್ದಣಂ—ಅಪ್ಪೊಡಿನ್ನೆಂತೊ ಒರೆವೆಂ.**

**ಮನೋರಮೆ—ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇೞ್ವುದು; "ಕನ್ನಡಂ ಕತ್ತುರಿ" ಯಲ್ತೆ.**

**ಮುದ್ದಣಂ—ಅಪ್ಪುದಪ್ಪುದು. ಆದೊಡಂ ಸಕ್ಕದವೊಂದೆ ರನ್ನವಣಿಯಂ ಪೊನ್ನಿಂ ಬಿಗಿದಂತೆಸೆಗುಂ; ಅದಱಿಂ ಕರ್ಣಸರದೊಳ್ ಚೆಂಬವಳವುಂ ಕೋದಂತಿರೆ, ರಸವೊಸರೆ, ಲಕ್ಕಣಂ ಮಿಕ್ಕಿರೆ, ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ"**

ಎಂದು ಮಾತುಕೊಡುವನು.

ಕತೆಯ ಈ ಪ್ರಸ್ತಾವನೆಯಲ್ಲಿ ಕವಿಯು ಸೌಂದರ್ಯದ ವರ್ಣನೆಯಿಂದ ಪಾಠಕರ ಮನಸ್ಸನ್ನು ರಂಜಿಸಿ ತನ್ನ ಸಂಸಾರದ ಸುಖದ ದಿಗ್ದರ್ಶನದಿಂದ ಪಾಠಕರಿಗೆ ನೆಮ್ಮದಿಯನ್ನುಂಟುಮಾಡಿ ಮನೋರಮೆಯ ಮೂಲಕ ಪಾಠಕರ ಇಷ್ಟವನ್ನು ಕುರಿತು ಪ್ರಸಂಗಮಾಡಿ ಸ್ವಲ್ಪ ಹಾಸ್ಯದಿಂದ ಉಲ್ಲಾಸವನ್ನುಂಟುಮಾಡಿ ಒದೆರಡು ಮಾತಿನಲ್ಲಿ ಇಂಥ ಕಾವ್ಯವು ಹೇಗಿರಬೇಕೆಂದು ಸೂಚಿಸಿ ಕನ್ನಡಕ್ಕೆ ಮರ್ಯಾದೆಯನ್ನು ಪ್ರಕಾಶಪಡಿಸಿ

ಸಂಸ್ಕೃತದ ವಿಷಯದಲ್ಲಿ ಅವಜ್ಞತೆಯನ್ನು ತೋರದೆ ಸುಂದರವಾದ ಕಾವ್ಯವನ್ನು ರಚಿಸುವುದೆಂಬ ಪ್ರತಿಜ್ಞೆಯನ್ನು ತಿಳಿಸಿರುವನು. ಈ ಮಾತನ್ನು ಎಷ್ಟು ಚೆನ್ನಾಗಿ ನೆರವೇರಿಸುವನೆಂಬುದು ಕಾವ್ಯವನ್ನು ಓದಿದವರಿಗೆ ತಿಳಿಯುವುದು.

ಇನ್ನುಮುಂದೆ ಮುದ್ದಣಮನೋರಮೆಯರ ಇನ್ನೂ ಕೆಲವು ಸರಸ ಸಲ್ಲಾಪಗಳನ್ನು ಎತ್ತಿ ಹೇಳುತ್ತೇವೆ. ಈ ಮಧ್ಯೆ ಕವಿಯ ಪ್ರಕೃತಿಸೌಂದರ್ಯದ ವರ್ಣನೆಯ ಶಕ್ತಿಯನ್ನು ತೋರಿಸುವಂತೆ ಒಂದು ಕಾವ್ಯಭಾಗವನ್ನು ಇಲ್ಲಿ ಕೊಟ್ಟಿದೆ. ವಸಂತಋತು ಆರಂಭವಾಗಲು ರಾಮದೇವರು ಯಜ್ಞಮಾಡುವುದಕ್ಕೆ ಆರಂಭಿಸಿದರೆಂಬ ಸಂದರ್ಭದಲ್ಲಿ ಕವಿಯು ವಸಂತ ಋತುವನ್ನು ಹೀಗೆಂದು ವರ್ಣಿಸಿದ್ದಾನೆ.

“ಮಾಮರನೆಳದಳಿರ ರಸಮಂ ಪಿೞಿದು ಕಳಕಂಠನ ಕಂಠನಾಳಕ್ಕೆಱೆದು ಬ್ಬಸಮಂ ಕಳೆದು ಕಲನಾದಮಂ ಪೆರ್ಚಿಸಿಯುಂ, ಆರನೇಱಿಲ ದೋರೆವಣ್ಣಂ ತೇದು ನಕ್ಕಿಸುತರಗಿಳಿಯ ನಾಲಗೆಯಂ ತೆಳ್ಪನಾಗಿಸಿ ತೊದಳ್ನುಡಿಯಂ ತಿರ್ದಿಯುಂ, ಪುಷ್ಪಧೂಳಿಯಂ ಲಿಪ್ಪಂ ಬೞಿದದಿವುರ್ಚಿತ್ತೆಯ ಸುರಯಿಯ ಪೊಸಬಂಡನೊಡಲ್ಗಿತ್ತುಮಱಿ ದುಂಬಿಗಳ್ಗೆ ಸಂಪಿಗೆಯತ್ತಣಿನೊದವಿದ ಶಿರೋಭ್ರಮಣಮನೞಿಯಿಸಿಯುಂ, ಬಸಂತಂ ಬಿಜ್ಜನೆನೆ ಮೈದೋಱಲೊಡಂ; ಅಂದು ಕೋಡುಕೋಡಿಂದೋಡಿ ಮಲಯಮಂ ಮಱೆಗೊಂಡ ಪವನನೀಗಳತ್ತಣಿಂ ಪೊಱಮಟ್ಟು ಮೆಲ್ಲಮೆಲ್ಲನೆಡೆಯೆಡೆಯ ಬನಬನಮಂ ಪುಗುತಂದು ಹೊಂಚಿ ಮುಂಚಿ ಕೆಳೆಯಂಗೆ ನೆರೆವಾದನೆನೆ ದಕ್ಷಿಣಾನಿಲಂ ಮಂದಂ ಮಂದಂ ವಹಿಸುತ್ತಿರ್ಕುಂ; ಫಲವೃಕ್ಷಂಗಳೆಲ್ಲಂ ಕಾಯ್ಕುಸುಗಾರ್ಯ್ ಪಣ್ ದೋರೆವಣ್ ತನಿವಣ್ಗಳಿಂದೆಸೆಯೆಯುಂ, ಪೂವಳ್ಳಿಗಳ್ ನನೆ ಕೊನೆಮುಗುಳರೆಮುಗುಳ್ ಬಿರಿಮುಗುಳುಳ್ಪಲರ್ದ ಪೊಸಮಲರ್ಗಳಿಂದೆ ಸೊಗಯಿಸೆಯುಂ, ಮನೋಹರಮಾಯ್ತು ಪೊಸಸುಗ್ಗಿ; ಬಿರಯಿಗಳೆರ್ದೆವಡಿ ಬಿಜ್ರನೆ ಬಿರಿಯೆ, ವಿಟವಿತಾನಕ್ಕೆ ಪೊಸಬೇಟದ ಸೊಂಪು ನೆರೆಯೆ, ಕುಲಟಾಂಗನೆಯರ್ಗೆ ಜವ್ವನದೇೞ್ಗೆ ಮೆಱೆಯೆ, ಕಾವನೆತ್ತಂ ಮೈದೋಱದೆ ಸಂಚರಿಸಲ್ತೊಡಂಗಿದಂ; ರಾಘವನ ಪ್ರತಾಪದಂತಿರೆ ನೇಸಱ ಕಾಯ್ಪುಂ ಪೆರ್ಚಿದುದು; ಪುರಲಕ್ಷ್ಮಿಯೊಡನೆ ವನಲಕ್ಷ್ಮಿಯ ಕೆಳೆತನಂ ಪಿರಿದಾಯ್ತು”

ಈ ವರ್ಣನೆಯಲ್ಲಿ ಕವಿಯ ಊಹೆಯು ಅವನ ವಸ್ತುವಿಜ್ಞಾನಕ್ಕೆ ವಿಲಕ್ಷಣವಾದ ಕಳೆಯನ್ನು ಕಟ್ಟಿದೆ. ಮರಿದುಂಬಿಗಳು ತಿಳಿಯದೆ ಸಂಪಿ

ಗೆಯ ಹತ್ತಿರ ಹೋಗಿ ಶಿರೋಭ್ರಮಣ ಉಂಟಾಗಿ ತೊಂದರೆಪಡುತ್ತಿವೆ ಯಂತೆ. ವಸಂತನು ಬಂದು ಅವಕ್ಕೆ ಪುಷ್ಪಧೂಳಿಯನ್ನು ಲೇಪಿಸಿ ಅದಿ ರ್ಮುತ್ತೆ ಸುರಗಿ ಪುಷ್ಪಗಳ ಹೊಸರಸವನ್ನು ಸೇವಿಸುವುದಕ್ಕೆ ಕೊಟ್ಟು ಆ ಭ್ರಾಂತಿಯನ್ನು ನಿವಾರಣೆ ಮಾಡುತ್ತಾನಂತೆ. ಇರುವುದನ್ನು ತಿಳಿಯು ವುದು ವಸ್ತುವಿಜ್ಞಾನ. ವಿಜ್ಞಾನಾಂಶವನ್ನು ಪರೋಕ್ಷಾವಸ್ಥೆಯಲ್ಲಿ ಕಣ್ಣೆದುರಿಗೆ ಕಂಡಂತೆ ಅನುಭವಿಸುವುದು ಪ್ರತಿಭೆ. ಪ್ರತಿಭೆಯಿಂದ ಮುಂದೆ ಬಂದ ವಿಜ್ಞಾನಾಂಶಕ್ಕೆ ಆತ್ಮೀಯವಾದ ಒಂದು ವಿಲಾಸವನ್ನು ಆರೋ ಪಿಸಿ ಅದರ ಅಂದವನ್ನು ಹೆಚ್ಚಿಸುವುದು ಊಹೆ. ಈ ವರ್ಣನೆಯಲ್ಲಿ ಈ ಮೂರು ರೀತಿಯ ಶಕ್ತಿಯೂ ಉಜ್ವಲವಾಗಿ ಕಾಣುತ್ತದೆ. ಹಾಗೆಯೇ ದಕ್ಷಿಣಾನಿಲನ ವರ್ಣನೆಯನ್ನು ನೋಡಿ. ಆ ವರ್ಣನೆಯ ಕೊನೆಯಲ್ಲಿ "ಮಂದಂಮಂದಂ ವಹಿಸುತಿರ್ಕುಂ" ಎಂದು ಹೇಳುವಲ್ಲಿ ತೆಂಗಾಳಿಯ ಧೀರಗಮನವು ರೂಪುಗೊಂಡಿರುವುದನ್ನು ನೋಡಿ. ಕಾವ್ಯಪ್ರಪಂಚದಲ್ಲಿ ಸುಳಿದಾಡಿರುವ ಮನಸ್ಸಿಗೆ ಸಂಸ್ಕೃತಕಾವ್ಯಗಳಲ್ಲಿ ಅನೇಕಕಡೆ ಬಂದಿರಬೇ ಕಾದ ಈ ಪದಸಂಯೋಜನದಿಂದ ತೋರಿಬರುವ ಭಾವನಾಪ್ರಪಂಚದ ವಿಸ್ತಾರವೆಂಥದೆಂದು ಊಹಿಸಿ. ಇದಿಷ್ಟರ ಜತೆಗೆ ಇಲ್ಲಿ ಜೋಡಿಸಿರುವ ಮಾತುಗಳ ಸೊಗಸನ್ನೂ ಔಚಿತ್ಯವನ್ನೂ ನೋಡಿ. ಬಿರಿಯೆ, ನೆರೆಯೆ, ಮೆರೆಯೆ ಎಂದು ಮಧ್ಯದಲ್ಲಿ ಅವ್ಯಕ್ತಮಧುರವಾಗಿ ಸೇರಿಬರುವ ಅಂತ್ಯ ಪ್ರಾಸದ ಸೊಗಸನ್ನು ನೋಡಿ. ಇನ್ನು ಈ ವರ್ಣನೆಯು ಉತ್ತಮ ಕವಿ ತೆಯ ಸರ್ವಲಕ್ಷಣಗಳಿಂದ ಸಂಪನ್ನವಾಗಿ ಕವಿಗೆ ಸಾಹಿತ್ಯದಲ್ಲಿ ಅತ್ಯುತ್ತ ಮವಾದ ಸ್ಥಾನವನ್ನು ಕೊಡತಕ್ಕುದಾಗಿದೆ ಎಂಬುದನ್ನು ಮತ್ತೆ ಹೇಳ ಬೇಕಾದದ್ದಿಲ್ಲ.

ಪ್ರಕೃತಿಯ ಸೌಂದರ್ಯದ ವರ್ಣನೆಯಲ್ಲಿ ಈ ಕವಿಯು ಯಾವ ಸೌಲಭ್ಯವನ್ನೂ ಕೌಶಲವನ್ನೂ ತೋರಿಸುವನೋ ಮನುಷ್ಯಸ್ವಭಾವ ನಿರೂಪಣದಲ್ಲಿಯೂ ಅದೇ ಸೌಲಭ್ಯವನ್ನೂ ಕೌಶಲವನ್ನೂ ತೋರಿಸು

ವನು. ಸೀತಾದೇವಿಯು ಒಂದುಸಲ ಕನ್ನೆವಾಡದ ನೆಲೆವನೆಯ ಮೊಗಸಾಲೆಯಲ್ಲಿ ತೂಗುಮಂಚದಲ್ಲಿ ಕುಳಿತು ಕೆಳದಿಯಾದ ಚಂದ್ರಮತಿಯೊಡನೆ ಇರುತ್ತಿರಲು ಎದುರಿಗೆ ಒಂದು ಗುಬ್ಬಚ್ಚಿಯು ತನ್ನ ಎಳೆಯಮರಿಗೆ ಗುಟುಕನ್ನು ಕೊಟ್ಟು ಅದನ್ನು ರೆಕ್ಕೆಯಲ್ಲಿ ಸೇರಿಸಿಕೊಂಡು ಮುದ್ದಿಸಿದುದನ್ನು ನೋಡಿ ಮಕ್ಕಳ ಬಯಕೆಯಿಂದ ಹೀಗೆಂದಳಂತೆ.

"ಮಿತ್ರೆ ನೋಡೆ! ನೋಡೆ! ನೀಡುಂ ನೀಡದ ಪಕ್ಕಿಯುಮೆನ್ನಂ ಬಂಜೆಯೆನುತೇಱಿಪಂತೆನ್ನಿದಿರೊಳ್ ಪಿಳ್ಳೆಯಂ ಮುದ್ದುಗೆಯ್ಗುಂ. ಇಂತಿರ್ಪಿನಮಿನ್ನೊಲ್ಲೆ ನೀಯೆಡೆಯಂ. ಎತ್ತಾನುಂ ಪೆಱತೊಂದೆಡೆಗೆ ಪೋಪಂ. ಅಲಸುವೆನೀ ನೋಟಕ್ಕೆ. ಓ! ಈ ಪಕ್ಷಿಯುನೊಂದನೆ ಪಗೆವನೇತಕ್ಕೇಯೊ ನಿರ್ನೆರಂ! ಎನ್ನನ್ನಗೇ ಲೋಕಮೆ ಪಗೆ! ಪಲವಾತಿನೇನಕ್ಕುಂ. ನಿಕ್ಕುವಂ ಮಕ್ಕಳಂ ಪಡೆದೋವಲ್ಲಾಕ್ಕಂ ನೋಂತನಿಲ್ಲಕ್ಕುಂ. ಎಳವರಯದೊಳ್ ನಲ್ಗೂಸಂ ಪೆತ್ತು ಬಾಲಕೇಳಿಯಂ ಕಣ್ದಣಿಯೆ ಕಂಡು ಸಂಸಾರದ ಸಾರವಿದೆನುತೆ ಸಂತಸಂಬಡುವ ಪೆಣ್ಗಳೆ ಧನ್ಯರಲ್ತೆ! "ಬಂದಳಿವಳ್! ಬಂಜೆ! ಕಂದನಂ ಪಿಡಿಯಲ್ಕೀಯದಿರ್! ಬಡವಕ್ಕುಂ! ಕಿಟ್ಟವಿಡದಿರ್! ಕಂದಿ ಬಸವಳಿಗುಂ; ನೋಡವಿಡದಿರ್! ಕಣ್ ಕೊಂಕುಗುಂ; ನುಡಿಯಿಸಲೆಡೆಗುಡದಿರ್! ನುಡಿಯೊಗ್ಗುಗುಂ" ಎಂಬ ನಾಡ ಪೆಣ್ಗಳ ಬಿಱುನುಡಿಗೆ ತಡೆದುಂ ಬಾಳ್ವ ವಂಧ್ಯೆಯರಿ ಜೀವನ್ಮೃತೆಯರ್ ವಲಂ. ಸಖೀ! ಮಾಂಜದುಸಿರ್; ಕುಲಮಂ ವರ್ಧಿಪ ಕಂದನಂ ಪಡೆದು ತೊರೆದ ಮೊಲೆಯೂಡಿ ತೊಟ್ಟಿಲೊಳಿಟ್ಟು ಪಾಡಿ ತೂಗಿ ಕೂಸು ನಿದ್ದೆವೋಪುದಂ ತಾನು ಮರೆಗಳಿಗೆ ಕೆಲದೊಳ್ ಮಂಡಿಸಿ ಬಾಲಲೀಲೆಯಂ ನೆನೆನೆನೆದು ಮತ್ತಂ ಕುವರನೆೞ್ಚತ್ತನಾಗೆ ಪಿಡಿದೆತ್ತಿ ಮುಂಡಾಡಿಯುಂ ಮುದ್ದಿಸಿಯುಂ ತೊದಳ್ನುಡಿಯೊಳ್ ನುಡಿಸಿಯುಂ ಕಿಱುನಗೆಯೊಳ್ ನಗಿಸಿಯುಂ ಪೊಸಬಿನದದಿನಾಡಿಸಿಯುಂ ಮನದ ಬೇಸಱಿಂ ಕಳೆವೊಂದು ಸೈಪೆನ್ನೊಳೆಂದಿಂಗಾದಪುದೋ!"

ಮುದ್ದಣನಿಗೆ ಈ ಪುಸ್ತಕವನ್ನು ಬರೆಯುವಾಗ್ಗೆ ಪ್ರಾಯಶಃ ಮಕ್ಕಳಿರಲಿಲ್ಲವೆಂದು ಈಗ ಹತ್ತುವರ್ಷಗಳ ಹಿಂದೆ ಒಂದು ಸಂದರ್ಭದಲ್ಲಿ ಊಹಿಸಿ ಹೇಳಿದೆನು. ಈ ಗ್ರಂಥಕರ್ತನ ಚರಿತೆಯು ಈಚೆಗೆ ತಿಳಿದು ಬಂದಿದೆ. ಅದನ್ನು ನೋಡುವುದರಲ್ಲಿಯೂ ಈ ಊಹೆಯು ಸರಿಯಾಗಿರಬೇಕೆಂದು ತೋರುವುದು. ಮುದ್ದಣನೂ ಮನೋರಮೆಯೂ ಆಡುವ ಮಾತು ಗಂಡಹೆಂಡಿರು ಹೊಸಸಂಸಾರದ ರಾಗರಸಭರಿತವಾದ ಪ್ರಣಯ

ದಲ್ಲಿ ಆಡುವ ಮಾತುಗಳು. ಕವಿಯು ಅಲ್ಲಲ್ಲಿ ಪತ್ನಿಯನ್ನು ಸಂಬೋಧಿಸಿ ಕರೆಯುವ ಸೊಗಸಿನಿಂದಲೇ ಇದು ಸ್ಪಷ್ಟವಾಗುವುದು.—ರಮಣೀ, ಪ್ರಾಣೇಶ್ವರಿ, ಎನ್ನರಸಿ, ಕೇಳೆಲೆ ಬಾಲೆ, ಬಾಲೇಂದುಫಾಲೆ, ಪೆಣ್ಮಣಿ ಕೇಳ, ಪ್ರಾಣನಾಯಿಕೆ, ದೇವೀ, ಎನ್ನ ರನ್ನಗೈಪಿಡಿ, ಮೋಹನಾಂಗಿ, ಎನ್ನ ನಿಚ್ಚದ ಪೂಜೆಯ ಕಟ್ಟುಜ್ಜಿನ ಪ್ರಾಣಲಿಂಗಮೆ, ಒಚ್ಚೇರಗಣ್ಣ ಪೆಣ್ಣೆ, ಎನ್ನ ಕೈಮರ್ಚಿನ ಗೆಡೆಯೂಟದ ಮುತ್ತಿನ ಸೆಂಡೆ, ಎನ್ನ ಚೆನ್ನ ಪೊನ್ನ ರಸಿ, ಎನ್ನ ಸಿಂಗರದ ಸಿರಿಯೆ. ಇವನಿಗೆ ಹೆಂಡತಿಯನ್ನು ಏನೆಂದು ಕರೆ ಯುವುದೆಂಬ ವಿಷಯದಲ್ಲಿ ಯೋಚನೆಯಿಲ್ಲವೇ ಇಲ್ಲ. ಸಂಸಾರದಲ್ಲಿ ಕೆಲವುಕಾಲ ಕಳೆದಮೇಲಾದರೂ ಪತ್ನಿಯ ವಿಚಾರದಲ್ಲಿ ಈ ಉತ್ಸಾಹವಿ ರುವುದು ಅಪೂರ್ವ. ಈತನು ಪತ್ನಿಯನ್ನು ಹತ್ತು ಹೆಸರಿನಿಂದ ಸಂಬೋ ಧಿಸುವಂತೆಯೇ ಆಕೆಯು ಯುವತಿಗೆ ಸಹಜವಾದ ಒಂದು ನಾಚಿಕೆಯಿಂ ದಲೂ ಇವನ ಪ್ರೀತಿಗೆ ಕಡಮೆಯಲ್ಲದ ತನ್ನ ಒಂದು ಪ್ರೀತಿಯನ್ನು ಸೂಚಿಸುವಂತೆಯೂ, ಇವನನ್ನು ಒಂದೊಂದೇ ಮಾತಿನಿಂದ—ರಮಣ, ಎನ್ನೊಡೆಯ, ನಲ್ಲ, ಅಣ್ಮ, ಎನ್ನರಸ, ಎಂದು ಸಂಬೋಧಿಸುವಳು. ಅಲ್ಲದೆ ಮುಂದೆ ತಿಳಿಯುವಂತೆ ಕವಿಗೆ ಊಟದ ವಿಷಯದಲ್ಲಿ ಇನ್ನೂ ಉಜ್ವಲ ವಾದ ಉತ್ಸಾಹ. ಮಕ್ಕಳಾದವರಿಗೆ ಸಾಮಾನ್ಯವಾಗಿ ಈ ಉತ್ಸಾಹ ವಿರುವುದಿಲ್ಲ. ಮನೋರಮೆಯೂ ಹೊತ್ತು ಹೋಗುವುದಿಲ್ಲವೆಂದು ಬೇಸರ ಪಡುತ್ತಾ ಕವಿಯು ಬಂದೊಡನೆ ಕತೆ ಹೇಳೆಂದು ಕೇಳುವುದರಿಂದ ಎಲ್ಲ ಕೆಲಸಕ್ಕಿಂತ ದೊಡ್ಡದಾದ ಮಕ್ಕಳನ್ನು ಸಾಕುವುದೆಂಬ ಕೆಲಸವನ್ನು ಇನ್ನೂ ಕೈಗೊಂಡಿರಲಿಲ್ಲವೆಂದು ತೋರುವುದು. ಸೀತೆಯು ಪಕ್ಷಿಯನ್ನು ನೋಡಿ ತನ್ನ ಬಂಜೆತನವನ್ನು ನಿಂದಿಸಿಕೊಂಡಳೆಂಬ ಭಾಗದಲ್ಲಿ ಕವಿಯು ಎಂದಾದರೂ ತನ್ನ ಪತ್ನಿಯು ಹೇಗೆ ಎಣಿಸುವಳೋ ಎಂದು ತನಗೆ ತೋರಿದ ಭಾವವನ್ನು ವರ್ಣಿಸಿರಬಹುದು. ಇದರಂತೆಯೇ ಮಕ್ಕಳಿಲ್ಲದ ವರು ಮಕ್ಕಳು ಇರುವವರ ಸುಖವನ್ನು ಹೇಗೆ ನೆನೆಯುವರೆಂಬುದೂ ಈ

ಸಂದರ್ಭದಲ್ಲಿ ವರ್ಣಿತವಾಗಿದೆ. ಆ ವರ್ಣನೆಯಲ್ಲಿ ಕೂಡ ಇದೇ ಆತ್ಮೀಯತೆಯು ಕಂಡುಬರುವುದು.

ಕವಿಯು ಕತೆ ಹೇಳುವುದರಲ್ಲಿ ಅತಿಶಯವಾದ ಕೌಶಲವನ್ನು ತೋರಿಸಿರುವನೆಂದೂ ಮನೋರಮೆಯಿಂದ ಪಾಠಕರ ಅಭಿಪ್ರಾಯಕ್ಕೆ ರೂಪುಗೊಟ್ಟಿರುವನೆಂದೂ ಹೇಳಿದೆ. ಇದು ಈ ಗ್ರಂಥದಲ್ಲಿ ಅನೇಕಕಡೆ ಕಂಡುಬರುವುದು. ಶ್ರೀರಾಮನು ಸೀತೆಯನ್ನು ಕಾಡಿಗೆ ಒಯ್ದು ಅಲ್ಲಿ ಬಿಟ್ಟುಬರುವಂತೆ ಲಕ್ಷ್ಮಣನಿಗೆ ಆಜ್ಞೆಯನ್ನಿತ್ತು ಕಳುಹಿಸಲಾಗಿ ಆತನು ಅತ್ತಿಗೆಯನ್ನು ಕರೆದುಕೊಂಡು ಉತ್ತರಾಭಿಮುಖವಾಗಿ ಹೊರಟನು. ಇಲ್ಲಿ ಮೊದಲು ಸೀತೆಯನ್ನು ಕಳುಹಿಸುವುದೇ ಬಿಡುವುದೇ ಎಂದು ನಾಲ್ಕೈದು ಪುಟದಷ್ಟು ಚರ್ಚೆ ಇದೆ. ಲಕ್ಷ್ಮಣನ ಖೇದವನ್ನು ಕುರಿತು ವಿಸ್ತಾರವಾದ ವರ್ಣನೆಯಿದೆ. ಸೀತಾದೇವಿಯ ಪ್ರಯಾಣಸನ್ನಾಹದ ವಿವರವಾದ ವರ್ಣನೆ, ಗಂಗಾನದಿಯ ದೀರ್ಘವಾದ ವರ್ಣನೆ, ಗಾಳಿ, ನದಿ, ಕಾಡು, ಇವುಗಳ ಸರ್ವಲಕ್ಷಣಸಮನ್ವಿತವಾದ ಸುಂದರವಾದ ವರ್ಣನೆಗಳು ಇವೆ. ಇದಾದಮೇಲೆ ಲಕ್ಷ್ಮಣನು "ನಟ್ಟಡವಿಯಂ ಪೊಕ್ಕು ಕಟ್ಟಕಡೆಯೊಳ್ ಅಣ್ಣನ ಕಟ್ಟಾಣತಿಯನೊರೆದು ಭೂಮಿಜೆಯ ನುೞಿಸಿ ಪೋದಂ" ಎಂದು ಹೇಳಿ ಕವಿಯು "ಶ್ರೀ ರಾಮಾಶ್ವಮೇಧದೊಳ್ ಸೀತಾಪರಿತ್ಯಾಗಮೆಂಬ ಪಂಚಮಾಶ್ವಾಸಂ ಸಂಪೂರ್ಣಂ" ಎಂದು ಆಶ್ವಾಸವನ್ನು ಮುಗಿಸುತ್ತಾನೆ. ಪಾಠಕರಿಗೆ ಕಾಡಿನ ಸೊಗಸೂ ಗಂಗಾನದಿಯ ನೀರಿನಲ್ಲಿಯ ಸುಳಿಯ ಚೆಂದವೂ ಬೇಕಾಗಿರುವುದಕ್ಕಿಂತ ಸೀತೆಯ ಪಾಡು ಏನಾಯಿತೆಂದು ತಿಳಿಯುವುದು ಹೆಚ್ಚಾಗಿ ಬೇಕಾಗಿರುತ್ತದೆ. ಕವಿಯು ಇದನ್ನು ಬಲ್ಲನು. ಆದುದರಿಂದ ಕವಿಯು ಕಾಡಿಗೂ ಸುಳಿಗೂ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟು ಸೀತೆಯನ್ನು ಕಾಡಿನಲ್ಲಿ ಬಿಟ್ಟ ವಿಷಯವನ್ನು ಒಂದು ಮಾತಿನಲ್ಲಿ ಮುಗಿಸುತ್ತಾನೆ. ಇದರಿಂದ ಈ ಸಂದರ್ಭದ ದುಃಖವು ನೂರುಮಡಿ ಗುಣಿತವಾಗುವುದು. ಇದಲ್ಲದೆ ವರ್ಣನೆಯ ವಿಸ್ತಾರದಿಂದ ಮತ್ತೊಂದು ಪರಿಣಾಮವು ಪಾಠಕರ ಮನಸ್ಸಿನಲ್ಲಿ

ಉಂಟಾಗುತ್ತದೆ. ಸೀತೆಯು ತಪೋವನವನ್ನು ನೋಡಬೇಕೆಂದು ಹೊರಟಿದ್ದಳು. ಇಲ್ಲಿ ಸುಂದರವಾದ ವನವಿದೆ, ಪಾವನೆಯಾದ ಗಂಗೆ ಇದ್ದಾಳೆ. ಆದರೆ ಸೀತೆಗೆ ಆ ಬಯಕೆಯ ಸುಖವು ಪ್ರಾಪ್ತವಾಗಲಿಲ್ಲ. ಇದರಿಂದ ಈ ಎಲ್ಲ ಸೌಂದರ್ಯದ ವಿಷಯದಲ್ಲಿ ಸಾಮಾನ್ಯವಾಗಿ ಇರಬಹುದಾದ ಉತ್ಸಾಹಕ್ಕೆ ಬದಲಾಗಿ ಪಾಠಕರ ಮನಸ್ಸಿನಲ್ಲಿ ಒಂದು ವಿರಕ್ತಿಯುಂಟಾಗುವುದು. ಕತೆ ಕೇಳುವವರ ಮನಸ್ಸನ್ನು ವೀಣೆಯಂತೆ ಕೈಗೆ ತೆಗೆದುಕೊಂಡು ಅದರಲ್ಲಿ ಇಷ್ಟಬಂದ ಭಾವಗಳನ್ನು ಹೀಗೆ ಧಾರಾಳವಾಗಿ ಉಂಟುಮಾಡುವದು ಕವಿತಾಶಕ್ತಿಯ ಪೂರ್ಣಾವೇಶಕ್ಕೆ ಮಾತ್ರ ಸಾಧ್ಯ. ಈ ಕವಿಯು ಪಾಠಕರ ಮನಸ್ಸನ್ನು ಹೀಗೆ ಹಿಡಿದುಕೊಳ್ಳಬಲ್ಲನು. ಲಕ್ಷ್ಮಣನು ಸೀತೆಯನ್ನು ಬಿಟ್ಟುಹೋದನು ಎಂಬ ಮಾತನ್ನು ಕೇಳಿ ಮನೋರಮೆಯು ಕಂಬನಿಗರೆದು

**"ಆಃ! ಎನ್ನೊಡೆಯ! ನೀನುಮೆಂತು ಕಲ್ಮನನಾದಯ್. ಒರ್ವಡವೆಯೆ ದೇವಿಯಂ ಕಾರಡವಿಯೊಳುೞಿದು ಲಕ್ಷ್ಮಣಂ ಪೋದನೆಂಬೊಡೆ ಮೃದುನಂಗಮಾದೊಡಮೆಂತು ಮನಮಾದುದೋ! ಮೇಣೆಂತು ದೇವಿಯರ್ಗೆ ಕಾವಲಿರದೆ ಪೋದನೋ! ತೊಱೆದು ಪೋಪನ್ನಂ ಸೀತೆಯೇನೆಂದು ಮಱುಗಿದಳೋ! ಅಕ್ಕಟಾ! ಪೆಣ್ಗಳೊಂದು ಬಾೞ್ತೆಬಾೞ್ತೆಯೆ!"**

ಎನ್ನುವಳು. ನಮಗೂ ಕಣ್ಣಿನಲ್ಲಿ ಚಿಮ್ಮಿರುವ ಅಶ್ರುಬಿಂದುವನ್ನು ಒರಸಿಕೊಳ್ಳುವುದಕ್ಕೆ ಸ್ವಲ್ಪ ಅವಕಾಶ ಸಿಕ್ಕುತ್ತದೆ. ಈ ಅವಕಾಶದಲ್ಲಿ ಒಂದು ಕ್ಷಣ ಕವಿಯು ವರ್ಣಿಸುವ ಮೊದಲೇ ಸೀತೆಯ ಅವಸ್ಥೆಯನ್ನು ಭಾವನೆಯಲ್ಲಿ ಸ್ವಲ್ಪ ಕಂಡು ಮತ್ತಷ್ಟು ಕುಗ್ಗುತ್ತೇವೆ. ಮನೋರಮೆಯ ಪ್ರಾರ್ಥನೆಯಂತೆ ಅವನು ಆ ಅವಸ್ಥೆಯನ್ನು ವರ್ಣಿಸುವುದಕ್ಕೆ ಆರಂಭಿಸುವ ವೇಳೆಗೆ ಆ ಖೇದದ ಬಹುಭಾಗವನ್ನು ಅನುಭವಿಸಿ ಮುಗಿಸಿ ನೊಂದರೂ ಸ್ತಿಮಿತವಾಗಿರುವ ಮನಸ್ಸಿನಿಂದ ಕವಿಯ ವರ್ಣನೆಯನ್ನು ಕೇಳಲು ಸಿದ್ಧರಾಗುತ್ತೇವೆ. ಇದೆಲ್ಲ ಮುದ್ದಣನ ಕತೆ ಹೇಳುವ ನೈಪುಣ್ಯವನ್ನು ತೋರಿಸುವುದು.

ಇದೇ ಸಂದರ್ಭದಲ್ಲಿ ಸಮಯಕ್ಕೆ ತಕ್ಕಂತೆ ಮಾತನಾಡಿಸುವ ಶಕ್ತಿಯು ಕಾವ್ಯದಲ್ಲಿ ತೋರಿಬರುವುದು. ತಾನು ಸೀತೆಯನ್ನು ಬಿಟ್ಟು ಹೋಗುವೆನೆಂದು ಲಕ್ಷ್ಮಣನು ಹೇಳುವ ಮೊದಲು ದೇವಿಯು ಸಂದರ್ಭವನ್ನರಿಯದೆ ಮೈದುನನನ್ನು ಕುರಿತು “ ಕಂದ, ಈ ಅಡವಿಯಲ್ಲಿ ಆಶ್ರಮವೆಲ್ಲಿಯದು ! ನೀನು ದಾರಿ ತಪ್ಪಿದೆ'' ಎಂದು ಹೇಳುವಳು. ತಾನು ಮಾಡ ಬಂದಿರುವ ಕೆಲಸದ ಧ್ಯಾನದಿಂದ ಖಿನ್ನನಾಗಿರುವ ಲಕ್ಷ್ಮಣನು ಅತ್ತಿಗೆಯ ಈ ಪ್ರೇಮಪೂರಿತವಾದ ಸಂಬೋಧನೆಯನ್ನು ತಡೆಯಲಾರದೆ ಒಡನೆ ಅವಳ ಕಾಲಿಗೆ ಬಿದ್ದು ನನ್ನನ್ನು “ ಕಂದ'' ಎಂದು ಕರೆಯಬೇಡಿ, ''ಹಗೆ'' ಎಂದು ಎಣಿಸಿ ; ಎಂದು ತಾನು ಮಾಡ ಬಂದಿರುವ ಕಾರ್ಯವನ್ನು ತಿಳಿಸುವನು. ಲಕ್ಷ್ಮಣನ ಮಾತನ್ನು ಕೇಳಿ ದೇವಿಯು ಮೈಮರೆತು ಮತ್ತೆ ಅರಿದು ಬಹುವಿಧವಾಗಿ ಹಂಬಲಿಸಿ ಕೊನೆಗೆ ತನ್ನ ತಾಯ ತಾಳ್ಮೆಗೆ ಎಣೆಯಾದ ತಾಳ್ಮೆಯಿಂದ ಆ ತಾಯ ಪ್ರೇಮಕ್ಕೆ ಸರಿಯಾದ ಪ್ರೇಮದಿಂದ

**ಕಂದ, ನಿನ್ನಲ್ಲಿ ತಪ್ಪಿಲ್ಲ. ನಿಮ್ಮ ಅಣ್ಣನು ಕೇಳಿದರೆ “ ನಿನ್ನಾಣತಿಗಬಲೆ ಮಱುಗಿದಳಿಲ್ಲ. ಮಾರ್ನುಡಿದಳಿಲ್ಲ. ಮುನಿಸಾಂತಳಿಲ್ಲ. ಬೆರ್ಚಿದಳಿಲ್ಲ. ಕೊಟ್ಟುದಿಗೊಂಡಳಿಲ್ಲ. ದೂಱಿದಳಿಲ್ಲ. ನೀನೇ ಗತಿಯೆಂದು ನಿನ್ನಡಿಯಂ ನೆನೆಯುತೆ ಕಡೆಪೋಲ್ತಿಂ ಪಾರುತಿರ್ಪಳೆಂದು ಬಿನ್ನವಿಸಯ್ ”**

ಎಂದು ಹೇಳುವಳು.

ಈ ಮಾತು ದೇವಿಯಲ್ಲಿ ಎಷ್ಟು ಉಚಿತವಾದುದು ! ಹೀಗೆಯೇ ಊರ್ಮಿಳೆ ಮೊದಲಾದವರಿಗೆ ಏನು ಹೇಳುವುದೆಂದೂ ತಾನು ಇನ್ನು ಉಪಯೋಗಿಸಲಾಗದ ವಸ್ತ್ರಾಭರಣಗಳನ್ನು ತನ್ನ ದಾಸಿಯರಿಗೆ ಓರಗಿತ್ತಿಯರಿಗೆ ಯಾವಯಾವುದನ್ನು ಕೊಡಬೇಕೆಂದು ಲೋಕಮಾತೆಯು ಹೇಳಿರುವುದನ್ನು ಕವಿಯು ವರ್ಣಿಸಿರುವುದೂ ಸಂದರ್ಭೋಚಿತವಾಗಿ ಹೃದಯದ್ರಾವಕವಾಗಿ ಇವೆ. ಇದನ್ನೆಲ್ಲಾ ಕಾವ್ಯವನ್ನು ಓದಿಯೇ ತಿಳಿಯಬೇಕು.

ಸೀತೆಯನ್ನು ತ್ಯಜಿಸಿರುವುದರಿಂದ ರಾಮನ ವಿಷಯದಲ್ಲಿ ನಮಗುಂಟಾಗಿರುವ ಅಸಂತುಷ್ಟಿಯನ್ನು ಕವಿಯು ಇಷ್ಟರಲ್ಲೇ ಮನೋರಮೆಯ ಬಾಯಲ್ಲಿ ವ್ಯಕ್ತಗೊಳಿಸಿ ಮುಂದಣ ಕತೆಗೆ ಪಾಠಕರ ಮನಸ್ಸನ್ನು ಹೀಗೆ ಸರಿಪಡಿಸಿಕೊಳ್ಳುವನು.

ಮುದ್ದಣಂ—ಎನ್ನ ಕೊಂಡಾಟದ ಬಾಳ್ವಣವೆ! ಇಂತು ಭೂಜಾತ ಪ್ರಾಚೇತಸನೊಲ್ಮೆಗಾಪಿಂ ಪುಣ್ಯಾಶ್ರಮದೊಳಿರ್ಪಿನಮಿತ್ತಲ್ ಸಾಕೇತನಗರದೊಳ್ ಸೀತಾರಾಮಂ ತನ್ನ ಬರ್ದಿನ............

ಮನೋ—ನಲ್ಲ! ಏ ಮಾತೂ? ಸೀತೆಯನಂತುೞಿದುಮೇತಱ ಸೀತಾರಾಮಂ ಪೋ! ಮಾಣ್! ಅವಂಗಿನ್ನೆತ್ತಣ ಸೀತೆ? ಅಪ್ಪೊಡಿನ್ನಾಕಲ್ಲಿರ್ದೆಯಂ ರಾಮನೋ ಭೀಮನೋ? ಏನ್.

ಮುದ್ದಣಂ—ಎನ್ನ ಕೈಗಳಸವೆ! ಇಂತುಮೆಂಬರೆ! ಶ್ರೀರಾಮಂ ಕಲ್ಲಿರ್ದೆಯನೆ! ಆಃ! ಬಱಿಕ್ಕಮಾತನ ಪ್ರಳಾಪಮಂ ನೀಂ ಕೇಳ್ದುದಿಲ್ಲಂ.

ಮನೋ—ಏಂ ತಾನೆ ತಲೆವೊಯ್ದುಂ ಮಱುಗಿದನೆ?

ಮುದ್ದಣಂ—ರಾಮಂ ತಲೆವೊಯ್ದನೇಂ? ತಾಂ ಯಶೋಧನನಪ್ಪಿನಂ ಲೋಕಾಪವಾದ ಭೀತಿಗಡವಿಗಟ್ಟಿದರಸಿಯೊಳೇಂ ಪಗೆಯೆ?

ಮನೋ—ಪಗೆಯೇಂ ನಗೆಯೇಂ? ಬಡವೆಯೊರ್ವಳ್ ಕಾಡಿಂಗಾದಳ್ಕಸೆ.

ಮುದ್ದಣಂ—ಇಂತಿದನೆ ನೆನೆನೆನೆದಱಿಂಬಂ ಪಲುಂಬಿದಂ.

ಮನೋ—ಏಂ ತನಗೆ ಪೆಱರ್ ಪೆಂಡಿರಿಲ್ಲೆಂದೆಯೆ?

ಮುದ್ದಣಂ—ಪರಿಹಾಸಂ ಸಾಲ್ಗುಂ ಕೇಳ್; ಏಗಳ್ ಲಕ್ಷ್ಮಣಂ ಸೀತೆಯಂ ಕೊಂಡೊಯ್ದನೆಂಬ ವಾರ್ತೆ ಕೇಳಿಸಿದುದಾಗಳೆ ಪಶ್ಚಾತ್ತಾಪದಿಂ ರಾಘವನಂ ಮನವೊಳಗೊಳಗೆ ಬೆಂದು ಬೇಗುದಿಯೊಳಿರ್ದತ್ತು.

ಸೀತೆಯು ವಾಲ್ಮೀಕಿಯ ಆಶ್ರಮವನ್ನು ಸೇರಿದಳೆಂದು ಕವಿಯು ಈ ಮೊದಲೇ ತಿಳಿಸಿರುತ್ತಾನೆ. ಹೀಗೆ ಹೆಜ್ಜೆಹೆಜ್ಜೆಗೂ ಕತೆಹೇಳುವಲ್ಲಿ ಕವಿಯು ಪಾಠಕರ ಮನಸ್ಸಿನ ಯಾವ ಅವಸ್ಥೆಯನ್ನು ಹೇಗೆ ಉಂಟುಮಾಡಿಕೊಳ್ಳುವುದೆಂದು ಚೆನ್ನಾಗಿ ತಿಳಿದು ಆಯಾರೀತಿಯಲ್ಲಿ ಅವರ ಮನಸ್ಸನ್ನು ತಿದ್ದಿಕೊಳ್ಳುವನು.

ಈ ಕಾವ್ಯದ ಪ್ರಕೃತಿಸೌಂದರ್ಯದ ವರ್ಣನೆಯ ಸೊಗಸನ್ನು ತೋರುವಂತೆ ಈ ಮೊದಲೇ ಉದಾಹರಣೆಯನ್ನು ಕೊಟ್ಟಿದೆ. ಬಹು ಸುಂದರವಾದ ಮತ್ತೊಂದು ವರ್ಣನೆಯ ವಿಮರ್ಶೆಯಿಂದ ಈ ಅಭಿಪ್ರಾಯವನ್ನು ಪುಷ್ಟೀಕರಿಸಬಹುದು. ಶತ್ರುಘ್ನನು ಸೇನಾಸಮೇತನಾಗಿ ಯಜ್ಞಾಶ್ವದ ಹಿಂದೆ ಪ್ರಯಾಣಮಾಡುತ್ತಿರಲು ಮುಂದೆ ಒಂದು ನೀಲ ಪರ್ವತವು ಕಂಡಿತೆಂದು ಕವಿ ವರ್ಣಿಸುತ್ತಾನೆ. ಈ ವರ್ಣನೆಯಲ್ಲಿ ಚಿತ್ರಗಾರನು ಚಿತ್ರಬರೆಯುವುದರಲ್ಲಿ ಯಾವ ಉಪಾಯಗಳನ್ನು ಉಪಯೋಗಿಸುವನೋ ಆ ಉಪಾಯಗಳನ್ನೆಲ್ಲ ಕವಿಯು ಉಪಯೋಗಿಸಿರುವನು. ಈ ಪರ್ವತದ ವರ್ಣನೆಯುದ್ದಕ್ಕೂ ನೀಲಿಮೆಯ ಸಂಕೇತವು ಮತ್ತೆಮತ್ತೆ ಮೈದೋರುತ್ತದೆ. ಕತ್ತಲೆಯ ವೃಂದ; ನೆರೆದ ನೀರ್ವೊಟ್ಟಣ; ಮಾಕಾಳಿಯ ಎಡಮೊಲೆ; ಕರ್ಮಣಿಯ ಪಾಸರೆ; ಚಂಡಿಕೆ; ಮಹಿಷಾಸುರ; ಸಿಂಧುರಂಗಮಂಡಲ; ಬಾಣಸಿನ ಆವಿಗೆ; ಪುರುಷೋತ್ತಮನ ನಿಡುವಣೆ; ಪೊಂಬಾಳೆಯ ತೋಟ; ಈ ನೀಲಿಮೆಯ ಚಿತ್ರದ ಒಟ್ಟಿನ ಬಣ್ಣ; ಈ ಒಟ್ಟಿನ ಬಣ್ಣದ ಮೇಲೆ ಒಂದೆರಡು ಬೇರೆಯ ಬಣ್ಣಗಳು. ಮಹಿಷಾಸುರನ ದಂಡೆಗರುಳು; ಅಚ್ಚವಳಕಿನ ಗಂಡಶೈಲ; ತನಿಗೆಂಡದಂತಿರುವ ರಂಗಮಾಣಿಕ; ಮೂರುಕಡೆಯಿಂದ ಪುರುಷೋತ್ತಮನ ಹಣೆಯ ತ್ರಿಪುಂಡ್ರದಂತೆ ಹರಿದುಬರುವ ಬೇರೆಬೇರೆ ಬಣ್ಣದ ನೀರಿನ ಧಾರೆ; ಸ್ಪರ್ಶಶಿಲೆ; ಆ ಒಟ್ಟು ಬಣ್ಣದ ಮೇಲೆ ಈ ಬಣ್ಣಗಳು ಅಂದವಾಗಿ ಲೇಪಿಸಲ್ಪಟ್ಟು ಚಿತ್ರವು ಸುಂದರವಾಗಿದೆ. ಸಾಮಾನ್ಯವಾದ ಪರ್ವತವನ್ನು ಅದರ ಸೌಂದರ್ಯವನ್ನು ಗ್ರಹಿಸುವ ಬುದ್ಧಿಯಿಂದ ವರ್ಣಿಸುವ ಸಂದರ್ಭದಲ್ಲಿಯೂ ಈ ಲಕ್ಷಣಗಳು ಕಂಡುಬರಬಹುದು; ಆದರೆ ಇಲ್ಲಿ ಪರ್ವತವು ಪಾವನವೂ ಪುಣ್ಯಾಶ್ರಯವೂ ಎಂಬ ಒಂದು ಧ್ವನಿಯೂ ಇದೆ. ಮಾಕಾಳಿ; ಮಹಿಷಾಸುರನನ್ನು ಕಡಿಯಹೋದ ಚಂಡಿಕೆ; ದಿನವೂ ಬರುತ್ತಿರುವ ಯಾತ್ರಿಕರು; ಪುರುಷೋತ್ತಮನ ನೀಳವಾದ ಹಣೆ. ಒಟ್ಟಿನ ಚಿತ್ರವು ಸುಂದರ

ವಾಗುವುದಲ್ಲದೆ ಅದರ ಒಂದೊಂದು ಭಾಗವೂ ಸಂಪೂರ್ಣವಾಗುವಂತೆ ಕರ್ಮಣಿಯ ಪಾಸರೆಯನ್ನೂ ಪರ್ವತದ ತಳ್ಪಲನ್ನೂ ಗಂಡಶೈಲವನ್ನೂ, ರಂಗುಮಾಣಿಕದ ಅಗಲ್ತೆಯನ್ನೂ, ನೀರಿನ ಧಾರೆಯನ್ನೂ, ಕವಿಯು ವಿವರವಾಗಿ ವರ್ಣಿಸಿರುವನು. ಎಲ್ಲಕ್ಕೂ ತಕ್ಕ ಮಾತು; ಮಾತಿನ ಸೇರಿಗೆ ಯಲ್ಲಿ ಸಣ್ಣಮಾತು ದೊಡ್ಡಮಾತು ಸೇರಿದ ಮಾತುಗಳ ಯುಕ್ತಿಯುಕ್ತ ವಾದ ವ್ಯೂಹರಚನೆಯಿಂದ ವಾಕ್ಯದ ಶಬ್ದವು ಮೃದುವಾಗಿ ಕೊನೆಯಾ ಗುವುದು. ಈ ವರ್ಣನೆಯ ಚಿತ್ರಕಾರ್ಯವು ಅಜಾಂತದ ಚಿತ್ರಗಳ ಕೌಶ ಲವನ್ನೂ ಇದರ ಶಬ್ದದ ಸೌಂದರ್ಯವು ಶಾಸ್ತ್ರಾನುಗುಣವಾಗಿ ಮೃದಂ ಗದಲ್ಲಿ ನುಡಿಸಬಹುದಾದ ಒಂದು ಆವರ್ತದ ನಾದತರಂಗದ ಸೌಂದರ್ಯ ವನ್ನೂ ಹೋಲುವುದು. ಈ ವರ್ಣನೆಯು ಭಾವನೆಯಲ್ಲಿಯೂ, ಊಹೆ ಯಲ್ಲಿಯೂ, ಶೈಲಿಯಲ್ಲಿಯೂ ಸಾಹಿತ್ಯಸಾಮ್ರಾಜ್ಯದ ಎಲ್ಲೆಯನ್ನು ಮುಟ್ಟಿರುವುದು.

ಈ ಕವಿಯು ಉಳಿದ ರಸಗಳನ್ನು ಸ್ವಾಧೀನಮಾಡಿಕೊಂಡಿದ್ದಂ ತಯೇ ಹಾಸ್ಯವನ್ನೂ ಪಡೆದಿದ್ದನೆಂದೂ ಈ ಕಾವ್ಯದಲ್ಲಿ ಅಲ್ಲಲ್ಲಿ ತೋರು ತ್ತದೆ. ಸತಿಪತಿಯರ ಆರಂಭಸಂಭಾಷಣದಲ್ಲಿ ಇದು ಕಾಣುವುದು. ಇದ ರಂತೆ ಇನ್ನೆರಡು ಸಂವಾದಗಳಲ್ಲಿ ಈ ರಸವು ಧಾರಾಳವಾಗಿ ಉಕ್ಕಿಬರು ವುದು. ಈ ಸಂವಾದಗಳಿಂದ ಈ ಕಾವ್ಯಕ್ಕೆ ಒಂದು ಅಪೂರ್ವವಾದ ಸೊಗಸು ಬಂದಿರುವುದರಿಂದ ಇವುಗಳನ್ನು ಇಲ್ಲಿ ಉದ್ಧರಿಸಿದೆ. ಕಥೆ ಹೇಳುತ್ತಾ ಮುದ್ದಣನು ಮನೋರಮೆಯನ್ನು ಒಂದುಸಲ 'ದೇವೀ' ಎಂದು ಸಂಬೋಧಿಸುವನು. ಸ್ವಲ್ಪಹೊತ್ತು ಕತೆಯನ್ನು ಕೇಳಿದ್ದು ಕವಿ ಯೊಡನೆ ಎರಡು ಮಾತನಾಡೋಣವೆಂದು ಆಕೆಯು ಯಾವ ದೇವಿ, ಶ್ರೀ ದೇವಿಯೇ, ಭೂದೇವಿಯೇ ಎಂದು ಸಂಭಾಷಣೆಯನ್ನು ಮೊದಲು ಮಾಡು ವಳು. ಆಮೇಲೆ ಮಾತು ಹೀಗೆ ನಡೆಯುವುದು.—

**ಮು—ರತಿದೇವಿ.**

**ಮ—ಅಂತಪ್ಪೊಡೆ ನೀಂ ಕಾಮದೇವಂ.**

ಮು—ಅಕ್ಕೆ ದೇವಿಯೊಂದು ಹಸಾದಂ.

ಮ—ಎಲೆ ಮದನ ಮೋಹನರಾಜ! ಅಂತಿರ್ಪೊಡೆ ನೀಂ ಪೇೞ್ದು ರತಿಯನೆ ಬಣ್ಣಿಸಿ ಪೊಗೞ್ ನೋೞ್ಪೆಂ.

ಮು—ಓ! ಏತಱ ಮಾತೊ! ಎನ್ನಳವೆ?

ಮ—ಆಃ! ರತಿಯಂ ಬಣ್ಣಿಸಲ್ಕೆ ಸಲ್ಲದ ನೀನೇತರ ಕಾಮದೇವಂ?

ಮು—ಅಂತಪ್ಪೊಡೆ ಸಲ್ವೆಂ ಸಲ್ವೆಂ; ಕಾಮದೇವನೆಂಬೊಂದು ಬಿರುದಂ ಪಡೆದುಮಾಱೆನೆ? ತೆಗಲ್ವಿರ್ಕೆ. ಇದೆ ಇದೆ ತೊಡಂಗಿದೆಂ. ಅಸಿದೊಡಲ ಪೂಗಣ್ಣ ಪೆಣ್; ಸಸಿಮೊಗದ ಕಿಸುವಾಯ ಪುಸಿನಡುವಿನರಸಿ; ಮಿಡಿಮೊಲೆಯ ಪಿಡಿನಡೆಯ ಬಿಡುಜಡೆಯ ನೀೞ್; ಬೆಟ್ಟು.

ಮ—(ಅರೆನೋಟದಿಂ) ಆಃ! ಕಬ್ಬಿಗರ್ಗೆ ನೀಂ ಕಲ್ಲಿಯತ್ತನಕ್ಕುಂ. ಎಂದು ಕಾಣದರೊಂದು ಪಾಂಗಿನಿಂ ಪೇೞ್ದು ಪೊಚ್ಚರದ ನಿನ್ನೀ ಬಣ್ಣನೆಯ ನುಡಿಗೇನೆಂಬೆನೊ! ಒಡಲಸಿದೇಂ? ಮೊಗದೊಳೇತಱ ಸಸಿ? ಕಣ್ಣೊಳೇತಱ ಪೂ? ನಡುವಿನೊಳೇಂ ಪುಸಿ? ಎಂದು ಬಾಯುಂ ಕಿಸಿದಳ್. ಜಡೆಯುಂ ಬಿದಿರ್ಚಲ್ಕೇಂ ದೆವ್ವಮಾಳ್ದುದೆ? ಪೋ, ನೀಂ ಕಾಮನಲ್ತು ಭೀಮಂ.

ಮು—(ಕಿಱುನಗೆಯಿಂ) ಎನ್ನ ಕುಲದೇವಿ! ಇನಿತೊಂದು ಮುನಿಸೇಂ. ಎನ್ನ ನಗೆಯಿನಿಂತಾಯ್ತಕ್ಕುಂ; ಸೈರಿಸು! ಸೈರಿಸು! ನುಡಿನಿಱಿಗೆಯುಂ ಬೆದಂಕಿ ಪಾರದಂತುಂ ಇರ್ದಂತೆ ಬಣ್ಣಿಪೊಂದು ಜಾಣ್ಮೆ ದೊರೆಕೊಳ್ವಂತುಂ ಬಾಸೆವೆಣ್ಣೊಂದೊಲ್ಮೆದಾಳ್ದಿ ವಾಕ್ಸಿದ್ಧಿಯುಂ ಪಡೆದು ನಿನ್ನಂ ಎನ್ನ ಜನ್ನದಾರದಾಣೆ! ರತಿಯಿಂ ನೂರ್ಮಡಿ ಮಿಗಿಲೆನಿಸಿ ಬಣ್ಣಿಪೆಂ—ಸುವ್ವಿ! ಸುವ್ವಿ! ನಾಲ್ಮೊಗನಗ್ಗಿಟ್ಟಿಕೆಯೊಳೊಗೆದ ಒಳ್ನಗೆಯ ಮುದ್ದುಗುವರಿ! ಸುವ್ವಿ! ಸುವ್ವಿ! ಬೀಣೆ ಹೊತ್ತಗೆಗಳಂ ಪೊತ್ತ ಕೈಯ ಚೆಲ್ವೆ! ಸುವ್ವಿ! ಸುವ್ವಿ! ಬಾಣಿ. ಎನ್ನೀ ಮಡದಿರನ್ನೆಯುಂ ರತಿಗೆಣೆಯೆಂದು ಪೊಗೞ್ದು ಪಾಡುವೊಂದು ಜಾಣ್ಮೆಯ ಪೊರ್ದುಗೆಯ ನುಡಿಬಿನ್ನಣಮನೆನಗೆ ಕರುಣಿಸೌ! ನಿನಗೆಱಗುವೆಂ. ಸುವ್ವಿ! ಸುವ್ವಿ! ಆ! ಆ! ಆ! ಆ! ಆ!!!

ಮ—ನೀಂ ಗೈದ ಸರಸತಿಯ ಪೊಗೞ್ಕೆಯ ತುತ್ತ ತುದಿಯ "ಆ! ಆ!!" ಏಂ?

ಮು—ಅಂತದು ಪಾಡಿನ ಜೋಡಿನ ದಾಟಿಯೈಸೆ.

ಮ—ಆಯ್ತಾಯ್ತು ಚೆಲ್ವು. ಏಂ ನಿನ್ನಂ ಸರಸತಿಯೊಲ್ದಳ್?

ಮು—ಎಂತೆಂತೊ ಪಾಡಿ ಬೇಡಿ ಒಲ್ಮೆವಡೆದೆಂ. ಈಗಳೆನಸುಂ ತಡಂಬಡದೆ ಬಣ್ಣಿಸಿ ನಿನಳೊಂದೊಲ್ಮೆವಡೆದಪೆಂ ಕೇಳ್! ಮಾಕಾಳಿಯ ಮೈಪೊಗರ್ಗೆ........

ಮ—ನಿನ್ನ ರತಿಯಂ ಬಣ್ಣಿಪೊಂದು ಸಂಧಿಯೊಳ್ ಮಾಕಾಳಿಯೊಳೇಂ ಕಜ್ಜಂ?

ಮು—ಆ! ಎಡಗೇಡಿಯನೆ ಮಱೆತೆಂ; ಆತನಂ ಬಲಂಗೊಳದಿರ್ದನಂ ಮೊತ್ತಮೊದಲಿನೊಳಿನಿತುಂ ವಿಘ್ನಂ. ಓ ಓ! ಒರ್ಪನೆಯ ಬಿಂಕಣಿಗಿವಿಯ ಮೂಗೊಂಕು ಮೂಗಿನ ಪೇರೊಡಲ ಇಲಿದೇರ ಬೆನಕ! ಇದೆ ಮಣಿವೆಂ. ಈ ರಮಣೀಯಮಪ್ಪ ರತಿದೇವಿಯಂ ಬಣ್ಣಿಪೊಂದು ಕವನದ ಕಜ್ಜದುಜ್ಜುಗದನಿತೊಂದು ಪೊೞ್ತನೇಮಾೞ್ಕೆಯೊಳಮೆಡರ್ ಬಾರದಂತು ಕಾವುದು. ಇನಿತೊಂದು ಮೇಲನೊಡರ್ಚಿದೆಯಪ್ಪೊಡೆ ಆ ಬಣ್ಣನೆಯ ಪೊಗೞ್ಕೆಯ ಪಾಡಿಂಗೊಲ್ವೆನ್ನೀ ಮಡದಿ ಕೂರ್ಮೆಯಿನೆನಗೆ ತಿನಮಡಿಸುವಾ ಪಸುಗೆಯ ಚಕ್ಕುಲಿಯುಂ ಗಾರಿಗೆಯುಂ ಪುರಿಗಡಲೆಯುನವಲಂ ಕರ್ಬಂ ತೇಂಗಾಯುಂ ನಿನಗಂ ಪಾಲಿತ್ತು ಮೊದಲೊಳರ್ಪಿಸುವೆಂ.

ಮ—ನಿನ್ನ ಬೆನಕಂ ಒರ್ಪನೆವಾಯೊಳಿಂತುಱ್ಗಂ.

ಮು—ಏಂ ರಮಣಿ ದೇವರುಣ್ಬರೆ? ಉಣ್ಬೊಡಂತೆಂಬೆನೆ?

ಮ—ಮೇಣೊರ್ವನೆ ತಿನಲ್ ಬಗೆವಾ!

ಮು—ನೀನೀವುದೇಂ ದಿಟಂ.

ಮ—ಎತ್ತಾನುಮಿತ್ತೊಡೇಂ ಗೆಯ್ವೆಯ್.

ಮು—ಇಸ್ಸಿ! ಅನಿತ್ತು ಭಕ್ಷ್ಯಮನೊರ್ವನೆ ನುಂಗಲಾಂ—ಕಾವೆ(?)ಚಕ್ಕುಲಿ ಗಾರಿಗೆಗಳ್ ಕಾಮದೇವಂಗೆ; ಅವಲುಂ ಪುರಿಗಡಲೆಯುಂ ಮುದ್ದಣಂಗೆ; ಕಬ್ಬು ಕಬ್ಬಿಗಂಗೆ ; ತೇಂಗಾಯೆನಗೈಸೆ.

ಮ—ನೀಂ ಜಾಣಂ. ನಿನ್ನ ರತಿದೇವಿಗೇಂ?

ಮು—ತಾನೆ ಒಲ್ದೀವ ದೇವಿಗಾವುದಱೊಳಾಸೆಯೊ?

ಮ—ಅಂತಿರೆಯುಂ ಮನೋರಮಗೇಂ?

ಮು—ಓಹೊ! ರತಿಯಂ ಬಣ್ಣಿಪೊಂದು ಬೆಸನದೊಳ್ ಮನೋರಮೆಯಂ ಮಱೆದುೞಿದೆಂ; ಅಕ್ಕೆ! ಕಬ್ಬಿನ ಸಿವುರುಂ ಮುಗ್ಗಿದ ಗಾರಿಗೆಮುಡಿಯುಂ ಮನೋರಮೆಗಿರ್ಕೆ.

ಮ—ನೀಂ ಬಲ್ಗಡಸುಗಾಱಂ ಸಾಜಂ; ಇರ್ಕೆ; ನೀಂ ಮನದೊಳೆ ಮಂಡಿಗೆಯನುಂಡಂತಾಯ್ತು. ಈಗಳಿಂ ಕೇಳ್ವೆಂ ರತಿಯ ಪೊಸಬಣ್ಣನೆಯಂ.

ಹೀಗೆ ಇನ್ನೆರಡು ಮಾತನಾಡಿ ಕವಿಯು ಕತೆಯನ್ನು ಮತ್ತೆ ಆರಂಭಿಸುವನು.

ಹಾಸ್ಯರಸಯುಕ್ತವಾದ ಇನ್ನೊಂದು ಸಂವಾದವನ್ನು ಮನೋರಮೆಯೇ ಆರಂಭಮಾಡುವಳು. ಶತ್ರುಘ್ನನು ಸೈನ್ಯದೊಡನೆ ಒಬ್ಬ ತಪ





ಸ್ವಿಯ ಆಶ್ರಮಕ್ಕೆ ಹೋಗಲು ಆತನು ಶತ್ರುಘ್ನನನ್ನೂ ಸೈನ್ಯವನ್ನೂ ಮನ್ನಿಸಿ ಮೃಷ್ಟಾನ್ನಭೋಜನದಿಂದ ತಣಿಸಿ ಸತ್ಕರಿಸಿದನೆಂದು ಕವಿಯು ಹೇಳುವನು.

ಮ—ಎನಗಿದಚ್ಚರಿ ಎಂತುಟಾರ್ತರ್ಂ?

ಮು—ಮುನಿಗಳೊಂದು ಜಪದ ತಪದ ಮಂತ್ರದ ಬಲ್ಮೆಯೇಂ ಕಿಱಿದೆ? ಬೇಡಿದ ಪುರುಳನುಱಿದಿಂ ತಂದೀಗುಂ.

* * * *

ಮ—ಓ! ಇನಿತೊಂದು ಜಪದ ಬಲ್ಮೆ ನೆರವಿರ್ಪನ್ನಂ ಪೆಱತೊಂದಱ ಗೊಡವೆಯಿಲ್ಲದಿರ್ಕುಂ ತಾಪಸರ್.

ಮು—ಅಪ್ಪುದಪ್ಪುದು. ತಪ್ಪೇಂ?

ಮ—ಅದಂತಿರ್ಕೆ. ನಿನ್ನನ್ನರಪ್ಪ ಕಬ್ಬಿಗರ್ ಮನೆವಾೞ್ತೆಯೊಳಿನಿಸೊಂದುಂ ಗೊಡವೆಗೊಳ್ಳದೆ ಕೆಮ್ಮಕೆಮ್ಮನೆ ಪಾೞ್ಗತೆಯ ಕಬ್ಬದೊಳೇವೊೞ್ತುಂ ಬೆಮೆಗೊಂಡಿರ್ಪರಲೇ. ಅವರ್ಗೇಂ ಬಟ್ಟೆಯೊ? ಉಣಲೇಂ ತಿನಲೇಂ? ಅಂತಿರೊಂದು ಜಪಮುಂ ಪಿರಿಯದವಸಿಗಳತ್ತಣಿನುಪದೇಶಂಗೊಂಡೊಡಾಗದೆ?

ಮು—(ಮುಗುಳ್ನಗೆಯಿಂ) ಏಂ ಎಮ್ಮವರೊಂದಿರಿವಿಗೆ ನಗುವಾ? ಆಃ! ಎಮ್ಮನ್ನರಪ್ಪ ಕಬ್ಬಿಗರ್ಗೇಂ ಕೊರತೆಯೋ! ತಾನೆ ಬಯಸಿದೊಡವೆಯನಾಗಳೇ ತಂದೀವ ಮಂತ್ರದ ಜಪದೊಂದು ನೆರಂ ತಮ್ಮೊಳೊಂದಿರದೊಡಲ್ತೆ ಕಾಡಜೋಗಿಗಳತ್ತಣಿನುಪದೇಶಂ. ನಾಡಂ ಕಾಡಂ, ಕಾಡಂ ಬೀಡಂ ಗೆಯ್ವೊಂದು ಪೆರ್ಮೆಯ ಬಲ್ಮೆಯ ಕಬ್ಬಿಗರೆ ೦ ಕಕ್ಕುಲಿತೆಯ ಮುದುದವಸಿಗಳತ್ತಣಿಂ ಪಿರಿಯರಾಗರೆ? ನುಡಿವರೇನದುವೆ ಪುರುಳ್. ಪಿಡಿವರೇನದುವೆ ತಿರುಳ್. ಪಲವೇಂ ಕೆಲವೇಂ? ತಮ್ಮೊಂದೆ ನುಡಿಯ ಬಲ್ಪಿಂ ಮೂಜಗಮುಮನಱಿಯಿಸುವ ಪೊಗೞ್ವ ಕೊಳ್ವಾಳ್ವ ತಾಳ್ವ ತೂಳ್ವ ಪೊೞ್ವ ಪೇೞ್ವ ಬಾೞ್ವ ಸಿಂಗರದ ಬಣ್ಣಗಬ್ಬಿಗರೆಮ್ಮತೆಱನನಿನ್ನುಂ ನೀನಱಿಯಯ್.

ಮ—(ಬಿಸವಂದಂಗೊಂಡು) ನಿಮ್ಮವರ್ಗಮಂತಿರೆ ಮಂತ್ರಂ ಸಿದ್ಧಿವರ್ಕುಮೆ?

ಮು—ತಡೆಯೇನಳ್ಕೇಂ?

ಮ—ನಿನ್ನೊಳವೊಳವೆ?

ಮು—ಎನ್ನೊಳಿಂತಿದು ಪಾಸುವೊಕ್ಕು

ಮನೋ—ಆಃ! ನೀನುಂ ಬಲ್ಮೆಮೆಗಾಱಂ. ನಿನಗಾರತ್ತಣಿನೆಂದುಪದೇಶಮಾಯ್ತು?

ಮು—ಗುರುವತ್ತಣಿನಂದೆಳವೆಯೊಳೆ.

ಮನೋ—ಎನ್ನಱೆಯ! ಅದಾವುದೊ ಮಂತ್ರಮೆನ್ನೊಳುಸಿರ ?

ಮು—ಆಃ! ಆಃ! ಒಳ್ಳಿತೊಳ್ಳಿತು!! ಮಂತ್ರಂಗಡ! ತನಗೊರೆವುದು ಗಡ! ಚಿಃ! ಚಿಃ! ಪೆಣ್ಗಳ್ಗೀಮಂತ್ರೋಪದೇಶಂ ಸಲ್ವುದೆ ?

ಮನೋ—ಆನಱೆಯೆನೆ! ನಿನ್ನತ್ತಣಿನುಪದೇಶಂಬೇಡುವೆನೆ! ನೀನಾಗಳೆಂದ ಮಂತ್ರಂಗಳೊಳಾವುದದಱ ಪೆಸರೇನೆಂದೆ ಕೇಳ್ದೆಂ.

ಮುದ್ದ—ಆಗಳೆಂದ ಮುನಿಗಳ ಮಂತ್ರಂಗಳೊಳಲ್ತು. ಎಮ್ಮ ಮಂತ್ರಂಗಳ ಬಗೆ ಬೇಱೆ, ಮೂಱೆಡಕ್ಕರದ ಮಂತ್ರಂಗಳೆಮಗಕ್ಕುಮೆ! ಎಮ್ಮ ತಂತು ಕಿಱದಲ್ತು ಬಲ್ಪಿರಿದು. ಒಂದಕ್ಕರಮಲ್ತೆರಡಲ್ತು ಮೂಱಲ್ತು, ನಾಲ್ಕೈದಲ್ತು, ಆಱುಮಲ್ತು, ಏೞಕ್ಕರದ ಬೀಜಮಂತ್ರಂ. ಅಂತದಱಂ ಸರ್ವಮಂತ್ರಂಗಳ್ಗೆ ತಲೆಯೊಳಿರ್ದು ಮೇಲೆನಿಪ್ಪ ಸಪ್ತಾಕ್ಷರೀಮಂತ್ರಮೆಂದು ಪೆಸರ್.

ಮನೋ—ಹಾಹಾ! ಆಮಂತ್ರಕ್ಕಭಿಮಾನಿದೇವತೆಯಾವುದು ? ಮುನ್ನಮಾರಿದಂ ಜಪಿಸಿ ಸಿದ್ಧಿಗಂಡರ್ ?

ಮು—ಪೋಪೋ! ಇಂತಿವಱಂ ಕೊಂಡೇಂ ಕಜ್ಜಂ ?

ಮನೋ—ಇರ್ಕೆ, ಕೇಳ್ವೆಂ.

ಮು—ಅಂತಾದೊಡೆ ಕೇಳ್ ಪೇೞ್ವೆಂ. ಇಂತೇರ್ಪಟ್ಟ ಮಂತ್ರದಧಿದೇವತೆ ಜ್ಯೇಷ್ಠೆ. ಮುನ್ನಮಿಾಶ್ವರಂ ತನ್ನೊಂದು ಲೀಲೆಯೊಳ್ ಜಪಿಸಿ ಸಿದ್ಧಿಗೊಂಡನಂತದಱ ನಾತನೆ ಋಷಿ.

ಮ—ಓ ಓ! ಇಂತುಟೆ ಮಂತ್ರದೊಂದು ಮೈಮೆ! ಎಲೆ ರಮಣ! ನಿನ್ನಡಿಗಳ್ಗೆಱಗುವೆಂ ಎನ್ನತಿನಿತೊಂದು ಬಿನ್ನಪಂ. ಅಂತು ಸಂದ ಸಿದ್ಧಿಯ ಮಂತ್ರಮಾವುದೊ ಕೊರ್ಮೆಯಂ ತಿಳಿಯೆ ಪೇೞ್.

ಮು—ಆಗಳೇ ಪೇೞ್ದೆನಲ್ತೆ ಸಪ್ತಾಕ್ಷರೀಮಂತ್ರಮೆಂದು.

ಮ—ಅಂತು ಪೆಸರನಲ್ತು ಮೂಲಮನೆ ಕುಱಿತೆನ್ನೊಳಾಡಿ ತೋಱ.

ಮು—ಅಬ್ಬಾ! ಪೆಣ್ಣೇಂ ಗಡಸುಗಾರ್ತಿಯೊ! ಆಗಳ್ ಪೆಸರೇನೆಂದಳ್ ; ಈಗಳ್ ಮೂಲಮಂ ಕೇಳ್ವಳ್. ಇನ್ನೇವಳೋ ? ಮೂಱುಲೋಕದ ಜನ್ನದಾರದಾಣೆ! ಉತ್ತರಿಗೆಯಾಣೆ! ಆಗದಾಗದು. ಕೇಳ್ವುದರ್ಕೆ ಪೇೞ್ವುದರ್ಕೆ ನಿಮಗಧಿಕಾರಮಿರದು. ಕಣ್ಗೆ ಕಾಲ್ಗೆ ಕೇಡು!

ಎಂದು ಮತ್ತಷ್ಟು ಚರ್ಚೆ ಮಾಡಿ '' ನೀಡುಂ ಭಾವಿಸಿ ''

ಮು—ಎಲೆ ಪೆಣ್ಣೆ! ನೀನಾರೊಳಮೆಂದೆಂದಿಂಗಮುಸಿರಲ್ಬಾರದು. ಜೋಕೆ!

ಮ—ಎಂದುಮೆಂತುಮುಸಿರನಾಡೆಂ.

ಮು—ಅಂತಾದೊಡಿಂತಿದು ಕೇಳ್. ಭ........ವ........ಪೇಱರೊಳಾಡೆನೆಂಬ ನಂಬುಗೆಯಂ ಪೊಯ್.

ಮ—ಇದೆ, ಪಿಡಿ ನಂಬುಗೆಯಂ ನಿನ್ನಾಣೆ, ಕುಲದೈವದಾಣೆ, ಎಂದುಂ ಪೇಱರೊಳೊರೆಯೆಂ.

ಮು—ಉಂ! ಭವ........ತಿ........ಭಿ........ಪೆಣ್ಗಳಂ ನಂಬಲಾಗದೆಂಬರ್ ಬಲ್ಲರ್. ನೀನೆಂತೊ ಮಱವೆಯೊಳ್ ಪೇಱರೊಡನುಸಿರ್ದು ಗುಟ್ಟಂ ಬಿಟ್ಟೊಡೆಮ್ಮನ್ನರ ಬಾೞ್ ಪಾೞಕ್ಕುಂ.

ಮ—ಆನೇಂ ಮೋಡೆಯೇ! ಪೋ! ತನ್ನಾಣೆ ಕಣ್ಣಾಣೆ ಕೇಳ್ವೆಂ.

ಮು—(ಎಕ್ಕಟಿಯೊಳ್) "ಭವತಿ ಭಿಕ್ಷಾಂ ದೇಹಿ" ಎಂಬುದಿದುವೆ ಕಬ್ಬಿಗರ್ಗೆ ಸಿದ್ಧಿಸಿದ ಪೆರ್ಮೆಯ ಸಪ್ತಾಕ್ಷರೀಮಂತ್ರಂ. ಆರೊಳಾನುಮುಸಿರದಿರ್.

ಮ—(ಅರೆಮುನಿಸಿಂ) ಪೋ ಮಾಣೆಲೆ ರಮಣ! ನಿನ್ನ ನುಡಿಯಂ ಸಾಜಂ ನಿಕ್ಕುವಮೆಂದೇ ಬಗೆದೆಂ. ಈತೆಱನ ಮಾಟದ ಕವಡುನುಡಿಯ ಕೊಂಕೆಂಬುದನಱಿಯದಾದೆಂ. ನೀಂ ಕಬ್ಬಿಗನೋ ಸಬ್ಬವಕಾಱನೊ? ನಿನ್ನೀ ಕಬ್ಬದ ಸೊಗಸೆಮ್ಮನ್ನರಪ್ಪ ಜಾಣೆಲಿವೆಣ್ಗಳೆ ಕೊಂಡಾಡುವರಲ್ಲದೆ ಬಲ್ಲರೇನೊಲ್ವರೆ?

ಮು—ಸಾಲ್ಗುಮೀ ಪರಿಹಾಸಂ. ಮುಂಗತೆಯಂ ಕೇಳ್.

ಮುದ್ದಣಮನೋರಮೆಯರ ಸಂವಾದವನ್ನು ನೋಡಿದವರಿಗೆ ಇದರಂಥ ಇನ್ನೆಷ್ಟು ಸಂವಾದವನ್ನಾದರೂ ಓದಬಹುದೆಂದು ಎನ್ನಿಸುವುದು. ಈ ಕಾರಣದಿಂದಲೂ ಕಾವ್ಯದ ವಿಷಯದಲ್ಲಿ ನಮ್ಮೆಲ್ಲರ ಅಭಿಪ್ರಾಯವನ್ನು ಮನೋರಮೆಯು ಸೂಚಿಸುವಳಾದ ಕಾರಣದಿಂದಲೂ ಈ ಕವಿಯ ಜತೆಗೆ ಇಲ್ಲಿ ಮಾಡಿರುವ ಪರಿಚಯವನ್ನು ಸಂತೋಷವಾಗಿ ಮುಗಿಸುವುದೆಂಬ ಉದ್ದೇಶದಿಂದಲೂ ಈಗ ಈ ಕಾವ್ಯದ ಉಪಸಂಹಾರದ ಸಂಭಾಷಣವನ್ನೂ ಇಲ್ಲಿ ಕೊಟ್ಟಿದೆ. ರಾಮನು ಸೀತೆಯನ್ನು ಕರೆದುಕೊಂಡು ಪಟ್ಟಣಕ್ಕೆ ಹೋದನೆಂದು ಕವಿಯು ಹೇಳಲು ಮನೋರಮೆಯು "ಓ! ರಾಮನೊಳ್ಳಿದನಕ್ಕೆ! ಸೊಗಂ ಬಾೞ್ಗೆ! ರಾಮಂಗೆ ಗೆಲವಕ್ಕೆ! ರಾಮನಂ ಕೊಂಡಾಡುಗೆ!" ಎಂದು ಹಲವು ವಿಧವಾಗಿ ಹರಸುವಳು. ಮುದ್ದಣನು "ನೀನು ಹರಸುವ ಹರಕೆ ಬಹಳ ಸೊಗಸು" ಎಂದು "ಇನ್ನೆತ್ತಂ ನಿರಾ

ಮಯಂ, ನಿರಾಕುಳಂ; ಸುಭಿಕ್ಷಂ; ಶಾಂತಿ·····'' ಎಂದು ಹೇಳತೊಡಗುವನು.

ಮನೋರಮೆ ಏನೆಲೆ ರಮಣ! ಇಂದಿದೇನೆತ್ತಣ ಶಾಂತಿಗಳ್? ಅಂತಪ್ಪೊಡೆ ನೀಂ ಪೇಳ್ವ ನಲ್ಗತೆ ಮುಗಿಯುವಂದುದು.

ಮುದ್ದ—ಉಂ! ಎಂತೆಂತೊ ರಗಳೆಯ ಪಾೞ್ಗತೆ ಕಡೆಗಂಡುದು.

ಮನೋ—ಚಿಃ! ಶ್ರೀರಾಮಪುಣ್ಯಚರಿತಮಂ ಪಾೞ್ಗತೆಯೆಂದು ಇೞಿಕೆಯುದ್ಧತೆಗಲ್ವಿ!

ಮುದ್ದ—ಶ್ರೀರಾಮಚರಿತಮನಿೞಿಸಿ ಕುೞಿಸಿ ನುಡಿದೆನಿಲ್ಲಂ ಪುರುಳಿಲ್ಲದ ಸಲ್ಲದ ಪೊಲ್ಲದೆನ್ನ ಬಱುವಣ್ಣನೆಯ ಬೇಸಱಿಕೆಯ ಪಾೞ್ಗಬ್ಬಮಂ ಪೊಳ್ಳೆಂದೆ ನುಡಿದೆಂ.

ಮನೋ—(ಸವಿನಯಂ) ತಮ್ಮೊಡಮೆಯಂ ತಾಮೆ ಪೊಗೞ್ವರೆ ಬಲ್ಲರ್? ಅಲ್ಲದಂದು ನವರಸದ ತನಿರಸಮೊೞಿವ ಬಣ್ಣಗಬ್ಬಮಂ ಪೊಳ್ಳೆಂದೊರೆವ ನಿನಗಮೇಂ ನಿರಹಂಕೃತಿಯೊ ನಿನ್ನ ಜಾಣ್ಮೆಯೊಳ್.

ಮುದ್ದ—ಏನೆನ್ನ ಕಬ್ಬಂ ನಿನಗೆ ಮೆಚ್ಚುಗೆಯಾಯ್ತೆ?

ಮನೋ—ಎನಗೊರ್ವಳ್ಗೆಂದೊಡೇಂ. ನಾಡೊಳೆಲ್ಲರ್ಗಂ.

ಮುದ್ದ—(ನಕ್ಕು) ಎನ್ನೊಳೊಂದಭಿಮಾನದಿನಿಂತುಸಿರ್ವೆಯಕ್ಕುಂ.

ಮನೋ—ಎನ್ನ ಮುದ್ದಿನರಸ! ಅಂತಲ್ತು; ನಿನ್ನ ಪೆಸರೆಂತಂತು ಕಬ್ಬಮುಂ ಮುದ್ದುಮುದ್ದಾಯ್ತು ಜಗಕೆ.

ಮುದ್ದ—ಇಂತೀ ನುಡಿಯಿನೆನ್ನಂ ನೀನೇೞಿಪಂತಿರಿರ್ಕುಂ.

ಮನೋ—ಉಃ! ಉಃ! ಗುಣದೊಳ್ ಪುರುಡುಂಟೆ? ಸಾಜಂ. ನಿನ್ನೀ ಜಾಣ್ಮೆಯ ಬಣ್ಣನೆಯ ನಲ್ಗತೆ ಕೇಳ್ವರನೆಂತಪ್ಪರುಮಂ ಬಗೆಯನಿರ್ಕುೞಿಗೊಳ್ಗುಂ ನಾಡ ಮಾತೇಕೆ! ಎನಗೆಂತೋ ಮೇಣುಂ ಮೇಣ್ ಕೇಳ್ವೆನೆಂಬೊಂದಾಸೆ ಪುಟ್ಟುಗುಂ.

ಮುದ್ದ—ಎನ್ನಾಣೆ!

ಮನೋ—ನಿನ್ನಾಣೆ! ಕಡೆಯೇಂ? ಕಮ್ಮಲರ್ ಮುಗಮುಗಿಸದೇಂ ಪೋಕುಂ!

ಮುದ್ದ—ಮುತ್ತಬ್ಬೆಯಾಣೆ!

ಮನೋ—ಮುತ್ತಬ್ಬೆಯಾಣೆ! ಇಸ್ಸಿ! ಪುಸಿಯನೇಪೊೞ್ತಂಗಮುಸಿರೆಂ. ಈವಗೆಯ ನುಡಿಗಬ್ಬಂ ಮುಂತಿಲ್ಲ ಪಿಂತಿಲ್ಲಮೆಂದಾಯ್ತು.

ಮುದ್ದ—ಎಂತುಂ ನಿನಗೆ ಸೊಗಸಾಯ್ತಲೇ! ಇದುವೆ ಪರಮಾನಂದಮೆನಗೆ.

ಮನೋ—ಬಿನ್ನಣದ ಬಣ್ಣನೆಯ ನುಡಿಯಲ್ತು ; ಬಲ್ಸೊಗಸು ಬಲ್ಸೊಗಸು ನೀನೆಂದ ಕತೆ.

ಮುದ್ದ—ಅಂತಪ್ಪೊಡೆ ತಾಳ್ಪಿಲೆ ನೀನೆಂದ ಮೆಚ್ಚಿನುಡುಗೊಱೆಯಂ.

ಮನೋ—(ಕಣ್ಬೆಗಡು ಗೊಂಡಂತೆ ನಟಿಸಿ) ಇನ್ನೇಂ ಜಾಣನೋ ! ನೀನಱಿಯದರಂತೆ ಮಿಣ್ಣನಿರ್ದುಮೆನ್ನಿಂದೆನ್ನಂ ಕಟ್ಟಿಸಿದ ದಿಟ್ಟಂ. ನಿನಗೇನೆಂಬೆನೇನೆಂಬೆನೊ ! ನಿನ್ನಾ ಬಣ್ಣವಾತಿಗೆ ಮಾಱುವೋದೆಂ (ಎಂದು ವಿಚಾರದಿಂ) ಆಯ್ತಾಯ್ತು, ಪೇೞ್ದ ಕತೆಗೆ ಮಂಗಳಮಂ ಮಾಡು ; ಮೆಚ್ಚುಗಿಚ್ಚು ಬೞಿಕ್ಕಮಲ್ತೆ.

ಮುದ್ದ—ಬೞಿದೆ ಮಂಗಳಮಕ್ಕುಮೆ ! ಹೋಳಿಗೆ ತುಪ್ಪಮಂ ತಿನವಡಿಸವೇಡಾ !

ಮನೋ—ಹೋಳಿಗೆ ತುಪ್ಪಕ್ಕಿಂದೇಂ ನಿನಗೆ ಶೋಭನಮೆ ?

ಮುದ್ದ—ಇಂದೆನಗೆಂದೊಡೇಂ ? ಎನಗಂ ನಿನಗಂ.

ಮನೋ—ಪೋ ಸಾಲ್ಗುಮೀ ಬಣ್ಣದ ಕೊಂಕುನುಡಿ. ರಾಘವನ ಯಜ್ಞಮೆಂತು ಪರಿಸಮಾಪ್ತಿಯಾಯ್ತು ಪೇೞ್".

ಹೀಗೆ ಮನೋರಮೆಯ ಅಪೇಕ್ಷೆಯಂತೆ ಕವಿಯು ಯಜ್ಞವು ಸಾಂಗವಾಗಿ ನಡೆದ ವಿಷಯವನ್ನು ಹೇಳಿ "ಮಂಗಳಂ ಶುಭಂ ಭದ್ರಂ ಕಲ್ಯಾಣಂ" ಎಂದು ಮಂಗಳವನ್ನು ಹೇಳುವನು. ಅಷ್ಟರಲ್ಲಿ ಮನೋರಮೆಯು ಎದ್ದು ಹೋಗುವಳು. ಮುದ್ದಣನು ಅವಳನ್ನು ತಡೆದು

"ಬಲ್ಸಿಡಕುಗಾರ್ತಿ ಕಣಾ ! ಮುದ್ದಣನುಮಂ ಟಕ್ಕಿಪ ಪೆಂಡಿರೊಳರೆ ? ಕೊಂಕುನುಡಿಯೊಂದು ನೆವದಿಂ ಬಿಂಕದಿನಿರ್ದೊಡಾಯ್ತೆ ! ಮೆಚ್ಚನಿತ್ತಲ್ಲದೆ ಪೋಪೊಡೇಂ ಬಿಡುವೆನೆ !

ಮನೋ—ಕತೆಗೆ ಮಂಗಳಮಂ ಮಾಡದೆ ಬೞಿದೆ ಉಡುಗೊಱೆತುಡುಗೊಱೆಯೆಂದೊಡೇಂ ?

ಮುದ್ದ—ಕತೆಗೆ ಮಂಗಳಮನಾಗಳೆ ಪೇೞ್ದೆನುೞಿದೆನಿಲ್ಲ. ಈಗಳುೞಿದುದೊಂದೆ ನಿನ್ನುಡುಗೊಱೆ.

ಮನೋ ಉಡುಗೊಱೆಯ ಕಾಟಕ್ಕಿನ್ನೆತ್ತಪೋಪೆಂ? ನೀನೇಂ ಬೇಡುವಯ್?

ಮುದ್ದ—(ಪುಸಿಮುನಿಸಿಂ) ಬೇಡುವೊಡೇಂ ತಿರಿಕನೇ ? ಮನೆಗೆ ಬಂದೆನೆ ? ಮೆಚ್ಚಿತ್ತೊಡದನೆ ಕೈಕೊಳ್ವೆಂ

ಮನೋ—ಆನೆಂತುಂ ಪರಾಧೀನೆ. ಮೇಣೆನಗೊಡಮೆಯಾವುದು ? ಏನನೀವೆನೆಂತೀವೆಂ ?

**ಮುದ್ದ—ಏನೊ! ಎಂತೊ! ಅಂ ಮೆಚ್ಚುವಂತುಂ, ಕತೆಯ ಪುರುಳ್ಗೊಳ್ವಂತುಂ ಸಾಲ್ವರ್ ತಲೆದೂಗುವಂತುಂ ಉಡುಗೊಱೆಗೆಯ್ದುಡಾಯ್ತು.**

**ಮನೋ—ಅಂತಪ್ಪೊಡಿಂತಿದು............ನಿನ್ನೀಕಬ್ಬಮನೋದುವ ಜಾಣರೇ ಮಗೆಯುಡುಗೊಱೆಯನೀಯೆಂಬರಾವಗೆಯ ಮೆಚ್ಚನೀವೆಂ.**

ಎಂದು ಉಡುಗೊಱೆಯನ್ನು ಕೊಡುವಳು. ಉಡುಗೊರೆ ಯಾವುದೆಂದು ಕವಿ ಹೇಳುವುದಿಲ್ಲ. ಪ್ರಾಯಃ ಅದು ಏನೆಂದು ನಾವು ಊಹಿಸಬಹುದು. ಅವಳು ಸೀತೆಗೆ ಒಳ್ಳೆಯದಾಯಿತೆಂಬ ಸಂತೋಷದಿಂದ ತುಂಬಿ ತುಳುಕುತ್ತಿದ್ದ ತನ್ನ ಆನಂದವನ್ನೂ ಇಂಥ ಒಳ್ಳೆಯ ಕತೆಯನ್ನು ಇಷ್ಟು ಚೆನ್ನಾಗಿ ಹೇಳಿದ "ಕಬ್ಬಿಗರ ಬಲ್ಲಹ" ಮುದ್ದಣನ ವಿಷಯದಲ್ಲಿ ತನಗೆ ಉಂಟಾಗಿದ್ದ ಮೆಚ್ಚುಗೆಯನ್ನೂ ತನ್ನ 'ನಿತ್ಯದ ಪೂಜೆಯ ಕಟ್ಟಚ್ಚಿನ ಪ್ರಾಣಲಿಂಗ'ವಾದ ಪತಿದೈವದ ವಿಷಯದಲ್ಲಿ ತನಗಿದ್ದ ಭಕ್ತಿಪ್ರೀತಿಗಳನ್ನು ತೋರಿಸುವಂತೆ ಸ್ವಲ್ಪ ಉತ್ಸಾಹದಿಂದಲೂ ಸ್ವಲ್ಪ ನಾಚಿಕೆಯಿಂದಲೂ ಒಂದು ಮುತ್ತನ್ನು ಕೊಟ್ಟಳೆಂದು ತೋರುತ್ತದೆ. ಸತಿಪತಿಗಳ ಈ ಸಂಭಾಷಣೆಗಳನ್ನು ಕೇಳಿರುವ ನಮಗೆ ಅರಮನೆಯಲ್ಲಿ ಕವಿಗೆ ಬರಬಹುದಾಗಿದ್ದ ಇನ್ನು ಯಾವ ಮರ್ಯಾದೆಗಿಂತಲೂ ಇದು ಅವನಿಗೆ ಹೆಚ್ಚು ಮರ್ಯಾದೆಯೆಂದು ಒಪ್ಪಬೇಕು. ಕವಿಯೂ ಹಾಗೆಯೇ ವರ್ಣಿಸುತ್ತಿದ್ದನೆಂಬುದರಲ್ಲಿ ಸಂದೇಹವಿಲ್ಲ. ಮುದ್ದಣನಿಗೆ ಇನ್ನು ಯಾವ ಸೌಭಾಗ್ಯವೂ ಸಂಪತ್ತೂ ಇದ್ದರೂ ಇಲ್ಲದಿದ್ದರೂ ದೇವರ ವಿಷಯದಲ್ಲಿ ನಿಶ್ಚಲವಾದ ಭಕ್ತಿಯಿಂದ ನಡೆದುಕೊಳ್ಳುವ ಸಂಸಾರದ ಶಾಂತಿಸೌಖ್ಯಗಳ ಅತುಲವಾದ ಸಂಪತ್ತು ಲಭಿಸಿತ್ತೆಂದು ನಾವು ಸಂತೋಷಪಡಬೇಕು.

ಮೇಲೆ ಉದ್ಧರಿಸಿರುವ ಕಾವ್ಯಭಾಗಗಳಿಂದ ಮುದ್ದಣ ಕವಿಯ ಕವಿತಾಶಕ್ತಿಯ ಸಮಗ್ರತೆಯು ವ್ಯಕ್ತವಾಗಿರಬೇಕು. ಇವುಗಳ ಜೊತೆಗೆ ಈ ಕಾವ್ಯದಿಂದ ಇಂಥ ಇನ್ನಷ್ಟು ಭಾಗಗಳನ್ನು ಸುಲಭವಾಗಿ ಎತ್ತಿ ತೋರಿಸಬಹುದು. ಕವಿತೆಯ ಆತ್ಮವಾದ ಭಾವದಲ್ಲಿ ಹೇಗೋ ಹಾಗೆ ಅದರ ದೇಹವಾದ ಭಾಷೆಯಲ್ಲೂ ಈತನಿಗೆ ಸಮಗ್ರಕೌಶಲವುಂಟೆಂದು ಮೇಲೆ

ಸೂಚಿಸಿದೆ. ಈ ಕಾವ್ಯವನ್ನು ಓದುತ್ತಿದ್ದರೆ ಮುದ್ದಣ ಕವಿಯು, ಕನ್ನಡ ಭಾಷೆಯಲ್ಲಿ ಮಾತ್ರವಲ್ಲ, ಪ್ರಪಂಚದ ಇನ್ನು ಯಾವ ಭಾಷೆಯಲ್ಲಾದರೂ ಕವಿಗೋಷ್ಠಿಯ ಅಗ್ರಸ್ಥಾನಗಳಲ್ಲಿ ಒಂದಕ್ಕೆ ಅಧಿಕಾರಿಯೆಂದು ವಾಠಕರಿಗೆ ತೋರುವುದು. ಪ್ರಕೃತಿಸೌಂದರ್ಯದ ವರ್ಣನೆಯಲ್ಲಿ ಈತನು ಕಾಳಿದಾಸ ಷೇಕ್ಸ್‌ಪಿಯರರಿಗಿಂತ ಬಹಳ ಕಡಿಮೆಯಾದವನಲ್ಲ. ಪುರಾಣಪಾತ್ರಗಳ ಸ್ವಭಾವನಿರೂಪಣದಲ್ಲಿ ಈತನಿಗೆ ಶ್ಲಾಘನೀಯವಾದ ಔಚಿತ್ಯಜ್ಞಾನವಿದೆ. ಇವನ ಕನ್ನಡದ ಶೈಲಿಯ ಸೊಗಸು ರಸ್ಕಿನ್ ಡಿಕ್ವಿನ್ಸಿಗಳ ಇಂಗ್ಲಿಷ್ ಶೈಲಿಯ ಸೊಗಸಿಗೆ ಸಮಾನವಾಗುತ್ತದೆ. ಇಂಥ ಕವಿಯನ್ನು ಪಡೆದದ್ದು ಕರ್ಣಾಟಕದ ಸೌಭಾಗ್ಯ. ಇಂಥ ಕವಿಯನ್ನು ಅಷ್ಟು ಚಿಕ್ಕ ವಯಸ್ಸಿನಲ್ಲಿ ಕಳೆದುಕೊಂಡುದು ಕನ್ನಡಿಗರೆಲ್ಲರ ದುರ್ದೈವ. ಇಂಥ ಕವಿಯು ಜೀವಂತನಾಗಿದ್ದಾಗ ಅವನನ್ನು ಸರಿಯಾಗಿ ಕಾಣದೆ ಅವನ ಯೋಗ್ಯತೆ ಏನೆಂದು ಕಂಡುಹಿಡಿಯಲಾರದೆ ಇದ್ದದ್ದು ಕರ್ಣಾಟಕರ ಅನಭಿಜ್ಞತೆಯನ್ನು ತೋರಿಸುತ್ತದೆ. ಮುದ್ದಣ ಕವಿಯು ಸಾಮಾನ್ಯವಾಗಿ ಹುಟ್ಟಿ ಸಾಮಾನ್ಯವಾಗಿ ಬೆಳೆದು ಎಲ್ಲೋ ಒಂದು ಮೂಲೆಯಲ್ಲಿ ತನ್ನ ದಿನಗಳನ್ನು ಕಳೆದು ದಿವಂಗತನಾದನು. ಆದರೆ ಆತನ ಕಾವ್ಯದ ಸೌಂದರ್ಯ ಸೌರಭ್ಯಗಳನ್ನು ನೋಡಿದರೆ ಅವನ ಆತ್ಮವು ಎಷ್ಟು ಸಂಸ್ಕಾರದಿಂದ ಎಷ್ಟರ ಮಟ್ಟಿಗೆ ಉತ್ತೀರ್ಣವಾಗಿ ಅವನ ಜನರ ಇನ್ನೆಂತಹ ಪೂಜೆಗೆ ಅರ್ಹವಾಗಿತ್ತೆಂದು ನಮಗೆ ತಿಳಿಯುವುದು. ಮುದ್ದಣ ಕವಿಯ ಜೀವನಚರಿತೆಯನ್ನೂ ಅವನ ಕಾವ್ಯವನ್ನೂ ಕುರಿತು ಯೋಚಿಸುವವರಿಗೆ ನಮ್ಮ ಜನಾಂಗದ ಉತ್ತಮ ಜೀವನವೆಲ್ಲದರ ಪ್ರತಿನಿಧಿಯಂತೆ ತೋರುವ ಈತನ ವಿಷಯದಲ್ಲಿ ವರ್ಡ್ಸ್ವರ್ತ್ ಎಂಬ ಆಂಗ್ಲೇಯ ಕವಿಯು ಮಿಲ್ಟನ್ ಮಹಾಕವಿಯ ವಿಷಯದಲ್ಲಿ ಹೇಳಿದ ಕೆಲವು ಮಾತುಗಳನ್ನು

> Poet! thou shouldst be living at this hour:
> *India* hath need of thee:

ಎಂದು ಮುಂತಾಗಿ ಹೇಳೋಣವೆಂದು ತೋರುವುದು.

ಈ ಕಾವ್ಯವನ್ನು ಕುರಿತು ಇನ್ನೂ ಒಂದೆರಡು ವಿಷಯಗಳನ್ನು ಹೇಳಬಹುದಾಗಿತ್ತು. ಆದರೆ ಈಗಾಗಲೇ ದೀರ್ಘವಾಗಿರುವ ಈ ಉಪನ್ಯಾಸವನ್ನು ಮತ್ತಷ್ಟು ದೀರ್ಘವಾಗಿ ಮಾಡುವುದು ನಮಗೆ ಇಷ್ಟವಿಲ್ಲ. ಅಲ್ಲದೆ ಕಾವ್ಯದ ರುಚಿಯನ್ನು ತಿಳಿಯುವುದಕ್ಕೆ ಆ ವಿಷಯಗಳ ಚರ್ಚೆಯು ಆವಶ್ಯಕವಲ್ಲ. ಮುಖ್ಯವಾಗಿ ಈ ಪ್ರಶಂಸೆಯನ್ನು ಓದುವುದರಿಂದ ನಮ್ಮ ಜನರಿಗೆ ಶ್ರೀರಾಮಾಶ್ವಮೇಧ ಕಾವ್ಯದ ವಿಷಯದಲ್ಲೂ ಅದರ ಕರ್ತೃವಾದ ಮುದ್ದಣಕವಿಯ ವಿಷಯದಲ್ಲೂ ಆದರ ಉಂಟಾಗಿ ಮುದ್ದಣ ಕವಿಯು ನಿಖಿಲ ಕರ್ಣಾಟಕಕ್ಕೆ ಮಾಡಿರುವ ಪರಮೋಪಕಾರದ ಸ್ಮರಣೆಯು ನಮ್ಮ ಜನರಲ್ಲಿ ವಾಡಿಕೆಯಾಗಲೆಂದು ನಾವು ಹಾರೈಸುತ್ತೇವೆ. ಈ ಕಾವ್ಯವನ್ನು ಯಾರೇ ಆಗಲಿ ಮತ್ತೆಮತ್ತೆ ಓದಿದಹಾಗೆ ಆದರ ವಿಷಯದಲ್ಲಿ ಹಫಿಸ್ ಕವಿಯು ತನ್ನ ಕಾವ್ಯದ ವಿಷಯದಲ್ಲಿ ಹೇಳಿದ ಈ ಮಾತುಗಳನ್ನು ಹೇಳುವರು.—

Song such as this hath need of no man's praise
Beauty like this can be concealed from none
Why should I hold a candle to the rays of such a sun?

---

# ಅನುಬಂಧ

## ೧. ಜೋ ಜೋ.

(ನಂದಳಿಕೆ ಲಕ್ಷ್ಮೀನಾರಣಪ್ಪನವರು "ಸುವಾಸಿನೀ" ಪತ್ರಿಕೆಯಲ್ಲಿ
ಬರೆದ ಒಂದು ಲೇಖನ.)

ಹೆಂಗುಸರು ತಮ್ಮ ಕಿರುಗೂಸುಗಳನ್ನು ತೊಟ್ಟಿಲಲ್ಲಿಟ್ಟು ತೂಗುವರು. ತೂಗುವಂದು ಒಲಿದು ಹಾಡುವರು. ಆಗಳಾಕೂಸು ಹಾಡಿನ ಇಂಚರಕ್ಕೆ ಪರವಶವಾಗಿ ಪ್ರೇಂಖಣದ ಯಾತಾಯಾತಕ್ಕೆ ಮೈಮರೆದು ನಿದ್ರಿಸುವುದು. ಇದಕ್ಕೆಯೆ ಹಾಡಿ ತೂಗುವರು. ಹಾಡು ನಾಡಿಗೊಂದು ಬಗೆಯಾಗಿರುವುದು.

ಅದೆಲ್ಲವಂತಿರಲಿ. ನಮ್ಮವರು ಈ ಬಗೆಯ ಹಾಡಿಗೆ 'ಜೋಗುಳ' ವೆಂಬರು. ಕೆಲವರು 'ಜೋಗಳ' ವೆಂದೂ ಹೇಳುವರು. ಇಂತಹ ಜೋಗುಳದಲ್ಲಿ ಹಾಡಿನ ನುಡಿಗಳ ಎಡೆಯೆಡೆಗೊಂದು 'ಜೋ' ಎಂಬ ಶಬ್ದವು ಇರುವುದು. ಕಡೆಗದು ಹಾಡಿನ ಕಡೆಗಾದರೂ ಬರುವುದು. ಮತ್ತಾ ಶಬ್ದವು ಒಮ್ಮೆ ದ್ವಿರುಕ್ತವಾಗಿಯೂ ಉಂಟು. ಎಂತೂ 'ಜೋ' ಶಬ್ದವಿಲ್ಲದ ಜೋಗುಳವಿಲ್ಲ. ಇದು ಸುಳ್ಳಲ್ಲ. ಬೇಕಾದರೆ ಕರ್ಣಾಟಕ ಕವಿಗಳನ್ನು ಕೇಳಿ.

> ಜೋ ಸಕಲತತ್ವಮಯೆ ಜೋ |
> ಜೋ ಸತ್ವಾದಿಗುಣರಹಿತೆ ಜೋ ನಿರ್ಮಲೆ ಜೋ |
> ಜೋ ಜೋ ಶಂಕರನರ್ಧಮಂ ಕವರ್ದಳೆ ಕೊಳ್ವತ್ಯಂತರೂಪಾನ್ವಿತೇ ||

ಎಂದು ಹರಿಹರನೂ,

> ....................ಅಚ್ಯುತ ಜೋ ಮಹಾತ್ಮ ಜೋ |
> ಸದಮಲಬೋಧ ಜೋ ಪರಮ ಜೋ ಹರಿ ಜೋ ಎನುತಂ ಲತಾಂಗಿಯರ್ ||

ಎಂದು ರುದ್ರನೂ,

> ..............................................ಜನೋ |
> ತ್ತುಂಗವಂದಿತ ಜೋ ಜಗನ್ನುತ ಜೋ ಜಯೋನ್ನತ ಜೋ ಎನು |
> ತ್ತುಂಗನಾಜನಮೆಯ್ದೆ ಪಾಡುತೆ ಜೋಗುಳಂ ಮಿಗೆ ಪಾಡಿದರ್ ||

ಜಂಗಮಪ್ರಿಯ ಜೋ ಜಗನ್ಮಯ ಜೋ ಜಿತಸ್ಮರ ಜೋ ಎನು |
ಶೃಂಗನಾಮಣಿ ಜೋಗುಳಂಗಳ ಪಾಡಿ ತೂಗಿದಳಲ್ಕಱಿಂ ||

ಎಂದು ಷಡಕ್ಷರದೇವನೂ,

ತಮ್ಮ ತಮ್ಮ ಗ್ರಂಥಗಳಲ್ಲಿ ಬರೆದಿರುವರು. ಇವರ ಮಾತೂ ಸಾಲದೆ ಹೋದರೆ, ಕೂಸನ್ನು ಹಾಡಿ ತೂಗುವ ನಿಮ್ಮ ಪ್ರಿಯತಮೆಯನ್ನು ಕೇಳಿ. ಆಗಳಾದರೂ ಒಪ್ಪದಿರಲಾರಿರಿ.

ಇಂತೀ ಸ್ವಾಪಗೀತಕ್ಕೆ ನಾವು ಜೋಗುಳವೆಂಬುದೇಕೆ? ಮತ್ತು ಜೋ ಜೋ ಎಂಬುದರ ಅರ್ಥವೇನು? ಮೊದಲಿಗೆ ಜೋ ಶಬ್ದದಲ್ಲಿ ಅರ್ಥವೇನಿರುವುದೆಂದು ನೋಡಿ ತರುವಾಯ ಜೋಗುಳಶಬ್ದಕ್ಕೆ ಕೈಯಿಡುವೆನು.

ಜೋ ಎಂಬುದು ಬರಿದೊಂದು ಅರ್ಥವಿಲ್ಲದ ನುಡಿಯೆಂದು ಹಲವರೆನ್ನುವರು. ತೋರಮಟ್ಟಿನಿಂದ ನೋಡಿದರೆ ನನಗೂ ಹಾಗೇ ತೋರುವುದು.

ನಂಟು ಗೊತ್ತಾದೊಡನೆಯೇ ಇದ್ದ ಹುರುಳೆಲ್ಲ ಬಯಲಿಗೆ ಬಂದು ಬಿಡುವುದರಿಂದ, ಈ ಜೋ ಶಬ್ದಕ್ಕೆ ಬೇರೆ ಶಬ್ದಗಳೊಡನೆತ್ತಲಾದರೂ ನಂಟಿರುವುದೋ ಎಂದು ಕನ್ನಡನುಡಿಗಳಲ್ಲಿ ಹಲವನ್ನು ನೋಡಿದೆನು. ಆದರೇನು? ನೋಡಿದರೆ ಒಂದೇ ಒಂದಾದರೂ ಅದರ ನಂಟುತನವನ್ನು ತೋರ್ಪಡಿಸಲಿಲ್ಲ.

ಈ ರೀತಿಯಾಗಿ ನನ್ನಾಸೆ ಬಯಲಾದುದನ್ನು ಕಂಡು, ಕನ್ನಡ ನುಡಿಗಳ ಗೊಡವೆ ಬಿಟ್ಟು, ಕನ್ನಡದೊಡಹುಟ್ಟುಗಳಾದ ಬೇರೆಮಾತುಗಳನ್ನಾದರೂ ಕೇಳಿ ನೋಡುವೆನೆಂದು ಎಣಿಸಿದೆನು.

ತೌಳವ ಭಾಷೆಯಲ್ಲಿ 'ಜೋಕುಳು' ಎಂಬೊಂದು ನುಡಿಯಿರುವುದು. ಈ ನುಡಿಯನ್ನು ಮರಕುಳು, ಕರೆಕುಳು, ಕೈಕುಳು ಮುಂತಹ ನುಡಿಗಳೊಡನಿಟ್ಟು ನೋಡಿದರೆ, ನುಡಿಯ ಕಡೆಯ 'ಕುಳು' ಎಂಬುದು ಒಂದು ಪ್ರತ್ಯಯವಾಗಿರಬಹುದೆಂದು ಎಣಿಸಿದೆನು. ("ಕುಳು" ಎನ

ಉತ್ವಗಳಿಗೆ ಸ್ವರಭಾರವು ಅಡ್ಡವಾಲೆಂದು ಅರಿಯಬೇಕು. (" ಕ್ ಳ್ " ಎಂಬಂತು) ಈಗಳಾ ಪ್ರತ್ಯಯವನ್ನು ಕಳೆದುಬಿಟ್ಟರೆ ಜೋ, ಮರ, ಕರೆ, ಕೈ ಎಂದು ಬೇರಾಗಿ ಉಳಿವುವು. ಇವು ಪ್ರಕೃತಿಗಳಾಗಿರಬಹುದು. ಮತ್ತಿನ್ನು ನೋಡಿದರೆ ಈ 'ಕುಳು,' ಕರ್ಣಾಟಕದಲ್ಲಿ ಬಹುತ್ವವನ್ನು ಹೇಳುವ 'ಕಳ್' (ಗಳ್) ಪ್ರತ್ಯಯಕ್ಕೆ ಸರಿಬರುವುದು. ಆಕಳ್, ಮಕ್ಕಳ್, ನಾಟ್ಕಳ್, ಕೋಟ್ಕಳ್ (ನಾಡುಗಳ್, ಕೋಡುಗಳ್) ಮೊದಲಾದುವನ್ನು ಹೋಲಿಸಿ ನೋಡಿ, ಈ ಬಗೆಯಲ್ಲಿ ಜೋಕುಳೆಂಬ ಉದ್ದಿಷ್ಟ ಪದವು ಬಹುತ್ವವನ್ನು ಪಡೆದಿರುವುದೆಂದು ನಿರ್ಧರಿಸಿದೆನು. " ಜೋಕುಳು " ಬಹುವಚನದಲ್ಲಿದ್ದ ಮೇಲೆ ಇದರ ಪ್ರಕೃತಿ " ಜೋ " ಎಂಬುದೂ ಏಕ ವಚನದಲ್ಲಿರುವುದೂ ಸ್ಪೈ.

ಜೋಕುಳೆಂದು ತುಳುವರು ಮಕ್ಕಳಿಗೆಂಬರು.* ಆದರೆ ಈ ಪದದ ಏಕವಚನರೂಪಕ್ಕೆ ಬೇರೆ ತಾನಾಗಿ ಪ್ರಯೋಗವು ಈಗಳಿಲ್ಲವೆಂಬಂತು ತೋರುವುದು. ಇಂತಿದ್ದರೂ 'ಆಣ್ಜೋವು,' 'ಪೊಣ್ಜೋವು' ಎಂಬೀ ತುಳುಮಾತುಗಳ ಹುಟ್ಟು ನೋಡಿದರೆ, ಜೋವೆಂಬ ಏಕವಚನರೂಪವು ಮೊದಲಿನವರಲ್ಲಿ ರೂಢಿಯಿದ್ದುದೆಂದು ತಿಳಿದುಬರುವುದು. ಆಣ್ಜೋವು ಪೊಣ್ಜೋವು ಎಂಬೀ ಮಾತುಗಳನ್ನು ಬಿಡಿಸಿದರೆ, ಕ್ರಮದಿಂದ ಆಣ್+ ಜೋವು, ಪೊಣ್+ಜೋವು ಎಂದಾಗುವುದು. ಆಣೆಂದು ಗಂಡು ; ಪೊಣ್ಣೆಂದು ಹೆಣ್ಣು; ಮತ್ತು ಜೋವೆಂದು ಕೂಸು, ಮಗುವೂ ಆಗುವುದು. ಹೀಗೆ ಆಣ್ಜೋವೆಂದು ಗಂಡುಮಗು (ಗಂಡುಕೂಸು) ಪೊಣ್ಜೋವೆಂದು ಹೆಣ್ಣುಮಗು (ಹೆಣ್ಣುಕೂಸು) ಈ ಮಾತುಗಳಿಗೆ ಈಗಳಿನವರ ರೂಢಪ್ರಯೋಗದಲ್ಲಿ ಗಂಡುಸು ಹೆಂಗುಸು ಎಂದರ್ಥವು. ನಮ್ಮಾ ಕನ್ನಡದ 'ಗಂಡುಸು', 'ಹೆಂಗುಸು' ಶಬ್ದಗಳಾದರೂ, ಮೊದಲನೆತ್ತಿದರೆ ಇದೇ ಅರ್ಥವನ್ನು ಕೊಡುವುವು. ಗಂಡು + ಕೂಸು ಎಂಬ ನುಡಿಗಳೆರಡರ ಸೇರಿಕೆ

* ರೂಢಿಯಲ್ಲಿ ಹುಡುಗರಿಗೂ ಹುಡುಗಿಯರಿಗೂ ಜೋಕುಳೆಂದು ಹೇಳುವರು.

ಯಿಂದ ಗಂಡುಗೂಸೆಂಬೊಂದು ಸಮಾಸ ಹುಟ್ಟಿ, ಬಳಿಕದು ಗಂಡೂಸು-ಗಂಡುಸು ಎಂಬ ರೂಪಾಂತರಗಳನ್ನು ಹೊಂದಿತು. ಪೆಣ್ಣು + ಕೂಸು ಸೇರಿ ಪೆಣ್ಗೂಸು ಎಂದಾಗಿ ಮತ್ತದರಿಂದ ಪೆಂಗೂಸು-ಹೆಂಗೂಸು-ಹೆಂಗುಸು ಎಂಬೀ ರೂಪಗಳು ಸಿದ್ಧಿಯಾದುವೆಂದು ತಿಳಿಯಬಹುದು.

ಈಗಳೀ ಕ್ರಮದಿಂದ ನೋಡಲು, 'ಜೋ'ವೆಂಬ ಮಾತಿಗೆ ಮಗು ಇಲ್ಲವೆ ಕೂಸು ಎಂಬುದು ಅರ್ಥವಾಗಿರಬಹುದೆಂದು ನನಗೆ ಕಂಡುಬಂತು.

'ಜೋಗುಳ'ವೆಂಬ ನುಡಿಯು ಅರ್ಥವನ್ನರಸುವುದಿನ್ನು ಅಸಾಧ್ಯವಲ್ಲ. ಆದರೊಂದಿಷ್ಟು ತೊಡಕುಂಟು.

'ಜೋಗುಳ ಪಾಡು' ಎಂದು ಮೊದಲಿದ್ದ ಮಾತು. 'ಜೋಗುಳ' ಎಂಬ ಪದವು 'ಜೋ' ಶಬ್ದದ ಷಷ್ಠೀ ಬಹುವಚನವು. ಆದರೆ ಮತ್ತಿನವರು ಜೋಗಳ ಪಾಡೆಂಬುದೊಂದು ಸಮಾಸಪದವೆಂದು ಬಗೆದು ಸಸೂತ್ರವಾಗಿ ಜೋಗುಳಪಾಡೆಂದು ಕಲ್ಪಿಸಿಕೊಂಡರು. ಬಳಿಕ ಪೂರ್ವಪದವನ್ನೇ ಸಂಭಾವಿಸಿಕೊಂಡು ಜೋಗಳ-ಜೋಗಳ ಎಂದು ಕರೆದಾಡಿದರು. ಜೋಗುಳ-ವೆಂಬ ರೂಪವು ಅಲ್ಲಿಂದ ಮೇಲೆ ಹುಟ್ಟಿದುದಾಗಿರಬಹುದು, ಇಲ್ಲವೆ 'ಜೋಕುಳಿಪದ' ಎಂಬ ತುಳುಮಾತಿನಿಂದ ಬಂದರೂ ಬರಬಹುದು. ಕವಿಮುಖ್ಯರೆಲ್ಲ ಜೋಗುಳಶಬ್ದಕ್ಕೆಯೆ ಮೊದಲೆಡೆಕೊಟ್ಟು ಇದುವೆ ಸಿದ್ಧರೂಪವೆನ್ನುವರು. ಇದಹುದಾದರೆ ಜೋ-ಜೋಗುಳ ಎಂಬೀಮಾತುಗಳನ್ನು ತುಳುಹೆಂಗಸರುಗಳ ಬಾಯಿಂದ ಹೆಕ್ಕಿಕೊಂಡಿರಬೇಕು.

ಚಕ್ರಧಾರಿ.

"ಸುವಾಸಿನೀ"—ಮಂಗಳೂರು, ಸಂಪುಟ ೧ ಪುಟ ೯೪-೯೫. (ಡಿಸೆಂಬರ್ ೧೯೦೦)

---

(೨)

(ಲಕ್ಷ್ಮೀನಾರಣಪ್ಪನವರ ಮಿತ್ರರಾದ ಮ|| ಬಿ. ಸೀತಾರಾಮಯ್ಯನವರು
ಮ|| ಹುರುಳಿ ಭೀಮರಾಯರಿಗೆ ಬರೆದ ಕಾಗದ)

ಬೋಳಾರ, ತಾ|| 29-7-1925.

ಮ|| ರಾ|| ರಾ|| ಹುರುಳಿ ಭೀಮರಾಯರಿಗೆ

ಬೋಳಾರ ಸೀತಾರಾಮಯ್ಯನ ಸಾದರ ನಮಸ್ಕಾರ—ಆದಾಗಿ ಈವರೆಗೆ ಉಭಯಕ್ಷೇಮ ಸಾಂಪ್ರತ. ತಾವು ಕೇಳಿದ ಅನುಭವದ ವಿಷಯ ನನಗೆ ತಿಳಿದ ವಿಷಯವನ್ನು ಬರೆಯುತ್ತೇನೆ.

ನಂದಳಿಕೆ ಲಕ್ಷ್ಮೀನಾರಾಯಣನವರು ನನ್ನ ತಂದೆಯವರನ್ನೂ, ಉಡುಪಿಯಲ್ಲಿ ಇನ್ಸ್ಪೆಕ್ಟಿಂಗ್ ಸ್ಕೂಲ್ಮಾಸ್ತರರಾಗಿದ್ದ ನನ್ನ ದೊಡ್ಡತಂದೆ ಕೃಷ್ಣಪ್ಪಯ್ಯನವರನ್ನೂ ಮೊದಲೇ ತಿಳಿದವರೂ ಅವರಲ್ಲಿ ಗೌರವ ಮತ್ತು ಪೂಜ್ಯಭಾವವುಳ್ಳವರೂ ಆಗಿದ್ದರು. ನಾನು ಸೆಟಲ್‌ಮೆಂಟ್ ಆಫೀಸಿನಲ್ಲಿ ಸುಪರ್ವೈಜರರ ಗುಮಾಸ್ತನಾಗಿ ಉಡುಪಿಯಲ್ಲಿದ್ದಾಗ ನನಗೂ ಅವರಿಗೂ ಪರಿಚಯವಾಗಿ ಅವರಲ್ಲಿ ನಾನು ಹೋಗುವುದೂ ಅವರು ನನ್ನ ಬಿಡಾರಕ್ಕೆ ಬರುವುದೂ ಇತ್ತು. ಕನ್ನಡ ಗ್ರಂಥಗಳನ್ನೋದುವುದು, ಆ ವಿಷಯ ಸಂಭಾಷಣಮಾಡುವುದು, ಇತರ ಸುಖಗೋಷ್ಠಿಗಳು, ಮೊದಲಾದವುಗಳಲ್ಲಿ ನಾವು ವಿರಾಮಕಾಲಗಳಲ್ಲಿ ಸಂತೋಷಪಡುತ್ತಿದ್ದೆವು. ಆಗ ಅವರು ಉಡುಪಿಯ ಬಾಸೆಲ್ ಮಿಶ್ಯನ್ ಹ್ಯಾಸ್ಕೂಲಿನಲ್ಲಿ ಕನ್ನಡವನ್ನೂ ದೇಹವ್ಯಾಯಾಮವನ್ನೂ ಕಲಿಸುವ ಉಪಾಧ್ಯಾಯರಾಗಿದ್ದರು. ಅವರು ಬರೆದ "ರಾಮಾಶ್ವಮೇಧ" ದ ಸ್ವಹಸ್ತ ಲಿಖಿತಪ್ರತಿಯನ್ನು ನನ್ನ ವಶ ಕೊಟ್ಟು ಅದರಲ್ಲಿ ವ್ಯಾಕರಣವಿರುದ್ಧ ದೋಷಗಳೇನಾದರು ಇದ್ದರೆ ಸೂಚಿಸಬೇಕೆಂದು ಹೇಳಿದರು. ನಾನದನ್ನು ತೆಕ್ಕೊಂಡು ಅವಕಾಶದೊರೆತಾಗ ಓದಿ, ಸ್ವಲ್ಪದಿನಗಳ ಮೇಲೆ ಕೊಟ್ಟೆ. ವಿಶೇಷದೋಷಗಳೇನೂ ಇರಲಿಲ್ಲ. ಆಗ ಅದು ಅಂತ್ಯದಲ್ಲಿ ಸ್ವಲ್ಪ ಅಪೂರ್ಣವಾಗಿತ್ತು. ಗ್ರಂಥವು ಚಲೋದಾ

ಗಿತ್ತು. ನನ್ನ ತಂದೆಯವರು ಬರೆದ "ನಾನಾರ್ಥಶಬ್ದಾವಳಿ" ಯ ವಿಷಯ ಪುನಃ ಮುದ್ರಿಸುವಲ್ಲಿ ಮಾಡಬೇಕಾದ ಕೆಲವು ವಿಷಯಗಳನ್ನು ಸೂಚಿಸಿದ್ದರು. (ಅವರ ಶಾಲೆಯ ಹುಡುಗರ ಕನ್ನಡಪಾಠದ ಪರೀಕ್ಷಾ ಪತ್ರಗಳನ್ನು ತಿದ್ದುವದಕ್ಕೂ ನನ್ನವಶ ಕೊಟ್ಟಿದ್ದರು. ನಾನು ಎರಡು ವರ್ಷದವರೆಗೆ ಉಡುಪಿಯಲ್ಲಿದ್ದೆ. ಎರಡನೆಯ ಸರ್ತಿ ನಾನು ಉಡುಪಿಯಲ್ಲಿದ್ದಾಗ ಸೆಟಲ್ಮೆಂಟ್ ಪಟ್ಟಾಕೊಡುವ ಕಾಲವಾಗಿತ್ತು. ನನಗೆ ಅವರಲ್ಲಿ ಹೋಗಿ ಮಾತಾಡುವುದಕ್ಕೇನೂ ಅವಕಾಶ ದೊರೆತಿರಲಿಲ್ಲ.)

ಅವರು ತಮ್ಮ ಮನೆಯ ತೆಂಕಹಿತ್ತಲಲ್ಲಿದ್ದರು. ಅವರ ಹೆಂಡತಿಯೂ ಇನ್ನೊಬ್ಬ ವಿಧವೆಯೂ ಅವರಲ್ಲಿದ್ದ ಹೆಂಗುಸರು—ಮೂರುಜನರೇ ಇದ್ದವರು.

ಅವರು ನಿಗರ್ವಿ, ಶಾಂತಸ್ವಭಾವದವರು. ಗೃಹಕೃತ್ಯದ ಕೆಲಸಗಳನ್ನೂ, ಶಾಲೆಯಲ್ಲಿಯ ತನ್ನ ಉದ್ಯೋಗವನ್ನೂ ಮಾಡಿಕೊಂಡು ಉಳಿದ ಕಾಲವನ್ನು ಓದುವುದು ಬರೆಯುವುದು ಈ ವಿಷಯಗಳಲ್ಲೇ ಬಹಳ ಕಳೆಯುತ್ತಿದ್ದರು.

ಇವರು ಕುಂದಾಪುರದಲ್ಲಿಯ ಕನ್ನಡ ಸಂಸ್ಕೃತಗಳಲ್ಲಿ ಪಾಂಡಿತ್ಯವುಳ್ಳ ಒಬ್ಬ ಬ್ರಾಹ್ಮಣಗೃಹಸ್ಥರ* ವಿಷಯವಾಗಿ ಮಾತಾಡುತ್ತಿದ್ದರು. ಆ ಗೃಹಸ್ಥರ ಹೆಸರು ವಾಸಸ್ಥಾನಾದಿಗಳ ವಿಷಯ ಈಗ ನನ್ನ ನೆನಪಿನಲ್ಲಿಲ್ಲ. ಲಕ್ಷ್ಮೀನಾರಣಪ್ಪನವರು ಈ ಗೃಹಸ್ಥರ ತಿಳುವಳಿಕೆಯ ಮತ್ತು ಸದ್ಗುಣಗಳ ವಿಷಯ ಹೊಗಳುತ್ತಿದ್ದರು. ತಮಗೆ ಕುಂದಾಪುರದತ್ತ ಕಡೆಯ ಮಿತ್ರರಾರಾದರು ಸಿಕ್ಕಿದಾಗ ಈ ಗೃಹಸ್ಥರ ವಿಷಯ ಅಥವಾ ಅವರೇನಾದರೂ ಗ್ರಂಥವನ್ನು ಬರೆದ ವಿಷಯ ತಿಳಿಯುವ ಪ್ರಯತ್ನಮಾಡಬಹುದೆಂದು ತೋರುತ್ತದೆ.

ಇಂತೀ ನಮಸ್ಕಾರ

ಸೀತಾರಾಮಯ್ಯ.

---

* ಅವರ ಗುರುಗಳಾದ ಮ|| ಮುಳಲಿ ಸುಬ್ಬರಾಯರು.







ಕ್ರೋಧನ ಸಂವತ್ಸರ —೨೪— ದೀಪಾವಳಿಯ ಸಂಚಿಕೆ

ಸಂಪುಟ ೭] ವಿಷಯ ಸೂಚಿಕೆ [ಸಂಚಿಕೆ ೨



೧. ಮೊರೆ—ಜೀವವಾಹಿನಿ— ವಿ. ಸೀ.

೨. ಲಕ್ಷ್ಮೀನಾರಾಯಣಕವಿ— ಮ|| ಬಿ. ರಾಮರಾವ್, ಎಂ.ಎ., ಎಲ್‌ಎಲ್.ಬಿ.

೩. ಕೆಲವು ಕನ್ನಡಕವಿಗಳ ಜೀವನಕಾಲವಿಚಾರ—
ಡಾ|| ಎ. ವೆಂಕಟಸುಬ್ಬಯ್ಯ, ಎಂ.ಎ., ಪಿಎಚ್.ಡಿ., ಎಲ್‌ಎಲ್.ಬಿ.

೪. ತಲಕಾಡು— ಮ|| ಬಿ. ವೆಂಕೋಬರಾವ್, ಬಿ.ಎ.

೫. ವಿಗಡವಿಕ್ರಮರಾಯ

೬. ಹೈದರಾಲಿಯ ನ್ಯಾಯಪಕ್ಷಪಾತ (ಸಣ್ಣಕಥೆ)—
ಮ|| ಬಿ. ಚಂದ್ರಶೇಖರಯ್ಯ, ಎಂ.ಎ.

೭. "ಕಾವ್ಯಾವಲೋಕನ"

೮. "ವಸ್ತುಕೋಶ"



ಬೆಂಗಳೂರು

ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಟಿಸಲ್ಪಟ್ಟಿದೆ.

೧೯೨೫





Printed at the Crown Electric Press, Mysore.

## OFFICE OF THE INSPECTOR-GENERAL OF EDUCATION IN MYSORE, BANGALORE.

*Notification D. No. 2, dated 3rd July 1925.*

*The Devaraja Bahadur Charity Funds—Literary Section.*

1. Applications are invited before the 15th of January 1926 from authors who desire to submit their books and manuscripts for patronage from the Devaraja Bahadur Charity Funds—Literary section. Authors should submit their works along with their applications.

2. The works submitted for patronage may be original works in Kannada or Sanskrit, translation from other languages into Kannada, critical editions of standard Kannada or Sanskrit Works. The order of preference in making the award will be as follows:—

- i. Original Compositions.
- ii. Translations.
- iii. Critical Editions of standard works.

The works may be either manuscripts or printed books. In the case of the latter, the date of publication should not be earlier than the 1st January 1925.

The applications should be accompanied by a Memorandum stating how far the work is original, or in the case of a translation, the original source and explaining the special claims of the work for the prize.

The manuscripts should be written legibly and only on one side of the paper.

3. The competition is open to all in the case of Kannada Works but shall be confined to authors or editors in the Mysore State in the case of Sanskrit Works.

4. The awards shall be made on the judgment of a Committee appointed by the Inspector-General of Education.

5. There will be two prizes, one of Rs. 500 and the other of Rs. 200 to be awarded to the two best competitors.

6. The award may be in the shape of an absolute grant to the Author in the case of a printed book and in the case of manuscripts a contribution towards the printing of the work, on the author guaranteeing its publication within a year or his agreeing to hand over the copyright of the manuscript to Government.

7. In every case the decision of the Inspector-General of Education shall be final.

8. Copies of books submitted in response to this advertisement will not be returned but manuscripts so submitted will be returned to the applicants after June 1926.

K. MATTHAN,
Offg. *Inspector-General of Education.*







ರಾಗ—ಹಿಂದೋಳ್.

## ಮೊರೆ.

ಬಲ್ಲಿದನು ನಾನೆಂದು ಬಲುಮೆರೆದೆನಯ್ಯ ||ಪ||
ಎಲ್ಲ ಬಲವೆನದೆಂದು ಮೈಮರೆತೆ ನೀನೆನ್ನ ಸಲಹಬೇಕಯ್ಯ ||ಅನು||

ಎನ್ನ ಮಾನಸದಾಸೆಯಾಗಸಕೆ ಕೈನೀಡಿ |
ನಿನ್ನ ಸಂಕಲ್ಪಗಳ ಲೆಕ್ಕಿಸದೆ ಚೀರಿಡೆ ಸಂ ||
ಪನ್ನಬಲ ದಯೆತೋರ್ದ ದಾರಿವೆಳಗಾದೆ |
ಎನ್ನಹಂಕೃತಿ ತೊಲಗೆ ನೆರವಾದೆ ನಿಜವನೊರೆದೆ ||೧||

ಎನ್ನ ಸಾಸಕೆ ಜಗವು ಅಡಿಯಾಳುತನಮಾಡಿ |
ಮನ್ನಣೆಯ ತೋರುವುದು ತಾನೆಂದು ಬಗೆದೆ ||
ಇನ್ನು ಮೇಲಣ ಕಾರ್ಯವೆನ್ನಧೀನವದೆಂದು |
ಭಿನ್ನತತ್ತ್ವದ ದಾಳಿಗಾಂ ಶರಣುವೋದೆ ನಿರ್ಬೋಧನಾದೆ ||೨||

ವಿಶ್ವಸಾಮ್ರಾಜ್ಯದಧಿಕಾರ ನಿನಗಿರಲು |
ಅಸ್ವತಂತ್ರನು ಅದನು ಅಣಕಿಸುತೆ ಮಲೆತೆ ||
ನಿಸ್ಸೀಮಸಾಹಸದ ಬೆಡಗಿನಾತ್ಮನೆ ಪಿತನೆ |
ವತ್ಸನೆಂತಾದೊಡಂ ನಮಿಸಿ ಬೇಡುವೆನಯ್ಯ ಕರುಣೆದೋರಯ್ಯ ||೩||

# ಜೀವವಾಹಿನಿ.

ರಾಗ—ಪೀಲು.

ಜೀವವೊಂದನಂತವಾಹಿನೀ ||ಪ||
ವಿಶ್ವಪಾತ್ರದೊಳು ಪರಿದು ಪಾರುವೀ ||ಅನು||

ಜೀವಕೋಟಿಗಳ ಕೋಟಲೆಗಳಿಹವಿಲ್ಲಿ |
ಭೀಮಸಂಭ್ರಮದ ತೀವ್ರಲಹರಿಯಿಹುದು ||
ಸಾವುನೋವುಗಳ ಭೇದ ಬಾಧೆಗಳಿಹವು |
ಜೀವ ಕುದಿವರಿಯುವ ಶೋಕವಿಹುದು ||೧||

ಗರುವಗಾಂಭೀರ್ಯಗಳು ಮೆರೆವ ಒಯ್ಯಾರಗಳು |
ಪರಿಪರಿಯ ಸೌಂದರ್ಯವೌದಾರ್ಯವಿಹುದು |
ಮರೆಸಿ ಮೋಹದೊಳಿಳಿಪ ಲಾಸ್ಯಜಾಲಗಳಿಹವು |
ಉರುತರದ ರುಚಿಗಮನ ಮಂದಹಾಸಗಳು ||೨||

ಇದರಾಳ ಕಂಡವರಿಲ್ಲ ಮೂಲವರಿತವರಿಲ್ಲ |
ನೀಲಹೃದಯುವ ಪೊಕ್ಕು ಪುಡುಕಿದವರಿಲ್ಲ ||
ಮೇಲೆ ಘೋರ್ಗರೆಯುತುರುಳಿ ರಭಸದೆ ಬರ್ಪ |
ಮಾಲೆಯಲೆಗಳ ಜೀವ ಶೋಧಿಸಿದರಿಲ್ಲ ||೩||

ಆವ ಸಾಗರಕೆಲ್ಲಿ ಪೋಗಿ ಸೇರುವುದೊ |
ಆವ ಕಡೆ ಧುಮ್ಮಿಕ್ಕುತೆಲ್ಲಿ ಸುಳಿಯುವುದೊ ||
ಆವ ದೋಣಿಯನೆಳೆದು ತಡಿಗೆ ನೂಂಕುವುದೊ |
ಆವ ನಾವಿಕನಿದನು ದಾಂಟಲರಿದಿಹನೊ ||೪||

ವಿ. ಸೀ.



ಮ|| ಬಿ. ರಾಮರಾಯರು, ಎಂ.ಎ., ಎಲ್ಎಲ್.ಬಿ.

# ಶ್ರೀ ಲಕ್ಷ್ಮೀನಾರಾಯಣ ಕವಿ.

(ಮ|| ಬಿ. ರಾಮರಾವ್, ಎಂ.ಎ., ಎಲ್‌ಎಲ್.ಬಿ. ಯವರಿಂದ)

ಶ್ರೀ|| ಲಕ್ಷ್ಮೀನಾರಾಯಣ ಕವಿಯ ಹೆಸರು ಮೊತ್ತಮೊದಲು ನನ್ನ ಕಿವಿಗೆ ಬಿದ್ದುದೂ ಆತನ ವಿಷಯದಲ್ಲಿ ಗೌರವಬುದ್ಧಿಯುಂಟಾದುದೂ, ನನಗೆ ಈಗ ಜ್ಞಾಪಿಸಿಕೊಳ್ಳಲು ಬರುವ ಮಟ್ಟಿಗೆ ಕ್ರಿ.ಶ. ೧೮೭೧ನೇ ವರ್ಷದ ಅನಂತರವಾಗಿರಬೇಕೆಂದು ತೋರುತ್ತಿದೆ. ಏಕೆಂದರೆ ಪ್ರಥಮತಃ ಪ್ರಚುರಗೊಳಿಸಲಾದ ಅವರ 'ಕುಮಾರವಿಜಯ' ವೆಂಬ ಯಕ್ಷಗಾನ ಪ್ರಬಂಧವು ಆ ವರ್ಷದಲ್ಲಿ ಉಡುಪಿಯ ಹಿಂದೂ ಮುದ್ರಾಕ್ಷರ ಶಾಲೆಯಲ್ಲಿ ಅಚ್ಚಾಗಿ ಪ್ರಕಾಶಗೊಳಿಸಲಾಗಿದ್ದಿತು. ಮುದ್ರಣದ ಒಂದು ಪ್ರತಿಯು ಈಗಲೂ ನನ್ನಲ್ಲಿದೆ. ಈ ಪುಸ್ತಕದ ಕಡೆಗೆ ಆಗ ಬಾಲ್ಯದಲ್ಲಿದ್ದ ನಮ್ಮ ಲಕ್ಷ್ಯವು ವಿಶೇಷವಾಗಿ ಹೋಗುವುದಕ್ಕೆ ಹಲವು ಕಾರಣಗಳಿದ್ದುವು. ನಮ್ಮ ಚಿಕ್ಕ ವಯಸ್ಸಿನಲ್ಲಿ, ನಮ್ಮ ಮಂಗಳೂರು ಜಿಲ್ಲೆಯಲ್ಲಿ ಯಕ್ಷಗಾನದ ದಶಾವತಾರದ ಆಟಗಳು ಮತ್ತು *'ತಾಳಮದ್ದಳೆ'ಗಳು ಯಾವತ್ತು ಜಾತಿಗಳ ಜನರಿಗೆ ಸ್ತ್ರೀಪುರುಷ ಯುವಕವೃದ್ಧರೆಂಬ ಯಾವ ಭೇದವೂ ಇಲ್ಲದೆ ಸಮಾನವಾಗಿ ಪ್ರಿಯವಾಗಿದ್ದುವು. ಅಂದಿನಿಂದೀಚೆಗೆ ಇಪ್ಪತ್ತು ಮೂವತ್ತು ವರ್ಷಗಳಲ್ಲಿ ಪಾಶ್ಚಿಮಾತ್ಯ ನಾಗರಿಕತೆಯೂ ಹೊಸ ಪದ್ಧತಿಯ ನಾಟಕಗಳೂ ಅಪಾರವಾಗಿ ಬೆಳೆದಿರುವುವಾದರೂ, ಈ ಹೊತ್ತಿಗೂ ನಮ್ಮ ಜಿಲ್ಲೆಯವರ ಯಕ್ಷಗಾನ ಪ್ರೇಮವು ಕಡಮೆಯಾಗಿ

---

* ಕ್ರಮವಾಗಿ ವೇಷಗಳನ್ನು ಹಾಕಿಕೊಂಡು ರಂಗಸ್ಥಳದಲ್ಲಿ ಆಡುವುದಕ್ಕೆ ಬದಲಾಗಿ, ಮನೆಗಳಲ್ಲಿಯೇ ಚಿಕ್ಕ ಚಿಕ್ಕ ಅಥವಾ ದೊಡ್ಡ ಗುಂಪುಗಳಾಗಿ ಕುಳಿತು ತಾಳ ಮದ್ದಲೆಗಳೊಡನೆ ಭಾಗವತನಿಂದ ಹಾಡಿಸಿ, ತಿಳಿದವರು ಅರ್ಥ ಮಾತನಾಡುವ ಪದ್ಧತಿಯೂ ನಮ್ಮ ಜಿಲ್ಲೆಯಲ್ಲಿದೆ. ಹೆಚ್ಚಾಗಿ ಬಯಲಿನಲ್ಲಿ ಕ್ರಮವಾದ ಆಟವಾಡಲು ಬಾರದಿರುವ ಮಳೆಗಾಲದಲ್ಲಿ ಹೀಗೆ ಮಾಡುವರು. ಇದಕ್ಕೆ 'ತಾಳಮದ್ದಲೆ' ಹಾಕುವುದೆಂದು ಸಂಕೇತನಾಮವು.

ರುವುದೆಂದು ನಾನು ಧೈರ್ಯವಾಗಿ ಹೇಳಲಾರೆನು. ನಿಷ್ಪಕ್ಷಪಾತವಾಗಿ ಆಲೋಚಿಸಿದೆವಾದರೆ, ಅವುಗಳಲ್ಲಿ ಅಂಥ ಆಕರ್ಷಕಶಕ್ತಿಯಿರುವುದೆಂದು ಧಾರಾಳವಾಗಿ ಒಪ್ಪಬೇಕಾಗುವುದು. ಅದಂತಿರಲಿ; ಆ ಕಾಲದಲ್ಲಿ ಯಕ್ಷಗಾನವೇ ನಮ್ಮ ಕನ್ನಡ (Kanara) ಜಿಲ್ಲೆಯ ಜನಸಾಮಾನ್ಯರ ಕರ್ಣಾಟ ಪಾಂಡಿತ್ಯದ ಮತ್ತು ಗಾನದ ಆದರ್ಶವಾಗಿದ್ದಿತು. ದಶಾವತಾರದ ಆಟಗಳನ್ನು ಬಿಟ್ಟರೆ ಕನ್ನಡದಲ್ಲಿ ಬೇರೆ ಯಾವುದಾದರೂ ನಾಟಕಗಳಿವೆಯೆಂಬ ಕಲ್ಪನೆಯು ಕೂಡ ನಮ್ಮಲ್ಲಿ ಪ್ರಾಯಶಃ ಯಾರಿಗೂ ಇರಲಿಲ್ಲ. ೧೮೯೩ ನೇ ಇಸವಿಗೆ ಮೊದಲು ನಾನು ಕನ್ನಡದ ಯಾವುದೊಂದು (ಅರ್ವಾಚೀನ ಪದ್ಧತಿಯ) ನಾಟಕವನ್ನು ನೋಡಿದಂತೆ ನೆನಪು ತೋರುವುದಿಲ್ಲ. ಹೀಗಾದುದರಿಂದ ಈಗಳಿನ ಚಿಕ್ಕವಯಸ್ಸಿನವರು ಎಲ್ಲೆಂದರಲ್ಲಿ ಬಾಯಿಗೆ ಬಂದ ನಾಟಕದ ಹಾಡುಗಳನ್ನು ಹಾಡುತ್ತ ತಿರುಗುವಂತೆ ಯಕ್ಷಗಾನದ ಹಾಡುಗಳೇ ಆ ಕಾಲದಲ್ಲಿ ನಮ್ಮ ಬಾಯಲ್ಲಿ ಹೆಚ್ಚಾಗಿ ಬರುತ್ತಿದ್ದುವು.

ಶ್ರೀ|| ಲಕ್ಷ್ಮೀನಾರಾಯಣ ಕವಿಯ 'ಕುಮಾರವಿಜಯ' ವು ವಿಶೇಷವಾಗಿ ನಮ್ಮ ಲಕ್ಷ್ಯವನ್ನು ಸೆಳೆಯಿತೆಂದು ಮೇಲೆ ಹೇಳಿದೆನಲ್ಲವೆ? ಇದಕ್ಕೆ ಮುಖ್ಯವಾಗಿ ಮೂರು ಕಾರಣಗಳಿದ್ದುವು. ಸಾಮಾನ್ಯತಃ ಯಕ್ಷಗಾನ ಪ್ರಸಂಗದ ಪುಸ್ತಕಗಳು 'ಬಜಾರೀ ನಾಟಕ' ದ ಪುಸ್ತಕಗಳ ಹಾಗೆಯೇ, ಕೆಟ್ಟಕಾಗದದ ಮೇಲೆ ನೂರಾರು ತಪ್ಪುಗಳೊಡನೆ (ಆದರೆ 'ಪಂಡಿತರಿಂದ ಪರಿಷ್ಕರಿಸಲ್ಪಟ್ಟು' ಎಂಬ ಮಾತು ರಕ್ಷಾಪತ್ರದ ಮೇಲೆ ಹಾಕಲು ಮರೆಯದೆ) ಕಣ್ಣುಬೇನೆ ತರತಕ್ಕ ಮೊಳೆಗಳಿಂದ ಅಚ್ಚುಹಾಕಲ್ಪಡುತ್ತಿದ್ದುವು. ಅಂದವಾಗಿಯೂ ಶುದ್ಧವಾಗಿಯೂ ಒಳ್ಳೆಯ ಕಾಗದದ ಮೇಲೂ ಮುದ್ರಿತವಾದ ಯಕ್ಷಗಾನ ಪುಸ್ತಕಗಳೊಳಗೆ ನಾನೂ ನನ್ನ ಮಿತ್ರಮಂಡಲಿಯವರೂ ನೋಡಿದ ಮೊದಲನೆಯದು "ಕುಮಾರವಿಜಯ"ವೇ ಸರಿ. ಇದು ಮೊದಲನೆಯ ಕಾರಣವು. 'ಕುಮಾರವಿಜಯ' ದ

ಶೈಲಿಯು ಕೂಡ ಉದ್ಗ್ರಂಥಗಳ ಶೈಲಿಯೊಡನೆ ಹೋಲಿಸಿ ನೋಡಿದರೆ ಕಡಮೆಪ್ರತಿಯದೆಂದೇ ಹೇಳಬಹುದಾದರೂ, ಇತರ ಯಕ್ಷಗಾನ ಪುಸ್ತಕಗ ಗಳಲ್ಲಿ ಹೇಗೋ 'ಕುಮಾರವಿಜಯ' ದಲ್ಲಿಯೂ ಹಾಗೆಯೇ (ಆದರೆ ಕಡಮೆ ಪ್ರಮಾಣದಲ್ಲಿ)* ಛಂದೋದೋಷಗಳು ಕಂಡುಬರುವುವಾದರೂ, ಒಟ್ಟಾರ, ಕುಮಾರವಿಜಯದ ಶೈಲಿಯು ಇತರ ಯಕ್ಷಗಾನಗಳಿಗಿಂತ ಎಷ್ಟೋ ಪ್ರೌಢವೂ ಪಾಮರರಿಗೆ ದುರವಗಾಹವೂ ಆಗಿದ್ದಿತು. ಅದರಲ್ಲಿ ‡ಶಬ್ದಾಲಂಕಾರಗಳೂ ಪ್ರಾಸಚಮತ್ಕಾರಗಳೂ ಬಹಳವಾಗಿ ಕಂಡುಬರುತ್ತಿದ್ದುವು. ಹಾಡುಗಳ ಮಟ್ಟುಗಳಲ್ಲಿಯೂ ಕೂಡ ನೂತನ ತೆಯು ಕಂಡುಬರುತ್ತಿದ್ದಿತು. ಇದನ್ನೆಲ್ಲ, ಪುಸ್ತಕವನ್ನೋದಿಯೇ ಕಂಡು ಕೊಳ್ಳಬೇಕಲ್ಲದೆ, ಉದಾಹರಣೆಗಳಿಂದ ವಿವರಿಸಲು ಸಾಧ್ಯವಿಲ್ಲ. ಯಕ್ಷ ಗಾನ ಲೇಖಕರಲ್ಲಿ ಗೋಚರವಾಗುವ ಸಾಹಿತ್ಯಜ್ಞಾನಕ್ಕಿಂತ ಈ ಕವಿಯ ಪಾಂಡಿತ್ಯವು ಎಷ್ಟೋ ಅಧಿಕವಾಗಿದ್ದಿತೆಂಬುದೂ ಆತನು ಕೆಲಕೆಲವು ಮೇಲ್ತರಗತಿಯ †ಗ್ರಂಥಗಳ ಪರಿಚಯವುಳ್ಳವನಾಗಿದ್ದನೆಂಬುದೂ, ಆತ ನ 'ಕುಮಾರ ವಿಜಯ' ದ ವಾಚನದಿಂದಲೇ ನಮಗೆ ತಿಳಿದುಬಂದು, ಆಗ ತಾನೇ ವಾಙ್ಮಯ ಕ್ಷೇತ್ರದಲ್ಲಿ ಪದಾರ್ಪಣ ಮಾಡುತ್ತಲಿದ್ದ ನಮಗೆ

---

* ಉದಾ—ಆರನೆಯ ಗಣದಲ್ಲಿ ಜಗಣ ಅಥವಾ ನಗಣ ಮಾತ್ರ ಬಾರದಿರು ವುದು, ಮತ್ತು ಎರಡನೆಯ ಪಾದದ ಅಂತ್ಯಾಕ್ಷರವನ್ನು ಕೆಲವು ಕಡೆ ಲಘುವಾಗಿ ಇಟ್ಟಿರುವುದು.

ಕಂ|| ವಿಹಗನ ಮೇಗಿಹನಾರ್ಮೊಗ | ವಿಹ ಘನ ಮಹಿಮನ ಪಾರ್ವತಿ
ಕಂದನ ಶರಜನ ||

[ಕುಮಾರವಿಜಯ ಪುಟ ೨].

‡ ಕುಮಾರವಿಜಯದ ೨ ನೇ ಪುಟದ ಮೇಲಣ ವಾರ್ಧಿಕ ಭಾಮಿನಿ ಷಟ್ಪದಿ ಗಳನ್ನು ನೋಡಿರಿ. ಪ್ರತಿ ಪುಟದಲ್ಲೊಂಬಂತೆ ಈತನ ಕುಶಲತೆಯು ಕಂಡುಬರುತ್ತಿದೆ.

† ಕುಮಾರವಿಜಯದ ಮುಖಪೃಷ್ಠದಲ್ಲಿಯೇ "ಅಳಿಯುಲರಂ ಗಿಳಿಪಣ್ಣಂ" ಎಂಬ ಶಬರಶಂಕರವಿಲಾಸದೊಳಗಣ ಪದ್ಯವು ಸೂಚಕವಚನ (motto) ವಾಗಿ ಹಾಕ ಲ್ಪಟ್ಟಿದೆ.

ಆತನ ಮತ್ತು ಆ ಪುಸ್ತಕದ ವಿಷಯದಲ್ಲಿ ಗೌರವವನ್ನುಂಟುಮಾಡಿದುದು ಎರಡನೆಯ ಕಾರಣವು. ನಮ್ಮ ಪ್ರಾಂತದಲ್ಲಿ ಕುಮಾರಸ್ವಾಮಿಯು ಅಪ್ಪಟ ಬ್ರಹ್ಮಚಾರಿಯೆಂಬ ಭಾವನೆಯು ಪ್ರಬಲವಾಗಿರುವುದು. ನಮ್ಮ ಜಿಲ್ಲೆಗೆ ಸೇರಿದ ಶ್ರೀ ಸುಬ್ರಹ್ಮಣ್ಯಕ್ಷೇತ್ರದಲ್ಲಿ ಕುಮಾರಸ್ವಾಮಿಯ ದೇವಾಲಯವಿರುವ ಕುಮಾರಪರ್ವತದ ಮೇಲೆ ಹೆಂಗುಸರ ಬಳೆಗಳ ಶಬ್ದವು ಕೂಡ ಕೇಳಿಸಲಾಗದೆಂದೂ, ಅದಕ್ಕೆ ಏನೋ ತೀವ್ರವಾದ ಶಾಪವುಂಟೆಂದೂ ಹೇಳುವರು. ಇದಕ್ಕೆ ಆಧಾರವೇನೋ ನನಗೆ ತಿಳಿಯದು. ದ್ರಾವಿಡದೇಶದಲ್ಲಿ ಕುಮಾರಸ್ವಾಮಿಗೆ ವಲ್ಲಿನಾಯಕಿ ದೇವಸೇನೆಯರೆಂಬ ಇಬ್ಬರು ಪತ್ನಿಯರಿರುವಂತೆ ಹೇಳುವರು. "ವಲ್ಲೀಪರಿಣಯ" ವೆಂಬ ನಾಟಕವು ತಮಿಳರಿಗೆ ಬಹು ಪ್ರಿಯವಾಗಿರುವುದು. ಸ್ಕಾಂದಪುರಾಣದಲ್ಲಿ ಕೂಡ ಕುಮಾರಸ್ವಾಮಿಗೆ ಆಗಾಗ ವಿವಾಹವಾದ ವಿಷಯವು ಕಂಡು ಬರುತ್ತಿದೆ. ಶ್ರೀ|| ಲಕ್ಷ್ಮೀನಾರಾಯಣ ಕವಿಯಾದರೂ ತನ್ನ ಕಥೆಯನ್ನು 'ಶಂಕರಸಂಹಿತೆ' ಯಿಂದ ತೆಗೆದುಕೊಂಡಿರುವಂತೆ ಹೇಳಿರುವರು. ಆದರೇನು ? ಈ ಗ್ರಂಥಗಳನ್ನೆಲ್ಲ ಸಾಮಾನ್ಯ ಜನರು ನೋಡುವರೇ ? ತಮ್ಮ ಅಭಿಪ್ರಾಯವೇ ಸರಿಯಾದುದೆಂದು ಅವರ ಭಾವನೆ. ಹೀಗಾಗಿ, ಪದ್ಮಾಸುರನನ್ನು ಕೊಂದು ದೇವತೆಗಳನ್ನು ಕಾಪಾಡಿ ದೇವೇಂದ್ರಕುಮಾರಿಯನ್ನು ಮದುವೆಯಾದ ಕಥೆಯನ್ನು ಯಕ್ಷಗಾನರೂಪದಲ್ಲಿ ಓದಿ ನೋಡಿದ ಜನರ ಬಾಯಲ್ಲಿ 'ಇದೇನೋ ಪುರಾಣಗಳಲ್ಲಿ ಕಂಡುಬಾರದ ಕಥೆಯನ್ನು ಕಲ್ಪಿಸಿ ಕವಿಯು ಜನರನ್ನು ಮೋಸಗೊಳಿಸುತ್ತಿರುವನೆಂಬ ಒಂದು ವಿಧವಾದ ನಿಂದೆಯೂ * ಕೇಳಬರುತ್ತಲಿದ್ದಿತು. ಇದು ಮೂರನೆಯ ಕಾರಣವು. ಹೀಗಾಗಿ ಈ ಕವಿಯ ಹೆಸರು ನಮಗೆ ಸುಪರಿಚಿತ

* ಈ ಕಾರಣದಿಂದಲೇ ಆ ಪ್ರಸಂಗವು ಜನರ ಮೆಚ್ಚುಗೆಗೆ ಪಾತ್ರವಾಗಲಿಲ್ಲವೆಂದೂ, ರಂಗಸ್ಥಳದಲ್ಲಿಯೂ ಆಡಲ್ಪಡಲಿಲ್ಲವೆಂದೂ ಕೆಲವರು ಹೇಳುವರು. ತಾಳಮದ್ದಳೆಯ ರೂಪವಾಗಿಯೂ ಅದನ್ನು ನಾನು ನೋಡಿಲ್ಲ. ಆದರೆ ಅದರ ಪ್ರೌಢಿಮೆಯಿಂದಲೂ ಹೀಗಾಗಲು ಒಂದು ಕಾರಣವಾಗಿರಬಹುದೆಂದು ನಾನು ಊಹಿಸುವೆನು.

ವಾಗಿ, ಈತನು ಯಾರು? ಈತನ ಕುಲಗೋತ್ರಗಳೇನು? ಎಂಬೀ ಮುಂತಾದ ಸಮಾಚಾರಗಳನ್ನು ತಿಳಿದುಕೊಳ್ಳಬೇಕೆಂಬ ಆತುರವು ನಮ್ಮಲ್ಲಿ ಉಂಟಾಯಿತು, ಮತ್ತು ಕ್ಷಿಪ್ರದೊಳಗಾಗಿಯೇ, ಕವಿಯು ಕುಂದಾಪುರ ಹೈಸ್ಕೂಲಿನ ವ್ಯಾಯಾಮೋಪಾಧ್ಯಾಯನೆಂದೂ ಅದೇ ಶಾಲೆಯ ಮತ್ತೊಬ್ಬ ಉಪಾಧ್ಯಾಯರೂ, ಮರಾಠೀ ಭಾಷೆಯಲ್ಲಿ ಕೆಲಕೆಲವು ನಾಟಕಗಳನ್ನು ಬರೆದು ಪ್ರಸಿದ್ಧರೂ ಆಗಿದ್ದ ಶ್ರೀ|| ಮಳಲಿಯ ಸುಬ್ಬರಾಯರೆಂಬವರು ಆತನ ಗುರುವೆಂದೂ, ನಮಗೆ ತಿಳಿದುಬಂದಿತು.

ಆದರೆ, ಪತ್ರಮುಖದಿಂದಲಾದರೂ ನೇರಾಗಿ ಕವಿಯ ಪರಿಚಯವಾಗಲು ಇನ್ನು ಕೆಲವು ವರ್ಷಗಳು ತಗುಲಿದುವು. ಬರೀ ವಿದ್ಯಾರ್ಥಿಗಳಾದ ನಾವು, ಉಪಾಧ್ಯಾಯರೂ ಪಂಡಿತರೂ ಕವಿಯೂ ಆದ ಮಂಗಳೂರಿನಿಂದ ಸುಮಾರು ಅರುವತ್ತು ಮೈಲಿ ದೂರದಲ್ಲಿರುವ, ಈವೊದಲು ಎಂದೂ ಕಂಡರಿಯದ, ಶ್ರೀ|| ಲಕ್ಷ್ಮೀನಾರಣಪ್ಪನವರೊಡನೆ ಕಾಗದ ಪತ್ರಗಳನ್ನು ನಡೆಸುವುದು ತಾನೇ ಹೇಗೆ? ಹೀಗಾಗಿ ಕೆಲವು ಕಾಲ ಸುಮ್ಮನಿರಬೇಕಾಗಿದ್ದಿತು. ಬಳಿಕ ಕ್ರಿ. ಶ. ೧೮೯೭ನೇ ವರ್ಷದಲ್ಲಿ ನಾನು ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಒಡನೆಯೇ ಮದ್ರಾಸು ಕ್ರಿಶ್ಚಿಯನ್ ಕಾಲೇಜಿನಲ್ಲಿ ಕನ್ನಡ ಪಂಡಿತನಾಗಿ ನೇಮಕಪಟ್ಟೆನು. ಆಗ ಕನ್ನಡವನ್ನು ಪ್ರಧಾನ ಭಾಷೆಯಾಗಿಯೂ ತೆಲುಗನ್ನು ಎರಡನೆಯ ಭಾಷೆಯಾಗಿಯೂ ಇಟ್ಟುಕೊಂಡು, ಎಂ. ಎ. ಪರೀಕ್ಷೆಗೆ ಖಾಸಗಿಯಾಗಿ ಓದಿಕೊಂಡಿರುತ್ತ, ತೆಲುಗಿನಲ್ಲಿ ಒಂದಿಷ್ಟು ಪರಿಶ್ರಮವುಂಟಾದೊಡನೆ ಪ್ರಸಿದ್ಧ ಆಂಧ್ರ ಲೇಖಕರಾದ ವೀರೇಶಲಿಂಗಂ ಪಂತುಲುಯವರ ಗದ್ಯ ಪುಸ್ತಕಗಳನ್ನು ಓದತೊಡಗಿ, ಅವು ರಸಭರಿತವಾಗಿಯೂ ನೂತನವಾಗಿಯೂ ಕಂಡುಬಂದುದರಿಂದ ಆಗಲೇ ಅವನ್ನು ಕನ್ನಡಿಸುವುದಕ್ಕೂ ಮೊದಲು ಮಾಡಿದೆನು. ಮತ್ತು ಪ್ರಥಮತಃ "ಕಲಹಪ್ರಿಯಾಪ್ರಹಸನ" ವೆಂಬ ಚಿಕ್ಕದೊಂದು ಗದ್ಯ ಪ್ರಹಸನವನ್ನು ಕನ್ನಡಿಸಿದೆನು. ಬಳಿಕ ೧೮೯೮ರಲ್ಲಿ

ನಾನು ಧಾರವಾಡಕ್ಕೆ ಹೋದಾಗ ಅಲ್ಲಿನ ಕ. ವಿ. ವ. ಸಂಘದವರು ಆ ಪ್ರಹಸನವನ್ನು ತಮ್ಮ "ವಾಗ್ಭೂಷಣ" ದಲ್ಲಿ ಪ್ರಕಟಗೊಳಿಸಿ ಕೆಲವು ಪ್ರತಿಗಳನ್ನು ನನಗೆ ಕೊಟ್ಟರು. ಇವುಗಳೊಳಗೆ ಒಂದು ಪ್ರತಿಯನ್ನು ನಮ್ಮ ಪ್ರಾಂತ್ಯದ ಪ್ರಸಿದ್ಧ ಕವಿಯಾದ, ಆಗ ಉಡುಪಿಯ ಮಿಶ್ಯನ್ ಹೈಸ್ಕೂಲಿನಲ್ಲಿದ್ದ ಶ್ರೀ|| ಲಕ್ಷ್ಮೀನಾರಣಪ್ಪನವರಿಗೂ ಅಭಿಪ್ರಾಯಕ್ಕಾಗಿ ಕಳುಹಿಸಿಕೊಟ್ಟೆನು, ಮತ್ತು ಅವರಿಗೊಂದು ಕಾಗದವನ್ನು ಬರೆದು ಕೆಲವು ವರ್ಷಗಳಿಗೆ ಹಿಂದೆ ಉಡುಪಿಯ 'ಸುದರ್ಶನ' ವೆಂಬ ಮಾಸ ಪತ್ರಿಕೆ ಯಲ್ಲಿ ಹಾಕುವುದಕ್ಕಾಗಿ ಕಳುಹಿಸಿ, ಆ ಪತ್ರಿಕೆಯು ಅಷ್ಟರಲ್ಲಿ ನಿಂತು ಹೋದುದರಿಂದ ಹಸ್ತಪ್ರತಿಯು ಏತತ್ಸಂಪಾದಕರೊಡನೆಯೇ ನಿಂತು ಹೋಗಿದ್ದ "ಏಕನಾಥಚರಿತ್ರ" ವೆಂಬ ಪುಸ್ತಕದ ಒಂದನೆಯ ಅಧ್ಯಾಯವನ್ನು ಆ ಸಂಪಾದಕರಿಂದ ಪಡೆದು ಕಳುಹಿಸಿಕೊಡಬೇಕೆಂದು ಪ್ರಾರ್ಥಿಸಿದೆನು. ಇದೇ ಶ್ರೀ|| ಲಕ್ಷ್ಮೀನಾರಣಪ್ಪನವರಿಗೂ ನನಗೂ ಉಂಟಾದ ಪ್ರಥಮ ಪರಿಚಯ. ನನ್ನ ಪತ್ರಿಕೆಗೆ ಪ್ರತಿಯಾಗಿ ಅವರು ಒಂದು ಕಾರ್ಡು (೯ ನೇ ಜುಲೈ ೧೮೯೮) ಬರೆದು 'ಪುಸ್ತಕಕ್ಕೆ ಭಾಷಾಂತರದ ಮಟ್ಟಿಗೆ ಮೆಚ್ಚುತ್ತೇನೆ. ವಸ್ತು (plot) ಪ್ರಶಸ್ತವಾದದ್ದೆಂದು ಹೊಗಳುವದಕ್ಕಾಗುವದಿಲ್ಲ. ತಮ್ಮ ಅನುಮತಿಯಂತೆ, ಹಿಂದೂ ಪ್ರೆಸ್ಸಿನಿಂದ ಏಕನಾಥನ ಚರಿತ್ರೆಯನ್ನು ತೆಗೆದುಕೊಂಡು ಕಳುಹಿಸಿದ್ದೇನೆ. ...ಸ್ನೇಹಿತನ ಮೇಲೆ ತುಂಬಾ ವಿಶ್ವಾಸವಿಟ್ಟು ಆಗಾಗ ಪತ್ರವನ್ನು ಬರೆಯುತ್ತಿರಬೇಕಾಗಿ ಪ್ರಾರ್ಥಿಸುತ್ತೇನೆ" ಎಂಬುದಾಗಿ ಬರೆದು, ಏಕನಾಥ ಚರಿತ್ರೆಯನ್ನು ಕಳುಹಿಸುವಲ್ಲಿ ಅದರೊಳಗಿರುತ್ತಿದ್ದ ಶಬ್ದಗಳ ಮತ್ತು ಶಬ್ದರೂಪಗಳ ದೋಷಗಳನ್ನು ಕೂಡ ತಿದ್ದಿ ಕಳುಹಿಸಿಕೊಟ್ಟರು. ಇದರಿಂದ ಕವಿಯನ್ನು ಕುರಿತು ನಾವು ತಿಳಿಯಬೇಕಾದ ಕೆಲವು ಅಂಶಗಳಿವೆ. ಮೊದಲನೆಯದು ಅವರ ರಸಿಕತೆ ಮತ್ತು ನೈತಿಕ ಧೈರ್ಯ. ವೀರೇಶಲಿಂಗ ಕವಿಯಂಥ ಪ್ರಥಮ ಶ್ರೇಣಿಗೆ ಸೇರಿದ ಕವಿಯ ಪುಸ್ತಕವು ತನಗೆ ಮೆಚ್ಚುಗೆಗೆ ಬರಲಿಲ್ಲವೆಂದು

ಇಂಗ್ಲಿಷು ತಿಳಿಯದ ಬರೀ ಹಳ್ಳಿಗಾಡಿನಲ್ಲಿ ಹುಟ್ಟಿ ಬೆಳೆದ ಕನ್ನಡವನ್ನು ಕೂಡ ಕ್ರಮವಾಗಿ ಅಭ್ಯಾಸಿಸಿರದ ಉಪಾಧ್ಯಾಯರೊಬ್ಬರು ನಿರ್ಭಯ ವಾಗಿ ಬರೆದು ತಿಳಿಸುವುದೊಂದು ಸಾಮಾನ್ಯ ವಿಷಯವಲ್ಲ. ನನಗಾದರೂ ಈ ಅಭಿಪ್ರಾಯವು ಸಮ್ಮತವೇ ಸರಿ. ಆ ಚಿಕ್ಕಪುಸ್ತಕವನ್ನು ನಾನು ಅಭ್ಯಾಸಕ್ಕಾಗಿ ಕನ್ನಡಿಸಿದ್ದೇನೇ ವಿನಾ ಅದರ ಶ್ರೇಷ್ಠತೆಗಾಗಿ ಅಲ್ಲ. ಇನ್ನು ನನ್ನ ಅನುಮತಿಯೂ ಅಪೇಕ್ಷೆಯೂ ಇಲ್ಲದೆ ಸ್ವೇಚ್ಛೆಯಿಂದಲೇ ಏಕನಾಥ ಚರಿತ್ರವನ್ನು ತಿದ್ದಿ ಕಳುಹಿಸಿದುದರಿಂದ ವ್ಯಾಕರಣ ಮರ್ಯಾದೆ ಗಳನ್ನು ಮೀರದೆ ಶುದ್ಧವಾದ ಶೈಲಿಯಲ್ಲಿ ಬರೆಯುವ ವಿಷಯದಲ್ಲಿ ಅವ ರಿಗೆ ಎಷ್ಟು ಆದರವಿದ್ದಿತೆಂಬುದನ್ನು ಊಹಿಸಬಹುದಾಗಿದೆ. ಹಾಗೆಯೇ ಮೊದಲನೆಯ ಪತ್ರದಲ್ಲಿ ತೋರಿಸಿದ ಸ್ನೇಹ ಸೂಚನೆಯಿಂದ ಕನ್ನಡ ಲೇಖ ಕರ ವಿಷಯದಲ್ಲಿ ಇವರಿಗಿರುತ್ತಿದ್ದ ವಾತ್ಸಲ್ಯವೂ ಸ್ಪಷ್ಟವಾಗುತ್ತಲಿದೆ.

ಈ ತರುವಾಯ ಶ್ರೀ|| ಲಕ್ಷ್ಮೀನಾರಾಯಣ ಕವಿಗೂ ನನಗೂ ಆಗಾಗ ಪತ್ರವ್ಯವಹಾರವು ನಡೆಯುತ್ತಲೇ ಇದ್ದಿತು. ಆದರೆ ೧೯೦೦ ರ ಪರ್ಯಂತ ನನಗೂ ಅವರಿಗೂ ನಡೆದ ಪತ್ರವ್ಯವಹಾರಕ್ಕೆ ಸಂಬಂಧಪಟ್ಟ ಎಷ್ಟೋ ಕಾಗದಗಳು ಹುಡುಕಿದರೂ ಇದುವರೆಗೆ ದೊರೆತಿಲ್ಲ. ಅವುಗ ಳೊಳಗೆ ಪ್ರಕಟಗೊಳಿಸಲರ್ಹವಾದ ಅಂಶಗಳೆಷ್ಟೋ ಇರಬಹುದೆಂದು ನೆನಪು ತೋರುತ್ತಿದೆ. ಮುಂದೆ ಎಂದಾದರೂ ಅವು ಸಿಕ್ಕಿದ ಪಕ್ಷದಲ್ಲಿ ಅವನ್ನು ತಪ್ಪದೆ ಪ್ರಕಟಗೊಳಿಸಿ ನನ್ನ ಕನ್ನಡ ಬಂಧುಗಳ ಸನ್ನಿಧಿಯಲ್ಲಿ ಡುವೆನು.

ಶ್ರೀ|| ಲಕ್ಷ್ಮೀನಾರಣಪ್ಪನವರು ಅಂಗಸಾಧನೆಯಲ್ಲಿ 'ತರಬೇ ಯತ್ತು' ಹೊಂದುವುದಕ್ಕಾಗಿ ೧೮೮೯ ರಲ್ಲಿ ಮದ್ರಾಸಿಗೆ ಬಂದಿದ್ದಾಗ— ಆ ಶಾಲೆಯು ಈಗ ಇರುವಂತೆ ಸೈದಾಪೇಟೆಯಲ್ಲಿರಲಿಲ್ಲ—ಮದ್ರಾಸಿನ ಸಾರ್ವಜನಿಕ ಉದ್ಯಾನವನದಲ್ಲಿ (People's Park) ಆ ಶಿಕ್ಷಣವು ಕೊಡಲ್ಪಡುತ್ತಿದ್ದಿತು. ಆಗ ಕೇವಲ ತಾರುಣ್ಯದ ಭರದಲ್ಲಿದ್ದ ಈತನು

ಸ್ವಲ್ಪ ಮಟ್ಟಿಗಾದರೂ (ಇಂಗ್ಲಿಷು ಬಾರದುದರಿಂದ ನಿರುಪಾಯವಾಗಿ) ತಮಿಳು ಭಾಷೆಯನ್ನು ಮಾತನಾಡುವುದಕ್ಕೂ ಓದುವುದಕ್ಕೂ ಕಲಿತಿರಬೇಕೆಂದು ಊಹಿಸಲು ಅವಕಾಶವಿದೆ. ಅರವ ಭಾಷೆಯ ಪರಿಚಯದಿಂದ ಕನ್ನಡವನ್ನೂ ಸ್ವಭಾಷೆಯಾದ ತುಳುವನ್ನೂ (ಪ್ರಾಯಶಃ ಒಂದಿಷ್ಟು ಮಲೆಯಾಳವನ್ನು ಕೂಡ) ಈ ಮೊದಲೇ ತಿಳಿದಿದ್ದ ಕುಶಾಗ್ರಬುದ್ಧಿಯ ಈ ತರುಣನಿಗೆ ದ್ರಾವಿಡ ವರ್ಗಕ್ಕೆ ಸೇರಿದ ಭಾಷೆಗಳ ಪರಸ್ಪರ ಸಮೀಪ ಬಾಂಧವ್ಯವು ಗೋಚರಕ್ಕೆ ಬಂದಿರಬೇಕು. ಮತ್ತು ಮುಂದೆ ಈ ಭಾಷೆಗಳಲ್ಲಿ ಪರಿಶ್ರಮವು ಹೆಚ್ಚುತ್ತ ಹೋದಂತೆ ನೂತನವಾದ ರೀತಿಯಿಂದ ಒಂದು ವ್ಯಾಕರಣವನ್ನು ಬರೆಯಬೇಕೆಂಬ ಕುತೂಹಲವೂ ಈತನಲ್ಲಿ ಉಂಟಾಯಿತು. ಆಗ ಶ್ರೀ|| ಎಚ್. ನಾರಾಯಣರಾವ್ ಬಿ. ಎ, ಬಿ. ಎಲ್., * ಅವರು ಮದ್ರಾಸಿನಲ್ಲಿ ಹೈಕೋರ್ಟು ವಕೀಲರಾಗಿದ್ದು ಕನ್ನಡದ ವಿಷಯದಲ್ಲಿ ಅಭಿಮಾನವುಳ್ಳವರಾಗಿಯೂ ಇದ್ದುದರಿಂದ ಶ್ರೀ|| ಲಕ್ಷ್ಮೀನಾರಣಪ್ಪನವರು ಅವರ ಸ್ನೇಹವನ್ನು ಸಂಪಾದಿಸಿ ಅವರ ಪರಿಮುಖವಾಗಿಯೂ ನನ್ನ ಮೂಲಕವಾಗಿಯೂ ದ್ರಾವಿಡವರ್ಗದ ಬೇರೆ ಬೇರೆ ಭಾಷೆಗಳ ಶಬ್ದಗಳು ಶಬ್ದರೂಪಗಳು, ಸಾಹಿತ್ಯ, ವ್ಯಾಕರಣ, ನಿಘಂಟು ಮುಂತಾದ ವಿಷಯಗಳನ್ನು ಕುರಿತು ಎಷ್ಟೋ ಸಮಾಚಾರಗಳನ್ನು ತರಿಸಿಕೊಳ್ಳುತ್ತಿದ್ದರು. ಇವರ ಅದ್ಭುತರಾಮಾಯಣವು ೧೮೯೬

---

* ಈ ದೊಡ್ಡ ಮನುಷ್ಯರು ಮಂಗಳೂರು ಜಿಲ್ಲೆಗೆ ಸೇರಿದವರು. ಮೊದಲು ಮಡಿಕೇರಿಯಲ್ಲಿಯೂ ತರುವಾಯ ಮಂಗಳೂರು ಗೌ. ಕಾಲೇಜಿನಲ್ಲಿಯೂ ಆ ಬಳಿಕ ಮದ್ರಾಸು ಕ್ರಿಶ್ಚಿಯನ್ ಕಾಲೇಜಿನಲ್ಲಿಯೂ ಉಪಾಧ್ಯಾಯರಾಗಿದ್ದು, ಬಿ. ಎಲ್. ಪ್ಯಾಸುಮಾಡಿ ಕೆಲವು ಕಾಲ ಮದ್ರಾಸಿನಲ್ಲಿ ವಕೀಲರಾಗಿದ್ದು, ಅದು ಸರಿಬೀಳದೆ, ಬೊಂಬಾಯಿಯಲ್ಲಿ ಅನೇಕ ವರ್ಷಕಾಲ ಪತ್ರಿಕಾ ಸಂಪಾದಕರಾಗಿದ್ದರು. ಇವರಿಗೆ ಕನ್ನಡದಲ್ಲಿ ಪಾಂಡಿತ್ಯವೂ ಕವಿತಾಶಕ್ತಿಯೂ ಇದ್ದಿತು. ಪುರಾತನ ವಸ್ತುಶೋಧನದಲ್ಲಿಯೂ ನಿಪುಣರಾಗಿದ್ದರು. ಈಗ ೨-೩ ವರ್ಷಕ್ಕೆ ಹಿಂದೆ ಇವರು ಬೊಂಬಾಯಿಯಲ್ಲಿ ತೀರಿಕೊಂಡರು.

ರಲ್ಲಿಯೂ ಶ್ರೀರಾಮ ಪಟ್ಟಾಭಿಷೇಕವು ೧೮೯೭ ರಲ್ಲಿಯೂ 'ಕರ್ಣಾಟಕ ಕಾವ್ಯಮಂಜರಿ' ೧೪ ನೇ ಮತ್ತು ೧೫ ನೇ ಪುಷ್ಪಗಳಾಗಿ ಪ್ರಕಾಶಕ್ಕೆ ಬಂದಿದ್ದುವು. ನಾನು ಸುಮಾರು ಆ ಮೊದಲ್ಗೊಂಡೇ ಪ್ರಥಮತಃ ಸ್ವಲ್ಪ ಕಾಲ ಮದ್ರಾಸು ಪ್ರೆಸಿಡೆನ್ಸಿ ಕಾಲೇಜಿನಲ್ಲಿಯೂ ಮುಂದೆ ಕ್ರಿಶ್ಚಿಯನ್ ಕಾಲೇಜಿನಲ್ಲಿಯೂ ಕನ್ನಡ ಪಂಡಿತನಾಗಿ ಕೆಲಸದಲ್ಲಿ ಸೇರಿದ್ದೆನು. ಆಗ ಉಡುಪಿ ಕುಂದಾಪುರ ಪ್ರಾಂತದ ಎಷ್ಟೋ ತರುಣರು ನನ್ನ ವಿದ್ಯಾರ್ಥಿಗಳಾಗಿಯೂ ಆಪ್ತ ಮಿತ್ರರಾಗಿಯೂ ಇದ್ದು ಬಿ. ಎ. ಕ್ಲಾಸಿನಲ್ಲಿ ಓದುತ್ತಿದ್ದರು. ಇವರಲ್ಲಿ ಕೆಲವರು ದೊಡ್ಡದೊಡ್ಡ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಈಗ ಉಚ್ಚಪದವಿಯಲ್ಲಿರುವರು. ಇವರುಗಳು ಹೈಸ್ಕೂಲು ತರಗತಿಗಳಲ್ಲಿ ಶ್ರೀ|| ಲಕ್ಷ್ಮೀನಾರಾಯಣಪ್ಪನವರಲ್ಲಿ ಓದಿದವರೂ ಅವರನ್ನು ಚೆನ್ನಾಗಿ ಬಲ್ಲವರೂ ಆಗಿದ್ದುದರಿಂದ ಅವರ ರಸಿಕತೆ, ಕವಿತಾಶಕ್ತಿ, ಕುಶಲತೆಗಳನ್ನು ಕುರಿತ ಎಷ್ಟೋ ಸಮಾಚಾರಗಳನ್ನು ನನಗೆ ಹೇಳಿ ಅವರ ಪರಿಚಯವನ್ನೂ ಸ್ನೇಹವನ್ನೂ ಸಂಪಾದಿಸಬೇಕೆಂಬ ನನ್ನ ಕುತೂಹಲವನ್ನು ಹೆಚ್ಚಿಸುತ್ತಿದ್ದರು. ಈ ವಿದ್ಯಾರ್ಥಿಗಳೇ ಅದ್ಭುತರಾಮಾಯಣಾದಿ ಗ್ರಂಥಗಳ ನಿಜವಾದ ಕವಿಯಾರೆಂಬುದನ್ನು ಪ್ರಥಮತಃ ನನಗೆ ತಿಳಿಯಪಡಿಸಿದವರು. ಹೀಗಾಗಿ ಆ ಕವಿಯಂತೆ ಪ್ರತ್ಯಕ್ಷ ಪರಿಚಯವನ್ನು ಮಾಡಿಕೊಳ್ಳಲು ಮೊದಲನೆಯ ಸಂದರ್ಭ ದೊರೆತೊಡನೆ, ಮೇಲೆ ಹೇಳಿದ ನನ್ನ "ಕಲಹಪ್ರಿಯಾ ಪ್ರಹಸನ" ದ ಪ್ರತಿಯನ್ನು ಅವರಿಗೆ ಅಭಿಪ್ರಾಯಕ್ಕಾಗಿ ಕಳುಹಿಸಿ ಅವರ ಮೈತ್ರಿಯನ್ನು ಸಂಪಾದಿಸಿದೆನು.

ನಮ್ಮ ಸ್ನೇಹವು ಕ್ರಮಕ್ರಮವಾಗಿ ಬೆಳೆಯುತ್ತ ಹೋದಂತೆ, ಅದ್ಭುತರಾಮಾಯಣಾದಿ ಗ್ರಂಥಗಳ ಲೇಖಕನಾರೆಂಬುದನ್ನು ಅವರ ಬಾಯಿಂದಲೇ ತರಿಸಬೇಕೆಂಬ ಉದ್ದೇಶದಿಂದ ನಾನು ಅವರಿಗೆ ಪುನಃ ಪುನಃ ಬರೆದು ಕೇಳುತ್ತಲಿದ್ದೆನು. ಅವರೂ ಪ್ರಯತ್ನ ಪುರಸ್ಸರವಾಗಿ ನನ್ನ ಪ್ರಶ್ನೆಗೆ ಉತ್ತರಕೊಡುತ್ತಿರಲಿಲ್ಲವೆಂಬ ಹಾಗೆ ನನಗೆ ತೋರಿತಾದರೂ,

ತಾನು ಅವುಗಳ ಕರ್ತೃವಲ್ಲವೆಂದು ಅವರು ಎಂದೂ ನನಗೆ ಬರೆಯಲಿಲ್ಲ. ಕರ್ತೃವು ತಾನಲ್ಲವಾದ ಪಕ್ಷದಲ್ಲಿ "ಕಾವ್ಯಮಂಜರಿ" ಯವರಿಗೆ ಬರೆದಂತೆ ನನಗೂ ಅವರು ಬರೆದು ತಿಳಿಸಬಹುದಾಗಿದ್ದಿತಲ್ಲವೇ ? ಅವರ ಈ ಅಪಲಾಪದಿಂದ ನನ್ನ ಆತುರವೂ ತೀವ್ರವಾಗತೊಡಗಿತು. ಆದರೂ, ಮುಂದೆ ಎಂದಾದರೊಂದು ದಿನ ಪ್ರತ್ಯಕ್ಷವಾಗಿ ಕಂಡಾಗ ಕೇಳುವೆನೆಂದು ಸುಮ್ಮನಾಗಬೇಕಾಯಿತು. ಈ ಪ್ರತ್ಯಕ್ಷದರ್ಶನ ಸಂದರ್ಭವು ಮುಂದೆ ಒಂದೆರಡು ವರ್ಷಕಾಲ ಒದಗಿ ಬರಲಿಲ್ಲ.

ಬಳಿಕ ೧೯೦೦ ನೇ ಇಸವಿಯಲ್ಲಿ ನನಗೆ ಎಂ. ಎ. ಪರೀಕ್ಷೆಯಲ್ಲಿ ಜಯವಾಯಿತೆಂದು ತಿಳಿದು ತಮ್ಮ ಸಂತೋಷವನ್ನು ಸೂಚಿಸಿ ಅವರು ನನಗೆ ಬರೆದ (೨೭-೨-೧೯೦೦) ಒಂದು ಕಾರ್ಡು ನನ್ನಲ್ಲಿದೆ. ಆಮೇಲೆ, ಕ್ರಿಶ್ಚಿಯನ್ ಕಾಲೇಜಿನಲ್ಲಿ ಮುಂದಿನ ಅಭಿವೃದ್ಧಿಗೆ ಅವಕಾಶವಿಲ್ಲದುದನ್ನು ಕಂಡು, ಕನ್ನಡ ಭಾಷಾಸೇವೆಯನ್ನು ಮಾಡುವವರಿಗೆ ಮೈಸೂರು ರಾಜ್ಯವೇ ಶರಣ್ಯವೆಂಬ ಭಾವನೆಯಿಂದ, ಸಾಧ್ಯವಾದರೆ ಮೈಸೂರು ಸೀಮೆಯ ವಿದ್ಯಾಭ್ಯಾಸದ ಇಲಾಖೆಯಲ್ಲಿ 'ನವುಕರಿ' ಯನ್ನು ಸಂಪಾದಿಸಬೇಕೆಂಬ ಪ್ರವೃತ್ತಿಯು ನನ್ನಲ್ಲಿ ಉಂಟಾಯಿತು. ಆದರೆ ಆಗಲೇ ಪ್ರಾಪ್ತವಾದ ಒಂದು ಸಾಂಸಾರಿಕ ತಾಪತ್ರಯದ ದೆಸೆಯಿಂದ ೧-೨ ತಿಂಗಳ ರಜ ಪಡೆದು ಮಂಗಳೂರು ಕಡೆಗೆ ಹೋಗಬೇಕಾಗಿ ಬಂದಿತು. ನನ್ನ ಉದ್ದೇಶವನ್ನು ಅರಿತ ಕ್ರಿಶ್ಚಿಯನ್ ಕಾಲೇಜು ಅಧಿಕಾರಿಗಳು ನನ್ನ ಅನಂತರ ನನ್ನ ಸ್ಥಾನಕ್ಕೆ ಅಧಿಕಾರಿಯನ್ನು ದೊರೆಯಿಸಿಕೊಡುವ ಭಾರವನ್ನು ನನ್ನ ಮೇಲೆಯೇ ಹೊರಿಸಿದ್ದರು. ಹೀಗಾದುದರಿಂದ, ಚೆನ್ನಾಗಿ ಆಲೋಚಿಸಿ, ನನ್ನ ತರುವಾಯ ನನ್ನ ಸ್ಥಳಕ್ಕೆ ಬರಲು ಕವಿಶ್ರೇಷ್ಠರೂ ಆಪ್ತ ಮಿತ್ರರೂ ಸ್ವಪ್ರಾಂತೀಯರೂ ಆದ ಶ್ರೀ|| ಲಕ್ಷ್ಮೀನಾರಣಪ್ಪನವರಿಗಿಂತ ಅಧಿಕ ಅರ್ಹರಾದವರು ಬೇರೊಬ್ಬರಿಲ್ಲವೆಂದೂ, ಅವರಿಗೆ ಮದ್ರಾಸಿನಂತಹ ದೊಡ್ಡ ನಗರದಲ್ಲಿ ವಾಸವಾಗಿರಲು ಅವಕಾಶ

ಮಾಡಿಕೊಟ್ಟದ್ದಾದರೆ ಅವರಿಂದ ಇತೋಪ್ಯತಿಶಯವಾದ ಭಾಷಾಸೇವೆ ಯಾಗಲು ಅನುಕೂಲಿಸುವುದೆಂದೂ ಮಂದಟ್ಟಾಗಿ, ಒಡನೆಯೇ ಅವರಿಗೆ ಬರೆದು ಅಭಿಪ್ರಾಯವೇನೆಂದು ಕೇಳಿದೆನು. ಏಪ್ರಿಲ್ ೭ ನೇ ತಾರೀಖಿನಲ್ಲಿ ಅವರು ಪ್ರತ್ಯುತ್ತರವಾಗಿ ಬರೆದ ಕಾಗದದಲ್ಲಿ ಈ ಕೆಳಗಣ ಮಾತುಗಳಿವೆ: "ಸೇವಕನ ಮೇಲೆ ಅಭಿಮಾನವಿಟ್ಟು ಬರೆದುಕಳುಹಿಸಿದ ಪತ್ರವು ಮೊನ್ನೆ ಕೈಸೇರಿದ್ದರೂ ಶರೀರದಲ್ಲಿ ಕೊಂಚ ಜಾಡ್ಯವಿದ್ದುದರಿಂದ ಒಡನೆಯೆ ಪ್ರತ್ಯುತ್ತರ ಬರೆಯಲಾಗಲಿಲ್ಲ.......ತಮ್ಮ ಕೆಲಸವನ್ನು ಕೆಲವು ಕಾಲದೊಳಗಾಗಿ ಬಿಡುವುದರಲ್ಲಿದ್ದೇನೆಂದು ಬರೆಯುತ್ತೀರಿ. ಮತ್ತಾವ ವಿಶೇಷವಾದ ಕಾರ್ಯಕ್ಕೆ ಮನಸ್ಸುಮಾಡಿರುವಿರಿ ? ಒಂದು ವೇಳೆ ನಾನೂ ಅದನ್ನು ತಿಳಿದು ಸಂತೋಷಪಡಬಹುದೇ ? ತಮ್ಮ ಸ್ಥಾನದಲ್ಲಿ ನನ್ನನ್ನು ಸೇರಿಸುವುದಕ್ಕೆ ತಮ್ಮಿಂದಾಗುವ ಸಾಹಾಯ್ಯವನ್ನು ಮಾಡುವಿರೆಂದು ಹೇಳುವುದನ್ನು ನೋಡಿದರೆ,......ನನಗೂ ೪೦ ರೂಪಾಯಿ ಸಿಕ್ಕಬಹುದೇ ? ಭಾಷಾಂತರವನ್ನು ಕಲಿಸಲಿಕ್ಕೆ ಇಂಗ್ಲಿಷ್ ಬಾರದ ಕಾರಣ ನಾನು ಅಯೋಗ್ಯನೆಂಬುದು ಗೊತ್ತಿರುವ ಸಂಗತಿಯಷ್ಟೆ ? ಆದುದರಿಂದ ಅಲ್ಲಿ ನಾನು ಬಂದರೆ ಆ ಕೆಲಸವನ್ನು ಸಂಪೂರ್ತಿಯಾಗಿ ಕೊನೆಹಾಯಿಸಲಿಕ್ಕೆ ನನ್ನಿಂದ ಸಾಗುವದೋ ? ಇಂಗ್ಲೀಷು ಬಾರದ ಮೊದಲಾದ ಪ್ರತಿಬಂಧನಗಳಿಂದ ಇದಕ್ಕೆ ವಿಡ್ಡೂರವೇನಾದರೂ ಬಾರದೇ ? ಒಂದು ವೇಳೆ ಅಲ್ಲಿಗೆ ಬಂದರೆ ಬಡಸ್ಥಿತಿಯಲ್ಲಿ ಬೀಡಾರಕ್ಕೆ ತಿಂಗಳಿಗೇನು ಬಾಡಿಗೆಯೋ ?...ಅಲ್ಲಿಯ ಕೆಲಸವೆಷ್ಟು ಹೊತ್ತು ? ಬೇರೆ ಕರ್ಣಾಟ ಪಂಡಿತರಾರಾದರೂ ಇರುವರೊ ? ಇದ್ದರೆ ಅವರ ವಿದ್ಯಮಾನ ಹೇಗೆ ? ಈಗ ಅವರಿಗೆ ಎಷ್ಟು ಸಂಬಳ ಸಲ್ಲುತ್ತೆ. ಇತ್ಯಾದಿಯನ್ನು ದಯವಿಟ್ಟು ಬರೆಯಿರಿ...ನನಗೆ ಮದ್ರಾಸಿಗೆ ಬರುವುದರಲ್ಲೇನೂ ಆಕ್ಷೇಪವಿಲ್ಲ. ಮೊದಲನೆಯದು ಸಂಬಳವು ೪೦ ಪೂರ್ಣ ಸಿಕ್ಕಬೇಕಾದುದು (ಏಕೆಂದರೆ ಇಲ್ಲಿ ಬರುವ ವರ್ಷಕ್ಕೆ ೨೫ ಕೊಡುತ್ತೇನೆಂದು ಹೇಳಿದ್ದಾರೆ) ಮುಖ್ಯತಃ ನಾನೊಂದೂ ಅರಿಯೆ. ತಾವು ಹೇಳಿ

ದಂತೆ ನಡಕೊಳ್ಳುತ್ತೇನೆ. ಬಾ ಎಂದರೆ ಬರುತ್ತೇನೆ. ಬೇಡವೆಂದರೆ ಬಿಡುತ್ತೇನೆ. ಇಷ್ಟೇ ನನ್ನ ಬುದ್ಧಿವಂತಿಕೆ...ತಾವು ಎಂದು ಮೊದಲ್ಗೊಂಡು ಆ ಕೆಲಸವನ್ನು ಬಿಡುವುದರಲ್ಲಿದ್ದೀರಿ ? ಎಂಬುದನ್ನು ಮೊದಲು ಸೂಚಿಸಿರಿ. ನನ್ನ ಆಲೋಚನೆಗೆ ಈ ರಜಾಮುಗಿದ ಕೆಲವು ದಿನದ ಮೇಲೆ ಬಿಟ್ಟರೆ ನಮಗಿಬ್ಬರಿಗೂ ನಷ್ಟವಾಗದೆಂದು ತಿಳಿಯುತ್ತೇನೆ.'' ಈ ಕಾಗದದಲ್ಲಿ ಮಾಡಿರುವ 'ಶರೀರಜಾಡ್ಯದ ಸೂಚನೆಯನ್ನು ನೋಡಿದರೆ, ಅವರಲ್ಲಿ ಆಗಲೇ ಕ್ಷಯರೋಗದ ಪೂರ್ವಚಿಹ್ನಗಳು ಕಾಣಿಸಿಕೊಂಡಿದ್ದುವೆಂದು ಊಹಿಸಬಹುದಾಗಿದೆ.

ಮಂಗಳೂರಿಗೆ ಹೋದಾಗ, ಶ್ರೀಯುತರಾದ ಪಂಜೆ ಮಂಗೇಶರಾಯರು ಉಳ್ಳಾಲ ಮಂಗೇಶರಾಯರು ಮುಂತಾದ ಭಾಷಾಭಿಮಾನಿಗಳಾದ ಬಂಧುಮಿತ್ರರುಗಳ ಮೂಲಕ ಶ್ರೀಮಾನ್ ಬೋಳಾರ ವಿಟ್ಠಲರಾಯರ ಪರಿಚಯವುಂಟಾಗಿ ಭಾಷಾಸೇವೆಯನ್ನು ಮಾಡಬೇಕೆಂಬ ನವೋತ್ಸಾಹದಿಂದ ತುಂಬಿತುಳುಕುತ್ತಿದ್ದ ನಾವು ನಾಲುವರೂ ಸೇರಿ ಒಡನೆಯೇ ಹೆಂಗುಸರಿಗೂ ಮಕ್ಕಳಿಗೂ ತಕ್ಕುದಾಗುವಂತೆ 'ಸುವಾಸಿನಿ' ಯೆಂಬ ಮಾಸ ಪತ್ರಿಕೆಯನ್ನು ಹೊರಡಿಸಬೇಕೆಂದು ನಿಶ್ಚಯಿಸಿದೆವು. ಮ|| ವಿಟ್ಠಲರಾಯರು ಬೇಕಾದಂತೆ ಧನಬಲವನ್ನು ಒದಗಿಸಿಕೊಟ್ಟು ಪ್ರಕಾಶಕರಾಗಲು ಒಪ್ಪಿದರು. ನಾನು ವ್ಯಕ್ತ ಸಂಪಾದಕನಾಗಲು ಸಮ್ಮತಿಸಿದೆನು. ಶ್ರೀ|| ಮಂಗೇಶರಾಯರುಗಳಿಬ್ಬರೂ ಸ್ಥಳೀಯ ಸಂಪಾದಕರೆಂಬಂತೆ ಯಾವತ್ತು ಕೆಲಸಗಳನ್ನು ನೋಡಿಕೊಳ್ಳಲು ಕೈಕೊಂಡರು. ಇಂತಹ ಸಂದರ್ಭದಲ್ಲಿ ನಮ್ಮ ಜಿಲ್ಲೆಯ ಸುಪ್ರಸಿದ್ಧ ಲೇಖಕರಾದ ಶ್ರೀ|| ಲಕ್ಷ್ಮೀನಾರಣಪ್ಪನವರನ್ನು ಬಿಡುವುದುಂಟೆ? ಮ|| ಪಂಜೆ ಮಂಗೇಶರಾಯರಿಗೂ ಈ ಕವಿಯ ಪರಿಚಯವು ಪೂರ್ವದಿಂದಲೂ ಇದ್ದೇ ಇದ್ದಿತು. ಮತ್ತು ನಾನೂ ಅವರೂ ಕೂಡ ಶ್ರೀ|| ಲಕ್ಷ್ಮೀನಾರಣಪ್ಪನವರಿಗೆ ಲೇಖನಗಳನ್ನು ಕಳುಹಿಸುವಂತೆ ಬರೆದೆವು. ಪ್ರಾಯಶಃ ಮಂಗಳೂರು ಪ್ರಾಂತದ ಲೇಖ

ಕರು ತಮ್ಮ ಲೇಖನಗಳನ್ನು ಮೊದಲು ಶ್ರೀ|| ಮಂಗೇಶರಾಯರುಗಳಿಗೆ ಕಳುಹಿಸಿ, ಅವರ ಅಭಿಪ್ರಾಯದೊಡನೆ ಅವು ನನಗೆ ಮದ್ರಾಸಿಗೆ ಬರುತ್ತಿದ್ದುವು. ಶ್ರೀ|| ಲಕ್ಷ್ಮೀನಾರಣಪ್ಪನವರ ಲೇಖನಗಳು ಕೂಡ ನೇರಾಗಿ ನನ್ನ ಬಳಿ ಬರುತ್ತಿದ್ದ ಹಾಗೆ ನೆನಪು ತೋರುವುದಿಲ್ಲ.

ಈ ಸಲವೇ ಕಾರಣಾಂತರಗಳಿಂದ ನಾನು ಉಡುಪಿಯವರೆಗೂ ಹೋಗಿ ಬರಬೇಕಾದ ಪ್ರಮೇಯವುಂಟಾಯಿತು. ನನ್ನ ಉದ್ದೇಶವು ಹೇಗಾದರೂ ಆಗಲಿ, ಇದರ ದೆಸೆಯಿಂದ ಇದುವರೆಗೆ ಪತ್ರಮುಖೇನ ಮಾತ್ರ ತಿಳಿದಿದ್ದ ಶ್ರೀ|| ಲಕ್ಷ್ಮೀನಾರಣಪ್ಪನವರನ್ನು ಕಣ್ಣಾರ ಕಾಣುವ ಭಾಗ್ಯವು ನನಗೆ ಪ್ರಾಪ್ತವಾಯಿತು. ಮ|| ಲಕ್ಷ್ಮೀನಾರಣಪ್ಪನವರು ನಾನು ಇಳಿದಿದ್ದ ಮನೆಗೆ ಬಂದು ನನ್ನನ್ನು ಕಂಡು ತುಂಬ ಉತ್ಸಾಹವನ್ನೂ ಉಲ್ಲಾಸವನ್ನೂ ವ್ಯಕ್ತಗೊಳಿಸಿ, ಬಹಳ ಹೊತ್ತಿನವರೆಗೆ ಮಾತನಾಡಿಸಿ ಹೊರಟುಹೋದರು. ನಾನು ಉಡುಪಿಯಲ್ಲಿದ್ದುದು ಬರೀ ಎರಡು ಮೂರು ದಿನ ಮಾತ್ರವಾದುದರಿಂದ ಪುನಃ ಒಬ್ಬರನ್ನೊಬ್ಬರು ನೋಡುವುದಕ್ಕಾಗಲಿಲ್ಲ. ಆದರೆ ಇದೇ ನಮ್ಮ ಮೊದಲನೆಯ ಮತ್ತು ಕೊನೆಯ ಸಂದರ್ಶನವೆಂದು ಆಗ ನಾನಾಗಲೀ ಅವರಾಗಲೀ ಕನಸಿನಲ್ಲಿಯೂ ನೆನಸಿರಲಿಲ್ಲ. ಎಷ್ಟೆಷ್ಟೋ ಸಂಗತಿಗಳನ್ನು ಮಾತನಾಡಿದೆವು. ಏನೇನೋ ಆಲೋಚನೆಗಳನ್ನು ಮಾಡಿದೆವು. ಯಾವ ಯಾವುವೋ ಏರ್ಪಾಡುಗಳನ್ನು ಮಾಡಬೇಕೆಂದು ಗೊತ್ತುಪಡಿಸಿದೆವು. ಆದರೆ ಅದೆಲ್ಲ ಬರೀ ಆಕಾಶನಗರ ನಿರ್ಮಾಣದಂತಾಯಿತು. ಎಂಟು ತಿಂಗಳೊಳಗೇ ಈ ಮಹಾಕವಿಯು ನಾಮಶೇಷನಾದನು !

ನನಗೆ ಶ್ರೀ|| ಲಕ್ಷ್ಮೀನಾರಣಪ್ಪನವರ ಸಂದರ್ಶನವಾದ ದಿನ ೨೦ ನೇ ಏಪ್ರಿಲ್ ಶುಕ್ರವಾರವೆಂದು ನನ್ನ ದಿನಚರಿ (ಡೈರಿ) ಯಿಂದ ತೋರಿಬರುತ್ತಿದೆ. ಆಗ ಇವರು ಒಂದಿಷ್ಟು ಅಸ್ವಸ್ಥರಾಗಿದ್ದಂತೆ ತೋರಿದರೆಂದು ನನ್ನ ಜ್ಞಾಪಕವು. 'ಕುಸ್ತಿ ಮಾಸ್ತರ' ನೆನಿಸಿಕೊಳ್ಳುವುದಕ್ಕೆ

ತಕ್ಕವನಾದ ಸುದೃಢಕಾಯನಾದ ಪುರುಷನನ್ನು ಕಂಡ ಹಾಗೆ ನೆನಪು ತೋರುವುದಿಲ್ಲ. ಆದುದರಿಂದ ಕರ್ಣಾಟಕಸಂಘದಲ್ಲಿ ಅನಾವರಣಗೊಳಿಸಿದ ಸುಪುಷ್ಟ ಗಾತ್ರಯುಕ್ತವಾದ ಚಿತ್ರವು ಬಹಳ ಹಿಂದೆ ತೆಗೆದುದಾಗಿರಬೇಕೆಂದು ಭಾವಿಸುವೆನು.

ಒಬ್ಬರನ್ನೊಬ್ಬರು ಕಂಡಾಗ ನಾವು ಮಾತನಾಡಿದ ವಿಷಯಗಳು ಮುಖ್ಯವಾಗಿ ಮೂರಾಗಿದ್ದುವು. ಮೊದಲನೆಯದು, ಕ್ರಿಶ್ಚಿಯನ್ ಕಾಲೇಜಿನಲ್ಲಿ ನನ್ನ ಉದ್ಯೋಗಸ್ಥಾನಕ್ಕೆ ಅವರು ಬರುವುದು. ಎರಡನೆಯದು, 'ಸುವಾಸಿನಿ' ಯನ್ನು ನಡೆಸುವುದು ಮತ್ತು ಅದಕ್ಕೆ ಲೇಖನಗಳನ್ನು ಕಳುಹಿಸುವುದು. ಮೂರನೆಯದು ತಮ್ಮ ಹೆಸರನ್ನಡಗಿಸಿ ಬೇರೊಂದು ಹೆಸರಿಂದ ಗ್ರಂಥಗಳನ್ನು ಪ್ರಚುರಗೊಳಿಸಿದುದು. ಇವುಗಳೊಳಗೆ ಮೊದಲನೆಯ ಮತ್ತು ಎರಡನೆಯ ಸಂಗತಿಗಳನ್ನು ಕುರಿತು ಹಿಂದಿನಿಂದ ಹೇಳುವೆನು. ಮೂರನೆಯ ವಿಚಾರವಾಗಿ ನನಗೂ ಅವರಿಗೂ ಈ ರೀತಿಯಾಗಿ * ಸಂಭಾಷಣೆ ನಡೆಯಿತು.

ನಾನು—ಅದ್ಭುತರಾಮಾಯಣ, ಶ್ರೀರಾಮಪಟ್ಟಾಭಿಷೇಕಗಳನ್ನು ಬರೆದ ಕವಿ ನೀವೇಯೆಂದು ಈ ಜಿಲ್ಲೆಯ ಜನರು ಆಡಿಕೊಳ್ಳುತ್ತಿರುವರು. ಅವನ್ನು ಪ್ರಚುರಗೊಳಿಸಿದ 'ಕಾವ್ಯಮಂಜರಿ' ಯ ಚಾಲಕರು, ಅವು ನಿಮಗೆ ದೊರೆತ ಪ್ರಾಚೀನ ಹಸ್ತಪ್ರತಿಗಳೆಂದು ಹೇಳಿರುವರು. ಇದರ ನಿಜಾಂಶ ಹೇಗೆ ?

ಕವಿ—ಬರೆದವನು ನಾನೆಂಬುದು ನಿಜ.

ನಾನು—ಹಾಗಾದರೆ, ಖಾಸಗಿಯಾಗಿ ನಾನು ಕೇಳಿದರೂ ನೀವು ಉದ್ದೇಶಪೂರ್ವಕವಾಗಿ ಆ ವಿಷಯದಲ್ಲಿ ಪ್ರತ್ಯುತ್ತರ ಕೊಡದಿರಲು ಕಾರಣವೇನು ?

---

* ನಮ್ಮ ಸಂಭಾಷಣೆಯು ಇದೇ ರೀತಿಯಲ್ಲಿ ಅಥವಾ ಕ್ರಮದಲ್ಲಿ, ಇವೇ ಶಬ್ದಗಳನ್ನುಪಯೋಗಿಸಿ ನಡೆದಿದ್ದಿತೆಂದು ತಿಳಿಯತಕ್ಕುದಲ್ಲ. ಸಂಭಾಷಣೆಯ ತಾತ್ಪರ್ಯವನ್ನು ಮಾತ್ರ ಸಂಭಾಷಣರೂಪವಾಗಿ ಇಲ್ಲಿ ಕೊಟ್ಟಿರುವೆನು.

ಕವಿ.—ಒಂದು ಬಾರಿಗೆ, ಯಾವ ಕಾರಣದಿಂದಲೇ ಆಗಲಿ, ನನ್ನವಲ್ಲವೆಂದೂ ಪ್ರಾಚೀನ ಗ್ರಂಥಗಳೆಂದೂ ನಂಬಿಸಿ, ಅವನ್ನು ಪ್ರಚುರಗೊಳಿಸುವಂತೆ ಮಾಡಿದ ತರುವಾಯ, ಒಡನೆಯೇ ಅವು ನನ್ನವೆಂದು ಖಾಸಗಿ ಕಾಗದದಲ್ಲಿಯಾದರೂ ಹೇಗೆ ಬರೆಯಲಿ? ನನ್ನ ಮರ್ಯಾದೆ ಏನು ಉಳಿದಂತಾಯಿತು? ನಾನಲ್ಲವಾದರೆ ನಮ್ಮ ಜಿಲ್ಲೆಯವರಾದರೂ ಬರೆದರೆಂಬ ಕೀರ್ತಿಯು ನಮಗೆ ಬಂತಲ್ಲವೇ?

ನಾನು—ಅದು ಅಹುದು. ಆದರೆ "ಕಾವ್ಯಮಂಜರಿ" ಯವರಿಗೆ ಇವನ್ನು ಪ್ರಚಾರಗೊಳಿಸಿದುದರ ದೆಸೆಯಿಂದ ತುಂಬಾ ಲಾಭ ಬಂದಂತಿದೆ. ಆ ಲಾಭದಲ್ಲಿ ನಿಮಗೂ ಏನಾದರೂ ಅಂಶವನ್ನು ಕೊಟ್ಟರೇ?

ಕವಿ—ಹಸ್ತಪ್ರತಿಗಳನ್ನು ಕಳುಹಿಸಿದುದಕ್ಕಾಗಿ...* ಪ್ರತಿಗಳನ್ನು ನನಗೆ ಉಚಿತವಾಗಿ ಕಳುಹಿಸಿಕೊಟ್ಟರು.

ನಾನು—ಕವಿಯು ನೀವಲ್ಲವಾದ ಪಕ್ಷದಲ್ಲಿ ಅಷ್ಟು ಪ್ರತಿಗಳನ್ನು ಕೊಟ್ಟರೆ ಆ ಪ್ರತಿಫಲವು ಕಡಮೆಯೆನ್ನುವಂತಿಲ್ಲ. ಆದರೆ ಕವಿಯು ನೀವಾಗಿರುವುದರಿಂದ ಒಂದು ವೇಳೆ ಪ್ರಾಚೀನ ಗ್ರಂಥ ಪ್ರಚಾರಕರೆಂಬ ನೆಲೆಯಲ್ಲಿ "ಕಾಪಿ ರೈಟು" ಕೂಡ ತಮ್ಮದೆಂದು ಅವರು ಸಾಧಿಸಿದರೆ, ಆ ಪ್ರತಿಫಲವು ಎಷ್ಟು ಮಾತ್ರಕ್ಕೂ ಸಮರ್ಪಕವೆಂದು ಹೇಳಲಾರೆ. ಅದು ಹೋಗಲಿ; ಹೀಗೆ ಒಬ್ಬರನ್ನು ಕೇಳದೆ ದುಡುಕಿ ಮುಂದರಿಸಿದುದರ ಕಾರಣವೇನು?

ಕವಿ—ನಮ್ಮ ಪ್ರಾಂತದಲ್ಲಿ ಕನ್ನಡವನ್ನು ಕೇಳುವವರು ಯಾರಿದ್ದಾರೆ? ಈ ಗ್ರಂಥಗಳು ಪ್ರಕಾಶಗೊಳ್ಳಲು ಬೇರೆ ಯಾವ ಉಪಾಯ ಇದ್ದಿತು?

---

* ಖಂಡಿತವಾಗಿ ಇಂತಿಷ್ಟು ಪ್ರತಿಗಳೆಂದು ಈಗ ಚೆನ್ನಾಗಿ ನೆನಪಿಲ್ಲ. ಬಹುಶಃ ಒಂದುನೂರು ಪ್ರತಿಗಳೆಂದು ಹೇಳಿದ ಹಾಗೆ ಜ್ಞಾಪಕ ತೋರುತ್ತಿದೆ.

ನಾನು—ಸ್ವಲ್ಪಮಟ್ಟಿಗೆ ನೀವು ಹೇಳುವುದು ನಿಜವೇ! ಲಾಭದಲ್ಲಿ ಅಧಿಕಾಂಶ ಬಾರದಿದ್ದರೂ ಹೋಗಲಿ. ಅವುಗಳ ಕರ್ತೃವು ನೀವೆಂದಾದರೂ ಲೋಕದಲ್ಲಿ ಪ್ರಸಿದ್ಧರಾದರೆ ನನಗೆಷ್ಟೋ ಸಂತೋಷವಾಗುತ್ತಿತ್ತು. ನೀವು ಒಂದೂ ಮಾತನಾಡಬೇಡಿ. "ಸುವಾಸಿನಿ" ಯಲ್ಲಿ ಈ ವಿಷಯವನ್ನು ನಾನು ಪ್ರಕಟಗೊಳಿಸಿಬಿಡಲೇ?

ಕವಿ—ದಯವಿಟ್ಟು ಹಾಗೆ ಮಾಡಬೇಡಿರಿ. ಏನೋ ಆದುದು ಆಗಿಹೋಯಿತು. ಅದಕ್ಕಾಗಿ ನಾನು ಚಿಂತಿಸುವುದಿಲ್ಲ. ಮುಂದೆ ಒಂದಲ್ಲ ಒಂದುದಿನ ಇದರ ನಿಜಾಂಶವು ಪ್ರಕಟವಾಗಿಯೇ ಆಗುವುದು. ಒಂದುವೇಳೆ ಆಗದಿದ್ದರೂ, ಅದೇನು ದೊಡ್ಡಮಾತು? ಅಂಥ ನೂರಾರು ಗ್ರಂಥಗಳನ್ನು ಬರೆಯಬಲ್ಲೆನು.

ನಾನು—ಅದು ನಿಜ. ಆದರೆ ಈ ರೀತಿ ನಿಮ್ಮ ಹೆಸರಡಗಿಸುವಲ್ಲಿ ನಿಮ್ಮ ಉದ್ದೇಶವೇನಿದ್ದಿತು?

ಕವಿ—ಬೇರೆ ಏನೂ ಇಲ್ಲ. ಹೇಗಾದರೂ ಗ್ರಂಥವು ಮೂಲೆಗೆ ಬೀಳದೆ ಪ್ರಚಾರಕ್ಕೆ ಬರಲೆಂಬುದೇ ಮುಖ್ಯ ಉದ್ದೇಶ. ನಾನು ಬರೆದ ಪುಸ್ತಕವೆಂದು ನನ್ನ ಹೆಸರನ್ನು ಹೇಳಿದ್ದರೆ ನನ್ನ ಪುಸ್ತಕಗಳು ಈ ಹೊತ್ತಿಗೂ ಹೊರಕ್ಕೆ ಬರುತ್ತಿರಲಿಲ್ಲ. ಮೈಸೂರು ವಿದ್ವಾಂಸರಿಗೆ ನಮ್ಮ ಜಿಲ್ಲೆಯ ಲೇಖಕರ ವಿಷಯದಲ್ಲಿ ಆದರವಿಲ್ಲ. ಈ ಗ್ರಂಥಗಳಿಗೆ ಮೈಸೂರಿನವರ ಮನ್ನಣೆ ದೊರೆತರೆ ಮುಂದೆ ನನ್ನ ಹೆಸರು ಹಾಕಿ ಇದೇ ರೀತಿ ಬರೆಯಬಹುದೆಂಬ ಆಶೆಯಿಂದ ಹೀಗೆ ಮಾಡಿದೆನು.

ಶ್ರೀ|| ಲಕ್ಷ್ಮೀನಾರಾಯಣ ಕವಿಗೂ ನನಗೂ ನಡೆದ ಸಂಭಾಷಣೆಯಲ್ಲಿ ಅವರ ಬಾಯಿಂದ ಹೊರಟ ಮಾತುಗಳ ರೀತಿಯನ್ನೂ, ದರಿದ್ರ ಸ್ಥಿತಿಯಲ್ಲಿಯೂ ತೋರಿಸಿದ ನಿರಪೇಕ್ಷವಾದ ಭಾಷಾಭಿಮಾನವನ್ನೂ, ಮಾತಿಗೆ ತಪ್ಪಬಾರದೆಂಬ ದೃಢನಿಶ್ಚಯವನ್ನೂ, ಮುಂದೆ ನೂರಾರು ಗ್ರಂಥಗಳನ್ನು

ಬರೆದು ತನಗೂ ತನ್ನ ಜಿಲ್ಲೆಗೂ ಕೀರ್ತಿ ತರುವೆನೆಂದು ಇಟ್ಟುಕೊಂಡಿದ್ದ ಅವರ ಆಶೋತ್ತರವನ್ನು ನೋಡಿ ನಾನು ಬೆರಗಾಗಿ ಹೋದೆನು. ಈಗಲೂ ಆ ಸಂಭಾಷಣೆಯೂ ನಾವಿಬ್ಬರೂ ನಿಂತು ಮಾತನಾಡುತ್ತಲಿದ್ದ ಸ್ಥಳವೂ ಕಣ್ಣಮುಂದೆ ನಿಂತಿದ್ದಂತಿದೆ. ಅಕಟಾ! ಮುಂದಣ ಆರೆಂಟು ತಿಂಗಳೊಳಗಾಗಿಯೇ ಈ ಕವಿರತ್ನವನ್ನು ನಿರ್ಘೃಣನಾದ ಕಾಲನು ಒಯ್ಯುವನೆಂದು ಆಗ ಯಾರು ತಾನೇ ತಿಳಿದಿದ್ದರು? ಈಹೊತ್ತಿಗೂ ಇಂತಹ ಎಷ್ಟೋ ಕನ್ನಡ ಕವಿಗಳು ದಾರಿದ್ರ್ಯಕ್ಕೀಡಾಗಿ ತಮ್ಮ ಉದ್ದೇಶಗಳನ್ನು ನೆರವೇರಿಸಲಾರದೆ ಅಕಾಲಮೃತ್ಯುವಿಗೆ ತುತ್ತಾಗುತ್ತಿರುವುದನ್ನೂ, ಇದರ ದೆಸೆಯಿಂದ ಕನ್ನಡ ದೇಶವೂ ಭಾಷೆಯೂ ಅಭಿವೃದ್ಧಿಗೆ ಬರಲವಕಾಶವಿಲ್ಲದೆ ಹಿಂದೆ ಬಿದ್ದಿರುವುದನ್ನೂ ನೋಡಿದ ದೇಶಾಭಿಮಾನಿಯಾದ ಯಾವ ಕನ್ನಡಿಗನ ಕಣ್ಣುಗಳು ತಾನೇ ನಿಮಿಷಕಾಲವಾದರೂ ನೀರು ತುಂಬಿ ಮಸುಳಿಸದೆ ಇರಲಾಪವು?

ಆ ಸಂಭಾಷಣದ ಕಾಲದಲ್ಲಿಯೇ, "ಸುವಾಸಿನಿ" ಯ ವಿಷಯದಲ್ಲಿ ಶ್ರೀ|| ಲಕ್ಷ್ಮೀನಾರಣಪ್ಪನವರು ತುಂಬ ಸಂತೋಷವನ್ನು ವ್ಯಕ್ತಗೊಳಿಸಿ ತಪ್ಪದೆ ಲೇಖನಗಳನ್ನು ಕಳುಹಿಸುವುದಾಗಿ ಪ್ರೋತ್ಸಾಹಕರವಾದ ವಾಗ್ದಾನಮಾಡಿದರು. ಅವರು ಮೊತ್ತಮೊದಲು 'ಗೋದಾವರಿ' ಎಂಬ ಕಲ್ಪನಾ ಪ್ರಬಂಧದ ಪ್ರಥಮಾಧ್ಯಾಯವನ್ನು ಕಳುಹಿಸಿಕೊಟ್ಟರು. ಇದು 'ನಾರಾಯಣರಾವ್ ಆಣಿ ಗೋದಾವರಿ' ಎಂಬ ಮರಾಟೀ ನಾವೆಲಿನ ಭಾಷಾಂತರವೋ ರೂಪಾಂತರವೋ ಆಗಿದ್ದಿತು. ಅದಕ್ಕೆ ಮೊದಲೇ ನಾವು 'ರಮಾಮಾಧವ' ಮುಂತಾದ ಒಂದೆರಡು ಪುಸ್ತಕಗಳನ್ನು ಅನುಕ್ರಮವಾಗಿ ಹಾಕಲು ಕೈಕೊಂಡಿದ್ದುದರಿಂದ ಇದನ್ನು ಒಡನೆಯೇ ಪ್ರಾರಂಭಿಸಿದರೆ ವಾಚಕರಿಗೆ ಬೇಸರಿಕೆಯಾಗಬಹುದೆಂಬ ಭಯದಿಂದ, ಪುಸ್ತಕವನ್ನು ಪೂರ್ತಿಯಾಗಿ ಕಳುಹಿಸಿದ ಪಕ್ಷದಲ್ಲಿ, 'ರಮಾಮಾಧವ'ವು ಮುಗಿದೊಡನೆ ಅದನ್ನು ಪ್ರಚುರಗೊಳಿಸುವೆನೆಂದು ತಿಳಿಸಿ ಅದನ್ನು ಅವರಿಗೆ




ತಿರಿಗಿ ಕಳುಹಿಸಿ ಕೊಟ್ಟೆವು. ಈ ಪುಸ್ತಕವು ಆ ಬಳಿಕ ಪೂರ್ತಿಯಾಗಿ ನಮ್ಮ ಕೈಗೆ ಬರಲೇ ಇಲ್ಲ ; 'ಜೋಜೋ' ಎಂಬದರ ವ್ಯುತ್ಪತ್ತಿಗೆ ಸಂಬಂಧಪಟ್ಟ ಅವರ ಒಂದೇ ಒಂದು ಉತ್ಕೃಷ್ಟವಾದ ಲೇಖನವು ಮಾತ್ರ 'ಚಕ್ರಧಾರಿ' ಎಂಬ ಹೆಸರಿಂದ 'ಸುವಾಸಿನಿ' ಯ ಮೊದಲನೆಯ ಸಂಪುಟದ ಆರನೆಯ (ಡಿಸೆಂಬರು ೧೯೦೦) ಸಂಚಿಕೆಯ ೯೩-೯೪ನೇ ಪುಟಗಳಲ್ಲಿ ಪ್ರಚುರ ವಾಯಿತು. ಈ ಒಂದು ಲೇಖನದಿಂದಲೇ ಅವರ ಪ್ರತಿಭೆಯು ಎಷ್ಟು ಉಚ್ಚ ಪ್ರತಿಯದಾಗಿದ್ದಿತೆಂಬದನ್ನೂ, ಅವರು ಇನ್ನು ಕೆಲವುಕಾಲ ಬದು ಕಿದ್ದ ಪಕ್ಷದಲ್ಲಿ ಅವರ ಕಯ್ಯಿಂದ ಎಂತಹ ಅಮೋಘವಾದ ಭಾಷಾಸೇವೆ ನಡೆಯುವಂತಿದ್ದಿತೆಂಬುದನ್ನೂ ವಾಚಕರು ಊಹಿಸಬಹುದಾಗಿದೆ.

ಈ ಕಾಲದಲ್ಲಿ ಅವರು ದೃಢಕಾಯರಾಗಿ ಕಾಣಿಸದಿದ್ದರೂ ಕೇವಲ ಅಶಕ್ತರಾಗಿಯೂ ಕಾಣುತ್ತಲಿರಲಿಲ್ಲ. ಒಂದು ಬಾರಿ ಬರುತ್ತಿದ್ದ ಜ್ವರವು ನಿಂತು ಪುನಃ ಆರೋಗ್ಯವನ್ನು ಹೊಂದಿದ್ದರು. ಹೀಗಾಗಿ ಉದ್ದೇಶವು ನೆರವೇರುವ ಪಕ್ಷದಲ್ಲಿ ಜುಲೈಯಲ್ಲಿ ಅಥವಾ ಆ ತರುವಾಯ ಮದ್ರಾಸಿಗೆ ಹೊರಡಲು ಒಪ್ಪಿಕೊಂಡರು. ಬಳಿಕ ಜುಲೈ ತಿಂಗಳ ಮೊದಲನೆಯ ವಾರ ದಲ್ಲಿ ನಾನು ಮದ್ರಾಸಿಗೆ ಹೋಗಿ ನನ್ನ ಉದ್ಯೋಗಕ್ಕೆ ಸೇರಿದೆನು. ಸೆಪ್ಟೆಂಬರು ೮ ನೇ ತಾರೀಖಿನ ಕಾರ್ಡಿನಲ್ಲಿ ಅವರು ಹೀಗೆ ಬರೆದಿರುವರು : '...ಪುನಃ ಜ್ವರಕ್ಕಾರಂಭವಾಗಿದೆ. ಬರುವ ತಿಂಗಳ 'ಸುವಾಸಿನಿ' ಗೆ ಇನ್ನೊಂದು ಲೇಖವನ್ನು ಬರೆಯಬೇಕೆಂದಿದ್ದೆ, ಆದರೆ ಅಸ್ವಸ್ಥದ ದೆಸೆ ಯಿಂದ ಸದ್ಯಕ್ಕೆ ನಿಲ್ಲಿಸಿರುತ್ತೇನೆ. ಒಂದುವೇಳೆ ನನ್ನನ್ನು ನಿಮ್ಮ ಕಾಲೇಜಿ ನಲ್ಲಿ ನೇಮಿಸುವ ಪಕ್ಷದಲ್ಲಿ ಬರುವ ಜನವರಿ ಮೊದಲ್ಗೊಂಡು ನೇಮಿಸುವ ಏರ್ಪಾಡು ನೀವು ಮಾಡತಕ್ಕದ್ದು. ನಾರಾಯಣರಾಯರಿಗೆ ಬೇರೆ ಒಂದು ಪತ್ರ ಬರಕೊಂಡಿದ್ದೇನೆ.'' ಆ ಬಳಿಕ ಎರಡು ದಿನದಲ್ಲಿಯೇ ಎಂದರೆ ಸೆಪ್ಟೆಂಬರು ೧೦ ರಲ್ಲಿ ಬರೆದ ಒಂದು ಕಾರ್ಡಿನಲ್ಲಿ 'ಮೊನ್ನಿನ ಪತ್ರದಲ್ಲಿ ಬರೆ ದಂತೆ ಜ್ವರವು ಬರುತ್ತಿದೆ. ಬಹಳ ನಿತ್ರಾಣ. ಈಗ ರಜಾ ತೆಗೆದುಕೊಂಡು

ಮನೆಯಲ್ಲೇ ಇದ್ದೇನೆ. ಈಗ ಮದ್ರಾಸಿಗೆ ಬರಲಿಕ್ಕೆ ಎಷ್ಟುಮಾತ್ರಕ್ಕೂ ಅನುಕೂಲವಿಲ್ಲ. ಒಂದುವೇಳೆ ಜನವರಿ ಆರಂಭಕ್ಕಾಗಬಹುದು.'' ಎಂದು ಹೇಳಿ ಕೊನೆಗೆ '' ನನಗಿಲ್ಲಿ 23 ರೂಪಾಯಿ ಸಿಕ್ಕುತ್ತೆ. ಬರುವ ವರ್ಷ 25ಕ್ಕೆ ಶಿಪಾರಸು ಮಾಡಿದ್ದಾರೆ. ಈ 25 ರೂಪಾಯಿ ಅಲ್ಲಿಯ 40 ಕ್ಕಿಂತಲೂ ಅಧಿಕವಾದದ್ದೆಂದು ನಂಬುತ್ತೇನೆ...ನಾನು ಮದ್ರಾಸಿಗೆ ಹೋಗುವ ಆಲೋಚನೆಯನ್ನು ಇಂದಿನಿಂದ ಬಿಟ್ಟೆ. ಒಟ್ಟಾರೆ ನನ್ನನ್ನು ತಾವು ಮರೆಯದೆ ಇದ್ದರೆ ಸೈ. ಇದುವೆ ಪರಮಾನಂದವು '' ಎಂದು ಮುಗಿಸಿರುವರು. ಇದರಿಂದ ಅವರ ಮನಸ್ಸಿನ ಸ್ಥಿರತೆಯು ಆಗ ಕೆಟ್ಟಿದ್ದಿತೆಂದೂ ಮನಸ್ಸು ಆಶೆಭಯಗಳಿಂದ ತಲ್ಲಣಿಸುತ್ತಿದ್ದಿತೆಂದೂ ಊಹಿಸಬಹುದು.

ಪುನಃ ಅಕ್ಟೋಬರು ೨ ನೇ ತಾರೀಖಿನ ಕಾರ್ಡಿನಲ್ಲಿ ಹೀಗೆ ಬರೆದಿರುವರು. '...ಅಸ್ವಸ್ಥ ಏನೇನೂ ಗುಣಾಂಶವಿಲ್ಲ. ಪುನಃ 1 ತಿಂಗಳ ರಜೆಗೆ ಬರಕೊಂಡಿದ್ದೇನೆ. ಜ್ವರ ಬಿಡುವದೇ ಇಲ್ಲ. ಬಹಳ ನಿತ್ರಾಣ. ಹ್ಯಾಗೂ ಇರಲಿ. ಜೀವಯಿರುವವರೆಗೆ ನನ್ನನ್ನು ಮರೆಯದೆ ಈ ಹಿಂದೆ ಅಭಿಮಾನವಿಟ್ಟು ನಡೆಸಿದಂತೆಯೇ ಮುಂದೂ ನಾನು ಬದುಕಿಕೊಂಡಿರುವವರೆಗೆ ವಿಚಾರಿಸುತ್ತಿರಬೇಕಾಗಿ ಪ್ರಾರ್ಥನೆ. ನೋಡಿದವರು ಕ್ಷಯವೆಂದು ಹೇಳುತ್ತಾರೆ.'' ಈ ರೀತಿ ನನಗೂ ಅವರಿಗೂ ಅಪರೂಪವಾಗಿ ನಡುನಡುವೆ ಕಾಗದಗಳು ನಡೆಯುತ್ತಿದ್ದುವು. ಆದರೆ ಅವರ ಅಸ್ವಸ್ಥಕಾಲದಲ್ಲಿ ತೊಂದರೆಯಾಗಬಾರದೆಂಬುದರಿಂದಲೂ ನಾನೂ ಮೈಸೂರಿಗೆ ಹೊರಟು ಹೋಗುವ ಸಿದ್ಧತೆ ಮಾಡಿಕೊಳ್ಳುತ್ತಲಿದ್ದುದರಿಂದಲೂ ಬರೆಯುವುದನ್ನು ಬಹಳ ಕಡಮೆಮಾಡಿದ್ದೆನು. ಶ್ರೀ|| ಲಕ್ಷ್ಮೀನಾರಣಪ್ಪನವರು ಬರುವುದು ಬಾರದಿರುವುದು ಖಂಡಿತವಾಗುವವರೆಗೆ ನನ್ನ ಕೆಲಸಕ್ಕೆ ಹೆರವರಿಂದ ಅರ್ಜಿಗಳನ್ನು ತರಿಸಿಕೊಂಡಿರಲಿಲ್ಲ. ಇದು ನಿಶ್ಚಯವಾದ ಬಳಿಕ ಒಡನೆಯೇ ಮೈಸೂರು ಪ್ರಾಂತದಿಂದ ತಕ್ಕ ಯೋಗ್ಯತೆಯುಳ್ಳ ಒಬ್ಬರನ್ನು ಆ ಕೆಲಸಕ್ಕೆ ಗೊತ್ತುಪಡಿಸಿಕೊಟ್ಟು ಮೈಸೂರಿಗೆ ಹೊರಟು ಡಿಸೆಂಬರು ೧೫ನೇ

ತಾರೀಖಿನ ದಿನ ಈಗ ಟ್ರೇನಿಂಗ್ ಕಾಲೇಜೆಂದು ಕರೆಯಲ್ಪಡುವ ನಾರ್ಮಲ್ ಸ್ಕೂಲಿನಲ್ಲಿ ಕನ್ನಡ ಲೆಕ್ಚರರು ಉದ್ಯೋಗಕ್ಕೆ ಸೇರಿದೆನು.

ಮೈಸೂರಿಗೆ ಹೋದ ಕಿಂಚಿತ್ಕಾಲದೊಳಗಾಗಿ ಆ ಪಟ್ಟಣದ ಪ್ರಮುಖರಾದ ನಾಗರಿಕರನೇಕರ, ಹಾಗೂ, ಕವಿಗಳಾಗಿಯೂ ಲೇಖಕರಾಗಿಯೂ ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಸುಪ್ರಸಿದ್ಧರಾದ ಎಷ್ಟೋ ಮಂದಿ ವಿದ್ವಾಂಸರುಗಳ ಸ್ನೇಹವಿಶ್ವಾಸಗಳು ನನಗೆ ಪ್ರಾಪ್ತವಾದುವು. ಇವರೊಳಗೆ (ತದನಂತರ 'ಕಾವ್ಯಕಲಾನಿಧಿ' ಯೆಂದು ಕರೆಯಲ್ಪಟ್ಟ) 'ಕರ್ಣಾಟಕ ಕಾವ್ಯಮಂಜರಿ' ಯೆಂಬ ಮಾಸಪತ್ರಿಕೆಯ ಮುಖ್ಯ ಸಂಪಾದಕರಾದ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರವರು ಗಣ್ಯರಾದ ಒಬ್ಬರಾಗಿದ್ದರು. ಈ ದೊಡ್ಡಮನುಷ್ಯರು ಆಗ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ಲೈಬ್ರೇರಿಯನ್ ಉದ್ಯೋಗದಲ್ಲಿದ್ದರು. ಅಗಾಧವಾದ ಪಾಂಡಿತ್ಯದೊಡನೆ ಸೌಜನ್ಯವೂ ಸರಳತೆಯೂ ಸತತೋದ್ಯೋಗ ಪ್ರೀತಿಯೂ, ನಿಸ್ಸೀಮವಾದ ಭಾಷಾಪ್ರೇಮವೂ ಮಾತ್ಸರ್ಯಕ್ಕೆಡೆಗುಡದ ಸರ್ವಸಮದೃಷ್ಟಿಯೂ ಇವರಲ್ಲಿ ನಿಸರ್ಗವಾಗಿ ಕಂಡುಬರುತ್ತಿದ್ದುವು. ಆಗ ತಾನೇ ಸಾಹಿತ್ಯಕ್ಷೇತ್ರದಲ್ಲಿ ಅಂಬೆಗಾಲಿಡತೊಡಗಿದ್ದ ನನಗೆ ಇವರು ಹಲವು ವಿಧವಾಗಿ ಕೊಟ್ಟ ಪ್ರೋತ್ಸಾಹವನ್ನು ನಾನು ಎಂದೂ ಮರೆಯುವಂತಿಲ್ಲ. ಒಂದೆರಡು ಸಲ ಇವರನ್ನು ಕಂಡು ಮಾತನಾಡುವುದರೊಳಗಾಗಿ ಇವರಿಗೂ ನನಗೂ ಆಂತರಿಕವಾದ ಸ್ನೇಹವುಂಟಾಯಿತು. ಮತ್ತು ಶ್ರೀಲಕ್ಷ್ಮೀನಾರಣಪ್ಪನವರೇ ಅದ್ಭುತರಾಮಾಯಣಾದಿ ಗ್ರಂಥಗಳ ಕವಿಯೆಂಬುದನ್ನು ನಾನು ಅವರಿಗೆ ಸ್ಪಷ್ಟವಾಗಿ ಹೇಳಿಬಿಟ್ಟೆನು. ಅವರು ಹೀಗೆಂದರು:—' ಈ ಸಂದೇಹವು ಮೊದಲಿಂದ ನಮಗೂ ಇದ್ದಿತು. ಕೇವಲ ಅರ್ವಾಚೀನವಾದ ಕೆಲಕೆಲವು ಪ್ರಯೋಗಗಳು ಆ ಗ್ರಂಥಗಳಲ್ಲಿ ಕಂಡುಬರೋಣವೂ, ಮೂಲಹಸ್ತಪ್ರತಿಯನ್ನು ಕಳುಹಿಸಿಕೊಡುವಂತೆ ಬರೆದಾಗ ಕಳುಹಿಸದೆ ಅವರು ತಪ್ಪಿಸಿಕೊಂಡುದೂ ನಿಮ್ಮ ಮಾತನ್ನು

ಒಂದು ವಿಧವಾಗಿ ಸಮರ್ಥಿಸುತ್ತವೆ. ನಿಮ್ಮ * ನಿಬಂಧದಲ್ಲಿಯೂ ನೀವು ಈ ಕುರಿತು ಬರೆದಿರುವುದನ್ನು ನಾನು ಓದಿರುವೆನು. ಮದ್ರಾಸಿನ ಶ್ರೀ|| ಎಚ್. ನಾರಾಯಣರಾಯರವರು (ಬಿ. ಎ., ಬಿ ಎಲ್) ಕೂಡ ನಮಗೆ ಈ ವಿಷಯವಾಗಿ ಬರೆದಿದ್ದರು. ನಾವು ಶ್ರೀ|| ಲಕ್ಷ್ಮೀನಾರಣಪ್ಪನವರಿಗೆ ಒತ್ತಿ ಒತ್ತಿ ಬರೆದು ಕೇಳಿದರೂ, ಅವರು ಮಾತ್ರ ತಾವೇ ಕರ್ತೃವೆಂಬದನ್ನು ಒಪ್ಪಲಿಲ್ಲ. ಹೀಗಾದ ಬಳಿಕ ನಾವೇನು ಮಾಡುವಂತಿದೆ ? ಈ ಮುಂದಾದರೂ ಅವರು ಒಪ್ಪಿ ನಮಗೆ ತಿಳಿಸಿದರೆ ಅಗತ್ಯವಾಗಿ ಅವರ ಹೆಸರು ಹಾಕುವೆವು.'' ಈ ಹಿಂದೆ ನನಗೂ ಕವಿಗೂ ಈ ವಿಷಯವಾಗಿ ನಡೆದ ಮಾತುಗಳನ್ನು ಹೇಳಿಯೇ ಇರುವೆನು. 'ಹೇಗಾದರೂ ಆಗಲಿ, ಪುನಃ

---

* ದೇಶಭಾಷೆಗಳಲ್ಲಿ ಮದ್ರಾಸು ಎಂ ಎ. ಪರೀಕ್ಷೆಗೆ ಹೋಗತಕ್ಕವರು ಆಗಳಿನ ನಿಬಂಧನೆಗಳ ಮೇರೆಗೆ ಸ್ವತಂತ್ರ ಪರಿಶೋಧನ ದರ್ಶಕವಾದ ಒಂದು ನಿಬಂಧವನ್ನು ಯೂನಿವರ್ಸಿಟಿಯ ಅಧಿಕಾರಿಗಳಿಗೆ ಮುಂದಾಗಿ ಕಳುಹಿಸಬೇಕಾಗಿದ್ದಿತು. 'ಅರ್ವಾಚೀನ ಕರ್ಣಾಟ ವಾಙ್ಮಯ' ವನ್ನು ಕುರಿತು ಬರೆದ ನನ್ನ ನಿಬಂಧದಲ್ಲಿ ಈ ಕವಿಯ ವಿಷಯವಾಗಿ ನಾನು ಹೀಗೆ ಬರೆದಿದ್ದೆನು:—

Only a single book has been written in charming Halegannada and it represents the first literary forgery committed at the present day. Lakshminaranappa of Udipi wrote a prose version of the Sanskrit Adbhuta Ramayana and sent it to the Editors of the Kavya Manjari, representing it as an old work which he came across in his search for Kannada manuscipts. The work did not bear the name of its author, who only subscribed himself as a servant working in the house of Kannada poets. So ancient and masterly did the work appear to be, that even the able editors of that journal were completely taken in and it was published in that journal, the Editors commenting upon it as the only simple and eloquent Halegannada prose work found as yet.

ಕವಿಯನ್ನು ಕಂಡಾಗ ಇನ್ನೊಮ್ಮೆ ಪ್ರಯತ್ನಿಸಿ ಈ ವಿಷಯವನ್ನು ನಿರ್ಣಾಯಕವಾಗಿ ತೀರಿಸುವೆನು' ಎಂಬದಾಗಿ ಮನಸ್ಸಿನಲ್ಲಿ ನಿಶ್ಚಯಿಸಿ ಶ್ರೀ|| ನರಸಿಂಹಾಚಾರ್ಯರವರಿಗೂ ತಿಳಿಸಿದೆನು. ಆದರೆ ಪುನಃ ಆ ಕವಿಯನ್ನು ಈ ಜನ್ಮದಲ್ಲಿ ಕಾಣುವ ಸಂದರ್ಭವು ದೊರೆಯದೆ ಹೋಗಿ ಆ ವಿಷಯವು ಅಲ್ಲಿಗೇ ನಿಂತು ಹೋಯಿತು. ೧೯೦೫ನೇ ಇಸವಿಯಲ್ಲಿ ಅಚ್ಚಾಗಿ ಪ್ರಕಟವಾದ 'ರಾಮಾಶ್ವಮೇಧ'' ದ 'ಕವಿಚರಿತೆ ಮತ್ತು ಗ್ರಂಥವಿಮರ್ಶೆ' ಗೆ ಸಂಪಾದಕರು ಕೊಟ್ಟಿರುವ ಅಡಿಟಿಪ್ಪಣವು ನನಗೂ ಶ್ರೀ|| ನರಸಿಂಹಾಚಾರ್ಯರವರಿಗೂ ನಡೆದ ಸಂಭಾಷಣೆಯ ಫಲಿತಾಂಶವಾಗಿರುವುದು.

ಅದುವರೆಗೂ ನಾನು ಅವಿವಾಹಿತನಾಗಿಯೇ ಇದ್ದೆನು. ೧೯೦೧ ನೇ ಇಸವಿ ಫೆಬ್ರವರಿ ೧೨ ನೇ ತಾರೀಖಿಗೆ ನನ್ನ ವಿವಾಹವು ಕುಂದಾಪುರದಲ್ಲಿ ನಡೆಯುವುದಾಗಿ ನಾನು ಮೈಸೂರು ನವುಕರಿಗೆ ಸೇರಿದ ತರುವಾಯ ಗೊತ್ತಾಯಿತು. ನನ್ನ ಇತರ ಸ್ನೇಹಿತರೆಲ್ಲರಿಗೂ ಆಹ್ವಾನ ಪತ್ರಿಕೆಗಳು ಹೋಗಿದ್ದ ಹಾಗೆಯೇ ಶ್ರೀ|| ಲಕ್ಷ್ಮೀನಾರಣಪ್ಪನವರಿಗೂ ಹೋಗಿದ್ದಿತು. ಇವು ಜನವರಿ ತಿಂಗಳ ಕೊನೆಯ ಸುಮಾರಿಗೆ ಟಪ್ಪಾಲಿಗೆ ಬಿದ್ದುದರಿಂದ ಮೈಸೂರಿಗೆ ಪ್ರತ್ಯುತ್ತರ ಬರೆದರೆ ನನಗೆ ತಲುಪಲಾರದೆಂಬ ಸಂದೇಹದಿಂದ ಶ್ರೀ|| ಲಕ್ಷ್ಮೀನಾರಣಪ್ಪನವರು ಜನವರಿ ೨೧ನೇ ತಾರೀಖಿಗೆ ಕುಂದಾಪುರದ ವಿಳಾಸಕ್ಕೆ ನನಗೊಂದು ಕಾರ್ಡು * ಬರೆದರು. ಅದು ಫೆಬ್ರವರಿ ೧೨ನೇ ತಾರೀಖಿನ ಪರ್ಯಂತ ಕುಂದಾಪುರದಲ್ಲಿಯೇ ಉಳಿದು, ಆ ದಿನವೇ ನನ್ನ ಕೈಗೆ ಮುಟ್ಟಿತು. ಅದರಲ್ಲಿ ಈ ಕೆಳಗಿನಂತೆ ಬರೆದಿದ್ದಿತು. '...ದೇಹದಲ್ಲಿ ಕ್ಷೇಮವಿಲ್ಲ. ಕ್ಷಯರೋಗವೆಂದು ಹೇಳುತ್ತಾರೆ. ಎದ್ದು ಕೂತುಕೊಳ್ಳುವ ತ್ರಾಣವಿಲ್ಲ. ಮಲಮೂತ್ರ ಇದ್ದಲ್ಲಿಯೇ ಸರಿ. ಒಮ್ಮೆ

---

*** ಈ ಕಾರ್ಡು ಮುಂದಿನ ಪುಟದೊಳಗೆ ಮೂಲರೂಪದಲ್ಲಿ ಮುದ್ರಿತವಾಗಿರುವುದನ್ನು ವಾಚಕರು ನೋಡಬಹುದು.**

ತಮ್ಮ ದರ್ಶನವನ್ನು ಕೊಟ್ಟರೆ ಬಹಳ ಉಪಕಾರವಾಗುತ್ತಿತ್ತು. ಹೆಚ್ಚಿಗೆ ಹೇಳಲು ಶಕ್ತನಲ್ಲ.'' ಕುಂದಾಪುರದಿಂದ ಉಡುಪಿಗೆ ಬರೀ ೧೫ ಮೈಲಿ ದೂರವಾದರೂ ಒಡನೆಯೇ ಹೋಗಿ ಶ್ರೀ|| ಲಕ್ಷ್ಮೀನಾರಣಪ್ಪನವರ ಅಪೇಕ್ಷೆಯನ್ನು ಸಲ್ಲಿಸುವುದು ಹೇಗೂ ಸಾಧ್ಯವಾಗಿರಲಿಲ್ಲ. ಇದಲ್ಲದೆ ಆ ಕಾರ್ಡಿನೊಳಗಣ ಅವರ ಕೈ ಬರೆಹದ ಬಿಗಿಯನ್ನು ನೋಡಿದರೂ, ಅವರಿಗೆ ಅಷ್ಟುಬೇಗನೆ ಮರಣ ಪ್ರಾಪ್ತವಾಗಬಹುದೆಂದು ಕೂಡ ನನಗೆ ತೋರಲಿಲ್ಲ. ಹೀಗಾಗಿ ವಿವಾಹವು ಸಂಪೂರ್ಣವಾದ ಬಳಿಕ ಹೋಗಿ ಬರುವೆನೆಂದು ನಿಶ್ಚಯಿಸಿದೆನು. ಆದರೆ ಅದಕ್ಕೆ ಮೊದಲೇ ಎಂದರೆ ಫೆಬ್ರ ವರಿ ೧೭ ನೇ ತಾರೀಖು ಶನಿವಾರವೇ ಈ ಮಹಾಕವಿಯು ದಿವಂಗತ ನಾದನು ಮತ್ತು ನನ್ನ ಉದ್ದೇಶವು ನನ್ನಲ್ಲಿಯೇ ಉಳಿದು ಹೋಗುವು ದಾಯಿತು.

ಅವರ ಈ ಅಕಾಲಿಕವಾದ ಮರಣದಿಂದ ನನ್ನಲ್ಲಿ ತುಂಬಾ ನಿರುತ್ಸಾ ಹವೂ ವ್ಯಸನವೂ ಜುಗುಪ್ಸೆಯೂ ಉಂಟಾದುವು. ಎಷ್ಟೋ ದಿನಗಳವರೆಗೆ ನನ್ನ ಮನಸ್ಸು ಒಂದು ವಿಧವಾದ ಚಂಚಲಸ್ಥಿತಿಯಲ್ಲಿದ್ದಿತು. ಆ ಕಾರ್ಡಿ ನಲ್ಲಿ ತೋರಿಸಿದ್ದ ಉತ್ಕಟವಾದ ಅವರ ದರ್ಶನಾಭಿಲಾಷೆಯು ಬರೀ ಉಪ ಚಾರದ ಮಾತಾಗಿರಬಹುದೇ? ತಿರಿತಿರಿಗಿ ಆಲೋಚಿಸಿ ನೋಡಿದರೂ ಅಲ್ಲ ವೆಂದೇ ನನ್ನ ಮನೋದೇವತೆಯು ನನಗೆ ಹೇಳುತ್ತಿದೆ. ಅವರ ಆ ಪ್ರಾರ್ಥನೆಯಲ್ಲಿ ಖಂಡಿತವಾಗಿಯೂ ಮಹತ್ತರವಾದ ಏನೋ ಉದ್ದೇಶ ವಿದ್ದಿತೆಂದು ನನಗೆ ಇಂದಿಗೂ ತೋರುತ್ತಲಿದೆ. ಮುಂದೆ ತನ್ನ ಸ್ವಂತ ಹೆಸರಿಂದ ನೂರಾರು ಗ್ರಂಥಗಳನ್ನು ಬರೆಯುವೆನೆಂದು ಇವರು ಮಾಡಿದ ಆಶೆಯು ವ್ಯರ್ಥವಾಗುವುದೆಂದು ಮನಗೊಂಡು, ಯಾವುದೊಂದು ರೂಪ ದಿಂದಲಾದರೂ ತಾನೇ ಅದ್ಭುತರಾಮಾಯಣಾದಿ ಗ್ರಂಥಗಳ ಕರ್ತೃ ವೆಂಬುದನ್ನು ನನ್ನ ಮೂಲಕ ಲೋಕಕ್ಕೆ ಸಾಧಾರಣವಾಗಿ ತಿಳಿಯಪಡಿಸ ಬೇಕೆಂಬ ಅಪೇಕ್ಷೆಯೋ ಅಲ್ಲ, ಅಚ್ಚಾದ ಮತ್ತು ಅಚ್ಚಾಗದಿರುವ ತನ್ನ

ಸಂಪೂರ್ಣವಾದ ಮತ್ತು ಅಪೂರ್ಣವಾದ ಹಸ್ತಪ್ರತಿಗಳನ್ನೂ * ಮುಖ್ಯವಾದ ಕಾಗದ ಪತ್ರಗಳನ್ನೂ ಭದ್ರತೆಯ ಬಗ್ಗೆ ನನ್ನ ಕೈಗೆ ಒಪ್ಪಿಸಿಕೊಡಬೇಕೆಂಬ ಉದ್ದೇಶವೋ, ಅಥವಾ ಕೇವಲ ದರಿದ್ರ ಸ್ಥಿತಿಯಲ್ಲಿ ಜೀವಿಸಿಕೊಂಡಿದ್ದು ಚಿಕ್ಕವಯಸ್ಸಿನ ಹೆಂಡತಿಯನ್ನೂ ಹಸುಗೂಸನ್ನೂ ನಿರಾಧಾರವಾಗಿ ಬಿಟ್ಟು ಹೋಗಬೇಕಾಗಿರುವ ಮನಸ್ಸಿನ ಕಳವಳವನ್ನು ನನಗೆ ತಿಳಿಸಿ, ಮಹಾಜನರಿಂದ ಏನಾದರೂ ಸಹಾಯವನ್ನು ನನ್ನ ಮೂಲಕವಾಗಿ ಕೇಳಿಸುವ ಇಚ್ಛೆಯೋ ?—ಹೀಗೆ ಅಲ್ಲೋಲ ಕಲ್ಲೋಲವಾದ ಅವರ ಮನಸ್ಸಿನೊಳಗಣ ಯಾವುದೋ ಒಂದು ಅಭಿಲಾಷೆಯನ್ನು ನನಗೆ ತಿಳಿಸುವುದಕ್ಕಾಗಿಯೇ ಅವರು ನನ್ನನ್ನು ಬರುವಂತೆ ಅಪೇಕ್ಷಿಸಿದ್ದರೇ ವಿನಾ ಆ ಪ್ರಾರ್ಥನೆಯು ಬರೀ ಔಪಚಾರಿಕವಾಗಿರಲಿಲ್ಲವೆಂದೇ ಈ ಹೊತ್ತಿಗೂ ನನ್ನ ಭಾವನೆಯು. ಆದರೆ, ದುರದೃಷ್ಟವಶಾತ್ ಅವರ ಅಂತಿಮಕಾಲದಲ್ಲಿ ಅವರ ರುಗ್ಣಶಯ್ಯೆಯ ಬಳಿ ಕುಳಿತು ಅವರ ಮನೋಗತವೇನೆಂದು ತಿಳಿದು ಅವರ ಮನಸ್ಸಿನ ಕಳವಳವನ್ನು ಪರಿಹರಿಸಿ ಅವರು ಶಾಂತಚಿತ್ತರಾಗಿ ಸಾಯುವಂತೆ ಮಾಡುವ ಅದೃಷ್ಟ ನನಗೆ ಲಭಿಸಲಿಲ್ಲ. ಆದರೆ ನನ್ನಿಂದ ಆಗ ಮಾಡಲು ಸಾಧ್ಯವಾದ ಒಂದು ಕೆಲಸವನ್ನು ಮಾತ್ರ ನಾನು ಮಾಡಿಬಿಟ್ಟೆನು. ಆದುವರೆಗೆ ಖಾಸಗಿಯ ಮಾತು ಕಥೆಗಳಲ್ಲಿಯೂ ಕಾಗದ ಪತ್ರಗಳಲ್ಲಿಯೂ ಮಾತ್ರ ಬಂದಿರುತ್ತಿದ್ದ ಈ ಕವಿಯ ' ಗುಪ್ತನಾಮ ' ದ ಸಮಾಚಾರವನ್ನು ಸುವಾಸಿನಿಯ (ಪುಸ್ತಕ ೧, ಸಂಚಿಕೆ ೯) ಮಾರ್ಚಿ ತಿಂಗಳ ಸಂಚಿಕೆಯಲ್ಲಿ ' ಸ್ಫುಟವಿಷಯ ' ರೂಪವಾಗಿ ಈ ಕೆಳಗಿನಂತೆ ಪ್ರಕಟಗೊಳಿಸಿದೆನು.

**ಉಡುಪಿಯ ಕ್ರಿಶ್ಚನ್ ಹಾಯ್‌ಸ್ಕೂಲ್ ಕರ್ಣಾಟಕ ಪಂಡಿತರಾಗಿರುತ್ತಿದ್ದ ರಾ|| ನಂದಳಿಕೆ ಲಕ್ಷ್ಮೀನಾರಾಯಣಯ್ಯನವರ ಅಕಾಲಿಕ ಮರಣದಿಂದ ಕರ್ಣಾಟಕ**

---

* ಕವಿಯ ಮರಣಾನಂತರದಲ್ಲಿ ಮುಖ್ಯವಾದ ಕೆಲವಲ್ಲದೆ ಉಳಿದ ಯಾವತ್ತು ಪುಸ್ತಕಗಳೂ ಹಸ್ತಪ್ರತಿಗಳೂ, ಅವುಗಳ ಬೆಲೆಯನ್ನರಿಯದ ಇವರ ಬಂಧುಗಳಿಂದ ನಾಶಗೊಳಿಸಲ್ಪಟ್ಟುವೆಂದು ತಿಳಿಯಬರುತ್ತದೆ.

ಭಾಷಾಭಿವೃದ್ಧಿಗೆ ದೊಡ್ಡ ಹಾನಿಯುಂಟಾಗಿದೆ. ರಾ|| ಲಕ್ಷ್ಮೀನಾರಾಯಣಯ್ಯನವರು ಕಳೆದ ಒಂದು ವರ್ಷ ಮೊದಲ್ಗೊಂಡು ಅಸುಸ್ಥರಾಗಿಯೇ ಇದ್ದು, ಕಳೆದ (16 ನೆಯ ಫೆಬ್ರವರಿ) ಶನಿವಾರ ದಿನ ಕ್ಷಯರೋಗದಿಂದ ಉಡುಪಿಯಲ್ಲಿಯೇ ತೀರಿಕೊಂಡರು. ಇವರಲ್ಲಿ ಅಸಾಧಾರಣವಾದ ಬುದ್ಧಿಬಲವೂ, ಗ್ರಹಣಶಕ್ತಿಯೂ ಕವಿತಾಚಮತ್ಕಾರವೂ ಇದ್ದುದಕ್ಕೆ ಇವರು ಬೇರೆ ಬೇರೆ ಹೆಸರುಗಳನ್ನಿಟ್ಟುಕೊಂಡು, ಕರ್ಣಾಟಕ ಕಾವ್ಯಮಂಜರಿಯಲ್ಲಿ ಪ್ರಕಟಗೊಳಿಸುವಂತೆ ಮಾಡಿದ ಅದ್ಭುತರಾಮಾಯಣ, ಶ್ರೀರಾಮ ಪಟ್ಟಾಭಿಷೇಕ, ರಾಮಾಶ್ವಮೇಧ ಮೊದಲಾದ ಗ್ರಂಥಗಳೇ ಸಾಕ್ಷ್ಯಗಳಾಗಿವೆ. ಸ್ವದೇಶವನ್ನು ಬಿಟ್ಟು ಹೊರಗೆ ಹೋಗದೆ ಇದ್ದರೂ, ಈ ಮಹನೀಯರು ತೆಲುಗು, ತಮಿಳು, ಮಲಿಯಾಳ, ಸಂಸ್ಕೃತ ಮೊದಲಾದ ಭಾಷೆಗಳಲ್ಲಿ ತನ್ನ ಸ್ವಂತ ಉದ್ಯಮಬಲದಿಂದಲೇ ವಿಶೇಷವಾದ ವ್ಯವಸಾಯ ಮಾಡಿದ್ದರು. ಇವರ ಮನಸ್ಸು ಸರ್ವದಾ ನೂತನ ವಿಷಯಗಳನ್ನು ಕುರಿತು ಜ್ಞಾನಸಂಪಾದಿಸುವುದರಲ್ಲಿಯೇ ಮಗ್ನವಾಗಿರುತ್ತಿತ್ತು. ಅಂದಿನಿಂದ ಇಂದಿನವರೆಗೆ ಮಂಗಳೂರು ಜಿಲ್ಲೆಯಲ್ಲಿ ಯಾರಾದರೊಬ್ಬ ಉತ್ತಮ ಪ್ರತಿಯ ಕರ್ಣಾಟಕ ಕವಿಯೂ, ಲೇಖಕನೂ ಪಂಡಿತನೂ ಹುಟ್ಟಿದ್ದನೆಂದು ಅಭಿಮಾನ ಪಡುವುದಾದರೆ ರಾ|| ಲಕ್ಷ್ಮೀನಾರಾಯಣಯ್ಯನವರ ಹೆಸರು ಬಿಟ್ಟರೆ ಬೇರೆ ಗತಿ ಇಲ್ಲ. ಇವರಿಗೆ ಕರ್ಣಾಟಕ ಭಾಷೆಯ ಉತ್ತರಾಭಿವೃದ್ಧಿಯ ವಿಷಯದಲ್ಲಿ ಉತ್ಸಾಹಪೂರ್ವಕವಾದ ಪ್ರತ್ಯಾಶೆ ಇದ್ದಿತು. ಆದಿಯಿಂದಲೂ ಇವರಿಗೆ ಸುವಾಸಿನಿಯ ಮೇಲೆ ಬಲವಾದ ಮಮತೆ ಇತ್ತು, ಮತ್ತು ಇವರ ಅಸ್ವಸ್ಥದ ದೆಸೆಯಿಂದ ಅಲ್ಲದೆ ಹೋದರೆ, ಸುವಾಸಿನಿಯ ಪ್ರತಿಯೊಂದು ಸಂಚಿಕೆಯೂ ಇವರ ಲೇಖಗಳಿಂದ ಮೆರೆಯಬೇಕಾಗಿತ್ತು. "ಜೋಜೋ" ಪದದ ವ್ಯುತ್ಪತ್ತಿಯನ್ನು ಕುರಿತು "ಚಕ್ರಧಾರಿ" ಎಂಬ ಅಭಿಧಾನದಿಂದ ಇವರು ಸುವಾಸಿನಿಗೆ ಬರೆದ ಒಂದೇ ಒಂದು ಲೇಖವು ಎಷ್ಟು ಮನೋಹರವೂ ಜ್ಞಾನಪೂರ್ಣವೂ ಆಗಿದೆಯೆಂದು ನಾವು ಪ್ರತ್ಯೇಕವಾಗಿ ಹೇಳುವ ಅವಶ್ಯವಿಲ್ಲ. ಮೊದಲಿಂದಲೂ ಇವರಿಗೂ ನಮಗೂ ಸ್ನೇಹವಿದ್ದು ಆಗಿಂದಾಗ ಪತ್ರವ್ಯವಹಾರ ನಡೆಯುತ್ತಲೇ ಇತ್ತು; ಸುವಾಸಿನಿಯ ಜನನವು ಈ ಸ್ನೇಹ ಪಾಶಗಳನ್ನು ಮತ್ತಷ್ಟು ಬಿಗಿಯಾಗಿ ಕಟ್ಟಿತು. ಹೀಗಾದುದರಿಂದ ಕರ್ಣಾಟಕ ಭಾಷೆಗಾಗಿ ನಾವು ವ್ಯಸನಪಡುತ್ತಿರುವುದು ಮಾತ್ರವಲ್ಲದೆ, ಅತ್ಯಂತ ಸನ್ಮಾನ್ಯರೂ ಪ್ರಿಯರೂ ಆದ ಮಿತ್ರರ ಮರಣವನ್ನು ಕುರಿತು ಸಹ ನಾವು ಬಹಳವಾಗಿ ಚಿಂತಿಸುತ್ತಿರುವೆವು. ಕರ್ಣಾಟಕ ಭಾಷಾವತ್ಸಲರಾದ ಸರ್ವರೂ ಒಂದಾಗಿ ಸೇರಿ ಇವರ ಹೆಸರು ಶಾಶ್ವತವಾಗಿ ನಿಲ್ಲುವಂತೆ ಮಾಡದಿರಲಾರರೆಂದು ದೃಢವಾಗಿ ನಂಬುವೆವು."

ಕವಿಯ ನಿಧನದ ದೆಸೆಯಿಂದ ಕನ್ನಡದ ವಿಷಯದಲ್ಲಿ ಪ್ರೇಮವುಳ್ಳ ಕೆಲಕೆಲವು ಭಾಷಾಭಕ್ತರು ಹಳಹಳಿಸಿದರಾದರೂ ಅವರ ಸ್ಮಾರಕದ ವಿಷಯದಲ್ಲಿ ಮಾಡಿದ ಪ್ರಾರ್ಥನೆಯು ಮಾತ್ರ ಮಹಾಜನರಿಂದ ಲೆಕ್ಕಿಸಲ್ಪಟ್ಟಂತೆ ತೋರಲಿಲ್ಲ. ಇದು ಕನ್ನಡಿಗರಲ್ಲಿ ಭಾಷೆಯ ಸಂಬಂಧದಿಂದ ಕಂಡುಬರುವ ಉಪೇಕ್ಷೆಗೆ ಅನುರೂಪವಾಗಿಯೇ ಇದೆ. ಆದರೆ ಕವಿಯ ಗುಣಪ್ರಶಂಸಾತ್ಮಕರೂಪವಾದ ಲೇಖಗಳು ಮಾತ್ರ ಆಗಳಿನ ಅನೇಕಾನೇಕ ಪತ್ರಿಕೆಗಳಲ್ಲಿ ಆಗಿಂದಾಗ ಪ್ರಚುರವಾಗುತ್ತಲೇ ಇದ್ದುವು.

ಕೆಲಕೆಲವು ತೊಂದರೆಗಳ ದೆಸೆಯಿಂದ ಮೈಸೂರಿನ ನನ್ನ ವಾಸವು ನಾನು ಮೊದಲು ಊಹಿಸಿದ್ದಷ್ಟು ಸುಖಕರವಾಗಲೀ ಪ್ರೋತ್ಸಾಹಕರವಾಗಲೀ ಆಗಲಿಲ್ಲ. ಆ ಪಟ್ಟಣದಲ್ಲಿದ್ದ ಎರಡು ವರ್ಷಗಳಲ್ಲಿಯೂ ಆರು ತಿಂಗಳಿಗೂ ಹೆಚ್ಚಾಗಿ ರಜಾಪಡೆದು ದೂರದೇಶದಲ್ಲಿರಬೇಕಾಯಿತು. ೧೯೧೦ನೇ ಅಕ್ಟೋಬರು ತಿಂಗಳಿಂದ ಮೈಸೂರಿನ ಕೆಲಸವನ್ನು ಪೂರ್ತಿಯಾಗಿ ಬಿಟ್ಟು ಬೊಂಬಾಯಲ್ಲಿ ಕೆಲಸವನ್ನು ಕೈಕೊಂಡೆನು. ನಾನು 'ಸುವಾಸಿನಿ' ಯ ಸಂಪಾದಕನಾಗಿರುವುದು ಬೊಂಬಾಯಿಯ ನನ್ನ ಮೇಲಧಿಕಾರಿಗಳಿಗೆ ಇಷ್ಟವಿಲ್ಲದೆ ಹೋದುದರಿಂದ ಮೈಸೂರಿನೊಂದಿಗೆ 'ಸುವಾಸಿನಿ' ಯ ಸಂಬಂಧವನ್ನು ಬಿಟ್ಟುಬಿಡಬೇಕಾಯಿತು. ಮಹಾಜನರುಗಳ ಪ್ರೋತ್ಸಾಹವು ಕಡಮೆಯಾದುದರಿಂದ ಆ ಪತ್ರಿಕೆಯೂ ಕ್ಷಿಪ್ರದೊಳಗಾಗಿ ನಿಂತು ಹೋಯಿತು. ಹೀಗಾಗಿ ೧೯೧೧ನೇ ಏಪ್ರಿಲ್‌ನಲ್ಲಿ ವರ್ಗಹೊಂದಿ ಪುನಃ ಮದ್ರಾಸಿಗೆ ಬರುವವರೆಗೂ ಶ್ರೀ|| ಲಕ್ಷ್ಮೀನಾರಣಪ್ಪನವರ ವಿಷಯದಲ್ಲಿ ಯಾವ ಕೆಲಸವನ್ನೂ ಮಾಡುವುದಕ್ಕೆ ನನಗೆ ಸಾಧ್ಯವಿಲ್ಲದೆ ಹೋಯಿತು. ಮದ್ರಾಸಿಗೆ ಬಂದ ಬಳಿಕ ನನ್ನ ಸಮೀಪದ ಬಂಧುಗಳೂ ಹೈಕೋರ್ಟು ವಕೀಲರೂ ಕವಿಯ ಶಿಷ್ಯಕೋಟಿಗೆ ಸೇರಿದವರೂ ಆದ ಶ್ರೀ|| ಗುಲವಾಡಿ ಅಣ್ಣಾಜಿರಾವ್ ಎಂ. ಎ., ಬಿ. ಎಲ್. ಮೂಲಕ ಕವಿಯಚರಿತ್ರೆಯ ಮತ್ತು ಹಸ್ತಪ್ರತಿಗಳ ವಿಚಾರದಲ್ಲಿ ಪ್ರಯತ್ನ

ಪಟ್ಟೆನು. ಆದರೂ ನನ್ನ ಪ್ರಯತ್ನಗಳಿಗೆ ಬೇಕಾದಷ್ಟು ಯಶಸ್ಸು ದೊರೆಯಲಿಲ್ಲ. ಕವಿಯ ಹಸ್ತಪ್ರತಿಗಳೊಳಗೆ ಬಂದೆರಡು ಮಾತ್ರ ಶ್ರೀ|| ಅಣ್ಣಾಜಿರಾಯರ ಮೂಲಕ ಬೆಂಗಳೂರಿನ ಶ್ರೀ|| ಎಚ್. ಚೆನ್ನಕೇಶವಯ್ಯಂಗಾರ್ಯರವರ ವಶಕ್ಕೆ ಹೋದಂತೆ ತಿಳಿದುಬಂದಿತು. ಶ್ರೀ|| ಅಯ್ಯಂಗಾರ್ಯರಿಗೂ ನನಗೂ ಆಗ ಅಷ್ಟೊಂದು ಪರಿಚಯವಿಲ್ಲದುದರಿಂದ ಈ ಹಸ್ತಪ್ರತಿಗಳನ್ನು ನೋಡುವ ಭಾಗ್ಯವು ಕೂಡ ನನಗೆ ಎರಡು ಮೂರು ವರ್ಷಗಳಷ್ಟು ಈಚೆಗೆ ಮಾತ್ರ ಪ್ರಾಪ್ತವಾಯಿತು.

೧೯೨೩ ನೇ ಇಸವಿಯ ಆದಿಭಾಗದಲ್ಲಿ ನಾನು ಮಂಗಳೂರಿಗೆ ಹೋಗಿದ್ದಾಗ ಭಾಷಾಭಿಮಾನಿಗಳಾದ ನನ್ನ ಸ್ನೇಹಿತರುಗಳೂ ನಾನೂ ಖಾಸಗಿಯಾಗಿ ಸಭೆ ಸೇರಿ, ಮಂಗಳೂರಿನಲ್ಲೊಂದು 'ಜಿಲ್ಲಾ ಸಾಹಿತ್ಯ ಸಮ್ಮೇಳನ' ವನ್ನು ನೆರೆಯಿಸಬೇಕೆಂದೂ, ಆ ಕಾಲದಲ್ಲಿ ಮಂಗಳೂರಿನಲ್ಲಿ ಒಂದು ಕರ್ಣಾಟಕ ಸಂಘವನ್ನು ಸ್ಥಾಪಿಸಬೇಕೆಂದೂ, ಕನ್ನಡ ಜಿಲ್ಲೆಯ ಕವಿಗಳ ಚರಿತ್ರೆಯನ್ನೂ ಗ್ರಂಥಗಳನ್ನೂ ಸಂಗ್ರಹಿಸಿ ಪ್ರಕಟಿಸಲು ಏರ್ಪಾಟುಮಾಡಬೇಕೆಂದೂ, ಶ್ರೀ|| ಲಕ್ಷ್ಮೀನಾರಾಯಣಕವಿಯ ಹೆಸರನ್ನು ಶಾಶ್ವತಗೊಳಿಸುವುದಕ್ಕಾಗಿ ಒಂದು ಸ್ಮಾರಕವನ್ನು ಮಾಡಬೇಕೆಂದೂ ಗೊತ್ತುಪಡಿಸಿದೆವು; ಮತ್ತು ಅದಕ್ಕೆ ಬೇಕಾದ ಸಿದ್ಧತೆಯೂ ಉತ್ಸಾಹದೊಡನೆ ನಡೆಯುತ್ತಿದ್ದಿತು. ಆದರೆ ಮಹಾಪ್ರವಾಹರೂಪವಾದ ದೈವಿಕಾಪತ್ತಿಯಿಂದ ಆ ವರ್ಷದಲ್ಲಿ ಅದನ್ನು ನೆರೆಯಿಸಲು ಸಾಧ್ಯವಾಗಲಿಲ್ಲ; ಅಷ್ಟೇ ಅಲ್ಲದೆ, ಮರುವರ್ಷ ಎಂದರೆ ೧೯೨೪ರಲ್ಲಿ ಪುನಃ ಕೈಕೊಳ್ಳುವುದರೊಳಗಾಗಿ ಮರಳಿಯೂ ಅದೇ ಸಂಕಷ್ಟವು ಪ್ರಾಪ್ತವಾಗಿ ನಮ್ಮ ಉದ್ದೇಶವು ನಿಂತೇ ಹೋಗುವುದಾಯಿತು; ಮತ್ತು ಯಾವ ಕೆಲಸವನ್ನು ಈಡೇರಿಸುವುದು ಮಂಗಳೂರು ಜಿಲ್ಲೆಯವರ ಆದ್ಯ ಕರ್ತವ್ಯವಾಗಿದ್ದಿತೋ ಅದನ್ನು ನಡೆಯಿಸಿದ ಕೀರ್ತಿಯು ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದವರಿಗೆ, ಮೈಸೂರು ಸೀಮೆಯ ನಮ್ಮ ಕನ್ನಡ ಬಂಧುಗಳಿಗೆ, ದೊರೆಯುವುದಾಯಿತು.

ರಾಮಾಶ್ವಮೇಧಾದಿ ಗ್ರಂಥಗಳನ್ನು ಬರೆದಾತನು ಶ್ರೀ|| ಲಕ್ಷ್ಮೀ ನಾರಾಯಣ ಕವಿಯೇ ಎಂಬುದನ್ನು ನಾನು ಈ ಉಪನ್ಯಾಸದಲ್ಲಿ ಪುನಃ ಪುನಃ ಹೇಳಿರುವೆನಾದರೂ ಅದನ್ನು ಅಂತರ್ಬಾಹ್ಯ ಪ್ರಮಾಣಗಳಿಂದ ಋಜುಪಡಿಸುವುದು ನನ್ನ ಈ ಲೇಖನಕ್ಕೆ ಹೊರಗಾದ ವಿಷಯವಾಗಿದೆ. ಹಲವು ವಿಧವಾದ ಆಧಾರಗಳನ್ನು ಕೊಟ್ಟು ವಿದ್ವನ್ಮಣಿಗಳು ಆ ಕೆಲಸ ವನ್ನು ಈ ಮೊದಲೇ ಮಾಡಿರುವರು ; ಈಗಲೂ ಮಾಡುತ್ತಲೇ ಇರುವರು. ತಥಾಪಿ, ನನ್ನ ಅಭಿಪ್ರಾಯದ ಮೇರೆಗೆ ಹೇಳಬಹುದಾದ ಈ ಕೆಳಗಣ ಕೆಲಕೆಲವು ಕಾರಣಗಳನ್ನು ಅರಿಕೆಮಾಡಿಕೊಳ್ಳುವೆನು.

(i) ಕವಿಯು ತನ್ನ ಸ್ವಂತ ಹೆಸರಿಂದ ಪ್ರಚುರಗೊಳಿಸಿರುವ ಯಕ್ಷ ಗಾನ, ರತ್ನಾವತೀ ಕಲ್ಯಾಣ, ಮತ್ತು ಕುಮಾರವಿಜಯಗಳ ಮೂಲಕ ಕಂಡುಬರುವ ಆತನ ಅದ್ಭುತವಾದ ಪ್ರತಿಭೆ.

(ii) ಕವಿಗೆ ಮುದ್ದಣ (ಮುತ್ತಣ್ಣ) ನೆಂಬುದಾಗಿ ಮನೆಯ ಹೆಸರೂ ; ಆತನ ತಾಯಿಗೆ ಲಕ್ಷ್ಮಮ್ಮ (ಮಹಾಲಕ್ಷ್ಮಿ) ನೆಂದೂ ಪತ್ನಿಗೆ ಕಮಲಮ್ಮ (ಮನೋರಮೆ) ಎಂದೂ ಹೆಸರು ಇರುವ ವಿಷಯ.

(iii) ಆತನ ಗುರುಗಳಾದ ಶ್ರೀ|| ಮಳಲಿಯ ಸುಬ್ಬರಾಯರ ಮತ್ತು ಸರ್ವದಾ ಆತನ ಸಹವಾಸದಲ್ಲಿದ್ದ ಮಿತ್ರರಾದ ಶ್ರೀ|| ಪಂಡಿತ ಐರೋಡಿ ಶಿವರಾಮಯ್ಯನಂಥವರ ಲೇಖನಗಳೂ ಹೇಳಿಕೆಗಳೂ ; ಆತನು ಬರೆಯುತ್ತಿದ್ದುದನ್ನು ಕಣ್ಣಾರ ಕಂಡವರಾಗಿದ್ದು ಈಗ ಉನ್ನತಪದವಿ ಗಳಲ್ಲಿರುವ ಆತನ ನೂರಾರುಮಂದಿ ಶಿಷ್ಯರುಗಳ ಹೇಳಿಕೆ ; ಆತನೊಂದಿಗೆ ಆಗಿಂದಾಗ ಪತ್ರವ್ಯವಹಾರವನ್ನು ನಡೆಸುತ್ತಿದ್ದ ಆತನ ವಿಶ್ವಾಸಪಾತ್ರ ರಾಗಿದ್ದ ಶ್ರೀ|| ಎಚ್. ನಾರಾಯಣರಾಯರೊಂದಿಗೂ ನನ್ನೊಂದಿಗೂ ಆತನು ಸ್ಪಷ್ಟವಾಗಿ ಒಪ್ಪಿಕೊಂಡಿರೋಣ ; ದಕ್ಷಿಣ ಕನ್ನಡ ಜಿಲ್ಲೆ ಯಲ್ಲಿಯ ಪ್ರತಿಯೊಬ್ಬರಿಗೂ ಆತನು ಅವುಗಳ ಲೇಖಕನೆಂಬುದಾಗಿ ಇರುವ ಸಕಾರಣವಾದ ಅಭಿಪ್ರಾಯ.

(iv) ಆತನ ಸ್ವಂತ ಕೈ ಬರೆಹದ ಪ್ರತಿಗಳೇ ವಿನಾ ಬೇರೆ ಹಸ್ತ ಪ್ರತಿಗಳು ಸಿಕ್ಕದಿರೋಣ ; ಆ ಗ್ರಂಥಗಳ ಅಸ್ತಿತ್ವವು ಅದಕ್ಕೆ ಮೊದಲು ಯಾರಿಗೂ ತಿಳಿಯದಿರೋಣ; ಆ ಕೈ ಬರೆಹದ ಪ್ರತಿಗಳಲ್ಲಿ ಆತನೇ ಹೊಡೆದು ಹೊಡೆದು ತಿದ್ದಿ ಪುನಃ ಬರೆದಿರೋಣ.

(v) ಆತನ ಕೈ ಬರೆಹದಲ್ಲಿಯೇ ಹಸ್ತಪ್ರತಿಯ ಮುಖಪತ್ರದಲ್ಲಿ "ಅದ್ಭುತರಾಮಾಯಣಮೆಂಬೀ ನುಡಿಗಬ್ಬಂ ನಂದಳಿಕೆ ಲಕ್ಷ್ಮೀನಾರಾಯಣನಿಂ ರಚಿಸಲ್ಪಟ್ಟುದು. ೧೮೯೪" ಎಂಬುದಾಗಿ ಕನ್ನಡದಲ್ಲಿದ್ದು, ಅದರ ಅಡಿಗೆ ಆತನ ಕೈಬರೆಹದಲ್ಲಿಯೇ "N. Lakshminarayana-iah" ಎಂಬದಾಗಿ ದಸ್ಕತೂ, "Gymnastic Instructor, High School, Kundapur" ಎಂಬ ಲಿಖಿತವೂ ಇರೋಣ.

(vi) ಆತನ ಅದ್ಭುತರಾಮಾಯಣದ (ಶ್ರೀ|| ಚೆನ್ನಕೇಶವಯ್ಯಂಗಾರ್‍ಯರವರೊಡನೆ ಇರುವ) ಹಸ್ತ ಪ್ರತಿಯಲ್ಲಿ ೧೧ ರಿಂದ ೧೫ ರ ಪರ್ಯಂತದ ಆಶ್ವಾಸಗಳು ಕೇವಲ ಬೇರೆಯಾಗಿವೆ. ಇವು 'ಕಾವ್ಯಮಂಜರಿ' ಯವರಿಂದ ಪ್ರಚುರಗೊಳಿಸಲಾದ ಪುಸ್ತಕದಲ್ಲಿ ಇರುವುದಿಲ್ಲ. ಈ ಹಸ್ತ ಪ್ರತಿಯಲ್ಲಿ ಒಟ್ಟು ಇಪ್ಪತ್ತೊಂದು ಆಶ್ವಾಸಗಳಿವೆ.

(vii) ಆತನು ತನ್ನ ಹೆಸರು ಅಡಗಿಸಿದುದಕ್ಕೋಸ್ಕರ ಕೊಟ್ಟ ಕಾರಣವು ಸಾಧಾರವಾದುದೆಂದು ಜನರು ತಿಳಿಯಲು ಅವಕಾಶವಿರೋಣ.

ಇಷ್ಟು ಕಾರಣಗಳು ಯಾವ ವಿಚಾರಪರನಿಗಾದರೂ ಸಾಕಾದಷ್ಟು ಪ್ರಮಾಣವಾಗದೆ ಹೋಗಲಾರವು ಎಂದು ನನ್ನ ಅಭಿಪ್ರಾಯವು. 'ಲಕ್ಷ್ಮೀನಾರಾಯಣ ಕವಿಯು ತನಗೆ ಸಿಕ್ಕಿದ ಯಾವುವೋ ಹಸ್ತಪ್ರತಿಗಳನ್ನು ತನ್ನ ಕೈಬರೆಹದಿಂದ ಬರೆದು ಅಲ್ಲಲ್ಲಿ ಕೊಂಚ ತಿದ್ದಿ, ತಾನೇ ಕರ್ತೃವೆಂದು ಧೈರ್ಯವಾಗಿ ಹೇಳಲು ಅಂಜಿ ಈ ರೀತಿ ವರ್ತಿಸಿದನೆಂದು ನಾವು ಏತಕ್ಕೆ ತಿಳಿಯಬಾರದು ? ಅರ್ವಾಚೀನ ಕವಿಗಳೊಳಗೆ ಇಷ್ಟು ಉದ್ದಾಮವಾದ ಗ್ರಂಥಗಳನ್ನು ಬರೆಯತಕ್ಕವರು ಯಾರಿದ್ದಾರೆ ?'—

ಎಂಬುದಾಗಿ ಪಂಡಿತರೊಬ್ಬರು ಒಂದುಬಾರಿ ನನ್ನೊಡನೆ ವಾದವನ್ನು ಹೂಡಿದ್ದರು. ಈ ವಾದಕ್ಕೆ ಸಮಾಧಾನವು ಇಷ್ಟೇ:—ಶ್ರೀ|| ಲಕ್ಷ್ಮೀ ನಾರಣಪ್ಪನವರು ಬರೀ ಹಳ್ಳಿಯ ಹೆಡ್ಡನಾಗಿರಲಿಲ್ಲ. ಒಳ್ಳೆಯ ಕುಶಲ ಲೇಖಕ ರಾಗಿದ್ದರು. ಅವರಲ್ಲಿ ಸ್ವತಂತ್ರವಾಗಿ ಬರೆಯುತಕ್ಕಷ್ಟು ಶಕ್ತಿಯು ಖಂಡಿತ ವಾಗಿಯೂ ಇದ್ದಿತು. ಅವರು ಬರೆಯುತ್ತಿದ್ದಾಗಲೇ ಪ್ರತಿ ನಿತ್ಯವೂ ನೋಡಿದ್ದ, ಬೇರೆ ಬೇರೆ ಜಾತಿಗೆ ಸೇರಿದ ಅವರ ಮಿತ್ರರೂ ವಿದ್ಯಾರ್ಥಿ ಗಳೂ ಇಂದಿಗೂ ಜೀವಿಸಿಕೊಂಡಿದ್ದಾರೆ. ಪುರಾತನ ಗ್ರಂಥಗಳನ್ನು ತನ್ನ ವೆಂದು ಆರೋಪಿಸಿಕೊಳ್ಳುವುದು ಸುಲಭವಲ್ಲ. ಮುಂದೆ ಎಲ್ಲಾದರೂ ಅದರ ಇತರ ಹಸ್ತಪ್ರತಿಗಳು ಸಿಕ್ಕಬಹುದೆಂಬ ಭಯವು ಇದ್ದೇ ಇರುವುದು. ಇನ್ನು ಅರ್ವಾಚೀನರು ಪ್ರಾಚೀನ ಕವಿಗಳಿಗೆ ಸಮಾನವಾದ ಪ್ರತಿಭೆ ಯನ್ನು ಪಡೆಯಲಾರರೆಂಬ ತರ್ಕವೇ ಅಸಾಧುವಾದುದು; ಇದಕ್ಕೆ ಪ್ರಪಂ ಚದ ಚರಿತ್ರೆಯಲ್ಲಿ ಯಾವ ಆಧಾರವೂ ಸಿಕ್ಕುವುದಿಲ್ಲ. ಕಾಳಿದಾಸ ಷೇಕ್ಸ್ಪಿಯರ್, ಪಂಪ, ರನ್ನ ಮೊದಲಾದ ಮಹಾಕವಿಗಳು ಕೂಡ ಅವರವರು ಜೀವಿಸಿಕೊಂಡಿದ್ದ ಕಾಲದಲ್ಲಿ ಅರ್ವಾಚೀನರಾಗಿಯೇ ಇದ್ದರಲ್ಲವೇ ? ಕಾಲದೇವಿಯ ಗರ್ಭದಲ್ಲಿ ಹಿಂದಿನವರನ್ನು ಮೀರಿಸತಕ್ಕ ಇನ್ನೂ ಎಂತೆಂತಹ ರತ್ನಗಳಿರುವುವೋ ಹೇಳುವವರು ಯಾರು ?

---

## ೬. ಸಮುದಾಯದ ಮಾಘಣಂದಿ

ಇವನ ವಿಷಯವಾಗಿ ಕವಿಚರಿತಕಾರರು ಹೀಗೆಂದು ಬರೆದಿದ್ದಾರೆ:—

"ಈತನು ಶಾಸ್ತ್ರಸಾರಸಮುಚ್ಚಯ, ಪದಾರ್ಥಸಾರ, ಇವುಗಳಿಗೆ ಕರ್ಣಾಟಕ ಟೀಕೆಯನ್ನು ಬರೆದಿದ್ದಾನೆ. ಇವನು ಜೈನಕವಿ; ಇವನ ಗುರುಪರಂಪರೆ ಹೀಗೆ ಹೇಳಿದೆ: ಶ್ರೀಮೂಲಸಂಘದ ಬಲಾತ್ಕಾರಗಣದ ವರ್ಧಮಾನ; ಶಿಷ್ಯ ಪದ್ಮನಂದಿ; ಸಧರ್ಮ ಶ್ರೀಧರಾಚಾರ್ಯ; ಶಿಷ್ಯ ವಾಸುಪೂಜ್ಯ; ಶಿಷ್ಯ ಶುಭಚಂದ್ರ; ಶಿಷ್ಯ ಅಭಯನಂದಿ; ಶಿಷ್ಯ ಅರ್ಹನಂದಿ; ಶಿಷ್ಯ ದೇವಚಂದ್ರ; ಶಿಷ್ಯ ಅಷ್ಟೋಪವಾಸಿ ಕನಕಚಂದ್ರ; ಶಿಷ್ಯ ನಯಕೀರ್ತಿ; ಶಿಷ್ಯ ಮಾಸೋಪವಾಸಿ ರವಿಚಂದ್ರ; ಶಿಷ್ಯ ಶ್ರುತಕೀರ್ತಿ; ಶಿಷ್ಯ ವೀರಣಂದಿ; ಶಿಷ್ಯ ಗಂಡವಿಮುಕ್ತ ನೇಮಿಚಂದ್ರ; ಶಿಷ್ಯ ಗುಣಚಂದ್ರ; ಶಿಷ್ಯ ಪಕ್ಷೋಪವಾಸಿ ಜಿನಚಂದ್ರ; ಶಿಷ್ಯ ವರ್ಧಮಾನ; ಶಿಷ್ಯ ಶ್ರೀಧರ; ಶಿಷ್ಯ ವಾಸುಪೂಜ್ಯ; ಶಿಷ್ಯ ಉದಯಚಂದ್ರ; ಶಿಷ್ಯ ಕುಮುದಚಂದ್ರ; ಶಿಷ್ಯ ಮಾಘಣಂದಿ (ಕವಿ)..................... ಈತನು 1273 ರಲ್ಲಿ ದ್ರವ್ಯಸಂಗ್ರಹಸೂತ್ರಟೀಕೆಯನ್ನು ಬರೆದ **ಬಾಲಚಂದ್ರಪಂಡಿತನ** ಗುರುವಿನ ಗುರುವೆಂದು ಬೇಲೂರು 131 ನೆಯ ಶಾಸನದಿಂದ (1215) ತಿಳಿವುದರಿಂದಲೂ ರಾಮಾಯಣವನ್ನು ಬರೆದಿರುವ **ಕುಮುದೇಂದುಕವಿ** (ಸು. 1275), ಕುಮುದೇಂದುಗುರುವಿನ ಶಿಷ್ಯನಾದ ಈ ಮಾಘಣಂದಿಯನ್ನು ತನ್ನ ಗುರುವೆಂದು ಹೇಳುವುದರಿಂದಲೂ, ಸುಮಾರು 1260ರಲ್ಲಿ ಇದ್ದಿರಬಹುದು.........**ಮಾಘಣಂದಿಯ ಶ್ರಾವಕಾಚಾರ** ಎಂದು ಒಂದು ಗ್ರಂಥವಿದೆ. ಇದು ಶಕ 1175 ಎಂದರೆ 1253 ರಲ್ಲಿ ಬರೆದುದು. ಇದನ್ನೂ ಈ ಮಾಘಣಂದಿಯೇ ಬರೆದಿರಬಹುದು."—(ಕವಿಚರಿತೆ ಪ್ರಥಮಸಂಪುಟದ ದ್ವಿತೀಯ ಮುದ್ರಣ, ಪುಟ ೩೮೮-೩೮೯).

೧೨೭೩ ರಲ್ಲಿ ದ್ರವ್ಯಸಂಗ್ರಹಸೂತ್ರ ಟೀಕೆಯನ್ನು ಬರೆದ ಬಾಲಚಂದ್ರನು ಶಾಸ್ತ್ರಸಾರಸಮುಚ್ಚಯವೇ ಮೊದಲಾದ ಗ್ರಂಥಗಳ ಕರ್ತೃವಾದ ಮಾಘಣಂದಿಯ ಶಿಷ್ಯನ ಶಿಷ್ಯನೆಂದು ಬೇಲೂರು ೧೩೧ ನೆಯ ಶಾಸನದಿಂದ ತಿಳಿದುಬರುವದೆಂದು ಕವಿಚರಿತಕಾರರು ಇಲ್ಲಿ ಮೇಲೆ ಹೇಳಿರುವ ಅಭಿಪ್ರಾಯವು ಭ್ರಮಮೂಲವಾದುದು. ಶಾಸ್ತ್ರಸಾರಸಮುಚ್ಚಯವೇ ಮೊದಲಾದ ಗ್ರಂಥಗಳ ಕರ್ತೃವಾದ ಮಾಘಣಂದಿಯು ಮೂಲಸಂಘದ ಬಲಾತ್ಕಾರಗಣಕ್ಕೆ ಸೇರಿದವನೆಂದೂ, ಅವನು ಕುಮುದಚಂದ್ರನೆಂಬವನ ಶಿಷ್ಯನಾಗಿದ್ದನೆಂದೂ ಕವಿಚರಿತಕಾರರು ಮೇಲೆ ಹೇಳಿರುವದರಿಂದಲೇ ಸ್ಪಷ್ಟವಾಗುವುದಲ್ಲದೆ ನಾವು ಮುಂದೆ ನಿರ್ದೇಶಿಸುವ (ಹಳೇಬೀಡಿನ) ಒಂದು ಶಿಲಾಲೇಖನದಿಂದಲೂ ಕೂಡ ಸ್ಪಷ್ಟವಾಗುವುದು. ಬೇಲೂರಿನ ೧೩೧ನೆಯ ಶಿಲಾಲೇಖನದಲ್ಲಿ (ಈ ಶಿಲಾಲೇಖನವೂ ಹಳೇಬೀಡಿಗೆ ಸೇರಿದ ಬಸ್ತಿಹಳ್ಳಿಯಲ್ಲಿರುವುದು.) ಕೀರ್ತಿತನಾಗಿರುವ ಮಾಘಣಂದಿಯಾದರೋ ದೇಶೀಯಗಣಕ್ಕೆ ಸೇರಿದವನೆಂದು ಆ ಶಿಲಾಲೇಖನದಲ್ಲಿರುವ 'ಸ್ವಸ್ತಿ ಶ್ರೀ ಮೂಲಸಂಘ ದೇಶಿಯಗಣ

ಪುಸ್ತಕಗಚ್ಛ ಕೊಂಡಕುಂದಾನ್ವಯದಿಂಗಳೇಶ್ವರದ ಬಳಿಯ ಶ್ರೀ ಸಮುದಾಯದ† ಮಾಘನಂದಿ ಭಟ್ಟಾರಕದೇವರ ಪ್ರಿಯಶಿಷ್ಯರುಂ ಶ್ರೀಮನ್ನೇಮಿಚಂದ್ರಭಟ್ಟಾರಕ ದೇವರುಂ ಶ್ರೀಮದಭಯಚಂದ್ರ-ಸಿದ್ಧಾಂತಚಕ್ರವರ್ತಿಗಳುಂ ದೀಕ್ಷಾಗುರುಗಳುಂ ಶ್ರುತಗುರುಗಳುಮಾಗೆ ತಪಶ್ರುತಂಗಳಿಂ ಜಗದೊಳ್ ವಿಖ್ಯಾತಂಬೆತ್ತ ಶ್ರೀಮದ್ಬಾಲ ಚಂದ್ರಪಂಡಿತದೇವರು' ಎಂಬ ಪದಗಳಿಂದ ಸ್ಪಷ್ಟವಾಗುವುದಲ್ಲದೆ, ಇದೇ ಬಸ್ತಿ ಹಳ್ಳಿಯಲ್ಲಿರುವ ಬೇಲೂರು ೧೩೩ ನೆಯ ಶಿಲಾಲೇಖನದಿಂದಲೂ ಕೂಡ ಸ್ಪಷ್ಟವಾ ಗುವುದು. ಈ ಶಿಲಾಲೇಖನದಲ್ಲಿ

ಶ್ರೀಸಂಘರ್ಮೈಕುಭೃತಿ ದೇಶಿಯಸದ್ಗಣಾಖ್ಯ
ಕಲ್ಪಾಂಘ್ರಿಪೋ ಲಸತಿ ಪುಸ್ತಕಗಚ್ಛಶಾಖಃ ।
ಶ್ರೀಕುಂಡಕುಂದಮುನಿಪಾನ್ವಯಚಾರುಮೂಲಃ
ಸಾರೇಂಗಳೇಶ್ವರಬಲಿಪ್ರಬಳೋಪಶಾಖಃ ॥

ಎಂದು ಉಪಕ್ರಮಿಸಿ ಕ್ರಮವಾಗಿ ಕುಲಭೂಷಣಸೈದ್ಧಾಂತಿಕ; ಅವನ ಶಿಷ್ಯನೂ ಊರ್ಜಿತಜಿನಾಲಯವನ್ನು ಮಾಡಿಸಿದ ಸಾಮಂತನಿಂಬದೇವನ ಗುರುವೂ ಆದ ಮಾಘನಂದಿಸೈದ್ಧಾಂತಿಕ; ಅವನ ಶಿಷ್ಯ ಶುಭನಂದಿಯಾದ ಗಂಧವಿಮುಕ್ತ (ಗಂಡ ವಿಮುಕ್ತ); ಅವನ ಶಿಷ್ಯ ಚಾರುಕೀರ್ತಿ; ಅವನ ಶಿಷ್ಯ ಸಮುದಾಯದ ಮಾಘ ಣಂದಿ; ಅವನ ಶಿಷ್ಯರು ನೇಮಿಚಂದ್ರಭಟ್ಟಾರಕ, ಅಭಯಚಂದ್ರಸೈದ್ಧಾಂತಿಕರು; ಇವರ ಶಿಷ್ಯ ಬಾಲಚಂದ್ರ; ಮತ್ತು ಇವನ ಶಿಷ್ಯ ಅಭಯಚಂದ್ರ ಎಂದು ಇಷ್ಟು ಮಂದಿ ಜೈನಗುರುಗಳು ಕೀರ್ತಿತರಾಗಿರುವರು. ಹೀಗೆಯೇ ಬೇಲೂರಿನ ೧೩೪ನೆಯ ಶಿಲಾಲೇಖನದಲ್ಲಿಯೂ ಕೂಡ ಮೇಲೆ ಕಂಡ ಬಾಲಚಂದ್ರನ ಗುರುವಿನ ಗುರು ವಾದ ಮಾಘನಂದಿಯು 'ಮೂಲಸಂಘ ದೇಶಿಯಗಣಪುಸ್ತಕಗಚ್ಛ ಕುಂಡಕುಂ ದಾನ್ವಯದ ಇಂಗಳೇಶ್ವರದ ಬಳಿಯ ಶ್ರೀ ಸಮುದಾಯದ ಮಾಘನಂದಿಭಟ್ಟಾರಕ ದೇವರ್' ಎಂದು ಕೀರ್ತಿತನಾಗಿರುವನು. ಹೀಗೆ ಬೇಲೂರಿನ ೧೩೧, ೧೩೩, ೧೩೪ನೆಯ ಶಿಲಾಲೇಖನಗಳಲ್ಲಿ * ಕೀರ್ತಿತನಾಗಿರುವ ಮಾಘನಂದಿ-ಭಟ್ಟಾರಕನು

---

† ಹೀಗೆ ಶಿಲಾಲೇಖನದಲ್ಲಿ 'ಶ್ರೀ ಸಮುದಾಯದ ಮಾಘನಂದಿ' ಎಂದು ಇದ್ದರೂ ಕೂಡ ಕವಿಚರಿತಕಾರರು 'ಶ್ರೀ' ಎಂಬ ಪದವನ್ನು ಬಿಟ್ಟು ಕೇವಲ ಸಮುದಾಯದ ಮಾಘಣಂದಿ ಎಂದು ಇವನನ್ನು ಕರೆಯುವುದಕ್ಕೆ ಕಾರಣವೇನೆಂಬುದು ನನಗೆ ಗೊತ್ತಿಲ್ಲ.

* ಈ ಬೇಲೂರು ೧೩೩ನೆಯ ಶಿಲಾಲೇಖನದಲ್ಲಿ ಉಕ್ತವಾಗಿರುವ ಕುಲಭೂಷಣನೇ ಮೊದ ಲಾದ ಜೈನಗುರುಗಳ ಪರಂಪರೆಯೇ ಶ್ರವಣಬೆಳ್ಗೊಳದ ಒಂದು ಶಿಲಾಲೇಖನದಲ್ಲಿಯೂ (ಹಳೇ ನಂಬರು ೪೧; ಹೊಸ ನಂಬರು ೬೫) ಕೂಡ ಉಕ್ತವಾಗಿರುವುದು. ಶ್ರವಣಬೆಳ್ಗೊಳದ ಶಾಸನ ಗಳನ್ನು ಪರಿಷ್ಕರಿಸಿ ಎರಡನೆಯ ಆವೃತ್ತಿ ಪ್ರಕಾಶಪಡಿಸಿರುವ ಕವಿಚರಿತಕಾರರಾದ ಮ|| ಆರ್.

ಮೂಲಸಂಘದ ದೇಶಿಯಗಣದ ಪುಸ್ತಕಗಚ್ಛದ ಕುಂದಕುಂದಾನ್ವಯದ ಇಂಗಳೇಶ್ವರದ ಬಳಿಯ ಶ್ರೀಸಮುದಾಯಕ್ಕೆ ಸೇರಿದವನೆಂದೂ, ಗಂಡವಿಮುಕ್ತಸಿದ್ಧಾಂತದೇವನ ಶಿಷ್ಯನಾದ ಚಾರುಕೀರ್ತಿಯ ಶಿಷ್ಯನೆಂದೂ, ನೇಮಿಚಂದ್ರಭಟ್ಟಾರಕ ಅಭಯಚಂದ್ರಭಟ್ಟಾರಕರ ಗುರುವೆಂದೂ ಸ್ಪಷ್ಟವಾಗಿರುವುದಷ್ಟೆ. ಈ ಮಾಘನಂದಿಯು ಮೂಲಸಂಘದ ಬಲಾತ್ಕಾರಗಣಕ್ಕೆ ಸೇರಿದ ಕುಮುದಚಂದ್ರನ ಶಿಷ್ಯನಾದ ಶಾಸ್ತ್ರಸಾರಸಮುಚ್ಚಯವೇ ಮೊದಲಾದ ಗ್ರಂಥಗಳ ಕರ್ತೃವಾದ ಮಾಘನಂದಿಯಿಂದ ಭಿನ್ನನೆಂಬುದು ಸ್ವತಃ ವ್ಯಕ್ತವಾಗಿರುವುದು. ಆದುದರಿಂದ ಶಾಸ್ತ್ರಸಾರಸಮುಚ್ಚಯವೇ ಮೊದಲಾದ ಗ್ರಂಥಗಳ ಕರ್ತೃವಾದ ಮಾಘಣಂದಿಯನ್ನು ' ಸಮುದಾ

---

ನರಸಿಂಹಾಚಾರ್ಯರು ಈ ಪರಂಪರೆಯಲ್ಲಿ ಕೀರ್ತಿತರಾದ ಗುರುಗಳು ಇಂಥವರೆಂದು ಗುರುತು ಹಿಡಿಯದೆ (ಅವರು ಬರೆದಿರುವ ಆಂಗ್ಲ ಉಪೋದ್ಘಾತದ ೮೬ ನೇ ಪುಟದಲ್ಲಿರುವ 'Then follows another succession of gurus without any intimation as to its connection with the previous one' ಎಂಬ ವಾಕ್ಯವನ್ನು ನೋಡಿ) ಈ ಶಿಲಾಲೇಖನವನ್ನು ತಪ್ಪಾಗಿ ಅರ್ಥಮಾಡಿಕೊಂಡಿರುವರು. ಈ ಶಿಲಾಲೇಖನದಲ್ಲಿ ಮೊದಲು




ಎಂಬ ಗುರುಪರಂಪರೆಯು ಹೇಳಲ್ಪಟ್ಟಿರುವುದೆಂದೂ, ತದನಂತರ



ಯದ ಮಾಘಣಂದಿ' ಅಥವಾ 'ಶ್ರೀ ಸಮುದಾಯದ ಮಾಘಣಂದಿ' ಎಂದು ವ್ಯವಹರಿಸುವುದು ಅನುಚಿತವೆಂದೂ ಸಿದ್ಧವಾಯಿತು.

ಕವಿಚರಿತಕಾರರಾದ ಮ|| ಆರ್. ನರಸಿಂಹಾಚಾರ್ಯರಿಂದ ಬರೆಯಲ್ಪಟ್ಟಿರುವ ೧೯೧೦-೧೯೧೧ನೆಯ ವರ್ಷದ ಮೈಸೂರ್ ಆರ್ಕೆಯಲಾಜಿಕಲ್ ಸರ್ವೆ

---

ಅಭಯಶಶಿ

|

ಬಾಲೇಂದು

|

ರಾಮಚಂದ್ರ

ಎಂಬ ಗುರುಪರಂಪರೆಯು ಕೊಡಲ್ಪಟ್ಟಿರುವುದೆಂದೂ, ಈ ದ್ವಿತೀಯ ಪರಂಪರೆಯಲ್ಲಿ ಕೀರ್ತಿತರಾದ ಗುರುಗಳಿಗೂ ಪ್ರಥಮಪರಂಪರೆಯಲ್ಲಿ ಪ್ರೋಕ್ತರಾದವರಿಗೂ ಏನು ಸಂಬಂಧವೆಂದು ಹೇಳಲ್ಪಟ್ಟಿಲ್ಲವೆಂದೂ ಮ|| ನರಸಿಂಹಾಚಾರ್ಯರು ಅಭಿಪ್ರಾಯಪಟ್ಟಿರುವರು (ಉಕ್ತ ಉಪೋದ್ಘಾತದ ೮೬ನೆಯ ಪುಟ).

ಇದು ತಪ್ಪು. ಇಲ್ಲಿ ಮ|| ನರಸಿಂಹಾಚಾರ್ಯರು ಕೊಟ್ಟಿರುವ ಎರಡನೆಯ ಪರಂಪರೆಯ ಅಂತ್ಯದಲ್ಲಿ ಉಕ್ತನಾಗಿರುವ ರಾಮಚಂದ್ರನೇ ಅವರು ಕೊಟ್ಟಿರುವ ಒಂದನೆಯ ಪರಂಪರೆಯಲ್ಲಿ ನಾಲ್ಕನೆಯವನೂ ಶುಭಚಂದ್ರನ ಗುರುವೂ ಆದ ರಾಮಚಂದ್ರ-ಮಲಧಾರಿ ಎಂಬವನು. ಈ ರಾಮಚಂದ್ರ-ಮಲಧಾರಿಯೂ, ಇವನ ಶಿಷ್ಯ ಶುಭಚಂದ್ರನೂ, ಮತ್ತು ಈ ರಾಮಚಂದ್ರಮಲಧಾರಿಯ ಗುರುವಾದ ದ್ರವ್ಯಸಂಗ್ರಹಸೂತ್ರಟೀಕೆಯನ್ನು ಬರೆದ ಬಾಲಚಂದ್ರಪಂಡಿತನೂ, ಈ ಮೂವರೂ ಮೇಲೆ ಹೇಳಿದ ಬೇಲೂರು ೧೩೪ನೆಯ ಶಿಲಾಲೇಖನದಲ್ಲಿ ಕೀರ್ತಿತರಾಗಿರುವರಲ್ಲದೆ, ಈ ರಾಮಚಂದ್ರಮಲಧಾರಿಯು ಶಕವರ್ಷ ೧೨೨೨ನೆಯ ಶಾರ್ವರಿ ಸಂವತ್ಸರದ ಚೈತ್ರಬಹುಳ ತದಿಗೆ ಬೃಹವಾರದಂದು (ಎಂದರೆ, ಕ್ರಿ. ಶ. ೧೩೦೦ನೆಯ ಏಪ್ರಿಲ್ ೮ನೇ ತಾರೀಖು ಬೃಹಸ್ಪತಿವಾರದ ದಿವಸ) ಸ್ವರ್ಗಗತನಾದನೆಂದು ಕೂಡ ಈ ಶಿಲಾಲೇಖನದಲ್ಲಿ ಹೇಳಲ್ಪಟ್ಟಿರುವುದು. ಆದುದರಿಂದ ಶ್ರ. ಬೆ. ೪೧ (೬೫) ನೆಯ ಶಿಲಾಲೇಖನದಲ್ಲಿನ ಮೊದಲನೆಯ ಗುರುಪರಂಪರೆಯಲ್ಲಿ ಶುಭಚಂದ್ರನ ಗುರುವೆಂದು ಕೀರ್ತಿತನಾದ ಮಲಧಾರಿ-ರಾಮಚಂದ್ರನೂ, ಎರಡನೆಯ ಪರಂಪರೆಯಲ್ಲಿ ಅಭಯೇಂದುವಿನ (ಎಂದರೆ, ಅಭಯಚಂದ್ರನ) ಶಿಷ್ಯನಾದ ಬಾಲೇಂದುವಿನ (ಎಂದರೆ, ಬಾಲಚಂದ್ರನ) ಶಿಷ್ಯನೆಂದು ಹೇಳಲ್ಪಟ್ಟಿರುವ ರಾಮಚಂದ್ರನೂ ಅಭಿನ್ನರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಹೀಗೆಯೇ ಈ ಶ್ರ. ಬೆ. ಶಿಲಾಲೇಖನದಲ್ಲಿ ಕುಲಭೂಷಣನೇ ಆದಿಯಾಗಿ ಬಾಲೇಂದುವಿನ (ಎಂದರೆ, ಬಾಲಚಂದ್ರನ) ಶಿಷ್ಯನಾದ ರಾಮಚಂದ್ರನವರೆಗೆ ಹೇಳಲ್ಪಟ್ಟಿರುವ ಗುರುಪರಂಪರೆಯೂ, ಬೇಲೂರು ೧೩೩, ೧೩೪ನೆ ಶಿಲಾಲೇಖನಗಳಲ್ಲಿ ಕುಲಭೂಷಣನೇ ಆದಿಯಾಗಿ ಶುಭಚಂದ್ರದೇವನವರೆಗೆ ಹೇಳಲ್ಪಟ್ಟಿರುವ ಗುರುಪರಂಪರೆಯೂ ಒಂದೇ ಎಂಬುದರಲ್ಲಿ ಕೂಡ ಯಾವ ಸಂದೇಹವೂ ಇಲ್ಲ. ಕೇವಲ, ಈ ಬೇಲೂರು ೧೩೩ನೆಯ ಶಿಲಾಲೇಖನದಲ್ಲಿ 'ಶುಭನಂದಿಯಾದ ಗಂಧವಿಮುಕ್ತದೇವನು (ಗಂಡವಿಮುಕ್ತದೇವನು)' ಎಂದು ಕೀರ್ತಿತನಾದ ಮಾಘನಂದಿ ಶಿಷ್ಯನು ಮೇಲಿನ ಶ್ರ. ಬೆ. ಶಾಸನದಲ್ಲಿ 'ಶುಭಚಂದ್ರ-ತ್ರೈವಿದ್ಯ' ನೆಂದು ಕೀರ್ತಿಸಲ್ಪಟ್ಟಿರುವನು. ಆದುದರಿಂದ

ವಾರ್ಷಿಕ ರಿಪೋರ್ಟಿನ ೪೭-೪೯ನೆಯ ಪುಟಗಳಲ್ಲಿ († ೧೦೬) ಹಳೇಬೀಡಿನಲ್ಲಿ ಬೆಣ್ಣೆಗುಡ್ಡದ ಉತ್ತರಕ್ಕೆ ಒಂದು ನೆಲಮಾಳಿಗೆಯಲ್ಲಿರುವ ಒಂದು ಶಿಲಾಲೇಖನದಲ್ಲಿ ಉಕ್ತವಾಗಿರುವ ವಿಷಯಗಳು ಸಂಕ್ಷೇಪದಿಂದ ನಿರೂಪಿಸಲ್ಪಟ್ಟಿರುವುವು. ಮೂಲ ಸಂಘದ ಬಲಾತ್ಕಾರಗಣದ ಶ್ರೀಧರ-ತ್ರೈವಿದ್ಯ ; ಅವನ ಶಿಷ್ಯ ಪದ್ಮನಂದಿ-ತ್ರೈವಿದ್ಯ ; ಅವನ ಶಿಷ್ಯ ವಾಸುಪೂಜ್ಯ-ಸಿದ್ಧಾಂತಿ ; ಅವನ ಶಿಷ್ಯ ಶುಭಚಂದ್ರ ಭಟ್ಟಾರಕ ; ಅವನ ಶಿಷ್ಯ ಅಭಯನಂದಿ ಭಟ್ಟಾರಕ ; ಅವನ ಶಿಷ್ಯರಾದ ಅರುಹನಂದಿಸಿದ್ಧಾಂತಿ, ದೇವಚಂದ್ರಸಿದ್ಧಾಂತಿ, ಅಷ್ಟೋಪವಾಸಿ ಕನಕಚಂದ್ರಸಿದ್ಧಾಂತಿ, ನಯಕೀರ್ತಿಸಿದ್ಧಾಂತಿ, ಮಾಸೋಪವಾಸಿ ರವಿಚಂದ್ರಸಿದ್ಧಾಂತಿ, ಹರಿಯನಂದಿಸಿದ್ಧಾಂತಿ, ಶ್ರುತಕೀರ್ತಿ-ತ್ರೈವಿದ್ಯ, ವೀರಣಂದಿಸಿದ್ಧಾಂತಿ, ಗಂಡವಿಮುಕ್ತ-ನೇ

---

ಈ ಮಾಘನಂದಿಯ ಶಿಷ್ಯನ ನಿಜವಾದ ಹೆಸರು 'ಶುಭಚಂದ್ರ' ಎಂದೂ, 'ಗಂಡವಿಮುಕ್ತದೇವ' ಎಂಬುದು ಇವನ ಉಪನಾಮವೆಂದೂ ಸಿದ್ಧವಾಯಿತು.

ಈ ಮಾಘನಂದಿಯು ಈ ಬೇಲೂರು ೧೩೩ನೆಯ ಶಾಸನದಲ್ಲಿ 'ಊರ್ಜಿತ ಜಿನಾಲಯ ಕಾರಕ-ನಿಂಬದೇವಸಾಮಂತನ ಶುವ್ರತಕ್ಕೆ ಗುರು' ಎಂದು ಹೊಗಳಲ್ಪಟ್ಟಿರುವುದರಿಂದ, ನಾವು ಮೇಲೆ (ಪುಟ ೧೧; ೪೬) ಪ್ರಸ್ತಾವಮಾಡಿರುವ ಮಾಘನಂದಿಯೇ ಆಗಿರುವನು. ಇವನ ಶಿಷ್ಯನಾದ 'ಶುಭಚಂದ್ರ' ಎಂಬ ಹೆಸರುಳ್ಳ ಗಂಡವಿಮುಕ್ತದೇವನೂ ಕೂಡ ನಾವು ಮೇಲೆ (ಪುಟ ೧೧; ೪೬) ಪ್ರಸ್ತಾವಮಾಡಿರುವ ಗಂಡವಿಮುಕ್ತಸಿದ್ಧಾಂತದೇವನೇ ಆಗಿರುವನು. ಈ ಬೇಲೂರಿನ ಶಾಸನದಲ್ಲಿಯೂ ಮತ್ತು ಶ್ರ.ಬೆ. ೪೧ (೬೫) ನೆಯ ಶಾಸನದಲ್ಲಿಯೂ ಮಾಘನಂದಿಯ ಗುರುವೆಂದು ಕೀರ್ತಿತನಾಗಿರುವ ಕುಲಭೂಷಣನು ವಾಸ್ತವವಾಗಿ ಮಾಘನಂದಿಯ ಗುರುವಿನ ಗುರುವಾಗಿದ್ದನೆಂಬುದು ಶ್ರ. ಬೆ. ೪೦ (೪೬) ನೆಯ ಶಾಸನದಿಂದ ವ್ಯಕ್ತವಾಗುವುದು. ಮಾಘನಂದಿಯ ನಿಜವಾದ ಗುರುವು ಕುಲಚಂದ್ರನೆಂಬುದು ಇದೇ ಶ್ರ.ಬೆ. ಶಾಸನದಿಂದಲೂ ಮೇಲೆ (ಪುಟ ೪೬) ನಿರ್ದಿಷ್ಟವಾದ ತೇರ್ದಾಳದ ಶಾಸನದಿಂದಲೂ ಸ್ಪಷ್ಟವಾಗುವುದು.

ಆದುದರಿಂದ ಪ್ರಕೃತ ಶ್ರ. ಬೆ. ೪೧ (೬೫) ನೆಯ ಶಾಸನದಲ್ಲಿ ಮೇಘಚಂದ್ರ, ವೀರಣಂದಿ, ಅನಂತಕೀರ್ತಿ ಮುನಿಗಳನ್ನು ಸ್ತುತಿಸುವ ಮೊದಲು ಐದು ಶ್ಲೋಕಗಳಿಗೆ ಒಂದು ಭಾಗವೆಂದೂ, ಉಳಿದುದೆಲ್ಲಾ ಇನ್ನೊಂದು ಭಾಗವೆಂದೂ ನಾವು ತಿಳಿಯಬೇಕು. ಈ ಎರಡನೆಯ ಭಾಗದಲ್ಲಿ ರಾಮಚಂದ್ರ-ಮಲಧಾರಿಯ ಶಿಷ್ಯನಾದ ಶುಭಚಂದ್ರಮುನಿಯು ಸ್ವರ್ಗಗತನಾದ ವಿಷಯವೂ, ಅವನ ಗುರುಪರಂಪರೆಯೂ, ಅವನ ಶಿಷ್ಯರ ಸ್ತುತಿಯೂ, ಅವರು ಇವನಿಗೆ ನಿಷಿದಿಗೆಯನ್ನು ಮಾಡಿಸಿದರೆಂಬ ವಿಷಯವೂ, ಇವೆಲ್ಲವೂ ಹೇಳಲ್ಪಟ್ಟಿರುವುವು.

† ಶ್ರವಣಬೆಳ್ಗೊಳದ ಶಾಸನಗಳ ಎರಡನೆಯ ಮುದ್ರಣದ ೧೬೬ (ರೋಮನ್), ೧೫೦ (ಕನ್ನಡ) ನೇ ಪುಟಗಳಲ್ಲಿ ಮುದ್ರಿತವಾಗಿರುವ ೩೪೭ನೆಯ ಶಾಸನದಲ್ಲಿಯೂ ಕೂಡ ಇದೇ ಗುರುಪರಂಪರೆಯೇ ಕೀರ್ತಿತವಾಗಿರುವುದು. ೧೯-೨೦ನೇ ಪಂಕ್ತಿಗಳಲ್ಲಿ ಮಧ್ಯಾಹ್ನಕಲ್ಪವೃಕ್ಷವಾಸುಪೂಜ್ಯಯತಿಯೂ, ೨೯-೩೦ನೇ ಪಂಕ್ತಿಗಳಲ್ಲಿ ಅಭಿನವಸಾರಚತುಷ್ಟಯಕರ್ತೃ ಸಿದ್ಧಾಂತಿಚಕ್ರವರ್ತಿ ಮಾಘನಂದಿಯೂ ಹೊಗಳಲ್ಪಟ್ಟಿರುವರು.

ಮಿಚಂದ್ರಭಟ್ಟಾರಕ, ಗುಣಚಂದ್ರಭಟ್ಟಾರಕ, ಜಿನಚಂದ್ರಭಟ್ಟಾರಕ, ವರ್ಧಮಾನಭಟ್ಟಾರಕ, ಶ್ರೀಧರಸಿದ್ಧಾಂತಿ, ವಾಸುಪೂಜ್ಯ-ತ್ರೈವಿದ್ಯ, ವಿದ್ಯಾನಂದಸ್ವಾಮಿ, ಕಟಕೋಪಾಧ್ಯಾಯ-ಶ್ರುತಕೀರ್ತಿಸಿದ್ಧಾಂತಿ, ವಾದಿವಿಶ್ವಾಸಘಾತಕ ಮಲೆಯಾಳ ಪಾಂಡ್ಯದೇವ, ನೇಮಿಚಂದ್ರಭಟ್ಟಾರಕ ಮತ್ತು ಮಧ್ಯಾಹ್ನಕಲ್ಪವೃಕ್ಷ ವಾಸುಪೂಜ್ಯಭಟ್ಟಾರಕರು ; ಶ್ರೀಧರದೇವನ ಶಿಷ್ಯ ವಾಸುಪೂಜ್ಯ-ತ್ರೈವಿದ್ಯ ; ಅವನ 'ಮಗ' (ಎಂದರೆ ಶಿಷ್ಯ) ಉದಯೇಂದುಸಿದ್ಧಾಂತಿ ; ಅವನ 'ಮಗ' ಕುಮುದೇಂದುಯೋಗಿ, ಅವನ 'ಮಗ' ಮಾಘನಂದಿ—ಎಂದು ಬಲಾತ್ಕಾರಗಣದ ಈ ಗುರುಪರಂಪರೆಯನ್ನು ಸ್ತುತಿಸಿದನಂತರ, ಅಂತ್ಯದಲ್ಲಿ ಉಕ್ತನಾದ ಈ ಮಾಘನಂದಿಗೆ ನಿಶ್ಯಂಕಪ್ರತಾಪಚಕ್ರವರ್ತಿ ಹೊಯ್ಸಳಭುಜಬಲ ವೀರನಾರಸಿಂಹದೇವನು ಕ್ರಿ. ಶ. ೧೨೬೫ರಲ್ಲಿ ಕಲುಕಣಿನಾಡಿನ ಕಲ್ಲಂಗೆರೆ ಗ್ರಾಮವನ್ನು ಅದಕ್ಕೆ ಸೇರಿದ ೧೪ ಉಪಗ್ರಾಮಗಳ ಸಹಿತವಾಗಿ ದಾನವಾಗಿ ಕೊಟ್ಟನೆಂದು ಈ ಶಾಸನದಲ್ಲಿ ಹೇಳಿರುವುದು. ಅಲ್ಲದೆ, ಈ ಮಾಘನಂದಿಯು ಅಭಿನವಸಾರಚತುಷ್ಟಯದ ಎಂದರೆ ಸಿದ್ಧಾಂತಸಾರ, ಶ್ರಾವಕಾಚಾರಸಾರ, ಪದಾರ್ಥಸಾರ ಮತ್ತು ಶಾಸ್ತ್ರಸಾರಸಮುಚ್ಚಯಗಳ ಕರ್ತೃವೆಂದೂ, ಚತುರ್ವಿಧಪಾಂಡಿತ್ಯಚಕ್ರವರ್ತಿ ಪರವಾದಿಗಂಡಭೇರುಂಡ ಕುಮುದಚಂದ್ರಪಂಡಿತನ ಗುರುವೆಂದೂ ಈ ಶಾಸನದಲ್ಲಿ ನಿರೂಪಿಸಲ್ಪಟ್ಟಿರುವದು.

ಹೀಗೆ ತಮ್ಮಿಂದಲೇ ಕಂಡುಹಿಡಿಯಲ್ಪಟ್ಟು ಅಭಿವರ್ಣಿತವಾದ ಈ ಶಿಲಾಲೇಖನದಲ್ಲಿ ಶಾಸ್ತ್ರಸಾರಸಮುಚ್ಚಯದ ಕರ್ತೃವಾದ ಮಾಘನಂದಿಯು ಬಲತ್ಕಾರಗಣದವನೆಂದೂ, ಕುಮುದೇಂದುಯೋಗಿಯ ಶಿಷ್ಯನೆಂದೂ ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿದ್ದರೂ ಕೂಡ, ಕವಿಚರಿತಕಾರರು ಇವನು ದೇಶೀಯಗಣದ ಪುಸ್ತಕಗಚ್ಛದ ಚಾರುಕೀರ್ತಿಪಂಡಿತನ ಶಿಷ್ಯನಾದ ಮಾಘನಂದಿಯಿಂದ ಅಭಿನ್ನನೆಂದು ಹೇಳಿರುವುದು ನಮಗೆ ಆಶ್ಚರ್ಯವನ್ನುಂಟುಮಾಡುವುದು. ಹೀಗೆಯೇ, ಈ ಮೇಲಿನ ಶಿಲಾಲೇಖನದಲ್ಲಿ ಈ ಮಾಘನಂದಿಯು ಕ್ರಿ. ಶ. ೧೨೬೫ ರಲ್ಲಿ ದಾನವನ್ನು ಪ್ರತಿಗ್ರಹಿಸಿದನೆಂದು ಸ್ಪಷ್ಟವಾಗಿ ಹೇಳಿರುವಾಗ, ಇವನ ಜೀವನಕಾಲವನ್ನು ನಿರ್ಧರಿಸುವುದಕ್ಕಾಗಿ ಕವಿಚರಿತಕಾರರು ಇದನ್ನು ಬಿಟ್ಟು ದ್ರವ್ಯಸಂಗ್ರಹಸೂತ್ರಟೀಕೆಯನ್ನು ಬರೆದ ಬಾಲಚಂದ್ರಪಂಡಿತನ, ಮತ್ತು ರಾಮಾಯಣವನ್ನು ಬರೆದ ಕುಮುದೇಂದುವಿನ ಪ್ರಸ್ತಾವವನ್ನು ಮಾಡಿರುವುದೂ ಕೂಡ ನಮಗೆ ವಿಚಿತ್ರವಾಗಿ ಕಾಣಿಸುವುದು.

ಈ ಮೇಲಿನ ಶಿಲಾಲೇಖನದಲ್ಲಿ ಶ್ರಾವಕಾಚಾರಸಾರವೆಂಬ ಗ್ರಂಥವನ್ನು ಈ ಮಾಘನಂದಿಯು ಬರೆದನೆಂದು ಹೇಳಿರುವುದಷ್ಟೆ. ಕವಿಚರಿತಕಾರರು ಹೇಳಿರುವ

ಮಾಘನಂದಿಕೃತವಾದ ಶ್ರಾವಕಾಚಾರವೆಂಬುದು ಪ್ರಾಯಶಃ ಇದೇ ಗ್ರಂಥವಾಗಿರಬೇಕು. ಈ ಗ್ರಂಥವನ್ನು ಇವನು ಶಕ ೧೧೭೫ ಎಂದರೆ ಕ್ರಿ. ಶ. ೧೨೫೩ ರಲ್ಲಿ ಬರೆದುದರಿಂದ, ಮೇಲೆ ಹೇಳಿದ ಇವನ ಇತರ ಮೂರು ಗ್ರಂಥಗಳೂ ಕೂಡ ಪ್ರಾಯಶಃ ಅದೇ ಕಾಲದಲ್ಲಿಯೇ, ಎಂದರೆ ಕ್ರಿ. ಶ. ೧೨೫೦—೧೨೫೫ ರಲ್ಲಿಯೇ ಬರೆಯಲ್ಪಟ್ಟಿರಬಹುದು.

ಶ್ರವಣಬೆಳ್ಗೊಳದ ೧೨೯ (೩೩೪) ನೆಯ ಶಿಲಾಲೇಖನದ ಉಪಕ್ರಮದಲ್ಲಿ

**ಉಕ್ತಂ ಶ್ರೀಮೂಲಸಂಘೇಸ್ಮಿನ್ಬಲಾತ್ಕಾರಗ............**

**............................ಶಾಸ್ತ್ರಸಾರಾಖ್ಯಶಾಸ್ತ್ರಕೃತ್ ॥**

ಎಂದು ಹೇಳಿ, ತದನಂತರ ಒಬ್ಬ ಕುಮುದಚಂದ್ರದೇವನನ್ನೂ ಒಬ್ಬ ಮಾಘನಂದಿಯನ್ನೂ ಹೊಗಳುವ ಶ್ಲೋಕಗಳು ಹೇಳಲ್ಪಟ್ಟು ಆಮೇಲೆ ಶ್ರೀಮನ್ಮಹಾಮಂಡಲಾಚಾರ್ಯರೂ, ಆಚಾರ್ಯವರ್ಯರೂ ಹೊಯ್ಸಳರಾಯರಾಜಗುರುಗಳೂ ಆದ ಶ್ರೀ ಮಾಘನಂದಿ-ಸೈದ್ಧಾಂತಚಕ್ರವರ್ತಿಗಳ ಕೆಲವು ಗುಡ್ಡುಗಳು ಒಂದು ಜಿನಾಲಯಕ್ಕೆ ಶಕವರ್ಷ ೧೨೦೫ನೆಯ ಚಿತ್ರಭಾನುಸಂವತ್ಸರದ ಶ್ರಾವಣ-ಸು ೧೦ ಬೃಹಸ್ಪತಿವಾರದಂದು ದತ್ತಿಯನ್ನು ಕೊಟ್ಟರೆಂದು ಹೇಳಲ್ಪಟ್ಟಿರುವುದು. ಈ ವಿಶೇಷಣಗಳೆಲ್ಲವೂ ಕುಮುದೇಂದುವಿನ ಶಿಷ್ಯನೂ, ಮೇಲೆ ನಾವು ನೋಡಿದಂತೆ ೧೨೭೫ ರಲ್ಲಿ ಹೊಯ್ಸಳ ಚಕ್ರವರ್ತಿಯಾದ ವೀರನರಸಿಂಹದೇವನಿಂದ ಪೂಜಿತನೂ, ಆದ ಬಲಾತ್ಕಾರಗಣದ ಶಾಸ್ತ್ರಸಾರಾದಿಗ್ರಂಥಗಳ ಕರ್ತೃವಾದ ಮಾಘನಂದಿಯನ್ನೇ ನಿರ್ದೇಶಿಸುವುವಷ್ಟೆ. ಈ ಮಾಘನಂದಿಯು ಮೇಲೆ ಹೇಳಲ್ಪಟ್ಟ ಶ್ರಾವಣಶುದ್ಧ ದಶಮಿಯಲ್ಲಿ, ಎಂದರೆ, ಕ್ರಿ. ಶ. ೧೨೮೨ ನೆಯ ಜೂಲೈ ೧೭ನೇ ತಾರೀಖು ಬೃಹಸ್ಪತಿವಾರದಲ್ಲಿ* ಜೀವಿಸಿದ್ದನೆಂದು ಈ ಶಿಲಾಲೇಖನದ ಪದಗಳಿಂದ ಸೂಚಿತವಾದಂತೆ ತೋರುವುದು.

ಆದುದರಿಂದ ಈ ಮಾಘನಂದಿಯು ಸಿದ್ಧಾಂತಸಾರ,† ಪದಾರ್ಥಸಾರ, ಶ್ರಾವಕಾಚಾರಸಾರ, ಮತ್ತು ಶಾಸ್ತ್ರಸಾರಸಮುಚ್ಚಯ ಎಂಬ ನಾಲ್ಕು ಗ್ರಂಥಗಳನ್ನು ಸುಮಾರು ಕ್ರಿ. ಶ. ೧೨೫೦—೧೨೫೫ ರಲ್ಲಿ ಬರೆದನೆಂದೂ ಅವನು ಕ್ರಿ. ಶ. ೧೨೮೨ ರಲ್ಲಿ ಕೂಡ ಜೀವಿಸುತ್ತಿದ್ದನೆಂದೂ ಕೂಡ ನಾವು ಹೇಳಬಹುದು.

---

* ಎಪಿಗ್ರಾಫಿಯ ಇಂಡಿಕ, ಸಂಪುಟ ೭, ಅನುಬಂಧ, ಪುಟ ೧೫೭, ನಂಬರು ೯೮೦ ನ್ನು ನೋಡಿ.

† ಈ ಗ್ರಂಥವನ್ನು ಕವಿಚರಿತಕಾರರು ಹೇಳಿಲ್ಲ. ಆದರೂ ಮೇಲೆ ಹೇಳಿದ ಹಳೇಬೀಡಿನ ಶಿಲಾಲೇಖನದಲ್ಲಿ ಈ ಗ್ರಂಥವು ಮಾಘನಂದಿ ಕೃತವೆಂದು ಹೇಳಲ್ಪಟ್ಟಿರುವುದರಿಂದ, ಇದರ ಹೆಸರನ್ನು ನಾವು ಮೇಲೆ ಮಾಘನಂದಿ ಕೃತಗ್ರಂಥಗಳಲ್ಲಿ ಸೇರಿಸಿರುವೆವು. ಪದಾರ್ಥಸಾರ, ಶ್ರಾವಕಾಚಾರಸಾರ, ಶಾಸ್ತ್ರಸಾರಸಮುಚ್ಚಯಗಳಂತೆಯೇ ಈ ಗ್ರಂಥವೂ ಕನ್ನಡದಲ್ಲಿ ಬರೆಯಲ್ಪಟ್ಟಿರಬೇಕೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

## ೩ ತಲಕಾಡು.

ತಲಕಾಡು ಮೈಸೂರು ದೇಶದ ಪ್ರಾಚೀನ ಪಟ್ಟಣಗಳಲ್ಲಿ ಒಂದಾಗಿದೆ. ಈಗ ಇದು ಮರಳ ಕಾಡಾಗಿದ್ದರೂ ಒಂದಾನೊಂದು ಕಾಲದಲ್ಲಿ ಪ್ರಬಲವಾದ ರಾಜ್ಯಕ್ಕೆ ರಾಜಧಾನಿಯಾಗಿತ್ತು. ಇದು ಮೈಸೂರಿನಿಂದ ೨೮ ಮೈಲಿಯ ದೂರದಲ್ಲಿ ಕಾವೇರಿಯ ಎಡತೀರದ ಮೇಲಿದೆ. ಕಾವೇರಿಯು ಈ ಡಿಸ್ಟ್ರಿಕ್ಟಿನಲ್ಲಿ ಪೂರ್ವಕ್ಕೆ ಹರಿದು ತಿರುಮಕೂಡ್ಲು-ನರಸಿಪುರದಲ್ಲಿ ಕಪಿಲಾನದಿಯನ್ನು ಸ್ವೀಕರಿಸಿ ತಟ್ಟನೆ ದಕ್ಷಿಣಾಭಿಮುಖವಾಗಿ ತಲಕಾಡಿನ ಮಗ್ಗುಲಲ್ಲಿಯೇ ಹೋಗಿ ಪುನಃ ಪೂರ್ವಾಭಿಮುಖವಾಗುತ್ತದೆ. ಅನಂತರ ಉತ್ತರಕ್ಕೆ ಹರಿದು ಶಿವಸಮುದ್ರಕ್ಕೆ ಹೋಗುತ್ತದೆ.

ತಲಕಾಡು ೧೮೬೮ನೆ ಇಸವಿಯವರೆಗೂ ಅದೇ ಹೆಸರಿನ ತಾಲ್ಲೂಕಿಗೆ ಮುಖ್ಯ ಸ್ಥಳವಾಗಿತ್ತು. ಆ ಇಸವಿಯಲ್ಲಿ ತಾಲ್ಲೂಕು ಕಚೇರಿಯು ತಿರುಮಕೂಡ್ಲು-ನರಸೀಪುರಕ್ಕೆ ಹೋದದ್ದಲ್ಲದೆ ೧೮೮೨ರಲ್ಲಿ ಈ ತಾಲ್ಲೂಕಿಗೂ ತಿರುಮಕೂಡ್ಲು-ನರಸೀಪುರದ ತಾಲ್ಲೂಕು ಎಂದೂ ಹೆಸರು ಕೊಡಲ್ಪಟ್ಟಿತು.

ಈ ಊರಿಗೆ ಸಂಸ್ಕೃತದಲ್ಲಿ 'ದಲವನಪುರ' ವೆಂದೂ ತಮಿಳಿನಲ್ಲಿ ತಲೈಕ್ಕಾಡು, ಎಂದೂ ಕನ್ನಡದಲ್ಲಿ ತಲೆಕಾಡು ಅಥವಾ ತಲಕಾಡು ಎಂದೂ ಹೆಸರು. ಚೋಳರು ಈ ಊರನ್ನು ಜಯಿಸಿದಾಗ ಇದಕ್ಕೆ ರಾಜರಾಜಪುರನೆಂದು ಹೆಸರಿಟ್ಟರು; ಆದರೆ ಇದು ಬಹಳ ದಿವಸ ನಿಲ್ಲಲಿಲ್ಲ; ಕ್ರಿ. ಶ. ೧೧೧೬ರಲ್ಲಿ ಚೋಳರು ಹೋದಮೇಲೆ ಹಳೆಯ ಹೆಸರೇ ಪುನಃ ಬಂದುನಿಂತಿತು.

ಈ ಊರಿಗೆ ಹೋಗುವುದಕ್ಕೆ ಮೂರು ದಾರಿಗಳಿವೆ. ಮೊದಲನೆಯದು—ತಿರುಮಕೂಡ್ಲು-ನರಸಿಪುರದಿಂದ ಹೋಗುವುದು; ಇಲ್ಲಿಗೂ ಅಲ್ಲಿಗೂ ಎಂಟು ಮೈಲಿ; ಈ ದಾರಿಯಲ್ಲಿ ತಿರುಮಕೂಡ್ಲು-ನರಸಿಪುರದ ಹತ್ತಿರ ಒಂದುಸಲ, ತಲಕಾಡಿನ ಹತ್ತಿರ ಒಂದುಸಲ, ಈ ರೀತಿ ಎರಡುಸಲ

ಹೊಳೆಯನ್ನು ದಾಟಬೇಕಾಗುತ್ತದೆ. ಈ ಎರಡು ಕಡೆಗಳಲ್ಲಿಯೂ ಸೇತುವೆಯಿಲ್ಲದ್ದರಿಂದ ಹೊಳೆಯನ್ನು ದೋಣಿಯಲ್ಲಿ ಹಾಯಬೇಕು. ಎರಡನೆಯದು—ಶ್ರೀರಂಗಪಟ್ಟಣದಿಂದ ಬನ್ನೂರು ಮತ್ತು ಸೋಸಲೆಗಳ ಮಾರ್ಗವಾಗಿ ಹೋಗತಕ್ಕದ್ದು. ಇದು ಸುಮಾರು ೪೨ ಮೈಲಿಯಾಗುತ್ತದೆ. ಮೂರನೆಯದು—ಮದ್ದೂರಿನಿಂದ ಮಳವಳ್ಳಿ ಮತ್ತು ಶಿವಸಮುದ್ರಗಳ ಮಾರ್ಗವಾಗಿ ಹೋಗತಕ್ಕದ್ದು. ಇದು ಸುಮಾರು ಐವತ್ತು ಮೈಲಿಯಾಗುತ್ತದೆ. ಬೆಂಗಳೂರಿನಿಂದ ಬರತಕ್ಕವರಿಗೆ ಇದೇ ಅನುಕೂಲವಾದದ್ದು.

ತಲಕಾಡು ಹುಟ್ಟಿದ್ದು ಪ್ರಾಚೀನತೆಯ ಮಬ್ಬಿನಲ್ಲಿ ಮುಚ್ಚಿಹೋಗಿದೆ. ಶ್ರೀರಾಮರು ಲಂಕೆಗೆ ಹೋಗುವಾಗ ಇಲ್ಲಿ ತಂಗಿದ್ದರಂತೆ; ಸೂರ್ಯವಂಶಜನಾದ ದಿಲೀಪಚಕ್ರವರ್ತಿಯ ಮಗ ಸಗರನು ಹುಟ್ಟಿದ್ದು ಇಲ್ಲಿಯೇಯಂತೆ. ಸ್ಥಳಪುರಾಣವು ಸ್ಕಾಂದಪುರಾಣೋಕ್ತವಾದ ಗಜಾರಣ್ಯಕ್ಷೇತ್ರವು ಇದೇ ಎಂದು ಹೇಳುತ್ತದೆ. ಈ ಪುರಾಣದಿಂದ ತಿಳಿದುಬರುವ ಅಂಶಗಳೇನೆಂದರೆ :—

ಪೂರ್ವದಲ್ಲಿ ಇದು ಋಚೀಕ ಮಹಾಮುನಿಗಳ ಸಿದ್ಧಾಶ್ರಮವಾಗಿತ್ತು. ಕಾಶಿಯ ವಿಶ್ವೇಶ್ವರಸ್ವಾಮಿಯು ಸೋಮದತ್ತ ಋಷಿಗಳನ್ನೂ ಅವರ ಶಿಷ್ಯರನ್ನೂ ಈ ಕ್ಷೇತ್ರಕ್ಕೆ ಹೋಗಿ ತಪಸ್ಸುಮಾಡಬೇಕೆಂದು ನಿಯಮಿಸಿದನು. ಅವರು ಬರುತ್ತ ದಾರಿಯಲ್ಲಿ ಕಾಡಾನೆಗಳ ಕೈಗೆ ಸಿಕ್ಕಿ ಹತರಾದರು. ಸಾಯುವಾಗ ಅವರು ಆನೆಯ ಯೋಚನೆಯಲ್ಲಿಯೇ ಇದ್ದದ್ದರಿಂದ ಅವರೂ ಅವರ ಶಿಷ್ಯರೂ ಆನೆಯ ಜನ್ಮವನ್ನು ಪಡೆದು ಸಿದ್ಧಾಶ್ರಮವನ್ನು ತಲಪಿದರು. ಈ ಮಧ್ಯೆ ವಿಶ್ವೇಶ್ವರನು ಮಣಿಕರ್ಣಿಕೆಯೊಡನೆ ಸಿದ್ಧಾರಣ್ಯಕ್ಷೇತ್ರಕ್ಕೆ ಬಂದು ಶಾಲ್ಮಲೀವೃಕ್ಷ (ಬೂರುಗದ ಮರ) ದ ಬುಡದಲ್ಲಿ ನೆಲಸಿದನು. ಮಣಿಕರ್ಣಿಕೆಯು ಸ್ವಚ್ಛವಾದ ನೀರುಳ್ಳ "ಗೋಕರ್ಣತೀರ್ಥ" ವೆಂಬ ಸರಸ್ಸಾದಳು. ಆನೆಗಳಾಗಿದ್ದ ಸೋಮದತ್ತ ಮತ್ತು ಆತನ ಶಿಷ್ಯರು ಪ್ರತಿನಿತ್ಯವೂ ಗೋಕರ್ಣದಲ್ಲಿ ಸ್ನಾನಮಾಡಿ ತಾವರೆಗ

ಳನ್ನು ಕಿತ್ತು ಅವುಗಳಿಂದ ಶಾಲ್ಮಲಿಯ ಬುಡದಲ್ಲಿದ್ದ ಈಶ್ವರನನ್ನು ಆರಾಧಿಸುತ್ತಿದ್ದರು. ಇದನ್ನು ನೋಡಿದ 'ತಲ,' 'ಕಾಡ' ಎಂಬ ಇಬ್ಬರು ಬೇಡರು ಆ ಬೂರುಗದ ಮರದಲ್ಲಿ ಏನಿದೆಯೋ ನೋಡೋಣವೆಂದು ಅದನ್ನು ಕಡಿಯುತ್ತಿರಲು ಅವರ ಕೊಡಲಿಯು ಶಿವಲಿಂಗಕ್ಕೆ ತಗಲಿ ಅದರಿಂದ ಛಿಲ್ಲನೆ ರಕ್ತವು ಹೊರಟಿತು. ಇದನ್ನು ನೋಡಿ ಅವರಿಗೆ ಆಶ್ಚರ್ಯವಾಗಿ ಶಿವಲಿಂಗವನ್ನು ಒಡೆದ ಮಹಾಪಾತಕಕ್ಕೆ ಗುರಿಯಾದೆವಲ್ಲಾ ಎಂಬ ಗಾಬರಿಯಿಂದ ಮೂರ್ಛೆಹೋದರು. ಸ್ವಲ್ಪ ಹೊತ್ತಿನಮೇಲೆ ಎಚ್ಚೆತ್ತು ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ದೇವರನ್ನು ಪ್ರಾರ್ಥಿಸಲು, ರಕ್ತಬಂದ ಕಡೆಗೆ ಬೂರಗದ ಗಿಡದ ಹಾಲನ್ನು ಸವರಬೇಕೆಂದು ಒಂದು ಅಶರೀರವಾಣಿಯು ಕೇಳಿಸಿತು. ಹಾಗೇ ಮಾಡಲು ಕೂಡಲೆ ವ್ರಣವು ವಾಸಿಯಾಗಿಹೋಯಿತು. ಈ ಮಧ್ಯೆ ಶಿವಲಿಂಗದಿಂದ ಹರಿದ ರಕ್ತವು ಹಾಲಾಗಿತ್ತು; ಅದನ್ನು ದೇವರ ಆಜ್ಞೆಯನುಸರಿಸಿ ಪಾನಮಾಡಲು ಅವರು ತತ್ಕ್ಷಣವೇ ಪ್ರಮಥಗಣಗಳಾದರು.

ಈ ಸ್ಥಳಕ್ಕೆ ಅಲ್ಲಿಂದ ಮುಂದೆ ಗಜಾರಣ್ಯಕ್ಷೇತ್ರವೆಂದೂ, ಈ ಬೇಡರ ಹೆಸರನ್ನು ಅನುಸರಿಸಿ ತಲಕಾಡೆಂದೂ ಹೆಸರಾಯಿತು. ವೀರಭದ್ರ ದೇವಾಲಯದ ಮುಂದೆ ಇಂದಿಗೂ ಇರುವ ಎರಡು ಶಿಲಾವಿಗ್ರಹಗಳು ಅವರ ಪ್ರತಿಮೆಗಳೆಂದು ತೋರಿಸುತ್ತಾರೆ. ಈಶ್ವರನು ಔಷಧವನ್ನು ತಾನೇ ಹೇಳಿದ್ದರಿಂದ ವೈದ್ಯೇಶ್ವರನೆಂದು ಪ್ರಸಿದ್ಧನಾದನು. ಆ ದೇವರೇ ಉತ್ತರ ವಾಹಿನಿಯ ದಡದಮೇಲೆ ಅರ್ಕೇಶ್ವರನಾಗಿ ಉದ್ಭವಿಸಿ ಸೂರ್ಯನಿಂದಲೂ, ಪೂರ್ವವಾಹಿನಿಯ ದಡದಮೇಲೆ ಪಾತಾಳೇಶ್ವರನಾಗಿ ಉದ್ಭವಿಸಿ ವಾಸುಕಿಯಿಂದಲೂ, ದಕ್ಷಿಣವಾಹಿನಿಯ ದಡದಮೇಲೆ ಸೈಕತೇಶ್ವರನಾಗಿ ಉದ್ಭವಿಸಿ ಬ್ರಹ್ಮನಿಂದಲೂ, ಪಶ್ಚಿಮವಾಹಿನಿಯ ದಡದಮೇಲೆ ಮಲ್ಲಿಕಾರ್ಜುನನಾಗಿ ಉದ್ಭವಿಸಿ ಕಾಮಧೇನುವಿನಿಂದಲೂ ಪೂಜಿತನಾದನು. ಈ ಐದುಲಿಂಗಗಳೂ ಈಶ್ವರನ ಐದುಮುಖಗಳೆಂದು ಭಾವಿಸಲ್ಪಟ್ಟಿರುವುವು.



ವೈದ್ಯೇಶ್ವರ ದೇವಾಲಯ.

ಇವುಗಳಲ್ಲಿ ಒಂದೊಂದರ ಅರ್ಚನೆಗೂ ಬೇರೆಬೇರೆ ದಿವಸಗಳು ನಿರ್ದೇಶಿಸ ಲ್ಪಟ್ಟಿವೆ. ವೃಶ್ಚಿಕಮಾಸದಲ್ಲಿ ಕಾರ್ತಿಕ-ಸೋಮವಾರ-ಅಮಾವಾಸ್ಯೆಯೂ ಶೋಭನ ನಾಮ ಯೋಗವೂ ಸೇರಿದ ದಿವಸ ಐದು ಲಿಂಗಗಳನ್ನೂ ದರ್ಶನ ಮಾಡಿ ಅರ್ಚನೆಮಾಡುವುದು ಮಹಾಪುಣ್ಯಪ್ರದವಾದದ್ದೆಂದು ಹೇಳಲ್ಪ ಟ್ಟಿದೆ ಇದೇ ಪಂಚಲಿಂಗದರ್ಶನ ಮಹೋತ್ಸವ.

ಮೈಸೂರುದೇಶದಲ್ಲಿ ಅಲ್ಲಲ್ಲಿಯೇ ಸಿಕ್ಕುವ ಶಾಸನಗಳನ್ನು ನೋಡಿ ದರೆ ಮೈಸೂರಿನ ಪ್ರಾಚೀನಚರಿತ್ರೆಯಲ್ಲಿ ತಲಕಾಡಿಗೆ ಬಹು ಪ್ರಾಶಸ್ತ್ಯ ವಿತ್ತೆಂದು ತಿಳಿಯಬಹುದಲ್ಲದೆ, ಅವುಗಳು ತಲಕಾಡಿನ ವಿಚಾರವಾಗಿ ಹೇಳುವ ಅಂಶಗಳಿಂದ ಅದರ ಅಭಿವೃದ್ಧಿನಾಶಗಳನ್ನು ಸಂಬದ್ಧವಾಗಿರು ವಂತೆ ಗೊತ್ತುಮಾಡಲೂಬಹುದು. ಕ್ರಿ. ಶ. ಮೂರನೆಯ ಶತಮಾನದ ಆದಿಭಾಗದಲ್ಲಿ ಆಳುತ್ತಿದ್ದ ಗಂಗರಾಜರ ಸಂಬಂಧವಾಗಿ ತಿಳಿದುಬಂದಿರು ವುದೇ ನಂಬಿಕೆಗೆ ಅರ್ಹವಾದ ಬಹು ಪ್ರಾಚೀನಸಂಗತಿ. ಆಗ ಕ್ರಿ. ಶ. ೨೪೭ ರಿಂದ ೨೬೬ ರ ವರೆಗೆ ಅಲ್ಲಿ ಹರಿವರ್ಮನು ಆಳುತ್ತಿದ್ದನೆಂದು ಗೊತ್ತಾಗುತ್ತದೆ. ಎಂಟನೆಯ ಶತಮಾನದಲ್ಲಿ ಆಳುತ್ತಿದ್ದ ಗಂಗರಾಜ ನಾದ ಶ್ರೀಪುರುಷನ ಆಳಿಕೆಯಲ್ಲಿ ತಲಕಾಡುರಾಜ್ಯವು ಅತ್ಯುನ್ನತಸ್ಥಿತಿಯ ಲ್ಲಿದ್ದಂತೆ ತೋರುತ್ತದೆ. ಒಂಬತ್ತನೆಯ ಶತಮಾನದಹೊತ್ತಿಗೆ, ಗಂಗರಾ ಜರೇ ಸಾಮಂತರಾಗಿ ಆಳುತ್ತಿದ್ದರೂ, ತಲಕಾಡು ರಾಷ್ಟ್ರಕೂಟರಾ ಜ್ಯಕ್ಕೆ ಸೇರಿಹೋಗಿತ್ತು. ರಾಷ್ಟ್ರಕೂಟರು ಕ್ರಿ.ಶ. ೯೭೨ ರಲ್ಲಿ ಚಾಳುಕ್ಯ ರಿಂದ ಪರಾಜಿತರಾದಮೇಲೆ ಗಂಗರು ಚೋಳರ ಅಧೀನರಾದರು. ಪೆರ್ಮಾ ನಡಿ ಗಂಗರಾಜನು ಕ್ರಿ.ಶ. ೯೯೬ ರಲ್ಲಿ ಕರ್ಣಾಟರಾಜನಾಗಿದ್ದನೆಂದೂ ಅವನನ್ನು ಒಂದನೆಯ ರಾಜರಾಜನ ಮಗನಾದ ರಾಜೇಂದ್ರಚೋಳನು ಜಯಿಸಿದನೆಂದೂ ಶಾಸನಗಳು ಹೇಳುತ್ತವೆ. ಈ ಜಯದ ಜ್ಞಾಪಕಾ ರ್ಥವಾಗಿ ಈವೂರಿಗೆ ರಾಜರಾಜಪುರವೆಂಬ ಹೆಸರನ್ನು ಕೊಟ್ಟು, ರಾಜೇಂ ದ್ರಚೋಳನು ತಾನು "ಗಂಗೈಕೊಂಡ ಚೋಳ" ಎಂಬ ಬಿರುದನ್ನು ಧರಿಸಿದನು.



ಸೋಮಗಿರಿ ಅಥವಾ ಮುಡುಕುತೊರೆ ಬೆಟ್ಟ.

ವಿಕ್ರಮಚೋಳನು ಆಳುತ್ತಿರುವಾಗ ೧೧೧೬ ರಲ್ಲಿ ಹೊಯಿಸಳ ವಿಷ್ಣುವರ್ಧನನ ಆಶ್ರಯದಲ್ಲಿದ್ದ ಗಂಗವಂಶೀಯನಾದ ಗಂಗರಾಜನೆಂಬ ವನು ತಲಕಾಡನ್ನು ಪುನಃ ಜಯಿಸಿದನು. ತಲಕಾಡು ಹೊಯಿಸಳರ ದಕ್ಷಿಣರಾಜಧಾನಿಯಾಯಿತು. ವಿಷ್ಣುವರ್ಧನನು "ತಲಕಾಡು ಗೊಂಡ" ಎಂಬ ಬಿರುದನ್ನು ಕೈಕೊಂಡನು. ಇಲ್ಲಿಂದ ಮುಂದೆ ೧೪ ನೆಯ ಶತಮಾನದ ಮಧ್ಯದಲ್ಲಿ ವಿಜಯನಗರದ ರಾಜರು ಜಯಿಸುವವರೆಗೂ ಇದು ಹೊಯಿಸಳರ ವಶದಲ್ಲಿಯೇ ಇತ್ತು. ಮೂರನೆಯ ಬಲ್ಲಾಳನ ಕಾಲದಲ್ಲಿ (ಕ್ರಿ.ಶ. ೧೨೯೧-೧೩೪೨) ಅವನ ಪ್ರಧಾನಿಯಾದ ಪೆರುಮಾಳ್ ಡಣಾಯಕನು ತಲಕಾಡಿನಹತ್ತಿರವೇ ಹೊಳೆಯ ದಡದಮೇಲೆ ಇರುವ ಮಾಲಂಗಿ ಎಂಬ ಊರಿನಲ್ಲಿ ಒಂದು ಪಾಠಶಾಲೆಯನ್ನು ಸ್ಥಾಪಿಸಿ ಅದಕ್ಕೆ ಜಹಗೀರಿಗಳನ್ನು ಬಿಟ್ಟನು. ೧೩೮೪ ರಲ್ಲಿ ರಾಮದೇವನೆಂಬ ಸಾಳ್ವರಾಜನು ತಲಕಾಡಿನಲ್ಲಿ ಅಧಿಕಾರಿಯಾಗಿ ಆಳುತ್ತಿದ್ದಂತೆಯೂ ಅವನು ತುರುಕರೊಡನೆ ಯುದ್ಧಮಾಡುತ್ತಿದ್ದಾಗ ಕೋತಕೊಂಡದಲ್ಲಿ ಮಡಿದನೆಂದೂ ಗೊತ್ತಾಗುತ್ತದೆ. ೧೪೩೯ ರಲ್ಲಿ ತಲಕಾಡಿನ ಅಧಿಕಾರಿಯಾಗಿದ್ದ ಪೆರುಮಾಳದೇವರಸನು ಎರಡನೆಯ ದೇವರಾಯನ ಆಳಿಕೆಯಲ್ಲಿ ಕೀರ್ತಿನಾರಾಯಣಸ್ವಾಮಿಗೆ ಭೂಮಿಯನ್ನು ಬಿಡಿಸಿಕೊಟ್ಟನು.

ಹೀಗೆಯೇ ೧೬೧೨ ರ ವರೆಗೆ ತಲಕಾಡು ವಿಜಯನಗರದ ರಾಜರ ಅಧೀನದಲ್ಲಿಯೇ ಇತ್ತು. ಆಗ ಬೆಟ್ಟದ ಚಾಮರಾಜವೊಡೆಯರ ತಮ್ಮಂದಿರಾದ ರಾಜವೊಡೆಯರು ಇದನ್ನು ಅವರಿಂದ ಕಿತ್ತುಕೊಂಡರು. ಈ ಸಂದರ್ಭದಲ್ಲಿ ನಡೆದ ಕೆಲವು ಸಂಗತಿಗಳನ್ನು "ವಂಶರತ್ನಾಕರವು" ಈರೀತಿ ತಿಳಿಸುತ್ತದೆ :—

"ಶ್ರೀರಂಗಪಟ್ಟಣವೂ ಸಿಂಹಾಸನವೂ ಒಂದದ್ದು :—ಅನಂತರದಲ್ಲಿ ಶ್ರೀರಂಗರಾಯರಿಗೆ ಚಿಕಿತ್ಸೆಗೆ ಅಸಾಧ್ಯವಾದ ಬೆನ್ನುಫಣಿಯೆಂಬ ವ್ರಣಜಾಡ್ಯವು ಸಂಭವಿಸಿದ್ದರಿಂದ ಅವರು ಇನ್ನುಮೇಲೆ ತಮ್ಮ ದೇಹವು

ನಿಲ್ಲುವುದಿಲ್ಲವೆಂದು ತಿಳಿದು...ರಾಜಒಡೆಯರವರನ್ನು ಕರೆಯಕಳುಹಿಸಿ... ಶ್ರೀರಂಗಪಟ್ಟಣವನ್ನೂ ಸಿಂಹಾಸನವನ್ನೂ ಸಹಾ ಕೊಟ್ಟು ಪತ್ನಿಯರಾದ ಅಲಮೇಲಮ್ಮನವರು ರಂಗಮ್ಮನವರಿಂದೊಡಗೂಡಿ ತಲಕಾಡು ಸಮೀಪದಲ್ಲಿರುವ ಮಾಲಂಗಿಗೆ ಹೋಗಿ ಅಲ್ಲಿ ಕೆಲವು ದಿನಗಳಿದ್ದು ಕೀರ್ತಿನಾರಾಯಣ ಸ್ವಾಮಿಯವರ ಪಾದದಲ್ಲಿ ಐಕ್ಯವಾದರು.''

''ಅಲಮೇಲಮ್ಮನವರು ಮಾಲಂಗೀಮಡುವನ್ನು ಪ್ರವೇಶಿಸಿದ ವಿಚಾರ :—ರಾಜಒಡೆಯರವರು...ಸಿಂಹಾಸನಾರೋಹಣವನ್ನು ಮಾಡಿ ...ಪೃಥ್ವೀಸಾಮ್ರಾಜ್ಯವನ್ನು ಗೆಯ್ಯುತಿದ್ದರು. ಆಗ ರಂಗಸ್ವಾಮಿ ದೇವಸ್ಥಾನದ ಅಧಿಕಾರಿಯು ರಾಜಒಡೆಯರವರ ಬಳಿಗೆ ಬಂದು ಪೂರ್ವದಿಂದಲೂ ರಂಗನಾಯಕಿಅಮ್ಮನವರಿಗೆ ಶುಕ್ರವಾರ ಮಂಗಳವಾರಗಳಲ್ಲಿ ಅಲಂಕಾರವನ್ನು ಮಾಡುತ್ತಿದ್ದ ದೊಡ್ಡ ಮುತ್ತಿನ ಮೂಗುತಿ ಮುಂತಾದ ರತ್ನಪಡಿ ನಗಗಳನ್ನು ಶ್ರೀರಂಗರಾಯನ ಪತ್ನಿಯಾದ ಅಲಮೇಲಮ್ಮನವರು ಕೊಟ್ಟು ಅಲಂಕಾರವನ್ನು ಮಾಡಿಸಿ ಪುನಃ ತರಿಸಿಕೊಳ್ಳುತ್ತಿದ್ದರೆಂತಲೂ ಅವುಗಳನ್ನು ಈಗಲೂ ಅಪ್ಪಣೆಕೊಡಿಸಬೇಕೆಂತಲೂ ಬಿನ್ನವಿಸಿದನು. ರಾಜಒಡೆಯರವರು ಬೊಕ್ಕಸದ ಅಧಿಕಾರಿಯನ್ನು ಕರೆಯಿಸಿ ವಿಚಾರಿಸಲಾಗಿ ಅಲಮೇಲಮ್ಮನವರು ಸಂಗಡಲೇ ತೆಗೆದುಕೊಂಡುಹೋಗಿ ಇದ್ದಾರೆಂದು ಅವನು ಶ್ರುತಪಡಿಸಿದನು. ಅನಂತರದಲ್ಲಿ ರಾಜವೊಡೆಯರು ರಂಗನಾಯಕಿ ಅಮ್ಮನವರಿಗೆ ಅಲಂಕಾರಾರ್ಥವಾಗಿ ಕೊಟ್ಟಿದ್ದ ಆಭರಣಗಳನ್ನು ಈಗಲೂ ಕೊಟ್ಟುಕಳುಹಿಸಬೇಕೆಂದು ಅಲಮೇಲಮ್ಮನವರಿಗೆ ಅಪ್ಪಣೆಕೊಟ್ಟು ಕಳುಹಿಸಿದರು. ಆಕೆಯು ಕೊಡುವುದಿಲ್ಲವೆಂದು ಹೇಳಿ ಕಳುಹಿಸಲು, ರಾಜವೊಡೆಯರವರು ರಂಗನಾಯಕಿಅಮ್ಮನವರಿಗೆ ಆ ಆಭರಣಗಳು ಶಾಶ್ವತವಾಗಿ ಇರಬೇಕೆಂದು ಯೋಚಿಸಿ ತಮ್ಮ ಅಧಿಕಾರಿಗಳನ್ನು ಕರೆದು 'ಈಗ ನಿಮಗೆ ಆಭರಣಗಳಿಂದ ಉಪಯುಕ್ತವಿಲ್ಲ. ರಂಗನಾಯಕಿಅಮ್ಮನವರಿಗೆ ಕೊಟ್ಟರೆ ನಿಮ್ಮ ಯಶಸ್ಸು ಬಹುಕಾಲಪರ್ಯಂತವೂ ಇರುವುದು. ಇದಕ್ಕೂ



ವಿಜಯಾಪುರದಲ್ಲಿರುವ ಅರ್ಕೇಶ್ವರದೇವಾಲಯ.

ಕೊಡದೆ ಇದ್ದಪಕ್ಷದಲ್ಲಿ ಬಲಾತ್ಕಾರದಿಂದ ತರಿಸತಕ್ಕದ್ದು ಸ್ವಧರ್ಮವಾಗಿದೆ' ಎಂದು ಆಕೆಯೊಡನೆ ಖಂಡಿತೋಕ್ತಿಯನ್ನು ಹೇಳಿ ತೆಗೆದುಕೊಂಡುಬನ್ನಿ' ಎಂದು ಪುನಃ ಅಪ್ಪಣೆಯನ್ನು ಕೊಟ್ಟು ಕಳುಹಿಸಿದರು. ಆ ಮಾತನ್ನು ಕೇಳಿ ಅಲಮೇಲಮ್ಮನವರು ದೇವತಾವಿಷಯವಾಗಿ ಹೇಳಿ ಕಳುಹಿಸಿದರೆಂದು ತಿಳಿಯದೆ ಯುಕ್ತಾಯುಕ್ತಪರಿಜ್ಞಾನವಿಲ್ಲದೆ ಸ್ತ್ರೀಚಾಪಲ್ಯಾಸೂಯಾ ಬುದ್ಧಿಯಿಂದ ರಾಜಒಡೆಯರ ವಿಷಯವಾಗಿ ಸಹಿಸಲಶಕ್ಯವಾದ ಕಠಿಣೋಕ್ತಿಯನ್ನು ಹೇಳಿ ಮೂಗುತಿಮಾತ್ರ ಕೊಟ್ಟು ಕಡಮೆ ಒಡವೆಗಳನ್ನೆಲ್ಲ ಮಡುಲಿನಲ್ಲಿ ಕಟ್ಟಿಕೊಂಡು ಮಾಲಂಗಿ ಮಡುವಿನಲ್ಲಿ ಪ್ರವೇಶಮಾಡಿದರು.

ಅನಂತರದಲ್ಲಿ ರಾಜಒಡೆಯರವರು ಈ ವೃತ್ತಾಂತವನ್ನು ಕೇಳಿ ನಾವು ದೇವತಾವಿಷಯವಾಗಿ ಹೇಳಿಕಳುಹಿಸಿದ್ದಕ್ಕೆ ಈಕೆಯು ಇಂಥಾ ಅಕೃತ್ಯವನ್ನು ಮಾಡಿದಳಲ್ಲಾ ಎಂದು ಚಿಂತಿಸುತ್ತಿದ್ದರು. ಹೀಗಿರುವಲ್ಲಿ ಆದಿನ ರಾತ್ರಿ ಅಲಮೇಲಮ್ಮನವರು ರಾಜಒಡೆಯರವರ ಸ್ವಪ್ನದಲ್ಲಿ ಪ್ರತಿಬಂಧರೂಪವಾಗಿ ಕಾಣಿಸಿಕೊಳ್ಳಲು ರಾಯರು ಆಕ್ಷಣವೇ ಎದ್ದು ತಮ್ಮ ಪತ್ನಿಯರಾದ ವೀರಾಜಮ್ಮಣ್ಣಿಯವರು ಮುಂತಾದವರೊಡನೆ ಸ್ವಪ್ನ ವೃತ್ತಾಂತವನ್ನು ಹೇಳಿ ಪ್ರತಿಬಂಧದ ಬಾಧೆಯನ್ನು ತಪ್ಪಿಸಿಕೊಳ್ಳುವದಕ್ಕೋಸ್ಕರ ಅಲಮೇಲಮ್ಮನವರ ರೂಪದಿಂದ ಒಂದು ಚಿನ್ನದ ಪ್ರತಿಮೆಯನ್ನು ಮಾಡಿಸಿ ಪ್ರತಿನಿತ್ಯದಲ್ಲೂ ಆ ಪ್ರತಿಮೆಗೆ ಪೂಜೆನಡೆಯುವಂತೆ ಕಟ್ಟುಮಾಡಿಸಿದ್ದಲ್ಲದೆ ಮಹಾನವಮಿಯದಿನ ಅರಮನೆಯಲ್ಲಿ ಆ ಸ್ತ್ರೀಪ್ರತಿಮೆಗೆ ಆಭರಣಗಳನ್ನು ಧರಿಸಿ ಅತಿನೇಮದಿಂದ ಪೂಜೆಮಾಡಿ ಅನೇಕ ಶಾಕಪಾಕ ಭಕ್ಷ್ಯಭೋಜ್ಯ ನೈವೇದ್ಯಗಳನ್ನು ಮಾಡಿಸಿ ಎಲ್ಲರೂ ಕಾಣಿಕೆಗಳನ್ನು ಕೊಟ್ಟು ಭಯಭಕ್ತಿಗಳಿಂದ ನಡೆಯುತ್ತೇವೆಂದು ಪ್ರಾರ್ಥನೆಯನ್ನು ಮಾಡಿ ಆದಿನ ಕಾಣಿಕೆಯನ್ನು ಕಟ್ಟಿ ಈ ಸಾಧಾರಣಸಂವತ್ಸರದ ಮಹಾನವಮಿಯ ಮೊದಲು ನಮ್ಮ ವಂಶಪಾರಂಪರ್ಯವಾಗಿ ಇದೇಮೇರೆಗೆ ನಡೆಯುತ್ತಿರಲಿ ಎಂದು ನಿಬಂಧನೆಯನ್ನು ಮಾಡಿದರು.''—ವಂಶರತ್ನಾಕರ ಪುಟ ೨೭, ೩೧–೩೩.

ಹಿಂದಿದ್ದ ತಲಕಾಡು ಪಟ್ಟಣವು ಈಗ ಒಂದುಮೈಲಿ ಉದ್ದಕ್ಕಿಂತಲೂ ಹೆಚ್ಚಾಗಿ ಬೆಟ್ಟದಹಾಗೆ ಬಿದ್ದಿರುವ ಮರಳಿನಕೆಳಗೆ ಸ್ವಲ್ಪ ಹೆಚ್ಚು ಕಡಿಮೆ ಪೂರ್ತಿಯಾಗಿ ಹೂತುಹೋಗಿದೆ. ಇದರಲ್ಲೆಲ್ಲಾ ಕಣ್ಣಿಗೆ ಕಾಣಿಸುತ್ತಿರುವುದು ಅಲ್ಲೊಂದು ಇಲ್ಲೊಂದರಂತೆ ಎಲ್ಲೋ ಎರಡುಮೂರು ದೇವಸ್ಥಾನಗಳು ಮಾತ್ರ. ಹೀಗೆ ಸುಮಾರು ಮುವ್ವತ್ತು ದೇವಸ್ಥಾನಗಳು ಮರಳಿನೊಳಗೆ ಹೂತುಹೋಗಿವೆಯೆಂದು ಹೇಳುತ್ತಾರೆ. ಈ ಮರಳು ಕೆಲವು ಕಡೆಗಳಲ್ಲಿ ಸುಮಾರು ೬೦ ಅಥವಾ ೭೦ ಅಡಿಗಳಷ್ಟು ಎತ್ತರವಾಗಿ ಬಿದ್ದುಬಿಟ್ಟಿದೆ. ಮರಳು ಇನ್ನೂ ಹೆಚ್ಚಾಗಿ ಸೇರದಿರುವಂತೆ ಗಿಡಗಳನ್ನೂ ಬಳ್ಳಿಗಳನ್ನೂ ಬೆಳೆಸಿದ್ದಾರೆ. ಕತ್ತಾಳೆಯ ಬೇಲಿಗಳನ್ನು ಹಾಕಿಸಿದ್ದಾರೆ. ಆದರೂ ಇದುವರೆಗೂ ಇದ್ದ ಊರು ಮರಳಿನ ಕಾಟವಿಲ್ಲದೆ ಸುರಕ್ಷಿತವಾಗಿರಲಾರದೆಂದು ಅನುಭವಕ್ಕೆ ಬಂದದ್ದರಿಂದ ಇದಕ್ಕೆ ಉತ್ತರ ದಿಕ್ಕಿನಲ್ಲಿ ತಕ್ಕಷ್ಟು ದೂರವಾಗಿ ಹೊಸ ಊರು ಕಟ್ಟಲ್ಪಟ್ಟಿದೆ. ಹೀಗೆ ಮೇಲಿಂದಮೇಲೆ ಮರಳು ನುಗ್ಗಿಬರುವುದಕ್ಕೆ ಮುಖ್ಯವಾಗಿ ಪ್ರಕೃತಿಜನ್ಯವಾಗಿರುವ ಎರಡು ಕಾರಣಗಳಿವೆ. ಮೊದಲನೆಯದು—ಇಲ್ಲಿ ಕಾವೇರಿಯು ತಿರುಗುವಾಗ ಮರಳನ್ನು ಬಹುವಾಗಿ ತಂದು ಚಾಚುತ್ತದೆ. ಎರಡನೆಯದು—ವಿಶೇಷವಾಗಿ ಪಶ್ಚಿಮದ ಕಡೆಯಿಂದ ಬೀಸುವ ಗಾಳಿಯು ಈ ಮರಳನ್ನು ಸಂತತವಾಗಿ ಊರಿನ ಮೇಲೆ ಹೊತ್ತು ತಂದುಹಾಕುತ್ತದೆ. ಆದರೆ ಇದಕ್ಕೆ, ಹಿಂದೆ ಹೇಳಿದಂತೆ, ಶ್ರೀರಂಗರಾಯನ ಹೆಂಡತಿಯು ಕೊಟ್ಟ ಶಾಪವೇ ಕಾರಣವೆಂದು ಜನರ ಭಾವನೆ.

ತಲಕಾಡಿನ ಪಂಚಲಿಂಗದೇವಾಲಯಗಳಲ್ಲಿ ವೈದ್ಯೇಶ್ವರ ದೇವಾಲಯವೇ ಮುಖ್ಯವಾದದ್ದು ಮತ್ತು ಶ್ಲಾಘ್ಯತೆಯಲ್ಲಿ ಎರಡನೆಯದು. ಮರಳಿನ ಕಾಟಕ್ಕೆ ಸಿಕ್ಕದೇ ಇರುವುದು ಇದು ಒಂದೇ. ಇದೂ ಕೂಡ ಒಂದಾನೊಂದು ಕಾಲದಲ್ಲಿ ಹೂತುಹೋಗಿದ್ದಂತೆ ಗುರುತುಗಳಿವೆ. ಈಗಂತೂ ಇದು ಮರಳಿಗೆ ಸಿಕ್ಕಿಲ್ಲ, ಇರುವುದೂ ಸುರಕ್ಷಿತವಾಗಿದೆ. ಸ್ಥಳ



ಪಾತಾಳೇಶ್ವರ ದೇವಾಲಯ.

ಪುರಾಣದ ರೀತಿಯಾಗಿ ವೈದ್ಯೇಶ್ವರನೇ ಈ ಕ್ಷೇತ್ರಗಳಲ್ಲಿ ಉದ್ಭವಿಸಿದ ದೇವರುಗಳಲ್ಲೆಲ್ಲಾ ಮೊದಲನೆಯವನು. ಇದರ ಗರ್ಭಗೃಹವು ಬಹಳ ಪ್ರಾಚೀನವಾದದ್ದು, ಆದರೆ ಅದರ ಹೊರಕಟ್ಟಡವು ವಿಜಯನಗರದ ಕಾಲದ್ದು. ಈ ದೇವಾಲಯವು ದ್ರಾವಿಡರೀತಿಯಲ್ಲಿ ಕಗ್ಗಲ್ಲಿನಿಂದ ಕಟ್ಟಿದ ಸುಂದರವಾದ ಕಟ್ಟಡವಾಗಿದೆ. ಇದರಲ್ಲಿ ಗರ್ಭಗೃಹ, ಸುಕನಾಸಿ, ನವ ರಂಗ ಈ ಭಾಗಗಳೂ ನವರಂಗದ ಒಳಮುಖಕ್ಕೆ ಎರಡು ಸಣ್ಣ ಗೃಹ ಗಳೂ ಇವೆ. ದೇವಾಲಯವು ಪೂರ್ವಮುಖವಾಗಿದ್ದು ಅದರ ಹೊರಗೋ ಡೆಯಲ್ಲಿ ಸಣ್ಣ ಗೋಪುರಗಳೂ ಕಂಬಗಳೂ ಮತ್ತು ದೇವತಾವಿಗ್ರಹಗಳೂ ಕೆತ್ತಲ್ಪಟ್ಟಿವೆ. ಪೂರ್ವದ್ವಾರದ ಅಕ್ಕಪಕ್ಕಗಳಲ್ಲಿರುವ ದ್ವಾರಪಾಲಕವಿಗ್ರ ಹಗಳು ಸುಮಾರು ೧೦ ಅಡಿ ಎತ್ತರವಾಗಿವೆ ಇಷ್ಟು ಎತ್ತರವಾದ ದ್ವಾರಪಾಲಕವಿಗ್ರಹಗಳು ನಮ್ಮ ಸಂಸ್ಥಾನದ ದೇವಸ್ಥಾನಗಳಲ್ಲಿ ಇದುವ ರೆಗೆ ಎಲ್ಲಿಯೂ ಕಂಡುಬಂದಿಲ್ಲ. ದಕ್ಷಿಣದ್ವಾರದ ಮುಂದೆ ಸುಂದರವಾದ ಒಂದು ದ್ವಾರಮಂಟಪವಿದೆ. ದ್ವಾರಪಾಲಕರ ಪಕ್ಕಗಳಲ್ಲಿ ಕೆತ್ತಿಮಾಡಿದ ಎರಡು ಕಂಬಗಳೂ ಇವೆ. ನವರಂಗದ ಭುವನೇಶ್ವರಿಗಳು ಅಚಿತ್ರಿತವಾ ಗಿವೆ, ಆದರೆ ಇವುಗಳಲ್ಲಿ ಮಧ್ಯದರೊಳಗೆ ಮಾತ್ರ ಶಿವಲೀಲೆಗಳನ್ನು ತೋರಿ ಸುವ ವಿಗ್ರಹಗಳು ಕೆತ್ತಲ್ಪಟ್ಟಿವೆ. ನವರಂಗದಲ್ಲಿ ದೊಡ್ಡ ಪ್ರಭಾವಳಿಯೊ ಡನೆ ಕುಳಿತುಕೊಂಡಿರುವ ಒಂದು ಸರಸ್ವತೀ ವಿಗ್ರಹವಿದೆ. ದೇವಸ್ಥಾನದ ಅಮ್ಮನವರಿಗೆ ಮನೋನ್ಮನಿಯಮ್ಮನವರೆಂದು ಹೆಸರು. ಇದು ಬಹು ಸುಂದರವಾಗಿದ್ದು ಎರಡು ಕೈಗಳಲ್ಲಿ ಕಮಲಗಳನ್ನೂ ಮತ್ತೆರಡು ಕೈಗಳಲ್ಲಿ ಅಭಯವರದ ಮುದ್ರೆಗಳನ್ನೂ ಧರಿಸಿರುತ್ತದೆ. ದೇವಸ್ಥಾನದ ಪ್ರಾಕಾರದ ಒಳಗೇ ಬೇರೆಬೇರೆ ಗುಡಿಗಳಲ್ಲಿ ದಕ್ಷಿಣಾಮೂರ್ತಿ ಮತ್ತು ಶಕ್ತಿಗಣಪತಿ ಗಳ ವಿಗ್ರಹಗಳು ಪ್ರತಿಷ್ಠಿಸಲ್ಪಟ್ಟಿವೆ; ಮತ್ತು ಅಂಗಳದೊಳಗೆ ಕೆತ್ತಿಮುಗಿ ಯದ ಒಂದು ದೊಡ್ಡ ಸುಬ್ರಹ್ಮಣ್ಯವಿಗ್ರಹವೂ ಬಿದ್ದಿದೆ.

ಮಿಕ್ಕ ನಾಲ್ಕರಲ್ಲಿ, ವಾಸ್ತುಪ್ರಾಶಸ್ತ್ಯವನ್ನು ನೋಡಿದರೆ, ಸೋಮಗಿರಿ ಅಥವಾ ಮುಡುಕುತೊರೆ ಬೆಟ್ಟದಮೇಲೆ ಇರುವ ಮಲ್ಲಿಕಾ



ಸೈಕತೇಶ್ವರ ಅಥವಾ ಮರಳೇಶ್ವರ ದೇವಾಲಯ.

ರ್ಜುನದೇವಾಲಯವು ಮುಖ್ಯವೆಂದು ಹೇಳಬೇಕು. ಈ ಬೆಟ್ಟವು ತಲಕಾಡಿನಿಂದ ಉತ್ತರಕ್ಕೆ ಸುಮಾರು ಮೂರುಮೈಲಿಯದೂರದಲ್ಲಿ ಹೊಳೆಯ ಪೂರ್ವದಡದಲ್ಲಿದೆ. ಇದರ ಮೇಲಿನಿಂದ ಪಶ್ಚಿಮದಕಡೆಗೆ ನೋಡಿದರೆ ಸುತ್ತುಮುತ್ತಿನ ಪ್ರದೇಶಗಳೆಲ್ಲವೂ ಬಹುದೂರದವರೆಗೂ ಕಾಣುವುವು. ಮತ್ತು ದಿಗಂತದಲ್ಲಿ ಎದುರಿಗೆ ಸರಿಯಾಗಿ ಚಾಮುಂಡಿಬೆಟ್ಟವು ದೂರದಿಂದ ಕಾಣುತ್ತಿರುವುದು. ಮೇಲೆಹೇಳಿದ ಬೆಟ್ಟವೇನು ಅಷ್ಟುದೊಡ್ಡದಲ್ಲ. ನದೀಪಾತ್ರದಿಂದ ಸುಮಾರು ೩೦೦ ಅಡಿಯಷ್ಟು ಎತ್ತರವಾಗಿರಬಹುದು ಅಷ್ಟೆ. ಆದರೆ ಇದರಬುಡದಲ್ಲಿ ನಿಂತು ನೋಡಿದರೆ ಮೇಲೆ ಬೆಳ್ಳಗಿರುವ ದೇವಸ್ಥಾನವೂ ಅದರಹಿಂದೆ ನೀಲವಾದ ಆಕಾಶವೂ ಸೇರಿ ಸೊಗಸಾದ ವರ್ಣಚಿತ್ರದಂತೆ ಕಾಣುತ್ತದೆ. ದೇವಸ್ಥಾನವು ನೋಡುವುದಕ್ಕೆ ಸಾಮಾನ್ಯವಾಗಿದ್ದು ಗರ್ಭಗೃಹ. ಸುಕನಾಸಿ, ನವರಂಗ ಮತ್ತು ದ್ವಾರಮಂಟಪಗಳನ್ನುಳ್ಳದ್ದಾಗಿದೆ. ಸ್ವಾಮಿಯ ದೇವಸ್ಥಾನದ ಪಕ್ಕದಲ್ಲಿ ಅಮ್ಮನವರ ದೇವಸ್ಥಾನವಿದೆ; ಇದರಲ್ಲಿರುವ ದೇವತೆಯು ಸ್ಥಳಪುರಾಣದಲ್ಲಿ ಚಾಮುಂಡಿಯೆಂದು ಉಕ್ತವಾಗಿದೆ ಆದರೆ ಜನರು ಅದನ್ನು ಭ್ರಮರಾಂಬಿಕೆಯೆಂದು ಕರೆಯುತ್ತಾರೆ. ಪ್ರಾಕಾರದ ಒಳಗೇ ಚಿತ್ರಮಂಟಪವೆಂಬ ಒಂದು ಮಂಟಪವಿದೆ. ಇದರಲ್ಲಿ ಶೈವಪುರಾಣಕಥೆಗಳನ್ನು ಬಣ್ಣಗಳಿಂದ ಚಿತ್ರಿಸಿದ್ದಾರೆ. ಮಹಾದ್ವಾರದ ಎರಡುಕಡೆಯಲ್ಲೂ ಇಟ್ಟಿಗೆಗಾರೆಯಿಂದ ಮಾಡಿದ ಎರಡು ವೃಷಭಗಳು ಮಲಗಿವೆ. ದ್ವಾರದಮೇಲೆ ಒಳ್ಳೆಯ ಸೊಗಸಾದ ಗೋಪುರವಿದೆ.

ವಿಜಯಾಪುರದ ಹತ್ತಿರ ಇರುವ ಅರ್ಕೇಶ್ವರದೇವಸ್ಥಾನವೂ ಮರಳುಗುಡ್ಡೆಗಳಲ್ಲಿ ಸಿಕ್ಕಿಕೊಂಡಿರುವ ಪಾತಾಳೇಶ್ವರ ಮರಳೇಶ್ವರ ದೇವಸ್ಥಾನಗಳೂ ಪ್ರಾಮುಖ್ಯತೆಯಲ್ಲಿ ಇದಾದಮೇಲೆ ಬರತಕ್ಕವುಗಳು. ಇವೆಲ್ಲ ಸಣ್ಣಸಣ್ಣ ಕಟ್ಟಡಗಳು. ಇವುಗಳಲ್ಲಿ ವಾಸ್ತುಕುಶಲತೆಯೇನೂ ಇಲ್ಲ. ಅರ್ಕೇಶ್ವರದೇವಾಲಯವು ಈಚಿನದಾದರೂ ಚೆನ್ನಾಗಿ ಕೆಲಸಮಾಡಿದ್ದಾಗಿದೆ. ಮಿಕ್ಕ ಎರಡೂ ಗಂಗರಕಾಲದಷ್ಟು ಪ್ರಾಚೀನವಾದವುಗಳು.

ತಲಕಾಡಿನಲ್ಲೆಲ್ಲಾ ವಾಸ್ತುದೃಷ್ಟಿಯಿಂದ ಪ್ರಾಮುಖ್ಯತೆಯನ್ನು ಪಡೆದಿರುವ ಹೊಯಿಸಳರೀತಿಯ ಕಟ್ಟಡವು ಕೀರ್ತಿನಾರಾಯಣದೇವಾಲಯ. ಇದನ್ನು ಶಾಸನದ ಇಲಾಖೆಯವರು ಈಚೆಗೆ ಮರಳುತೆಗೆದು ಕಾಣುವಂತೆ ಮಾಡಿದರು. ೧೯೧೧ ನೇ ಇಸವಿಯವರೆಗೂ ಅದರ ಗೋಪುರವೂ ಮುಂದುಗಡೆಯ ಮೇಲ್ಭಾಗವೂ ಮಾತ್ರ ಕಾಣುತ್ತಿದ್ದುವು. ಆಗಾಗ್ಯೆ ಎಂದರೆ ಪಂಚಲಿಂಗಜಾತ್ರೆಯು ಬಂದುಬಂದಾಗ ಮರಳನ್ನು ತೆಗೆಸುತ್ತಿದ್ದರು. ಆದರೆ ಪುನಃ ಸ್ವಲ್ಪಕಾಲದಲ್ಲಿಯೇ ಕಟ್ಟಡವು ಮರಳಿನ ರಾಶಿಯಲ್ಲಿ ಹೂತುಹೋಗುತ್ತಿತ್ತು. ೧೯೧೧ರಲ್ಲಿ ಪ್ರಾಕಾರದ ಬಹುಭಾಗವು ಬಿಡಿಸಲ್ಪಟ್ಟಿತು ಮತ್ತು ಈವರ್ಷ ಮಿಕ್ಕಭಾಗಗಳನ್ನೂ ಬಿಡಿಸುವುದಕ್ಕೆ ತಕ್ಕ ಪ್ರಯತ್ನಗಳು ನಡೆಯುತ್ತಿವೆ. ಈ ದೇವಾಲಯದಲ್ಲಿ ಗರ್ಭಗುಡಿ, ಸುಕನಾಸಿ ಮತ್ತು ನವರಂಗಗಳಿವೆ. ನವರಂಗದ ಕಂಬಗಳು ಚೆನ್ನಾಗಿ ಕೆತ್ತಿಮಾಡಿದವಾಗಿವೆ. ಮೇಲಿನ ತೊಲೆಗಳಿಗೆ ಬಳ್ಳಿಯ ಕೆಲಸವಾಗಲಿ ಮಣಿಯಕೆಲಸವಾಗಲಿ ಮಾಡಲ್ಪಟ್ಟಿರುತ್ತದೆ. ಭುವನೇಶ್ವರಿಗಳಲ್ಲಿ ನಾಲ್ಕು ಮಾತ್ರ ಚೆನ್ನಾಗಿ ಕೆತ್ತಿ ಚಿತ್ರಕೆಲಸಮಾಡಿದವುಗಳು ಮಿಕ್ಕವು ಅಚಿತ್ರಿತವಾಗಿವೆ. ಈಗ ನವರಂಗಕ್ಕೆ ಪೂರ್ವದಲ್ಲಿ ಒಂದು, ಉತ್ತರದಲ್ಲಿ ಒಂದು, ಈರೀತಿಯಾಗಿ ಎರಡೇ ದ್ವಾರಗಳಿವೆ. ಹೀಗೆಯೇ ಇದರ ದಕ್ಷಿಣದಲ್ಲಿಯೂ ಒಂದು ದ್ವಾರವಿತ್ತು. ಆದರೆ ಅದನ್ನು ಈಚೆಗೆ ಮುಚ್ಚಿ ಅಮ್ಮನವರಿಗೆ ಒಂದು ಗುಡಿ ಮಾಡಿದ್ದಾರೆ. ಅಮ್ಮನವರಿಗೆ ಮೊದಲು ಇದ್ದ ಗುಡಿಯು ಈಗ ದೇವಸ್ಥಾನದ ದಕ್ಷಿಣದಲ್ಲಿ ಹೂತುಹೋಗಿದೆ. ಕೀರ್ತಿನಾರಾಯಣವಿಗ್ರಹವು ಸುಮಾರು ಎಂಟು ಅಡಿ ಎತ್ತರವಿರುವ ಸುಂದರವಾಗಿ ಕೆತ್ತಿಮಾಡಿದ ವಿಗ್ರಹವಾಗಿದೆ. ಇದು ಮುಂದಿನ ಎರಡುಕೈಗಳಲ್ಲಿ ಶಂಖಚಕ್ರಗಳನ್ನೂ ಹಿಂದಿನ ಎರಡುಕೈಗಳಲ್ಲಿ ಗದಾಪದ್ಮಗಳನ್ನೂ ಧರಿಸಿಕೊಂಡಿದೆ.

ಈ ದೇವಾಲಯದ ಕಾಲವು ಕ್ರಿ.ಶ. ೧೧೧೭. ಇದನ್ನು ವಿಷ್ಣುವರ್ಧನನು ಬೇಲೂರು, ಮೇಲುಕೋಟೆ, ತೊಣ್ಣೂರು ಗದಗು ಈ ಊರುಗ



ಗೋಕರ್ಣತೀರ್ಥ ಮತ್ತು ಗೋಕರ್ಣೇಶ್ವರ ದೇವಾಲಯ.

ಳಲ್ಲಿ ಕಟ್ಟಿಸಿದ ನಾರಾಯಣದೇವಾಲಯಗಳಂತೆಯೇ ಇಲ್ಲಿಯೂ ಕಟ್ಟಿಸಿದನು. ಈ ದೇವಾಲಯವು ಹಿಂದಿದ್ದ ಊರಿನ ಮಧ್ಯರಸ್ತೆಯಲ್ಲಿದ್ದದ್ದರಿಂದ ಈ ದೇವರಿಗೆ ನಡುಕೇರಿನಾರಾಯಣ ಎಂದೂ ಹೆಸರಿದ್ದಂತೆ ಹೇಳುತ್ತಾರೆ.

ಮೇಲೆ ವರ್ಣಿಸಿದ ದೇವಾಲಯಗಳಲ್ಲದೆ ಗಮನಿಸಬಹುದಾದ ಇನ್ನೂ ಕೆಲವು ಸಣ್ಣ ದೇವಾಲಯಗಳೂ ಇವೆ:—

ವೈದ್ಯೇಶ್ವರದೇವಾಲಯಕ್ಕೆ ದಕ್ಷಿಣದಲ್ಲಿರುವ ವೀರಭದ್ರದೇವಾಲಯವು ತಕ್ಕಮಟ್ಟಿಗೆ ದೊಡ್ಡಕಟ್ಟಡವೇ. ಈ ದೇವಸ್ಥಾನದ ಮುಂದೆಯೇ ಇಬ್ಬರು ಬೇಡರವಿಗ್ರಹಗಳು ನಿಂತಿರುವುವು.

ಗೌರೀಶಂಕರದೇವಾಲಯವು ಚಿಕ್ಕದೇವರಾಜವೊಡೆಯರ (೧೬೭೨-೧೭೦೪) ಆಳಿಕೆಯಲ್ಲಿ ಕಟ್ಟಿದ್ದು. ಇದು ಆ ದೇವಸ್ಥಾನದೊಳಗಿರುವ ಶಾಸನದಲ್ಲಿ ಮಲ್ಲೇಶದೇವಾಲಯವೆಂದು ಕರೆಯಲ್ಪಟ್ಟಿದೆ ಕ್ರಿ.ಶ. ೧೦೪೦ರಲ್ಲಿ ವೈಕುಂಠನಾರಾಯಣಸ್ವಾಮಿಗಾಗಿ ಒಂದು ದೇವಾಲಯವು ಕಟ್ಟಲ್ಪಟ್ಟಿತ್ತು. ಆದರೆ ಅದು ಈಗ ಇಲ್ಲ. ಅದರ ವಿಗ್ರಹವನ್ನು ಇದುವರೆಗೂ ಊರಮಧ್ಯೆ ಇರುವ ಆಂಜನೇಯ ದೇವಸ್ಥಾನದಲ್ಲಿಟ್ಟಿರುತ್ತಿದ್ದರು. ಈಗ ಅದು ಹೊಸದಾಗಿ ಕಟ್ಟಿದ ಊರಿನಲ್ಲಿ ಟ್ರಾವೆಲರ್ಸ್ ಬಂಗಲಿಯ ಹತ್ತಿರ ಕಟ್ಟಿದ ದೇವಾಲಯದಲ್ಲಿ ತಂದು ಇಡಲ್ಪಟ್ಟಿದೆ. ಇದರಂತೆ ರಾಜರಾಜೇಶ್ವರ ದೇವಾಲಯವೆಂಬ ಒಂದು ದೇವಾಲಯವಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ಆದರೆ ಅದೂ ಈಗ ಇಲ್ಲ. ಹಿಂದಿನ ಊರಿನ ಉತ್ತರಬಾಗಿಲಲ್ಲಿ ಇರುವ ಗಣೇಶದೇವಸ್ಥಾನವು ಈ ಊರಿನ ಹಳೆಯ ಕಟ್ಟಡಗಳಲ್ಲಿ ಒಂದಾಗಿದೆ.

ತಲಕಾಡಿನಲ್ಲಿ ಕೊಪ್ಪಲುಮಠನೆಂಬ ಒಂದು ಭಾಗವತ ಸಂಪ್ರದಾಯದ ಸ್ಮಾರ್ತಮಠವಿದೆ. ಇದರ ಸ್ವಾಮಿಗಳು ಶ್ರೀಶಂಕರಾಚಾರ್ಯರ ಸಾಕ್ಷಾಚ್ಛಿಷ್ಯರಾದ ಪದ್ಮಪಾದಾಚಾರ್ಯರ ಪರಂಪರೆಗೆ ಸೇರಿದವರೆಂದು ಹೇಳುತ್ತಾರೆ.

ಮುಡುಕುತೊರೆಯ ಹತ್ತಿರ ಹೊಳೆಗೆ ಹಾಕಿರುವ ಆಣೆಕಟ್ಟೆಗೆ ಮಾಧವ ಮಂತ್ರಿಯ ಆಣೆಕಟ್ಟು ಎಂದು ಹೆಸರು. ಇದನ್ನು ವಿಜಯ ನಗರದ ರಾಜರಲ್ಲಿ ಮಂತ್ರಿಯಾಗಿದ್ದ ಮಾಧವಾಚಾರ್ಯರು ಕಟ್ಟಿಸಿದರೆಂದು ಹೇಳುತ್ತಾರೆ. ಆದರೆ ಅದಕ್ಕಿಂತಲೂ ಪುರಾತನವಾದ್ದೆಂದು ಹೇಳುವುದಕ್ಕೆ ಕೆಲವು ದಾಖಲೆಗಳಿವೆ.

ಈ ಊರಿನಲ್ಲಿ ಬಂದರಸಮ್ಮನೆಂಬ ಒಂದು ಗ್ರಾಮದೇವತೆಯಿದೆ. ಅದಕ್ಕೆ ಪ್ರತಿ ವರ್ಷವೂ ಮಾಘಮಾಸದಲ್ಲಿ ಒಂದು ಜಾತ್ರೆಯು ನಡೆಯುತ್ತದೆ. ಅದೇ ಮಾಸದಲ್ಲಿಯೇ ಮುಡುಕುತೊರೆಯಲ್ಲಿ ಒಂದು ದೊಡ್ಡ ಜಾತ್ರೆಯಾಗುತ್ತದೆ. ಅದಕ್ಕೆ ಮೈಸೂರು ದೇಶದ ಎಲ್ಲಾ ಕಡೆಯಿಂದಲೂ ಸಾವಿರಾರು ಜನರು ಸೇರುತ್ತಾರೆ. ಈ ಕಾಲದಲ್ಲಿ ಒಂದು ದನಗಳ ಪ್ರದರ್ಶನವೂ ನಡೆಯುತ್ತದೆ. ಜಾತ್ರೆಯ ಕೊನೆಯ ದಿವಸ ನಡೆಯುವ ಗೂಳಿಗಳ ಓಟವು ಪ್ರಸಿದ್ಧವಾದದ್ದು. ಇದರಲ್ಲಿ ಜನರಿಗೆ ಬಹು ಆಸಕ್ತಿ. ಈ ಓಟದಲ್ಲಿ ಗೆದ್ದ ಗೂಳಿಗೆ ಅರ್ಚಕನು ದೇವರ ಮುಂದೆ ಒಂದು ವಿಜಯ ಮಾಲೆಯನ್ನು ತಂದು ಹಾಕುವನು. ಈ ಜಾತ್ರೆಯಾದ ಕೂಡಲೆ ಕರ್ನೂಲು ಡಿಸ್ಟ್ರಿಕ್ಟಿನ ಶ್ರೀಪರ್ವತದಲ್ಲಿ ಜಾತ್ರೆಯು ನಡೆಯುವುದು ಹಿಂದಿನಿಂದಲೂ ಸಂಪ್ರದಾಯವಾಗಿ ನಡೆದುಬಂದಿದೆ. ಆಗ ಮೇಲೆ ಹೇಳಿದಂತೆ ಜಯಶಾಲಿಯಾದ ಗೂಳಿಯು ಮಿಕ್ಕ ದನಗಳ ಮುಂದೆ ಹೊರಟು ಅವೆಲ್ಲಕ್ಕೂ ಅಧಿನಾಯಕನಾಗುವ ಗೌರವವನ್ನು ಪಡೆಯುತ್ತದೆ.

ಹೀಗೆ ತಲಕಾಡು ಬಹು ಪ್ರಾಚೀನವಾದದ್ದಲ್ಲದೆ ಚರಿತ್ರಕಾರರಿಗೂ ಪ್ರಾಕ್ತನ ವಿಚಾರ ವಿಮರ್ಶಕರಿಗೂ ಬಹು ಸ್ವಾರಸ್ಯವಾದದ್ದೂ ಆಗಿದೆ. ಭಕ್ತರಿಗೆ ಕಾಶಿ ಎಷ್ಟು ಪವಿತ್ರವಾದ ಪುಣ್ಯಕ್ಷೇತ್ರವೋ ಇದೂ ಅಷ್ಟೇ ಪವಿತ್ರವಾದ ಪುಣ್ಯಕ್ಷೇತ್ರವಾಗಿದೆ. ಎಲ್ಲೆಲ್ಲಿ ನೋಡಿದರೂ ಹಿಂದಿನಕಾಲದಲ್ಲಿ ಈ ಪಟ್ಟಣವು ಇದ್ದ ಉಚ್ಚಸ್ಥಿತಿಯನ್ನು ಸೂಚಿಸುವ ಚಿಹ್ನೆಗಳೇ ಕಂಡುಬರುತ್ತವೆ. ಇವುಗಳನ್ನು ನೋಡಿದಾಗ, ಇಷ್ಟು ಔನ್ನತ್ಯಕ್ಕೆ

ಪಶ್ಚಿಮ.

ದಕ್ಷಿಣ.




ಉತ್ತರ.

ತಲಕಾಡು ಪ್ರದೇಶವನ್ನು ತೋರಿಸುವ ನಕ್ಷೆ.

ಒಂದು ದಕ್ಷಿಣದೇಶದ ಚರಿತ್ರೆಯಲ್ಲೆಲ್ಲಾ ಪ್ರಸಿದ್ಧಿಪಡೆದಿದ್ದ ಈ ದೊಡ್ಡ ಪಟ್ಟಣವು ನಮ್ಮ ದೇಶದಲ್ಲಿ ಇದ್ದಿತೆಂಬ ಹೆಮ್ಮೆಯೂ, ಅಂಥ ಔನ್ನತ್ಯ ಮಹತ್ವಗಳೂ ಎಷ್ಟು ಅಶಾಶ್ವತವೆಂಬ ಒಂದು ವಿಧವಾದ ಉದ್ವೇಗವೂ ಪ್ರತಿಯೊಬ್ಬ ಮೈಸೂರು ದೇಶೀಯನಿಗೂ ಏಕಕಾಲದಲ್ಲಿ ಉಂಟಾಗುವುವು.

---

# ದರ್ಶನಕ್ರಮ.

---

ಮುಂದೆ ಹೇಳುವ ದಿನಗಳು ಈ ಕ್ಷೇತ್ರದಲ್ಲಿರುವ ಆಯಾದೇವರುಗಳನ್ನು ದರ್ಶನಮಾಡಲು ಸರಿಯಾದ ದಿವಸಗಳೆಂದು ಹೇಳಿದೆ :—

೧. ವೈದ್ಯನಾಥ :—ವೈಶಾಖ ಶುದ್ಧ ಪೂರ್ಣಿಮೆ.

೨. ಅರ್ಕೇಶ್ವರ :—ಮಾಘ ಶುದ್ಧ ಸಪ್ತಮಿ.

೩. ಪಾತಾಳೇಶ್ವರ :—ಶ್ರಾವಣ ಶುದ್ಧ ಪಂಚಮಿ.

೪. ಮರಳೇಶ್ವರ :—ಮಾಘಬಹುಳ ಚತುರ್ದಶಿ.

೫. ಮಲ್ಲಿಕಾರ್ಜುನ :—ಕಾರ್ತಿಕ ಶುದ್ಧ ಅಷ್ಟಮಿ.

೬. ಚಾಮುಂಡೇಶ್ವರಿ :—ಭಾದ್ರಪದ ಶುದ್ಧ ತದಿಗೆ ಮತ್ತು ಆಶ್ವಯುಜ ಶುದ್ಧ ನವಮಿ.

ಆದರೆ ಈ ದೇವರೆಲ್ಲರನ್ನೂ ಕಾರ್ತಿಕಸೋಮವಾರ ಅಮಾವಾಸ್ಯೆ ವೃಶ್ಚಿಕಮಾಸ ಶೋಭನನಾಮಯೋಗಗಳು ಸೇರಿದಾಗ ದರ್ಶನಮಾಡುವುದು ಅತ್ಯಂತ ಪುಣ್ಯಪ್ರದವಾದದ್ದು.

ಗಜಾರಣ್ಯ ಮಾಹಾತ್ಮ್ಯದಲ್ಲಿ ದರ್ಶನಕ್ರಮವು ಹೀಗೆ ಹೇಳಲ್ಪಟ್ಟಿದೆ:

ಮೊದಲು ಗೋಕರ್ಣ ತೀರ್ಥದಲ್ಲಿ ಸ್ನಾನಮಾಡಿ ಚಂಡೀದೇವಿಯನ್ನು ಪೂಜಿಸಿ ಮೂರು ನಮಸ್ಕಾರ ಹಾಕಿ ವೈದ್ಯೇಶ್ವರನ ದರ್ಶನಮಾಡಬೇಕು. ಆಮೇಲೆ ಅರ್ಕೇಶ್ವರನನ್ನು ಅರ್ಚಿಸಿ ಪುನಃ ವೈದ್ಯೇಶ್ವರನ ದರ್ಶನಮಾಡಬೇಕು. ಅನಂತರ ಕ್ರಮವಾಗಿ ಪಾತಾಳೇಶ್ವರ ಮರಳೇಶ್ವರ ಮಲ್ಲಿಕಾರ್ಜುನ ಮತ್ತು ಚಾಮುಂಡೇಶ್ವರಿ ಈ ಕ್ರಮದಲ್ಲಿ ಒಂದೊಂದನ್ನಾಗಿ ಅರ್ಚನೆಮಾಡಿ, ಆಯಾ ಪೂಜೆಯನ್ನು ವೈದ್ಯೇಶ್ವರನಿಗೆ ಅರ್ಪಿಸಬೇಕು.

ವೈದ್ಯೇಶ್ವರ ಆರ್ಕೇಶ್ವರ ಪಾತಾಳೇಶ್ವರ ಮರಳೇಶ್ವರ ಮತ್ತು ಮಲ್ಲಿಕಾರ್ಜುನೇಶ್ವರ ಇವು ಐದೂ, ಈಶಾನ, ತತ್ಪುರುಷ, ಅಘೋರ, ಸದ್ಯೋಜಾತ, ವಾಮದೇವ ಎಂಬ ಈಶ್ವರನ ಐದು ಮುಖಗಳೆಂದೂ ಇವುಗಳನ್ನು ಭಕ್ತಿಯಿಂದ ಪೂಜಿಸಿದವರು ಶಿವಸಾಯುಜ್ಯವನ್ನು ಪಡೆಯುವರೆಂದೂ ಹೇಳಿದೆ.

2



# ವಿಗಡ ವಿಕ್ರಮರಾಯ

(ನಾಂದ್ಯಂತದಲ್ಲಿ ಸೂತ್ರಧಾರನ ಪ್ರವೇಶ.)

ಸೂತ್ರಧಾರ :—(ಸಭೆಗೆ ಬಾಗಿ ವಂದಿಸಿ,)

ಶ್ರೀಮತ್ಪನ್ನಗತಲ್ಪನುದ್ಧತರಟಜ್ಜ ಕ್ರಾಯುಧಂ ಮೋಹಿನೀ |
ರಾಮಾವಲ್ಲಭನುಗ್ರಗೃಧ್ರಪತಿಗಂ ತಾಂ ಸ್ವಾಮಿಯಾಗಿರ್ದೊಡಂ ||
ಪ್ರೇಮಂ ತನ್ನೊಳಮಾ ಪರಸ್ಪರರೊಳಂ ಸಾಲ್ವಂತಿರಾಳ್ವಾತನು |
ದ್ದಾಮಂ ತತ್ಪ್ರಭುಶಕ್ತಿಯಿಂ ಪೊರೆಯುತುಂ ಪಾಲಿಕ್ಕೆ ! ಭೂಮೀ
ಶರಂ ||

ಸ್ವಾಮಿದ್ರೋಹಾಡಂಬರ |
ನಾಮಾನಿಯೆ ವಿಗಡವಿಕ್ರಮನ ಚರಿತಮನೀ ||
ನಾಮರಿದಂತಭಿನಯಿಪೆವು |
ಧೀಮತ್ಸಭ್ಯರಿರ, ತಿದ್ದಿ ಪೊರೆವುದು ನಮ್ಮಂ ||

(ಹೋಗುವನು.)

## ಪ್ರವೇಶ ೧.

[ಸ್ಥಾನ—ಶ್ರೀರಂಗಪಟ್ಟಣ, ದಳವಾಯಿ ವಿಕ್ರಮರಾಯನ ಹರ್ಮ್ಯದ ಅಂತರಾಳ.]

(ವಿಕ್ರಮರಾಯನು ಶಯ್ಯೆಯಲ್ಲಿ ತಲೆಗಿಂಬಿನ ಕವುಳುಡೆಯನ್ನೊರಗಿ ಕುಳ್ಳಿರುವನು. ಬಾಗಿಲ ಪಾರ್ಶ್ವದಲ್ಲಿ ಆಸ್ಥಾನದ ಕರಣಿಕರಿಬ್ಬರೂ ತಲೆವಾಗಿ, ವಿಷಣ್ಣಭಾವದಿಂದ ನಿಂತಿರುವರು.)

ಒಬ್ಬ ಕರಣಿಕ :—(ಸ್ವಲ್ಪಹೊತ್ತಿನ ಬಳಿಕ, ದೈನ್ಯದಿಂದ,) ಶ್ರೀಮನ್ಮಹಾರಾಜರವರೇ ಸ್ವತಃ ಬಿಜಯಮಾಡಿಸಿ.........

ವಿಕ್ರಮರಾಯ :—(ನಿಷ್ಠುರಸ್ವರದಿಂದ) ಸಾಕು, ಮುಚ್ಚು, ಗುಲಾಮ !— ಮಹಾರಾಜನಂತೆ ! ಇತರರೊಬ್ಬರನ್ನೂ ಒಲ್ಲದೆ, ನಿಮ್ಮಿಬ್ಬರನ್ನೇ

ನಮ್ಮ ವಿಶ್ವಾಸದ ಆಂತರ್ಯದ ಕರಣಿಕರನ್ನಾಗಿ ಆಯ್ದುಕೊಂಡೆವೇಕೆ? ಆಯ್ದುವರುಷಗಳಿಂದ ತಿಂಗಳೊಂದಕ್ಕೆ ಎರಡೆರಡುಸಾಯಿರ ವರಹಗಳಂತೆ ನಿಮಗೆ ತೆತ್ತು, ತೆತ್ತು, ಹಾಳಾಗುತ್ತಿರುವೆವೇ ತತ್ಕ್ರೋಸ್ಕರವಾಗಿ? ಕೃತಜ್ಞತೆ! ಸ್ವಾಮಿಭಕ್ತಿ! ......... **(ಮೊಳಕಯ್ಗಳ ಮೇಲಿದ್ದು,)** ತೊಲಗಿ!............ನಡೆಯಿರಿ! ಇಂದಿನಿಂದ ಕರಣಿಕತನವನ್ನು ಕಾಳಸರ್ಪಗಳಿಗೆ ವಹಿಸಿ, ನಿರಾತಂಕದಿಂದಿರುವೆವು; ಅವಕ್ಕೆ ಎರೆದ ಹಾಲೂ ವಿಷವಾಗುವುದಾದರೂ ಕೊಟ್ಟ ನಿಕ್ಷೇಪವನ್ನು ಅವು ನಿಮ್ಮಂತೆ ಬಯಸುವವರಿಗೆ ಬಿಟ್ಟುಕುಡದೆ, ಪ್ರಾಣಪಣದಿಂದ ರಕ್ಷಿಸಿರಿಸುವುವು.

**ಕರಣಿಕ** :—ಶ್ರೀಮಂತರು...............

**(ಹೊರಗೆ)** :—**(ಮಹಾರಾಜವಾದ್ಯಗಳು ಘೋಷಿಸತೊಡಗುವುವು.)**

ವಿಕ್ರಮರಾಯ :—**(ಹುಬ್ಬುಗಂಟಿಕ್ಕಿ,)** ಏನಿದು? ನಮ್ಮ ಆಜ್ಞೆಯನ್ನು ಮರೆತವನಾರು?

ಕರಣಿಕ :—ಅರಮನೆಯ ವಾದ್ಯಗಳೆಂಬಂತಿವೆ.

ವಿಕ್ರಮರಾಯ :—ಕಣ್ಗಳನ್ನರಲಿಸುವೆಯೇಕೆ, ಹೇಡಿ? ಹೋಗಿ, ನಮ್ಮ ಪ್ರಾಸಾದದೆಡೆಯಲ್ಲಿ ಆರ ಆವ ವಾದ್ಯಗಳಾದರೂ ಮೌನವಾಗಿ ನಡೆಯಬೇಕೆಂಬ ನಮ್ಮ ಕಟ್ಟಳೆಯನ್ನು ಆ ದುರುಳನಾವನಾದರೂ ಆವನಿಗೆ ತಿಳಿಹಿ ಬಾ—ಹೋಗು.

**(ಹಠಾತ್ತಾಗಿ ವಾದ್ಯಗಳು ನಿಲ್ಲುವುವು. ಸಪರಿವಾರ ಶ್ರೀಮನ್ಮಹಾರಾಜ ಇಮ್ಮಡಿರಾಜಒಡೆಯ—ಪ್ರವೇಶ.)**

ಮಹಾರಾಜ :—**(ಪ್ರವೇಶಿಸುತ್ತ ನಕ್ಕು,)** ಆ ದುರುಳನೇ ಶ್ರೀಮಂತರ ಕಟ್ಟಾಣತಿಯನ್ನು ಕಿವಿಯಾರೆ ಕೇಳಿ ಕೃತಾರ್ಥನಾದನಾಯ್ತು.

ಕರಣಿಕರು :—**(ಮಹಾರಾಜನಿಗೆ ಮುಗಿದ ನೀಡುಂಗಯ್ಗಳಿಂದ ಬಾಗಿ ನಮಸ್ಕರಿಸುವರು.)**

ಮಹಾರಾಜ :—(ಕರಣಿಕರತ್ತ ನಿರ್ದೇಶಿಸಿ, ವಿಕ್ರಮರಾಯನನ್ನು ಕುರಿತು,) ರಾಜ್ಯದಾಡಳಿತದ ಲೆಕ್ಕಪತ್ರಗಳನ್ನು ನಮಗೆ ತೋರಿಸಿದ ಮಹಾಪರಾಧಿಗಳು !—ದಣ್ಡನವಾಗುತ್ತಿದ್ದಿತೇನೊ !

ವಿಕ್ರಮರಾಯ :—(ಮಲಗಿರುವಂತೆಯೇ ಮುಗುಳ್ನಗೆನಕ್ಕು.) ಶಾಸ್ತ್ರಿಯಹುದು ; ಆದರೆ, ರಾಜತಂತ್ರಕ್ಕೆ ಸಂಬಂಧಿಸಿದ ಅತಿ ಗೋಪ್ಯವಾದ ಹಲವು ಲೆಕ್ಕಪತ್ರಗಳನ್ನು ಅವರು ಮಹಾರಾಜರಿಗೆ ಕಾಣಗುಡದುದರಿಂದ.—ಬಾ, ಪುಟ್ಟಸ್ವಾಮಿ !......ಇದೇನಿಂದೀ ಅಪೂರ್ವ ಯಾತ್ರೆ ? ನಮ್ಮ ದೀನಕುಟೀರದವರೆಗೆ ! (ಮಹಾರಾಜ ಪರಿವಾರದವರನ್ನೂ ಕರಣಿಕರನ್ನೂ ದುರದುರನೆ ನೋಡಿ,) ಮಹಾಸ್ವಾಮಿಯವರು ನಿಂತಿರುವುದು ಕಣ್ಗೆ ಕಾಣದೆ ? ಅತ್ತಣ ಸುಖಾಸನವನ್ನು ಅನುಗೊಳಿಸಿಟ್ಟರೆ, ನೀವು ತಿನ್ನುವ ಉಪ್ಪಿಗೆ ದ್ರೋಹಮಾಡಿದಂತಾಗುವುದೇನು ?

ಕರಣಿಕರು :—(ಸಂಭ್ರಮದಿಂದ ಸುಖಾಸನವನ್ನು ಮಂಚದ ಬಳಿಗೆಳೆದು, ಅದರೊಳಗಣ ಮೂಡಾವಿಗಳನ್ನು ಓಜೆಗೊಳಿಸಿಟ್ಟು, ಹಿಂಜರಿದು ನಿಲ್ಲುವರು.)

ಮಹಾರಾಜ :—(ಗಂಭೀರಭಾವದಿಂದ,) ದಳವಾಯಿ ವಿಕ್ರಮರಾಯ ! ನಿನ್ನ ಲೆಕ್ಕಿಗರು ಹೊರಗೆಡಹದೆ ಬಚ್ಚಿಟ್ಟು ಮಾಯಮಾಡಿದ, ರಾಜಮುದ್ರೆಗೆ ಸಂಬಂಧಿಸಿದ, ಆ ಲೆಕ್ಕಪತ್ರಗಳನ್ನೆಲ್ಲ ಆಮೂಲಾಗ್ರವಾಗಿ ಪರಿಶೀಲಿಸಿ ತಿಳಿಯಬೇಕೆಂಬ ಉದ್ದೇಶದಿಂದ ನಾವಿಲ್ಲಿಗೆ ಈಗ ಬಂದಿರುವೆವು.

ವಿಕ್ರಮರಾಯ :—ಇರಬಹುದು.

ಮಹಾರಾಜ :—ಅವೆಲ್ಲಿ ? ಬೇಗನೆ ತರಿಸು.

ವಿಕ್ರಮರಾಯ :—(ನಕ್ಕು,) ಆಗಬಹುದು.—ಬಾ, ಪುಟ್ಟಸ್ವಾಮಿ ! ನನ್ನಿದಿರಲ್ಲಿ ನಿಂತಿರುತ್ತಲೇ ಮಾತನಾಡುವುದನ್ನು ಇನ್ನಾದರೂ ಬಿಟ್ಟು, (ಸುಖಾಸನದತ್ತ ಕಯ್ತೋರಿಸಿ,) ಕುಳ್ಳಿರು. ನಿನಗೆ ಇಂದೀಗಳೇನುಬೇಕು ? ಬಿಜಾಪುರದ ಆಸ್ಥಾನದಲ್ಲಿರುವ ವಿದೇಶದ ಗಾಯಕನ ಆ ವಾದ್ಯ ;

ಬಳ್ಳಾರಿಯ ಮನೋರಮೆ; ದೆಹಲಿಯ ಬಾದಷಹನ ಮಹಲ್ಗಳನ್ನ ಪಹಾಸ್ಯಮಾಡುವಂತಹುದೊಂದು ಅಂತಃಪುರ; ಅದನ್ನು ಬಳಸಿ, ನಂದನವನವನ್ನು ನಾಚಿಸುವಂತೆ ಸಾಂಗವಾದ ಪರಿಪರಿಯ ಪುಷ್ಪೋದ್ಯಾನಗಳು; ಅವುಗಳೊಳಗೆ............ವನಲಕ್ಷ್ಮಿಯಂತೆ ಕುಸುಮಸಮಯಾಲಂಕೃತೆಯಾಗಿ, ಕಳಹಂಸೆಯಂತೆ ಅಲ್ಲಲ್ಲಿ ನಡೆಗಾಣಿಸಿ, ಶುಕಸತಿಯಂತೆ ನುಡಿದು, ಕೋಗಿಲೆಯಂತೆ ಮದಿಸಿ ಹಾಡುತ್ತ, ಅಪ್ಸರೆಯಂತೆ ಸ್ವೈರದಿಂದ ನರ್ತಿಸುವ ಲತಾಂಗಿಯಾದ ಆ ಗಾಲವನಗರಿಯ ಕುಟ್ಟಿ;.........

ಮಹಾರಾಜ :—(**ಕೊರಲ್ವಾಗಿದ್ದು.**) ಆಯ್ತೆ ?

ವಿಕ್ರಮರಾಯ :—ಬಾ, ಪುಟ್ಟಸ್ವಾಮಿ; ನೀನು ಕುಳಿತಿರದಿದ್ದರೆ ನಾವಾವಮಾತನ್ನೂ ಆಡುವುದಿಲ್ಲ.

ಮಹಾರಾಜ :—ನಾವು ಸೂಚಿಸಿದಂತೆ ಆ ಲೆಕ್ಕಪತ್ರಗಳನ್ನು ಒಪ್ಪಿಸಬಹುದಷ್ಟೆ ?

ವಿಕ್ರಮರಾಯ :—(**ಅಂಗಯ್ಗಳ ಮೇಲೆದ್ದು, ಬದ್ಧಭ್ರುಕುಟಿಯಾಗಿ, ಕಣ್ಣಾಲಿಗಳನ್ನೆಬ್ಬಿಸಿ, ಮಹಾರಾಜನನ್ನಡಿಯಿಂದ ಶಿರಸ್ಸಿನವರೆಗೆ ದಿಟ್ಟಿಸಿ.**) ನಮಗಿದು ಅರ್ಥವಾಗುತ್ತಿಲ್ಲ !

ಮಹಾರಾಜ :—ಏನು ?

ವಿಕ್ರಮರಾಯ :—ನಿನ್ನ ಇಂದಿನ ಈ ವೇಷವಿದು; ಆ ವೃದ್ಧ—ರಂಗಜೋಯಿಸರೇನಾದರೂ ತಪ್ಪಿ, ಈವೊತ್ತು ಮಹಾನವಮಿಯ ಪಾಡ್ಯಮಿಯೆಂದು ನಿನಗೆ ಭ್ರಮೆಯನ್ನು ಹುಟ್ಟಿಸಿಟ್ಟರೋ ?

ಮಹಾರಾಜ :—ಹುಂ.

ವಿಕ್ರಮರಾಯ :—ಮತ್ತೆ, ಈವೊಡ್ಡೋಲಗದ ಉಡುಗೆತುಡುಗೆಗಳು .........ಪಟ್ಟದ ಕತ್ತಿಯು, ಶಿಖಾಸರವು—ಮುದ್ರೆಯುಂಗುರವೂ ಹೀಗೆ ಇಂದೇಕೆ ? ಇವೆಲ್ಲವನ್ನೂ ಬೊಕ್ಕಸದಿಂದ ನಿನಗೆ ತೆಗೆದಿತ್ತವರಾರು ? ನಮಗೆ ಅರ್ಥವಾಗಿಲ್ಲ.

ಮಹಾರಾಜ :—ದಳವಾಯಿ ಮಹಾಶಯರೆ, ನಮ್ಮಿದಿರಲ್ಲಿಯಾದರೂ ನಮಗೆ ಸಲ್ಲತಕ್ಕ ಗೌರವಮರ್ಯಾದೆಗಳನ್ನರಿತು ನೀನು ನಡೆದುಕೊಳ್ಳಬೇಕೆಂದು ನಾವಾಗಿ ನಿರವಿಸೋಣವೆ?

ವಿಕ್ರಮರಾಯ :—(ನಕ್ಕು,) ಹಾಗೆಂದರೆ ?

ಮಹಾರಾಜ :—(ತನ್ನೆದೆಯನ್ನು ಮುನ್ನೀಡಿ, ಮೊಗವೆತ್ತಿ, ದರ್ಪದಿಂದ,) ನಿನ್ನ ವಿಷಯವನ್ನು ಏಕವಚನದಲ್ಲಿ ಹೇಳಿಕೊಳ್ಳುತ್ತ, ನಾವಾರೆಂಬುದನ್ನು ಮರೆಯುದಿರು.

ವಿಕ್ರಮರಾಯ :—(ನೆಟ್ಟನೆ ಕುಳಿತು, ಕೌತುಕದಿಂದ,) ನೀವಾರು ?

ಮಹಾರಾಜ :—ನಾವಾರು ! (ಥಟ್ಟನೆ ಪಾರ್ಶ್ವಕ್ಕೆ ತಿರುಗಿ, ವಂದಿಮಾಗಧರತ್ತ ನೋಡುವನು.)

ವಂದಿಮಾಗಧರು :—(ಕಯ್ಯೆತ್ತಿ,) ಜಯಜಯ ಮಹಾರಾಜ! ಜಯ ಜಯ ಮಹಾಸ್ವಾಮಿ !

ಸ್ವಸ್ತಿಶ್ರೀಮತ್ಪಶ್ಚಿಮರಂಗನಾಥಪಾದಾರವಿಂದಮಧುಕರಾಯಿತ ಚಿತ್ತ !

ಮತ್ತರಿಪುಷಂಡಖಣ್ಡನೋದ್ದಂಡದೋರ್ದಂಡ !

ಅರ್ಥಿಜನೇಪ್ಸಿತಾರ್ಥದಾನಶೌಂಡ !

ಅಂಗನಾಜನಕುಸುಮಕೋದಣ್ಡ !

ಬಾಹುದಂಡಧೃತವಿವಿಧಾಯುಧಪ್ರಕಾಂಡ !

ಬಿರುದಂತೆಂಬರಗಂಡ !

ಮಿತ್ರಕುಲಕಮಲಮಾರ್ತಾಂಡ !

ಮೊನೆಗಾರ !

ಸುಗುಣಗಂಭೀರ !

ರಾಜಕಂದರ್ಪ !

ವೀರ !

ಶೂರ !
ಮಲೆವರಗಂಡ !
ಅಭಯಪ್ರತಾಪಾಧೀಶ್ವರ !
ಶರಣಾಗತಪರಿಪಾಲಕ !
ಸಂಗೀತಲೋಲ !
ಸಾಹಿತ್ಯರತ್ನಾಕರ !
ಸೂರ್ಯಚಂದ್ರಶಂಖಚಕ್ರಾಂಕುಶಕುಠಾರಮಕರಮತ್ಸ್ಯಹನೂಮ
ದ್ಗರುಡಕಂಠೀರವಾದ್ಯನೇಕಬಿರುದಾಂಕಿತ !
ರಾಜಾಧಿರಾಜ !
ಮಹಾರಾಜ !
ಶ್ರೀಮನ್ಮಹೀಶೂರರತ್ನಸಿಂಹಾಸನಾಧೀಶ್ವರ !
ಶ್ರೀಇಮ್ಮಡಿರಾಜಒಡೆಯ !
ಜಯಜಯಮಹಾಸ್ವಾಮಿ !
ವಿಜಯೀಭವ !

ಮಹಾರಾಜ :—(ವಿಕ್ರಮರಾಯನತ್ತ ನೆಗ್ಗಿ ನಿಂತು,) ನಾವಾರೆಂಬುದನ್ನೀಗ ಅರಿವುಗೊಂಡೆಯ, ವಿಕ್ರಮರಾಜಯ್ಯ ?

ವಿಕ್ರಮರಾಯ :— (ಚಿಕ್ಕನೆ ಮಂಚದಿಂದಿಳಿದು, ಮಹಾರಾಜನಿಗೆ ಮಣಿದು ನೀಡುಂಗಯ್ಗಳಿಂದ ವಂದಿಸಿ, ಕಿಳ್ಮೊಗನಾಗಿ ನಿಂತು, ವಿನೀತಭಾವದಿಂದ,) ಪಾದದ ಸೇವಕನ ಸರ್ವಾಪರಾಧಗಳನ್ನೂ ಕ್ಷಮಿಸಿ, ಮಹಾಸ್ವಾಮಿಯುವರು ಕಾಪಿಡಬೇಕು.

ಮಹಾರಾಜ :—(ವಿಕ್ರಮರಾಯನನ್ನೇ ಆಭೀಕ್ಷಿಸುತ್ತಿದ್ದು, ಸಂದಿಗ್ಧಸ್ವರದಿಂದ,) ಉಳಿದ ಆ ಲೆಕ್ಕಪತ್ರಗಳೆಲ್ಲಿ ?

ವಿಕ್ರಮರಾಯ ·—(ಹಿಂದಿನಂತೆ ಪುನಃ ತುಳಿಲ್ಗೆಯ್ದು,) ಮಹಾಸ್ವಾಮಿಯವರ ಅಪ್ಪಣೆಯಾದರೆ, ಇಲ್ಲಿಗೇ ಅವನ್ನು ತರಿಸುವೆನು.

ಮಹಾರಾಜ :—ಇನ್ನಿಲ್ಲಿ ನಾವು ನಿಲ್ಲಲಾರೆವು. ನಾಳಿನ ಪ್ರಾತಃಕಾಲಕ್ಕೆ ಆಸ್ಥಾನದ ಮಹಾಸಭೆಯು ನೆರೆಯುವುದು. ಆಗಳ್ಗೆ ರಾಜ್ಯದ ಅಖಿಲ ಲೆಕ್ಕಪತ್ರಗಳೂ ಅಲ್ಲಿ ನಮ್ಮ ಪರಾಂಬರಿಕೆಗೆ ಸಿದ್ಧವಾಗಿರಬೇಕು.

ವಿಕ್ರಮರಾಯ :—ಅಪ್ಪಣೆ, ಮಹಾಸ್ವಾಮಿ.

ಮಹಾರಾಜ,<br>ಅವನ ಪರಿವಾರದವರು } :—(ಹಿಂದಿರುಗಿ ಹೊರಟುಹೋಗುವರು.)

(ಹೊರಗೆ):—(ಓಲಗದ ವಾದ್ಯಗಳು ಮತ್ತೆ ಮೊಳಗಲಾರಂಭಿಸಿ, ಸ್ವಲ್ಪಸ್ವಲ್ಪವಾಗಿ ಕ್ಷೀಣವಾಗುವವು.)

ವಿಕ್ರಮರಾಯ :—(ಹವ್ವನೆ ಹಿಂದಕ್ಕೆ ನೆಗೆದುನಿಂತು, ಪ್ರಬಲವುಷ್ಟಿಯನ್ನೆತ್ತಿ ಬೀಸಿ, ರೋಷವಿಕಾರವಾದ ಮುಖವನ್ನೆತ್ತಿ ಸುತ್ತನೋಡಿ, ಹಲ್ಮೊರೆದು,) ವಿಕ್ರಮರಾಜಯ್ಯ! ಏಕವಚನದಲ್ಲಿ ಮಾತನಾಡಿಕೊ! ಮಿಕ್ಕ ಲೆಕ್ಕಪತ್ರಗಳು!.........ಹೂಂ!............ಸುಣ್ಣಿಲ ಹಿಡಿದಾಟಕ್ಕೆ ಮೆಯ್ಗೊಟ್ಟಡಕವಾಗದೆ ತಪ್ಪಿಸಿಕೊಂಡು ಉರುಳ್ದು ಹೊರಳಿಯಾಡುವ ಬೇಲದ ಕಸುಗಾಯದು ಆನೆಯ ಕಾಲ ಕೆಳಗೆ ಜಜ್ಜಿಹೋಗುವುದು ಸಂಭವವಲ್ಲವೆ? (ಕರಣಿಕರನ್ನು ಕಂಡು,) ತೊಲಗಿಹೋಗಿ! ಆ ಗುಪ್ತವಾದ ಲೆಕ್ಕಪತ್ರಗಳನ್ನೆಲ್ಲಾ ಈ ನಿಮಿಷವೇ ತಂದು, ನಮ್ಮಿದಿರಿಗೆ ಸುಟ್ಟು ನೀರಲ್ಲಿ ಕದಡಿ ತೀರಿಸಬೇಕು—ತಿಳಿಯಿತೆ? ಆ ಬಳಿಕ ನೀವು ಮಾಡಿಟ್ಟಿರುವ ಪೈಶುನ್ಯದ ಕುಚೇಷ್ಟಿತವನ್ನು ತಿದ್ದುವುದಾಗಲಿ.

## ಪ್ರವೇಶ ೨.

[ಸ್ಥಾನ ;—ಶ್ರೀರಂಗಪಟ್ಟಣ, ಅರಮನೆಯೊಳಗೆ ನಾಟ್ಯಶಾಲೆ.]

(ಪರಮಸುಂದರಿಯರಾದ ಹೊನಹುಗಾರ್ತಿಯರನೇಕರು ವಿವಿಧಾಲಂಕಾರಭೂಷಿತೆಯರಾಗಿ, ಅಲಂಕೃತಿಮಾಡಿಕೊಳ್ಳುತ್ತ, ನಾನಾ ಅವಸ್ಥೆಗಳಲ್ಲಿರುವರು. ಕೆಲವರು ವೀಣೆ ಕೊಳಲು ಮದ್ದಳೆ ಮುಂತಾದ ಸಂಗೀತವಾದ್ಯಗಳನ್ನು ಬಾಜಿಸುತ್ತಲೂ, ಹಲ

ವರು ಮೆಲ್ಲಗೆ ಹಾಡಿಕೊಳ್ಳುತ್ತಲೂ, ಆರೆಬರು—ಅದೃಶ್ಯರಾಗಿರುವ ವಾದಕರ ವಾದಿತ್ರಗಳಿಗೆ ಅನುಸಾರವಾಗಿ—ನರ್ತನಮಾಡುತ್ತಲೂ, ಕೆಲರು ಬಳಲ್ದು ಮಲಗಿನ ವಿಶ್ರಾಮಪೀಠಗಳ ಮೇಲೆ ಪರಿವಡೆದೊರಗಿಯೂ, ಹಲಬರು ಮುದ್ದಾಗಿ ನಿದ್ರಿಸುತ್ತಲೂ, ಅನ್ಯರು ಸಕಲ ಸಾಧನಗಳಿಂದ ಸುಸಜ್ಜಿತೆಯರಾಗಿ ಪಟಗಳ ಮೇಲೆ ಚಿತ್ರಿಸುತ್ತಲೂ, ಹೆರರು ಓಲೆಯ ಪುಸ್ತಕಗಳನ್ನೋದಿಕೊಳ್ಳುತ್ತಲೂ ಇರುವರು. ಪಲರು ಆ ಅಂತರಂಗಣದ ಮಣಿಭಿತ್ತಿಗಳಲ್ಲಿ ಸಾಧಿತವಾದ ಚಮತ್ಕಾರಿಕವೂ ಚಿತ್ರವಿಧವೂ ಆದ ಚಿತ್ರಾತ್ರಗಳನ್ನು ನೋಡಿ ನೋಡಿ ಮಾತನಾಡಿಕೊಳ್ಳುತ್ತಿರುವರು. ಬೇರೆಯವರು ಅಕ್ಷಚತುರಂಗಾದಿಗಳನ್ನಾಡುತ್ತಿರುವರು. ಉಳಿದ ನೀರೆಯರಲ್ಲಿ ಕೆಲಬರು ಅವರಿವರನ್ನು ನೋಡಿ ವಿಮರ್ಶಿಸುತ್ತ ಮಿಕ್ಕವರು ಪುಷ್ಪಗಳನ್ನು ಕೋಯುತ್ತ ಸುಗಂಧದ್ರವ್ಯಗಳನ್ನು ನೇರ್ಪಡಿಸುತ್ತ ಇರುವರು.)

(ಈಷತ್ಕಾಲಾನಂತರ, ಮಹಾರಾಜನ ಪ್ರವೇಶ.)

(ಒಡನೆಯೇ ಅಲ್ಲಿ ಗಭೀರ ನಿಶ್ಶಬ್ದವಾಗಿದ್ದು, ತರೆತೆರೆಯಾಗಿ ಕಳಕಳವೇರುತ್ತಿರುವುದು.)

ಎಲ್ಲರೂ :—(ಎದ್ದು, ಹರ್ಷವಿಸ್ಮಯಗಳಿಂದ ಅವನನ್ನೇ ಈಕ್ಷಿಸುತ್ತಿರುವರು).

ಒರ್ವಳು :—(ಕಯ್ಯೆತ್ತಿ) ಸುಸ್ವಾಗತವು, ಮದನಮೋಹನರಾಜ !

ಮಹಾರಾಜ :—(ದರಸ್ಮಿತನಾಗಿ, ತಲೆದೂಗುವನು.)

ಆಸುಂದರಿ :—(ಪುನಃ) ಜಯಜಯ ಶೃಂಗಾರರತ್ನಾಕರ !

ಸಕಲರೂ :—(ಕಯ್ಮುಗಿದು) ಜಯಜಯ ಶೃಂಗಾರರತ್ನಾಕರ !

ಆಕೆ :—ಜಯಜಯ ಪ್ರಣಯಪರಮೇಶ್ವರ !

ಸಮಸ್ತರೂ :—ಜಯಜಯ ಪ್ರಣಯಪರಮೇಶ್ವರ !

ಆಕೆ :—ಜಯಜಯ ಸಂಗೀತಲೋಲ !

ಅನಿಬರೂ :—ಜಯಜಯ ಸಂಗೀತಲೋಲ !

ಆಕೆ :—ಜಯಜಯ ಲಲ್ಲೆಯ ಲಾವಣ್ಯಲೀಲಾಲಲಿತ !

ಯಾವಲ್ಲಲನೆಯರೂ :—ಜಯಜಯ ಲಲ್ಲೆಯ ಲಾವಣ್ಯಲೀಲಾಲಲಿತ !

ಆಕೆ :—ಜಯಜಯ ಸಾನಂದಪರಮಸೌಂದರ್ಯಾವತಾರ !

ಸರ್ವರೂ :—ಜಯಜಯ ಸಾನಂದಪರಮಸೌಂದರ್ಯಾವತಾರ !

ಮತ್ತೊರ್ವಳು :—(ಎಲ್ಲರ ಬಗಸೆಗಳಿಗೂ ಪುಷ್ಪಗಳನ್ನು ತುಂಬುತಿದ್ದು, ತನ್ನ ಅಂಜಲಿಪುಟಗಳೊಳಗೂ ನಿಗುಂಬಿಸಿ ನಿಲಿಸಿಕೊಂಡು, ಅವನ್ನು ಸೇರ್ಕೆಗೆಯ್ದು, ಅನುವಾಗಿ ನಿಲ್ಲುವಳು.)

ಆಕೆ :—ಜಯಜಯ ಪ್ರಿಯದೇವ! ರಾಜಕಂದರ್ಪ!

ಅಖಿಲರೂ :—ಜಯಜಯ ಪ್ರಿಯದೇವ! ರಾಜಕಂದರ್ಪ! ವಿಜಯೀಭವ! (ಎಂದು ಉದ್ಘೋಷಿಸುತ್ತ ಕುಸುಮಾಂಜಲಿಗಳನ್ನು ಮಹಾರಾಜನ ಮೇಲೆ ಚೆಲ್ಲುವರು.)

ಮಹಾರಾಜ :—(ಸುತ್ತನೋಡಿ, ನಿಡುಸುಯ್ದು, ಅವಾಙ್ಮುಖನಾಗಿ, ಒಂದು ಸುಖಾಸನದೆಡೆಗೆ ಹೋಗಿ ಕುಳಿತುಕೊಳ್ವನು.)

ಎಲ್ಲರೂ :—(ನಗುತನಗುತ ಮಹಾರಾಜನ ಸುತ್ತಮುತ್ತಿಕೊಳ್ಳುವರು.)

ಮೊದಲನೆಯ ಸುಂದರಿ :—ಪಾಮರತೆ!......ನಿನ್ನ ಆ ಲಜ್ಜೆಯಿಲ್ಲದ ದೀರ್ಘನಿಶ್ವಾಸವು ಈ ಅಪ್ಸರೆಯರ ಸದಸ್ಸಿನ ಆತ್ಮಗೌರವಕ್ಕೆ ಪುಣ್ಯ ಪರಿಪೂರ್ಣತೆಗೆ ಅಪಮಾನವನ್ನು ಅಳವಡಿಸುತ್ತಿರುವುದೆಂಬುದರ ಅರಿವು ನಿನಗುಂಟಾಯ್ತೆ, ರಾಜಕಂದರ್ಪ? ಅದರ ಅರ್ಥವೇನು?

ಬೇರೊರ್ವಳು :—(ಮಹಾರಾಜನ ತೊಡೆಯಮೇಲೆ ಕುಳಿತು, ಅವನ ಗಲ್ಲವನ್ನೆತ್ತಿ ಮುಖವನ್ನು ಕಣ್ಬೇಟದಿಂದ ಕಟಾಕ್ಷಿಸಿ, ಆ ತರುವಾಯ ಅವನನ್ನು ಹಾಗೆಯೇ ಆಲಿಂಗಿಸಿಕೊಳ್ಳಲು ನಳಿದೋಳ್ಗಳನ್ನು ಸಾಚುವಳು.)

ಮಹಾರಾಜ :—(ಮೆಲ್ಲಗೆ ದೃಢತೆಯಿಂದ ಅವಳ ಕಯ್ಗಳನ್ನು ಹಿಡಿದವಳನ್ನೆಬ್ಬಿಸಿ ನಿಲ್ಲಿಸಿ, ತಲೆಯನ್ನಲ್ಲಾಡಿಸಿ,) ಬೇಗನೆಯೇ ಈ ಅಪ್ಸರೆಯರ ಮಹಾ ಸದಸ್ಸು ಇಲ್ಲಿಂದ—ಈಯರಮನೆಯಿಂದ ಹೊರಟುಹೋಗುವುದು.

ನಿಖಿಳರೂ :—(ಬೆಚ್ಚಿನಿಂತು,) ಏನು!

ಮೊದಲನೆಯವಳು :—(ಅನತಿಕಾಲದಬಳಿಕ,) ಸ್ಥಾನಭ್ರಷ್ಟತ್ವವೆ?

ಮಹಾರಾಜ :—(ತಲೆಯೆತ್ತಿ, ದೃಢಕಂಠದಿಂದ,) ಅಲ್ಲ. ಎಲ್ಲಿಯೇ ಆದರೂ ಇಂದಿನಿಂದ ನನಗೆ ಇಂತಹ ಆಟಪಾಟಗಳಿಗೆ ಅವಕಾಶವಿರದು.

ಮೊದಲವಳು :—ಅಂತದೇನು?

ಇನ್ನೊರ್ವಳು :—ರಾಜಕಂದರ್ಪನು ಸನ್ಯಾಸವನ್ನು ಸ್ವೀಕರಿಸುವನು!

ಎಲ್ಲರೂ :—(ನಗುವರು.)

ಎರಡನೆಯ ಸುಂದರಿ :—(ಮಹಾರಾಜನ ಕತ್ತಿನಿಂದ ಮುತ್ತಿನ ಕಂಠಿಕೆಯನ್ನೂ, ತನ್ನ ಕೊರಲ ಬಿರಿಮುಗುಳ್ಗಳ ತೋರದಂಡೆಯನ್ನೂ, ತೆಗೆದುಕೊಂಡು, ಜೋಡಿಸಿ ಹಿಡಿದೆತ್ತಿ, ಆರನ್ನೋ ಬಾಗಿಲತ್ತ ಹೊಡೆದಟ್ಟುವಂತೆ ಅಭಿನಯಿಸುತ್ತ ಹೋಗಿ, ಕಪಟರೋಷದಿಂದ,) ಹೋಗೆ ! ನಾಚುಗೆಯಿಲ್ಲದ ಹೇಡಿ ! ತೊಲಗು! (ಹಿಂದಿರುಗುವಳು.)

ಮಹಾರಾಜ :—ಅದಾರು ?

ಎರಡನೆಯವಳು :—ಓ ! ಅವಳೇ ?—ವೈರಾಗ್ಯದೇವತೆ.

ಸರ್ವರೂ :—(ಸುಹಾಸಿನಿಯರಾಗುವರು.)

ಮೂರನೆಯ ಸುಂದರಿ :—(ಆ ಸುಖಾಸನದ ಕೆಲದಲ್ಲಿ ಮಂಡಿಸಿ, ಮಹಾರಾಜನ ಬಾಹುವನ್ನೆತ್ತಿ ತನ್ನ ಕೊರಲ್ಗೆ ಸುತ್ತಿಕೊಳ್ಳುತ, ಪ್ರಣಯಪೂರಿತ ಸ್ವರದಿಂದ,) ಏನಾಯ್ತು, ಪ್ರಿಯಕಾಂತ ? ಇದೇಕೆ ನೀನಿಂದು ನಮ್ಮನ್ನು ಹೀಗೆ ಪರೀಕ್ಷಿಸುವೆ ? ನಮ್ಮ ಅಪರಾಧವಾವುದು ?

ಮಹಾರಾಜ :—(ತನ್ನ ಬಾಹುವನ್ನು ಮೆಲ್ಲನಿಂದೆಳೆದುಬಿಡಿಸಿಕೊಂಡು, ಅವರನಿಬರನ್ನೂ ನೋಡಿ,) ನೀವೆಲ್ಲರೂ ನನ್ನನ್ನು ಪ್ರೀತಿಸುವಿರಿ ;—

ಸಮಸ್ತರೂ .—(ಕಣ್ಮೊಗಗಳರಲ್ದು, ಪ್ರಣಯಸಾತ್ತ್ವಿಕಸ್ವರದಿಂದ,) ಅಹುದು !

ಮಹಾರಾಜ :—ನಿಮ್ಮ ಪರಿಶುದ್ಧವಾದ ಪ್ರೇಮಕ್ಕೆ ಪಾತ್ರನಾದ ನಾನು ಆವಾಗಳೂ ಇಲ್ಲಿ ನಿಮ್ಮೊಡನೆ ವಿಹಾರಿಸುತ್ತ ಕ್ರೀಡಿಸುತ್ತ ಸ್ವರ್ಗಸುಖವನ್ನಾರಾಧಿಸಿ ಅನುಭವಿಸುತ್ತಿರಲೇ ?

ಸಕಲರೂ :—ಅಹುದು, ರಾಜಕಂದರ್ಪ !

ಮಹಾರಾಜ :—(ಎದ್ದು ನಿಂತು,) ಅಥವಾ, ಸರ್ವಕರ್ತನಾದ ಪರಮೇಶ್ವರನು ನನ್ನ ಈ ಭುಜಕ್ಕೆ ಹೊರಿಸಿಟ್ಟಿರುವ ರಾಜ್ಯಭಾರವನ್ನಂಗೀಕರಿಸಿ ಅರ್ಥಮಾಡಿಕೊಂಡು, ನನ್ನ ಪ್ರಜಾಲೋಕವನ್ನು ಮಕ್ಕಳಂತೆ ಪರಿಪಾಲಿಸುತ್ತ, ನಾನು ಜನ್ಮಿಸಿದ ವೀರಕ್ಷತ್ರಿಯ ವಂಶಕ್ಕೆ ಪರಿಭವವಡಸದಂತೆ ಉದ್ದಾಮಶೌರ್ಯಔದಾರ್ಯಗಳನ್ನು ಬಳಸಿ, ನನ್ನ

ಹೆಸರನ್ನು ಸಾರ್ಥಕಮಾಡಿಕೊಂಡು, ಸತ್ತ್ವತಃ ಬಿರುದಂತೆಂಬರ ಗಣ್ಡನಾಗಿ, ಕಡುಪಿನ ಗಂಡುಗಲಿಗಳೂ ರಾಜನೀತಿವಿಶಾರದರೂ ಆದ ನನ್ನ ಶತ್ರುಗಳು ಸನ್ತತವೂ ನಡುಗುತ್ತಿರುವಂತೆ, ನಿಮ್ಮ ಪ್ರಣಯದ ಪುಣ್ಯದಿಂದ—ದಿಗನ್ತ ವಿಶ್ರಾಂತ ಕೀರ್ತ್ತಿಯ ಮಹಾ ರಾಜನಾಗಿ ರಾಜಿಸಲೆ ?

ಎಲ್ಲರೂ :—(**ವಿವರ್ಣ್ಣೆಯರಾಗಿ, ನಿಶ್ಶಬ್ದ.**)

ಮೊದಲನೆಯವಳು :—(**ಕಿಂದುಹೊತ್ತಿನ ತರುವಾಯ, ಕ್ಷೀಣಕಂಪಿತಸ್ವರದಿಂದ,**) ಅಹುದು, ರಾಜಕಂದರ್ಪ ; ನೀನು ಅಂತಹ ಮಹಾರಾಜನಾಗಬೇ ಕೆಂಬುದು ನಮ್ಮೆಲ್ಲರ ಆಸೆ.

ಪೆರಳೊರ್ವಳು :—(**ಬಾಷ್ಪಗದ್ಗದಸ್ವರದಿಂದ,**) ಆದರೆ,......ಆದರೆ,......

ಮೊದಲನೆಯವಳು :—(**ಕಣ್ಣೊರಸಿಕೊಂಡು, ಮಾತನಾಡಿದವಳನ್ನು ಕಿಸುಗಣ್ಣಿ, ಮಹಾರಾಜನತ್ತತಿರುಗಿ,**) ಆದರೆ, ಏನೂ ಇಲ್ಲ, ರಾಜಕಂದರ್ಪ ; ನೀನು ಅಂತಹ ಮಹಾರಾಜನೇ ಆಗಿ, ಪರಮೇಶ್ವರನ ಹೆಸರಿಗೆ, ಮಹೀ ಶೂರದೇಶಕ್ಕೆ, ನಿನ್ನ ಶೂರವಂಶದ ಬಿರುದಿಗೆ, ನಮ್ಮೆಲ್ಲರ ಪ್ರೇಮದ ವಿಶ್ವಾಸಕ್ಕೆ—ಆಸ್ತಿಕತೆಯನ್ನು ನೀನು ಒದವಿಸಬೇಕು. (**ಸ್ವಲ್ಪ ಕಾಲದ ಅನಂತರ, ಅವನತಮುಖಿಯಾಗಿ, ಕಿರುದನಿಯ ಗದ್ಗದದಿಂದ,**) ಹೋಗಿಬರುವೆವು, ರಾಜಕಂದರ್ಪ.

ಮಹಾರಾಜ :—(**ನಿರ್ವಿಣ್ಣನಾಗಿರುವನು.**)

ಮೊದಲನೆಯವಳು :—(**ಮೊಗವೆತ್ತಿ, ತನ್ನಗೆಳತಿಯರಿಗೆಲ್ಲ ಸನ್ನೆಮಾಡುವಳು.**)

ಹೆಂಗುಸರೆಲ್ಲ :—(**ಹೊರಡುವರು.**)

ಮೂರನೆಯವಳು :—(**ಮಹಾರಾಜನನ್ನೆಯ್ದು, ಅಳುತಳುತ್ತ,**) ನಿನ್ನ ಕಾಲ ಕಿರಿ ಯುಂಗುಟದ ನಖಮಣ್ಡಲವನ್ನಾದರೂ, ಒಮ್ಮೆ—ಕಡೆಯಬಾರಿ— ಒಮ್ಮೆ, ಮುದ್ದಿಸಿಹೋಗುವೆನು, ಪ್ರಿಯತಮ ! (**ಅವನ ಕೆಂದಳ ವನ್ನು ಹಿಡಿದುಕೊಳ್ವಳು.**)

ಇತರೆಯೊರ್ವಳು :—ಅಯ್ಯೋ ! ಇನ್ನು ನಮ್ಮ ಜೀವನಕ್ಕೆ—

ಮಹಾರಾಜ :—ನಿಮಗೆ ಒಬ್ಬೊಬ್ಬರಿಗೂ ಹತ್ತು ಹತ್ತು ಸಾಯಿರವರಹಗಳನ್ನು ನನ್ನ ಕೋಶಗೃಹದಿಂದ ಕುಡಬೇಕೆಂದು ನಿಯಮಿಸಿರುವೆನು.

ಮೊದಲ ಆಕೆ :—(**ಆ ಇತರೆಯನ್ನು ನೀರುತುಂಬಿದ ಕಣ್ಣಿಗಳಿಂದ ದೃಷ್ಟಿಸಿನೋಡಿ, ಔಡುಗಚ್ಚಿ,**) ಕೀಳ್ವಣ್ಣದ ಹೆಣ್ಣು !

ಸ್ತ್ರೀಜನರೆಲ್ಲ :—(**ಹೋಗುವರು.**)

ಮಹಾರಾಜ :—(**ಅತ್ತನೋಡುತಿದ್ದು, ಆ ಸುಖಾಸನದೊಳಗೆ ಕುಳಿತು, ಕಯ್ಮೊಗನಾಗಿ ಚಿಂತಿಸುತ್ತಿರುವನು.**)

(**ಮಹಾಮಾತೃಶ್ರೀ ಶಿಮ್ಮಾಜಮ್ಮಣ್ಣಿಯ ಪ್ರವೇಶ.**)

ಮಹಾಮಾತೃಶ್ರೀ :—(**ನಿಂತು, ಮಾತೃವಾತ್ಸಲ್ಯದ ಪುಣ್ಯದೃಷ್ಟಿಯಿಂದ ಮಹಾರಾಜನನ್ನು ಪಾವನಮಾಡಿ. ಹೋಗಿ, ಅವನ ಉಷ್ಣೀಷದ ಮೇಗೆ ಕಯ್ಯಿರಿಸಿ,**) ಪುಟ್ಟಸ್ವಾಮಿ !

ಮಹಾರಾಜ :—(**ತಲೆಯೆತ್ತಿನೋಡಿ, ತಟ್ಟನೇಳುತ್ತ,**) ಅಮ್ಮಯ್ಯ !—ಬನ್ನಿ, ಕುಳಿತುಕೊಳ್ಳಿ. ನಾಟ್ಯಶಾಲೆಗೆ. . .ನೀವು! . . . . . .ಇಲ್ಲಿಗೆ. . .ಬರುವುದೆಂದರೆ—

ಮಹಾಮಾತೃಶ್ರೀ :—ಇಂದು ಬೆಳಗಾಗುತ್ತಲೇ ನನಗೆ ಪುತ್ರೋತ್ಸವವಾಯ್ತು ; ಆ ಆನಂದ ಸಂಭ್ರಮದಲ್ಲಿ ನನಗೆ ಕಾಲದೇಶನಿಮಿತ್ತಗಳ ಪರಿಜ್ಞಾನವು ನಷ್ಟವಾಗಿ ಹೋಗಿದೆ, ಕಂದ.

ಮಹಾರಾಜ :—(**ನಕ್ಕು,**) ಅಹುದು, ಅಮ್ಮಯ್ಯ ; ಇಂದೇ ತಾನೇ ನನಗೂ ಜನ್ಮಾಂತರ ಪ್ರವೇಶವಾದುದು.—ಅಮ್ಮಯ್ಯ, ನೀವು ಕುಳಿತುಕೊಳ್ಳಿ !

ಇಬ್ಬರೂ :—(**ಸುಖಾಸನಗಳಲ್ಲಿ ಆಸೀನರಾಗುವರು.**)

ಮಹಾಮಾತೃಶ್ರೀ :—ಪುಟ್ಟಸ್ವಾಮಿ, ಹೀಗೆ ಅಕಸ್ಮಾತ್ತಾಗಿ ಈ ವಿಪರೀತ ಪ್ರಚಾರದ ಸೌಭಾಗ್ಯಕ್ಕೆ ಕಾರಣವೇನು ? (**ಸುತ್ತನೋಡಿ, ಪ್ರಫುಲ್ಲಾಸ್ಯೆಯಾಗಿ,**) ಮತ್ತೆ, . . . . . . . .

ಮಹಾರಾಜ :—(ಬೆಳ್ನಗೆವೆರಸು,) ಅಹುದು, ಅಮ್ಮಯ್ಯ ; ನನ್ನ ಅಪ್ಸರೆಯರನ್ನು ಬೀಳ್ಕೊಂಡು, ಅವರವರ ಸ್ಥಾನಗಳಿಗೆ ಕಳಿಹಿಕಳಿದೆನು. ಇನ್ನು ಆ ಅಪ್ಸರೆಯರಿಗೆ ಬದಲಾಗಿ ಪ್ರಧಾನಮಂತ್ರಿಗಳೂ, ಸಂಗೀತವಾದ್ಯಗಳೆಡೆಯಲ್ಲಿ ಶಸ್ತ್ರಾಸ್ತ್ರಗಳೂ, ಸಾರಿಮೇಳಕ್ಕೆ ಪ್ರತಿಯಾಗಿ ಸಪ್ತಾಂಗಮುದ್ರೆಯ ಮಂತಣಗಳೂ, ಆ ಸ್ವರ್ಗಸುಖದ ಪದವಿಗೆ ನನ್ನ ಪ್ರಜೆಗಳ ಕ್ಷೇಮಾಭ್ಯುದಯಗಳೂ ಕಯ್ಗೂಡಿ ನೆರವೇರಿ—ನಿಮ್ಮ ಆಶೀರ್ವಾದದಿಂದ—ನನ್ನನ್ನು ಚರಿತಾರ್ಥನನ್ನಾಗಿ ಮಾಡಬೇಕಾಗಿದೆ.

ಮಹಾಮಾತೃಶ್ರೀ :—(ಕಂಪಿತಸ್ವರದಿಂದ,) ಮಹಾದೇವನು ನಿನಗೆ ಮಂಗಳವನ್ನುಂಟುಮಾಡಿ, ರಕ್ಷಿಸಿಕೊಳ್ಳಲಿ, ಕಂದ !

ಮಹಾರಾಜ :—(ಎದ್ದು, ತನ್ನ ಮಾತೆಗೆ ನಮಸ್ಕರಿಸಿ, ಕುಳ್ಳಿರುವನು.)

ಮಹಾಮಾತೃಶ್ರೀ :—(ಅನತಿಕಾಲದಬಳಿಕ,) ಪುಟ್ಟಸ್ವಾಮಿ, ವಿಕ್ರಮರಾಯನನ್ನು ಏನುಮಾಡುವೆ ?

ಮಹಾರಾಜ :—ಅವನ ಕೃತ್ರಿಮತೆಯನ್ನು ಸುಳ್ಳುಲೆಕ್ಕಪತ್ರಗಳನ್ನು ದ್ರೋಹವನ್ನು ನಾಳಿನ ಓಲಗಸಾಲೆಯಲ್ಲಿ ಲೋಕಕ್ಕೆ ತಿಳಿಯುವಂತೆ ವಿಚಾರಿಸಿ, ವ್ಯಕ್ತಗೊಳಿಸಿ, ತರುವಾಯ ಅವನ ಸರ್ವಸ್ವವನ್ನೂ ಅರಮನೆಗೆ ತೆಗೆದುಕೊಂಡು, ಅವನನ್ನು ದೊಡ್ಡಗಿಡ್ಡಂಗಿಗೋ—ಶೂಲದಮರದ ತುತ್ತತುದಿಗೋ ನೂಕಿತೀರಿಸುವೆನು.

ಮಹಾಮಾತೃಶ್ರೀ :—ಎರಡನೆಯದೇ ಕ್ಷೇಮಕರವಾದುದು.

ಮಹಾರಾಜ :—ಹಾಗೆಯೇ ಆಗಲಿ, ಅಮ್ಮಯ್ಯ.

ಮಹಾಮಾತೃಶ್ರೀ :—(ಚೇವಸದಿಂದಿದ್ದು,) ಆದರೂ, ಅವನ ವಿಷಯದಲ್ಲಿ ಎಚ್ಚರಿಂದಿರು, ಪುಟ್ಟಸ್ವಾಮಿ !—ನಿನ್ನ ಅಪ್ಪಾಜಿಯವರ ಕಾಲಾನಂತರದಲ್ಲಿ, ಎಂದರೆ ಸುಮಾರು ಇಪ್ಪತ್ತು ವರುಷಗಳಿಂದ, ರಾಜ್ಯದ ಆಯವ್ಯಯಗಳೆಲ್ಲಾ ದಳವಾಯಿಗಳ ಕಯ್ಯೊಳತೆಯಾ

ಗಿದ್ದು, ಆ ದುರಾಶೆಯ ಧೂರ್ತರು ರಾಜಶಕ್ತಿಯ ದುರುಪಭೋಗದ…ಆ ಸವಿಯನ್ನು ಕಂಡುಕೊಂಡಿದ್ದಾರೆ. ನಿನಗೆ ಮೊದಲು ಆಳಿದ ನಿನ್ನ ಅಣ್ಣಾಜಿಯವರ ಮಕ್ಕಳು, ಚಾಮರಾಜಒಡೆಯರು, ಪಟ್ಟಕ್ಕೆ ಬಂದಾಗ ಏನೊಂದನ್ನೂ ಅರಿಯದ ಮಗುವಾಗಿದ್ದರು; ಅವರಿಗೆ ಪಾಠವನ್ನೋದಿಸುತ್ತಿದ್ದ ರಂಗನಾಥ ದೀಕ್ಷಿತ, ದಳವಾಯಿಯಾಗಿದ್ದ ಬೆಟ್ಟದ ಅರಸು, ಬೊಮ್ಮರಸ ಪಂಡಿತ—

ಮಹಾರಾಜ :—ಆರು ! ಈಗಳೂ ಅರಮನೆಗೆ ಔಷಧವನ್ನೊಪ್ಪಿಸುವ ನಿಯೋಗಿ ಬೊಮ್ಮರಸ ಪಂಡಿತನೆ ?

ಮಹಾಮಾತೃಶ್ರೀ :—ಅಹುದು, ಇವರೆಲ್ಲ ಆ ಚಾಮರಾಜಒಡೆಯರಿಗೆ ರಾಜ್ಯದಾಡಳಿತಗಳಲ್ಲಿ ಒಮ್ಮೆಯೂ ಮನವಾಗದಂತೆ—ಅವರು ಸರ್ವದಾ ಸ್ತ್ರೀಲೋಲರಾಗಿರುವಂತೆಯೂ ಸಮಕಟ್ಟಿ,ಆಳುತ್ತಿದ್ದರು.

ಮಹಾರಾಜ :—ನೀಚರು ! ……ಅದಕ್ಕೆ ವಿಕ್ರಮರಾಯನ ಒಪ್ಪುಗೆಯೂ ಸಹಾಯವೂ ಇದ್ದಿತಷ್ಟೆ ?

ಮಹಾಮಾತೃಶ್ರೀ :—ಆಗ ಅವನೂ ಒಬ್ಬ ದಳವಾಯಿಯಲ್ಲವೆ ?

ಮಹಾರಾಜ :—(ನೆಗೆದೆದ್ದು ಶತಪಥ ತಿರುಗುತಿದ್ದು, ಥಟ್ಟನೆ ನಿಂತು,) ಆಗ ನೀವು—ಅರಮನೆಯವರು……ಅನ್ತಃಪುರದವರು……ನೀವು ಮಾಡುತ್ತಿದ್ದುದೇನು ?

ಮಹಾಮಾತೃಶ್ರೀ :—(ಮೆಲ್ಲಗೆ,) ನಮ್ಮಿಂದೇನೂ ಆಗುವಂತಿರಲಿಲ್ಲ; ನಾವು ಅಬಲೆಯರಾದ ಹೆಂಗುಸರು.

ಮಹಾರಾಜ :—ಹೆಂಗುಸರು ! (ದಡದಡನೆ ಶತಪಥ ತಿರುಗುತ್ತಿದ್ದು, ನಿಂತು, ಎದೆಯಮೇಲೆ ಕರತಳವನ್ನಿಟ್ಟು ಒಂದೆರಡುಬಾರಿ ಕೆಮ್ಮಿ, ಸಮೀಪದ ಸುಖಾಸನವೊಂದರಲ್ಲಿ ಕುಳಿತು, ಮುಂಗಯ್ಯಿಂದ ಕಪೋಲಗಳನ್ನು ಪರೀಕ್ಷಿಸಿಕೊಳ್ಳುತಿದ್ದು, ಹಿಂದಕ್ಕೊರಗಿ, ಕಯ್ಗಳನ್ನು ಹೆಡಕಿನ ಕೆಳಗೆ ಜೋಡಿಸಿಕೊಳ್ಳುತ್ತ ದೀರ್ಘನಿಶ್ವಾಸವನ್ನು ಬಿಡುವನು.)

ಮಹಾಮಾತೃಶ್ರೀ :—(ಭಯಗೊಂಡೆದ್ದು ಹೋಗಿ, ಮಹಾರಾಜನ ಕೆನ್ನೆಯನ್ನು ಮುಟ್ಟಿನೋಡಿ, ತಳ್ಳಂಕದಿಂದ,) ಜ್ವರ!—ಕಂದ, ನಿನಗೆ ಜ್ವರವು ಬಂದಿದೆ!

ಮಹಾರಾಜ :—(ಎವೆಗಳನ್ನು ಮುಚ್ಚಿ ತೆರೆದು, ಮೆಲ್ಲನೆ,) ಇರಬಹುದು, ಅಮ್ಮಯ್ಯ; ನನ್ನ ದೇಹಕ್ಕೆ ಬಹಳ ಆಯಾಸವಾದಂತಿದೆ. ಓ! ಅದೇನೂ ಇಲ್ಲ, ಅಮ್ಮಯ್ಯ; ನೀವು ಹೆದರಬೇಡಿ. ಇಂದು ಬೆಳಗಿನಿಂದಳವಟ್ಟ ಅನೇಕ ಉದ್ವೇಗ--ಮನೋವಿಕಾರಗಳಿಂದ ನನಗೆ ಬಳಲ್ಕೆಯೂಗಿದೆ, ಅಷ್ಟೇ. ಸ್ವಲ್ಪ ಅಭ್ಯಾಸವಾದರೆ,......... (ಕಣ್ಮುಚ್ಚಿಕೊಳ್ವನು)

ಮಹಾಮಾತೃಶ್ರೀ :—ಪಂಡಿತರಿಗೆ ಹೇಳಿಕಳುಹುವೆನು.

ಮಹಾರಾಜ :—(ಕಿರಿದುಹೊತ್ತಿನಬಳಿಕ, ಕನವರಿಸುವನೆಂಬಂತೆ,) ಹುಂ.

## ಪ್ರವೇಶ ೩.

[ಸ್ಥಾನ:—ಶ್ರೀರಂಗಪಟ್ಟಣ, ವಿಕ್ರಮರಾಯನ ಹರ್ಮ್ಯಾಗ್ರದ ಮೊಗಸಾಲೆ.]

(ವಿಕ್ರಮರಾಯನು ಬರೆಯುತ್ತಿರುವನು.)

ವಿಕ್ರಮರಾಯ :—(ಕಡೆಗೆ,) ತುಂಗ!—ತುಂಗ!—ತುಂಗ!

(ತುಂಗರಾಯನು ಓಡಿಬರುವನು.)

ತುಂಗರಾಯ :—ಶ್ರೀಮಂತರು ಕರೆದಂತಾಯ್ತು.

ವಿಕ್ರಮರಾಯ :—ಈವೋಲೆಗೆ ಕರಣಿಕರಿಂದ ನಮ್ಮ ಮುದ್ರೆಯನ್ನು ಹಾಯ್ಕಿಸಿ, ಒಡನೆಯೇ ನೀನಿದನ್ನು ತೆಗೆದುಕೊಂಡು ಹೊರಟು, ನಾಳೆ ಬೆಳಗಾಗುವುದರೊಳಗಾಗಿ ತೆರಕಣಾಂಬಿಯಲ್ಲಿರುವ ನಮ್ಮ ನರಸರಾಜನಿಗೆ ಮುಟ್ಟಿಸಬೇಕು.

ತುಂಗರಾಯ :—ಶ್ರೀರಣಧೀರಕಂಠೀರವನರಸರಾಜರಿಗೆ?

ವಿಕ್ರಮರಾಯ :—ಅಹುದು.

ತುಂಗರಾಯ :—ಅಪ್ಪಣೆ.

ವಿಕ್ರಮರಾಯ :—ಅಲ್ಲಿಯವರಾರಾದರೂ ರಾಜಧಾನಿಯ ವೃತ್ತಾಂತ ವೇನೆಂದು ಬೆಸಗೊಂಡರೆ, ಶ್ರೀಮನ್ಮಹಾರಾಜ ಇಮ್ಮಡಿರಾಜಒಡೆ ಯರು ಸ್ವರ್ಗಸ್ಥರಾದರೆಂದು ಹೇಳು.

ತುಂಗರಾಯ :—(ನಡನಡುಗಿ, ಬಣ್ಣಗೆಟ್ಟು, ಬಿಡುಗಣ್ಣನಾಗಿದ್ದು, ಒಣಗಿದ ತುಟಿ ಗಳನ್ನು ಇರ್ಪುಗುಂದಿದ ನಾಲಗೆಯಿಂದ ಸವುರಿಕೊಂಡು,) ಆದರೆ,...... ಆದರೆ,......ಮಹಾರಾಜರು ಇನ್ನೂ ಬದುಕಿರುವರು ; ಅವರು ಇನ್ನೂ—ಸತ್ತಿಲ್ಲ.

ವಿಕ್ರಮರಾಯ :—(ತುಂಗರಾಯನನ್ನು ಕೆಂಗಣ್ಗಳಿಂದ ನಿಟ್ಟಿಸುತಿದ್ದು,) ನಮ್ಮ —ದಳವಾಯಿ ವಿಕ್ರಮರಾಯನ—ಮಾತಿನಲ್ಲಿ ನಿನಗೆ ಅವಿಶ್ವಾಸ ವುಂಟಾಯ್ತೆ ? ಇಲ್ಲದಿದ್ದರೆ, ನೀನು ಹೇಡಿಯಾದೆಯೊ ?

ತುಂಗರಾಯ :—(ನಿಮಿರಿನಿಂತು,) ಎರಡೂ ಇಲ್ಲ.

ವಿಕ್ರಮರಾಯ :—ಹೋಗು......ರಾಜಧಾನಿಯಲ್ಲಿ ಏನು ?

ತುಂಗರಾಯ :—(ಅದೃಢಸ್ವರದಿಂದ,) ಆಳಿದ ಮಹಾಸ್ವಾಮಿಯವರು ಶ್ರೀಮನ್ಮಹಾರಾಜ ಇಮ್ಮಡಿರಾಜಒಡೆಯರು ನಿನ್ನೆ ಸ್ವರ್ಗಸ್ಥ ರಾದರು. ರಾಜಧಾನಿಯು...ದೇಶವೇ ಶೋಕಸಾಗರದಲ್ಲಿ ಮುಳುಗಿ ಹೋಗಿದೆ.

ವಿಕ್ರಮರಾಯ :—ಹುಂ. ಹಾಗೆಂದೂ ಈ ಓಲೆಯಲ್ಲಿ ಬರೆದಿರುವೆವು ; ಜೋಕೆ !

ತುಂಗರಾಯ :—(ಓಲೆಯನ್ನು ತೆಗೆದುಕೊಂಡು, ಹೊರಡುವನು.)

ವಿಕ್ರಮರಾಯ :—ತಡೆ, ತುಂಗ ; ಆ ಕಳ್ಳಕರಣಿಕರು ಅದಕ್ಕೆ ಮುದ್ರೆ ಯನ್ನಂಕಿಸುವಾಗ ಒಳಗಣ ಬರೆಹವನ್ನೋದಿಕೊಳ್ಳದಂತೆ ಎಚ್ಚ ತ್ತು ನೋಡಿಕೊಳ್ಳುತ್ತಿರು.

ತುಂಗರಾಯ :—ಅಪ್ಪಣೆ.

ವಿಕ್ರಮರಾಯ :—ಕೆಳಗಣ ಅಂಗಳದಲ್ಲಿರುವ ಬೊಮ್ಮರಸಪಣ್ಡಿತನನ್ನಿತ್ತ ಕಳಿಹಿ, ಆ ಬಳಿಕ ನೀನು ಕರಣಿಕರ ಚಾವಡಿಗೆ ಹೋಗು.

# ಹೈದರಾಲಿಯ ನ್ಯಾಯಪಕ್ಷಪಾತ.

## (೧)

ಈ ದಿನ ಮದನನ ಅರಮನೆಯಲ್ಲಿ ದೊಡ್ಡದೊಂದು ಉತ್ಸವ. ಮದನನ ಅರಮನೆಯೆಂಬುದು ಕೊಯಿಮತ್ತೂರಿನ ಪಶ್ಚಿಮಭಾಗದಲ್ಲಿ ಒಂದು ದೊಡ್ಡಪ್ರಸಾದ. ಅದು ಅಲ್ಲಿಗೆ ರಾಜನಾಗಿದ್ದ ಮದನನು ವಾಸಮಾಡುತ್ತಿದ್ದ ಅರಮನೆ. ಆತನ ಕಾಲವು ಕಳೆದು ಹೈದರಾಲಿಯು ಅಲ್ಲಿ ವಾಸಮಾಡತೊಡಗಿ ಆರೇಳು ವರ್ಷಗಳಾದರೂ ಆ ಪ್ರಾಸಾದಕ್ಕೆ 'ಮದನನ ಅರಮನೆ' ಯೆಂಬ ಅಂಕಿತವು ತಪ್ಪಿರಲಿಲ್ಲ. ಹೈದರಾಲಿಯು ಅದನ್ನು ಆವಾಸಸ್ಥಾನವನ್ನಾಗಿ ಏರ್ಪಡಿಸಿಕೊಂಡವನು ಶಿಥಿಲವಾಗಿ ಅತ್ಯಂತ ಕ್ಷೀಣದಶೆಯಲ್ಲಿದ್ದ ಆ ಕಟ್ಟಡವನ್ನು ಉದ್ಧರಿಸಿ ಅಲಂಕಾರಮಾಡಿ ಮದನನ ಅರಮನೆಯೆಂಬ ಹೆಸರನ್ನು ಅನ್ವರ್ಥನಾಮವನ್ನಾಗಿ ಮಾಡಿದನು. ಅಲ್ಲಿನ ಅಣಿಯನ್ನು ನೋಡಿದರೆ ನವಾಬನು ಭೋಗಿಯೆಂದೂ ಸುಖಜೀವಿಯೆಂದೂ ಊಹಿಸಬಹುದಾಗಿತ್ತು.

ಅದರ ರಂಗಮಹಲಿನ ಅಗ್ರಭಾಗದಲ್ಲಿ ಪೂರ್ವದಿಕ್ಕಿಗೆದುರಾಗಿ ಚಚ್ಚೌಕನಾದೊಂದು ಎತ್ತರವಾದ ಸ್ಥಳವಿದ್ದಿತು. ಅದರ ಅಂಚಿನಲ್ಲಿ ನಾಲ್ಕು ಮೂಲೆಗಳಲ್ಲಿಯೂ ಜೋಡಿಗಂಬಗಳು ಜರತಾರಿಯ ಕೆಲಸಮಾಡಿದ ಕಿಂಕಾಬಿನ ಬಟ್ಟೆಯನ್ನು ಹೊದ್ದ ಮಂಟಪವನ್ನು ಹೊತ್ತುಕೊಂಡು ನಿಂತಿದ್ದುವು. ಚಾವಣಿಗೂ ಸೂರುಗಳಿಗೂ ಅನುರೂಪವಾದ ಅಲಂಕಾರ. ವೆಚ್ಚದ ಮೇಲೆ ಗಣನೆಯಿಲ್ಲದ ರೀತಿಯಲ್ಲಿ ಅಲಂಕೃತವಾದ ಆ ಪ್ರದೇಶದಲ್ಲಿ ನವಾಬನು ಕುಳಿತು ರಾಜ್ಯದಾಡಳಿತವನ್ನು ನಡೆಯಿಸುತ್ತಿದ್ದನು.

ಈ ದಿನ ಮಧ್ಯಾಹ್ನ ನವಾಬನು ತನ್ನ ಬಳಿಯಲ್ಲಿ ನೌಕರನಾಗಿದ್ದು ಈಗ ವಯಸ್ಸಾದುದರಿಂದ ಆ ನೌಕರಿಯನ್ನು ಬಿಡುವುದರಲ್ಲಿದ್ದ ಆಗಾಮುಹಮದನಿಗೆ ಬಹುಮಾನ ಮಾಡುವನು. ಆಗಾಮುಹಮದನು ನವಾಬನ ವಿಶ್ವಾಸಕ್ಕೆ ಪಾತ್ರನಾದವನು. ಬಹು ಕಾಲದಿಂದಲೂ ಅವನ ಬಳಿಯಲ್ಲಿಯೇ ಇರುತ್ತ ಕಷ್ಟಸುಖಗಳೆರಡರಲ್ಲಿಯೂ ನವಾಬನನ್ನು ಅನುಸರಿಸಿದ್ದನು. ನವಾಬನೆಂದು ಅಂಕಿತವನ್ನು ಧರಿಸಿ ಮೈಸೂರು ರಾಜ್ಯವನ್ನು ಆಳಲಾರಂಭಿಸಿದ ಮೇಲೆ, ಹೈದರನು ಅವನನ್ನು ಬಿಟ್ಟಿರ

ಈ ಕಥೆಯು M. M. D. L. T. ಎಂಬ ಫ್ರೆಂಚ್ ಲೇಖಕನೊಬ್ಬನು ಬರೆದ ಹೈದರ್ ಆಲಿಯ ಚರಿತ್ರೆಯ ಒಂದು ಸಂಗತಿಯನ್ನು ತೆಗೆದುಕೊಂಡು ವಿಸ್ತರಿಸಿದ್ದಾಗಿದೆ.

ಲಾರದೆಯೂ ಅವನು ಹೈದರನನ್ನು ಬಿಟ್ಟಿರಲಾರದೆಯೂ ಆಗಿ ಆಗಾಮುಹಮುದನು ಖಾಸ್‌ಭಕ್ಷಿಯೆಂದು ಅಧಿಕಾರವನ್ನು ಪಡೆದು ನವಾಬನ ಬಳಿಯಲ್ಲಿ ನಿಂತನು. ಆಗಿನಿಂದ ಇದುವರೆಗೆ ತನ್ನಂತಹ ಸೇವಕನಿಲ್ಲವೆನ್ನಿಸಿಕೊಂಡು ಕೆಲಸಮಾಡಿದನು. ನವಾಬನು ಅವನಿಗೆ 'ಖಾನ್' ಎಂಬ ಬಿರುದನ್ನೂ ಇತರ ಖಿಲ್ಲತ್ತುಗಳನ್ನೂ ರಾಮಗಿರಿಯೆಂಬ ಜಹಗೀರಿಯನ್ನೂ ಅನುಗ್ರಹಿಸುವುದಾಗಿ ನಿಷ್ಕರ್ಷೆಯಾಗಿತ್ತು.

ಸಭೆಗೆ ಬಂದು ಕುಳಿತು ಆ ದಿನದ ವಿಶೇಷ ಸಮಾಚಾರಗಳನ್ನು ಕೇಳಿ, ಬಂದಿದ್ದ ಮುಖ್ಯಸ್ಥರೊಡನೆ ಕುಶಲಪ್ರಶ್ನೆಗಳಾದ ಮೇಲೆ ಹೈದರನು ಆಗಾಮುಹಮುದನನ್ನು ಕರೆಯಿಸಿದನು. ಅವನು ಕಾಣಿಸಿಕೊಂಡು ಮುಜರೆ ಮರ್ಯಾದೆಗಳಾದ ಮೇಲೆ ನವಾಬನು ಹಾರವನ್ನು ತರಿಸಿ ಅವನ ಕೊರಳಿಗೆ ಹಾಕಿದನು. ನವಾಬನ ಸ್ವಂತಹಸ್ತದಿಂದ ಆ ರೀತಿಯಾಗಿ ಬಹುಮಾನವನ್ನು ಪಡೆಯುವುದು ಸುಲಭವಲ್ಲ. ಅಂತಹ ಮನುಷ್ಯನ ಯೋಗ್ಯತೆಯು ಅಪರಿಮಿತವಾದುದೆಂದು ಎಣಿಸಲ್ಪಡುತ್ತಿದ್ದಿತು. ಹಾರಹಾಕಿದ ಮೇಲೆ ಆಗಾಮುಹಮುದನು ನೆಟ್ಟಗೆ ನಿಂತು ಸಲಾಮುಮಾಡಿ ಕೈಜೋಡಿಸಿ ನಿಂತನು. ಖಿಲ್ಲತ್ತುಗಳನ್ನು ಅಧಿಕಾರಿಗಳು ಸಲ್ಲಿಸಿದರು. ಭಕ್ಷಿಯೊಬ್ಬನು ಕಾಗದದ ಸುರುಳಿಯೊಂದನ್ನು ಅವನ ಕೈಗಿಟ್ಟನು. ನವಾಬನು ಅದನ್ನು ತೋರಿಸುತ್ತ ಹೀಗೆಂದನು. "ಆಗಾಮುಹಮುದ್, ಜಹಗೀರಿಯು ಪುತ್ರಪೌತ್ರ ಪರಂಪರೆಯಾಗಿ ನಿನ್ನಿಂದ ಅನುಭವಿಸಲ್ಪಡತಕ್ಕದ್ದೆಂದು ಆ ಸನ್ನದು ನಿನ್ನ ಸ್ವಾಮ್ಯವನ್ನು ಹೊಗಳುವುದು. ಅದನ್ನು ತೆಗೆದುಕೊ; ಸುಖದಿಂದ ಜೀವನಮಾಡು. ಪಟ್ಣದಲ್ಲಿ ಬಂದು ಆಗಾಗ್ಯೆ ನಮ್ಮನ್ನು ಕಾಣುತ್ತಿರು. ದೇವರು ನಿನಗೆ ಶ್ರೇಯಸ್ಸನ್ನೂ ಕಲ್ಯಾಣವನ್ನೂ ಉಂಟುಮಾಡಲಿ!"

ಆಗಾಮುಹಮುದ್‌ಖಾನನು ಆ ಗೌರವವನ್ನು ಶಿರಸಾವಹಿಸಿ ತಾನು ಇಂದಿಗೆ ಧನ್ಯನಾದೆನೆಂದೂ ಜನ್ಮವನ್ನೆತ್ತಿದುದು ಸಾರ್ಥಕವಾಯಿತೆಂದೂ ಎಣಿಸಿಕೊಂಡನು. ಆ ಕಾಲದಲ್ಲಿ ಅವನಂತಹ ಸುಖಿಯು ಮತ್ತೊಬ್ಬನಿರಲಿಲ್ಲ.

ಸಭೆಯು ಕೊನೆಗೊಂಡಿತು. ಆದರೆ ಪುರಸ್ಕಾರವು ಇನ್ನೂ ಪೂರೈಸಲಿಲ್ಲ. ಆಗಾಮುಹಮುದ್‌ಖಾನನ ಗೌರವಕ್ಕಾಗಿ ಸಂಜೆಗೆ ನಾಟಕವೊಂದನ್ನು ನವಾಬನ ನಾಟಕದ ಪಡೆಯವರು ಅಭಿನಯಿಸಿದರು. ಅದರಲ್ಲಿ ಮೆಹರಳು ತನ್ನ ಅಭಿನಯದಿಂದಲೂ ನರ್ತನದಿಂದಲೂ ಎಲ್ಲರನ್ನೂ ಮೋಹಗೊಳಿಸಿಬಿಟ್ಟಳು.

(೨)

ಆಗಾಮುಹಮ್ಮದನಂತೆ ಮೆಹರಳೂ ಸುಲ್ತಾನರ ಆಶ್ರಿತಳು. ಅವಳು ಖಾಸ್‌ಭಕ್ಷಿಯಷ್ಟು ದೊಡ್ಡ ಅಧಿಕಾರಕ್ಕೆ ಬರದಿದ್ದರೂ ತನ್ನ ಕೆಲಸದಲ್ಲಿ ಒಳ್ಳೆಯ

ಹೆಸರನ್ನು ಪಡೆದು ಹೈದರನ ಮೆಚ್ಚಿಕೆಗೆ ಪಾತ್ರಳಾಗಿದ್ದಳು. ಆದ್ದರಿಂದ ಭಕ್ಷಿಗೆ ಅವಳಮೇಲೆ ಮೊದಲಿಂದ ಅನುರಾಗವಿದ್ದರೂ ಅದನ್ನು ಬಾಯಿಬಿಟ್ಟು ಹೇಳುವಂತಿರಲಿಲ್ಲ. ಮೊದಲು ಸಾಮಾನ್ಯನಾಗಿದ್ದರೂ ಕ್ರಮೇಣ ಧನಸಂಪಾದಿಸಿಯಾಯಿತು, ಇತರರಿಗಿಂತ ಒಂದು ಕೈ ಮೇಲಾಗಿ ಜೀವಿಸುವಷ್ಟು ಸಿರಿವಂತನಾದನು. ಆದರೆ ಅವನ ರಾಣಿವಾಸವು ಬರಿದಾಗಿದ್ದಿತು. ಈಗ ಅದನ್ನು ತುಂಬಬೇಕೆಂಬ ಆಶೆಯು ಬಲವಾಗಿತ್ತು; ಯಾರನ್ನು ಬೇಕಾದರೂ ಕೈಹಿಡಿಯುವಷ್ಟು ಅಂತಸ್ತೂ ಗೌರವವೂ ಹೊಸದಾಗಿ ಬಂದಿದ್ದುವು. ಅಲ್ಲದೆ ಈದಿನ ನವಾಬರು ತನಗೆ ಮಾಡಿದ ಮನ್ನಣೆಗಳನ್ನು ನೋಡಿ ಮೆಹರಳು ಮೂಗಿನಮೇಲೆ ಬೆರಳಿಡುವಳೆಂದುಕೊಂಡನು. ಒಂದು ಮಾತು ಹೇಳಿದರೆ ಸಾಕು, ಮೆಹರಳಂಥವರು ನೂರುಮಂದಿ ಓಡಿಬಂದು ತನ್ನ ಕೈಹಿಡಿಯಲೆಳಸುವರೆಂದು ಅವನಿಗೆ ಅಹಂಭಾವವುಂಟಾಯಿತು. ಅವಳನ್ನು ಕೇಳುವುದೊಂದೇ ಉಳಿದಿದೆಯೆಂದೂ ಹಾಗೆ ಕೇಳುವುದೂ ವಸ್ತುತಃ ಅನುಗ್ರಹವೆಂದೂ ಅವನು ಭಾವಿಸಿಕೊಂಡನು.

ಅಂತು ಆ ರಾತ್ರಿಯೇ ನಾಟಕವಾದಮೇಲೆ ಹೊಂಚುಕಾದು ಅವಳನ್ನು ಕಂಡನು. ಮೆಹರಳು ಅರಮನೆಯ ಹಜಾರಕ್ಕೆ ಬಂದು ಅಲ್ಲಿ ಯಾರೂ ಇಲ್ಲದಿದ್ದುದರಿಂದ ಬುರುಕಿಯನ್ನು ಅರುಗುಮಾಡಿ ಹಣೆಯಮೇಲಿನ ಬೆವರುಹನಿಗಳನ್ನು ಒರಸಿಕೊಳ್ಳುತ್ತ ಮುಂದೆ ಹೋಗುತ್ತಿದ್ದಳು. ದೀಪದ ಬೆಳಕಿನಲ್ಲಿ ಆಗಾಖಾನನು ಮೆಹರಳನ್ನು ನೋಡಿದನು. ಎಂತಹ ಲಾವಣ್ಯ! ಖಾನನ ದೇಹವು ಪುಲಕಹೊಂದಿತು. ಹೃದಯದಲ್ಲಿ ಪ್ರೇಮವು ಉಕ್ಕಿಬಂದಿತು. ಆ ಪ್ರೇಮಭರದಿಂದ ಅವನು ಧೈರ್ಯಹೊಂದಿ ಕತ್ತಲೆಯನ್ನು ಬಿಟ್ಟು ಹೊರಗೆಬಂದು ಮೃದುಸ್ವರದಿಂದ "ಮೆಹರ್" ಎಂದು ಉಚ್ಚರಿಸಿದನು. ಮೆಹರಳು ಅದನ್ನು ಕೇಳಿ ತತ್‌ಕ್ಷಣವೇ ಬುರುಕಿಯನ್ನು ಎಳೆದುಕೊಳ್ಳಲು ಪ್ರಯತ್ನಿಸಿದಳು. ಆಗಾಖಾನನು ಸಮೀಪಿಸಿ "ಮೆಹರ್, ನನ್ನೆದುರಿಗೂ ನಾಚಿಕೆಯೇಕೆ? ನಾನೇನು ಹೊಸಬನೆ? ಇಷ್ಟೊಂದು ಲಜ್ಜೆಯು ತೀರ ಅನಾವಶ್ಯಕ" ಎಂದು ಧೈರ್ಯ ಹೇಳಿದನು.

ಮೆಹರಳಿಗೆ ಅವನ ಮಾತು ಗಮನಕ್ಕೆ ಬರಲಿಲ್ಲ. ಸನ್ನಿವೇಶದ ವಿಚಿತ್ರತೆಯನ್ನು ಸೂಚಿಸುತ್ತ ಅವಳ ಅಧರದಲ್ಲಿ ಒಂದು ಮಂದಹಾಸವು ಮಾತ್ರ ತಲೆದೋರಿತು.

ಆ ಮಂದಹಾಸವು ಅನುರಾಗಸೂಚಕವೆಂದು ಅರ್ಥಮಾಡಿಕೊಂಡು ಖಾನನು ಉಲ್ಲಾಸಗೊಂಡು ಹೀಗೆಂದನು. "ಪ್ರಿಯೆ, ಮೆಹರ್, ನಿನ್ನೊಡನೆ ಒಂದು ಮಾತನಾಡಲು ಬಂದೆನು."

ಮೆಹರಳು ಸುಮ್ಮನಿದ್ದಳು.

"ಮೆಹರ್, ನವಾಬರು ನನ್ನಮೇಲೆ ಬಹಳ ಕೃಪೆಮಾಡಿದರು. ಅವರ ಅನುಗ್ರಹವು ಅನಂತವಾಯಿತು. ಜಹಗೀರಿಯನ್ನು ಕೊಟ್ಟಿದ್ದಾರೆ. ಅದನ್ನು ಅನುಭವಿಸಿಕೊಂಡು ಸುಖವಾಗಿರೆಂದು ಆಶೀರ್ವಾದಮಾಡಿದ್ದಾರೆ. ನನಗೆ ಮಾತ್ರ ಅದೊಂದರಲ್ಲಿಯೂ ಸುಖವು ಕಾಣದು. ಒಡನಾಡಿಯೊಬ್ಬರಿಲ್ಲದ ಮೇಲೆ ಅವುಗಳೆಲ್ಲವೂ ಇದ್ದು ಪ್ರಯೋಜನವೇನು ? ನವಾಬರ ಆಶ್ರಯದಲ್ಲಿರಲಾಗಿ ಇದುವರೆಗೆ ಒಂದು ಚಿಂತೆಯಾಗಲಿ ಅಂಕುರಿಸಿರಲಿಲ್ಲ. ಈಗ ನೋಡಲಾಗಿ ಅಲ್ಲಿ ಹೋದಮೇಲೆ ಒಂಟಿಯಾಗಿರಬೇಕಾಗುವುದು. ನನ್ನದೆಂದು ಕರೆಯಲು ಯಾವ ಪದಾರ್ಥವೂ ಇಲ್ಲ. ಆದುದರಿಂದ ಆ ಸಂಬಂಧವಾಗಿ ನನ್ನದೊಂದು ಪ್ರಾರ್ಥನೆಯುಂಟು. ನೀನು ನಡೆಯಿಸಿ ಕೊಡುವೆಯಾ ?"

ಮೆಹರಳಿಗೆ ಉತ್ತರ ಹೇಳಲು ತಿಳಿಯಲಿಲ್ಲ. ಅವನ ಮನೋಗತವನ್ನು ತಿಳಿಯುವುದಕ್ಕೆ ಮುಂಚೆಯೇ ಖಂಡಿತವಾದ ಉತ್ತರವನ್ನು ಹೇಳಿ ನಿರ್ಬಂಧದಲ್ಲಿ ಸಿಕ್ಕಿಕೊಳ್ಳುವುದು ಯುಕ್ತವಲ್ಲವೆಂದು ತೋರಿತು. ಆದಕಾರಣ ಅವಳು, "ಖಾನರೆ, ನಿಮ್ಮ ಅಪೇಕ್ಷಿತವೇನು, ಹೇಳಿರಿ ನೋಡೋಣ. ಸಾಧ್ಯವಾದರೆ ನಡೆಯಿಸುವೆನು" ಎಂದು ನುಡಿದಳು.

"ಇಲ್ಲಿ ನೋಡು, ಮೆಹರ್, ನಾನು ನಿಜವಾಗಿ ತೃಪ್ತಿಹೊಂದಿ ಇರಲಾರೆನು. ಜೊತೆಯಲ್ಲಿದ್ದುಕೊಂಡು ನನ್ನ ಸುಖದುಃಖಗಳಲ್ಲಿ ಭಾಗಿನಿಯಾಗಿ ನನ್ನ ಹೃದಯೇಶ್ವರಿಯಾಗಿರಲು ಯಾರೂ ಇಲ್ಲ. ಅಂತಹ ಜೀವನವನ್ನು ನಡೆಯಿಸಿ ತಾನೇ ಫಲವೇನು ? ಸಂಜೆಯಲ್ಲಿ ನಡೆದ ಪ್ರದರ್ಶನವನ್ನು ನೋಡಿದೆನು. ಮೆಹರ್, ನಿನ್ನ ಪಾತ್ರವು ಬಹಳ ಆನಂದವನ್ನುಂಟುಮಾಡಿತು. ತೀರ ಮುಗ್ಧನಾಗಿದ್ದೇನೆ. ಪಡೆದರೆ ನಿನ್ನನ್ನು ಪತ್ನಿಯಾಗಿ ಪಡೆಯಬೇಕೆಂದು ಆಶಿಸಿದೆನು. ನಿನ್ನ ಸೌಂದರ್ಯವೂ ಲಾವಣ್ಯವೂ ಮತ್ತಾರಲ್ಲಿಯೂ ಕಾಣಬರುವುದಿಲ್ಲ. ಮೆಹರ್, ಅವುಗಳನ್ನು ಈ ರೀತಿ ವ್ಯರ್ಥವೇಕೆ ಮಾಡಬೇಕು ? ನನ್ನೊಡನೆ ಬಾ, ನನ್ನ ಜಹಗೀರಿಗೆ ಯಜಮಾನಿಯಾಗಿರು. ನಿನ್ನನ್ನು ಚಕ್ರವರ್ತಿನಿಯಂತೆ ಸುಖದಿಂದಿಟ್ಟಿರುವೆನು. ನೀನು ಅಪೇಕ್ಷಿಸುವುದನ್ನು ಪ್ರಾಣವನ್ನು ತೆತ್ತಾದರೂ ತಂದೊಪ್ಪಿಸುವೆನು. ಯಾವುದಕ್ಕೂ ಕೊರತೆಯನ್ನುಂಟುಮಾಡುವುದಿಲ್ಲ. ಮೆಹರ್, ಅಷ್ಟೊಂದು ಕೃಪೆಮಾಡು. ಮರುಭೂಮಿಯಂತೆ ಶುಷ್ಕವಾದ ನನ್ನ ಜೀವನವನ್ನು ನಿನ್ನ ಅನುಗ್ರಹವೃಷ್ಟಿಯಿಂದ ಸಾರವತ್ತಾಗಿ ಮಾಡು......" ಎಂದು ಮೊದಲಾಗಿ ಬಗೆಬಗೆಯಾಗಿ ಪ್ರಾರ್ಥಿಸಿದನು.

ಖಾನನು ಎಷ್ಟು ಹೊತ್ತಿಗೆ ಮುಗಿಸುವನೆಂದು ತವಕಿಸುತ್ತಿದ್ದ ಮೆಹರಳು ಒಡನೆಯೇ ಉತ್ತರ ಹೇಳಿದಳು. “ ಖಾವಂದ್, ಅಲ್ಪಳಾದೀ ಗುಲಾಮಳ ಮೇಲೆ ಅಷ್ಟೊಂದು ಕೃಪೆಮಾಡಿದುದಕ್ಕಾಗಿ ಬಹಳ ಕೃತಜ್ಞಳಾಗಿದ್ದೇನೆ. ಆದರೆ ತಮ್ಮ ಪ್ರಾರ್ಥನೆಯನ್ನು ಸಲ್ಲಿಸಲಾರೆನು. ಬಾಲ್ಯದಿಂದಲೂ ನವಾಬ ಬಹದ್ದುರವರ ಆಶ್ರಯ ದಲ್ಲಿದ್ದು ಆ ಆಶ್ರಯದಲ್ಲಿಯೇ ಬೆಳೆದಿರುವ ನಾನು ಈಗ ಅವರನ್ನು ಉಪೇಕ್ಷಿಸಿ ಹೊರಟುಹೋಗುವುದು ಯುಕ್ತವಲ್ಲ. ನವಾಬರು ಉಳಿದವರೆಲ್ಲರಿಗಿಂತ ನನ್ನಲ್ಲಿ ಹೆಚ್ಚಾಗಿ ಅನುಗ್ರಹವನ್ನೂ ಪಕ್ಷಪಾತವನ್ನೂ ಉಳ್ಳವರೆಂಬುದು ಅವರ ಸವಿಾ ಪದಲ್ಲಿಯೇ ಇರುತ್ತಿದ್ದ ತಮಗೂ ತಿಳಿದ ವಿಷಯವೇ. ಹೀಗಿರುವಾಗ ಅವರನ್ನು ಬಿಟ್ಟು ಹೋಗುವುದು ಹೇಗೆ ? ಮತ್ತಾವ ವಿಧದಲ್ಲಿ ಕೃತಜ್ಞತೆಯನ್ನು ತೋರಿಸಲು ನನಗೆ ಸಾಧ್ಯವಿಲ್ಲವಾದರೂ ಅವರ ಬಳಿಯಲ್ಲಿಯೇ ಇರುತ್ತ ಅವರನ್ನು ಸಂತೋಷ ಪಡಿಸುವಷ್ಟಾದರೂ ಮಾಡಬೇಡವೆ ? ಅಂತರಾತ್ಮವೇನೆಂದೀತು ? ಜನರೇನೆನ್ನು ವರು, ನವಾಬರೇನು ತಿಳಿದುಕೊಂಡಾರು ?...ಇಲ್ಲ. ತಮ್ಮ ಕೋರಿಕೆಯನ್ನು ಪೂರ್ತಿಗೊಳಿಸಲಾರೆನು. ಕ್ಷಮಿಸಬೇಕು.”

ಖಾನನು ನಿರಾಶನಾಗಲಿಲ್ಲ. “ ಮೆಹರ್, ಯೋಚನೆಮಾಡಿ ನೋಡು. ನಿನ್ನ ಸುಖಸಂತೋಷಗಳಿಗೆ ಎಣೆಯಿಲ್ಲದಂತೆ ಮಾಡುವೆನು. ನನಗೂ ಮಹತ್ತರ ವಾದ ಉಪಕಾರವನ್ನು ಮಾಡುವೆ ” ಎಂದನು.

“ ಖಾವಂದ್, ಈ ಅಂಶವನ್ನು ಯೋಚಿಸಬೇಕಾಗಿಯೇ ಇಲ್ಲ. ಉತ್ತರ ವನ್ನು ಆಗಲೇ ಹೇಳಿದ್ದೇನೆ. ಮತ್ತೂ ಹೇಳುತ್ತೇನೆ—ಆಗಲಾರದು. ಖುದಾ ಅಲ್ಲಾನು ನವಾಬರಿಗೆ ಕ್ಷೇಮಾಭ್ಯುದಯಗಳನ್ನುಂಟುಮಾಡಲಿ. ನನಗೆ ಅವರೇ ಪಾಲಕರು !”

ಖಾನನಿಗೆ ಅಪಮಾನವೂ ತೇಜೋವಧೆಯೂ ಆದಂತಾಯಿತು. ಇಪ್ಪತ್ತೈದು ವರ್ಷದಿಂದ ನವಾಬನಂತೆಯೇ ಅಧಿಕಾರವನ್ನು ಚಲಾಯಿಸಿದ್ದನು. ಅವನ ಮಾತಿಗೆ ಪ್ರತಿ ಹೇಳಿದವರಿರಲಿಲ್ಲ. ಹೈದರನನ್ನು ನೋಡಬೇಕೆಂದು ಬಂದವರು ಮೊದಲು ಈತನನ್ನು ಕಂಡು ಪೂಜಿಸಬೇಕಾಗಿದ್ದಿತು. ನವಾಬನೂ ಕೂಡ ಅವನ ಮಾತಿನಲ್ಲಿ ವಿಶ್ವಾಸಗೌರವಗಳನ್ನಿಟ್ಟು ಎಷ್ಟೋಸಲ ಅದನ್ನು ಅನುಸರಿಸಿದ್ದನು. ಹೀಗಿರುವಲ್ಲಿ ಈ ಹುಲುಹೆಂಗಸು ತನಗೆ ನಿರಾಶೆಮಾಡುವುದೆಂದರೇನು ? ಆಗಾ ಮಹಮುದ್‌ನು ಕೋಪಮಾಡಿಕೊಂಡನು. “ ಇರಲಿ, ಮೆಹರ್, ನನ್ನ ಕೋರಿಕೆ ಯನ್ನು ಸಲ್ಲಿಸದೇ ಹೋಗಿದ್ದೀಯೆ. ಈ ಅಸಡ್ಡೆಯ ಫಲವನ್ನು ನೀನು ಅನುಭವಿ

ಸುವೆ. ಆಗಲಾದರೂ ಆಗಾಖಾನನು ಎಂಥವನೆಂಬುದು ನಿನಗೆ ತಿಳಿದುಬಂದೀತು !'' ಎಂದು ಹೇಳಿ ಅಲ್ಲಿಂದ ಮುಂದೆ ಸರಸರನೆ ಹೊರಟುಹೋದನು.

ಮೆಹರಳು ಒಂದುಕ್ಷಣ ಅಲ್ಲಿಯೇ ನಿಂತು ಅವನು ಹೋಗುವುದನ್ನು ನೋಡುತ್ತ ಚಿಂತಿಸಿದಳು : —'' ಆಗಾಖಾನನು ಪ್ರಾಯಶಃ ನವಾಬರ ಸಂಗಡ ದೂರು ಹೇಳಬಹುದು. ನಾನು ಧಿಕ್ಕರಿಸಿದೆನೆಂದೋ ಅಥವಾ ಮತ್ತೇನನ್ನಾದರೂ ಆರೋಪಣೆ ಮಾಡಿದೆನೆಂದೋ ಹೇಳಿಯಾನು. ಹೇಳಲಿ, ಮಹಾರಾಜರಿಗೆ ನಡೆದ ಸಂಗತಿಯನ್ನು ಆದ್ಯಂತವಾಗಿ ನಾನೇ ತಿಳಿಸುವೆನು. ಅವರು ಜನರ ಯೋಗ್ಯತೆ ಯನ್ನೂ ನಿಜವನ್ನೂ ಕಂಡುಹಿಡಿಯಲಾರರೇ ?''

ಹೀಗೆಂದು ಹೇಳಿಕೊಳ್ಳುತ್ತ ಅವಳು ಸ್ವಸ್ಥಾನವನ್ನು ಕುರಿತು ನಡೆದಳು. ಖಾನನ ದುರಾಲೋಚನೆಯು ಅವಳಿಗೆ ಗೊತ್ತಾಗಲಿಲ್ಲ.

## (೩)

ನವಾಬನು ದರ್ಬಾರನ್ನು ನಡೆಯಿಸದಿದ್ದ ದಿನವೇ ಇರಲಿಲ್ಲ. ಸಾಮಾನ್ಯ ವಾಗಿ ದಿನವೆಲ್ಲವೂ ಸಮಾಚಾರಗಳು ಬರುತ್ತಿದ್ದುವು. ರಾಜ್ಯದ ನಾನಾಭಾಗಗ ಳಿಂದ ರಾಜಕರ್ಮಚಾರಿಗಳು ತಮ್ಮ ತಮ್ಮ ಪ್ರದೇಶಗಳ ವಿದ್ಯಮಾನಗಳನ್ನು ತಿಳಿಸು ತ್ತಲೂ ಅಧಿಕಾರ ವಿಷಯದಲ್ಲಿ ನವಾಬನ ಅನುಮತಿ ಅಭಿಪ್ರಾಯ ಅಥವಾ ಅನು ಜ್ಞೆಗಳನ್ನು ಕೇಳುತ್ತಲೂ ಇದ್ದರಾದಕಾರಣ ದೂತರು ಗಂಟೆಗಂಟೆಗೂ ಬರುತ್ತಿ ದ್ದರು. ಮತ್ತೊಂದು ಕಡೆಯಲ್ಲಿ ಗೂಢಚಾರರು ಸುದ್ದಿಯನ್ನು ತರುತ್ತಿದ್ದರು. ಹೀಗೆ ಎಲ್ಲಾ ದಿಕ್ಕುಗಳಿಂದ ಬರುವ ವೃತ್ತಾಂತಗಳನ್ನು ಕೇಳಿ ಯುಕ್ತವಾದ ರೀತಿ ಯಲ್ಲಿ ವ್ಯವಹರಿಸುವುದು ಅಗತ್ಯವಾದುದರಿಂದ ನವಾಬನು ಅದಕ್ಕಾಗಿ ಪ್ರತ್ಯೇಕ ವಾದ ಸ್ಥಳವನ್ನು ಏರ್ಪಡಿಸಿ ಅಲ್ಲಿ ದರ್ಬಾರು ಮಾಡುತ್ತಿದ್ದನು. ಅಷ್ಟೇ ಅಲ್ಲ. ಪ್ರಾಯಶಃ ಬಲವತ್ತರವಾದ ಮತ್ತೊಂದು ಕಾರಣವಿದ್ದಿತು. ಪ್ರಜೆಗಳಲ್ಲಿ ಅತಿಶ ಯವಾದ ವಾತ್ಸಲ್ಯವನ್ನಿಟ್ಟಿದ್ದ ಹೈದರನು ಪ್ರಜೆಗಳ ಅಹವಾಲನ್ನು ಕೇಳುವುದನ್ನು ನಿತ್ಯಕರ್ಮವಾಗಿ ಮಾಡಿಕೊಂಡಿದ್ದನು. ರಾಜಧಾನಿಯಲ್ಲಿ ಈ ರೀತಿಯಾಗಿದ್ದುದು ಈ ಪ್ರದೇಶದಲ್ಲಿ ಅತ್ಯಂತ ಮುಖ್ಯವಾಗಿದ್ದಿತು. ಪಶ್ಚಿಮಘಟ್ಟದ ಪ್ರಾಂತಗಳನ್ನು ಜಯಿಸಲು ಹೊರಟಿದ್ದ ಅವನಿಗೆ ಜಯಿಸಬೇಕಾಗಿದ್ದ ಭೂಭಾಗವೂ ಪ್ರಕೃತದಲ್ಲಿ ಇಳಿದಿದ್ದ ಭಾಗವೂ ಅಪರಿಚಿತವಾಗಿದ್ದುವು. ಅವನು ಇಳಿದಿದ್ದ ಭಾಗವು ಅವನ ರಾಜ್ಯದಲ್ಲಿ ಮೊದಲೇ ಸೇರಿದ್ದಿತು. ಮತ್ತೊಂದು ಸೇರುವುದರಲ್ಲಿದ್ದಿತು. ಆದರೆ ಅವು ಅಷ್ಟು ಬಳಕೆಯಲ್ಲಿರಲಿಲ್ಲ. ಆ ಪ್ರದೇಶಗಳಲ್ಲೆಲ್ಲಾ ತಿರುಗಿ, ಪ್ರಜೆಗಳು ತನ್ನೊ

ಡನೆಯೂ ತಾನು ಪ್ರಜೆಗಳೊಡನೆಯೂ ಬಳಕೆಯನ್ನು ಸಂಪಾದಿಸುವುದು ರಾಜ ನೀತಿಯೆಂದು ಹೈದರನು ನಂಬಿದ್ದನು. ಆ ಜನಗಳನ್ನು ಒಲಿಸಿಕೊಂಡು, ಅನ್ಯನು ಬಂದು ತಮ್ಮನ್ನು ಅಧೀನಪಡಿಸಿಕೊಂಡು ಆಳುತ್ತಿರುವನೆಂದು ಅವರ ಮನಸ್ಸಿನಲ್ಲಿ ಹುಟ್ಟುವ ಭಾವನೆಯನ್ನು ಹೋಗಲಾಡಿಸಲು ಅವನು ಆತುರನಾಗಿದ್ದನು. ಹಾಗೆ ಮಾಡುವುದರಿಂದ ರಾಜ್ಯವನ್ನು ಜಯಿಸುವುದು ಸುಲಭವಾಗುತ್ತಿದ್ದಿತಲ್ಲದೆ ಜಯಿಸಿದ ರಾಜ್ಯವು ಸ್ವಾಧೀನದಲ್ಲಿಯೇ ನಿಲ್ಲುತ್ತಿದ್ದಿತು. ಪ್ರಜೆಗಳಿಗೆ ಕ್ಷೇಮವನ್ನೂ ರಾಜ್ಯಕ್ಕೆ ನೆಮ್ಮದಿಯನ್ನೂ ಉಂಟುಮಾಡುವ ಗುಣವಂತರಾಜನನ್ನು ಜನಗಳು ಬಯಸುವರೆಂದರಿತು ಹೈದರನು ತನ್ನಲ್ಲಿ ಅಂತಹ ಗುಣಗಳುಂಟೆಂಬುದನ್ನು ಪ್ರಕಾಶಪಡಿಸುವುದಕ್ಕಾಗಿ ಅಲ್ಲಿಯ ಜನಗಳ ಕಷ್ಟನಷ್ಟಗಳನ್ನು ವಿಚಾರಿಸಿ ನಾನಾರೀತಿಯಲ್ಲಿ ಸರಿಪಡಿಸುವುದೂ ಸಮಯ ದೊರೆತಾಗ ಯೋಗ್ಯರಿಗೆ ವಿಪುಲವಾಗಿ ಬಹುಮಾನ ಮಾಡುವುದೂ ಮೊದಲಾದ ಅನೇಕ ಸಾಧನಗಳನ್ನು ಅನುಸರಿಸುತ್ತಿದ್ದನು.

ಇದೂ ಅಲ್ಲದೆ ಹೈದರನು ಸಹವಾಸಪ್ರಿಯನು. ಜನಗಳ ನಡುವೆ ಅವರ ಗೋಷ್ಠಿಯಲ್ಲಿಯೇ ಇರಲಪೇಕ್ಷಿಸುತ್ತ, ಇವರು ಇಂಥವರು ಅಂಥವರೆಂಬ ಪ್ರಭೇದವಿಲ್ಲದೆ ಎಲ್ಲರೊಡನೆಯೂ ಒಂದೇ ಸಮನಾಗಿ ವ್ಯವಹರಿಸುತ್ತ ಎಲ್ಲರೊಡನೆ ಸರಸಸಲ್ಲಾಪದಲ್ಲಿ ವಿನೋದವಾಗಿ ಕಾಲವನ್ನು ಕಳೆಯಲು ಅವನಲ್ಲಿದ್ದಷ್ಟು ಇಷ್ಟವು ಮತ್ತಾರಲ್ಲಿಯೂ ಇರಲಿಲ್ಲ. ಅವನ ಈ ಚಿತ್ತವೃತ್ತಿಯನ್ನು ನೋಡಿದರೆ, ನಿತ್ಯವೂ ದರ್ಬಾರು ಮಾಡುತ್ತಿದ್ದುದು ಜನರನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವರೊಡನೆ ಕಾಲವನ್ನು ಕಳೆಯಲು ಅವನು ಚಿಂತಿಸಿದ ಉಪಾಯವೆಂದೂ ಹೇಳಬಹುದಾಗಿದ್ದಿತು.

ಸುಮಾರು ಮಧ್ಯಾಹ್ನದ ವೇಳೆಗೆ ನವಾಬನು ದರ್ಬಾರುಮಹಲನ್ನು ಪ್ರವೇಶಿಸಿ ಗದ್ದುಗೆಯನ್ನೇರಿ ಕುಳಿತು ವಿಶ್ರಮಿಸಿಕೊಂಡಮೇಲೆ ಖಾಸ್‌ಭಕ್ಷಿಯು ಉಪಚಾರವನ್ನು ಅನ್ಯರಿಗೊಪ್ಪಿಸಿ ಹೊರವಳಯದಲ್ಲಿ ಬಂದು ನಿಲ್ಲುತ್ತಿದ್ದನು. ಅಲ್ಲಿ ನಿಯಮದಂತೆ ಅರ್ಜಿ ಅಹವಾಲುಗಳನ್ನು ತಂದಿದ್ದವರು ಕಾದಿರುತ್ತಿದ್ದು, ಆತನು ಬಂದ ಕೂಡಲೇ ತಾವು ಬರೆದು ತಂದಿದ್ದ ಅರ್ಜಿ ಮುಂತಾದುವುಗಳನ್ನು ಆತನ ಕೈಗೆ ಒಪ್ಪಿಸುತ್ತಿದ್ದರು. ಖಾಸ್‌ಭಕ್ಷಿಯು ಅವುಗಳನ್ನು ಜೋಡಿಸಿಕೊಂಡು ಅರ್ಜಿದಾರರಿಗೆಲ್ಲರಿಗೂ ಮೂರನೆಯ ದಿನ ಫಲಿತಾಂಶವನ್ನು ತಿಳಿಯಲು ಬನ್ನಿರೆಂದು ಉತ್ತರ ಹೇಳುತ್ತಿದ್ದನು. ನವಾಬನು ಆ ಪ್ರಾರ್ಥನೆಗಳನ್ನು ಪರಿಶೀಲಿಸಿ ಮೂರನೆಯದಿನ ಪ್ರತಿಯೊಬ್ಬರಿಗೂ ಅವರವರ ಪ್ರಾರ್ಥನೆಗನುಸಾರವಾಗಿ ಪ್ರತ್ಯುತ್ತರ ಕೊಡುತ್ತಿದ್ದುದ

ರಿಂದ ಅರ್ಥಿಗಳು ಆ ದಿನವೇ ನವಾಬನನ್ನು ನೋಡಬೇಕೆಂದು ಒತ್ತಾಯಮಾಡದೆ ಹಿಂದಿರುಗುತ್ತಿದ್ದರು. ಈ ವ್ಯವಸ್ಥೆಯಿಂದ ಆ ಜನಗಳಿಗೆ ನವಾಬನಲ್ಲಿ ಪ್ರತ್ಯಕ್ಷ ವಾಗಿ ಸ್ವಂತವಾಗಿ ಮಾತನಾಡಲು ಅವಕಾಶವು ಸಿಕ್ಕುತ್ತಿದ್ದಿತಲ್ಲದೆ ನವಾಬನಿಗೂ ನಿರ್ವಿಘ್ನವಾಗಿ ರಾಜಕಾರ್ಯವನ್ನು ನಡೆಯಿಸಲು ಅವಕಾಶವುಂಟಾಗುತ್ತಿದ್ದಿತು.

ಒಂದು ದಿನ ಹೊಸ ಖಾಸ್ ಭಕ್ಷಿಯಾದ ಹೈದರ್‌ಷಹನು ಯಥಾ ಸ್ಥಾನದಲ್ಲಿ ಬಂದು ನಿಲ್ಲಲಾಗಿ ಅಲ್ಲಿ ಮೊದಲೇ ಬಂದಿದ್ದವರನೇಕರು ಅರ್ಜಿಗಳನ್ನೂ ಕೆಲವರು ಯಥಾಶಕ್ತಿಯಾಗಿ ತಾವು ತಂದಿದ್ದ ನಜರುಗಳನ್ನೂ ಅರ್ಪಿಸಿದರು. ಅಂಥವರೊಳಗೆ ಮುದುಕಿಯೊಬ್ಬಳು ಇತರರಂತೆಯೇ ಅರ್ಥಿಯಾಗಿ ಬಂದಿದ್ದವಳು ಮುಂದೆ ಬಂದು ತಾನು ಬರೆಯಿಸಿ ತಂದಿದ್ದ ಅರ್ಜಿಯನ್ನು ಹೈದರ್‌ಷಹನ ಕೈಗೆ ನೀಡುತ್ತ ಹೀಗೆಂದಳು :—"ಭಕ್ಷಿಜಿ, ನಾನು ಮುದುಕಿ, ಬಹಳ ಸಂಕಟದಲ್ಲಿ ಸಿಕ್ಕಿಬಿದ್ದಿದ್ದೇನೆ. ಜೀವನಾಧಾರಳಾಗಿದ್ದ ಮಗಳನ್ನು ಯಾವನೋ ಒಬ್ಬ ದುಷ್ಟನು ಅಪಹರಿಸಿಕೊಂಡು ಹೋಗಿದ್ದಾನೆ. ಅವಳನ್ನು ಹುಡುಕಿಸಿಕೊಟ್ಟು ಅಪರಾಧಿಗೆ ಶಿಕ್ಷೆಮಾಡಬೇಕೆಂಬುದೇ ನನ್ನ ಪ್ರಾರ್ಥನೆ. ತಾವೂ ಸ್ವಲ್ಪ ಶಿಫಾರಸು ಮಾಡಬೇಕಾಗಿ ಬೇಡುತ್ತೇನೆ."

ಈ ಮಾತುಗಳು ಹೈದರ್‌ಷಹನ ಕಿವಿಗೆ ಅರ್ಥಿಯಾದೊಬ್ಬ ಹೆಂಗಸಿನ ದುಃಖದಂತೆ ಬೀಳಲಿಲ್ಲ. ನ್ಯಾಯವನ್ನಪೇಕ್ಷಿಸಿ ಬಂದಿರುವ ಜನದ ಪ್ರಾರ್ಥನೆಯಂತೆ ಕಿವಿಗೆ ಬೀಳಲಿಲ್ಲ. ನವಾಬರಿಗೆ ಶಿಫಾರಸುಮಾಡಿ ತನ್ನನ್ನು ಈ ಅಧಿಕಾರಕ್ಕೆ ತಂದ ತನ್ನ ಪ್ರಭುವಾದ ಆಗಾಮುಹಮುದ್‌ಖಾನನಲ್ಲಿ ಅನ್ಯಾಯವನ್ನು ಆರೋಪಿಸಲೆಳಸುತ್ತಿರುವ ದುಷ್ಟೆಯ ಮಾತಿನಂತೆ ಅರ್ಥವಾದುವು. ಅವನು ಕೋಪಗೊಂಡು ಮುಖವನ್ನು ಗಂಟಿಕ್ಕಿ "ಆಗಲಿ, ನನಗೇಕೆ ಇದನ್ನೆಲ್ಲಾ ಹೇಳುತ್ತೀ? ನೀನು ಅರ್ಜಿಯಲ್ಲಿ ಆ ವಿವರವನ್ನೆಲ್ಲಾ ಬರೆದಿಲ್ಲದಿದ್ದರೆ ಬೇರೆ ಬರೆದುಕೊಂಡು ಬಾ. ಇಲ್ಲಿ ಹೀಗೆಲ್ಲಾ ಹರಟುತ್ತ ನಿಲ್ಲಬೇಡ!" ಎಂದು ಗದರಿಸಿಕೊಂಡು ಅರ್ಜಿಯನ್ನು ಅವಳ ಕಡೆಗೆಸೆದನು. ಮುದುಕಿಯು ಖಿನ್ನಳಾದಳು. ಆದರೂ ತಾನು ಅರ್ಥಿಮಾತ್ರಳಾದ್ದರಿಂದ ಸ್ಥೈರಣೆಯನ್ನು ಹೊಂದಿ, ಕೆಳಗೆ ಬಿದ್ದುಹೋದ ಅರ್ಜಿಯನ್ನು ಎತ್ತಿಕೊಂಡು, ಹೆಜ್ಜೆಹೆಜ್ಜೆಗೂ ಕ್ಷಮಾಪಣೆಯನ್ನು ಬೇಡಿ ಸಲಾಮುಹಾಕುತ್ತ ಮತ್ತೆ ಖಾಸ್ ಭಕ್ಷಿಯ ಬಳಿಗೆ ಬಂದು ಬಿನ್ನೈಸಿಕೊಂಡಳು. "ಎಲ್ಲವನ್ನೂ ಅಲ್ಲಿ ಬರೆದಿದೆ. ಬಾಯಲ್ಲಿ ಹೇಳುವುದು ಏನೂ ಎಲ್ಲ" ಎಂಬ ದೈನ್ಯದ ಮಾತುಗಳು ಹೊರಬಿದ್ದುವು. ಅವಳು ಹೊರಟುಹೋದಳು. ಖಾಸ್‌ಭಕ್ಷಿಯು ಉಳಿದಿದ್ದ ಕೆಲವರ ಅರ್ಜಿಯನ್ನು ಸ್ವೀಕರಿಸಿ ನಾಳೆ ಬನ್ನಿರೆಂದು ಅವರಿಗೆ ಹೇಳಿ ಒಳಕ್ಕೆ ಹೊರಟುಹೋದನು.

(೪)

ಸುಮಾರು ನಾಲ್ಕೂವರೆಗಂಟೆಯ ಸಮಯ. ಕೊಯಿಮತ್ತೂರಿನ ಹೊರ ವಳಯದಲ್ಲಿ ಮಾತ್ರ ಐದು, ಐದೂವರೆಗಂಟೆಯಾಗಿದ್ದಂತೆಯೇ ಕಾಣಿಸುತ್ತಿದ್ದಿತು. ನವಾಬನು ಪರಿವಾರಸಹಿತನಾಗಿ ಸಂಚಾರ ಹೊರಟಿದ್ದನು. ಒಟ್ಟು ಹದಿನೈದುಮಂದಿ ಇದ್ದರು. ಎಲ್ಲರೂ ಗುಂಪಾಗಿ ಸಾಗುತ್ತಿದ್ದರು. ಎಲ್ಲರೂ ಕುದುರೆಯನ್ನೇರಿದ್ದರು. ಅವರೆಲ್ಲರ ಮುಂದುಗಡೆಯಲ್ಲಿ ಹೈದರನು ತನ್ನ ಬಿಳಿಯಕುದುರೆಯನ್ನು ನಡೆಯಿಸಿ ಕೊಂಡು ಹೋಗುತ್ತಿದ್ದನು. ಕುದುರೆಯು ಮಂದಗತಿಯಿಂದಲೇ ನಡೆಯುತ್ತಿದ್ದಿತು. ಆತನು ಶ್ವೇತವಸ್ತುಪ್ರಿಯನೆಂಬುದು ಆಗ ಸ್ಪಷ್ಟವಾಗುತ್ತಿದ್ದಿತು. ಏರಿದ್ದ ಕುದು ರೆಯು ಬಿಳಿಯದು; ತೊಟ್ಟಿದ್ದ ಉಡುಪು ಬಿಳಿಯದು. ಬಿಳಿಯ ಕಿಂಕಾಬಿನ ಆ ಉಡುಪಿನಲ್ಲಿ ವರ್ಣವ್ಯತ್ಯಾಸವನ್ನುಂಟುಮಾಡಿ ಆ ವರ್ಣವ್ಯತ್ಯಾಸದ ದೆಸೆಯಿಂದಲೇ ರೇಷ್ಮೆಯ ಧವಳತೆಯನ್ನೂ ಬಿಳಿಯ ಉಡುಪಿನ ಸೊಬಗನ್ನೂ ಹೆಚ್ಚಿಸುತ್ತ, ನಡುವೆ ವಿಹಿತವಾದೆಡೆಗಳಲ್ಲಿ ಕೆಂಪುರೇಷ್ಮೆಯ ಪಟ್ಟಿಗಳೂ ಇತರ ವಸ್ತ್ರಭಾಗಗಳೂ ಸೇರಿ ದ್ದುವು. ಸೊಂಟದಲ್ಲಿ ಒರೆಯೊಡನೆಕೂಡಿದ ಒಂದು ಕಠಾರಿಯು ಸಿಕ್ಕಿಸಿದ್ದಿತು. ನವಾಬನ ತಲೆಯಮೇಲಿನ ದಪ್ಪ ಪೇಟವೂ ಅದರ ಅಗ್ರಭಾಗದಲ್ಲಿದ್ದ ರತ್ನಖಚಿತ ವಾದ ಸಿರಪೇಷವೂ ಮುಖಕ್ಕೆ ಅಲಂಕಾರವನ್ನು ಕೊಡುತ್ತಿದ್ದುವು.

ಪಕ್ಕದಲ್ಲಿ ನವಾಬನ ಎರಡನೆಯ ಮಗನು ಅಶ್ವಾರೋಹಿಯಾಗಿ ಸಂಗಡಲೇ ಸಾಗುತ್ತಿದ್ದನು. ಸ್ವಲ್ಪ ಹಿಂದೆಡೆಯಾಗಿ ಸೇನಾಪತಿಯಾದ ಮೊಗದುಂ ಆಲಿಯೂ ಇತರ ಹತ್ತಿರದ ಸಂಬಂಧಿಗಳೂ ಫ್ರೆಂಚಸೈನ್ಯದ ಅಧಿನಾಯಕನೂ ಅವನ ಪಕ್ಷದ ಮುಖ್ಯ ಅನುಚರನೂ ಪರಿಚಾರಕರೊಬ್ಬಿಬ್ಬರೂ ಅನುಯಾಯಿಗಳಾಗಿದ್ದರು. ಎಲ್ಲರ ಹಿಂದುಗಡೆಯಲ್ಲಿ ಇಬ್ಬರು ರಾವುತರು ಆಯುಧಸಮೇತರಾಗಿ ನಡೆದುಬರುತ್ತಿದ್ದರು.

ಸೂರ್ಯನು ಅಸ್ತನಾಗಿಲ್ಲದಿದ್ದರೂ ಆ ಪ್ರದೇಶದಲ್ಲಿ ಅಸ್ತನಾಗಿದ್ದಂತೆಯೇ ತೋರುತ್ತಿದ್ದಿತು. ಆ ಭಾವನೆಗೆ ಅಲ್ಲಿನ ಭೂಸ್ಥಿತಿಯೇ ಕಾರಣ. ಕೊಯಿಮತ್ತೂ ರಿನ ಸುತ್ತಲೂ ಪರ್ವತಗಳು—ಅವು ಸಾಲುಸಾಲಾಗಿ ಒಂದರಹಿಂದೆ ಒಂದು ಸ್ತರ ಸ್ತರವಾಗಿ ಜೋಡಿಸಲ್ಪಟ್ಟಂತಿದ್ದುವು. ಅವುಗಳಮೇಲೂ ಮುಂದಿನ ಪ್ರದೇಶಗಳ ಲ್ಲಿಯೂ ದಟ್ಟವಾದ ಕಾಡು ಹಬ್ಬಿದ್ದಿತು. ಊರನ್ನು ಬಿಟ್ಟು ಒಂದೆರಡು ಮೈಲಿಗ ಳಷ್ಟುದೂರ ಹೋಗುವುದರೊಳಗೆ ಕಾಡು—ಅಷ್ಟರೊಳಗೆ ಕಾಡು ನಮ್ಮ ಸುತ್ತಲೂ ಆವರಿಸಿದೆಯೆಂದು ಅಚಿಂತಿತವಾಗಿ ಅರಿವಾಗುತ್ತಿದ್ದಿತು. ಈಗ--ನಮ್ಮ ಕಾಲದಲ್ಲಿ-- ಊರಿನಹೊರಗೆ ಎಲ್ಲೆಲ್ಲಿ ನೋಡಿದರೂ ಪರ್ವತದ ತಪ್ಪಲವರೆಗೆ ಸೊಗಸಾದ ಪೈರು

ಪಚ್ಚೆಗಳಿಂದ ಕೂಡಿದ ಕ್ಷೇತ್ರವಿದೆ. ಆದರೆ ಹದಿನೆಂಟನೆಯ ಶತಮಾನದಲ್ಲಿ ಚಿತ್ರವು ಮತ್ತೊಂದು ಬಣ್ಣವಾಗಿದ್ದಿತು. ಕಾಡುಗಳಿಗೆ ಕಾಲಾನಂತರದಲ್ಲಿ ಬಂದ ಮುಳಿಯು ಆಗ ಇನ್ನೂ ಬಹುದೂರದಲ್ಲಿದ್ದಿತು—ಪ್ರಾಯಶಃ ಹುಟ್ಟಿಯೇ ಇರಲಿಲ್ಲ.

ನವಾಬನು ಎಲ್ಲರೊಡನೆಯೂ ಸರಸವಾಗಿ ಮಾತನಾಡುತ್ತಿದ್ದನು. ಸಲ್ಲಾಪ ಸಮಯದಲ್ಲಿ ಅವನಿಗೆ ಅಧಿಕಾರಜ್ಞಾನದಿಂದ ಉತ್ಪನ್ನವಾಗುವ ಭೇದಬುದ್ಧಿಯಿರ ಲಿಲ್ಲ. ಮಗನೊಡನೆ ಮನೆಯ ಮಾತನ್ನಾಡುತ್ತಿದ್ದನು. ಸೇನಾಪತಿಯೊಡನೆ ಮಲ ಬಾರುಪ್ರಾಂತಗಳನ್ನು ಜಯಿಸಿ ಅಲ್ಲಿನ ದಂಗೆಯನ್ನು ಅಡಗಿಸುವುದು ಹೇಗೆಂಬು ದನ್ನು ಚರ್ಚಿಸುತ್ತಿದ್ದನು. ಫ್ರೆಂಚ ದಳಪತಿಯನ್ನು ಕಂಡರೆ ಆತನಿಗೆ ಬಹಳ ವಿಶ್ವಾಸ; ಆತನ ಮಾತಿನಲ್ಲಿ ಬಹಳ ಗೌರವ. ತನ್ನ ಸೈನ್ಯದಲ್ಲಿ ಗೋಲಂದಾಜ ದಳವನ್ನು ಚೆನ್ನಾಗಿ ತರಪೇತುಮಾಡಿ ಬಲಗೊಳಿಸುವ ಮಾರ್ಗವನ್ನು ಅವನೊಡನೆ ವಿಚಾರಮಾ ಡುತ್ತ ವಿಷಯವನ್ನು ಸಂಗ್ರಹಮಾಡುತ್ತಿದ್ದನು. ಆತನೊಡನೆ ಮಾತನಾಡದಿದ್ದ ವರು ಅಥವಾ ಆತನು ಮಾತನಾಡಿಸದಿದ್ದವರು ಆ ಗುಂಪಿನಲ್ಲಿ ಯಾರೂ ಇರಲಿಲ್ಲ. ಎಲ್ಲರೂ ಹಸನ್ಮುಖಿಗಳಾಗಿದ್ದರು. ತಾವು ಅಧಿಕಾರಿಗಳೆಂದು ತಿಳಿದು ಪ್ರವರ್ತಿಸುವ ವರಿರಲಿಲ್ಲ. ಆದರೆ ಮರ್ಯಾದೆಯನ್ನು ಮರೆತು ಮಾತನಾಡುವವರೂ ಅಲ್ಲಿರಲಿಲ್ಲ.

ಹೀಗೆ ಎಲ್ಲರೂ ಮಾತನಾಡುತ್ತ ಒಂದುಮೈಲಿಯಷ್ಟನ್ನು ಕಳೆದಿರಬಹುದು. ಆ ಹೊತ್ತಿನಲ್ಲಿ, "ಹುಜೂರ್, ಹುಜೂರ್! ಕಾಪಾಡಬೇಕು!" ಎನ್ನುತ್ತ ಮುದುಕಿಯೊಬ್ಬಳು ಓಡಿಬಂದಳು. ಎಲ್ಲರೂ ಕುದುರೆಯನ್ನು ನಿಲ್ಲಿಸಿದರು. ನವಾ ಬನು ಹಿಂದಿರುಗಿ ನೋಡಿದನು. ಮುದುಕಿಯು ಏದುತ್ತ ಓಡಿ ಬಂದವಳು ನವಾಬನ ಮುಂದೆ ಅಡ್ಡಬಿದ್ದು "ಜಹಾಪನಾ, ಕಾಪಾಡಬೇಕು! ಫಿದವಿಯು ಪಾದದರ್ಶನ ವನ್ನು ಪಡೆಯಬೇಕೆಂದು ಬಹಳದಿನಗಳಿಂದ ಕಾದಿದ್ದಾಳೆ" ಎಂದು ಪ್ರಾರ್ಥಿಸಿ ದಳು. ಅವಳಿಗೆ ಆ ಮಾತುಗಳನ್ನು ಹೇಳುತ್ತ ದುಃಖವೇರಿ ಬಂದಿತು. ಬಿಕ್ಕಿಬಿಕ್ಕಿ ಅಳುತ್ತ ವೃದ್ಧೆಯು ಹುಜೂರ್, ಹುಜೂರ್, ಎಂದು ಜಪಿಸಲಾರಂಭಿಸಿದಳು. ನವಾ ಬನು ಉಪಶಮನಮಾಡಿಕೊಳ್ಳುವಂತೆ ಹೇಳಿ ಕುದುರೆಯಿಂದ ಇಳಿದನು. ಮುದು ಕಿಯು ಹೇಳಬೇಕಾದುದು ಬಹಳವಿರುವಂತೆಯೂ, ಅವಳನ್ನು ಒಂದೆರಡು ಮಾತಿ ನಿಂದ ಸಮಾಧಾನಪಡಿಸಲಾಗುವುದಿಲ್ಲವೆಂತಲೂ ಆತನು ಊಹಿಸುತ್ತ, ತನ್ನೊಡನೆ ಬಂದಿದ್ದವರ ಮನೋಭಾವನೆಯು ಹೇಗಿದೆಯೆಂಬುದನ್ನು ತಿಳಿಯುವ ಉದ್ದೇಶದಿಂದ ಹಿಂದಿದ್ದವರಕಡೆಗೆ ತಿರುಗಿದನು. ಎಲ್ಲರೂ ಈಕೆಯು ಯಾರಿರಬಹುದು, ನವಾಬ ರನ್ನು ಇಲ್ಲಿ ಬಂದು ಕಾಣುವಂತಹ ಆಶಯವೇನಿರಬಹುದು ಎಂಬದಾಗಿ ಲೆಕ್ಕಹಾಕು

ತ್ತಿದ್ದರು. ಆ ಗುಂಪಿನಲ್ಲಿ ಸೇರಿದ್ದ ಹೈದರ್‌ಷಹನು ಮಾತ್ರ ತಾನು ತೊಟ್ಟಿದ್ದ ಉಡುಪು ತನ್ನನ್ನು ಹಿಂಡಿಹಾಕುವಷ್ಟು ಬಿಗಿಯೆಂಬ ಭಾವನೆಯಿಂದ ಕತ್ತಿನಪಟ್ಟಿಯ ಮೇಲೆ ಬೆಟ್ಟಾಡಿಸುತ್ತ ಅದನ್ನು ಸಡಿಲಮಾಡುತ್ತಿದ್ದನು. ಮುದುಕಿಯು ಮೆಹರಳ ತಾಯಿ ; ತನ್ನ ಅರ್ಜಿಗಳೆಲ್ಲವೂ ನಿಷ್ಫಲವಾದದ್ದನ್ನು ನೋಡಿ ತನ್ನ ಬಂಧುವೊಬ್ಬನ ಸಲಹೆಯಂತೆ ನವಾಬನು ಸಂಚಾರಹೊರಟಾಗ ಸಾಕ್ಷಾತ್ತಾಗಿ ವಿಜ್ಞಾಪಿಸಿ ಕೊಳ್ಳಲು ಬಂದಿದ್ದಳು. ಅವಳು ಬಹಳಮಟ್ಟಿಗೆ ದುಃಖವನ್ನು ಅಡಗಿಸಿಕೊಂಡು ಈರೀತಿಯಾಗಿ ಹೇಳಿದಳು: —"ಖಾವಂದ್, ತಮ್ಮ ಅನುಗ್ರಹಕ್ಕೆ ವಿಶೇಷವಾಗಿ ಪಾತ್ರಳಾಗಿದ್ದ ಮೆಹರಳು ನನ್ನಮಗಳು. ಅವಳನ್ನು ತಾವು ಮಗಳಂತೆ ಸಾಕುತ್ತಿ ದ್ದಿರೆಂದು ನಾನು ಹೇಳಬೇಕಾಗಿಯೇ ಇಲ್ಲ. ತಾಯಿಯಾದ ನಾನೂ ನನ್ನ ಮಗಳೂ ತಮ್ಮ ಆಶ್ರಯದಲ್ಲಿಯೇ ಇದ್ದುಕೊಂಡು ಮಕ್ಕಳಂತೆ ಬೆಳೆದೆವು. ಮುಂದೆಯೂ ಕೂಡ ತಮ್ಮ ಅನುಗ್ರಹವು ಸ್ಥಿರವಾಗಿರಲೆಂದೇ ಅಲ್ಲಾನಲ್ಲಿ ನನ್ನ ನಿರಂತರವಾದ ಪ್ರಾರ್ಥನೆ. ಅಲ್ಲಾ ಅಕ್ಬರನು ತಮಗೆ ಸಮಸ್ತವಾದ ಶ್ರೇಯಸ್ಸನ್ನೂ ಕರುಣಿಸಲಿ.

"ನನ್ನಾ ಮೆಹರಳು--ತಾಯಿಗೆ ತಾಯಿಯಾಗಿದ್ದ ಆ ಮೆಹರಳು ಕಳುವಾ ಗಿದ್ದಾಳೆ. ಹುಜೂರ್‌ರವರ ಬಳಿಯಲ್ಲಿ ಖಾಸ್‌ಭಕ್ಷಿಯಾಗಿದ್ದ ಆಗಾಮುಹಮದ್ ಖಾನನು ಅವಳನ್ನು ಅಪಹರಿಸಿಕೊಂಡು ಹೋಗಿಬಿಟ್ಟನು. ಅದು ನಡೆದು ಆಗಲೇ ಒಂದು ತಿಂಗಳಷ್ಟಾಯಿತು. ಖಾವಂದರಿಂದ ಜಹಗೀರಿಯನ್ನು ಪಡೆದು ಆತನು ಅಲ್ಲಿಗೆ ಹೋಗುವ ಮೊದಲು ನನ್ನ ಬಳಿಗೆ ಬಂದು ಮೆಹರಳ ಮೇಲೆ ತನಗೆ ಮನ ಸ್ಸುಂಟಾಗಿದೆಯೆಂದೂ ಅವಳನ್ನು ತನ್ನೊಡನೆ ಕಳುಹಿಸಬೇಕೆಂದೂ ಪ್ರತಿಯಾಗಿ ತಾನು ಯಥೇಚ್ಛವಾಗಿ ಸಂಭಾವನೆ ಕೊಡುವೆನೆಂದೂ ಕೇಳಿದನು. ಅದಕ್ಕೆ ಮುಂಚೆ ಹಿಂದಿನ ರಾತ್ರಿ ಮೆಹರಳನ್ನು ಸಂಧಿಸಿ ಅದೇ ವಿಷಯವಾಗಿ ಪ್ರಾರ್ಥಿಸಿ ಕೊಂಡನಂತೆ. ಅದನ್ನು ಮಗಳು ನನಗೆ ತಿಳಿಸಿದಳು. ನಾನೂ ಒಪ್ಪಲಿಲ್ಲ. ಮಗಳೂ ಒಪ್ಪಲಿಲ್ಲ. ಅವನ ಜಹಗೀರಿಯಲ್ಲಿ ಅಧೀಶ್ವರಿಯಾಗಿರುವುದಕ್ಕಿಂತ ಖಾವಂದರ ಪಾದಸೇವೆ ಮಾಡಿಕೊಂಡಿರುವುದೇ ಉತ್ತಮವೆಂದು ಇಬ್ಬರೂ ಮುಕ್ತಕಂಠರಾಗಿ ಉತ್ತರಹೇಳಿದೆವು. ಆಗಾಮುಹಮದ್‌ನು ರಾತ್ರಿ ನಿದ್ರೆಯಹೊತ್ತಿನಲ್ಲಿ ಆಳುಗಳನ್ನು ಕಟ್ಟಿಕೊಂಡು ಬಂದು ನಮ್ಮ ಮನೆಗೆ ನುಗ್ಗಿ ಮೆಹರಳನ್ನು ಬಲಾತ್ಕಾರದಿಂದ ಎತ್ತಿಕೊಂಡು ಹೊರಟುಹೋದನು. ಅಂದಿನಿಂದ ಮಗಳನ್ನು ಕಳೆದುಕೊಂಡೆನು. ಖಾವಂದ್, ಮೆಹರಳು ಎಲ್ಲಿ ಹೋದಳೋ ತಿಳಿಯದು. ಜೀವಸಹಿತ ಇದ್ದಾಳೆಯೋ ಇಲ್ಲವೋ ಅದೂ ತಿಳಿಯದು."

" ಆಗಾಮುಹಮುದನು ಹೊರಟುಹೋಗಿ ಒಂದು ತಿಂಗಳ ಹತ್ತಿರಕ್ಕೆ ಬಂದಿತು. ನೀನು ಈಗ ಬಂದು ಅವನ ಮೇಲೆ ಫಿರ್ಯಾದು ಹೇಳುತ್ತಿದ್ದೀಯೆ. ಇದಿಷ್ಟು ಕಾಲವೂ ಏನುಮಾಡುತ್ತಿದ್ದೆ? ನಿನ್ನ ಮಾತನ್ನು ನೋಡಿದರೆ ಒಂದ ಕ್ಕೊಂದು ಸಂಬಂಧವಿರುವಂತೆ ತೋರುವುದಿಲ್ಲ. ಅಂತಹ ಫಿರ್ಯಾದನ್ನು ನಂಬು ವುದು ಹೇಗೆ? " ಎಂದು ಹೈದರನು ಗಂಭೀರಭಾವದಿಂದ ಪ್ರಶ್ನೆಮಾಡಿದನು.

ಖಾಸ್‌ಭಕ್ಷಿಗೆ ತನ್ನ ಅಂಗಿಯೇಕೆ ಬಿಗಿಯುತ್ತಿದ್ದಿತೆಂಬುದು ಈಗ ಗೊತ್ತಾ ಯಿತು. ಮುದುಕಿಯು ನವಾಬನನ್ನು ಕುರಿತು ಕೂಗಿಕೊಳ್ಳುತ್ತ ಬಂದಾಗಲೇ ಏನೋ ಪೀಕಲಾಟವು ಬಂದಿತೆಂದು ಹೆದರಿಕೆಯುಂಟಾಗಿ ಅವನಿಗೆ ಜಂಗಾಬಲವೇ ಹೋಯಿತು. ಮುದುಕಿಯು ಮತ್ತಾವುದಾದರೂ ಕಾರಣದ ಮೇಲೆ ನವಾಬನನ್ನು ಅರಸಿಕೊಂಡು ಬಂದಿರಬಹುದೆಂದು ಅವನು ಒಂದು ಕ್ಷಣ ಆಶಿಸಿದನು. ಆದರೆ ಅದು ಬರಿಯ ಆಶೆ. ಮುದುಕಿಯು ಮಗಳ ವಿಷಯವನ್ನೇ ಕುರಿತು ಮಾತೆತ್ತಿದಳು. ಇನ್ನು ಅರ್ಜಿಯ ವಿಷಯವೂ ತಾನು ಮಾಡಿದ ಕೆಲಸವೂ ಒಂದೊಂದಾಗಿ ಬಯ ಲಾಗುವುದೆಂದು ಅವನು ಖಂಡಿತಮಾಡಿದನು. ತನ್ನ ತಲೆಗೆ ವಿಪತ್ತು ಬಂದಿತೆಂದು ಅವನ ಮನಸ್ಸಿಗೆ ತೋರಿತು. ಆಗಾಖಾನನು ಹೊರಟು ಹೋದಮೇಲೆ ತನ್ನ ಪಾಡಿಗೆ ತಾನು ಯಾವ ವಿಚಾರಕ್ಕೂ ಹೋಗದೆ ಸುಮ್ಮನಿದ್ದಿದ್ದರೆ ಚೆನ್ನಾಗಿದ್ದಿ ತೆಂದು ವಿವೇಕಜ್ಞಾನವುಂಟಾಯಿತು. ಕೃತಜ್ಞತೆಗೆ ಕಟ್ಟುಬಿದ್ದು ತಾನು ಈರೀತಿ ಎಡವಿದೆನೆಂದೂ, ಕೃತಜ್ಞತಾಬುದ್ಧಿಯುಳ್ಳವರಿಗೆ ಅದು ಕಾಲವಲ್ಲವೆಂದೂ ಹೇಳಿ ಕೊಂಡನು. ಧೈರ್ಯದಿಂದಿರುತ್ತ ಸಮಯೋಚಿತವಾದ ಉತ್ತರವನ್ನು ಹೇಳಿ ಈ ಅಪಾಯದಿಂದ ಪಾರಾಗಬೇಕೆಂದು ಅವನು ಯೋಚಿಸಿಕೊಂಡನು. ಅಷ್ಟರೊಳಗೆ ಮುದುಕಿಯ ಅಹವಾಲು ಪೂರೈಸಿ ನವಾಬನು ಅವಳ ಮಾತಿನಲ್ಲಿ ತನಗುಂಟಾದ ಸಂದೇಹವನ್ನು ತೋರ್ಪಡಿಸಿದನು. ಅದನ್ನು ಕೇಳಿದ ಕೂಡಲೇ ಖಾಸ್‌ಭಕ್ಷಿಗೆ ಉಸಿರುಕೂಡಿ ಬಂದಿತು. ದೇವರ ದಯದಿಂದ ಅವರ ಸಂಶಯವು ಬೇರೂರಿ ನಿಂತು ಮತ್ತಾವ ಬುದ್ಧಿಗೂ ಆಸ್ಪದಕೊಡದಿರಲೆಂತಲೂ ಮುದುಕಿಯ ಪ್ರಾರ್ಥನೆಯು ವ್ಯರ್ಥವಾಗಲೆಂತಲೂ ಹಾರೈಸಿದನು.

ಆದರೆ ಮುದುಕಿಯು ಹೈದರನ ಮಾತಿಗೆ ಹೀಗೆ ಪ್ರತ್ಯುತ್ತರ ಹೇಳಿದಳು. " ಹುಜೂರ್, ಅಲ್ಲಾನು ತಮಗೆ ಕಲ್ಯಾಣವನ್ನುಂಟುಮಾಡಲಿ. ಆಗಾಮುಹಮುದ್ ಖಾನನು ಮೆಹರಳನ್ನು ಅಪಹರಿಸಿಕೊಂಡು ಹೋದ ಮಾರನೆಯ ದಿವಸವೇ, ಮಗ ಳನ್ನು ನನಗೆ ಹೊಂದಿಸಿಕೊಟ್ಟು ರಕ್ಷಿಸಬೇಕೆಂದು ನಾನು ಹದಿನೈದು ಇಪ್ಪತ್ತು ವೇಳೆ ಅರ್ಜಿಯನ್ನು—"

" ಹುಜೂರ್, ಈಕೆಯ ಮಗಳೂ ಈಕೆಯೂ ಕುತ್ಸಿತವಾದ ಪ್ರವೃತ್ತಿಯುಳ್ಳವರು. ಅವರಿಗೆ ಆ ಮೂಲಕವೇ ಜೀವನ—" ಎಂದು ಖಾಸ್‌ಭಕ್ಷಿಯು ಮುಂದೆ ಮಾತಿಕ್ಕಿದನು. ಹೈದರ್‌ಷಹನಿಗೆ ಈಗ ನಿಜವಾಗಿ ರೋಷವೇ ಬಂತು. ಅವನು ಅಷ್ಟಕ್ಕೇ ನಿಲ್ಲಿಸಲಿಲ್ಲ.—" ಖಾವಂದ್, ಈ ಬದ್ಮಾಷಳು ಮಹಾಪಾತಕಿಯಾದ ವೇಶ್ಯೆ. ಸನ್ನಿಧಿಯಲ್ಲಿ ಇಲ್ಲದಿರುವವರ ಮೇಲೆ ಇಲ್ಲದ ಚಾಡಿಹೇಳಿ ಆ ಮೂಲಕ ಯಾವುದಾದರೊಂದು ರೂಪದಲ್ಲಿ ಪ್ರಯೋಜನವನ್ನು ಪಡೆಯಬೇಕೆಂಬುದು ಇವಳ ಉದ್ದೇಶವೆಂದು ತೋರುತ್ತದೆ. ಹಿಂದೊಂದುತಡವೆಯೂ ಇವಳು ಹೀಗೆಯೇ ಮಾಡಿ ದುಡ್ಡು ಸುಲಿದಳು" ಎಂದು, ಬಳಿಕ ಅವಳಕಡೆಗೇ ತಿರುಗಿ " ಏನೇ ಹರಾಮಿ, ಗಂಡಸರು ಹೆಂಗಸರೆಂಬ ಭೇದವಿಲ್ಲದೆ ಇಲ್ಲಿ ಬಂದು ತೊಂದರೆ ಮಾಡುತ್ತೀ ! ನವಾಬರು ಹೆಚ್ಚಾಗಿ ಶ್ರಮಪಟ್ಟಿರುವಕಾರಣ ಆಯಾಸಪರಿಹಾರಾರ್ಥವಾಗಿ ಸಂಚಾರಹೊರಟರೆ ಅಲ್ಲಿಗೂ ಬಂದು ಅವರನ್ನು ಪೀಡಿಸುತ್ತಿದ್ದೀಯೆ ! ಅಹವಾಲುಗಳನ್ನು ತರಲು ಇದು ಸಮಯವಲ್ಲವೆಂದು ನಿನಗೆ ತಿಳಿಯದೋ ? ಹಾಗೆ ತಿಳಿಯದಿದ್ದಪಕ್ಷದಲ್ಲಿ ಈಗ ತಿಳಿದುಕೊ. ನಾಳೆ ಅರ್ಜಿಕೂಗಿಸುವ ಹೊತ್ತಿಗೆ ದರ್ಬಾರಿನ ಮಂದಿರದಬಳಿಗೆ ಬಂದು ಕಾಣಿಸಿಕೊ. ಆಗ ನಿನ್ನ ಫಿರ್ಯಾದನ್ನು ಲಕ್ಷ್ಯಕ್ಕೆ ತಂದುಕೊಳ್ಳಲಾಗುವುದು. ಈಗ ಹೊರಡು" ಎಂದು ಗದರಿಸಿಕೊಂಡನು.

ನವಾಬನೊಡನೆ ಬಂದಿದ್ದ ಸಂಗಡಿಗರು ಅವನ ಮಾತನ್ನು ವಿಹಿತವೆಂದು ಒಪ್ಪಿಕೊಂಡರು. ಖಾಸ್‌ಭಕ್ಷಿಯನ್ನು ಸ್ವಾಮಿಭಕ್ತಿಗಾಗಿ ಹೊಗಳಿದರು. ತರುವಾಯ ಒಬ್ಬಿಬ್ಬರು ಹಾಗೆಯೇ ಮಾಡೆಂದು ಮುದುಕಿಗೆ ಬುದ್ಧಿಯನ್ನು ಹೇಳಿದರು. ಇದನ್ನೆಲ್ಲಾ ನೋಡಿ, ನವಾಬನ ಮುಖವು ಮತ್ತಷ್ಟು ಗಂಭೀರವಾಯಿತು. ಅವರ ಮುಖವನ್ನೆಲ್ಲಾ ಒಂದುಸಾರಿ ಬಿರುಗಣ್ಣಿನಿಂದ ದೃಷ್ಟಿಸಿ ನೋಡಿದನು.

ಮುದುಕಿಯು ಗೋಳಿಟ್ಟಳು. ಖಾಸ್‌ಭಕ್ಷಿಯು ಇಲ್ಲಿಯೂ ಇದ್ದುದೂ ಅವನು ಮಾನಕಳೆದುದೂ ಸಭಿಕರ ಸಲಹೆಯೂ ನವಾಬನ ಮೌನವೂ ತನ್ನ ಕೋರಿಕೆಯನ್ನು ನಿರರ್ಥಕಮಾಡಿದುವೆಂದು ಅವಳಿಗೆ ದುಃಖವು ಮಿತಿಮೀರಿತು. ಅವಳು ಕಣ್ಣೀರು ಸುರಿಸುತ್ತ, ಕೊನೆಯಾವೃತ್ತಿ ಹೇಳೋಣವೆಂದು ಯೋಚಿಸಿ, "ಜೀಯಾ, ಈ ಸಂಭಾವಿತರು ಹೇಳಿದಂತೆಯೇ ಮಾಡಬಹುದಾಗಿದ್ದಿತು. ಆದರೆ ಅರ್ಜಿಗಳಿಂದ ಯಾವ ಉಪಯೋಗವೂ ಆಗಲಿಲ್ಲ. ಅವು ಯಾವುವುಗಳಿಂದಲೂ ನನ್ನ ಅಹವಾಲು ತಮಗೆ ವೇದ್ಯವಾದಂತಿಲ್ಲ. ಆದ್ದರಿಂದಲೇ, ಅರ್ಥಿಗಳನ್ನು ನೋಡಲು ಇದು ತಮಗೆ ಹೊತ್ತಲ್ಲವೆಂದು ಅರಿತವಳಾಗಿದ್ದರೂ ಕೂಡ, ರೂಬುರೂಬು ಹೇಳಿಕೊಳ್ಳಲು

ಇದೊಂದುಮಾತ್ರವೇ ಮಾರ್ಗವೆಂದು ಯೋಚಿಸಿ ಇಲ್ಲಿಗೆ ಓಡಿಬಂದೆನು. ಹುಜೂರ್, ಪಾದದಲ್ಲಿ ಬಿದ್ದು ಕೇಳಿಕೊಳ್ಳುತ್ತೇನೆ. ನನ್ನನ್ನು ಸರ್ವಥಾ ಮನ್ನಿಸಿರಿ. ಮೆಹರಳನ್ನು ಪುನಃ ಪಡೆಯುವ ಭಾಗ್ಯವು ನನ್ನ ಹಣೆಯಲ್ಲಿ ಬರೆದಿಲ್ಲ......ಹೊರಡುತ್ತೇನೆ. ಅಲ್ಲಾನು ನಿಮಗೆ ಮಂಗಳವನ್ನುಂಟುಮಾಡಲಿ.'' ಎಂದು ಹೇಳಿ ನೆಲ ಮುಟ್ಟಿ ಸಲಾಮು ಹಾಕಿ ನಗರಾಭಿಮುಖವಾಗಿ ಹೊರಟಳು.

ಆಗಾಮಹಮದನ ಮೇಲೆ ಫಿರ್ಯಾದುಮಾಡುವುದಕ್ಕೂ ಖಾಸ್‌ಭಕ್ಷಿಯು ಆ ಮುದುಕಿಯ ಅರ್ಜಿಗಳನ್ನು ಗೋಪ್ಯ ಅಥವಾ ತಿರಸ್ಕಾರಮಾಡುವುದಕ್ಕೂ ಸಂಬಂಧವೇನುಂಟೆಂದು ಹೈದರನು ಲೆಕ್ಕಹಾಕಿದನು. ಹಿಂದೆ ತಾನು ಹೊರಟು ಹೋಗುವಾಗ ಆಗಾಖಾನನು ಈ ಮನುಷ್ಯನಿಗೆ ಶಿಫಾರಸು ಮಾಡಿ ತನ್ನ ಕೆಲಸವನ್ನು ಕೊಡಿಸಿದುದು ಜ್ಞಾಪಕಕ್ಕೆ ಬಂದಿತು. ಸಮಸ್ಯೆಯು ಅರ್ಥವಾದಂತೆಯೂ ಮುದುಕಿಯ ಮಾತಿನಲ್ಲಿ ಸುಳ್ಳಿಲ್ಲವೆಂತಲೂ ತೋರಿತು.

ನವಾಬನು ಇನ್ನು ಸುಮ್ಮನಿರಲಿಲ್ಲ. ಅವನು ಮುದುಕಿಯನ್ನು ಹಿಂದಕ್ಕೆ ಕರೆಸಿ ತನ್ನ ಜೊತೆಯಲ್ಲಿ ಬರುವಂತೆ ಹೇಳಿ, ಸಂಗಡ ಬಂದಿದ್ದವರಿಗೆ ಹಿಂದಿರುಗುವಂತೆ ಆಜ್ಞಾಪಿಸಿ ತಾನು ಕಾಲುನಡಿಗೆಯ ವೇಗದಿಂದ ಊರಿನಕಡೆಗೆ ನಡೆದನು. ಮುದುಕಿಯೊಬ್ಬಳೇ ಸ್ವಲ್ಪದೂರದಲ್ಲಿ ಅವನನ್ನು ಹಿಂಬಾಲಿಸಿಬರುತ್ತ ಅವನು ಆಗಾಗ್ಯೆ ಕೇಳುತ್ತಿದ್ದ ಪ್ರಶ್ನೆಗಳಿಗೆ ಉತ್ತರಕೊಡುತ್ತಿದ್ದಳು.

(೫)

ನವಾಬನು ಎಂದಿನ ಹೊತ್ತಿಗಿಂತ ಬಹಳ ಮುಂಚೆ ಹಿಂದಕ್ಕೆ ಬಂದುದನ್ನು ನೋಡಿ ಅರಮನೆಯ ಜನರು ಸ್ವಲ್ಪ ಭಯಹೊಂದಿದರು. ಆತನ ಮುಖದ ಕ್ರೋಧಮುದ್ರೆಯು ಆ ಭಯವನ್ನು ಹೆಚ್ಚಿಸದಿರಲಿಲ್ಲ. ಏನೋ ವಿಶೇಷ ಸಂಗತಿಯು ನಡೆದಿರಬೇಕೆಂದು ಅಲ್ಲಿದ್ದವರು ನವಾಬನ ಸಂಗಡ ಹೋಗಿದ್ದ ಪರಿವಾರ ದೇವತೆಗಳನ್ನು ವಿಚಾರಿಸಿದರು. ವಾರ್ತೆಯು ಕರ್ಣಾಕರ್ಣಿಕೆಯಾಗಿ ಹಬ್ಬಿತು. ಅತಿಶಯವಾದ ಪ್ರೀತಿಗೆ ಪಾತ್ರನಾಗಿದ್ದ ಹೈದರ್‌ಷಹನು ಈ ತಪ್ಪಿತಕ್ಕಾಗಿ ಯಾವುದಾದರೊಂದು ಪ್ರಬಲವಾದ ದಂಡನೆಗೆ ಗುರಿಯಾಗುವನೆಂದೂ ಅವನ ಅಧಃಪತನವು ಸಿದ್ಧವೆಂದೂ ಎಲ್ಲಾಕಡೆಯಲ್ಲಿಯೂ ತರ್ಕ. ಎಂದಿನಂತೆ ಅಲ್ಲಿನ ಜನಗಳು ನವಾಬನ ಕಣ್ಣಿಗೆ ಬೀಳದ ದೂರದ ಸ್ಥಳಗಳಲ್ಲಿ ಗುಂಪುಸೇರುತ್ತ ಈ ಹೊಸ ವಿಷಯವನ್ನೂ ಅದರ ಪರಿಣಾಮವನ್ನೂ ಕುರಿತು ಚರ್ಚಿಸತೊಡಗಿದರು.

ಹೈದರನು ತನ್ನ ಬಿಡದಿಗೆ ಹೊರಟುಹೋಗಿ ಯಾರೂ ಬಂದು ತನ್ನನ್ನು ತೊಂದರೆಮಾಡದಂತೆ ಕಾವಲಿರಲು ಆಳುಗಳಿಗೆ ಕಟ್ಟುಮಾಡಿ ಒಳಗಿದ್ದುಬಿಟ್ಟನು. ಅವನ ಕೋಪವಿಳಿಯಲಿಲ್ಲ.

ಹೈದರನ ಮಗನು ಯಾವ ರೀತಿಯಲ್ಲಿ ತಂದೆಯ ಕೋಪವು ದೂರವಾಗುವುದು, ಯಾರಿಂದಲಾದರೂ ಹೇಳಿಸಿದರೆ ಆತನು ಕೋಪವನ್ನು ಬಿಟ್ಟು ಪ್ರಸನ್ನನಾಗುವನೆ ? ಎಂಬ ವಿಚಾರಗಳನ್ನು ಚಿಂತಿಸಿದನು. ಯಾರಿಂದಲಾದರೂ ಹೇಳಿಸುವುದೇ ಸಾಧುವಾಗಿ ಕಂಡುಬಂದಿತು. ಆದರೆ ಸಿಕ್ಕಿದವರ ಕಡೆಯಿಂದ ಶಿಫಾರಸು ಹೇಳಿಸಲು ಹೊರಡಲಾಗಿ ನವಾಬನ ಮನಸ್ಸಿನಲ್ಲಿ ಖಾಸ್‌ಭಕ್ಷಿಯ ಮೇಲಿನ ಕ್ರೋಧವು ಕಡಿಮೆಯಾಗುವುದಕ್ಕೆ ಬದಲಾಗಿ ಹೆಚ್ಚಿ ಮತ್ತೇನಾದರೂ ಮುಳಿಗೆ ಕಾರಣವಾಗುವುದಾದ್ದರಿಂದ ಈ ಪ್ರಯತ್ನದಲ್ಲಿ ಬಹಳ ಎಚ್ಚರಿಕೆ ಇರಬೇಕೆಂತಲೂ, ಯಾರಮಾತಿನಲ್ಲಿ ನವಾಬನಿಗೆ ಗೌರವವೂ ವಿಶ್ವಾಸವೂ ಅಧಿಕವಾಗಿವೆಯೋ ಅಂಥವರ ಮೂಲಕ ಅಪರಾಧಿಗೆ ಬಿಡುಗಡೆಹೊಂದಿಸಬೇಕೆಂದೂ ಅವನು ಯೋಚಿಸಿದನು. ನವಾಬನಂತೆಯೇ ಗುಣಿಸಿ ಮಗನೂ ಕೂಡ ಹೈದರ್‌ಷಹನು ಅಪರಾಧ ಮಾಡಿದವನೆಂದು ಮಂದಟ್ಟುಮಾಡಿಕೊಂಡಿದ್ದನು. ಹೀಗೆ ಒಂದು ಕಡೆ ಕುಳಿತು ಯೋಚಿಸುತ್ತಿರುವ ಕಾಲದಲ್ಲಿಯೇ ಖಾಸ್‌ಭಕ್ಷಿಯು ಯಾರನ್ನು ಶರಣುಹೋಗಲೆಂದು ಎರಡು ಪಕ್ಕಗಳಲ್ಲಿಯೂ ನೋಡುತ್ತ ಅಲ್ಲಿಗೆ ಬಂದನು. ಬಂದವನು ನವಾಬನ ಮಗನನ್ನು ನೋಡಿದೊಡನೆ ಗೋಳಿಡುತ್ತ ಓಡಿಬಂದು ಅಡ್ಡಬಿದ್ದು ಕಾಲುಮುಟ್ಟಿ ಸಲಾಮು ಹಾಕುತ್ತ, ಈ ಪ್ರಸಂಗದಲ್ಲಿ ತನಗೆ ಅಕ್ಷೇಮವಾಗುವುದು ನಿಶ್ಚಿತವೆಂದೂ ತನ್ನನ್ನು ಹೇಗಾದರೂ ಮಾಡಿ ರಕ್ಷಿಸಬೇಕೆಂದೂ ನವಾಬರು ಸ್ವಯಂ ಮಗನ ಮಾತನ್ನು ತೆಗೆದುಹಾಕುವುದಿಲ್ಲವಾದ ಕಾರಣ ಶಿಫಾರಸು ಹೇಳಬೇಕೆಂದೂ ಪ್ರಾರ್ಥಿಸಿದನು. ಹುಡುಗನು ಹೀಗೆಂದನು. " ಹೈದರ್‌ಷಹ, ನಾನು ಅದೇ ಪ್ರಯತ್ನವನ್ನು ಮಾಡುತ್ತಲಿದ್ದೇನೆ. ನವಾಬರನ್ನು ಸಮೀಪಿಸಿ ನಿನಗೆ ಬೆಂಬಲವಾಗಿ ನಿಂತು ಕಾರ್ಯವನ್ನು ಸಾಧಿಸುವಂತಹ ಸಮರ್ಥರಾರಿದ್ದಾರೆಂಬುದನ್ನು ಮನಸ್ಸಿನೊಳಗೇ ಹುಡುಕುತ್ತಿದ್ದೇನೆ. ಆದರೆ ನಾನೇ ಸ್ವಂತವಾಗಿ ಹೋಗಿ ಹೇಳುವುದು ಮಾತ್ರ ಸುಳ್ಳು. ಏಕೆಂದರೆ ನಾನು ಹೋದಪಕ್ಷದಲ್ಲಿ " ನೀನು ಶುದ್ಧ ಹುಡುಗ ; ಈ ವಿಚಾರಗಳಲ್ಲಿ ತಿಳುವಳಿಕೆಯಿಲ್ಲದವನು. ಇದಕ್ಕೆಲ್ಲಾ ಕೈಹಾಕಿಕೊಂಡು ಬರಬೇಡ " ಎಂದು ನನ್ನನ್ನು ಗದರಿಸಿ ಕಳುಹಿಸಿಬಿಡುತ್ತಾರೆಂದು ನನಗೆ ಗೊತ್ತು. ಅಷ್ಟು ಮಟ್ಟಿಗೆ ಮೃದುವಾಗಿ ನನಗೆ ಉತ್ತರ ಹೇಳುವರೇ ಎಂಬುದು ವಿಶೇಷವಾಗಿ ನಂಬಿಕೆಯಿಲ್ಲದ ಮಾತು. ಸಿಕ್ಕಿದವರೆಲ್ಲಾ ಪ್ರಯತ್ನಮಾಡಿದರೆ ಇದ್ದದ್ದನ್ನು ಕೆಡಿಸಿದೆಯಾ ಪೆದ್ದಭಟ್ಟ ಎಂಬಂ

ತಾಗುವುದು. ನಿನ್ನ ಪರಿಣಾಮವು ಇನ್ನೂ ಕಷ್ಟತರವೇ ಆದೀತು. ಆದ್ದರಿಂದ ಯೋಗ್ಯರೂ ಗೌರವಸ್ಥರೂ ಆದವರು ಯಾರಿದ್ದಾರೆಂಬುದನ್ನು ಪರ್ಯಾಲೋಚಿಸುತ್ತಿದ್ದೇನೆ. ಹೈದರ್‌ಷಹ, ನಿನಗೆ ಯಾರಾದರೂ ಸ್ಫೂರ್ತಿಗೆ ಬರುತ್ತಾರೆಯೆ ?''

"ಜೀಯಾ, ತಮ್ಮ ಬುದ್ಧಿಯ ಮುಂದೆ ನನ್ನದು ಹಾಯುವುದೆಂದರೇನು ? ಆದರೂ ಈ ಸೂಚನೆಯನ್ನು ವೇದ್ಯಮಾಡುತ್ತೇನೆ. ಹಜರತ್ ನವಾಬರಿಗೆ ಫರಂಚಿ ಯಜಮಾನರಲ್ಲಿ ಬಹಳ ಗೌರವವಿರುವಂತೆ ತೋರುತ್ತದೆ. ಸಾಮಾನ್ಯವಾಗಿ ಅವರ ಪ್ರತಿಯೊಂದು ಮಾತಿಗೂ ನವಾಬರು, ಯುಕ್ತ, ಸಹಜ ಎಂದು ಮೊದಲಾಗಿ ಹೇಳುತ್ತಿರುತ್ತಾರೆ. ಅಂತಹ ವಿಶ್ವಾಸಿಗಳ ಮಾತನ್ನು ಪ್ರಾಯಶಃ ನಿರಾಕರಿಸಲಾರರು. ಜಿಯಾ ಬಹಳ ಭೀತಿಗೊಂಡಿದ್ದೇನೆ. ನಾನು ಮಾಡಿದುದು ಶುದ್ಧಾಂಗವಾಗಿ ತಪ್ಪು, ತಮ್ಮಂತಹ ಶರಣ್ಯರೇ ನನ್ನನ್ನು ಕಾಪಾಡಬೇಕು. ತಾವು ಅವರ ಮೂಲಕ ಹೇಳಿಸಲಾಗುವುದೆ ?''

"ಹೌದು, ಹೌದು; ಅವರ ಕಡೆಯಿಂದಲೇ ನಿನಗೆ ಅನುಕೂಲವಾಗುವಂತೆ ಕಾಣುತ್ತದೆ. ನಾನು ಹೋಗಿ ಅವರನ್ನು ನೋಡುತ್ತೇನೆ. ಕರೆಯಿಸಿದ ತತ್‌ಕ್ಷಣವೇ ಬರಲು ಅವಕಾಶವಾಗುವಂತೆ ನೀನು ಇಲ್ಲಿಯೇ ಇರು. ಆದರೆ ತಂದೆಯವರ ಕಣ್ಣಿಗೆ ಮಾತ್ರ ಬೀಳಬೇಡ. ಬಿದ್ದೆಯೋ ನಿನ್ನ ವಿನಾಶವನ್ನು ನೀನೇ ತಂದುಕೊಳ್ಳುತ್ತೀಯೆ !'' ಎಂದು ಹೇಳಿ ಟಿಪ್ಪುವು ಫ್ರೆಂಚ ಸೈನ್ಯದ ದಳಪತಿಯನ್ನು ಹುಡುಕಿಕೊಂಡು ಹೋದನು.

(೬)

ಕಮಂಡಾರ (Commander) ನನ್ನು ಕಾಣುವುದು ಕಷ್ಟವಾಗಲಿಲ್ಲ. ಆತನು ಇತರ ಸಂಗಡಿಗರಂತೆ ಅರಮನೆಯಲ್ಲಿ ಇಲ್ಲಿಂದಲ್ಲಿಗೆ ಓಡಾಡುತ್ತ ಕಂಡಕಂಡವರೊಡನೆ ಇತಿಕರ್ತವ್ಯವನ್ನು ಚರ್ಚಿಸುತ್ತಿದ್ದನು. ಟೀಪುವು ಆತನನ್ನು ಹಿಡಿದು ನಿಲ್ಲಿಸಿಕೊಂಡು ಖಾಸ್‌ಭಕ್ಷಿಯ ವಿಚಾರದಲ್ಲಿ ತಾನು ಮಾಡಬೇಕೆಂದಿದ್ದುದನ್ನು ತಿಳಿಸಿ ಆತನ ಸಹಾಯವನ್ನು ಪ್ರಾರ್ಥಿಸಿದನು. ದಳಪತಿಯು ಮೊದಲು ಒಪ್ಪಲಿಲ್ಲ. ನವಾಬನ ಮನಸ್ಸು ಹೇಗಿರುವುದೋ ಅದನ್ನು ದೃಢಪಡಿಸಿಕೊಳ್ಳದೆ ತಾನು ಬಳಿಸಾರೆನೆಂದು ಆತನು ಹಿಂದೆಗೆದನು. ಅಪರಾಧಿಯ ಮೇಲಿನ ಕೋಪವು ಅನಪೇಕ್ಷಿತವಾದ ತನ್ನ ಪ್ರವೇಶದ ದೆಸೆಯಿಂದ ತನ್ನಲ್ಲಿ ಅಸ್ನಿಗ್ಧತೆಯ ರೂಪವನ್ನು ತಾಳಿದ ಪಕ್ಷದಲ್ಲಿ ಕ್ಷೇಮಕರವಲ್ಲವೆಂದು ಆತನು ಬಹಳ ಅಂಜಿದನು. ಹೈದರ್‌ಷಹನು ಅದನ್ನು ಕಂಡು ತೀರ ಎದೆಗೆಟ್ಟನು. ತನಗೆ ಅಧಃಪತನವು ನಿಶ್ಚಿತವಾದುದೆಂದು

ಅವನು ಗೋಳಿಡುತ್ತ “ ಮೆಹರ್‌ಬಾನ್, ತಮ್ಮ ಮಾತನ್ನು ಅವರು ತೆಗೆದುಹಾಕು ವುದಿಲ್ಲ. ಉಳಿದ ಸ್ವಜಾತಿಯವರು ಯಾರಾದರೂ ಹೋದರೆ ಆ ರೀತಿ ಪರಿಣಮಿಸ ಬಹುದೆಂಬ ಭಾವನೆಯಿಂದಲೇ ನಾನು ತಮ್ಮಲ್ಲಿ ಶರಣಾಗತನಾಗಿದ್ದೇನೆ. ತಮ್ಮಲ್ಲಿ ಅವರಿಗೆ ಬಹಳ ನಂಬಿಕೆಯಿದೆಯೆಂಬುದು ತಮಗೆ ಗೊತ್ತಿದೆ. ನನಗೋಸ್ಕರ ಇದೊಂದು ತಡವೆ ಆ ನಂಬಿಕೆಯನ್ನು ಉಪಯೋಗಿಸಿ ನನ್ನನ್ನು ಕಾಪಾಡಬೇಕು.'' ಎಂದು ಇನ್ನೂ ಅನೇಕ ವಿಧವಾಗಿ ಕಾಲಮೇಲೆ ಬಿದ್ದು ಬೇಡಿದನು.

ಅಷ್ಟರಲ್ಲಿ ಕಾಕತಾಲನ್ಯಾಯದ ಸಂಗತಿಯೊಂದು ಒದಗಿತು. ಆ ಸಮ ಯಕ್ಕೆ ಸರಿಯಾಗಿ ನವಾಬನ ಬಿಡಾರದಿಂದ ಹೊರಬಿದ್ದು ಪ್ಯಾದೆಯೊಬ್ಬನು ಎಡ ಬಲಗಳಿಗೆ ನೋಡುತ್ತಾ, ಆತುರ ಆತುರವಾಗಿ ಕಮಂಡಾರನೇ ಮೊದಲಾದವರು ಮಾತನಾಡುತ್ತಿದ್ದ ಬಳಿಗೆ ಬಂದನು. ಬಂದವನು ಸಲಾಮುಮಾಡಿ “ ತಮ್ಮನ್ನು ಕರೆದುಕೊಂಡು ಬರಲು ಹುಜೂರಿಂದ ಅಪ್ಪಣೆಯಾಗಿದೆ. ಜೊತೆಯಲ್ಲಿಯೇ ದಯ ಮಾಡಿಸಬೇಕು '' ಎಂದು ದಳಪತಿಯಲ್ಲಿ ಅರಿಕೆಮಾಡಿಕೊಂಡನು. ಅವನ ಮಾತ ನ್ನು ಕೇಳಿ ಟಿಪ್ಪುವು ದಳಪತಿಯ ಕಡೆಗೆ ಒಂದಾವೃತ್ತಿ ನೋಡಿ ನಕ್ಕನು. ಇದೋ ಸಮಯವು ಒದಗಿದೆ, ನೀವು ಈಗ ಉಪಕಾರ ಮಾಡಬೇಕು ಎಂದು ಆ ನಗುವು ತಿಳಿಸಿತು. ಎಲ್ಲರೂ ಹೊರಟರು. ಬಿಡಾರದ ಬಾಗಲಿಗೆ ಬಂದ ಮೇಲೆ ದಳಪತಿಯು ಹೈದರ್‌ಷಹನನ್ನು ಕುರಿತು, “ ನೀನು ಇಲ್ಲಿಯೇ ಇರು. ಒಳಕ್ಕೆ ಬಂದರೆ ಪ್ರಮಾದ ವಾದೀತು. ನಾನು ಸವಾರಿಯ ಬಳಿಯಲ್ಲಿ ನಿನಗೆ ಅನುಕೂಲವಾಗುವಂತೆಯೇ ಮಾತನಾಡಿ ನೋಡುತ್ತೇನೆ '' ಎಂದು ಸೂಚನೆ ಹೇಳಿ, ನವಾಬನ ಮಗನೊಡನೆ ಒಳಹೊಕ್ಕನು.

ಯಥಾವಿಧಿಯಾದ ಮುಜರೆಗಳು ನಡೆದುವು. ಟಿಪ್ಪುವೂ ದಳಪತಿಯೂ ತಮಗಾಗಿ ಏರ್ಪಡಿಸಿದ ಆಸನವನ್ನು ಸ್ವೀಕರಿಸಿ ನವಾಬನು ಮಾತನ್ನು ಪ್ರಾರಂಭಿ ಸಲೆಂದು ನಿರೀಕ್ಷಿಸಿ ಅವನ ಕಡೆ ನೋಡುತ್ತ ಕುಳಿತರು. ಆದರೆ ನವಾಬನು ಸ್ವಲ್ಪ ಹೊತ್ತು ಮಾತನಾಡಲಿಲ್ಲ. ಆ ಮೇಲೆ ಮೌನವನ್ನು ವಹಿಸಿ ಇರಲೂ ಅಸಮರ್ಥ ನಾಗಿ ಮಾತನ್ನು ಪ್ರಾರಂಭಿಸಿದನು.

“ ಆ ಸೈತಾನನೆಲ್ಲಿ ? ''

ಬಾಗಲಿಂದಾಚೆಗೆ ಹೊರಭಾಗದಲ್ಲಿ ಕಾದಿದ್ದಾನೆಂದು ಆದಷ್ಟು ಮಟ್ಟಿಗೆ ಸಮಾಧಾನಪಡಿಸುವ ಧ್ವನಿಯಿಂದ ಮಗನು ಉತ್ತರಹೇಳಿದನು.

“ ಖಾವಂದರು ಅಪರಾಧಿಯನ್ನು ಕ್ಷಮಿಸಬೇಕು '' ಎಂದು ಫ್ರೆಂಚ ದಳ ಪತಿಯು ಮಾತಿಕ್ಕಿದನು.

"ಕುಮಂದಾನರೆ! ಆತನ ಮಾತೆತ್ತುವುದು ಯಾರಿಗೂ ಯೋಗ್ಯವಲ್ಲ. ಕ್ರಿಯಾಭ್ರಷ್ಟನು ಪಶುಗಳಿಗಿಂತ ಕಡೆಯಾದವನು. ಅವಾದರೋ ಇದನ್ನು ಮಾಡಬೇಕು ಇದನ್ನು ಮಾಡಬಾರದೆಂಬ ವಿವೇಚನೆಯ ಶಕ್ತಿಯಿಲ್ಲದೆ ಮಾಡುತ್ತವೆ. ಆದರೆ ಆ ಶಕ್ತಿಯನ್ನು ಯಥೇಷ್ಟವಾಗಿ ಉಳ್ಳ ಮನುಷ್ಯನು ಉದ್ದೇಶಪೂರ್ವಕವಾಗಿ ಹೀನವಾದ ಕೆಲಸಮಾಡಿದರೆ ಪ್ರಾಣಿಗಳಿಗಿಂತಲೂ ಕೀಳಲ್ಲದೆ ಮತ್ತೇನು? ಅವನದು ಎಂತಹ ಹೀನಪ್ರವೃತ್ತಿಯೆಂಬುದು ಪ್ರಾಯಶಃ ನಿಮಗೆ ತೋರಿರಲಾರದು. ಅಪರಾಧದಲ್ಲಿ ಅನೇಕ ವಿಧವುಂಟು. ಅದರೊಳಗೆ ಪ್ರಭುವಿಗೂ ಪ್ರಜೆಗೂ ಸಂಸರ್ಗವನ್ನು ತಪ್ಪಿಸಿ ಕುಂದಕಮಾಡುವುದು ಒಂದು. ಆದರೆ ಇದು ಅಪರಾಧವೆಂದು ನೀವು ಒಂದುವೇಳೆ ಭಾವಿಸದಿದ್ದರೂ, ಇದಕ್ಕಿಂತ ಹೆಚ್ಚಾಗಿ ಇನ್ನು ಯಾವುದರಲ್ಲಿಯೂ ದೋಷವಿರಲಾರದೆಂಬುದು ನನ್ನ ಭಾವನೆ. ಪ್ರಾಯಶಃ ಈ ಪ್ರವರ್ತನೆಯು ಅಪರಾಧವಲ್ಲವೆಂದು ತಿಳಿದುಕೊಂಡು ನೀವು ಆತನ ಪರವಾಗಿ ಕ್ಷಮಾಪಣೆಯನ್ನು ಬೇಡುತ್ತೀರಿ. ಅದು ಆಗಲಾರದು."

"ಮಹಾರಾಜ, ನನ್ನಮೇಲೆ ಅನುಗ್ರಹಮಾಡಿ ನಾನು ಹೇಳಬೇಕೆಂದಿರುವುದನ್ನು ಕೇಳಬೇಕೆಂದು ಮೊದಲು ಪ್ರಾರ್ಥಿಸಿಕೊಳ್ಳುತ್ತೇನೆ—ಹೈದರ್‌ಷಹನು ಅಪರಾಧಿಯಲ್ಲವೆಂದು ನಾನು ಎಂದಿಗೂ ಹೇಳುವುದಿಲ್ಲ. ಅವನು ತಪ್ಪುಮಾಡಿರುವುದು ವಾಸ್ತವವಲ್ಲದ ಪಕ್ಷದಲ್ಲಿ ನಾನು ತಮ್ಮೆದುರಿಗೆ ನಿಂತು ವಿಜ್ಞಾಪಿಸಿಕೊಳ್ಳುತ್ತಿರುವುದೂ ವಾಸ್ತವವಲ್ಲವಾದೀತು. ಎಂದಿಗೆ ಹಾಗ ಹೇಳಿಯೇನು! ಖಾಸ್ ಭಕ್ಷಿಯು ಎಲ್ಲವನ್ನೂ ನಮ್ಮೊಡನೆ ಹೇಳಿ ತಾನು ಮಾಡಿದುದನ್ನು ತಪ್ಪೆಂದು ಒಪ್ಪಿಕೊಂಡಿದ್ದಾನೆ. ಆದರೆ ಈ ಸಂಘಟನೆಗೆ ಅವನು ಮುಖ್ಯಕಾರಣನಲ್ಲ. ಆಗಾ ಮಹಮದ್‌ಖಾನನು ಅವನಿಗೆ ಯಜಮಾನನಾಗಿದ್ದನೆಂಬ ವಿಷಯವು ತಮಗೆ ಹೊಸದಲ್ಲ. ಆತನು ಜಹಗೀರಿಗೆ ಹೋಗುವುದಕ್ಕೆ ಒಂದುದಿವಸ ಮುಂಚೆ ಆ ವೃದ್ಧೆಯ ವಿಷಯವಾಗಿ ಹೈದರ್‌ಷಹನಿಂದ ಮಾತುತೆಗೆದುಕೊಂಡನಂತೆ. ಆತನು ಹೇಳಿದುದನ್ನು ಇವನು ಅಲ್ಪವಿಷಯವೆಂದು ಭಾವಿಸಿ ಒಪ್ಪಿದುದಾಗಿ ತಿಳಿಯಬಂದಿತು. ಬೇಕಾದಲ್ಲಿ ತಾವು ಇದೆಲ್ಲವನ್ನೂ ಆತನ ಮುಖದಿಂದಲೇ ಕೇಳಬಹುದು. ಆದ್ದರಿಂದ ದೋಷದ ಮೂಲವು ಹೈದರ್‌ಷಹನಲ್ಲಿಲ್ಲ. ತಾವು ಹೇಳುವುದೂ ಯುಕ್ತವೇ. ಪ್ರಜೆಯು ಪ್ರಭುವಿನ ಆಶ್ರಯವನ್ನು ಪಡೆದು ತನಗೆ ಉಂಟಾಗಿರುವ ಅನ್ಯಾಯವನ್ನು ನ್ಯಾಯವಾಗಿ ಸರಿಪಡಿಸಿಕೊಳ್ಳದಂತೆ ಮಾಡಿದುದು ದಂಡನೆಗೆ ಅರ್ಹವಾದುದಲ್ಲದೆ ಸಂಭಾವನೆಗೆ ಅರ್ಹವಾದುದಲ್ಲ. ಆದರೂ ಕೂಡ ಅಪರಾಧವು ಹುಟ್ಟಿದುದು ಮತ್ತೊಂದು ಕಡೆಯಾದಕಾರಣ ಖಾವಂದರು ಈತನಲ್ಲಿ ಕೃಪೆಯಿಡಬೇಕು."

ಹೈದರನು ಸ್ವಲ್ಪ—ಸ್ವಲ್ಪವೇ ಸ್ವಲ್ಪ—ಅಸಮಾಧಾನವನ್ನೂ ವಿಸ್ಮಯವನ್ನೂ ಮುಖದಲ್ಲಿ ತೋರ್ಪಡಿಸಿ ಉತ್ತರ ಹೇಳಿದನು. "ಕುಮುಂದಾನರೆ, ಆ ಬದಮಾಯಿಷನನ್ನು ಮನ್ನಿಸಬೇಕೆಂದು ನೀವೇನೋ ಹೇಳುವಿರಿ. ಆದರೆ ಈ ಸ್ಥಾನದಲ್ಲಿ ನೀವೇ ಇದ್ದ ಪಕ್ಷದಲ್ಲಿ ಏನು ಮಾಡುತ್ತಿದ್ದಿರೆಂಬುದನ್ನು ನೀವು ಯೋಚಿಸಿದಂತೆ ಕಾಣುವುದಿಲ್ಲ. ಪ್ರಭುವಾದವನು ಪ್ರಜೆಯನ್ನು ಪರಿಪಾಲಿಸದಿದ್ದ ಮೇಲೆ ಆ ಕೆಲಸವನ್ನು ನಿರ್ವಹಿಸಲು ಮತ್ತಾರಿದ್ದಾರೆ? ಅಲ್ಲಾ ಅಕ್ಬರನು ರಾಜರನ್ನೂ ಇತರ ಪ್ರಭುಗಳನ್ನೂ ಈ ಲೋಕದಲ್ಲಿಟ್ಟಿರುವುದು ಆ ಉದ್ದೇಶದಿಂದಲೇ ಎಂದು ನನಗೆ ತೋರುತ್ತದೆ. ಹೀಗಿರುವಲ್ಲಿ ಪ್ರಭುವಾದವನು ಉಪೇಕ್ಷೆ ಮಾಡಿದರೆ ಹೇಗಾದೀತು? ಯೋಗ್ಯರನ್ನು ಸಂಭಾವಿಸದೆಯೂ ದುಷ್ಟರನ್ನು ದಂಡಿಸದೆಯೂ ಇದ್ದಲ್ಲಿ ಆತನು ರಾಜನಾಗಿ ಫಲವೇನು? ವಸ್ತುತಃ ಅಪರಾಧಿಯು ಹೈದರ್‌ಷಹನಲ್ಲ;—ಆಗಾಮಹಮ್ಮದ್‌ನೇ ಇಷ್ಟೆಲ್ಲಾ ಅನರ್ಥಕ್ಕೆ ಕಾರಣವಾದವನು. ಆದ್ದರಿಂದ ದಂಡನೆಯು ಅವನಿಗಾಗಬೇಕೇ ಹೊರತು ಯಾವುದಕ್ಕೂ ಕಾರಣಭೂತನಲ್ಲದ ಈತನಿಗಲ್ಲವೆಂದು ನಿಮ್ಮ ಮನಸ್ಸಿನೊಳಗೆ ತರ್ಕವುಂಟಾಯಿತು. ಆದರೆ ಅಪರಾಧಿಯು ಅವನಾದರೂ ಹೈದರ್‌ಷಹನು ನಿರಪರಾಧಿಯೆಂಬುದು ಅದರಿಂದ ದೃಢಪಡುವುದಿಲ್ಲ. ಇಬ್ಬರೂ ತಪ್ಪಿತಸ್ಥರು. ಇವರಿಬ್ಬರಿಗೂ ಅಪರಾಧಬಾಹುಳ್ಯದಲ್ಲಿ ತಾರತಮ್ಯವಿದೆಯೇ ವಿನಾ ಒಬ್ಬನು ಅಪರಾಧಿಯೆಂತಲೂ ಮತ್ತೊಬ್ಬನು ನಿರಪರಾಧಿಯೆಂತಲೂ ಹೇಳುವ ಹಾಗಿಲ್ಲ." ಹೈದರನು ನಿಲ್ಲಿಸಿ ಸ್ವಲ್ಪ ನಕ್ಕು ಮುಂದೆ ಹೇಳಿದನು. "ಕುಮುಂದಾನರೆ, ನೀವು ಯಾವ ಯಾವ ಮಾರ್ಗದಲ್ಲಿ ಆತನ ಪರವಾಗಿ ಶಿಫಾರಸು ಮಾಡಿ ವಾದಿಸಲು ಹೋದರೂ ಆ ಬದಮಾಯಿಷನು ಅಪರಾಧಿಯೆಂಬುದೇ ವ್ಯಕ್ತವಾಗುತ್ತದೆ. ನಾನು ಈಗ ನಿಮ್ಮೊಡನೆ ಹೇಳಿದ ಅಂಶಗಳನ್ನೆಲ್ಲಾ ಸಂಜೆ ಹಿಂದಿರುಗಿ ಬರುವಾಗಲೇ ಆಲೋಚಿಸಿ ನೋಡಿದೆನು. ಹೈದರ್‌ಷಹನು ನನಗೂ ಬೇಕಾಗಿದ್ದವನು. ಭಕ್ತಿಯಿಂದ ಕೆಲಸಮಾಡಿ ಯೋಗ್ಯನೆನ್ನಿಸಿಕೊಂಡವನು. ಆದ ಕಾರಣವೇ ಆಗಾಖಾನನು ಹೊರಟುಹೋದ ಮೇಲೆ ಅವನನ್ನು ಖಾಸ್‌ಭಕ್ಷಿಯ ಕೆಲಸಕ್ಕೆ ನೇಮಿಸಿಕೊಂಡೆನು. ಆದರೂ ಅವನು ಈಬಾರಿ ಎಡವಿದ್ದಾನೆ. ಎಡವಿದುದರ ಫಲವನ್ನು ಅನುಭವಿಸಿಯೇ ತೀರಬೇಕು."

ಹೊರಗೆ ಬಾಗಿಲ ಬಳಿಯಲ್ಲಿ ನಿಂತು ತನ್ನ ಹಣೆಯಬರಹವನ್ನು ನವಾಬನ ಮಾತಿನ ರೂಪದಲ್ಲಿ ತಿಳಿಯುತ್ತಿದ್ದ ಹೈದರ್‌ಷಹನಿಗೆ ನವಾಬನು ತನ್ನನ್ನು ಶಿಕ್ಷಿಸಲು ಬದ್ಧಸಂಕಲ್ಪನಾಗಿದ್ದುದನ್ನು ಕೇಳಿ ಮೈನಡುಗಿ ನೀರಾಯಿತು. ಆಗಾಮಹಮದನ ಮಾತನ್ನು ಕೇಳಬಾರದಾಗಿದ್ದಿತೆನ್ನಿಸಿತು. ತನ್ನ ತಲೆಯನ್ನು ತೆಗೆಯಿಸುವುದಾದರೆ

ಮನೆಯೊಳಗೆ ಹೆಂಡತಿ ಮಕ್ಕಳು ಅನಾಥರಾದರೆಂದು ಅವನು ಶೋಕಗೊಂಡು ಕಣ್ಣೀರುಹಾಕಿದನು. ಸ್ವಲ್ಪ ಜಾರಲಾಗಿ ಬೆಟ್ಟವನ್ನೇ ತೆಗೆದು ತಲೆಯಮೇಲೆ ಕವಿಚಿದ ವಿಧಿಯು ಬಹು ಕ್ರೂರವಾದುದೆಂದುಕೊಂಡನು.

ಒಳಗೆ ಕೊಠಡಿಯಲ್ಲಿ ಪ್ರಸಂಗವು ಇನ್ನೂ ಮುಗಿದಿರಲಿಲ್ಲ. ದಳಪತಿಯು ತಾನು ಹೇಳಬೇಕಾಗಿ, ನವಾಬನು ಇದುವರೆಗೆ ಪೂರ್ವಭಾವಿಯಾಗಿ ಊಹಿಸದಿರುವಂತಹ ಮಾತೇನಾದರೂ ಉಳಿದಿದೆಯೇ ಎಂದು ಯೋಚಿಸಿದನು. ಯೋಜನೆಯಲ್ಲಿ ಸ್ವಲ್ಪಹೊತ್ತು ಕಳೆದಬಳಿಕ ಪ್ರತ್ಯುತ್ತರ ಹೇಳಲು " ಹುಜೂರ್ ! " ಎಂದು ಮಾತೆತ್ತಿದನು. ಅದನ್ನು ಕೇಳಿ ನವಾಬನ ಮಗನಿಗೆ ಚಿಂತೆ ಹತ್ತಿತು. ಫ್ರೆಂಚ್ ಸೇನಾಪತಿಯು ಸಮಂಜಸವಾದ ಉತ್ತರವನ್ನು ಕೊಡಲರಿಯದೆ ಏನನ್ನಾದರೂ ಹೇಳುವುದಕ್ಕೆ ಹೋಗಿ ನವಾಬರ ಕೋಪವನ್ನು ಹೆಚ್ಚಿಸುವುದಲ್ಲದೆ, ಮನ್ನಣೆಗಾಗಲಿ ಅಥವಾ ಕಡಿಮೆಯಾದ ಶಿಕ್ಷೆಗಾಗಲಿ ಪ್ರಾಯಶಃ ಇರಬಹುದಾದ ಅಲ್ಪಸ್ವಲ್ಪ ಅವಕಾಶವನ್ನೂ ಕೂಡ ಹಾಳುಮಾಡುತ್ತಿದ್ದಾನೆಂದು ಅವನು ಭೀತನಾದನು. ಆದರೂ ಒದಗುವ ಸಂಭಾಷಣೆಯನ್ನು ಯಾವರೀತಿಯಲ್ಲಿಯೂ ತಿರುಗಿಸಲರಿಯದವನಾಗಿ ಸುಮ್ಮನೆ ಮಿಟಮಿಟಗುಟ್ಟುತ್ತ ಕುಳಿತನು. ದಳಪತಿಯು ಹೀಗೆಂದನು : " ಹುಜೂರ್ ! ತಮ್ಮೊಡನೆ ವಾದಮಾಡಿ ಜಯಿಸಲು ನನ್ನಿಂದಾಗದು. ಹೈದರ್ ಷಹನು ಅಪರಾಧಿಯಾಗಿರುವುದು ನಿಜವಾಗಿರುವಾಗ ನಾವು ಆತನನ್ನು ಮನ್ನಿಸಬೇಕೆಂದು ಕೇಳುವುದು ವ್ಯರ್ಥವಾದುದು; ಯುಕ್ತವಾದುದೂ ಅಲ್ಲ. ಆದರೆ ಘೋರತರವಾಗಿ ತಪ್ಪುಮಾಡಿರುವವನು ಮತ್ತೊಬ್ಬನಿರುವನಾದಕಾರಣ ಈತನು ಹೆಚ್ಚಿನ ದಂಡನೆಗೆ ಅರ್ಹನಲ್ಲವೆಂಬುದೊಂದೇ ನನ್ನ ಅರಿಕೆ. "

ನವಾಬನು ಆ ಮಾತುಗಳನ್ನು ಕೇಳಿ ನಕ್ಕು ಮಗನಕಡೆಗೆ ತಿರುಗಿ, " ಏನಪ್ಪ, ಅಪರಾಧಿಯ ಪರವಾಗಿ ನೀನೇದಾರೂ ಹೇಳಬೇಕಾದ್ದಿದೆಯೇನಯ್ಯ ? " ಎಂದು ಪ್ರಶ್ನೆಮಾಡಿದನು.

ಮಗನೂ ನಗುತ್ತ, " ಕ್ಯಾ ದಾದಾ, ನನ್ನನ್ನು ಹಾಸ್ಯಮಾಡುತ್ತೀರಾ ?" ಎಂದು ಪ್ರತಿಯಾಗಿ ಪ್ರಶ್ನೆಮಾಡಿದನು. " ಇದೆ, ಇದೆ-ನಾನೂ ಒಂದು ಮಾತನ್ನು ಹೇಳಬೇಕಾಗಿದೆ. ಹೈದರ್‌ಷಹನು ವಿಶೇಷ ಅಪರಾಧಿ; ಅವನ ತಲೆಯನ್ನು ಕಡಿಸಿಬಿಡಿ ! "

ಫ್ರೆಂಚ ದಳಪತಿಯು ವಿಸ್ಮಯದಿಂದಲೂ ಗಾಬರಿಯಿಂದಲೂ ಟಿಪ್ಪುವಿನ ಕಡೆಗೆ ತಿರುಗಿದನು. ಅವನಿಗೆ ಆ ಹುಡುಗನ ಮನಸ್ಸು ಅರಿವಾಗಲಿಲ್ಲ. ನವಾಬನು

ಆ ಮಾತಿಗೆ ಉತ್ತರವೇನು ಹೇಳುವನೆಂಬುದನ್ನು ನಿರೀಕ್ಷಿಸುತ್ತ ನವಾಬನ ಮುಖವನ್ನು ನೋಡಿದನು.

ಹೈದರನು ಮಗನ ಮಾತಿನ ಅರ್ಥವನ್ನೂ ಮನಸ್ಸನ್ನೂ ತಿಳಿದವನಾಗಿ ಸ್ವಲ್ಪ ಗಟ್ಟಿಯಾಗಿ ನಗುತ್ತ ಬಹಳ ವಿನೋದಗೊಂಡವನಾಗಿ, "ಏಕೆ ಹಾಗೆ ಹೇಳುತ್ತೀ? ಅಂತಹ ಅಭಿಪ್ರಾಯಕ್ಕೆ ಕಾರಣವೇನು?" ಎಂದು ಕೇಳಿದನು.

"ಅಲ್ಲದೆ ಮತ್ತೇನು? ಒಬ್ಬ ಮುದುಕಿಯು ಬಂದು ನಿಮ್ಮನ್ನು ನೋಡಲು ಬಿಡದಿದ್ದುದಕ್ಕಾಗಿ ಭಕ್ಷಿಯು ದಂಡನೆಯನ್ನು ಅನುಭವಿಸಬೇಕಲ್ಲವೆ! ತಲೆಗಡಿಸಿಬಿಟ್ಟರೆ ಕೆಲಸವು ನಿಶ್ಶೇಷವಾಗಿ ಪೂರೈಸುವುದಲ್ಲ!"

"ಮಗು, ನೀನಿನ್ನೂ ಹುಡುಗ, ಅವನು ತಪ್ಪುಮಾಡಿದವನು. ತಪ್ಪಿತದ ಫಲವನ್ನು ಅನುಭವಿಸಲೇಬೇಕು. ನಾಳೆ ನೀನು ತಪ್ಪುಮಾಡಿದರೂ ನಿನಗೂ ದಂಡನೆಯು ತಪ್ಪುವುದಿಲ್ಲ."

ಮುಂದೆ ಯಾರೊಬ್ಬರೂ ಮಾತನಾಡಲಿಲ್ಲ. ಹೈದರನು ಹೊರಗೆ ಕಾದಿದ್ದ ಪ್ಯಾದೆಯನ್ನು ಕರೆದು, ಜಮಾದಾರ್ ಸೈಯದ್ ಕಮಾಲುದ್ದೀನನನ್ನು ಕರೆದು ತರಲು ಅಪ್ಪಣೆಮಾಡಿದನು.

ಐದು ನಿಮಿಷವೆನ್ನುವುದರೊಳಗೆ ಜಮಾದಾರನು ಬಂದನು. ಮುಜರೆಯಾದ ಮೇಲೆ ಹೈದರನು ಅವನನ್ನು ಕುರಿತು, "ನೀನು ಈಗಲೇ ಹೊರಟು ರಾಮಗಿರಿಗೆ ಹೋಗಿ ಆಗಾಮಹಮದ್‌ಖಾನನನ್ನು ಪತ್ತೆಮಾಡಬೇಕು. ಮೆಹರಳನ್ನು ಅಪಹರಿಸಿಕೊಂಡುಹೋದ ಅಪರಾಧಕ್ಕಾಗಿ ಸಮಜಾಯಿಷಿ ಹೇಳಲು ಸನ್ನಿಧಿಗೆ ಬರಬೇಕೆಂದು ನಮ್ಮ ಅಪ್ಪಣೆಯನ್ನು ತಿಳಿಸು. ಅವನು ಹಿಂದುಮುಂದು ನೋಡಿದರೆ ತಲೆಯನ್ನು ಕತ್ತರಿಸಿಹಾಕಿ ಅವನ ವಶದಲ್ಲಿರುವ ಸ್ತ್ರೀಯನ್ನು ಇಲ್ಲಿಗೆ ಕರೆದುಕೊಂಡು ಬಾ. ಅವನು ಬರಲಿ, ಬರದೇ ಇರಲಿ, ಸ್ತ್ರೀಯನ್ನು ಮಾತ್ರ ಕರೆದುಕೊಂಡುಬರಬೇಕು. ಆಕೆಯು ನಿನಗೆ ತಾಯಿಯೆಂಬ ಭಾವನೆಯಿರಲಿ" ಎಂದು ಆಜ್ಞೆಮಾಡಿದನು. ಜಮಾದಾರನು ಆಜ್ಞೆಯನ್ನು ಶಿರಸಾವಹಿಸಿ ಮುಜರೆಮಾಡುತ್ತ ಹೊರಬಿದ್ದನು. ನವಾಬನು ಮತ್ತೊಬ್ಬ ಜಮಾದಾರನನ್ನು ಕರೆಯಿಸಿ, "ನಾಳೆಯಬೆಳಗ್ಗೆ ಸೂರ್ಯೋದಯಕಾಲಕ್ಕೆ ಸರಿಯಾಗಿ ಸೈನ್ಯವೆಲ್ಲದರ ಮುಂಭಾಗದಲ್ಲಿ ಹೊರಗಡೆ ಈಗ ನಿಂತಿರುವ ಭಕ್ಷಿಯನ್ನು ನಿಲ್ಲಿಸಿ, ನೂರು ಛಡಿಯೇಟುಗಳನ್ನು ಹೊಡೆಯಿಸಬೇಕು. ಅವನನ್ನು ಈಕ್ಷಣದ ಲಾಗಾಯಿತು ಖಾಸ್‌ಭಕ್ಷಿಯ ಕೆಲಸದಿಂದ ವಜಾ ಮಾಡಿದೆ" ಎಂದನು. ಬಳಿಕ ಆತನನ್ನು ಕುರಿತು, "ನಾಳೆಯ ಬೆಳಗಿನಿಂದ ನಿನ್ನನ್ನು

ಖಾಸ್‌ಭಕ್ಷಿಯಾಗಿ ನೇಮಕಮಾಡಿ ಬಡ್ತಿ ಮಾಡಿದ್ದೇವೆ. ಮುಂದೆ ಮತ್ತೊಂದು ಹುಕುಂ ಆಗುವವರೆಗೂ ನೀನು ಆ ಕೆಲಸವನ್ನು ನೋಡಬೇಕು" ಎಂದು ಹೇಳಿದನು. ಜಮಾದಾರನು ತನ್ನ ಭಾಗದ ದೇವರು ದೊಡ್ಡವನೆಂದು ಹೇಳುತ್ತ ಸಲಾಂ ಮಾಡಿ ಹೊರಕ್ಕೆ ಹೋದನು.

ನವಾಬನು ಮಗನ ಮತ್ತು ದಳಪತಿಯ ಕಡೆಗೆ ಒಂದಾವೃತ್ತಿ ನೋಡಿದನು. ಪ್ರಸಂಗವು ಅಲ್ಲಿಗೆ ಮುಗಿಯಿತೆಂದೂ ತಾವು ಇನ್ನು ಹೊರಡಬೇಕೆಂಬುದು ನವಾಬರ ಅಪೇಕ್ಷೆಯೆಂದೂ ಅವರು ಆ ದೃಷ್ಟಿಯಿಂದ ಅರಿತು ಯಥಾಕ್ರಮವಾಗಿ ನವಾಬನನ್ನು ಬೀಳ್ಕೊಂಡು ಹೊರಟರು. ಬಾಗಿಲಿಂದಾಚೆಗೆ ಹೈದರ್‌ಷಹನು ಕಾಣಿಸಿಕೊಂಡನು. "ಖಾವಂದ್, ತಮ್ಮ ವಾಕ್ಸಹಾಯದಿಂದ ನನ್ನ ಪ್ರಾಣವುಳಿಯಿತು" ಎಂದು ಹೇಳಿಕೊಂಡನು. ಎಲ್ಲರೂ ತಮ್ಮ ದಾರಿಯನ್ನು ಹಿಡಿದು ಹೊರಟು ಹೋದರು.

ಪ್ರಾಣವುಳಿಯಿತೆಂಬುದೊಂದೇ ಸಮಾಧಾನ; ಮಾರನೆಯದಿನ ಬೆಳಗ್ಗೆ ಊರಹೊರಗಿನ ಪಾಳೆಯದಲ್ಲಿ ಜನಸಮೂಹವು ಸೇರಿ ನೋಡುತ್ತಿರಲು ಬೆನ್ನಮೇಲೂ ಭುಜದಮೇಲೂ ಲೆಕ್ಕಮಾಡಿಮಾಡಿ ನೂರು ಛಡಿಯ ಏಟುಗಳು ಬಿದ್ದುವು...

...ಚರ್ಮವು ಸುಲಿದುಹೋಗಿ ರಕ್ತವು ಕೋಡಿಹರಿಯುತ್ತಿದ್ದಿತು. ಊದಿ ಮೈಯು ಒಂದಕ್ಕೆರಡರಷ್ಟಾಗಿದ್ದಿತು. ನವಾಬನ ಮಗನು ಆವೇಳೆಗೆ ಮುಂದೆ ಬಂದು ನಾಲ್ಕುಮಂದಿ ಆಳುಗಳನ್ನು ಕರೆಯಿಸಿ ಅವನನ್ನು ಹಕೀಮನ ಮನೆಗೆ ಹೊರಿಸಿಕೊಂಡುಹೋಗಿ ಚಿಕಿತ್ಸೆಮಾಡಿಸಿದನು.

(೭)

ರಂಗನಾಥದೇಶಿಕನೂ ಸಂಗಡಿಗನೂ ಮನೆಯಲ್ಲಿ ಮಾತನಾಡುತ್ತ ಕುಳಿತಿದ್ದರು.

ರಂಗನಾಥ—ಎಲ್ಲಿ ನೀನು ಈ ಹೊತ್ತು ಕಾಣಿಸಲಿಲ್ಲ? ದರ್ಬಾರಿಗೆ ಹೋಗುವಾಗ ನಿಮ್ಮ ಮನೆಗೆ ಹೋಗಿ ಕೂಗಿದೆ. ನೀನು ಇರಲೇ ಇಲ್ಲ.

ಸಂಗಡಿಗ—ಇಲ್ಲಪ್ಪಾ, ಮಗಳಿಗೆ ವರನನ್ನು ಹುಡುಕಲು ಹೋಗಿದ್ದೆ. ನೊನ್ನೆಹೋದವನು ಸಂಜೆಯಲ್ಲಿ ಬಂದೆ. ಬರುವಾಗಲೇನು ದರ್ಬಾರಿಗೆ ಹೋಗಿದ್ದ ಜನಗಳು ಪ್ರವಾಹದಹಾಗೆ ಕೊನೆಮೊದಲಿಲ್ಲದೆ ಬರುತ್ತಿದ್ದರು. ಈದಿನ ದರ್ಬಾರಿನಲ್ಲಿ ವಿಶೇಷವೇನು?

ರಂಗನಾಥ—ವಿಶೇಷವೇನೆಂದು ಕೇಳು! ಈಹೊತ್ತಿನಹಾಗೆ ದರ್ಬಾರಿನಲ್ಲಿ ವಿಶೇಷವನ್ನು ನಾಲ್ಕೈದುವರ್ಷಗಳಿಂದ ಕಂಡಿರಲಿಲ್ಲ.

ಸಂಗಡಿಗ—ಅದೆಂಥಾದ್ದು ಹಾಗಾದರೆ ?

ರಂಗನಾಥ—ಈಹೊತ್ತು ಬೆಳಗ್ಗೆ ಊರ ಹೆಬ್ಬಾಗಿಲಲ್ಲಿ ಆಗಾ ಮಹಮ್ಮದನ ತಲೆಯು ತಗಲುಹಾಕಿತ್ತು. ದರ್ಬಾರಿನ ಕಾಲದಲ್ಲಿ ನವಾಬರು ಈ ಕಥೆಯನ್ನೆಲ್ಲಾ ವಿವರಿಸುವರೆಂದು ತಿಳಿದುಕೊಂಡು ಅಲ್ಲಿಗೆ ಹೋದೆವು.

ಸಂಗಡಿಗ—ನವಾಬರೇನು ಹೇಳಿದರು ?

ರಂಗನಾಥ—ಎಂದಿನಹೊತ್ತಿಗಿಂತಲೂ ಮುಂಚೆಯೇ ಜನರು ಸಭೆಸೇರಿ ನಿರೀಕ್ಷಿಸುತ್ತಿದ್ದರು. ಒಂದು ಇರುವೆ ಹರಿದಾಡುವುದಕ್ಕೂ ಸ್ಥಳವಿರಲಿಲ್ಲ. ಎಲ್ಲರೂ ಪಿಸುಮಾತಿನಲ್ಲಿ ಮಾತನಾಡಿಕೊಳ್ಳುತ್ತ ಕುಳಿತೆವು. ಎಲ್ಲರ ಬಾಯಲ್ಲಿಯೂ ಬೆಳಗಿನ ವಿಚಾರವೇ.

ಇದ್ದಕ್ಕಿದ್ದಹಾಗೆ ಒಂದು ಪಾರ್ಶ್ವದಲ್ಲಿ ಗುಂಪುಕೂಡಿದ್ದ ಸಭಿಕರ ಕಡೆಯಿಂದ ಶಬ್ದವು ಸ್ವಲ್ಪ ಜೋರಾಗಿ ಕೇಳಿಬಂದಿತು. ಉಳಿದವರೆಲ್ಲರೂ ಆ ಕಡೆಗೆ ತಿರುಗಿದರು. ಆಗಾ ಮಹಮದ್‌ನ ಚರಿತವನ್ನು ಚರ್ಚಿಸುತ್ತಲಿದ್ದ ಇಬ್ಬರಿಗೆ ಪರಸ್ಪರವಾಗಿ ಮಾತು ಹೊಂದದಿರಲಾಗಿ ವಾದವೆದ್ದಿತು. ಅವರು ತಮ್ಮ ಮಾತಿನ ಧ್ವನಿಯನ್ನು ಜೋರುಮಾಡಿದರು. ತಾವಿದ್ದ ಪ್ರದೇಶವೂ ನವಾಬರ ಸಾನ್ನಿಧ್ಯವೂ ಸ್ಫೂರ್ತಿಗೆ ಬರಲಿಲ್ಲ. ಜನರೆಲ್ಲರೂ ಅವರ ದಿಕ್ಕಿನಲ್ಲಿ ತಿರುಗಿದುದನ್ನು ಕಂಡು ನವಾಬರು ಅದೇ ದಿಕ್ಕಿನಲ್ಲಿ ತಾವೂ ನೋಡಿ ನಡೆಯುತ್ತಿದ್ದ ಪ್ರಸಂಗವನ್ನು ಊಹಿಸಿದರು. ಒಳಿಕ ಭಕ್ಷಿಯಕಡೆಗೆ ನೋಡಲು ಆತನು ಕೂಡಲೇ “ ಹುಜೂರ್‌ಮೆ ಹುಕುಂ ! ” ಎಂದು ಕೂಗಿದನು. ಸದ್ದು ಅಡಗಿಹೋಯಿತು. ಎಲ್ಲರೂ ಆಲೈಸಿದರು. ನವಾಬರು ನಗುತ್ತ ಹೀಗೆಂದರು:—“ ನೀವು ಅಷ್ಟೊಂದು ಆಗ್ರಹದಿಂದ ಚರ್ಚಿಸುತ್ತಿರುವ ವಿಷಯವು ನನಗೆ ಹೊಸದಲ್ಲ. ಮುಂಡವಿರಹಿತವಾದ ತಲೆಯನ್ನು ನೋಡಿ ನೀವು ಹೀಗೆ ಕುತೂಹಲವುಳ್ಳವರಾಗಿರುವಿರಿ. ಅದಕ್ಕೆ ಕಾರಣವೂ ಅನೇಕರಿಗೆ ಗೊತ್ತಿರಬಹುದು. ”—ನವಾಬರು ಹುಬ್ಬು ಗಂಟಿಕ್ಕಿದರು; ಅವರ ಮುಖದ ಆಕೃತಿಯೇ ಬೇರೆಯಾಯಿತು —“ ತಪ್ಪುಮಾಡಿದವರಿಗೆ ಎಂದಿಗೂ ಉಳಿಗಾಲವಿಲ್ಲ. ಹೊಟ್ಟೆಯಲ್ಲಿ ಹುಟ್ಟಿದ ಮಗನಾದರೂ ಅಪರಾಧಿಯಾದವನು ಸುರಕ್ಷಿತನಲ್ಲ. ತಪ್ಪಿನೊಳಗೂ ಪರಿಮಾಣಗಳುಂಟು. ಆದರೆ ಅಬಲೆಯಾದ ಹೆಂಗಸಿನಮೇಲೆ ಕೈಮಾಡಿ ಅತ್ಯಾಚಾರವನ್ನು ನಡೆಯಿಸುವುದು ಮಹಾ ಘೋರವಾದ ಅಪರಾಧ. ಏನನ್ನೂ ಅರಿಯದ ಹಸುಳೆಗಳನ್ನು ಹಿಂಸೆಮಾಡುವುದಕ್ಕೆ ಸಮಾನವಾದುದು. ಅಂಥ ತಪ್ಪಿತಕ್ಕೆ ಮರಣವೇ ಪ್ರಾಯಶ್ಚಿತ್ತವೆಂದು ಖುರಾನಿನಲ್ಲಿ ಹೇಳಿದೆ. ಭಗವದ್ವಾಕ್ಯಸ್ವರೂಪ

ವಾದ ಖುರಾನಿನ ಶಾಸನವನ್ನು ಈ ಸಂದರ್ಭದಲ್ಲಿ ಪ್ರಯೋಗಿಸಿದ್ದೇವೆಯೇ ವಿನಾ ಅನ್ಯಥಾ ಅಲ್ಲ. ಹೆಂಗಸರ ವಿಷಯದಲ್ಲಿ ಮರ್ಯಾದೆಯನ್ನು ಮೀರಿ ಪ್ರವರ್ತಿಸುವವರೆಲ್ಲರಿಗೂ ಮರಣವೇ ಯುಕ್ತವಾದ ದಂಡನೆ.'' ಇಷ್ಟು ಹೇಳಿ ನವಾಬರು ಸುಮ್ಮನಾದರು.

ಸಂಗಡಿಗ—ಆಮೇಲೆ ಏನಾಯಿತು ?

ರಂಗನಾಥ—ಆಗುವುದೇನು, ಎಲ್ಲರೂ ತಲೆತೂಗಿದರು.

ಸಂಗಡಿಗ—ಆಮೇಲೆ ?

ರಂಗನಾಥ—ಆಮೇಲೆ ಇನ್ನೇನಾಗಬೇಕು ? ಸೂರ್ಯಾಸ್ತವಾಯಿತು. ಖಾಜಿಯು ಭಗವತ್ಪ್ರಾರ್ಥನೆಗೆ ಕಾಲವೊದಗಿತೆಂದು ಅರಿಕೆಮಾಡಿಕೊಂಡನು. ನವಾಬರು ಸಭೆಯನ್ನು ಮುಕ್ತಾಯಮಾಡಿದರು.

---

# ಕಾ ವ್ಯಾ ವ ಲೋ ೕ ಕ ನೆ

**“ ವಿಶ್ವಬಂಧು ” ವಿನ ವಿಶೇಷಸಂಚಿಕೆ**—ಜೈನಧರ್ಮದ ಪ್ರಥಮಪ್ರಕಾಶಕರಾದ ಮಹಾವೀರಾಚಾರ್ಯರು ಮುಕ್ತಿಹೊಂದಿದ್ದು ಕಾರ್ತಿಕಮಾಸದಲ್ಲಿ; ಆದಿಪಂಪನು ತನ್ನ ಆದಿಪುರಾಣವನ್ನು ಮುಗಿಸಿದ್ದು ಕಾರ್ತಿಕಮಾಸದಲ್ಲಿ; ಆದ್ದರಿಂದ ಈ ವರ್ಷದ ಕಾರ್ತಿಕಮಾಸದಲ್ಲಿ ಇವರಿಬ್ಬರ ಜ್ಞಾಪಕಾರ್ಥವಾಗಿ “ ವಿಶ್ವಬಂಧು ” ವಿನ ಚಾಲಕರು ಈ ವಿಶೇಷಸಂಚಿಕೆಯನ್ನು ಪ್ರಕಟಗೊಳಿಸಿದ್ದಾರೆ. ಇದು “ ಕರ್ಣಾಟಕ ವಾಙ್ಮಯಕ್ಕೆ ಆಶ್ರಯದಾತರಾದ ಮೈಸೂರಿನ ಶ್ರೀಮನ್ಮಹಾರಾಜರವರ ಪರಂಪರೆಯ. . ಕರ್ಣಾಟಕ ವಾಙ್ಮಯ ಸೇವೆಯನ್ನು ಮಾಡಿಯೂ ಮಾಡುತ್ತಲೂ ಇರುವ ಹಾಗೂ ಜೈನಶಾಸನಗಳ ಮತ್ತು ವಾಙ್ಮಯ ಪ್ರಚಾರದಲ್ಲಿ ಬಹಳ ಶ್ರಮೆಯನ್ನು ವಹಿಸಿ ಜೈನಸಮಾಜಕ್ಕೆ ಮಹದುಪಕಾರಮಾಡಿದ ಕೆಲವು ವಿದ್ವನ್ಮಣಿಗಳ ” ಚಿತ್ರಗಳಿಂದ ಅಲಂಕೃತವಾಗಿಯೂ, ಜೈನಧರ್ಮ, ಪಂಪ ಮತ್ತು ಅವನ ಗ್ರಂಥಗಳು ಈ ಸಂಬಂಧವಾಗಿ ಬರೆದ ಲೇಖನಗಳಿಂದ ಪೂರ್ಣವಾಗಿಯೂ ಇದೆ. ಸಂಪಾದಕರಾದ ಶ್ರೀ|| ಆಸ್ಥಾನವಿದ್ವಾನ್ ನ್ಯಾಯತೀರ್ಥ ಎ. ಶಾಂತಿರಾಜಶಾಸ್ತ್ರಿಗಳು ಶ್ರೀ ಮಹಾವೀರಚರಿತ, ಜೈನಮತ, ಆಸ್ತಿಕನಾಸ್ತಿಕವಿಚಾರ, ‘ ಹಿಂದು ’ ಶಬ್ದವಿವೇಚನೆ ಮುಂತಾದ ಹಲವು ಉತ್ತಮ ಲೇಖನಗಳನ್ನು ಬರೆದಿದ್ದಾರೆ. ಸಾಮಾನ್ಯವಾಗಿ ವಿಶೇಷಸಂಚಿಕೆಗಳಿಗೆ ಒಳ್ಳೊಳ್ಳೆಯ ಚಿತ್ರಗಳನ್ನು ಆಯ್ದುಕೊಳ್ಳುವಂತೆ ಒಳ್ಳೊಳ್ಳೆಯ ಲೇಖಕರನ್ನೂ ಆಯ್ದುಕೊಳ್ಳುವುದು ರೂಢಿಯಾಗಿದೆ. ಆದ್ದರಿಂದ ಇಂಥ ಲೇಖನಗಳು ಚೆನ್ನಾಗಿವೆ, ಅಂಥ ಲೇಖನಗಳು ಚೆನ್ನಾಗಿವೆ, ಎಂದು ಹೇಳುವುದು ಧಾರ್ಷ್ಟ್ಯವಾದೀತು. ಆದರೂ ಸಾಮಾನ್ಯಪಾಠಕರಿಗೆ ಸಂಪಾದಕರ ‘ ಜೈನಮತ ’ ವೂ ಡಾ|| ಶ್ಯಾಮಶಾಸ್ತ್ರಿಗಳ ‘ ಜೈನಸಿದ್ಧಾಂತ ’ ವೂ ಶ್ರೀ ಅನಂತರವರ ‘ ಪಂಪಭಾರತ ಪ್ರಸ್ತಾವ ’ ವೂ ಉಪಯುಕ್ತವಾಗಿಯೂ ರಂಜಕವಾಗಿಯೂ ಇವೆಯೆಂದು ಸೂಚಿಸಲಪೇಕ್ಷಿಸುವೆವು. ಮ|| ಶಾಂತಿರಾಜಶಾಸ್ತ್ರಿಗಳು ಈಗ ಕೆಲವು ವರ್ಷಗಳಿಂದ ಸ್ವಧರ್ಮಕ್ಕೂ ಸ್ವಭಾಷೆಗೂ ಪಡುತ್ತಿರುವ ಶ್ರಮವು ಅವರ ಕೆಲಸವನ್ನು ಕಣ್ಣಾರ ನೋಡುತ್ತಿರುವವರಿಗೆ ಮಾತ್ರ ಗೊತ್ತಾಗಿರುತ್ತದೆ. ಈ ದೇಹಶ್ರಮ ಬುದ್ಧಿ

ಶ್ರಮಗಳೂ ಧರ್ಮಪಕ್ಷಪಾತವೂ ಅಪೂರ್ವ. ಅವರು ಬರೆಯುವ ಲೇಖನಗಳಲ್ಲಿ ಸ್ವಮತೈಕಪಕ್ಷಪಾತವಿಲ್ಲದ ಯುಕ್ತಿಯುಕ್ತವಾದ ವಿಚಾರವಿರುತ್ತದೆ. ಶೈಲಿಯು ಸುಲಭವಾಗಿ ಶುದ್ಧವಾಗಿರುತ್ತದೆ. ಶಬ್ದಬಾಹುಳ್ಯದಿಂದಾಗಲಿ ಶಬ್ದಾಡಂಬರದಿಂದಾಗಲಿ ಲೇಖನವು ಊದಿಕೊಂಡಿರುವುದಿಲ್ಲ. ವಿವರಣಕ್ರಮವು ಸುಗಮವಾಗಿರುವುದರಿಂದ ಅನ್ಯಮತಾನುಯಾಯಿಗಳಿಗೂ, (ಸ್ವಮತದಲ್ಲಿ ಹೆಚ್ಚು ಪರಿಜ್ಞಾನವಿಲ್ಲದ ಲೌಕಿಕಜೈನರಿಗೂ) ಜೈನ ವಿಷಯಗಳು ಸುಲಭವಾಗಿ ತಿಳಿಯುವಂತಾಗುತ್ತಿದೆ.

ಕೇವಲ ಕಾಡುಜನಗಳ ಮಾತನ್ನು ಬಿಟ್ಟು ಬುದ್ಧಿಶಕ್ತಿಯುಳ್ಳ ಯಾವ ಜನರ ಧರ್ಮವನ್ನೇ ತೆಗೆದುಕೊಳ್ಳಲಿ, ಅವುಗಳಲ್ಲಿ ಒಳಗೆ ತಿರುಳು ಇದ್ದೇ ಇರುತ್ತದೆ—ಅಷ್ಟೇ ಅಲ್ಲ, ಅವುಗಳ ತಿರುಳು ಒಂದೇ ಆಗಿರುತ್ತದೆ.* ಪ್ರಾಯಶಃ ಇದನ್ನು ಅನೇಕರು ಒಪ್ಪಲಾರರು. ಆದರೂ ಇತರರಲ್ಲಿ ಇಲ್ಲದ ನಮ್ಮ ಗುಣಗಳನ್ನು ಹೊಗಳಿಕೊಂಡು ನಮ್ಮಲ್ಲಿಲ್ಲದಿರಬಹುದಾದ ಇತರರ ದೋಷಗಳನ್ನು ಎತ್ತಿಯಾಡುತ್ತ ಕಿತ್ತಾಡುವುದಕ್ಕಿಂತ ವಿಚಾರಪೂರ್ವಕವಾಗಿ ಗುಣಗಳನ್ನೇ ಗ್ರಹಿಸಬೇಕಾದದ್ದು ನಾಗರಿಕತೆಯ ಲಕ್ಷಣ. ತೋಟಗಾರರು ತಮ್ಮ ತೋಟಗಳ ಹೊರಗೆ ಕಾಣುತ್ತಿರಬಹುದಾದ ಮುಳ್ಳುಬೇಲಿಗಳನ್ನು ಕಿತ್ತುಕೊಂಡು ಹೊಡೆದಾಡುವುದೇಕೆ ? ತಾವು ತಾವು ಬೆಳೆದ ರಸವತ್ತಾದ ಹಣ್ಣುಹಂಪಲುಗಳನ್ನು ಕೊಟ್ಟು ಕೊಂಡು ತಿನ್ನುತ್ತ ಏಕೆ ಸುಖಪಡಬಾರದು ? ಮ|| ಶಾಂತಿರಾಜಶಾಸ್ತ್ರಿಗಳು ಈ ಕೆಲಸವನ್ನು ಆರಂಭಿಸಿದ್ದಾರೆ. ಅವರು ಈ ದೃಷ್ಟಿಯನ್ನು ಇಟ್ಟುಕೊಂಡೇ ಮುಂದುವರಿಯುವುದು ಅವರು ಅವಲಂಬಿಸಿರುವ ಮತಕ್ಕೂ ನಾಮಧೇಯಕ್ಕೂ ಭೂಷಣವಲ್ಲವೆ ?

ಸಾಹಿತ್ಯಪಕ್ಷಪಾತಿಗಳಾದ ನಮ್ಮ ಪಾಠಕರಿಗೆ ಸ್ವಾರಸ್ಯವಾಗಿರುವ ಕೆಲವು ವಾಕ್ಯಗಳನ್ನು ಶ್ರೀ ಅನಂತರವರ ' ಪಂಪಭಾರತ ಪ್ರಸ್ತಾವ 'ದಿಂದ ಉದ್ಧರಿಸಿ ಇಲ್ಲಿ ಬರೆಯುತ್ತೇವೆ : —

" ಪಂಪಕೃತಭಾರತವು ವ್ಯಾಸಭಾರತವೇ ಆಗಿ ಒಪ್ಪುತ್ತಿರುವುದು. ಕನ್ನಡದಲ್ಲಿ ಸಾಳ್ವಭಾರತವು ಜೈನಕಥೆಯಾಗಿದ್ದಂತೆ ತೋರುತ್ತದೆ. ಸಂಸ್ಕೃತದಲ್ಲಿ ಮಲಧಾರಿದೇವನೆಂಬವನು ಪಾಂಡವಚರಿತವೆಂಬ ಜೈನಭಾರತವನ್ನು ಬರೆದಿದ್ದಾನೆ....

---

* ದಯಾಮೂಲೋ ಭವೇದ್ಧರ್ಮೋ ದಯಾ ಪ್ರಾಣಾನುಕಂಪನಂ | ದಯಾಯಾಃ ಪರಿರಕ್ಷಾರ್ಥಂ ಗುಣಾಃ ಶೇಷಾಃ ಪ್ರಕೀರ್ತಿತಾಃ || ಎಂದೂ, ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಇವು ಧರ್ಮಲಿಂಗಗಳೆಂದೂ ಜೈನರು ಹೇಳುತ್ತಾರೆ. ಅಹಿಂಸಾದಿಗಳು ಯೋಗದ ಪ್ರಥಮಾಂಗವೆಂದು ' ಅಹಿಂಸಾಸತ್ಯಾಸ್ತೇಯಬ್ರಹ್ಮಚರ್ಯ, ಪರಿಗ್ರಹಾ ಯಮಾಃ ' ಎಂದು ಯೋಗಸೂತ್ರವು ಹೇಳುತ್ತದೆ. ತನಗೂ ತನ್ನ ಸುತ್ತುಮುತ್ತಿನ ಜನರಿಗೂ ಮಂಗಳವನ್ನು ಅಪೇಕ್ಷಿಸುವವನು ಯಾರುತಾನೇ ಮೇಲಣ ಅಭಿಪ್ರಾಯವನ್ನು ಮೆಚ್ಚುವುದಿಲ್ಲ? ಇವು ಆವಶ್ಯಕವೆಂದು ಹೇಳುವುದಿಲ್ಲ?

....'ಉಚಿತಪದ' ವೆಂಬ ಪಂಪನ ಕಾವ್ಯಲಕ್ಷಣವು ಭಾರತದಲ್ಲಿ ಲಕ್ಷ್ಯವಾಗಿರುವದು. ಕವಿಯು ಆಮೂಲಾಗ್ರವಾಗಿ ಅತಿ ಜಾಗರೂಕತೆಯಿಂದ ಕಥಾಸೂತ್ರವನ್ನು ಎಲ್ಲಿಯೂ ಸಡಿಲಾಗದಂತೆ ಸಾಗಿಸಿರುವನು........ವರ್ಣನ ಪ್ರಸಂಗಗಳಲ್ಲಿ ಬೇಕಷ್ಟು ಸ್ಥಳವನ್ನೇ ಉಪಯೋಗಿಸಿದ್ದು ಅತಿಶಯ ಮನೋಹರವಾಗಿ ಕಾಣುತ್ತಿರುವದು. ಒಂದೊಂದು ರಸವು ಒಂದೆರಡೇ ಪದ್ಯಗಳಲ್ಲಿ ಶಿಖರವನ್ನು ಮುಟ್ಟಿತು ಮುಟ್ಟಿತೆನ್ನುವಷ್ಟರಲ್ಲಿ ಪಂಪನು ಕಥಾರಥವನ್ನು ಚಾತುರ್ಯದಿಂದ ಮುಂದಕ್ಕೆ ನೂಕಿದ ಮಾತು ಎಷ್ಟು ಆಹ್ಲಾದದಾಯಕವೆನ್ನುವದನ್ನು ಅವಲೋಕಿಸಿ ನೋಡಿಯೇ ತಿಳಿಯಬೇಕಾಗಿದೆ.

ಪಂಪನ ಎರಡೂ ಕೃತಿಗಳಲ್ಲಿ ಆತನ ಉದಾರತೆಯು ಅನೇಕ ಮತಮತಾಂತರಗಳಿಗೆ ಜನ್ಮಭೂಮಿಯಾದ ನಮ್ಮ ಭಾರತವರ್ಷದ ಈಗಿನ ಸಮಯದಲ್ಲಿ ಸಹ ಅಭೀಷ್ಟವಾಗಿರುವದು. ಅನ್ಯಮತನಿಂದೆಯು ಆತನ ಕೃತಿಯಲ್ಲಿಲ್ಲ........" ಎ. ಆರ್. ಕೃ.

---

**ಪೂರ್ವಪುರಾಣಂ** (ಪೂರ್ವಭಾಗ) :—ಡೆಮ್ಮಿ ಕ್ವಾರ್ಟೋ, ಪುಟಗಳು viii + ೫೪೯; ಬೆಲೆ ೬ ರೂ.

ಕನ್ನಡಿಗರಿಗೆ ಪಂಪನ ಆದಿಪುರಾಣವು ಈಗ ಸುಪರಿಚಿತವಾದ ಗ್ರಂಥವಾಗಿದೆಯಷ್ಟೆ; ಆ ಗ್ರಂಥದಲ್ಲಿ ಮೊದಲಿಂದ ಸುಮಾರು ೨೫೦ ಪುಟಗಳೊಳಗೆ ಸಂಕ್ಷೇಪವಾಗಿ ಪ್ರತಿಪಾದಿತವಾಗಿರುವ ವಿಷಯವು ಈ ಪುಸ್ತಕದಲ್ಲಿಯೂ ಪ್ರತಿಪಾದಿತವಾಗಿದೆ. ಇದರಲ್ಲಿ ಎರಡು ಭಾಗಗಳಿವೆ:—ಒಂದು, ನೃಪತುಂಗನ ಗುರುಗಳಾಗಿದ್ದ ಜಿನಸೇನಾಚಾರ್ಯರು ಸಂಸ್ಕೃತ ಶ್ಲೋಕರೂಪವಾಗಿ ಬರೆದ ಮೂಲಕಾವ್ಯ; ಮತ್ತೊಂದು, ಮೇಲೆ ಕೀರ್ತಿತರಾದ ಮ|| ನ್ಯಾಯತೀರ್ಥ ಎ. ಶಾಂತಿರಾಜಶಾಸ್ತ್ರಿಗಳು ಅದಕ್ಕೆ ಬರೆದಿರುವ ಕನ್ನಡ ಗದ್ಯಭಾಷಾಂತರ. ಪ್ರತಿ ಪುಟದಲ್ಲಿಯೂ ಮೇಲಿನ ಅರ್ಧದಲ್ಲಿ ಮೂಲವೂ ಕೆಳಗಿನ ಅರ್ಧದಲ್ಲಿ ಭಾಷಾಂತರವೂ ಕೊಡಲ್ಪಟ್ಟಿವೆ. ಸಂಸ್ಕೃತ ಗ್ರಂಥವಿಚಾರವು ಇಲ್ಲಿ ಪ್ರಕೃತವಲ್ಲ. ಕನ್ನಡಭಾಷಾಂತರದ ಭಾಷೆ ಮುಂತಾದ ವಿಚಾರವಾಗಿ ವಿಶ್ವಬಂಧುವಿನ ವಿಶೇಷಸಂಚಿಕೆಯ ಮೇಲೆ ಹಿಂದೆ ಬರೆದಿರುವುದಕ್ಕಿಂತ ಹೆಚ್ಚಾಗಿ ಇಲ್ಲಿ ಹೇಳುವುದೇನೂ ಇಲ್ಲ. ಮ|| ಶಾಸ್ತ್ರಿಗಳು ಮೂಲಗ್ರಂಥಕರ್ತೃಗಳಾದ ಜಿನಸೇನಾಚಾರ್ಯರ ಕಾಲ ಗ್ರಂಥಗಳು ಮುಂತಾದ ವಿಚಾರವಾಗಿ ಸಿಕ್ಕುವ ಅಂಶಗಳನ್ನೆಲ್ಲಾ ಸಂಗ್ರಹಿಸಿ ಅವುಗಳನ್ನು ಉಪಯುಕ್ತವಾದ ಒಂದು ಉಪೋದ್ಘಾತದಲ್ಲಿ ಸೇರಿಸಿದ್ದಾರೆ.

ತ್ರಿಷಷ್ಟಿ(೬೩)ಶಲಾಕಾಪುರುಷರ ಚರಿತ್ರೆಯನ್ನು ಪ್ರತಿಪಾದಿಸುವ ಗ್ರಂಥಕ್ಕೆ 'ಮಹಾಪುರಾಣ' ವೆಂದು ಹೆಸರು. ಅದು ಪೂರ್ವಪುರಾಣ ಉತ್ತರಪುರಾಣವೆಂದು ಎರಡು ಭಾಗವಾಗಿದೆ. ಪೂರ್ವಪುರಾಣದಲ್ಲಿ ಪ್ರಥಮತೀರ್ಥಂಕರರ ಮತ್ತು ಪ್ರಥಮ

ಚಕ್ರವರ್ತಿಗಳ ಚರಿತ್ರೆಯೂ ಉತ್ತರಪುರಾಣದಲ್ಲಿ ಮಿಕ್ಕ ಶಲಾಕಾಪುರುಷರ ಚರಿತ್ರೆಯೂ ಬರುತ್ತದೆ. ಪ್ರಕೃತಪುಸ್ತಕವು ಪೂರ್ವಪುರಾಣದ ಪೂರ್ವಭಾಗವಾಗಿದೆ.

ಪೂರ್ವಪುರಾಣದ ಮೂಲವು ೧೨,೦೦೦ ಶ್ಲೋಕಗಳುಳ್ಳದ್ದೆಂದರೆ, ಇದನ್ನು ಕನ್ನಡ ವ್ಯಾಖ್ಯಾನದೊಡನೆ ಶುದ್ಧವಾಗಿಯೂ ಚೆನ್ನಾಗಿಯೂ ಮುದ್ರಿಸುವ ಕೆಲಸವು ಎಷ್ಟು ಶ್ರಮಸಾಧ್ಯ ಮತ್ತು ದ್ರವ್ಯಸಾಧ್ಯವೆಂಬುದು ಸ್ಪಷ್ಟವಾಗಿದೆ. ಮ|| ಶಾಸ್ತ್ರಿಗಳು ದೇಹಶ್ರಮವನ್ನು ಬುದ್ಧಿಶ್ರಮವನ್ನೂ ವಹಿಸಿದರು. ಮ|| ಗಳಾದ ಕೃಷ್ಣಯ್ಯಗೌಡರು, ಸುಬ್ಬಯ್ಯಗೌಡರು ಮುಂತಾದ ಧರ್ಮ ಪಕ್ಷಪಾತಿಗಳು ದ್ರವ್ಯದ ಭಾರವನ್ನು ವಹಿಸಿದರು. ಪ್ರಕೃತ ಪುಸ್ತಕವು ಇವೆರಡರ ಫಲವಾಗಿದೆ. ಭರತಖಂಡದ ಸ್ವರೂಪವು ವಿಲಕ್ಷಣವಾದದ್ದು. ಅದು ಕರ್ಮಭೂಮಿಯೂ ಹೌದು ಧರ್ಮಭೂಮಿಯೂ ಹೌದು. ಇಲ್ಲಿ ನಡೆಯಬೇಕಾದ ಮಹಾಕಾರ್ಯಗಳೆಲ್ಲಾ ಹೀಗೆ ನಡೆದಿವೆಯೇ ಹೊರತು ಕೇವಲ ಲೆಕ್ಕಾಚಾರದ ವರ್ತಕಬುದ್ಧಿಯಿಂದಲ್ಲ.

ಕನ್ನಡ ಜೈನಕಾವ್ಯಗಳನ್ನೋದುವಾಗ ಜೈನಮತ ಪ್ರಕ್ರಿಯೆಗಳೂ ಪಾರಿಭಾಷಿಕ ಶಬ್ದಗಳೂ ಅರ್ಥವಾಗದಿದ್ದರೆ ಆಗ ಸಾಮಾನ್ಯವಾಗಿ ವಿವರಣೆಗೆ ಆದಿಪುರಾಣವನ್ನು ಹುಡುಕಿಕೊಂಡು ಹೋಗುತ್ತಿದ್ದೆವು. ಅಂಥ ವಿಷಯಗಳು ಪ್ರಕೃತ ಗ್ರಂಥದಲ್ಲಿಯೂ ಅದರ ಭಾಷಾಂತರ ಮತ್ತು ವ್ಯಾಖ್ಯಾನಗಳಲ್ಲಿಯೂ ವಿಶದವಾಗಿ ಸಿಕ್ಕುತ್ತವೆ. ಆದ್ದರಿಂದ ಈ ಗ್ರಂಥವು ಸಂಸ್ಕೃತವನ್ನರಿಯದ ಜೈನ ಜನರಿಗೇ ಅಲ್ಲದೆ ಹಳಗನ್ನಡ ಜೈನಗ್ರಂಥಗಳನ್ನೋದಬೇಕೆನ್ನುವವರಿಗೂ ಉಪಕಾರಿಯಾಗಿದೆ.

ಇಂಥ ಶಬ್ದಗಳಿಗೂ ವಿಷಯಗಳಿಗೂ ಒಂದು ಅಕಾರಾದಿ ಸೂಚಿಕೆಯನ್ನು ಸಿದ್ಧಮಾಡಿ ಎರಡನೆಯ ಸಂಪುಟದ ಕೊನೆಯಲ್ಲಿ ಮುದ್ರಿಸಿದರೆ ಈ ಉಪಕಾರವು ಮತ್ತಷ್ಟು ಅತಿಶಯವಾದೀತೆಂದು ಸೂಚಿಸಲಪೇಕ್ಷಿಸುತ್ತೇವೆ.

ಎ. ಆರ್. ಕೃ.

---

**ಲೀಲೆ, ಶ್ರೀ ದೇಶಬಂಧು ದಾಸರ ಜೋಗುಳ, ರಾಷ್ಟ್ರಗೀತಾ ರತ್ನಾಕರ:**— ಮ. ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯರವರಿಂದ.

**ಕಾವ್ಯರತ್ನಾಕರ:**— ಮ|| ಉಗ್ರಾಣಮಂಗೇಶರಾಯರಿಂದ ಸಂಗ್ರಹಿಸಲ್ಪಟ್ಟದ್ದು.

ಮ|| ಪುಣಿಂಚತ್ತಾಯರು ಅನೇಕ ರಾಷ್ಟ್ರಗೀತೆಗಳನ್ನು ಬರೆದು ಪ್ರಸಿದ್ಧರಾಗಿರುವರು. 'ಲೀಲೆ' ಯೆಂಬ ಪುಸ್ತಕದ ೩೬ ಪದ್ಯಗಳಲ್ಲಿ ಭಗವಂತನ ಲೀಲೆಯು ಮೂರು ಭಾಗವಾಗಿ ವಿವೃತವಾಗಿದೆ. ಇದಕ್ಕೆ ಉಪೋದ್ಘಾತವನ್ನು ಬರೆದಿರುವ ವಕೀಲ್ ಮ|| ಅನಂತಶಾಸ್ತ್ರಿಗಳು, ಕನಕಪುರಂದರಾದಿಗಳ ತರುವಾಯ ಈ ಕೀರ್ತ

ನೆಗಳೇ ಭಕ್ತಿರಸಪ್ರಧಾನವಾದ ಶ್ರೇಷ್ಠಕೀರ್ತನೆಗಳು ಎಂದು ಅಭಿಪ್ರಾಯಪಟ್ಟಿರುವರು. ಇರಬಹುದು; ಅವು ಅವರಿಗೆ ಹಾಗೆ ರುಚಿಸಿರಬಹುದು. ಇವುಗಳ ಕೊನೆಯ ಚರಣದಲ್ಲಿ

"ನೀನು ನಾನೆಂಬ ಭೇದವನೆಣಿಸದೆ ದೀನದಾಸನ ಕಾಯೊ ! ದೇವ ! ಲಕ್ಷ್ಮೀಶ"

ಎಂದು ಕವಿಗಳು ಬರೆದಿದ್ದಾರೆ. ಜೀವನನ್ನು ಕುರಿತು 'ತತ್ತ್ವಮಸಿ' ಎಂದು ಹೇಳುವುದನ್ನು ಕೇಳಿದ್ದೇವೆ, ಆದರೆ ಪರಮಾತ್ಮನಿಗೆ ಜೀವಾಭೇದವನ್ನು ಉಪದೇಶಿಸುವುದು ವಿಚಿತ್ರವಾಗಿದೆ. ಅದನ್ನೇ ಮತ್ತೊಂದು ವಿಧವಾಗಿ ಉಪಪಾದಿಸೋಣ :- ಆನೆಯ ಬಾಲವು ಆನೆಯದೆಂದು ಹೇಳಬಹುದು ; ಆದರೆ ಆನೆಯು ಅದರ ಬಾಲದ್ದೆಂದು ಹೇಳಬಹುದೇ ?

"ಜೋಗುಳ" ವೆಂಬುದು ಸಾಮಾನ್ಯವಾಗಿ ಮಕ್ಕಳನ್ನು ತೂಗಿ ಮಲಗಿಸುವಾಗ ಹೇಳುವ ಹಾಡು ; ರಾಮ, ಕೃಷ್ಣ ಮುಂತಾದ ದೇವರ ವಿಚಾರವಾಗಿ ಉಪಚಾರಕಾಲದಲ್ಲಿ ಜೋಗುಳಗಳನ್ನು ಹೇಳುವುದೂ ಉಂಟಾದರೂ, ದೇಶಬಂಧು ದಾಸರವಿಚಾರವನ್ನು 'ಜೋಗುಳ' ದಲ್ಲಿ ಬರೆದಿರುವುದರ ಔಚಿತ್ಯವು ಸಂದಿಗ್ಧವೇ.

ಮ|| ಪುಣಿಂಚತ್ತಾಯರೂ ಮ|| ಮಂಗೇಶರಾಯರೂ ಒಂದೊಂದು ರತ್ನಾಕರವನ್ನು ನಮ್ಮ ಮುಂದಿಟ್ಟಿರುವರು. ನಾಮೈಕ್ಯವೊಂದೇ ಇವುಗಳಿಗಿರುವ ಸಾಮಾನ್ಯಧರ್ಮ ; ರಾಯರ ರತ್ನಗಳು ಆಧುನಿಕ ಮತ್ತು ಪ್ರಾಚೀನ ಕನ್ನಡ ಸಾಹಿತ್ಯಗಳಿಂದ ಆರಿಸಿ ತೆಗೆದವುಗಳು ; ಪುಣಿಂಚತ್ತಾಯರ ರತ್ನಗಳು ತಮ್ಮ ಕವಿತಾಖನಿಯಿಂದ ತೆಗೆದವುಗಳು ; ಒಂದನ್ನು ಕಾವ್ಯದೃಷ್ಟಿಯಿಂದಲೇ ಪರಿಗಣಿಸಬೇಕು ; ಇನ್ನೊಂದನ್ನು ಹಾಗೆ ಪರಿಗಣಿಸುವುದು ಅನ್ಯಾಯ. ಪುಣಿಂಚತ್ತಾಯರ ಪುಸ್ತಕದ ಕೊನೆಯಲ್ಲಿ ಬಂಕಿಂಬಾಬುಗಳ 'ವಂದೇ ಮಾತರಂ' ಗೀತೆಯೂ, 'ಭಾರತರಾಣಿ' ಎಂಬ ಪ್ರಥಮಗೀತೆಯ ಅರ್ಥಸೌಂದರ್ಯಾದಿಗಳ ಗದ್ಯಪ್ರಕಾಶಿಕೆಯೂ ಇವೆ.

ಮ|| ರಾಯರು ರಸಜ್ಞರಾದ ಕವಿಗಳು ; ಆದ್ದರಿಂದ ಅವರ ಪದ್ಯಸಂಗ್ರಹಕಾರ್ಯವು ಚೆನ್ನಾಗಿಯೇ ಇದೆ. ಹೊಸರೀತಿಯ ಆಧುನಿಕ ಕವಿತೆಗಳಲ್ಲಿ ಯಾವುವು ನಿಲ್ಲುವುವೋ ಯಾವುವು ನಿಲ್ಲವೋ ಹೇಳುವುದು ಕಷ್ಟ. ಅವುಗಳಲ್ಲಿ ಗುಣಪೂರ್ಣವಾಗಿರುವ ಕೆಲವಾದರೂ ನಿಲ್ಲಲರ್ಹವೆಂದು ತಿಳಿದು ಈ ಮುವ್ವತ್ತು ಕವಿತೆಗಳನ್ನು ಆರಿಸಿ ಇವರು ಪ್ರಚುರಗೊಳಿಸಿರುತ್ತಾರೆ. ಕವಿಗಳ ಪರಿಚಯವನ್ನು ಹೊಸದಾಗಿ ಮಾಡಿ ಕೊಡಬೇಕಾಗಿರುವಾಗ ಅವರವರು ಬರೆದಿರುವ ಅತ್ಯುತ್ತಮ ಕವಿತೆಗಳಿಂದ ಅದನ್ನು ಮಾಡಿಕೊಟ್ಟರೆ ಸಂಗ್ರಹಕಾರರ ಶ್ರಮವು ಸಫಲವಾಗಿ ಆ ಕವಿಗಳ ವಿಷಯದಲ್ಲಿ ನಮಗೆ ಆದರಾಭಿಮಾನಗಳುಂಟಾಗುವುವು. ಕೆಲವು ಕರ್ತೃಗಳ ವಿಷಯ

ವಾಗಿಯಂತೂ ಅಂಥ ಪರಿಚಯುವನ್ನೇ ನಮಗೆ ರಾಯರು ಮಾಡಿಕೊಟ್ಟಿರುವ ರೆಂದು ನಿಸ್ಸಂದೇಹವಾಗಿ ಹೇಳಬಹುದು.

"ಮೂರುಗಂಟೆಯಕಾಲ ರಾಷ್ಟ್ರಕಂಠೀರವರು |
ಸೇರಿದ ಸಭಾಮಧ್ಯದಲಿ ಗರ್ಜಿಸಿದರು ॥"

ಇತ್ಯಾದಿಯಾಗಿ ಬರೆಯುತ್ತಿರುವ ರಸರಹಿತವಾದ ಪದಸಮುದಾಯವನ್ನು ಕವಿತೆ ಯೆಂದು ಕೊಂಡಾಡುವ ಕಾಲವು ದೇಶದಲ್ಲಿ ಬರುತ್ತಿರುವಾಗ ಉತ್ತಮ ಕಾವ್ಯ ಸಂಗ್ರಹದ ಕೆಲಸವು ಸತ್ಕವಿತೆಯ ಸವಿಯನ್ನು ಅರಿಯಬಲ್ಲವರಿಂದಲೇ ಆಗಬೇಕು. ಈ ಪುಸ್ತಕದ ಕವಿತೆಗಳೆಲ್ಲಾ ಹೃದ್ಯವಾಗಿಯೂ ಲಲಿತವಾಗಿಯೂ ಇವೆ. ಆದರೆ ಕಾವ್ಯಸೌಂದರ್ಯವು ಇವುಗಳೆಲ್ಲದರಲ್ಲೂ ಒಂದೇ ಸಮನಾಗಿರುವುದಿಲ್ಲ. ಒಂದೆರಡರಲ್ಲಿ ಸುತರಾಂ ಇಲ್ಲವೇ ಇಲ್ಲವೆಂದು ಹೇಳಬಹುದು. ಆದರೂ ಅದು ಗೋಚರಿಸುವ ಕಡೆಗಳಲ್ಲಿ—ಭೂಮಾತೆ, ಕನ್ನಡನಾಡ ರಾಣಿ, ಹುತ್ತರಿ ಹಾಡು, ಮುಂತಾದವು ಗಳಲ್ಲಿ—ಚೆನ್ನಾಗಿಯೇ ಗೋಚರವಾಗುತ್ತದೆ.

ಅರಳಿ ಹೂವಾಗದೆಯೆ ಪರಿಮಳವ ಬೀರದೆಯೆ|........ಪೋದೆಯ ಎನ್ನ ಮುದ್ದುಲಲಿತೆ ॥
(ಭೂಮಾತೆಯು)

ತಾವರೆಯ ಕೋಮಲಸುವಾಸನೆಯೊಳಿಹಳು | ಮಾವಿನಾಸವಿಯೊಳತಿ ಮಧುರವಾಗಿಹಳು ॥

ಇತ್ಯಾದಿಗಳಲ್ಲಿರುವ ತಾನವೂ ಮಧುರಗೀತವೂ ಆನಂದಜನಕವಾಗಿವೆ. ಕನ್ನಡ ನಾಡು "ಶೂರಪುರುಷರ ಕೊನೆಯು ವೀರಕವಿಗಳ ಗೊನೆಯು" ಮುಂತಾದ ಭಾಗಗಳು ಉತ್ತೇಜಕಗಳಾಗಿವೆ.

ಮುಂದೆ ಈರೀತಿ ಕಾವ್ಯ ಪರಿಚಯಮಾಡಿಕೊಡತಕ್ಕವರು ನವೀನ ರೀತಿಯ ಕವಿತೆಗಳಲ್ಲಿ ಮುಖ್ಯವಾದ ಎಲ್ಲಾ ಜಾತಿಯ ಕವಿತೆಗಳಿಗೂ ಒಂದೊಂದು ಉದಾ ಹರಣೆಯನ್ನು ತಕ್ಕಮಟ್ಟಿನ ಸಾಕಲ್ಯದಿಂದ ಒದಗಿಸಿಕೊಟ್ಟೋ; ಅಥವಾ ಬೇರೆ ಬೇರೆ ಕಾಲದವರು ಒಂದೇ ಜಾತಿಯ ಕಾವ್ಯಗಳನ್ನು ಹೇಗೆ ಹೇಗೆ ಬರೆದಿರುವರೆಂಬು ದನ್ನು ಸೂಚಿಸುವಂತೆಯೋ; ಅಥವಾ ಈಗಿನ ಸಾಹಿತ್ಯವು ಎಷ್ಟರಮಟ್ಟಿಗೆ ಹಿಂದಿನ ಸಾಹಿತ್ಯದೊಡನೆ ಸೇರಿ ಬೆಳೆದುಕೊಂಡು ಬಂದಿದೆ, ಸುಮಾರು ಮುವ್ವತ್ತು ವರ್ಷ ಗಳಿಂದೀಚೆಗೆ ಯಾವಯಾವ ಮುಖದಲ್ಲಿ ಹರಿಯುತ್ತ ಬಂದಿದೆ, ಎಂಬುದನ್ನು ಒಂದು ಕ್ರಮದಲ್ಲಿ ಪ್ರತಿಪಾದಿಸುವಂತೆಯೋ ಸಂಗ್ರಹಮಾಡಿದರೆ ಭಾಷಾಭಿಮಾನಿಗಳಿಗೆ ಇನ್ನೂ ಹೆಚ್ಚು ಉಪಕಾರವಾಗಬಹುದು.

ರಾಯರ "ಕನಕಾಂಗಿ" ಯನ್ನು ಓದಿದಾಗ 'ಶ್ರೀ' ಯವರ ಅದೇ ಹೆಸ ರಿನ ಕವನವು ನೆನಪಿಗೆ ಬಂತು. ಈ ರಮಣಿಯರು ಇಂಗ್ಲೆಂಡಿನಿಂದ ನಮ್ಮ ದೇಶಕ್ಕೆ

ಬಂದು ನೆಲಸಿ ಕನ್ನಡಿಗರಾಗಿರುವ ಸಾಧ್ವಿಯರು. ಒಬ್ಬಳು ಕನಕತೃಷ್ಣಾಮೂರ್ತಿ ಸ್ವರೂಪನಾದ ಮೈಡಾಸ್‌ರಾಜನ ಮಗಳು; ಇನ್ನೊಬ್ಬಳು ಕೋಲರಿಜ್‌ಕವಿಯ 'ಪ್ರೇಮ'ದ ನಾಯಕಿ. "ಶ್ರೀ"ಯವರ ಒಂದೆರಡು ಕವನಗಳಿಗಾದರೂ ಇಲ್ಲಿ ಎಡೆಗೊಡಬಹುದಾಗಿತ್ತು. ಅವರ ಪದ ಭಾಷಾಸರಣಿ ಇವುಗಳಲ್ಲಿ ಒಂದು ಅಪೂರ್ವವಾದ ವ್ಯಕ್ತಿತ್ವವಿದೆ. ವಿ. ಸೀ.

---

**ಬಾಲರಾಮಾಯಣ, ಬಾಲಭಾರತ**—ಮ|| ಬಾದಾಮಿ ಕೃಷ್ಣರಾಯರಿಂದ ರಚಿಸಲ್ಪಟ್ಟವು.

ಈ ಪುಸ್ತಕಗಳಲ್ಲಿ ಮ|| ಕೃಷ್ಣರಾಯರು ರಾಮಾಯಣ ಭಾರತಕಥೆಗಳನ್ನು ಸಂಕ್ಷೇಪಿಸಿ ಮಧುರವಾದ ಗೋವಿನಹಾಡಿನ ಮಟ್ಟಿನಲ್ಲಿ ರಚಿಸಿದ್ದಾರೆ. ಭಾಷೆಯು ಪ್ರಾಯಿಕವಾಗಿ ಹೊಸಗನ್ನಡ. ಇವುಗಳಲ್ಲಿ ಛಂದೋದೋಷ ಮುಂತಾದ ಕೆಲವು ದೋಷಗಳು ಕಂಡುಬರುತ್ತವೆ. ಇಂಥವು ಪ್ರಾಯಶಃ ಗೋವಿನಹಾಡಿನಲ್ಲಿಯೂ ಕಂಡುಬರುತ್ತವೆಯೆಂದೂ ಬಾಯಲ್ಲಿ ಹೇಳುವಾಗ ಪದಗಳನ್ನು ಹಿಂದಕ್ಕೆ ಮುಂದಕ್ಕೆ ಎಳೆದು ಸರಿಪಡಿಸಿಕೊಳ್ಳಬೇಕೆಂದೂ ಗ್ರಂಥಕರ್ತರು ಅಭಿಪ್ರಾಯಪಡಬಹುದು. ಭಾಷೆಯು ಬಹುಮಟ್ಟಿಗೆ ಸುಲಭವಾಗಿದೆ.

---

**ಶ್ರೀ ಚೆಲ್ವನಾರಾಯಣಶತಕಂ**—ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯರಿಂದ ರಚಿಸಲ್ಪಟ್ಟದ್ದು. ತೃತೀಯ ಮುದ್ರಣ. ಬೆಲೆ ೭ ಆಣೆ.

ಪಂಡಿತ ಅಳಸಿಂಗರಾಚಾರ್ಯರು ಸ್ವಪ್ನವಾಸದತ್ತವನ್ನು ಕನ್ನಡಿಸಿ ಪ್ರಬುದ್ಧ ಕರ್ಣಾಟಕದ ಪಾಠಕರಿಗೆ ಪರಿಚಿತರಾಗಿದ್ದಾರೆ. ಅವರ ಗದ್ಯರಾಮಾಯಣ ಭಾಗವತಗಳೂ ಅನೇಕರಿಗೆ ಪರಿಚಿತವಾದವುಗಳು. ಚೆಲ್ವನಾರಾಯಣಶತಕವು ಸುಪ್ರಸಿದ್ಧವಾದ ಸಂಸ್ಕೃತ ನೀತಿಶ್ಲೋಕಗಳ ಮತ್ತು ಅಭಿಪ್ರಾಯಗಳ ಭಾಷಾಂತರವಾಗಿದೆ. ಪುಸ್ತಕದ ಕೊನೆಯಲ್ಲಿ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಟಿಪ್ಪಣವಿದೆ.

---

**ವನಮಾಲೆ**—ಕ್ರೌನ್ ಪುಟಗಳು ೧೧೩; ಗ್ರಂಥಕರ್ತರು ಮ|| ಕೆ. ಎಸ್. ಧರಣೇಂದ್ರಯ್ಯ, ಮೈಸೂರು. ಬೆಲೆ ೬ ಆಣೆ.

ಇದರಲ್ಲಿ ಒಂದು ಪ್ರಾಚೀನ ಜೈನಕಥೆಯು ಉಕ್ತವಾಗಿದೆ. ಆದರೆ ಸರಣಿಯು ಆಧುನಿಕ ಕಾದಂಬರಿಯ ಸರಣಿ; ಭಾಷೆಯು ಹೊಸಗನ್ನಡ; ಗ್ರಂಥಕರ್ತರು ತಮಗೆ ಆವಶ್ಯಕವೆಂದು ತೋರಿದ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿರುವಂತೆ ತಿಳಿಸುತ್ತಾರೆ. ಮೂಲಕಥೆಯನ್ನರಿಯದ ನಮಗೆ ಇವುಗಳ ಔಚಿತ್ಯಾನೌಚಿತ್ಯಗಳನ್ನು ತಿಳಿಯುವುದು ಕಷ್ಟವಾಗಿದೆ. ಶೈಲಿಯು ಸುಲಭವಾಗಿದೆ.

---



# ವಸ್ತು ಕೋಶ

ಮನೆಯಲ್ಲಿ ಏನಾದರೂ ಹೆಚ್ಚು ಕಟ್ಟಲೆಯಾದರೆ ದುಡ್ಡುಕಾಸಿನ ಸ್ಥಿತಿಯು ತಿರುಗಣಿ ತಪ್ಪಿದ ಕದದಂತಾಗಿ, ಆ ತಿಂಗಳು ಅಂಗಡಿ ಮುಂಗಟ್ಟುಗಳಿಗೆ ಸಲ್ಲಿಸಬೇಕಾದ ಹಣಕಾಸುಗಳನ್ನು ಯಥಾಕಾಲದಲ್ಲಿ ಸಲ್ಲಿಸಲಾಗುವುದಿಲ್ಲ; ಮುಂದಿನತಿಂಗಳು ಹಿಂದಿನ ತಿಂಗಳ ತಮ್ಮ; ಹೀಗಾಗಿ ಪೂರ್ವಸ್ಥಿತಿಯು ಬಂದು ಎಂದಿನಂತೆ ಮಾನದಿಂದ ಬದುಕಬೇಕಾದರೆ ಸ್ವಲ್ಪಕಾಲ ಚೇತರಿಸಿಕೊಳ್ಳಬೇಕಾಗುವುದು; ಹಾಗೆ, ಕಳೆದ ಸಂಚಿಕೆಯು ಬರುವುದು ತಡವಾಗಲಾಗಿ ಈ ಸಂಚಿಕೆಯೂ ತಡವೆಂಬುದು ಸಿದ್ಧವೇ; ಪಾಠಕರು ಇದನ್ನು ಆಗಲೇ ಕಂಡುಕೊಂಡಿದ್ದಾರೆಂದು ನಾವು ಧೈರ್ಯವಾಗಿದ್ದೇವೆ. ದೀವಳಿಗೆಯಹಬ್ಬದಲ್ಲಿ ಪ್ರಬುದ್ಧಕರ್ಣಾಟಕವನ್ನು ಓದುವುದಕ್ಕೆ ಬದಲು, ಪ್ರಬುದ್ಧಕರ್ಣಾಟಕವು ಕೈಗೆ ಬಂತೆಂದು ಮಾರ್ಗಶಿರಮಾಸದಲ್ಲಿ ಇನ್ನೊಂದು ದೀವಳಿಗೆಯಹಬ್ಬ ಮಾಡಿಕೊಂಡು ಹೋಳಿಗೆ ಪಾಯಸದ ಊಟಮಾಡಿಬಿಟ್ಟರೆ ಸರಿ!

**ಮಾರ್ಗಶಿರದ ದೀಪಾವಳಿ**

ಆದರೆ ಒಂದು ಸಮಾಧಾನ; ತಡವಾದರೂ ಪತ್ರಿಕೆಯು ಬಡವಾಗಿಲ್ಲ; ಅಷ್ಟೊ ಅಷ್ಟು ಪುಷ್ಟವಾಗಿಯೇ ಬಂದಿದೆ. ಹೊತ್ತಿಗೆ ಸರಿಯಾಗಿ ಕದನ್ನವನ್ನು ಅರೆಹೊಟ್ಟೆ ಊಟಮಾಡುವುದಕ್ಕಿಂತ ಸ್ವಲ್ಪ ಹೊತ್ತಾದರೂ ಹೊಟ್ಟೆತುಂಬ ಔತನದ ಊಟಮಾಡುವುದು ಸ್ಪೃಹಣೀಯವಲ್ಲವೇ? ಕನ್ನಡಿಗರೆ, ಪ್ರಬುದ್ಧಕರ್ಣಾಟಕದ ಅಭಿಮಾನಿಗಳೇ, "ಹೌದು" ಎಂದು ಉತ್ತರಕೊಟ್ಟು ಮರ್ಯಾದೆಯನ್ನುಳಿಸಿ!

---

ಮ|| ಎ. ಎಸ್. ಶ್ರೀನಿವಾಸಶಾಸ್ತ್ರಿಗಳು (ರೈಟ್ ಆನರಬಲ್, ಪಿ.ಸಿ. ಇತ್ಯಾದಿ) ಕಳೆದ ತಿಂಗಳು ಮದ್ರಾಸಿನ ಮೈಲಾಪುರ ಸಂಸ್ಕೃತಪಾಠಶಾಲೆಯಲ್ಲಿ ಪಾರಿತೋಷಕಗಳನ್ನು ವಿನಿಯೋಗಮಾಡುವಾಗ ಸಂಸ್ಕೃತ ವ್ಯಾಸಂಗಕ್ಕೆ ಇರಬೇಕಾದ ಪ್ರಾಶಸ್ತ್ಯದಮೇಲೆ ಒಂದು ಉಪನ್ಯಾಸಮಾಡಿದರು. ಸಂಸ್ಕೃತದಲ್ಲಿ ಸ್ವಲ್ಪವಾದರೂ ಗೌರವವೋ ಆದರವೋ ಇರತಕ್ಕ ಪ್ರತಿಯೊಬ್ಬನೂ ಅದನ್ನು ಓದಬೇಕು. ಅದರಿಂದ ಪ್ರಕೃತೋಪಯುಕ್ತವಾದ ಕೆಲವು ಅಂಶಗಳನ್ನು ಸಂಗ್ರಹಿಸಿ ಇಲ್ಲಿ ಬರೆದಿದ್ದೇವೆ:—

**ಮ|| ಎ. ಎಸ್. ಶ್ರೀನಿವಾಸಶಾಸ್ತ್ರಿಗಳು ಮತ್ತು ಸಂಸ್ಕೃತ**

" ಈಗ ಇಂಡಿಯಾದೇಶದ ಯಾವ ಭಾಗದಲ್ಲಿ ನೋಡಿದರೂ ಆಧುನಿಕರೀತಿಯಲ್ಲಿ ವಿದ್ಯಾಭ್ಯಾಸ ಮಾಡಿರತಕ್ಕವರಲ್ಲಿಯೂ, ಸಂಸ್ಕೃತ ಸಂಸ್ಕೃತಸಾಹಿತ್ಯ ಸಾಂಸ್ಕೃತಿಕರ ಅಭಿಪ್ರಾಯಗಳು ಇವುಗಳ ವಿಚಾರಗಳು ವಿಶೇಷವಾಗಿ ಕಂಡುಬರುತ್ತಿವೆ. ಇದು ಮದ್ರಾಸಿನಲ್ಲಿರುವುದಕ್ಕಿಂತ ಇತರ ಭಾಗಗಳಲ್ಲಿ ಹೆಚ್ಚು. ಇದಕ್ಕೆ ಪ್ರತಿಯಾಗಿ ನಾವು 'ನಮ್ಮ ಇಂಗ್ಲೀಷ್‌ಮಾತು ಚೆನ್ನಾಗಿದೆಯಲ್ಲಾ' ಎಂದು ಜಂಭ ಹೇಳಿಕೊಳ್ಳಬಹುದು ; ಆದರೆ ಇದಕ್ಕೆ ಭರತಖಂಡದ ಇತರ ಭಾಗಗಳವರು ಗೌರವವನ್ನು ಕೊಡುವುದಿಲ್ಲ. ಅದಕ್ಕೆ ಬದಲಾಗಿ ಅವರು 'ನೀವು ನಿಮ್ಮ ಮಾತೃಭಾಷೆಯನ್ನು ಅಸಡ್ಡೆಮಾಡಿದ್ದೀರಿ. ಪ್ರಪಂಚದಲ್ಲೆಲ್ಲಾ ಪ್ರಾಚೀನತಮವಾದ ಸಾಹಿತ್ಯವನ್ನೂ ದರ್ಶನಗಳನ್ನೂ ಒಳಕೊಂಡಿರುವ ಸಂಸ್ಕೃತಭಾಷೆಯನ್ನು ಮಿಕ್ಕ ಪ್ರಾಂತದವರಿಗಿಂತ ಎಷ್ಟೋ ಕೀಳಾಗಿ ಮಾಡಿದ್ದೀರಿ' ಎಂದು ಹಂಗಿಸುವರು. ಈ ವ್ಯತ್ಯಾಸವು ಈಚಿನದು. ಸುಮಾರು ೨೦ ವರ್ಷಗಳಕೆಳಗೆ ಈ ಮಾತನ್ನು ಹೇಳುವಂತಿರಲಿಲ್ಲ.

ಈಗ ಕೆಲವುವರ್ಷಗಳ ಕೆಳಗೆ, ಸಂಸ್ಕೃತವು ಬ್ರಾಹ್ಮಣನಿಗೆ ಗೌರವತರತಕ್ಕದ್ದೆಂದೂ ಆದ್ದರಿಂದ ಅದರ ವ್ಯಾಸಂಗವನ್ನು ಮುರಿದರೆ ಅವನ ತಲೆಯಮೇಲೆ ಮೊಟಕಿದಂತಾಗುವುದೆಂದೂ ಈ ವಿಶ್ವವಿದ್ಯಾಲಯದಲ್ಲಿ ದ್ವಿತೀಯಭಾಷೆಯಾಗಿದ್ದ ಸಂಸ್ಕೃತವನ್ನು ಐಚ್ಛಿಕವನ್ನಾಗಿ ಮಾಡಿದರು. ಸಂಸ್ಕೃತ ಪಕ್ಷಪಾತಿಗಳೂ ಇದನ್ನು ಅನುಮೋದಿಸಿ, ಅನೇಕರು ಚೂರುಚೂರು ಕಲಿಯುವುದಕ್ಕಿಂತ ಕೆಲವರಾದರೂ ವಿಶೇಷ ಗಮನಕೊಟ್ಟು ವ್ಯಾಸಂಗಮಾಡಿ ಒಳ್ಳೆಯ ಪಂಡಿತರಾಗುವುದು ಹೆಚ್ಚು ಫಲಕಾರಿಯೆಂದು ಹೇಳತೊಡಗಿದರು. ಆದರೆ ಆಗ ಇದರ ವಿಫಲಪರಿಣಾಮವು ಗೊತ್ತಿಗೆ ಬರಲಿಲ್ಲ.

ಸಾಲದುದಕ್ಕೆ ಸಂಸ್ಕೃತಕ್ಕೆ ಪ್ರಾಶಸ್ತ್ಯಕೊಟ್ಟಷ್ಟೂ ಪ್ರಾಚೀನ ದ್ರಾವಿಡ ಸಂಸ್ಕೃತಿಗೆ ಅಪ್ರಾಶಸ್ತ್ಯ ಒರುವುದೆಂದು ಮದರಾಸುಪ್ರಾಂತದಲ್ಲಿ ಬ್ರಾಹ್ಮಣೇತರರಿಗೆ ಒಂದು ನಂಬಿಕೆಯುಂಟಾಗಿದೆ. ಆದ್ದರಿಂದ ಸಂಸ್ಕೃತವಿಷಯದಲ್ಲಿ ಇಂಡಿಯದ ಇತರಭಾಗಗಳೊಳಗೆ ಇಲ್ಲದ ಒಂದು ಮತವೈಷಮ್ಯವು ನಮ್ಮಲ್ಲಿ ಕಂಡುಬರುತ್ತದೆ. ಇದು ಶುದ್ಧ ಅನ್ಯಾಯ. ಸಂಸ್ಕೃತವು ತನ್ನಭಾಷೆಯೆಂದು ಪ್ರತಿಯೊಬ್ಬನೂ ಭಾವಿಸಿ ಇಂಗ್ಲಿಷಿಗೆ ಕೊಡುವಷ್ಟು ಪ್ರಾಧಾನ್ಯವನ್ನು ತನ್ನ ವಿದ್ಯಾಭ್ಯಾಸಕ್ರಮದಲ್ಲಿ ಅದಕ್ಕೂ ಕೊಟ್ಟರೆ ನನಗೆ ಅತ್ಯಂತ ಸಂತೋಷ. ಆ ದಿವಸವೇ ಸುದಿವಸ.

ನಮ್ಮಲ್ಲಿ ವಿದ್ಯಾವಂತರೆನ್ನಿಸುವವರೊಳಗೆ ಬಹುಪಾಲು ಜನರು ವಿದ್ಯಾರ್ಥಿದಶೆಯಲ್ಲಿ ಸಂಸ್ಕೃತವನ್ನು, ಅದು ಎಷ್ಟೇ ಸ್ವಲ್ಪವಾಗಲಿ, ಪರಿಚಯಮಾಡಿಕೊಳ್ಳು

ವಂತೆ ಸರ್ವಪ್ರಯತ್ನವನ್ನೂ ಮಾಡಬೇಕು. ಈಗ ಒಬ್ಬ ವಿದ್ಯಾರ್ಥಿಯು ನಾಲ್ಕನೆಯ ಫಾರಂಗೆ ಬಂದೊಡನೆಯೇ ಸಂಸ್ಕೃತದ ಅಥವಾ ತನ್ನ ದೇಶಭಾಷೆಯ ಸಂಪರ್ಕವೇ ಇಲ್ಲದಂತೆ ಆಗಿಬಿಡಬಹುದು. ಇದನ್ನು ನೋಡಿಕೊಂಡು ನಮ್ಮ ಹುಡುಗರ ವಿದ್ಯಾವ್ಯಾಸಂಗದಲ್ಲಿ ಆಸಕ್ತಿ ಇರುವವರು ಹೇಗೆ ಶಾಂತಚಿತ್ತರಾಗಿದ್ದಾರೋ ತಿಳಿಯದು. ನನಗೆ ಈಗ ಬರುತ್ತಿರುವಷ್ಟು ಸಂಸ್ಕೃತವೂ ಬರದಿದ್ದಿದ್ದರೆ ಹೇಗಿರುತ್ತಿತ್ತು ಎಂದು ಯೋಚಿಸಿದರೆ, ಜೀವನವು ಜೀವಿಸುವುದಕ್ಕೇ ಯೋಗ್ಯವಾಗುತ್ತಿರಲಿಲ್ಲವೆನ್ನಿಸುತ್ತದೆ.''

---

**ನಮ್ಮ ದೇಶದಲ್ಲಿ ಸಂಸ್ಕೃತದ ಸ್ಥಿತಿ.**

ಮ|| ಶಾಸ್ತ್ರಿಗಳು ಸ್ವದೇಶ ಪರದೇಶಗಳೆರಡರಲ್ಲಿಯೂ ಗಣನೀಯರಾಗಿದ್ದಾರೆ. ಅವರ ಮಾತಿಗೆ ಎಲ್ಲರೂ ಗೌರವ ಕೊಡುತ್ತಾರೆ. ಈ ವರ್ಷ, ಕಾಲೇಜುವ್ಯಾಸಂಗವನ್ನು ಮುಗಿಸಿಕೊಂಡು ಪಟ್ಟಾಂಚಿತರಾಗಿ ಹೊರಟ ವಿದ್ಯಾರ್ಥಿಗಳಿಗೆ ಉಪದೇಶಮಾಡುವಂಥ ಘನಕಾರ್ಯವನ್ನು ನಮ್ಮ ವಿಶ್ವವಿದ್ಯಾನಿಲಯದವರು ಇವರಿಗೆ ಒಪ್ಪಿಸಿದ್ದೇ ಅವರಲ್ಲಿ ನಮ್ಮೆಲ್ಲರಿಗೂ ಗೌರವವನ್ನುಂಟುಮಾಡುವುದಕ್ಕೆ ಸಾಕಾದಷ್ಟು ಕಾರಣವಾಗಿದೆ. ಇಂಥವರು ಸರ್ವಜನಾಪೇಕ್ಷಣೀಯವಾದ ಸಂಸ್ಕೃತದ ವಿಚಾರವಾಗಿ ತಮ್ಮ ಅಭಿಪ್ರಾಯವನ್ನು ತಿಳಿಸಿದರೆ ಅದನ್ನು ನಾವು ಲಕ್ಷ್ಯಕೊಟ್ಟು ಗಮನಿಸಬೇಕೆಂದು ಹೇಳಬೇಕೆ? ಅವರು ಅಪ್ಪಣೆ ಕೊಡಿಸಿರುವ ವಿಚಾರವು ಮದ್ರಾಸಿಗೆ ಮಾತ್ರ ಸಂಬಂಧಪಟ್ಟಿರುವುದಿಲ್ಲ; ಪ್ರಕೃತದಲ್ಲಿ, ಅದನ್ನು ಮದ್ರಾಸಿನವರಿಗಿಂತ ಹೆಚ್ಚಾಗಿ ನಾವು—ಮೈಸೂರು ದೇಶದವರು— ಮನಸ್ಸಿಗೆ ತೆಗೆದುಕೊಳ್ಳಬೇಕಾಗಿದೆ. ನಮ್ಮ ಶ್ರೀಮನ್ಮಹಾರಾಜರವರು ತಮ್ಮ ಪೂರ್ವಿಕರ ಸ್ತೋತ್ರಾರ್ಹವಾದ ಮೇಲ್ಪಂಕ್ತಿಯನ್ನು ಅನುಸರಿಸಿ ಸಂಸ್ಕೃತವ್ಯಾಸಂಗಕ್ಕೆ ಪ್ರೋತ್ಸಾಹವನ್ನೂ ಸಂಸ್ಕೃತ ವಿದ್ವತ್ತಿಗೆ ಗೌರವವನ್ನೂ ಕೊಟ್ಟುಕೊಂಡು ಬರುತ್ತಿರುವುದರಿಂದ ನಮ್ಮ ಸಂಸ್ಥಾನದ—ಅಷ್ಟೇಕೆ, ದಕ್ಷಿಣ ಹಿಂದೂಸ್ಥಾನದ—ಅನೇಕ ಭಾಗಗಳಲ್ಲಿ ಇಲ್ಲಿಂದ ಪಾಂಡಿತ್ಯವನ್ನು ಸಂಪಾದಿಸಿ ಪಂಡಿತರಾಗಿ ಹೋಗಿ ತಮ್ಮ ಜ್ಞಾನಜ್ಯೋತಿಯಿಂದ ಪ್ರಕಾಶವನ್ನು ಬೀರುತ್ತಿರುವುದು ಕಂಡುಬರುತ್ತಿದೆ. ಇಂಥ ಹತ್ತಾರುಮಂದಿಗಳ ಮಾತನ್ನು ಬಿಟ್ಟು, ಮ|| ಶಾಸ್ತ್ರಿಗಳು ಪ್ರಸ್ತಾಪಿಸಿರುವಂತೆ ನಮ್ಮ ಇಂಗ್ಲಿಷ್ ಸ್ಕೂಲುಗಳಲ್ಲಿ ಓದುವ ಬಹುಜನ ವಿದ್ಯಾರ್ಥಿಗಳ ವಿಷಯವನ್ನು ಯೋಚನೆ ಮಾಡಿದರೆ ನಮ್ಮ ಸ್ಥಿತಿಯು ಮದ್ರಾಸಿನವರ ಸ್ಥಿತಿಗಿಂತ ಹೆಚ್ಚು ಶೋಚನೀಯವಾಗಿದೆ—ಅಥವಾ ಆಗುವಂತಿದೆ—ಎಂದು ಹೇಳಬಹುದು. ಈಗ, "ಇತೋಭ್ರಷ್ಟಸ್ತತೋಭ್ರಷ್ಟಃ"

ಎಂಬಂತೆ ಸಂಸ್ಕೃತ ಕನ್ನಡ ಎರಡೂ ಕೈಬಿಟ್ಟುಹೋಗುವಂತಾಗಿದೆ. ಒಂದುಕಡೆ-- ವಿದ್ಯಾಭ್ಯಾಸದ ಇಲಾಖೆಯವರು ಕೆಳಗಣ (ಮಿಡಲ್) ಸ್ಕೂಲುಗಳಲ್ಲಿ ಸಂಸ್ಕೃತ ವನ್ನು ಐಚ್ಛಿಕಭಾಷೆಯನ್ನಾಗಿ ಮಾಡಿದರು. ಇದರಿಂದ ನೂರಾರು ಹುಡುಗರು ಓದುವ ಸ್ಕೂಲುಗಳಲ್ಲಿ ಸಂಸ್ಕೃತವನ್ನು ಓದುವ ಹುಡುಗರು ಒಬ್ಬಿಬ್ಬರೂ ಇಲ್ಲ ದಂತಾಗಿದೆ; ಇಲ್ಲಿಂದ ಕಲಿತುಕೊಂಡು ಮುಂದೆ ಹೋದರೆ ತಾನೇ ಹುಡುಗರು ಹೈ ಸ್ಕೂಲು ತರಗತಿಗಳಲ್ಲಿ ಸಂಸ್ಕೃತವನ್ನು ಓದುವುದು? ಆದ್ದರಿಂದ ಇನ್ನು ಸ್ವಲ್ಪ ಕಾಲದೊಳಗೆ ಹೈಸ್ಕೂಲಿನ ಸಂಸ್ಕೃತ ತರಗತಿಗಳಲ್ಲಿ ಪಂಡಿತರು ಬರಿಯ ಬೆಂಚುಗಳಿಗೆ ಪಾಠಹೇಳುವ ಅವಸ್ಥೆಗೆ ಬಂದು ಆ ಕಷ್ಟಸ್ಥಿತಿಯಿಂದ ನಿವೃತ್ತರಾಗುವ ಸ್ಥಿತಿಯು ಬರಬಹುದು. ಅಧ್ಯಯನ ಅಧ್ಯಾಪನಾದಿಗಳಲ್ಲಿ ಫಲಾಕಾಂಕ್ಷೆಯಿಲ್ಲದೆ ಕೇವಲ ಧರ್ಮವೆಂದು ಪ್ರವರ್ತಿಸುವ ಕಾಲವು ಹೋಗುತ್ತಿರುವುದರಿಂದ ಇತರ ಕಾರಣಗಳ ಜೊತೆಗೆ ಇದೂ ಸಹಾಯಮಾಡಿ ಸಂಸ್ಕೃತ ಪಾಠಶಾಲೆಗಳೂ ಬಡವಾಗಬಹುದು. ಹೀಗಾಗಿ ಯಾವುದು ಇಲ್ಲದಿದ್ದರೆ "ಜೀವನವು ಜೀವಿಸುವುದಕ್ಕೆ ಯೋಗ್ಯವೆನ್ನಿಸು ವುದಿಲ್ಲ"ವೋ ಅಂಥ ಸಂಸ್ಕೃತವನ್ನು ಎಷ್ಟು ಜನ ಓದುವರು? ಈಗ ನಿತ್ಯಕರ್ಮಾ ದಿಗಳನ್ನು ಇಟ್ಟುಕೊಂಡಿರುವವರು ಸಂಸ್ಕೃತ ಮಂತ್ರಗಳನ್ನೇ ಹೇಳುತ್ತಿದ್ದರೂ ಅವುಗಳ ಅರ್ಥವನ್ನು ತಿಳಿದುಕೊಂಡಿರಲೇಬೇಕೆಂಬ ನಿರ್ಬಂಧವೇನೂ ಇಲ್ಲದೆ ಇರು ವುದರಿಂದ—ಈಗ ಪ್ರಾಕೃತವನ್ನು ಎಲ್ಲೋ ಸಾವಿರಕ್ಕೆ ಒಬ್ಬರು ವ್ಯಾಸಂಗಮಾ ಡುತ್ತಿರುವಂತೆ—ಮುಂದೂ ಭಾಷಾಶಾಸ್ತ್ರ, ಧರ್ಮಸಾದೃಶ್ಯ ಮುಂತಾದ ವಿಷಯ ಗಳಲ್ಲಿ ಹೆಚ್ಚು ಆಸಕ್ತರಾದ ಕೆಲವರು ಸಂಸ್ಕೃತವನ್ನು ವ್ಯಾಸಂಗ ಮಾಡಬಹುದು. ಇದು ಸ್ವಮತಸ್ಥಾಪನೆಗೋಸ್ಕರ ಹೇಳುವ ಅತಿಶಯೋಕ್ತಿಯಲ್ಲ. ನಮ್ಮ ಹಿಂದೆ ಇತ್ತೆಂದು ನಮ್ಮ ತಾಯಿತಂದೆಗಳು ವರ್ಣಿಸುತ್ತಿರುವ ಸ್ಥಿತಿಯನ್ನೂ, ನಮ್ಮ ಬಾಲ್ಯ ದಲ್ಲಿ ನಾವೇ ನೋಡಿದ ಸ್ಥಿತಿಯನ್ನೂ ಈಗಿನ ಸ್ಥಿತಿಯನ್ನೂ ಪರಿಶೀಲಿಸಿದರೆ— ಪಟ್ಟಣವಾಸಗಳಲ್ಲಿಯೂ ಗ್ರಾಮಾಂತರಗಳಲ್ಲಿಯೂ ಸಂಸ್ಕೃತಪಾಠ ಹೇಳುವವರೂ ಓದುವವರೂ ಕಡಿಮೆಯಾಗುತ್ತಹೋಗಿ ದೇಶವು ಕ್ರಮೇಣ ನೀರು ಬತ್ತಿಹೋಗು ತ್ತಿರುವ ಕೆರೆಯ ಅಂಗಳದಂತೆ ಕಾಣುತ್ತಿದೆ. ಸಂಸ್ಕೃತವೂ ಅದರ ಶಾಸ್ತ್ರಗಳೂ ಪ್ರಾಚೀನ ಭಾರತೀಯರು ಸಂಪಾದನೆಮಾಡಿಟ್ಟು ಹೋಗಿರುವ ಆಸ್ತಿ; ನಾವು ಅದನ್ನು ಎಂದಿಗೆ ಕಳೆದುಕೊಂಡು ಅದಕ್ಕೂ—ಈಗಾಗಲೇ ಆರಂಭವಾಗಿರುವಂತೆ —"ಭವತಿ ಭಿಕ್ಷಾಂ ದೇಹಿ" ಎಂದು ಪಾಶ್ಚಾತ್ಯರ ಬಾಗಿಲಿಗೆ ಹೋಗಿ ನಿಲ್ಲು ವೆವೋ ಅಲ್ಲಿಗೆ ನಮ್ಮ ಅಧಃಪತನವು ಪೂರ್ಣವಾಗುವುದು. ಇಷ್ಟುದೂರ ಯೋಚಿಸ ದಿದ್ದರೂ, ಸಂಸ್ಕೃತವ್ಯಾಸಂಗವು ಕಡಿಮೆಯಾಗುವುದು ಎಳೆಯಮಗುವಿಗೆ ತಾಯಿ

ಯ ಹಾಲು ಕಡಿಮೆಯಾದ ಹಾಗೆಂದು ಭಾವಿಸಿ ಸಂಸ್ಕೃತ ಪಠ್ಯಪುಸ್ತಕಗಳ ಉಪಸಭೆಯವರು ಈಗ ಎರಡುವರ್ಷಗಳಿಂದ ಸಂಸ್ಕೃತವನ್ನು ಸ್ಕೂಲುಗಳಲ್ಲಿ ಪುನಃ ದ್ವಿತೀಯಭಾಷೆಯಾಗಿ ಇರಿಸಬೇಕೆಂದು ಸಲಹೆಕೊಡುತ್ತಲೇ ಬಂದರು. ಲೋಕಲ್ ಎಗ್ಸ್ಯಾಮಿನೇಷನ್ ಬೋರ್ಡಿನಲ್ಲಿಯೂ ಅದರ ಪ್ರಸ್ತಾಪ ಬಂದಿತ್ತು. ಆದರೂ ಫಲ ವೇನೂ ಆಗಲಿಲ್ಲ.

---

**ಕನ್ನಡದ ಸ್ಥಿತಿ.**

ಇದು ಒಂದು ಕಡೆ. ಮತ್ತೊಂದು ಕಡೆ ಮೈಸೂರು ವಿಶ್ವವಿದ್ಯಾನಿಲಯದ ನೂತನ ವ್ಯವಸ್ಥೆಯ ಪ್ರಕಾರ ಕನ್ನಡಕ್ಕೂ ಈ ಗತಿಯೇ ಬರಬೇಕಾಗಿದೆ. ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಓದನ್ನು ನಿರ್ಬಂಧವಾಗಿ ಇರಿಸುತ್ತೇವೆಂದೂ ಅದು ಮೈಸೂರ ವಿಶ್ವವಿದ್ಯಾನಿಲಯದ ಅಸಾಧಾರಣ ಧರ್ಮವೆಂದೂ ಹೇಳಿಕೊಂಡು ಹೊರಟದ್ದೇನು? ಪರಿಣಾಮದಲ್ಲಿ ಆಗು ತ್ತಿರುವುದೇನು? ಪಂಚಪಾಂಡವರು ಮಂಚದ ಕಾಲಿನ ಹಾಗೆ ಮೂರುಜನ ಎಂದು ಹೇಳಿ ಎರಡು ತೋರಿಸಿ ಒಂದನ್ನು—ಅದು ಒಂದೂ ಅಲ್ಲ ಸೊನ್ನೆಯೂ ಅಲ್ಲ ಹಾಗೆ —ಬರೆಯುವಂತೆ ಆಗಿದೆಯಲ್ಲ! ಛಾನ್ಸೆಲರಾದ ನಮ್ಮ ಮಹಾರಾಜರವರು ಹಿಂದೆ ದೇಶಭಾಷಾವಾತ್ಸಲ್ಯದಿಂದಲೂ ದೂರದರ್ಶಿತೆಯಿಂದಲೂ ಕನ್ನಡದ ವ್ಯಾಸಂಗಕ್ಕೆ ಅಷ್ಟೊಂದು ಪ್ರಾಶಸ್ತ್ಯವನ್ನು ಕೊಡಬೇಕೆಂದು ಸೂಚಿಸಿ ಈ ವಿದ್ಯಾಪೀಠವನ್ನು ಪ್ರತಿಷ್ಠಿಸಿದರೂ ಘಟನಾಪ್ರವಾಹವು ಅದಕ್ಕೆ ಕೇವಲ ವಿರುದ್ಧವಾಗಿ ಹೋಗುತ್ತಿರುವುದು ಆಶ್ಚರ್ಯವಾಗಿದೆ. ನಮ್ಮ ವೈಸ್‌ಛಾನ್ಸೆಲರವರು ದೇಶಭಾಷಾವಾತ್ಸಲ್ಯಗಳಿಗೆ ತೌರೂರಾದ ಬಂಗಾಳಾದೇಶದವರು; ಅವರಿಗೆ ಬಂಗಾಳಿಭಾಷೆ ಹೇಗೋ ನಮಗೆ ಕನ್ನಡ ಹಾಗೆ; ಇದನ್ನು ಅವರಿಗೆ ಯಾರಾದರೂ ಹೇಳಿಕೊಡಬೇಕೆ? ಇಂಥ ಅಧಿಕಾರಿಗಳ ಕಾಲದಲ್ಲಿ—ವಿಶ್ವವಿದ್ಯಾನಿಲಯ ಪ್ರಾಸಾದದಲ್ಲಿ— ಕನ್ನಡಕ್ಕೆ ಕ್ಷಯರೋಗ ತಗಲುವುದುಂಟೇ? ಎಂದಿಗೂ ಇಲ್ಲ. ಒಬ್ಬೊಬ್ಬರು ಒಂದೊಂದು ಕಾರಣವನ್ನಿಟ್ಟುಕೊಂಡು ಮನಸ್ಸಿದ್ದರೂ ಮಾತನಾಡದೆ ನಮ್ಮ ಬುಡಕ್ಕೆ ನಾವೇ ನೀರು ತಿದ್ದಿಕೊಳ್ಳುತ್ತಿದ್ದೇವೆ; ಪುನರ್ವ್ಯವಸ್ಥೆಯ ಸಭೆಯಲ್ಲಿದ್ದವರು ನಮ್ಮವರೇ; ಈ ಆತ್ಮಹತ್ಯಸದೃಶವಾದ ತೀರ್ಮಾನವನ್ನು ಮಾಡಿದವರು ನಮ್ಮವರೇ. ನಾಳೆ ಅದನ್ನು ಸೆನೇಟ್ ಸಭೆಯಲ್ಲಿ ಕೈಯೆತ್ತಿ ಆಶೀರ್ವದಿಸಿ ಚಿರಜೀವಿಯಾಗಿ ಮಾಡುವವರೂ ಅವರೇ. ನಾವು ಕೇಳಿರುವಮಟ್ಟಿಗೆ ಸೆನೇಟ್ ಸಭಿಕರು ಕನ್ನಡದ ಪರವಾಗಿ ವಾದಿಸಿದರೆ ವೈಸ್‌ಛಾನ್ಸೆಲರವರು ಅವರಿಗೆ ವಿರುದ್ಧವಾಗಿ ಹೋಗುವಹಾಗಿಲ್ಲ. ಆದರೆ ಇದು ಬೆಕ್ಕಿಗೆ ಗಂಟೆಕಟ್ಟುವಂಥ ಕೆಲಸ; ಎಲ್ಲ ಇಲಿ

ಗಳಿಗೂ ಬೆಕ್ಕಿನಮೇಲೆ ಕಣ್ಣು. ಆದರೂ ಒಂದೊಂದೂ ಒಂದೊಂದು ನೆವಹೇಳಿ ತಪ್ಪಿಸಿಕೊಳ್ಳುತ್ತದೆ. ಕ್ಷಯರೋಗವು ಬಂದು ಸೇರುವಾಗ ಅದು ಅದೃಶ್ಯವಾಗಿ ಬರುತ್ತದೆ; ಖಾಯಿಲೆಯು ಬಂದುನಿಂತು ಕೆಲಸವು ಎಡವಟ್ಟಾದರೆ ಅದನ್ನು ತಿದ್ದುವುದು ಕಷ್ಟವಾದೀತು. ಹಿಂದಿನ ಮೆಟ್ರಿಕ್ಯುಲೇಷನ್ ಪರೀಕ್ಷೆಯನ್ನು ಒದಲಾಯಿಸುವುದಕ್ಕೆ ಹೋಗಿ ಅದು ಈಗ ಹಳಸಿದ ಹಿಟ್ಟಿನಂತಾಗಿದೆ; ಅದಕ್ಕೆ ಪ್ರತಿನಿತ್ಯವೂ ಒಂದೊಂದು ಮಸಾಲೆಯನ್ನು ಬೆರಸುತ್ತಲೇ ಇದೆ; ಆದರೇನು, ಇದರಿಂದ ಅಡಿಗೆ ಮಾಡುವವರಿಗೆ ಸುಖವಿಲ್ಲ; ಊಟಮಾಡುವವರಿಗೆ ಹಿತವಿಲ್ಲ. ಕನ್ನಡದ ವಿಚಾರವೂ ಮುಂದೆ ಹೀಗಾದೀತು ಎಂದು ನಮಗೆ ಭಯ. ಈಗಲೇ ಕನ್ನಡ ಓದುವವರಿಲ್ಲದೆ ಕನ್ನಡಸಾಹಿತ್ಯದ ದಾರಿಯಲ್ಲಿ ಕಾಡುಕೊಂಟುಗಳನ್ನು ಏರಿಸಿಟ್ಟಂತಾಗಿದೆ; ಮುಂದೆ ಕನ್ನಡ ಓದುಬರಹಗಳನ್ನು ಬಲ್ಲವರು ಇನ್ನೂ ಕಡಿಮೆಯಾದರೆ ನಮ್ಮ ಮೈಸೂರು ದೇಶವು "ಮಕ್ಕಳಿಲ್ಲ ಮರಿಯಿಲ್ಲ, ಹೆಸರು ತಾಯಮ್ಮ" ಎಂಬಂತೆ "ಕನ್ನಡ ಓದುವವರಿಲ್ಲ ಬರೆಯುವವರಿಲ್ಲ ಹೆಸರು ಕನ್ನಡದೇಶ" ಎನ್ನುವ ಹಾಗಾಗುತ್ತದೆ. ಮೈಸೂರುದೇಶವು ಕನ್ನಡದೇಶದ ಮಧ್ಯದಲ್ಲಿದೆ, ಅದರ ಜಾತಿಯು ಶುದ್ಧವಾಗಿದೆ, ಸಂಕರವಿಲ್ಲ ಎಂದು ನಾವು ಹೇಳಿಕೊಳ್ಳುತ್ತಿರುವುದು ಬರಿಯ ಒಣ ಹೆಮ್ಮೆಯಾಗುತ್ತದೆ. ತಾಯಿಯ ಹಾಲು ಸಾಲದೆ ಮಗುವಿಗೆ ಹುಯ್ಯುವ ಹಾಲು ಕುಡಿಸುತ್ತಿರುವಾಗ, ಇರುವ ಸ್ತನ್ಯವನ್ನೂ ಬಿಡಿಸಿ ಮಗುವನ್ನು ಉಪವಾಸ ಕೆಡವುವವರುಂಟೇ? ಆದ್ದರಿಂದ ಈ ವಿಚಾರದಲ್ಲಿ ಬಾಯಿ ನಡೆಯತಕ್ಕ ಪ್ರತಿಯೊಬ್ಬರೂ, ನಮ್ಮ ಜನಗಳಲ್ಲಿ ಸಾಮಾನ್ಯವಾಗಿ ಸ್ವಭಾವಸಿದ್ಧವಾಗಿ ಬಂದಿರಬಹುದಾದ ಔದಾಸೀನ್ಯವನ್ನು ಬಿಟ್ಟು, ಯಾವ ಯಾವುದೋ ಕಾರಣಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಲೆಕ್ಕಾಚಾರ ಮಾಡುತ್ತ ಹಿಂದೆಮುಂದೆ ನೋಡಿ "ಹೋದರೆ ಹೋಗಲಿ" ಎಂದು ಉಪೇಕ್ಷೆಮಾಡುವುದನ್ನು ಬಿಟ್ಟು ಕನ್ನಡವು ಬಲಿಯುವುದಕ್ಕೆ ತಕ್ಕ ಏರ್ಪಾಟನ್ನು ಮಾಡಿಸುವರೆಂದು ಭಾವಿಸುತ್ತೇವೆ.

ಈ ವಿಚಾರದಲ್ಲಿ ಆಸಕ್ತಿವಹಿಸಬೇಕಾದವರು ಕೇವಲ ಮೈಸೂರುದೇಶಿಯರೇ ಅಲ್ಲ; ಇದನ್ನು ಕರ್ಣಾಟಕದ ಸಕಲಭಾಗಗಳವರೂ ಯೋಚಿಸಿ, ಮಾಡತಕ್ಕದ್ದನ್ನು ಮಾಡಬೇಕಾಗಿದೆ. ಈಗ ಕರ್ಣಾಟಕಕ್ಕೆಲ್ಲಾ ಒಂದು ವಿಶ್ವವಿದ್ಯಾಲಯವು ಬೇಕೆಂದೂ ಅದು ಮೈಸೂರು ವಿಶ್ವವಿದ್ಯಾನಿಲಯವೇ ಏಕೆ ಆಗಬಾರದೆಂದೂ ವಿಚಾರವು ನಡೆಯುತ್ತಿದೆಯಷ್ಟೆ; ಅದರ ಸಾಧ್ಯಾಸಾಧ್ಯತೆಯು ಹೇಗಾದರೂ ಇರಲಿ; ಒಂದುವೇಳೆ ಸಾಧ್ಯವಾಗಿ, ಅಷ್ಟುಹೊತ್ತಿಗೆ ನಮ್ಮಲ್ಲಿ ಕನ್ನಡವು ಗಗನಕುಸುಮವಾಗಿ, ಇತರ ಪ್ರಾಂತಗಳ ಕರ್ಣಾಟಕರು ನಮ್ಮ ವಿಶ್ವವಿದ್ಯಾನಿಲಯದೊಳಕ್ಕೆ ಹಸಿದು

ಬಂದರೆ ಗೋಕುಲಾಷ್ಟಮಿಯೂ ಶಿವರಾತ್ರಿಯ ಮನೆಗೆ ಊಟಕ್ಕೆ ಹೋದಹಾಗಾಗುವುದಿಲ್ಲವೇ ?

ಕನ್ನಡವನ್ನು ಐಚ್ಛಿಕವಾಗಿಮಾಡಿ ಅದಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿದ್ದೇವೆನ್ನಬಹುದು ; ಇದು ಖಂಡೇರಾಯನನ್ನು ಗಿಣಿಯಹಾಗೆ ಸಾಕಿದಂತೆಯೇ ಹೊರತು ಮತ್ತೆಬೇರೆ ಅಲ್ಲ ; ಈ ಅಂಶಕ್ಕೆ ಪ್ರಾಮಾಣ್ಯವನ್ನು ಒದಗಿಸುವುದಕ್ಕಾಗಿಯೇ ಮ|| ಶಾಸ್ತ್ರಿಗಳ ಬೆಂಬಲವನ್ನು ಇಟ್ಟುಕೊಂಡು ಈ ಗೋಳಾಟವನ್ನು ಮೊದಲುಮಾಡಿದ್ದು.

ಕನ್ನಡಕ್ಕೆ ಪ್ರಾಶಸ್ತ್ಯ ಕೊಡಲು ಇರುವ ಒಂದು ಮುಖ್ಯವಾದ ಅಡ್ಡಿ ಯಾವುದೆಂದರೆ—“ ಮೈಸೂರು ದೇಶದಲ್ಲಿ ಇಷ್ಟೊಂದು ಭಾಷೆಗಳಿವೆಯಲ್ಲ ಇವುಗಳಿಗೆ ಅನ್ಯಾಯ ಮಾಡಿದಂತಾಗುವುದಿಲ್ಲವೇ, ಇವು ಮೂಲೆಗೆ ಬಿದ್ದುಹೋಗುವುದಿಲ್ಲವೇ ” ಎಂದು ಆಕ್ಷೇಪಿಸುತ್ತಿರುವವರ ಕೂಗು; —ಹೊಟ್ಟೆಯಲ್ಲಿ ಹುಟ್ಟಿ ಹೆಸರು ಹೇಳುವ ಮಗನಿಗೆ ಅನ್ನ ಹಾಕಬೇಕಾದರೆ ಭಿಕ್ಷಾನ್ನದ ಹುಡುಗರಿಗೆಲ್ಲಾ ಹೊಟ್ಟೆ ತುಂಬಿದೆಯೇ ಇಲ್ಲವೇ ಎಂದು ವಿಚಾರಮಾಡುವಂಥ ಪ್ರಕರಣ. “ ಸರ್ವೇಜನಾಸ್ಸುಖಿನೋ ಭವಂತು ” ಎಂಬ ಪಾರಮಾರ್ಥಿಕ ಬುದ್ಧಿಯು ಸ್ತುತ್ಯವಾದದ್ದೇ ! ಆದರೆ ಕನ್ನಡ ದೇಶದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡದೆ ಹೋದರೆ ಮೆಕ್ಸಿಕೋ ದೇಶದವರೋ ನ್ಯೂಜೀಲ್ಯಾಂಡ್‌ನವರೋ ಕೊಡುತ್ತಾರೆಯೇ ? ಅಲ್ಲದೆ ಎಷ್ಟು ದೇಶ ಭಾಷೆಗಳಿಗಾದರೂ ಏಕೆ ಪ್ರಾಶಸ್ತ್ಯಕೊಡಬೇಕು ? ಈಗ ಮೈಸೂರು ದೇಶದಲ್ಲಿ—ಅವರವರ ಮನೆಯಮಾತು ಯಾವುದಾದರೂ ಆಗಿರಲಿ—ಕನ್ನಡವನ್ನು ಅರಿಯದವರು ಎಷ್ಟು ಜನರಿದ್ದಾರೆ ? ಬಹುಸ್ವಲ್ಪ. ನಮ್ಮ ದೇಶದಲ್ಲಿ ಎಲ್ಲರೂ ಕನ್ನಡವನ್ನು ಕಲಿಯಬೇಕೆಂದು ನಿರ್ಬಂಧಪಡಿಸಿದರೆ ಇಂಥವರ ಮಕ್ಕಳು ಮೊದಲಿಂದ ಕನ್ನಡವನ್ನೇ ಆರಂಭಿಸುತ್ತಾರೆ. ಬೇಕಾದರೆ, ಇಂಥವರೆಲ್ಲರೂ ತಕ್ಕಷ್ಟು ಕನ್ನಡವನ್ನು ಕಲಿಯಲು ಸಾಕಾದಷ್ಟು ಅವಕಾಶಕೊಟ್ಟು ೧೯೩೫ನೇ ಇಸವಿಯಿಂದ ಕನ್ನಡವನ್ನು ನಿರ್ಬಂಧವಾಗಿ ಎಲ್ಲರೂ ಓದಬೇಕು ಎಂದು ವಿಧಿಸಬಹುದು. ಇದರಿಂದ ನಮ್ಮ ದೇಶದ ತಮಿಳರೂ ತೆಲುಗರೂ ತಮ್ಮ ಮಾತನ್ನೇನು ಮರೆಯುವುದಿಲ್ಲ; ತಮ್ಮ ಮಾತಿನ ಮೇಲೆ ಅಷ್ಟು ಮಮತೆಯಿದ್ದರೆ ಮನೆಯಲ್ಲಿಯೇ ಹೆಚ್ಚಾಗಿ ಓದಿಕೊಳ್ಳುತ್ತಾರೆ; ಸಾಲದಿದ್ದರೆ ತಮಿಳು ವಿಶ್ವವಿದ್ಯಾಲಯವನ್ನೋ ಆಂಧ್ರ ವಿಶ್ವವಿದ್ಯಾಲಯವನ್ನೋ ಆಶ್ರಯಿಸುತ್ತಾರೆ ! ಇಲ್ಲದಿದ್ದರೆ ಇವರ ಭಾಷೆಗಳನ್ನು ಐಚ್ಛಿಕವಾಗಿಡೋಣ ; ಅಂಥ ಆಸಕ್ತಿ ಇರುವವರು ಅವುಗಳನ್ನು ತೆಗೆದುಕೊಂಡು ಪಂಡಿತರಾಗಲಿ ! ಭಾಷಾವ್ಯವಸ್ಥೆಯನ್ನನುಸರಿಸಿ ಹೊಸಹೊಸ ವಿದ್ಯಾಪೀಠಗಳು ಹುಟ್ಟುತ್ತಿರುವಾಗ ನಮ್ಮ ವಿಶ್ವವಿದ್ಯಾಲಯದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡದಿದ್ದರೆ ಅಸ್ವಾಭಾವಿಕವೂ ದೇಶಕಾಲವಿರುದ್ಧವೂ ಆಗುತ್ತದೆ.

ಕಳೆಕೀಳದಿದ್ದರೆ ಪೈರು ಹೇಗೆ ಬೆಳೆದೀತು ?

---




# ಕರ್ಣಾಟಕ

ಕ್ರೋಧನ ಸಂವತ್ಸರ —೨೬— ಕಾಮನ ಸಂಚಿಕೆ

ಸಂಪುಟ ೭]

## ವಿಷಯ ಸೂಚಿಕೆ

[ಸಂಚಿಕೆ ೪


೧. ಪಿರಿದು— "ಶ್ರೀನಿವಾಸ."

~~೨. ಹಿಂದೂಜನರು ಮತ್ತು ಸಂಸ್ಕೃತ—~~ ಮ|| ವಿ. ಸುಬ್ರಹ್ಮಣ್ಯ ಅಯ್ಯರ್, ಬಿ.ಎ.

೩. ತಾತ್ತ್ವಿಕ ಕಲಾಸಂಪ್ರದಾಯ ಮತ್ತು ಮೈಸೂರಿನ ಮ|| ಚಿತ್ರಗಾರ ಕೇಶವಯ್ಯನವರು— ಮ|| ಬಿ. ವೆಂಕೋಬರಾವ್, ಬಿ.ಎ.

೪. ಮುದ್ದಣ್ಣ— ಮ|| ರಾ. ಸು. ಸಾಲಿ, ಬಿ.ಎ.

೫. ಕೆಲವು ಕನ್ನಡಕವಿಗಳ ಜೀವನಕಾಲವಿಚಾರ— ಡಾ|| ಎ. ವೆಂಕಟಸುಬ್ಬಯ್ಯ, ಎಂ.ಎ., ಪಿ.ಎಚ್‌ಡಿ.

೬. ವಿಗಡವಿಕ್ರಮರಾಯ

೭. ಹಳೆಯ ನೆನಹು— ಮ|| ಶಂಕರಭಟ್ಟ ಕಡಂಗೋಡ್ಲು.

೮. ಕಾಮನಹಬ್ಬದ ಒಂದು ಕತ್ರೆ (ಒಂದು ಸಣ್ಣಕಥೆ)— "ಶ್ರೀನಿವಾಸ."

೯. "ಕಾವ್ಯಾವಲೋಕನ"

೧೦. "ವಸ್ತುಕೋಶ"


ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಟಿಸಲ್ಪಟ್ಟಿದೆ.

೧೯೨೬



Printed at the Crown Electric Press, Mysore.





# ಹಿರಿದು

ರಾಗ—ಕಾಂಭೋಜಿ.

ಹಿರಿದ ನೋಡಿದೊಡೆ ಅರಿಯುವ ದೃಷ್ಟಿಶಕ್ತಿಯನು
ಹರಿ ಎನಗೆ ನೀಡು ನಿನ್ನನು ಅರಿವರೆ ||ಪಲ್ಲವಿ||

ಆಗಸದ ದುರ್ಗಮದ ಮೇರೆಯನು ಮೀರಿರುವ
ಸಾಗರವ ಅದು ನೆಲವ ಸೋಂಕುವೆಡೆ ನೋಡೆ |
ಸಾಗರವಿದೇನು ನಮ್ಮೂರ ಕೆರೆ ಸ್ವಲ್ಪ ಹಿರಿ
ದಾಗೆ ಇದರಂತೆ ಆಗದೆ ಎನಿಪುದು ||೧||

ಊರ ಕೆರೆಯಿಂದ ಈ ಸಾಗರದ ಹೆಸರಿನದು
ಬೇರೆಯಾಗಿಹುದು ಆರಯಿಸಿ ನೋಡೆ |
ನೀರು ನೆಲವನು ಹಿಡಿದ ತೀರದೆಡೆಯಿಂದಲ್ಲ
ದೂರದಾಂತರ್ಯದಾ ಭರದಿನಲ್ತೇ ||೨||

ಪಿರಿಯರೆಂದೆನಿಸುವರು ದಿನದಿನದಿ ನಡೆಯುತಿಹ
ತೆರನ ನೋಡುತ ಇವರು ಹಿರಿಯರೆಂತು |
ಇರುವರೆಮ್ಮಂತೆಯೇ ಇವರೆನುತೆ ತಿಳಿದು ಮನ
ಅರಿಯದಿಹುದಯ್ಯ ಆ ಪಿರಿಯತನವ ||೩||

ಆರಯಿಸೆ ಹಿರಿದು ಹಿರಿದೆನಿಸುವುದು ದಿನದಿನವು
ತೋರುವಾ ಸಾಮಾನ್ಯ ಚರಿಯೊಳಲ್ಲ |
ದೂರದಾಂತರ್ಯದಾ ಆಳವರಿಯದ ಬಾಳ
ಭಾರದಿಂದಲ್ತೆ ಇದ ಮನದೆ ನೆನೆದು ||೪||

ಶ್ರೀನಿವಾಸ.

---

# ಹಿಂದೂಜನರು ಮತ್ತು ಸಂಸ್ಕೃತ.*

ಯಾವುದಾದರೂ ಒಂದು ಭಾಷೆಯನ್ನೂ ಅದರ ಸಾಹಿತ್ಯವನ್ನೂ ವ್ಯಾಸಂಗ ಮಾಡುವುದು ಏಕೆ?—ಅವುಗಳಲ್ಲಿರುವ ಭಾವಗಳಿಗೋಸ್ಕರವಲ್ಲವೆ? ಆ ಭಾವಗಳಿಂದಾಗುವ ಉಪಯೋಗವೇನು? ಮೊದಲನೆಯದು—ಜ್ಞಾನಾರ್ಜನೆಮಾಡಿ ಬುದ್ಧಿಯ ಮೂಲಕ ಆಂತರಿಕವಾದ ತೃಪ್ತಿ ಆನಂದಗಳನ್ನು ಅನುಭವಿಸುವುದು. ಎರಡನೆಯದು—ಪಾರಲೌಕಿಕ ವಿಚಾರವನ್ನು ಮಾಡಿ ಆಂತರಿಕ ಸುಖಶಾಂತಿಗಳನ್ನು ಪಡೆಯುವುದು. ಮೂರನೆಯದು—ದೇಹಕ್ಕೆ ಬೇಕಾದ ಶಕ್ತಿ ಭುಕ್ತಿಗಳನ್ನು ಸಂಪಾದಿಸುವುದಕ್ಕೆ ಆವಶ್ಯಕವಾದ ಸಾಮರ್ಥ್ಯವನ್ನು ಪಡೆಯುವುದು. ನಾಲ್ಕನೆಯದು—ಜನಾಂಗವು ನಶಿಸದ ಹಾಗೆ ಅದನ್ನು ಸಂರಕ್ಷಣೆ ಮಾಡಿಕೊಂಡು ಬರುವುದು. ಪ್ರತ್ಯೇಕ ವ್ಯಕ್ತಿಗಳು ಎಷ್ಟು ಪೋಷಣೆ ಮಾಡಿಕೊಂಡರೂ ಚಿರಜೀವಿಗಳಾಗಿರಲಾರರೆಂಬುದು ಸ್ಪಷ್ಟವಾಗಿದೆಯಷ್ಟೆ. ಪ್ರತಿಯೊಬ್ಬನೂ ಒಂದೊಂದು ದಿನ ಸಾಯಲೇಬೇಕು. ಆದರೆ ಅಲ್ಲೊಬ್ಬರು ಇಲ್ಲೊಬ್ಬರು ಸಾಯುತ್ತಿದ್ದರೂ ಸಮಷ್ಟಿಯಾದ ಜನಾಂಗವು ಮಾತ್ರ ಹಳೆಯ ಎಲೆಗಳು ಉದುರಿ ಹೊಸ ಎಲೆಗಳು ಚಿಗುರುತ್ತಿರುವ ಮರದಂತೆ ನಿಲ್ಲಬಹುದು. ಹೀಗೆ, ಒಂದು ವ್ಯಕ್ತಿಯು ಹೋದರೆ ಸಮುದಾಯವು ಸಾಯುವುದಿಲ್ಲ. ಸಮುದಾಯವೇ ಹೋದರೆ ವ್ಯಕ್ತಿಯಿರುವುದೆಲ್ಲಿ? ಆದ್ದರಿಂದ ನಮ್ಮ ಜ್ಞಾನವೂ ಭಾವವೂ ಸಮುದಾಯ ಸಂರಕ್ಷಣೆಗೆ ಅನುಕೂಲವಾದಂಥವುಗಳಾಗಿರಬೇಕೆಂಬುದು ಬಹು ಮುಖ್ಯವಾದ ವಿಷಯ. ಸಂಸ್ಕೃತವನ್ನು ಈ ದೃಷ್ಟಿಯಿಂದ ಪರಿಶೀಲಿಸಿ ನೋಡೋಣ. ಸಂಸ್ಕೃತಗ್ರಂಥಗಳಿಂದ ದೇವರು, ಜೀವ, ಪರಲೋಕ ಮುಂತಾದ ಆಧ್ಯಾತ್ಮಿಕ ಸಂಗತಿಗಳ ವಿಚಾರವಾಗಿ ಬಹು ಘನವಾದ ಭಾವಗಳು ತಿಳಿದುಬರುತ್ತವೆ. ಮನಸ್ಸನ್ನು ಸಂತೋಷಪಡಿಸುವ ವಿಚಾರವನ್ನು ತೆಗೆದುಕೊಂಡರೆ, ಸಂಸ್ಕೃತವು ಆಧುನಿಕವಿಜ್ಞಾನತತ್ತ್ವಗಳನ್ನು ತಿಳಿಸಲಾರದಿದ್ದರೂ ಕಲಾಪ್ರಪಂಚದಲ್ಲಿ ನಮ್ಮನ್ನು ಬಹುವಾಗಿ ತೃಪ್ತಿಪಡಿಸಬಲ್ಲುದು. ಇಂಗ್ಲಿಷಿನ ಸಹಾಯವಿಲ್ಲದೆ ಕೇವಲ ಸಂಸ್ಕೃತವೊಂದನ್ನೇ ಅವಲಂಬಿಸಿದರೆ ಅದರಿಂದ ನೆಮ್ಮದಿಯಾಗಿ ಜೀವನವನ್ನು ನಡೆಸಿಕೊಂಡು ಹೋಗುವುದಕ್ಕೆ ಸಹಾಯವಾಗುವುದಿಲ್ಲ............ಇನ್ನು ಉಳಿದದ್ದು ಜನಸಮುದಾಯ ಸಂರಕ್ಷಣೆ. ಈ ವಿಷಯವನ್ನು ಕುರಿತು ಇಲ್ಲಿ ಸ್ವಲ್ಪ ದೀರ್ಘವಾಗಿ ವಿಚಾರಮಾಡೋಣ.........

---

* ಶ್ರೀಮನ್ಮಹಾರಾಜರವರ ಸಂಸ್ಕೃತಪಾಠಶಾಲೆಯ ಪಾರಿತೋಷಕಪ್ರದಾನಸಭೆಯಲ್ಲಿ ಮಾಡಿದ ಉಪನ್ಯಾಸದ ಕೆಲವು ಭಾಗಗಳು.

ಸಂಸ್ಕೃತಭಾಷೆಯಲ್ಲಿ ಅಡಗಿರತಕ್ಕ ಧಾರ್ಮಿಕವಿಷಯಗಳನ್ನು ನಂಬಿ ಅವುಗಳನ್ನು ಅನುಸರಿಸತಕ್ಕವರು ಹಿಂದೂಗಳು. ಮೊದಲು, ಇಂಥವರ ಯೋಗಕ್ಷೇಮವೇನೆಂದು ಸ್ವಲ್ಪ ವಿಚಾರಮಾಡೋಣ. ಕಳೆದ ಐವತ್ತುವರ್ಷಗಳನ್ನು ತೆಗೆದುಕೊಂಡರೆ, ಇಂಡಿಯಾದೇಶದಲ್ಲಿ ಕ್ರೈಸ್ತರು ೧೦೦ ಜನವಿದ್ದಕಡೆ ೭೫೮ ಜನವಾಗಿದ್ದಾರೆ; ಮುಸಲ್ಮಾನರು ೧೦೦ ಜನವಿದ್ದಕಡೆ ೧೩೮ ಆಗಿದ್ದಾರೆ; ಆದರೆ ಹಿಂದೂಜನರು ಮಾತ್ರ ೧೦೦ ಇದ್ದಕಡೆ ೧೧೫ ಮಾತ್ರ ಆಗಿದ್ದಾರೆ. ಈ ಹಿಂದೂಗಳಿಗೆ ದಾರಿಯನ್ನು ತೋರಿಸುತ್ತಿರುವ ಬ್ರಾಹ್ಮಣರೋ ಎಂದರೆ, ಹೆಚ್ಚುವುದಂತೂ ಹೋಗಲಿ, ಇದ್ದಷ್ಟೂ ಇಲ್ಲ; ನೂರು ಜನರಿದ್ದಕಡೆ ೯೪ಕ್ಕೆ ಇಳಿದುಹೋಗಿದ್ದಾರೆ.

ಒಟ್ಟು ಜನಸಂಖ್ಯೆಯನ್ನು ತೆಗೆದುಕೊಂಡರೆ, ಇತರ ಪಂಗಡದವರು ನೂರರಂತೆ ಹೆಚ್ಚುತ್ತಿರುವಾಗ ಹಿಂದೂಗಳು ಸರಾಸರಿಗೆ ಶೇಕಡ ಹತ್ತರಂತೆಯೂ ಬ್ರಾಹ್ಮಣರು ಶೇಕಡ ೩೨ ರಂತೆಯೂ ಕಡಿಮೆಯಾಗಿದ್ದಾರೆ. ಹೀಗೆ ಸಂಸ್ಕೃತಭಾಷಾಸಾಹಿತ್ಯಗಳಿಗೆ ಮುಖ್ಯಾವಲಂಬನವಾಗಿರುವ ಬ್ರಾಹ್ಮಣರ ಸಂಖ್ಯೆಯು ವರ್ಷವರ್ಷಕ್ಕೆ ಕಡಿಮೆಯಾಗುತ್ತ ಬಂದು ಈ ಐವತ್ತು ವರ್ಷಗಳಿಂದೀಚೆಗೆ ಸುಮಾರು ಹತ್ತುಲಕ್ಷ ಕಡಿಮೆಯಾಗಿಹೋಗಿದೆ. ಈ ರೀತಿ ಕ್ಷಯಿಸುತ್ತಿರುವುದು ಬ್ರಾಹ್ಮಣಜನ ಮಾತ್ರವೇ ಅಲ್ಲ, ಹಿಂದೂಜನಸಮುದಾಯವೇ ಕ್ರಮಕ್ರಮವಾಗಿ ನಷ್ಟವಾಗುತ್ತ ಬರುತ್ತಿದೆ. .........ಈಗ ಐವತ್ತು ಅರವತ್ತು ವರ್ಷಗಳ ಕೆಳಗೆ ಇಂಡಿಯಾದೇಶದ ಒಂದಾನೊಂದು ಸಂಸ್ಥಾನದಲ್ಲಿ ಶೇಕಡ ಅರವತ್ತಕ್ಕಿಂತಲೂ ಹೆಚ್ಚಾಗಿ ಹಿಂದೂಜನರಿದ್ದರು. ಅಲ್ಲಿ ಈಗ ಅವರು ೪೫ಕ್ಕೆ ಇಳಿದುಹೋಗಿದ್ದಾರೆ. ಇನ್ನೊಂದು ನೂರು ವರ್ಷ ಎನ್ನುವುದರೊಳಗೆ ಅಲ್ಲಿ ಅವರು ಗಣನೆಗೆ ಬಾರದಷ್ಟು ಸ್ವಲ್ಪವಾಗಬಹುದು; ಅಥವಾ ಹೆಸರಿಗೆ ಒಬ್ಬನೂ ಇಲ್ಲದಂತೆ ಹೋದರೂ ಹೋಗಬಹುದು. ಗಾಂಧಾರದೇಶವೂ (ಎಂದರೆ ಈಗಿನ ಆಫ್ಘಾನಿಸ್ಥಾನವೂ) ಜಾವಾದ್ವೀಪವೂ ಒಂದಾನೊಂದು ಕಾಲದಲ್ಲಿ ಪೂರ್ತಿಯಾಗಿ ಹಿಂದೂಪ್ರಾಂತಗಳಾಗಿದ್ದುವು. ಈಗ ಅಲ್ಲಿ ಸ್ಥಳೀಕನಾದ ಹಿಂದೂವನ್ನು ಹುಡುಕಿದರೂ ಸಿಕ್ಕುವುದಿಲ್ಲ. ಶ್ರಾದ್ಧಾದಿಗಳನ್ನು ಮಾಡುವುದಕ್ಕೆ ಪ್ರತಿಯೊಬ್ಬನೂ ಪುತ್ರನನ್ನು ಪಡೆಯಲೇಬೇಕೆಂದು ಎಷ್ಟೋ ದೂರದರ್ಶಿಗಳಾದ ಋಷಿಗಳು ನಮ್ಮ ಮತಕ್ಕೆ ಒಂದು ವಿಶೇಷ ಧರ್ಮವಾಗಿ ವಿಧಿಸಿದ್ದರೂ ನಮ್ಮ ಸ್ಥಿತಿಯು ಹೀಗಾಗಿದೆ. ಕಾಲಗತಿಗಳು ಬದಲಾಯಿಸಿದ ಮಾತ್ರಕ್ಕೇ ನಾವು ಬಾಳಲಾರದವರಾಗಿದ್ದೇವೆಂಬುದು ಕೇವಲ ಶೋಚನೀಯವಲ್ಲವೇ ? ಅಲ್ಲಿ ಒಬ್ಬ ಹಿಂದುವೂ ಇಲ್ಲಿ ಒಬ್ಬ ಹಿಂದುವೂ ಅಭಿವೃದ್ಧಿಸ್ಥಿತಿಯಲ್ಲಿದ್ದಾನೆಯೆಂದುಕೊಂಡು ಹಿಂದೂ ಜನಸಮುದಾಯವೇ ಅಭಿವೃದ್ಧಿಸ್ಥಿತಿಯಲ್ಲಿದೆ ಎಂದು ತಿಳಿದುಕೊಳ್ಳುವುದು ಬರಿಯ ಭ್ರಾಂತಿ ! ಜನಾಂಗವೇ

ನಿರ್ನಾಮವಾಗಿಬಿಟ್ಟರೆ, ಆ ಒಬ್ಬಿಬ್ಬರನ್ನು ತಾನೇ ಮುಂದೆ ಎಲ್ಲಿ ತರಬೇಕು ? ಅವರ ಮಕ್ಕಳನ್ನೆಲ್ಲಿ ತರಬೇಕು ?............

**ಭಾಷೆ, ಜ್ಞಾನ, ಪ್ರಾಣ.**

ವೇದ ಪುರಾಣಾದಿ ಇತಿಹಾಸಗಳನ್ನೂ ಶಿಲ್ಪಸಾಹಿತ್ಯಗಳನ್ನೂ ನೋಡಿದರೆ ಪೂರ್ವದಲ್ಲಿ, ಹಿಂದೂಜನರು ನೂರಾರು ವರ್ಷ ಒಂದೇ ಸಮನಾಗಿ ಅಭಿವೃದ್ಧಿ ಹೊಂದುತ್ತ ಬಂದರೆಂದು ತಿಳಿಯುತ್ತದೆ. ಆಗ ಅವರ ಬೆಳೆವಣಿಗೆಯು ನಾನಾ ಮುಖದಲ್ಲಿಯೂ ಸ್ಪಷ್ಟವಾಗಿ ಕಂಡುಬರುತ್ತಿತ್ತು. ಅವರು ತಮಗೆ ದುರ್ದಶೆ ಪ್ರಾಪ್ತವಾದಾಗ ಅದನ್ನು ಈ ಸಂಸ್ಕೃತಜ್ಞಾನ ಬಲದಿಂದಲೇ ಎದುರಿಸಿ, ಎಷ್ಟೋ ಸಾಮರ್ಥ್ಯದಿಂದ ಕಾದಿ ಜಯಶೀಲರಾದರು. ಇದು ಆದದ್ದು ಹೇಗೆ ?

ಈ ವಿಚಾರದಲ್ಲಿ ಎರಡು ವಿಷಯಗಳನ್ನು ಜ್ಞಾಪಕದಲ್ಲಿಟ್ಟಿರಬೇಕು. ಅವು ಯಾವುವೆಂದರೆ :—ಭಾಷೆ ಮತ್ತು ತದನುಸಾರವಾದ ಭಾವ ಅಥವಾ ಜ್ಞಾನ. ಮೊದಲು ಭಾಷೆಯನ್ನು ತೆಗೆದುಕೊಳ್ಳೋಣ. ಈಗ ನಮಗೆ ಪರಿಚಿತವಾಗಿರುವ ಸಂಸ್ಕೃತವನ್ನು ಸರ್ವಸಾಮಾನ್ಯವಾಗಿ ಜನರು ಮಾತನಾಡುತ್ತಿದ್ದದ್ದು ಸಾವಿರಾರು ವರ್ಷಗಳ ಕೆಳಗೇ ನಿಂತುಹೋಗಿ, ಅದು ಕೇವಲ ವಿದ್ವಾಂಸರ ವ್ಯವಹಾರದಲ್ಲಿ ಮಾತ್ರ ಉಳಿದಂತೆ ತೋರುತ್ತದೆ. ಆದ್ದರಿಂದ ಸಂಸ್ಕೃತವು ಎಲ್ಲೆಲ್ಲಿ ಉಪಯೋಗದಲ್ಲಿತ್ತೋ ಅಲ್ಲೆಲ್ಲಾ ಅದರ ಜೊತೆಗೆ ವ್ಯವಹಾರಕ್ಕೋಸ್ಕರ ಮತ್ತೊಂದು 'ಭಾಷೆ' ಇರುತ್ತಿತ್ತು. ಈ ಎರಡನೆಯ ಭಾಷೆಯು ಒಂದುಕಡೆ ಪಾಳಿಯೋ, ಮಾಗಧಿಯೋ, ಬಂಗಾಳಿಯೋ ಆಗಿರಬಹುದು ; ಮತ್ತೊಂದುಕಡೆ ಪಾರ್ಶಿಯೋ ತಮಿಳೋ ತೆಲುಗೋ ಕನ್ನಡವೋ ಆಗಿರಬಹುದು. ಇವತ್ತು ಇಂಗ್ಲಿಷ್ ಆದರೆ ನಾಳೆ ಫ್ರೆಂಚೋ ಉರ್ದುವೋ ಆಗಬಹುದು. ಅಂತು ಸಂಸ್ಕೃತವು ಹೋದ ಕಡೆಯಲ್ಲೆಲ್ಲಾ ಲೌಕಿಕ ವ್ಯವಹಾರಗಳಿಗೋಸ್ಕರ ಬೇರೊಂದು ಭಾಷೆಯನ್ನು ಉಪಯೋಗಿಸಿಕೊಂಡ ಹಾಗೆ ಕಾಣುತ್ತದೆ. ಈ ಭಾಷೆಗಳು ಬದಲಾಯಿಸುತ್ತಿದ್ದರೂ ಸಂಸ್ಕೃತವು ಮಾತ್ರ ತಾನು ಹೋದಕಡೆಯಲ್ಲೆಲ್ಲಾ ಸಾಮಾನ್ಯಧರ್ಮವಾಗಿಯೂ ಸ್ಥಾಯಿಯಾಗಿಯೂ ನಿಂತು ಮಿಕ್ಕ ಭಾಷೆಗಳಿಗೆ ತನ್ನ "ಸಂಸ್ಕೃತಿ"ಯನ್ನು ಕೊಟ್ಟು ಅವುಗಳನ್ನು ಬೆಳೆಯುವ ಹಾಗೆ ಮಾಡಿ ನಾನಾ ವಿಧಗಳಲ್ಲಿ ರೂಪುಗೊಳಿಸಿದಂತೆ ತೋರುತ್ತದೆ. ಹೀಗೆ ಇವೆರಡೂ ಪರಸ್ಪರ ಸಹಾಯಕಗಳಾಗಿ ಪರಿಣಮಿಸಿದುವು. ಸಂಸ್ಕೃತದ ಬೆಂಬಲವಿಲ್ಲದೆ ಇಂಡಿಯಾದೇಶದ ಯಾವ ಭಾಷೆಯೂ ತನ್ನಷ್ಟಕ್ಕೆ ತಾನೇ ಪೂರ್ತಿಯಾದ ಬೆಳೆವಣಿಗೆಯನ್ನು ಹೊಂದಿ ಜನಸಾಮಾನ್ಯದಲ್ಲಿ ಉದಾತ್ತಭಾವಗಳನ್ನು ಪ್ರಸರಿಸಲು ಸಮರ್ಥವಾಗಿಲ್ಲ. ಬಂಗಾಳಿಯು ಈಚೆಗೆ ಬಹಳ ಅಭಿವೃದ್ಧಿಗೆ ಬಂದಿದೆಯೆಷ್ಟೆ ; ಇದಕ್ಕೆ

ಐವತ್ತು ವರ್ಷ ಒಂದೇ ಸಮನಾಗಿ ಕಲ್ಕತ್ತ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತವನ್ನು ನಿರ್ಬಂಧದಿಂದ ವ್ಯಾಸಂಗಮಾಡಬೇಕಾಗಿದ್ದದ್ದು ಬಹುಮಟ್ಟಿಗೆ ಕಾರಣವಾಗಿದೆ. ಬಂಗಾಳಿಗೆ ಪುನರ್ಜೀವವನ್ನು ಕೊಟ್ಟದ್ದು ಸಂಸ್ಕೃತ; ಕನ್ನಡವೂ ಬಂಗಾಳಿಯಂತೆ ಮುಂದುವರಿಯದೇ ಇರುವುದಕ್ಕೆ, ಈಚೆಗೆ ಕನ್ನಡ ಸಂಸ್ಕೃತಗಳು ಒಂದರ ಮುಖವನ್ನು ಮತ್ತೊಂದು ನೋಡದಂತಾಗಿರುವುದೇ ಕಾರಣ. ಸಂಸ್ಕೃತವು ಪ್ರಸರಿಸಿರುವ ಕಡೆಗಳಲ್ಲೆಲ್ಲಾ ಅದು ದೇಶಭಾಷೆಗಳನ್ನು ಅನುಗ್ರಹಿಸಿ ಪುಷ್ಟವಾಗಿ ಮಾಡಿದೆಯೇ ಹೊರತು ಯಾವುದನ್ನೂ ಕೊಂದಿರುವುದಿಲ್ಲ. ಮತ್ತೊಂದು ಸಂಗತಿ ಏನೆಂದರೆ, ಇಂಡಿಯಾದೇಶದ ಯಾವಯಾವ ಪ್ರದೇಶಗಳಲ್ಲಿ ಜನಸಾಮಾನ್ಯರು ಸಂಸ್ಕೃತವನ್ನು ಓದಿರುತ್ತಾರೋ ಅಲ್ಲೆಲ್ಲಾ ಹಿಂದೂಜಾತಿ ಭೇದಗಳಿದ್ದರೂ ಆಯಾ ಪಂಗಡಗಳಿಗೆ ಪರಸ್ಪರ ವೈಷಮ್ಯವು ಬಹಳ ಕಡಿಮೆಯಾಗಿದೆ. ಉಚ್ಚಭಾವಗಳು ಎಲ್ಲರಿಗೂ ಒಂದೇ ಆದ್ದರಿಂದ ಅವರು ತಮ್ಮೊಳಗಣ ಪರಸ್ಪರ ಭೇದವನ್ನು ಬಹುಮಟ್ಟಿಗೆ ಮರೆಯಲು ಅವಕಾಶವಾಗಿದೆ. ಹೀಗೆ ಸಂಸ್ಕೃತವು ಒಂದು ವಿಧದಲ್ಲಿ ಪರಸ್ಪರ ಅನ್ಯೋನ್ಯತೆಗೆ ಸಹಕಾರಿಯಾಗಿದೆ.

ಈಗ, ಭರತಖಂಡದ ಐಕಮತ್ಯಸಂಪಾದನೆಯು ನಮ್ಮ ದೇಶದಲ್ಲಿ ಎಲ್ಲರ ಮನಸ್ಸನ್ನೂ ವೇಧಿಸುತ್ತಿರುವ ಮುಖ್ಯವಿಚಾರಗಳಲ್ಲಿ ಒಂದು. ಹಿಂದೂ ಸಮಾಜದಲ್ಲಿರುವ ಐಕಮತ್ಯಾಭಾವವೆಂಬ ಈ ದೊಡ್ಡ ನ್ಯೂನತೆಯು ಈಗತಾನೇ ನಮ್ಮ ಮನಸ್ಸಿಗೆ ಗೋಚರವಾಗಿದೆಯೆಂದು ಕೆಲವರು ಹೇಳುತ್ತಾರೆ. ಆದರೆ ವಸ್ತುತಃ, ಸಾವಿರಾರುವರ್ಷಗಳಹಿಂದೆಯೇ ಸಂಸ್ಕೃತವು ಈ ಏಕೀಕರಣ ಕಾರ್ಯವನ್ನು ಆರಂಭಿಸಿ ಅಂದಿನಿಂದಲೂ ನಡೆಸಿಕೊಂಡೇ ಬರುತ್ತಿದೆ. ಅದು ಹೇಗೆಂದರೆ:—ಹಿಂದೆ ಹೇಳಿದಂತೆ ಸಂಸ್ಕೃತದ ಬೆಂಬಲದಿಂದ ನೂರಾರು ದೇಶಭಾಷೆಗಳು ಪುಷ್ಟವಾಗಿವೆ. ಇಂಡಿಯಾ ದೇಶದಲ್ಲಿರತಕ್ಕ ಇಪ್ಪತ್ತೆಂಟುಕೋಟಿ ಹಿಂದೂ ಜನರಲ್ಲಿ, ಇಪ್ಪತ್ತಾರುಕೋಟಿಯಷ್ಟು ಪ್ರಜೆಗಳು ಸಂಸ್ಕೃತದಿಂದ ಉತ್ಪನ್ನವಾದ ಅಥವಾ ಸಂಸ್ಕೃತದಿಂದ ಉಪಕೃತವಾದ ಭಾಷೆಯನ್ನು ಆಡುತ್ತಿದ್ದಾರೆ. ಇದು ಏಕೀಕರಣಕಾರ್ಯವಲ್ಲವೇ ? ಈಗ ಈ ಅಂಶದಲ್ಲಿ ಫಲಪ್ರಾಪ್ತಿಯು ಬೇಗ ಆಗಬೇಕೆಂದಿದ್ದರೆ ಸಂಸ್ಕೃತವು ನಮಗೆ ಸಾವಿರಾರು ವರ್ಷಗಳಿಂದ ಕಲ್ಪಿಸಿಕೊಟ್ಟಿರುವ ಅನುಕೂಲ್ಯಗಳನ್ನೆಲ್ಲಾ ಒಗೆದುಬಿಟ್ಟರೆ ನಾವು ವಿವೇಕಿಗಳಾಗುವೆವೇ ? ಹೀಗಿದ್ದರೂ, ಸಂಸ್ಕೃತದಿಂದ ಅಭಿವೃದ್ಧಿಗೆ ಬಂದಿರುವ ದೇಶಭಾಷೆಗಳೇ "ಸಂಸ್ಕೃತವನ್ನು ತಳ್ಳಿ! ದೇಶವನ್ನು ಹೋಳುಹೋಳುಮಾಡಿ ಒಬ್ಬರ ಗುರುತು ಮತ್ತೊಬ್ಬರಿಗೆ ಹತ್ತದಂತೆ, ಆದಷ್ಟು ಜಾಗ್ರತೆಯಾಗಿ ಆದಷ್ಟು ಎತ್ತರವಾದ ದೇಶಭಾಷೆಗಳೆಂಬ ಗೋಡೆಗಳನ್ನು ಹಾಕಿಬಿಡೋಣ" ಎಂದು ಕೂಗಿ

ಕೊಳ್ಳುತ್ತಿವೆ. ಪ್ರಾಯಶಃ ಇನ್ನುಮೇಲೆ, "ಕೂಡಿದ್ದರೆ ಕೆಡುತ್ತೇವೆ, ಬೇರೆಬೇರೆಯಾಗಿದ್ದರೆ ಬದುಕುತ್ತೇವೆ" ಎಂಬುದು ನಮಗೆ ಮೂಲಮಂತ್ರವಾಗುತ್ತದೆಯೆಂದು ತೋರುತ್ತದೆ. ಹಿಂದೆ ಪಾರ್ಶಿ ಮಾತನ್ನು ಆಡುತ್ತಿದ್ದ ಪಾರ್ಶಿಜನರು ಆ ಭಾಷೆಯನ್ನು ಬಿಟ್ಟು ಅದಕ್ಕೆ ಬದಲಾಗಿ ಸಾಂಸ್ಕೃತಿಕ ಭಾಷೆಯಾದ ಗುಜರಾತಿಯನ್ನು ಮಾತೃಭಾಷೆಯಾಗಿ ಹಿಡಿದದ್ದರಿಂದ ಅವರು ನಮ್ಮವರಾದರು. ಇಂಥ ಕಾರ್ಯಗಳಿಂದ, ಹಿಂದೆ ಹೇಳಿದಂತೆ, ಜನರಲ್ಲಿ ಐಕಮತ್ಯವುಂಟಾಗಿ ಸಮಾಜಕ್ಕೆ ದಾರ್ಢ್ಯವು ಬಂದು, ಸಮುದಾಯಸಂರಕ್ಷಣೆಯಾಗುತ್ತದೆ. ಅವರವರ ಮಾತೃಭಾಷೆಯು ಅವರವರಿಗೆ ಮಹೋಪಯುಕ್ತವಾಗಿದ್ದು ತಮ್ಮಲ್ಲಿ ಒಕ್ಕಟ್ಟಿಗೆ ಕಾರಣವಾಗುತ್ತದೆಂಬುದೇನೋ ನಿಜ. ಆದರೆ ಹಿಂದೂಜನ ಜೀವನವನ್ನು ಒಟ್ಟಿಗೆ ತೆಗೆದುಕೊಂಡರೆ ಸಂಸ್ಕೃತವೂ ಮಾತೃಭಾಷೆಯಷ್ಟೇ ಮುಖ್ಯವಾಗಿದ್ದು ಅದೂ ಒಂದುವಿಧದಲ್ಲಿ ಐಕಮತ್ಯಕ್ಕೆ ಸಾಧಕವಾಗಿದೆಯೆಂಬುದೂ ನಿಜ. ಸಂಸ್ಕೃತಕ್ಕೂ ಕನ್ನಡಕ್ಕೂ ಸಹವಾಸವು ತಪ್ಪಿದರೆ ಅದು ದುರ್ದೈವವೇ ಸರಿ; ಹಾಗಲ್ಲದೆ ಅನ್ಯೋನ್ಯವಾಗಿ ಹೋಗುತ್ತಿದ್ದರೆ ಅದು ಶ್ರೇಯಸ್ಕರವೆಂಬುದರಲ್ಲಿ ಸಂದೇಹವಿಲ್ಲ.

ಈಗ ಸಂಸ್ಕೃತಭಾಷಾ ವಿಚಾರವನ್ನು ಬಿಟ್ಟು ಸಾಂಸ್ಕೃತಿಕಭಾವ ಅಥವಾ ಜ್ಞಾನವನ್ನು ತೆಗೆದುಕೊಂಡು, ಅದು ಹಿಂದೆ ತಲೆತಲಾಂತರದವರೆಗೂ ಸಜೀವವಾಗಿದ್ದು ಬೆಳೆದುಕೊಂಡು ಬಂದದ್ದು ಹೇಗೆ ಎಂಬುದನ್ನು ಯೋಚಿಸೋಣ :—

ಯಾವುದಾದರೂ ಒಂದು ಭಾಷೆಯಾಗಲಿ ಸಾಹಿತ್ಯವಾಗಲಿ ಬದುಕಿರುವುದರ ಲಕ್ಷಣಗಳೇನು? ಒಂದು ಗಿಡ ಅಥವಾ ಪ್ರಾಣಿಯು ಬೆಳೆಯುತ್ತಲೋ ಅಥವಾ ಹೆಚ್ಚುತ್ತಲೋ ಇದ್ದರೆ ಅದು 'ಬದುಕಿದೆ' ಎಂದು ಹೇಳುತ್ತೇವೆ. ಬೆಳೆಯುವುದಕ್ಕೆ ಬೇಕಾದ ಆಹಾರಪದಾರ್ಥಗಳನ್ನು ತೆಗೆದುಕೊಳ್ಳುತ್ತಿದ್ದು ಅವುಗಳನ್ನು ಜೀರ್ಣಿಸಿಕೊಳ್ಳುತ್ತಿದ್ದರೆ ಅದೂ ಜೀವವಿರುವುದರ ಚಿಹ್ನೆ. ಈ ಕಾರ್ಯಗಳು ನಿಂತು ಹೋದರೆ, ಆಗ ಮೃತಿಲಕ್ಷಣಗಳಿವೆಯೆಂದು ಹೇಳುತ್ತೇವೆ. ಆಹಾರಸಾಮಗ್ರಿಯೆಂದರೆ ಹೊರಗಿರುವ ಅನುಕೂಲವಾದ ಪದಾರ್ಥವಿಶೇಷ; ಜೀರ್ಣಿಸಿಕೊಳ್ಳುವುದೆಂದರೆ ಇಂಥ ಹೊರಗಿನ ಪದಾರ್ಥಗಳನ್ನು ಸ್ವದೇಹಸಾಮಗ್ರಿಯಾಗಿ ತಿರುಗಿಸಿಕೊಳ್ಳುವಿಕೆ. ಹಾಗೆಯೇ ಒಂದು ಭಾಷೆಯೋ ಸಾಹಿತ್ಯವೋ ವಿದ್ಯೆಯೋ ಬೆಳೆಯುತ್ತಿರುವವರೆಗೆ—ಎಂದರೆ, ತನ್ನಲ್ಲಿರುವ ಭಾವಗಳಲ್ಲದೆ ಬೇರೆ ಹೊಸ ಭಾವಗಳನ್ನು ತೆಗೆದುಕೊಳ್ಳುತ್ತಿದ್ದು ಅವುಗಳನ್ನು ಅರಗಿಸಿಕೊಂಡು ಭಾವಾಂತರಗಳನ್ನು ತೋರ್ಪಡಿಸುತ್ತಿರುವವರೆಗೆ—'ಬದುಕಿರುತ್ತದೆ' ಎಂದು ಹೇಳಬಹುದು. ಈ ವಿಧವಾದ ಬೆಳವಣಿಗೆಯು—ಜೀವಚಿಹ್ನೆಯು—ಪ್ರಾಚೀನ ಸಂಸ್ಕೃತಜ್ಞಾನಕ್ಕೆ ಒಂದು ವಿಶೇಷ ಲಕ್ಷಣ.

ಅದು ಬಾಹ್ಯಜಗತ್ತಿನಿಂದಲೂ, ತಮ್ಮ ಪ್ರತಿಪಕ್ಷದವರ ಭಾವಗಳಿಂದಲೂ ಆಹಾರ ಸಾಮುಗ್ರಿಯನ್ನು ತೆಗೆದುಕೊಳ್ಳುತ್ತಿತ್ತು. ಕಪಿಲರೇ ಆಗಲಿ ಗೌತಮರೇ ಆಗಲಿ, ಶಂಕರಾಚಾರ್ಯರೇ ಆಗಲಿ ರಾಮಾನುಜಾಚಾರ್ಯರೇ ಆಗಲಿ, ಹೊಸ ಭಾವಗಳು ಇಲ್ಲದೆ ಹೋಗಿದ್ದು ಮತಾಂತರ ವಿಷಯಗಳನ್ನು ಚರ್ಚಿಸದೆ ಇದ್ದಿದ್ದರೆ ಅವರು ಬರೆದಿರುವ ಉದ್ಗ್ರಂಥಗಳನ್ನು ಬರೆಯುವುದಕ್ಕೆ ಅವರಿಗೆ ಅವಲಂಬನವಿಷಯವೇ ಇರುತ್ತಿರಲಿಲ್ಲ. ಅವರು ತಮ್ಮ ಮೇಲೆ ಎದುರುವಾದಿಸಿದವರನ್ನು ಖಂಡಿಸುವುದಕ್ಕೆ ಅನೇಕ ವೇಳೆ ಪ್ರಾಚೀನಾಭಿಪ್ರಾಯಗಳನ್ನು ತ್ಯಜಿಸಿ ನವೀನಾಭಿಪ್ರಾಯಗಳನ್ನು ಅವಲಂಬಿಸಬೇಕಾಯಿತು. ಪ್ರಾಚೀನಕಾಲದ ಹಿಂದೂಜನರು ಸ್ವದೇಶದಲ್ಲಿ ತಮ್ಮ ಬುದ್ಧಿಗೆ ವಿಷಯಸಾಮುಗ್ರಿ ಸಿಕ್ಕದಿದ್ದರೆ ಪರದೇಶದಿಂದ ಜ್ಞಾನಸಂಗ್ರಹ ಮಾಡುವುದಕ್ಕೆ ಹಿಂದೆಗೆಯುತ್ತಿರಲಿಲ್ಲ. ವರಾಹಮಿಹಿರಾಚಾರ್ಯರು ಇದಕ್ಕೆ ಒಂದು ಉದಾಹರಣೆ; ಅವರು ಗ್ರೀಕರ ಮತ್ತು ರೋಮನರ ಭಾವಗಳನ್ನು ತೆಗೆದುಕೊಂಡಿದ್ದಾರೆ. ಶ್ರೀಮರ್ ಮಧ್ವಾಚಾರ್ಯರು ಅರಬ್ಬಿಯವರ ದರ್ಶನಗಳನ್ನೂ ಸಹ ತಿಳಿದುಕೊಂಡಿದ್ದರೆಂದು ಕೆಲವು ವಿದ್ವಾಂಸರು ಹೇಳುತ್ತಾರೆ. ಮಹಾಭಾರತ ಮುಂತಾದ ಗ್ರಂಥಗಳಿಂದ ತಿಳಿದುಬರುವಂತೆ, ಹಿಂದೂಜನರು ದೇಶಾಂತರಗಳಲ್ಲಿ ಬಹುದೂರ ಸಂಚಾರ ಮಾಡಿ ಹೊಸ ವಿಷಯಗಳನ್ನು ಸಂಗ್ರಹಮಾಡಿದರು. ಹೀಗೆ ಸಂತತವಾಗಿ ವಿಷಯ ಸಂಪಾದನೆ ಇದ್ದದ್ದರಿಂದ ಸಂತತವಾಗಿ ಬುದ್ಧಿಯೂ ಕೆಲಸಮಾಡಬೇಕಾಗಿ ಬಂತು; ಅದರಿಂದ ನಮ್ಮ ಪ್ರಾಚೀನ ಸಂಸ್ಕೃತವಿದ್ಯೆಯಲ್ಲಿ ಬೆಳೆವಣಿಗೆಯ ಚಿಹ್ನೆಗಳೂ ಜೀವಕಳೆಯೂ ತುಂಬಿದ್ದುವು. ಅದರಂತೆಯೇ ಈಗಿನಕಾಲದಲ್ಲಿ ಈ ಸಂಸ್ಕೃತವಿದ್ಯೆಯು ಯಾವ ಯಾವ ರೀತಿಯಲ್ಲಿ ತನ್ನ ಸಜೀವತೆಯ ಲಕ್ಷಣಗಳನ್ನು ತೋರ್ಪಡಿಸಿದೆ? ಅದು ಬೆಳೆಯುತ್ತಿದ್ದರೆ ಅದರ ಅಂಕುರಗಳಾವುವು? ಆಹಾರಸಾಮುಗ್ರಿಯನ್ನು ತೆಗೆದುಕೊಂಡು ಅರಗಿಸಿಕೊಳ್ಳುತ್ತಿದ್ದರೆ ಆಧುನಿಕಪ್ರಪಂಚದಿಂದ ಅದು ತೆಗೆದುಕೊಂಡಿರುವ ಭಾವಗಳು ಯಾವುವು? ಎಲ್ಲೆಲ್ಲಿ ನೋಡಿದರೂ, ಕಾಲಿಫ್ ಓಮರನ ಹೇಳಿಕೆಯಂಥ ನೀರಸವಾದ ತರ್ಕದಿಂದ 'ಇರುವುದರಲ್ಲಿಯೇ ಎಲ್ಲಾ ಇದೆ' ಎಂದು ಸಮರ್ಥಿಸುವುದೇ ಕಂಡುಬರುತ್ತಿದೆ. "ಹೊಸದಾಗಿ ಹೇಳುವುದು ಏನೂ ಇಲ್ಲ, ಹೇಳಬೇಕಾದದ್ದೆಲ್ಲವೂ ಹೇಳಿಯಾಗಿ ಹೋಗಿದೆ" ಎಂಬ ಭಾವವೇ ಹೆಚ್ಚಾಗಿದೆ. ಆದರೆ ಭಾರತೀಯರು ಯಾವ ಯಾವ ಶಾಸ್ತ್ರಗಳಲ್ಲಿ ಇತರರಿಗಿಂತಲೂ ಗಟ್ಟಿಗರೆನಿಸಿಕೊಂಡಿದ್ದರೋ ಆ ಶಾಸ್ತ್ರಗಳನ್ನೇ ತೆಗೆದುಕೊಂಡರೂ, ಅವುಗಳಲ್ಲಿಯೂ ಹೊಸವಿಚಾರಕ್ಕೆ ನಿಜವಾಗಿ ಅವಕಾಶವಿಲ್ಲವೇ? ಸಂಸ್ಕೃತವೊಂದನ್ನೇ ವ್ಯಾಸಂಗಮಾಡಿದವರಿಗೆ ಅಂಥ ವಿಚಾರದ ಆವಶ್ಯಕತೆಯಿಲ್ಲವೆಂದು ತೋರಿದರೂ ಇತರ ಭಾಷಾಗ್ರಂಥಗಳನ್ನು ವ್ಯಾಸಂಗ

ಮಾಡಿದ ಆಧುನಿಕರಿಗೆ ಸಾಂಸ್ಕೃತಿಕರ ಭಾವಗಳಲ್ಲಿ ನಾನಾ ವಿಧವಾದ ಸಂದೇಹಗಳು ಹುಟ್ಟಿ ಅವುಗಳ ನಿವಾರಣೆಗಾಗಿ ವಿಚಾರವು ಆವಶ್ಯಕವೆನ್ನಿಸುತ್ತದೆ......

ಹಿಂದೂ ಜನರು ಪ್ರಾಚೀನಕಾಲದಲ್ಲಿ ಎಷ್ಟೋ ಇತಿಹಾಸಗ್ರಂಥಗಳನ್ನು ಬರೆದರು; ಆದರೆ ನಮ್ಮವರು ಈಗ ಸುಮಾರು ೫೦೦ ವರ್ಷಗಳಿಂದ ಅಂಥ ಒಂದು ಗ್ರಂಥವನ್ನೂ ಬರೆದಿರುವಹಾಗೆ ತೋರುವುದಿಲ್ಲ. ಈಚೀಚೆಗೆ ಬರೆದ ಭಾಷಾಂತರಗಳೇನೋ ಇವೆ; ಅವಿರಲಿ. ಅವಲ್ಲದೆ ಮೇಲೆಹೇಳಿದ ಕಾಲದಲ್ಲಿ ನಡೆದ ಸಂಗತಿಗಳನ್ನು ಚರಿತ್ರರೂಪವಾಗಿ ತಿಳಿಸತಕ್ಕ ಗ್ರಂಥಗಳೆಷ್ಟಿವೆ? ಇಲ್ಲವೇ ಇಲ್ಲವೆಂದು ಹೇಳಿದರೂ ಹೇಳಬಹುದು; ಆದ್ದರಿಂದಲೇ ನಡೆದ ಸಂಗತಿಗಳನ್ನೂ ಅವುಗಳ ಕಾಲವನ್ನೂ ಯಥಾವತ್ತಾಗಿ ನಿರೂಪಿಸುವ ಶಕ್ತಿಯೇ ನಮ್ಮಲ್ಲಿ ನಷ್ಟವಾಗಿಬಿಟ್ಟಿದೆಯೆಂದೂ ಕಥಾಪ್ರಪಂಚದಲ್ಲಿಯೇ ನಮಗೆ ಆಶೆಯೆಂದೂ ಕೆಲವರು ಹೇಳುತ್ತಾರೆ. ವಸ್ತುತಃ, 'ಮಿಕ್ಕ ಜನಾಂಗದವರು ಸೌಭಾಗ್ಯವನ್ನು ಪಡೆದದ್ದು ಯಾವಕ್ರಮಗಳಿಂದ? ನಮ್ಮಲ್ಲಿರುವ ಯಾವ ಲೋಪಗಳಿಂದ ನಾವು ಹೀಗಾಗಿದ್ದೇವೆ' ಎಂಬುದನ್ನು ನಾವು ವಿಚಾರಮಾಡಿದ್ದೇವೆಯೇ? ನಮ್ಮ ಪ್ರಾಚೀನ ಸಾಹಿತ್ಯವನ್ನು ನೋಡಿದರೆ, ಅದರಲ್ಲಿ ಅರ್ಥಶಾಸ್ತ್ರದಮೇಲೂ ರಾಜ್ಯಶಾಸ್ತ್ರದಮೇಲೂ ದೊಡ್ಡದೊಡ್ಡ ಗ್ರಂಥಗಳು ಕಂಡುಬರುತ್ತವೆ. ಆದರೆ, "ಹಿಂದೂಜನರಲ್ಲಿ ಪ್ರತಿಯೊಬ್ಬನೂ ಅವನವನಮಟ್ಟಿಗೆ ಅವನವನ ಧರ್ಮವನ್ನು ಅನುಸರಿಸಿಕೊಂಡು ಹೋಗುವುದನ್ನು ಚೆನ್ನಾಗಿ ತಿಳಿದುಕೊಂಡಿದ್ದಾನೆ; ಆದರೆ ಹತ್ತುಜನರಲ್ಲಿ ಇರುವಾಗ ಸಮುದಾಯಕ್ಕೋಸ್ಕರ ನಡೆದುಕೊಳ್ಳಬೇಕಾದ ತನ್ನ ಪೌರ, ಸಾಮಾಜಿಕ ಮತ್ತು ದೇಶೀಯ ನಡೆವಳಿಕೆ ಹೇಗಿರಬೇಕು ಎಂಬುದನ್ನೇ ಅವರು ಅರಿಯರು. ಅಷ್ಟೇಕೆ, National, Social, ಅಥವಾ Civic ಎಂಬ ಮಾತುಗಳಿಂದ ಆಧುನಿಕರಿಗೆ ಎಷ್ಟು ಅರ್ಥವಾಗುತ್ತದೆಯೋ ಅಷ್ಟು ಭಾವವನ್ನೆಲ್ಲಾ ಕೊಡುವ ಒಂದೊಂದು ಶಬ್ದವು ಸಂಸ್ಕೃತಭಾಷೆಯಲ್ಲಿಯೇ ಇಲ್ಲ." ಎಂದು ದೊಡ್ಡ ವಿದ್ವಾಂಸರು ಹೇಳಿದ್ದಾರೆ. ಇದು ನಿಜವೇ?

ಮತ್ತೊಂದು ಸಂಗತಿ........ ಅಭಿವೃದ್ಧಿಶೀಲರಾಗಿದ್ದ ನಮ್ಮ ಪೂರ್ವಿಕರು ತಮ್ಮ ಸುತ್ತುಮುತ್ತಿನ ಸ್ಥಿತಿಗತಿಗಳನ್ನು ಚೆನ್ನಾಗಿ ಗ್ರಹಿಸಿ ಆಯಾ ಕಾಲಕ್ಕೆ ತಕ್ಕಂತೆ ಒಂದರಮೇಲೊಂದು ಧರ್ಮಶಾಸ್ತ್ರವನ್ನು ರಚಿಸಿಟ್ಟರು. ಇಂಥ ಅನುಕೂಲ್ಯವನ್ನು ಪ್ರಾಚೀನಕಾಲದ ಇತರ ಜನಾಂಗಗಳಲ್ಲಿ ಯಾರೂ ಮಾಡಿಲ್ಲ. ಮುಂದೆ ಹೊಸಹೊಸ ಸನ್ನಿವೇಶಗಳು ಒದಗಿದಾಗ ತಮ್ಮ ಮಕ್ಕಳು ಅವುಗಳನ್ನು ಅನುಕೂಲವಾಗುವಂತೆ ಹೊಂದಿಸಿಕೊಳ್ಳಲಿ ಎಂದು ಕಾಲದೇಶವರ್ತಮಾನಗಳನ್ನು ಅನುಸರಿಸಿ ಸ್ಮೃತಿಗಳು ವ್ಯತ್ಯಾಸವಾಗಲೇಬೇಕೆಂದು ಅವರು ಬಾಯಿಬಿಟ್ಟು ಹೇಳಿದ್ದಾರೆ. ಹಾಗೆ

ಮಾಡದಿದ್ದರೆ, ಜನಾಂಗವೇ ನಷ್ಟವಾದೀತೆಂದು ಅವರು ತಿಳಿದಿದ್ದರು. ಹೀಗಿರಲು, ಈಗಿನಕಾಲಕ್ಕೆ ಅನುಕೂಲವಾದ ಧರ್ಮಶಾಸ್ತ್ರ ಒಂದನ್ನಾದರೂ ರಚಿಸುವ ಯೋಜನೆಯನ್ನು ನಾವು ಮಾಡಿದ್ದೇವೆಯೇ? ಹಿಂದಿನ ಸ್ಮೃತಿಗಳಿಗೇ ಎಲ್ಲರೂ ತಮ್ಮ ತಮ್ಮ ಮನಸ್ಸಿಗೆ ಬಂದಂತೆ ತಾವು ಅರ್ಥಮಾಡುತ್ತ, ಒಬ್ಬರನ್ನೊಬ್ಬರು ಖಂಡಿಸುತ್ತ, ಈಗಿನ ಸ್ಥಿತಿಗತಿಗಳಿಂದ ಉಂಟಾಗಿರುವ ಕಷ್ಟಗಳನ್ನು ನೋಡಿ ಸ್ತಂಭೀಭೂತರಾಗಿ, ಲಕ್ಷ್ಯವನ್ನೇ ಅರಿಯದೆ, 'ಯಾವಕಡೆಗೆ ಹೋದರೆ ಆಕಡೆಯೇ ಆಯಿತು' ಎಂದು ಕಾಲವನ್ನು ತಳ್ಳುತ್ತಿದ್ದೇವೆ.

ಸಂಸ್ಕೃತಜ್ಞಾನವು ಇಂಥ ಸಂದರ್ಭಗಳಲ್ಲಿ ಸಮಾಧಾನ ಹೇಳಲಾರದೆ, ಹಿಂದೂಜನರು ಆ ಸಮಾಧಾನಗಳಿಗಾಗಿ ಅನ್ಯತ್ರ ಹುಡುಕಿಕೊಂಡು ಹೋಗಬೇಕಾಗಿದ್ದರೆ ಸಂಸ್ಕೃತವನ್ನು ನಾವು ಬಿಡಬಾರದೆಂಬ ಅಭಿಮಾನವು ನಮಗೆ ಹೇಗೆ ಬರಬೇಕು?

ಈಗ, ನಾವು ಪ್ರತಿನಿತ್ಯವೂ ಇತರ ಭಾಷೆಗಳಿಂದ ಶಬ್ದಗಳನ್ನು ತೆಗೆದುಕೊಳ್ಳಲೇಬೇಕಾಗಿ ಬಂದಿದೆ. ಹಾಗೆ ತೆಗೆದುಕೊಳ್ಳದೆ ಇದ್ದರೆ ನಿತ್ಯಗಟ್ಟಲೆಯ ಸಂಸಾರ ವ್ಯವಹಾರಗಳೇ ನಡೆಯುವಂತಿಲ್ಲ. ಹೀಗಿರಲು ನಮ್ಮ ಸಂಸ್ಕೃತಜ್ಞಾನವೂ ಆಚರಣೆಗಳೂ ಹೊಸಹೊಸ ಭಾವಗಳೆಂಬ ಆಹಾರವಿಲ್ಲದೆ ಬದುಕಿ ಬೆಳೆಯಬಹುದೆಂದು ಹೇಳುವುದಕ್ಕಾದೀತೇ ?

ಹೀಗೆಂದರೆ, ಪ್ರತಿಯೊಬ್ಬರೂ ಇಂಗ್ಲಿಷ್ ಭಾಷೆಯನ್ನೋ ಜರ್ಮನ್ ಭಾಷೆಯನ್ನೋ ಓದಬೇಕೆಂಬುದು ನನ್ನ ಆಶಯವಲ್ಲ. ಪ್ರತಿಯೊಬ್ಬರೂ ಆಧುನಿಕಪ್ರಪಂಚದ ವಿಚಾರಗಳನ್ನು ಪರಿಚಯಮಾಡಿಕೊಳ್ಳುತ್ತಿರಬೇಕು. ಈ ನನ್ನ ಸೂಚನೆಯಲ್ಲಿ ಹೊಸದಾಗಲಿ ವಿಚಿತ್ರವಾದದ್ದಾಗಲಿ ಯಾವುದೂ ಇಲ್ಲ. ಸಂಸ್ಕೃತವು ಹೊಸಭಾವಗಳೆಂಬ ಆಹಾರವನ್ನು ತೆಗೆದುಕೊಂಡು ಬೆಳೆಯುತ್ತ ಸಜೀವವಾಗಿರುವಂತೆ ಮಾಡುವುದರಲ್ಲಿ ನಾವೂ ನಮ್ಮ ಋಷಿಗಳನ್ನೂ ಪೂರ್ವಿಕರನ್ನೂ ಅನುಸರಿಸಬೇಕೆಂಬುದಿಷ್ಟೇ ನನ್ನ ಪ್ರಾರ್ಥನೆ.

ಸಂಸ್ಕೃತಜ್ಞಾನವು, ಅದರಲ್ಲಿಯೂ ವಿಶೇಷವಾಗಿ ಸಂಸ್ಕೃತಭಾಷೆಯ ಮೂಲಕ ತಿಳಿದುಬರುವ ಜ್ಞಾನವು ಅಪಾರಶಕ್ತಿಗರ್ಭಿತವಾಗಿದೆ. ಈ ಶಕ್ತಿಯೇ ಮಹಾಪ್ರಬಲವಾದ ಧಾರ್ಮಿಕಸತ್ತ್ವವಾಗುತ್ತದೆ; ಈ ಶಕ್ತಿಯೇ ಜನಾಂಗದ ಏಕೀಕರಣ ಸಂರಕ್ಷಣಕಾರ್ಯಗಳಲ್ಲಿ ಸಹಾಯವಾಗುವ ಸಾಮಾಜಿಕ ಸಾಮರ್ಥ್ಯವಾಗುತ್ತದೆ; ಇವೆಲ್ಲಕ್ಕಿಂತಲೂ ಮುಖ್ಯವಾಗಿ ಅದು ಕೆಲವು ಅಮೋಘವಾದ, ಎಲ್ಲೆಲ್ಲಿಯೂ ದೊರಕದಂಥ, ಆಧ್ಯಾತ್ಮಿಕ ತತ್ತ್ವಗಳನ್ನು ಪ್ರಪಂಚದ ಆದ್ಯಂತಕ್ಕೂ ಬೋಧಿಸತಕ್ಕದ್ದಾಗಿದೆ. ಆದರೆ, ಸಂಸ್ಕೃತವು ಸಜೀವವಾಗಿರುವಂತೆ ನಾವೆಲ್ಲರೂ ಪ್ರಯತ್ನಮಾಡಿದ ಹೊರತು ಗೂಢವಾಗಿರುವ ಈ ಶಕ್ತಿಯು ಹೊರಹೊಮ್ಮಲಾರದು..........

---

# ಕರ್ಣಾಟಕ ಚಿತ್ರಕಲೆಯ "ತಾತ್ತ್ವಿಕಸಂಪ್ರದಾಯ"

ಮತ್ತು

# ಮೈಸೂರಿನ ಮ॥ ಚಿತ್ರಗಾರ ಕೇಶವಯ್ಯನವರು.

ಈಗಿನ ಕಲಾಪ್ರಪಂಚದಲ್ಲಿ ತಾತ್ತ್ವಿಕಸಂಪ್ರದಾಯ ಮತ್ತು ಆದರ್ಶಸಂಪ್ರದಾಯ ಎಂದು ಎರಡು ಸಂಪ್ರದಾಯಗಳಿರುವುವೆಂದೂ, ಅವುಗಳಲ್ಲಿ ಮೊದಲನೆಯದು ಪಾಶ್ಚಾತ್ಯಪದ್ಧತಿಯ ಫಲವೆಂದೂ ಎರಡನೆಯದು ಇದಕ್ಕೆ ಪ್ರತಿಪಕ್ಷವಾಗಿ ಆರಂಭವಾದದ್ದೆಂದೂ ಹಿಂದಿನ ಸಂಚಿಕೆಯಲ್ಲಿ ತಿಳಿಸಿ ಮ|| ಕೆ. ವೆಂಕಟಪ್ಪನವರ ಕಲಾನಿರ್ಮಾಣದಿಂದ ಇವೆರಡು ಸಂಪ್ರದಾಯಗಳಿಗೂ ಉದಾಹರಣೆಗಳನ್ನೂ ಕೊಟ್ಟೆವು.

ಈ ಸಂಚಿಕೆಯಲ್ಲಿ ತಾತ್ವಿಕಸಂಪ್ರದಾಯದಲ್ಲಿ ಸುಪ್ರಸಿದ್ಧ ಚಿತ್ರಗಾರರಾದ ಮೈಸೂರಿನ ಮ|| ಕೆ. ಕೇಶವಯ್ಯನವರ ಎರಡು ಚಿತ್ರಗಳನ್ನು ಕೊಟ್ಟಿದೆ. ಮ|| ಕೇಶವಯ್ಯನವರು ಮೈಸೂರು ರಾಜರ ಆಸ್ಥಾನದಲ್ಲಿ ವಂಶಪಾರಂಪರ್ಯವಾಗಿ ಚಿತ್ರಗಾರ ಕೆಲಸದಲ್ಲಿದ್ದ ಮನೆತನದೊಳಗೆ ಹುಟ್ಟಿ, ಪಾಶ್ಚಾತ್ಯ ಕಲೆಯನ್ನು ಅಭ್ಯಾಸಮಾಡಿದರು. ದಾಕ್ಷಿಣಾತ್ಯ ಕುಶಲಕಲೆಗಳ ಚರಿತ್ರೆಯನ್ನು ನೋಡಿದರೆ ಅದರಲ್ಲಿ ಮೈಸೂರಿನ ಭಾಗವೇನು ಕಡಿಮೆಯಾಗಿಲ್ಲ. "ಮೈಸೂರು ಸಂಪ್ರದಾಯ" ವೆನ್ನಬಹುದಾದ ಬೇರೆ ಒಂದು ಸಂಪ್ರದಾಯವೇ ಸ್ಥಾಪಿತವಾಗಿ ಅದು ಶ್ರೀ ಮುಮ್ಮಡಿ ಕೃಷ್ಣರಾಜವೊಡೆಯರವರ ಆಳಿಕೆಯಲ್ಲಿ, ಎಂದರೆ ಸುಮಾರು ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ, ಅತ್ಯಂತ ಊರ್ಜಿತಸ್ಥಿತಿಗೆ ಬಂತು. ಶ್ರೀಮನ್ಮಹಾರಾಜರವರು ತಮಗೆ ಇಷ್ಟವಾದ ಯಾವುದಾದರೂ ಒಂದು ವಿಷಯವನ್ನು ಆರಿಸಿಕೊಟ್ಟು, ಚಿತ್ರಗಾರರೆಲ್ಲರೂ ಅದೊಂದನ್ನೇ ಚಿತ್ರಿಸಿ ಸ್ಪರ್ಧೆಯಿಂದ ತಮ್ಮ ತಮ್ಮ ಸಾಮರ್ಥ್ಯವನ್ನು ತೋರಿಸಲು ಅದನ್ನು ನೋಡಿ ಬಹುವಾಗಿ ಸಂತೋಷಪಡುವರು. ಮಹಾಸ್ವಾಮಿಯವರೇ ಇದರಲ್ಲಿ ಸ್ವಂತವಾಗಿ ಆಸಕ್ತಿವಹಿಸುತ್ತಿದ್ದದ್ದರಿಂದ ಆ ಚಿತ್ರಗಾರರ ಪ್ರಾಶಸ್ತ್ಯವೂ ಯಶಸ್ಸೂ ವಿಶೇಷವಾಗಿದ್ದುವು. ಹೀಗೆ ಮಹಾರಾಜರವರ ಅನುಗ್ರಹಕ್ಕೆ ಪಾತ್ರರಾದ ನಾಲ್ಕಾರು ಜನರಲ್ಲಿ ಚಿತ್ರಗಾರ ತಿಪ್ಪಣ್ಣನವರೆಂಬವರೊಬ್ಬರಿದ್ದರು. ಅವರು ರಾಜಾಸ್ಥಾನದಲ್ಲಿದ್ದು ಚಿತ್ರಕಲಾಕೌಶಲಕ್ಕಾಗಿ ನಾನಾವಿಧವಾದ ಸನ್ಮಾನಗಳನ್ನು ಪಡೆದರು. ಮ|| ಕೇಶವಯ್ಯನವರು ಈ ತಿಪ್ಪಣ್ಣನವರ ಮೊಮ್ಮಕ್ಕಳು. ಇವರು ಪ್ರಾಚ್ಯ ಮತ್ತು ಪಾಶ್ಚಾತ್ಯ ಈ ಎರಡು ಚಿತ್ರ ಪದ್ಧತಿಗಳಲ್ಲಿಯೂ ಶಿಕ್ಷಣವನ್ನು ಪಡೆದವರು. ಇವರು ಬಹು ಚಿಕ್ಕವಯಸ್ಸಿನಲ್ಲಿಯೇ ಚಿತ್ರ ವಿದ್ಯಾಭ್ಯಾಸವನ್ನು ಆರಂಭಿಸಿ ಸರ್ಕಾರಿಯಾಗಿ ನಡೆಯುವ ಪರೀಕ್ಷೆಗಳಲ್ಲಿ ಉತ್ತಮತರವಾಗಿ ತೇರ್ಗಡೆಹೊಂದಿ ಪ್ರಸಿದ್ಧಿಗೆ ಬಂದರು. ಉದಾರವಾದ ರಾಜಾಶ್ರಯದ ಸಹಾಯದಿಂದ ಅವರು ತಮ್ಮ ವಿದ್ಯೆಯನ್ನು ಅಭಿವೃದ್ಧಿಪಡಿಸಿಕೊಂಡು ಈಗ ಕನ್ನಡದೇಶದ ಭಾವಚಿತ್ರ ಲೇಖಕರಲ್ಲಿ ಶ್ರೇಷ್ಠರಾದವ

ರೆಂದು ಹೆಸರುಪಡೆದಿದ್ದಾರೆ. ಮ|| ಕೇಶವಯ್ಯನವರು ಇದುವರೆಗೆ ಸಾವಿರಾರು ಭಾವಚಿತ್ರಗಳನ್ನು ಚಿತ್ರಿಸಿದ್ದಾರೆ; ಅವು ಭರತಖಂಡದ ನಾನಾ ಶ್ರೀಮಂತರ ಪ್ರಾಸಾದಗಳನ್ನು ಅಲಂಕರಿಸುತ್ತಿವೆ. ಭಾವಚಿತ್ರಗಳನ್ನು ಯಾರಾದರೂ ಒಬ್ಬರು ಗೊತ್ತಾಗಿ ಹೇಳಿ ಮಾಡಿಸಿದ ಹೊರತು ಬರೆಯುವುದಿಲ್ಲ; ಅವು ಬರೆದು ಸಿದ್ಧವಾದಮೇಲೆ ಚಿತ್ರಕಾರರ ಹತ್ತಿರ ಒಂದು ಅರೆಗಳಿಗೆ ಇರುವುದಿಲ್ಲ. ಅವುಗಳನ್ನು ಅವುಗಳ ಮಾಲಿಕರು ತೆಗೆದುಕೊಂಡುಹೋಗಿಬಿಡುವರು. ಹೀಗಾಗಿ, ಇಲ್ಲಿ ಪ್ರದರ್ಶಿಸುವುದಕ್ಕೆ ಮ|| ಕೇಶವಯ್ಯನವರ ಈಚಿನ ಚಿತ್ರಗಳೊಂದೂ ದೊರೆಯುವಹಾಗಿಲ್ಲ. ಅಲ್ಲದೆ ಅವರು ಈಚೀಚೆಗೆ ಬರೆದ ಚಿತ್ರಗಳೆಲ್ಲಾ ಬಣ್ಣದವು; ಬಣ್ಣದ ಚಿತ್ರಗಳನ್ನು ಅಚ್ಚುಮಾಡಿಸಿ ಹಾಕುವುದಕ್ಕೆ ನಮ್ಮಲ್ಲಿ ಅನುಕೂಲವಿಲ್ಲ. ಆದ್ದರಿಂದ ಅವರು ಮೊದಮೊದಲು ಕಪ್ಪುಬಣ್ಣದಲ್ಲಿಯೇ ಬರೆದ ಎರಡು ಚಿತ್ರಗಳನ್ನು ಅವರ ಹಳೆಯಕಡತದಿಂದ ತೆಗೆದು ಈ ಲೇಖನಕ್ಕೆ ಸೇರಿಸಿದ್ದೇವೆ. ಸದ್ಯದಲ್ಲಿಯೇ ಅವರ ಚಿತ್ರಗಳಲ್ಲೊಂದನ್ನು ವರ್ಣಗಳೊಡನೆ ಅಚ್ಚುಮಾಡಿಸಿ ಪಾಠಕರಿಗೆ ಒಪ್ಪಿಸಬೇಕೆಂಬ ಉದ್ದೇಶವಿದೆ.

ಇಲ್ಲಿ ಕೊಟ್ಟಿರುವ ಎರಡು ಚಿತ್ರಗಳ ಪೈಕಿ, ಒಂದು ಒಬ್ಬ ಮಹಾರಾಷ್ಟ್ರದೇಶದ ಮುದುಕಿಯದು; ಇದನ್ನು ನೋಡಿದರೆ 'ಇದರಲ್ಲೇನಿದೆ?' ಎನ್ನಿಸುತ್ತದೆ. ಆದರೂ ಇದರಲ್ಲಿ ತುಂಬ ಕಲಾಕೌಶಲ್ಯವಿದೆ. ಮುಪ್ಪಿನಿಂದ ದೇಹದಲ್ಲಿ ಆಗುವ ಬದಲಾವಣೆಗಳನ್ನೆಲ್ಲಾ ಈ ಚಿತ್ರವು ಬಹುಚೆನ್ನಾಗಿ ಚಿತ್ರಿಸಿದೆ. ಇದಕ್ಕೆ ಭರತಖಂಡದ ನಾನಾ ಪ್ರಾಂತಗಳ ಪ್ರದರ್ಶನಗಳಲ್ಲಿ ಬಹುಮಾನಗಳು ಬಂದಿವೆ. ಇನ್ನೊಂದು ದಕ್ಷಿಣದೇಶದಲ್ಲೆಲ್ಲಾ ಶ್ರೇಷ್ಠರಾದ ಸಂಗೀತ ವಿದ್ವಾಂಸರೆಂದೂ ಭಕ್ತಶಿರೋಮಣಿಗಳೆಂದೂ ಪ್ರಸಿದ್ಧರಾದ ತಿರುವಳ್ಳೂರಿನ ತ್ಯಾಗರಾಜರದು. ಇವರು ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಜೀವಿಸಿದ್ದರು. ಅವರ ಕಲ್ಪನಶಕ್ತಿಯೂ ಪ್ರತಿಭೆಯೂ ಅಮೋಘವಾದವು. ಈಗ ಅವರ ಕೀರ್ತನೆಗಳು ನಮ್ಮ ದೇಶದಲ್ಲಿ ಎಲ್ಲೆಲ್ಲೂ ಪ್ರಸಿದ್ಧವಾಗಿವೆ. ಅವು ಇಲ್ಲದೆ ಯಾವ ಸಂಗೀತಕಛೇರಿಯೂ ಕಳೆಗಟ್ಟುವುದಿಲ್ಲ.

ತ್ಯಾಗರಾಜರು ತೆಳ್ಳಗೆ ಉದ್ದವಾಗಿದ್ದರೆಂದೂ ಎಣ್ಣೆಗೆಂಪಿನ ಬಣ್ಣವೆಂದೂ ಬಹು ಆಚಾರವಂತರಾದ ಭಕ್ತರೆಂದೂ ವರ್ಣಿಸಲ್ಪಟ್ಟಿದ್ದಾರೆ. ಗಾನರಸವೂ ಭಕ್ತಿರಸವೂ ಅವರ ಜೀವನದಲ್ಲಿ ಸೇರಿ ಒಂದಾಗಿಹೋಗಿದ್ದುವು; ಅವರ ಕೀರ್ತನೆಗಳೆಲ್ಲವೂ ಏಕಾದಶಿಯದಿವಸ ರಚಿತವಾದುವೆಂದು ಹೇಳುತ್ತಾರೆ. ಇಲ್ಲಿ ನಾವು ಕೊಟ್ಟಿರುವ ಚಿತ್ರವು, ಶ್ರೀಮದ್ ಮಹಾರಾಜರವರ ಅಪ್ಪಣೆಯಂತೆ ಅರಮನೆಗೆ ಒಂದು ದೊಡ್ಡ ಬಣ್ಣದ ತೈಲಚಿತ್ರವನ್ನು ಬರೆದುಕೊಡುವ ಉದ್ದೇಶದಿಂದ ಅದಕ್ಕೆ ಪೂರ್ವಭಾವಿಯಾಗಿ ಒಂದು ಹಿಂದಿನಕಾಲದ ಚಿತ್ರವನ್ನು ಅನುಸರಿಸಿ ಗುರುತುಮಾಡಿದ್ದಾಗಿದೆ.

---



**ತ್ಯಾಗರಾಜರು**

ಒಂದು ಹಳೆಯ ಚಿತ್ರವನ್ನನುಸರಿಸಿ ಮ|| ಕೆ. ಕೇಶವಯ್ಯನವರು ಬರೆದದ್ದು.



ಒಬ್ಬ ಮುದುಕಿಯ ಭಾವಚಿತ್ರ

(ಮ|| ಕೆ. ಕೇಶವಯ್ಯನವರು ಬರೆದದ್ದು.)

# ಮುದ್ದಣ್ಣ

ನಡುವಗಲ ನೇಸರಿನ ದಳ್ಳಿಸುವ ಕಾಯ್ಪಿನಿಂ
ಕಡುನೊಂದು ನೀರಡಸಿ ಬಾಯಾರಿ ನಿಟ್ಟುಸಿರ
ನಡಿಗಡಿಗೆ ಬಿಡುಬಿಡುತ ಬಸವಳಿದು ಬಲಗುಂದಿ ಕಾಲ್ಗೆಟ್ಟು ಪೋಪೆಡೆಯೊಳು ||
ಸಿಡುಮರನನೊಂದನಾನೆದುರಿನೊಳ್ ಕಾಣುತ್ತೆ
ಕಡುಸಂತಸಂದಾಳ್ದು ಮೆಲ್ಲಡೆಯೊಳದರ ನೆಳ
ಲಡಿಯ ನುಣ್ಮಳಲೊಟ್ಟಿಲಂ ಪೊರ್ದಿ ದಣಿವಾರಿಸಲ್ಕೆಂದು ಕುಳಿತೆನಲ್ಲಿ ||೧||

ಕುಳಿತಿರಲ್ ನಾನಿಂತು ನರುದಂಬುಲಂಮೆಲ್ದು
ಬಳಿಯೊಳಿಪ್ಪೆಳೆವೆಣ್ಣ ಸುಯ್ಯೆಲರನನುಕರಿಸಿ
ಯೆಳೆಗಾಳಿ ತನಿಗಂಪುವೆರಸು ಪರಿದಾಡಲಾನದರಡಿಯನರಿಯಲೆಳ್ದು ||
ಆಳಿವಿಂಡು ನೊರೆಯುತ್ತ ಪೋಪುದಂ ಕಂಡು ಬೆಂ
ಬಳಿವಿಡಿದು ನಾಲ್ವೆಜ್ಜೆ ಮುಂಬರಿಯಲೊಡನೆ ಕ
ಣ್ಣಾಳತೆಯೊಳ್ ಬಂದುದೊಂದುಪವನಂ ತವಕದಿಂ ನೋಡಲದನೊಳಸಾರ್ದೆನು ||೨||

ಬೆರಗಾದೆನಳ್ಕಿದೆಂ ಮಿಡುಕಿದೆಂ ಮಮ್ಮಲಂ
ಮರುಗಿದೆಂ ಸುರಿಸಿದೆಂ ಕಂಬನಿಯನಾತೋಂಟ
ದಿರವನೀಕ್ಷಿಸುತೆ ಹಾ ದೈವ! ಹಾ ದೈವ! ಹಾ ದೈವ! ಎಂದೊದರಿಯಳುತೆ ||
ಮುರುಟಿಹುದು ಪೂಬಳ್ಳಿ, ಸುರುಟಿಹುದು ಪಣ್ಮರಂ
ಬರಿದಿಹುದು ಸೀರ್ಗೊಳಂ, ಜರಿದಿಹುದು ಬಳ್ಳಿವನೆ,
ಪರಹರಾ! ಪಣ್ಣಿಲ್ಲ, ಕಾಯಿಲ್ಲ, ಪೂವಿಲ್ಲ, ಸನೆಯಿಲ್ಲ, ತಳಿರಿಲ್ಲಲಾ ! ||೩||

ಇರಲಿಂತು ತೋಂಟದೊಳ್ ತೆಂಕಣದ ನೆಲದುದಿಯೊ
ಳರೆವಿರಿದ ಪೂಗಳಿಂದೊಡಲಿಚನ ಪುಣ್ಬುಗಳ
ಸಿರಿದಾದ ಮನೆಯಂತೆ ಕಣ್ಗೆಡ್ಡಮಾಗೆ ಮಾಮರನೊಂದು ಬೆಳೆದುದದರ ||
ಅರಳುಗಳ ಪೊಸಗಂಪಿಗೆವ್ವಳಿಸಿ ಗಾವರಿಪ
ದುರುದುಂಬಿದುಂಬಿಗಳ ಸುಜ್ಜರಮನಾಲಿಸಲ್
ಸಿರಿದಾಯುಸಂ ಜಾರಿ ಮನದಳಲ್ ಮರೆಯಾಗಿ ಸಲವಾಂತು ನಿಂತೆನಲ್ಲಿ ||೪||

ನಿರುಕಿಸುತೆ ನಿಂತಿರಲ್ ಪಾಳ್ನೆಲದೊಳಲರಿಡಿದು
ನೆರೆಮೆರೆವಲಂಪಿನಿಂ ಪೊರೆದು ಕಂಗೊಳಿಪ ಮಾ
ಮರದಿರವಿದೆಂತೆಂದು ಬಗೆಯೊಳಚ್ಚರಿಗವಿಯೆ ಜೆಂದಳಿರ್ದೊಂಗಲಲ್ಲಿ ||
ಕಿರುಮೆಯ್ಯ ಕೆಂಗಣ್ಣಲರ್ವಕ್ಕಿಯೊಂದು ಮೈ
ಮರೆದು ಕಡುದುಗುಡದಿಂ ಶ್ರೀರಾಮ ! ಎಂದುಲಿಯು
ಲರಚಣದೊಳಾತೋಂಟದೆಡೆಯೆಡೆಯ ಗಿಡುಬಳ್ಳಿ ತಳಿರಿಡಿದು ಕಡುಯೆಸೆದುದು ||೫||

ಎಳೆಗಾಳಿ ತೀಡಿದುದು ನಲ್ಪೊಗರ ಕಿರಿವುಲ್ಲು
ಬೆಳೆದುದಲ್ಲಲ್ಲಿ ಬಗೆಬಗೆಯ ಬಣ್ಣದಿಂ ಕಳ
ಕಳಿಪ ಪೊಸಗಂಪುಗುವ ಪೂಗಳಿಂದೆಳೆವಳ್ಳಿಗಳ್ ಸೊಗಯಿಸಿದುವು ||
ತಿಳಿನೀರಿನಿಂ ಕೊಳಂ ತೀವಿದತ್ತೆಳಅಂಚೆ
ಗಳ ಹಿಂಡು ಓಲಾಡಿ ನಲಿದತ್ತು ಕೋಗಿಲೆಗೆ
ಕಳರುತಿಯೆ ಆರು ನೀಂ ಪೇಳೆನಲ್, "ಮುದ್ದಣ್ಣ, ಮುದ್ದಣ್ಣ" ಯೆಂದುಲಿದುದು ||

ರಾ. ಸು. ಸಾಲಿ, ಬಿ.ಎ.

---

# ೫. ನಾಗಚಂದ್ರ

ಇವನು ರಾಮಚಂದ್ರಚರಿತಪುರಾಣ, (ಪಂಪರಾಮಾಯಣ) ಮತ್ತು ಮಲ್ಲಿನಾಥಪುರಾಣಗಳೆಂಬ ಕಾವ್ಯಗಳ ಕರ್ತೃ. ಇವನು ತನ್ನ ಕೃತಿಗಳಲ್ಲಿ ತನ್ನ ದೇಶ, ಕಾಲ, ಕುಲ ಮೊದಲಾದವುಗಳನ್ನು ಕುರಿತು ಏನನ್ನೂ ಹೇಳಿಲ್ಲ. ತಾನು ಬಾಲಚಂದ್ರನೆಂಬ ಜೈನಗುರುವಿನ ಶಿಷ್ಯನೆಂದು ಮಾತ್ರ ಪ್ರತಿ ಆಶ್ವಾಸದ ಅಂತ್ಯದಲ್ಲಿಯೂ ಸೂಚಿಸಿರುವುದಲ್ಲದೆ ರಾಮಚಂದ್ರಚರಿತಪುರಾಣದ ಮೊದಲನೆಯ ಆಶ್ವಾಸದಲ್ಲಿ ಗ್ರಂಥಾವತಾರದಲ್ಲಿ ಜೈನಗುರುಗಳನ್ನು ಸ್ತುತಿಸುವಾಗ ಕೊನೆಯಲ್ಲಿ ಬಾಲಚಂದ್ರ, ಮೇಘಚಂದ್ರ-ತ್ರೈವಿದ್ಯ, ಶುಭಕೀರ್ತಿ, ವಾಸುಪೂಜ್ಯ, ಗತಪ್ರತ್ಯಾಗತದಿಂ ರಾಘವಪಾಂಡವೀಯಮಂ ಪೇಳ್ದ ಶ್ರುತಕೀರ್ತಿ, ಮತ್ತು ವೀರಣಂದಿ ಎಂಬ ಜೈನ ಗುರುಗಳನ್ನು ಪರಿವಿಡಿಯಿಂದ ಸ್ತುತಿಸಿದ್ದಾನೆ. ಇದರಿಂದಲೂ, ಈ ಸ್ತೋತ್ರಪದ್ಯಗಳಲ್ಲಿ ಕೆಲವು ಶ್ರವಣಬೆಳ್ಗೊಳದ ಶಾಸನಗಳಲ್ಲಿ ಉದ್ಧೃತಗಳಾಗಿರುವುದರಿಂದಲೂ, ಮತ್ತು ಇತರ ಆಧಾರಗಳ ಬಲದಿಂದಲೂ ಕೂಡ ಈ ಕವಿಯು ಆವ ಕಾಲದಲ್ಲಿ ಜೀವಿಸುತ್ತಿದ್ದನೆಂಬುದನ್ನು ನಿರ್ಣಯಿಸಬೇಕಾಗಿದೆ.

ಈ ವಿಧದಲ್ಲಿ ಕವಿಯು ಕ್ರಿ. ಶ. ೧೧೪೦ ಅಥವಾ ೧೧೪೫ರಲ್ಲಿ ಜೀವಿಸುತ್ತಿದ್ದನೆಂದು ಮ|| ರೈಸ್‌ರವರೂ, ಮ|| ಪಾಠಕರೂ ನಿರ್ಣಯಿಸಿರುವರು. ಇದನ್ನು ಕವಿಚರಿತಕಾರರು ಒಪ್ಪುವುದಿಲ್ಲ. ಅವರು ಮೇಲ್ಕಂಡ ಪಂಡಿತರ ಅಭಿಪ್ರಾಯಗಳನ್ನು ಹೀಗೆಂದು ಅನುವದಿಸಿ ಖಂಡಿಸಿರುವರು :—

" ಮ|| ರೈಸ್—ನಾಗಚಂದ್ರನ ಗುರುವಾದ ಬಾಲಚಂದ್ರನು ಸುಜನೋತ್ತಂಸನ ಸಮಕಾಲದವನೆಂದೂ ಪ್ರಾಭೃತತ್ರಯ ವ್ಯಾಖ್ಯಾಕಾರನೆಂದೂ ಸುಮಾರು ೧೧೪೦ರಲ್ಲಿ ಇದ್ದನೆಂದೂ ಹೇಳುತ್ತಾರೆ. (ಶಬ್ದಾನುಶಾಸನ, ಉಪೋದ್ಘಾತ ೩೩); ಅಲ್ಲದೆ ಮ|| ಪಾಠಕರು 'ಮೇಘಚಂದ್ರನು ಪೂಜ್ಯಪಾದಕೃತವಾದ ಸಮಾಧಿಶತಕಕ್ಕೆ—'ವಿತತಯಶೋನಿಧಿಪಂಪನ ಸುತಂಗೆ ತಿಳಿವಂತು ಪೊಚ್ಚಪೊಸಕನ್ನಡದಿಂ'—ಒಂದು ವ್ಯಾಖ್ಯಾನವನ್ನು ೧೧೪೮ರಲ್ಲಿ ಬರೆದಿದ್ದಾನೆ' ಎಂದು ಹೇಳುವ (ಇಂಡಿಯನ್ ಆಂಟಿಕ್ವೆರಿ, ಸಂಪುಟ ೧೨. ಪುಟ ೨೦) ಆಧಾರದಿಂದ ನಾಗಚಂದ್ರನು ಸುಮಾರು ೧೧೪೫ರಲ್ಲಿ ಇದ್ದಿರಬಹುದೆಂದೂ ಹೇಳುತ್ತಾರೆ. ಆದರೆ ಬಾಲಚಂದ್ರ* ಎಂಬ ಹೆಸರುಳ್ಳ ಇಬ್ಬರು

---

* ಇದು ವಾಸ್ತವವೇ ಹೌದು. ಆದರೆ ಕವಿಚರಿತಕಾರರಾದ ಮ|| ಆರ್. ನರಸಿಂಹಾಚಾರ್ಯರಿಂದ ಪ್ರಕಾಶಿಸಲ್ಪಟ್ಟಿರುವ "ಶ್ರವಣಬೆಳ್ಗೊಳದ ಶಾಸನ"ಗಳ ಎರಡನೆಯ ಮುದ್ರಣದ ಅಂತ್ಯದಲ್ಲಿ ಜೋಡಿಸಿರುವ ನಾಮಾನುಕ್ರಮಣಿ (index) ಯಲ್ಲಿ ಈ ಮೇಲೆ ಹೇಳಿರುವ ಅಧ್ಯಾತ್ಮಿ—ಬಾಲಚಂದ್ರನೂ, ವಕ್ರಗಚ್ಛದ ಬಾಲಚಂದ್ರನೂ, ಇನ್ನೂ ಒಬ್ಬಿಬ್ಬರು ಬಾಲಚಂದ್ರರೂ ಏಕೀಕರಿಸಲ್ಪಟ್ಟು ಒಬ್ಬನೇ ಮನುಷ್ಯನೆಂದು ಭಾವಿಸಲ್ಪಟ್ಟಿರುವರು.

ಜೈನಗುರುಗಳು ಇದ್ದಂತೆ ಶಾಸನಗಳಿಂದ ತಿಳಿಯಬರುತ್ತದೆ. ಸುಜನೋತ್ತಂಸನ ಸಮಕಾಲದವನೂ ಪ್ರಾಭೃತಕತ್ರಯವ್ಯಾಖ್ಯಾಕಾರನೂ ಆದ ಬಾಲಚಂದ್ರನಿಗೆ ಅಧ್ಯಾತ್ಮಿಬಾಲಚಂದ್ರ (ಇವನ ಚರಿತವನ್ನು ನೋಡಿ) ಎಂದು ಹೆಸರು. ಈತನು ೧೧೭೭ರಲ್ಲಿ* ಗತಿಸಿದ ನಯಕೀರ್ತಿಯ ಶಿಷ್ಯನೆಂದೂ (ಶ್ರ. ಬೆ. ಶಾ. ೪೨), ೧೧೮೨ರಲ್ಲಿ† ಬದುಕಿದ್ದನೆಂದೂ (ಶ್ರ. ಬೆ. ಶಾ. ೧೨೪), ಪುಸ್ತಕಗಚ್ಛದವನೆಂದೂ (ಶ್ರ. ಬೆ. ಶಾ. ೧೦೫), ತಿಳಿಯುತ್ತದೆ. ಇವನು ಬೇರೆ ನಾಗಚಂದ್ರನ ಗುರುವಾಗಿರಲಾರನು. ಮತ್ತೊಬ್ಬ ಬಾಲಚಂದ್ರಮುನಿ ೧೧೧೫ರಲ್ಲಿ ಗತಿಸಿದ ಮೇಘಚಂದ್ರನ ಸಧರ್ಮನೆಂದೂ (ಶ್ರ. ಬೆ. ಶಾ. ೫೫) ವಕ್ರಗಚ್ಛಕ್ಕೆ ಸೇರಿದವನೆಂದೂ ತಿಳಿಯುತ್ತದೆ. ಹಿಂದೆ ಹೇಳಿದ ನಯಕೀರ್ತಿಯ ತಂದೆಯಾದ ಗುಣಚಂದ್ರನೂ ಈ ಮೇಘಚಂದ್ರನ ಸಧರ್ಮನೆಂದು ಶ್ರ. ಬೆ. ೪೨ನೆಯ ಶಾಸನದಿಂದ ತಿಳಿಯುತ್ತದೆ. ಇದರಿಂದ ವಕ್ರಗಚ್ಛದ ಬಾಲಚಂದ್ರನೂ ಮೇಘಚಂದ್ರನೂ ನಯಕೀರ್ತಿಯ ತಂದೆಯಾದ ಗುಣಚಂದ್ರನೂ ಸಮಕಾಲದವರೆಂದು ವ್ಯಕ್ತವಾಗುತ್ತದೆ. ಆದುದರಿಂದ ನಯಕೀರ್ತಿಯ ಶಿಷ್ಯನಾದ ಪುಸ್ತಕಗಚ್ಛದ ಅಧ್ಯಾತ್ಮಿಬಾಲಚಂದ್ರನಿಗೂ ನಯಕೀರ್ತಿಯ ತಂದೆಯ ಸಧರ್ಮನಾದ ವಕ್ರಗಚ್ಛದ ಬಾಲಚಂದ್ರನಿಗೂ ಆವ ಸಂಬಂಧವೂ ಇಲ್ಲ. ಈ ವಕ್ರಗಚ್ಛದ ಬಾಲಚಂದ್ರನೇ ನಾಗಚಂದ್ರನ ಗುರು. ಈತನ ವಿಷಯವಾಗಿ ಸುಮಾರು ೧೧೧೫ರಲ್ಲಿ ಬರೆದ ಶ್ರ. ಬೆ. ೫೫ನೆಯ ಶಾಸನದಲ್ಲಿ—

ಸಿದ್ಧಾನ್ತಾದ್ಯಖಿಲಾಗಮಾರ್ಥನಿಪುಣವ್ಯಾಖ್ಯಾನಸಂಶುದ್ಧಿಯಿಂ
ಶುದ್ಧಾಧ್ಯಾತ್ಮಕತತ್ತ್ವನಿರ್ಣಯವಚೋವಿನ್ಯಾಸದಿಂ ಪ್ರೌಢಿಸಂ |
ಬದ್ಧವ್ಯಾಕರಣಾರ್ಥಶಾಸ್ತ್ರಭರತಾಲಂಕಾರಸಾಹಿತ್ಯದಿಂ
ರಾದ್ಧಾಂತೋತ್ತಮಬಾಲಚಂದ್ರಮುನಿಯಂತಾರ್ ಖ್ಯಾತರೀಲೋಕದೊಳ್ ||

ಎಂಬ ಪದ್ಯವಿದೆ. ಈತನೂ ಕನ್ನಡಕವಿಯಾಗಿದ್ದಿರಬಹುದು. ನಾಗಚಂದ್ರನು ಸ್ತುತಿಸುವ ಮೇಘಚಂದ್ರನೇ ಬೇರೆ, ಸಮಾಧಿಶತಕವ್ಯಾಖ್ಯಾಕಾರನಾದ ಮೇಘಚಂದ್ರನೇ ಬೇರೆ. ಮೊದಲನೆಯವನು ೧೧೧೫ರಲ್ಲಿ ಗತಿಸಿದುದಾಗಿ ಹೇಳುವ ಶ್ರ. ಬೆ. ೪೭ನೆಯ ಶಾಸನದಲ್ಲಿಯೇ ಅವನ ಸ್ತುತಿರೂಪವಾದ "ಮುನಿನಾಥಂ ಧಶಧರ್ಮಧಾರಿ" ಎಂಬ ಪದ್ಯವು ಇದೆ. ಎರಡನೆಯವನು ಸಮಾಧಿಶತಕವ್ಯಾಖ್ಯೆಯನ್ನು ೧೧೪೮ರಲ್ಲಿ ಬರೆದುದಾಗಿ ತಿಳಿಯಬರುವುದರಿಂದ ಈತನಿಗೂ ೧೧೧೫ರಲ್ಲಿ ಗತಿಸಿದವನಿಗೂ ಏನೇನೂ ಸಂಬಂಧವಿಲ್ಲ. ಈತನು ಶ್ರ. ಬೆ. ೪೨ನೆಯ ಶಾಸನದಲ್ಲಿ ನಯಕೀರ್ತಿಯ ಶಿಷ್ಯನೆಂದು ಹೇಳಿರುವ ಮೇಘಚಂದ್ರನಾಗಿರಬಹುದು. "ವಿತತಯಶೋನಿಧಿಪಂಪನ" ಎಂಬುದು ನಾಗಚಂದ್ರನಿಗೆಯೇ ಅನ್ವಯಿಸುವ ಪಕ್ಷದಲ್ಲಿ ಅವನ ಕಾಲವಾದಮೇಲೆ ಅವನ ಮಗನಿಗಾಗಿ ಎರಡನೆಯ ಮೇಘಚಂದ್ರನು ಸಮಾಧಿಶತಕವ್ಯಾಖ್ಯಾನವನ್ನು ಬರೆದಿರಬಹುದು.

ನಾಗಚಂದ್ರನು ಸ್ತುತಿಸುವ ವೀರಣಂದಿಸೈದ್ಧಾಂತಿಕನು ಸಮಾಧಿಶತಕವ್ಯಾಖ್ಯಾಕಾರನಾದ ಮೇಘಚಂದ್ರನ ಮಗನೆಂದು ಮೆ|| ಪಾಠಕರು ಅಭಿಪ್ರಾಯಪಡುತ್ತಾರೆ. (ಇಂಡಿಯನ್ ಆಂಟಿಕ್ವೆರಿ ಸಂಪುಟ ೧೪, ಪುಟ ೧೪.) ಆದರೆ ಈತನು ಮೊದಲನೆಯ ಮೇಘಚಂದ್ರನ ಮಗನೆಂಬುದು ಶ್ರ. ಬೆ. ೫೦ನೆಯ ಶಾಸನದಿಂದ ವ್ಯಕ್ತವಾಗುತ್ತದೆ. ನಾಗಚಂದ್ರನು ಸ್ತುತಿಸುವ ಶುಭಕೀರ್ತಿ, ನಾಗಚಂದ್ರನ ಗುರುವಾದ ಬಾಲಚಂದ್ರನ ಮಗನೆಂದು ಅದೇ ಶಾಸನದಿಂದಲೇ ತಿಳಿಯುತ್ತದೆ. ಈ ಕಾರ

* ಎರಡನೆಯ ಮುದ್ರಣದಲ್ಲಿ ಇದನ್ನು ೧೧೭೬ ಎಂದು ಕವಿಚರಿತಕಾರರು ತಿದ್ದಿರುವರು.
† ಇದನ್ನು ಎರಡನೆಯ ಮುದ್ರಣದಲ್ಲಿ ೧೧೮೧ ಎಂದು ಕವಿಚರಿತಕಾರರು ತಿದ್ದಿರುವರು.

**ಜಗಳಿಂದ ಕವಿ ತನ್ನ ಗ್ರಂಥಗಳಲ್ಲಿ ಸ್ತುತಿಸುವ ಮೊದಲನೆಯ ಮೇಘಚಂದ್ರನೂ ಅವನ ಮಗ ವೀರ ಣಂದಿಸಿದ್ಧಾಂತಿಯೂ ತನ್ನ ಗುರು ಬಾಲಚಂದ್ರನೂ ಇವನ ಮಗ ಶುಭಕೀರ್ತಿಯೂ ಕವಿಯ ಸಮ ಕಾಲದವರೆಂದು ಹೇಳಬಹುದು. ಶ್ರುತಕೀರ್ತಿಯೂ ಸಮಕಾಲದವನಾಗಿರಬಹುದು." (ಕವಿಚರಿತೆ, I, ೮೨—೮೪.)**

ಎಂದರೆ ಪಂಪರಾಮಾಯಣದಲ್ಲಿ ನಾಗಚಂದ್ರನಿಂದ ಸ್ತುತಿಸಲ್ಪಟ್ಟಿರುವ ಮೇಘಚಂದ್ರನೂ, ಶ್ರ. ಬೆ. ೪೭ ನೆಯ ಶಿಲಾಲೇಖನದಲ್ಲಿ ಲೋಕಾಂತರವನ್ನೈದಿದನೆಂದು ಹೇಳಲ್ಪಟ್ಟಿರುವ ಮೇಘಚಂದ್ರನೂ ಒಬ್ಬನೇ ಎಂದೂ ಈ ಮೇಘಚಂದ್ರನು ವಕ್ರಗಚ್ಛದ ಬಾಲಚಂದ್ರನ ಮತ್ತು ನಯಕೀರ್ತಿಯ ತಂದೆಯಾದ ಗುಣಚಂದ್ರನ ಸಧರ್ಮನಾಗಿದ್ದನೆಂದೂ ಕವಿಚರಿತಕಾರರ ಅಭಿಪ್ರಾಯ.

ಇದು ತಪ್ಪು. ಶ್ರ. ಬೆ. ೪೭ ನೆಯ ಶಿಲಾಲೇಖನದಲ್ಲಿ ಕೀರ್ತಿತನಾಗಿ ಕ್ರಿ. ಶ. ೧೧೧೫ ರಲ್ಲಿ (ಡಿಸೆಂಬರ್ ೨ ನೇ ತಾರೀಖು ಬೃಹಸ್ಪತಿವಾರದ ದಿವಸ) ಪರಲೋಕವನ್ನೈದಿದ ಮೇಘಚಂದ್ರನು ವಕ್ರಗಚ್ಛದವನಲ್ಲ; ಇವನು ಪುಸ್ತಕಗಚ್ಛದವನೆಂದು ಆ ಶಿಲಾಲೇಖನದಲ್ಲಿರುವ "ಶ್ರೀ ಮೂಲಸಂಘಕೃತ ಪುಸ್ತಕಗಚ್ಛ ದೇಶೀಯೋದ್ಯದ್ಗಣಾಧಿಪ ಸುತಾರ್ಕಿಕ ಚಕ್ರವರ್ತೀ | ಸೈದ್ಧಾಂತಿಕೇಶ್ವರ ಶಿಖಾಮಣಿ ಮೇಘಚಂದ್ರಸ್ತ್ರೈವಿದ್ಯದೇವ ಇತಿ ಯಂ ವಿಬುಧಾಸ್ಸ್ತುವಂತಿ||" (ಪಂಕ್ತಿ ೧೦೨-೧೦೬) ಎಂಬ ಪದಗಳಿಂದಲೂ "ಶ್ರೀ ಮೂಲಸಂಘದ ದೇಸಿಗಗಣದ ಪುಸ್ತಕಗಚ್ಛದ ಶ್ರೀ ಮೇಘಚಂದ್ರತ್ರೈವಿದ್ಯದೇವರ್" (ಪಂಕ್ತಿ ೧೪೩-೧೪೪) ಎಂಬ ಪದಗಳಿಂದಲೂ ಕೂಡ ಸ್ಪಷ್ಟವಾಗುತ್ತದೆ. ಇವನ ಗುರುವು ಅಭಯನಂದಿಯ ಶಿಷ್ಯನಾದ ಸಕಳಚಂದ್ರನೆಂದೂ, ಇವನ ಶಿಷ್ಯನು ಹೊಯ್ಸಳ ವಿಷ್ಣುವರ್ಧನ ಬಿಟ್ಟಿದೇವನ ಸೇನಾನಾಯಕನಾದ ಗಂಗರಾಜನಿಗೆ ಗುರುವಾದ ಪ್ರಭಾಚಂದ್ರನೆಂದೂ ಕೂಡ ಇದೇ ಶಿಲಾಲೇಖನದಿಂದಲೇ ಸ್ಪಷ್ಟವಾಗುತ್ತದೆ.

ಶ್ರ. ಬೆ. ೫೫ ನೆಯ ಶಿಲಾಲೇಖನದಲ್ಲಿ ಕೀರ್ತಿತನಾಗಿರುವ ಬಾಲಚಂದ್ರನ ಸಧರ್ಮನಾದ ಮೇಘಚಂದ್ರನು ಮೇಲೆ ಹೇಳಲ್ಪಟ್ಟ ಮೇಘಚಂದ್ರನಿಂದ ಭಿನ್ನನು. ಇವನು ವಕ್ರಗಚ್ಛದವನೆಂದು ಈ ಶಿಲಾಲೇಖನದ ೧೩೪ ನೆಯ ಪಂಕ್ತಿ ಮೊದಲುಗೊಂಡು ಹೇಳಲ್ಪಟ್ಟಿರುವ ಗುರ್ವಾವಳಿಯ ಉಪಕ್ರಮದಲ್ಲಿರುವ "ಮೂಲಸಂಘದ ದೇಶೀಯಗಣದ ವಕ್ರಗಚ್ಛದ ಕೊಂಡಕುಂದಾನ್ವಯದ ಪರಿಯಳಿಯ ವಡ್ಡದೇವರ ಬಳಿಯ ದೇವೇಂದ್ರಸಿದ್ಧಾಂತದೇವರು, ಮೇಘಚಂದ್ರಪಂಡಿತದೇವರು, ಬಾಲಚಂದ್ರಸಿದ್ಧಾಂತದೇವರು ..." ಇತ್ಯಾದಿ ಪದಗಳಿಂದ ದ್ಯೋತಿತವಾಗುವುದು. ಇವನು ಮಹೇಂದ್ರಚಂದ್ರಪಂಡಿತ, ಶುಭಕೀರ್ತಿಪಂಡಿತ, ಜಿನಚಂದ್ರ, ಗುಣಚಂದ್ರ-ಮಲ

ಧಾರಿ, ದೇವೇಂದ್ರಸಿದ್ಧಾಂತದೇವ ಇವರುಗಳ ಸಧರ್ಮನಾದ ಮಾಘನಂದಿ-ಸಿದ್ಧಾಂತದೇವನ ಶಿಷ್ಯನು ; ತ್ರಿರತ್ನನಂದಿಭಟ್ಟಾರಕ, ಕಲ್ಯಾಣಕೀರ್ತಿಭಟ್ಟಾರಕ ಮತ್ತು (ಪೂರ್ವೋಕ್ತ) ಬಾಲಚಂದ್ರಸಿದ್ಧಾಂತದೇವರ ಸಧರ್ಮನು. ಈ ಶಿಲಾಲೇಖನವು ಸುಮಾರು ಕ್ರಿ. ಶ. ೧೧೮೦*ರಲ್ಲಿ ಹುಟ್ಟಿರಬಹುದಾದಕಾರಣ ಈ ಮೇಘಚಂದ್ರನು ಆ ಕಾಲದಲ್ಲಿ ಜೀವಿಸುತ್ತಿದ್ದನೆಂದು ನಾವು ಹೇಳಬಹುದು.

---

* ಈ ಶಾಸನವು ಕ್ರಿ. ಶ. ಸುಮಾರು ೧೧೦೦ ರಲ್ಲಿ ಹುಟ್ಟಿತೆಂದು ಮ|| ಆರ್. ನರಸಿಂಹಾಚಾರ್ಯರು ತಾವು ಪ್ರಕಾಶನಮಾಡಿದ “ ಶ್ರವಣಬೆಳ್ಗೊಳದ ಶಾಸನ ” ಗಳ ಎರಡನೆಯ ಮುದ್ರಣದಲ್ಲಿ (ಉಪೋದ್ಘಾತ, ಪುಟ ೭೯ ; ಆಂಗ್ಲ ಅನುವಾದ, ಪುಟ ೩೩) ಹೇಳಿರುವರು. ಇದು ತಪ್ಪೆಂದು ನಾವು ಮುಂದೆ ಹೇಳುವುದರಿಂದ ಸ್ಪಷ್ಟವಾಗುವುದು.

ಈ ಶಾಸನದಲ್ಲಿರುವ ‘ ವಡ್ಡದೇವರ ಬಳಿಯ ’ ಎಂಬ ಪದಗಳಲ್ಲಿ ವಡ್ಡದೇವನೆಂಬ ಜೈನ ಗುರುವಿನ ಹೆಸರು ಕೀರ್ತಿಸಲ್ಪಟ್ಟಿರುವುದೆಂದು ಮ|| ನರಸಿಂಹಾಚಾರ್ಯರು (ಉಕ್ತ ಉಪೋದ್ಘಾತದ ೮೦ ನೇ ಪುಟದಲ್ಲಿ) ಹೇಳಿರುವ ಅಭಿಪ್ರಾಯವೂ ತಪ್ಪೆಂದು ತೋರುವುದು. ‘ ಬಳಿ ’ ಅಥವಾ ‘ ವಳಿ ’ ಎಂಬ ಪದವು ಒಂದು ಗಚ್ಛದ ಅವಾಂತರ ಭೇದವನ್ನು ಎಂದರೆ, ಗಚ್ಛಕ್ಕಿಂತ ಸಣ್ಣದಾದ ಒಂದು ಸಮುದಾಯವನ್ನು ನಿರ್ದೇಶಿಸುವುದು. ಮೂಲಸಂಘದ ದೇಶೀಯಗಣದ ಪುಸ್ತಕಗಚ್ಛದ ಜೈನಗುರುಗಳೂ, ಜಿನಾಲಯಗಳೂ ಅನೇಕ ಕಡೆಗಳಲ್ಲಿ ಹರಡಿಕೊಂಡಿದ್ದುದರಿಂದ ಮೈಸೂರುದೇಶದ ಶಾಸನಗಳಲ್ಲಿ ಈ ಪುಸ್ತಕಗಚ್ಛಕ್ಕೆ ಸೇರಿದ ಎರಡು ‘ ಬಳಿ ’ ಗಳು ಕೀರ್ತಿತಗಳಾಗಿರುವುವು. ಇವುಗಳಲ್ಲಿ ಒಂದು ಹನಸೋಗೆಯ ‘ ಬಳಿ ’ ಯು. (ಚಾಮರಾಜನಗರದ ೧೫೩ ನೆಯ ಶಾಸನ ಹುಣಸೂರ ೧೪ ನೆಯ ಶಾಸನ ಇತ್ಯಾದಿ ಶಾಸನಗಳಲ್ಲಿ ಈ ಬಳಿಯ ಹೆಸರು ಹೇಳಲ್ಪಟ್ಟಿರುವುದು.) ಈ ಬಳಿಯ ಜೈನಗುರುಗಳು ಹನಸೋಗೆಯಲ್ಲಿ ಒಂದು ಪೀಠವನ್ನು ಮಾಡಿಕೊಂಡು ಅಲ್ಲಿನ ಮುಖ್ಯ ಬಸದಿಯಲ್ಲಿ ಪೂಜೆಮಾಡುತ್ತ ತಮಗೆ ಸೇರಿದ ಇತರ ಬಸ್ತಿಗಳಿಗೆ ತಮ್ಮ ಶಿಷ್ಯರನ್ನು ಕಳುಹಿಸಿ ತದ್ದ್ವಾರಾ ಆ ಬಸದಿಗಳನ್ನೂ ಅದಕ್ಕೆ ಸೇರಿದ ಭೂಮಿ ಮೊದಲಾದುದನ್ನೂ ನೋಡಿಕೊಳ್ಳುತ್ತಾ ಇದ್ದರು. ಹೀಗೆ ಇತರರ ಮೇಲೆ ವಿಚಾರಣೆಮಾಡಿಕೊಂಡಿರುತ್ತಿದ್ದುದರಿಂದ ಈ ಬಳಿಗೆ ಮುಖ್ಯಸ್ಥಾನವಾದ ಹನಸೋಗೆಯಲ್ಲಿದ್ದ ಗುರುಗಳಿಗೆ “ ಮಹಾಮಂಡಲಾಚಾರ್ಯ ” ಎಂಬ ಬಿರುದಿತ್ತು. (ಮೇಲೆ ಹೇಳಿದ ಚಾಮರಾಜನಗರದ ೧೫೩ ನೆಯ ಶಾಸನವನ್ನು ನೋಡಿ).

ಈ ಬಳಿಗೆ ಸೇರಿದ ಜೈನಗುರುಗಳ ಪರಂಪರೆಯು ಯಡತೊರೆ ೨೮ ನೆಯ ಶಾಸನದಲ್ಲಿಯೂ ಶ್ರವಣಬೆಳ್ಗೊಳದ ೪೩ ನೆಯ ಶಾಸನದಲ್ಲಿಯೂ ಕೊಡಲ್ಪಟ್ಟಿರುವುದು.

ಎರಡನೆಯದು ‘ ಇಂಗಳೇಶ್ವರದ ಬಳಿ.’ ಈ ಬಳಿಯ ಗುರುಗಳು ಇಂಗಳೇಶ್ವರದಲ್ಲಿರುವ ಚಂದ್ರಪ್ರಭ ಜಿನಾಲಯದಲ್ಲಿ ಪೂಜೆಮಾಡುತ್ತಾ ಅದಕ್ಕೆ ಸೇರಿದ ನಾನಾಸ್ಥಳಗಳಲ್ಲಿದ್ದ ಇತರ ಬಸದಿಗಳನ್ನೂ ಭೂಮಿ ಮೊದಲಾದುದನ್ನೂ ತಮ್ಮ ಶಿಷ್ಯರ ಮೂಲಕ ನೋಡಿಕೊಳ್ಳುತ್ತ ಮೇಲ್ವಿಚಾರಣೆಯನ್ನು ತಾವು ಮಾಡುತ್ತಿದ್ದರು. ಈ ಗುರುಗಳ ಪರಂಪರೆಯು ಶ್ರವಣಬೆಳ್ಗೊಳದ ೪೦ ನೆಯ ಶಾಸನದಲ್ಲಿ ಕೊಡಲ್ಪಟ್ಟಿರುವುದು ; ಇವರೂ ‘ ಮಹಾಮಂಡಲಾಚಾರ್ಯ’ರಾಗಿದ್ದರು.

ಶ್ರ. ಬೆ. ೪೨ನೆಯ ಶಿಲಾಲೇಖನದಲ್ಲಿ ಕೀರ್ತಿತನಾಗಿರುವ ಮೇಘಚಂದ್ರನು ಮೇಲೆ ಹೇಳಿದ ಮೇಘಚಂದ್ರರಿಬ್ಬರಿಂದಲೂ ಭಿನ್ನನು. ಇವನೂ ಮತ್ತು ಆ ಶಿಲಾಲೇಖನದಲ್ಲಿ ಕೀರ್ತಿತರಾದ ಇತರ ಜೈನಗುರುಗಳೂ ಪುಸ್ತಕಗಚ್ಛದವರೆಂದು ಈ ಶಿಲಾಲೇಖನದ ೭೫ನೆಯ ಪಂಕ್ತಿಯಲ್ಲಿನ "ದೇಶೀಯಗಣಗಜೇಂದ್ರಸಾಂದ್ರಮದಧಾರಾವಭಾಸರುಂ ವಿತರಣವಿಳಾಸರುಂ ಪುಸ್ತಕಗಚ್ಛಸ್ವಚ್ಛಸರಸೀಸರೋಜರುಂ" ಎಂಬ ಪದಗಳಿಂದ ದ್ಯೋತಿತವಾಗುವುದು. ಇವನ ಗುರುವು ಮಲಧಾರಿದೇವನ ಶಿಷ್ಯನಾದ ಶ್ರೀಧರದೇವನಿಗೆ ಶಿಷ್ಯನಾದ ಮಾಘನಂದಿಯು. ಈ ಮಾಘನಂದಿಗೆ ಈ ಮೇಘಚಂದ್ರನಲ್ಲದೆ ಮೇಲೆ ಹೇಳಲ್ಪಟ್ಟ ನಯಕೀರ್ತಿಯ ತಂದೆ (ಎಂದರೆ ಗುರು) ಆದ ಗುಣಚಂದ್ರನೂ, ಚಂದ್ರಕೀರ್ತಿಯೂ, ಉದಯಚಂದ್ರನೂ ಶಿಷ್ಯರಾಗಿದ್ದರು. ಈ ಶಿಲಾಲೇಖನದಲ್ಲಿ ನಯಕೀರ್ತಿಯು ಕ್ರಿ. ಶ. ೧೧೭೬ರಲ್ಲಿ ಸ್ವರ್ಗಗತನಾದನೆಂದು ಹೇಳಿರುವುದರಿಂದ ಆವನ ಗುರುವಾದ ಗುಣಚಂದ್ರನೂ ಈ ಗುರುವಿನ

---

ಈ ಇಂಗಳೇಶ್ವರದ ಬಳಿಯ ಗುರುಗಳಲ್ಲಿ ಒಬ್ಬನಾದ ಮಾಘನಂದಿಯು (ಇವನು ಶ್ರ. ಬೆ. ೪೦ ನೆಯ ಶಾಸನದಲ್ಲಿ ಕೀರ್ತಿತನಾದ ಕುಲಚಂದ್ರನ ಶಿಷ್ಯನು) ತನ್ನ ಶಿಷ್ಯನಾದ ಮಹಾಸಾಮಂತ ನಿಂಬದೇವನಿಂದ ಕೊಲ್ಲಾಪುರದಲ್ಲಿ ಕಟ್ಟಿಸಲ್ಪಟ್ಟ ರೂಪನಾರಾಯಣ ಬಸದಿಗೆ ಅಧಿಷ್ಠಾಯಕನಾಗಿ ಅಲ್ಲಿ ಒಂದು ತೀರ್ಥವನ್ನು ಎಂದರೆ, ಪೀಠವನ್ನು ಸ್ಥಾಪಿಸಿದನು. ಇವನ ಗುಡ್ಡರಲ್ಲನೇಕರು ಬಸದಿಗಳನ್ನು ಕಟ್ಟಿಸಿ ಅವುಗಳನ್ನು ಈ ರೂಪನಾರಾಯಣಬಸದಿಗೆ ನಿಬದ್ಧವನ್ನಾಗಿ (ಎಂದರೆ ಅಧೀನವನ್ನಾಗಿ) ಮಾಡಿ, ಈ ಬಸದಿಗಳ ಮತ್ತು ತತ್ಸಂಬದ್ಧವಾದ ಭೂಮಿ ಇತ್ಯಾದಿಗಳ ಮೇಲ್ವಿಚಾರಣೆಯು ಈ ಮಾಘನಂದಿಗೂ ತದನಂತರ ಗುರುಪಟ್ಟಕ್ಕೆ ಬಂದ ಆವನ ಶಿಷ್ಯಪ್ರಶಿಷ್ಯಾದಿಗಳಿಗೂ ಇದ್ದುದರಿಂದ ಇವರೂ 'ಮಹಾಮಂಡಲಾಚಾರ್ಯ' ರಾಗಿದ್ದರು. (ಶ್ರ. ಬೆ. ೩೯ ನೆಯ ಶಾಸನವನ್ನು ನೋಡಿ; ಅಲ್ಲಿ ಈ ಮಾಘನಂದಿಯ ಪ್ರಶಿಷ್ಯನಾದ ದೇವಕೀರ್ತಿಪಂಡಿತನು ಮಹಾಮಂಡಲಾಚಾರ್ಯನೆಂದು ಸ್ತುತನಾಗಿರುವನು). ಇಂಗಳೇಶ್ವರದ ಬಳಿಯ ಗುರುಗಳು ಬೇರೆ ಜನರಾದುದರಿಂದ ಈ ಗುರುಗಳು 'ಮೂಲಸಂಘದ ದೇಶಿಯಗಣದ ಪುಸ್ತಕಗಚ್ಛದ ಇಂಗಳೇಶ್ವರದಬಳಿಯ ಕೊಲ್ಲಾಪುರದ ಸಾವಂತನ ಬಸದಿಯ ಪ್ರತಿಬದ್ಧ ಮಾಘನಂದಿ, ಶುಭಚಂದ್ರ, ದೇವಕೀರ್ತಿ....' ಎಂದು ವ್ಯವಹರಿಸಲ್ಪಟ್ಟಿರುವರು. (ಮೇಲೆ ೯ ನೇ ಪುಟವನ್ನು ನೋಡಿ.)

ಹೀಗೆ ಜೈನಗುರುಗಳ 'ಬಳಿ' ಗಳೂ, ಬಳಿಗಳೊಳಗಿನ ಅವಾಂತರ ಸಮುದಾಯಗಳೂ ಯಾವುದೋ ಒಂದು ಊರಿನ ಅಥವಾ ಊರಿನಲ್ಲಿರುವ ಒಂದು ಬಸದಿಯ ಹೆಸರಿನಿಂದ ಕರೆಯಲ್ಪಟ್ಟಿರುವುವೆಂದು ಮೇಲೆ ಹೇಳಿದ ನಿದರ್ಶನಗಳಿಂದ ವ್ಯಕ್ತವಾಗುವುದಷ್ಟೆ. ಪ್ರಕೃತ ಶ್ರ. ಬೆ. ೫೫ ನೆಯ ಶಾಸನದಲ್ಲಿ ಹೇಳಿರುವ ಮೂಲಸಂಘದ ದೇಶಿಯಗಣದ ವಕ್ರಗಚ್ಛದ ಕೊಂಡಕುಂದಾನ್ವಯದ ಪರಿಯಳಿಯ ವಡ್ಡದೇವರ 'ಬಳಿ' ಯೂ ಕೂಡ ಹೀಗೆಯೇ ಒಂದು ಊರಿನ ಅಥವಾ ಊರಿನಲ್ಲಿರುವ ಒಂದು ಬಸದಿಯ ಹೆಸರಿನಿಂದ ನಿರ್ದಿಷ್ಟವಾಗಿರುವುದೆಂದೇ ನಮಗೆ ತೋರುವುದು. ಎಂದರೆ, ಪರಿಯಳಿಯೆಂಬುದು ಪ್ರಾಯಶಃ ಒಂದು ಊರಿನ ಹೆಸರೆಂದೂ, ವಡ್ಡದೇವರೆಂಬುದು ಆ ಊರಿನ ಒಂದು ಬಸದಿಯ ಜಿನದೇವರ ಹೆಸರೆಂದೂ ನಮಗೆ ತೋರುವುದು.

ಸಧರ್ಮನಾದ ಮೇಘಚಂದ್ರನೂ* ಸುಮಾರು ೧೧೪೬ರ ವರೆಗೆ ಜೀವಿಸುತ್ತಿದ್ದಿರ ಬಹುದು.

ಕವಿಚರಿತಕಾರರು ಈ ಮೂರು ಶಿಲಾಲೇಖನಗಳಲ್ಲಿ ಕೀರ್ತಿತರಾಗಿರುವ ಮೂರುಮಂದಿ ಮೇಘಚಂದ್ರರನ್ನೂ ಏಕೀಕರಿಸಿ ಒಬ್ಬ ಮನುಷ್ಯನನ್ನಾಗಿ ಮಾಡಿ† ಅವನೇ ನಾಗಚಂದ್ರನಿಂದ ಪಂಪರಾಮಾಯಣದಲ್ಲಿ ಕೀರ್ತಿತನಾದ ಮೇಘಚಂದ್ರನೆಂದು ಹೇಳಿರುವರು.

ಹೀಗೆಯೇ ' ನಾಗಚಂದ್ರನು ಸ್ತುತಿಸುವ ಶುಭಕೀರ್ತಿಯು ನಾಗಚಂದ್ರನ ಗುರುವಾದ ಬಾಲಚಂದ್ರನ ಮಗನೆಂದು ಶ್ರ. ಬೆ. 50ನೆಯ ಶಾಸನದಿಂದ ತಿಳಿಯುತ್ತದೆ ' ಎಂದು ಕವಿಚರಿತಕಾರರು ಮೇಲೆ ಹೇಳಿರುವ ಅಭಿಪ್ರಾಯವೂ ತಪ್ಪು. ಈ ಶಿಲಾಲೇಖನದಲ್ಲಿ ಮೇಲೆ ಹೇಳಿದ ಪುಸ್ತಕಗಚ್ಛದ ಸಕಳಚಂದ್ರನ ಶಿಷ್ಯನಾದ ಮೇಘಚಂದ್ರನನ್ನು ಹೊಗಳಿದನಂತರ,

---

* ಈ ೪೨ನೆಯ ಶಿಲಾಲೇಖನದಲ್ಲಿ ಗುಣಚಂದ್ರನ ಸಧರ್ಮನಾದ ಮೇಘಚಂದ್ರನಲ್ಲದೆ ಇನ್ನೊಬ್ಬ ಮೇಘಚಂದ್ರನೂ ಕೀರ್ತಿತನಾಗಿರುವನು. ಇವನು ಗುಣಚಂದ್ರನ ಶಿಷ್ಯನಾದ ನಯಕೀರ್ತಿಯ ಶಿಷ್ಯನು. ಅಣ್ಣೀತಟಾಕದ (ಅಣ್ಣೀಗೆರೆಯ) ಮಲಧಾರಿ, ಶ್ರೀಧರದೇವ, ದಾಮನಂದಿ, ಭಾನುಕೀರ್ತಿ, (ಅಧ್ಯಾತ್ಮಿ-) ಬಾಲಚಂದ್ರ ಇತ್ಯಾದಿಗಳ ಸಧರ್ಮನು. ಕ್ರಿ. ಶ. ೧೧೪೮ರಲ್ಲಿ ಸಮಾಧಿಶತಕವ್ಯಾಖ್ಯಾನವನ್ನುಬರೆದ ಮೇಘಚಂದ್ರನು ಇವನೇ ಆಗಿರಬಹುದೆಂದು ಕವಿಚರಿತಕಾರರು ಮೇಲೆ ಹೇಳಿರುವರು. ಈ ಅಭಿಪ್ರಾಯವು ಸಾಧುವೆಂದು ನಮಗೆ ತೋರುವುದಿಲ್ಲ. ಈ ಮೇಘಚಂದ್ರನ ಗುರುವಾದ ನಯಕೀರ್ತಿಯು ೧೧೭೬ರ ವರೆಗೆ ಜೀವಿಸಿದ್ದನೆಂದೂ, ಅವನ ಸಧರ್ಮನಾದ ಅಧ್ಯಾತ್ಮಿ-ಬಾಲಚಂದ್ರನು ಕ್ರಿ. ಶ. ೧೨೩೧ನೇ ವರ್ಷದ ಅಂತ್ಯದಲ್ಲಿ ಜೀವಿಸಿದ್ದನೆಂದೂ ಶ್ರ. ಬೆ. ೪೨ನೆಯ ಮತ್ತು ೮೧ನೆಯ ಶಾಸನಗಳಿಂದ ತಿಳಿದುಬರುವುದು. ಈ ಬಾಲಚಂದ್ರನು ಈ ಮೇಘಚಂದ್ರನ ಹಿರಿಯಸಧರ್ಮನೆಂದು ಈ ೪೨ನೇ ಶಾಸನದಲ್ಲಿನ ಶಿಷ್ಯಕ್ರಮದಿಂದ ತಿಳಿದುಬರುವುದರಿಂದ ಈ ಮೇಘಚಂದ್ರನೂ ಸುಮಾರು ಕ್ರಿ. ಶ. ೧೨೩೧ ರ ವರೆಗೆ ಜೀವಿಸುತ್ತಿದ್ದನೆಂದು ನಾವು ಊಹಿಸಬಹುದು. ಇಂಥವನು ಕ್ರಿ. ಶ. ೧೧೪೮ರಲ್ಲಿ ಒಂದು ಗ್ರಂಥವನ್ನು ಬರೆದನೆಂಬುದು ಪ್ರಾಯಶಃ ಅಸಂಭವವೆಂದೇ ಹೇಳಬೇಕು.

† ಕವಿಚರಿತಕಾರರಾದ ಮ|| ಆರ್. ನರಸಿಂಹಾಚಾರ್ಯರಿಂದ ಪ್ರಕಾಶಿತವಾದ " ಶ್ರವಣಬೆಳ್ಗೊಳದ ಶಾಸನ " ಗಳ ಎರಡನೆಯ ಮುದ್ರಣದ ಅಂತ್ಯದಲ್ಲಿರುವ ನಾಮಾನುಕ್ರಮಣಿ (index) ಯಲ್ಲಿಯೂ ಕೂಡ ಹೀಗೆಯೇ ಮೇಲೆ ಹೇಳಿದ ಸಕಲಚಂದ್ರನ ಶಿಷ್ಯನಾದ ಮೇಘಚಂದ್ರನೂ, ವಕ್ರಗಚ್ಛದ ಮಾಘನಂದಿಯ ಶಿಷ್ಯನಾದ ಮೇಘಚಂದ್ರನೂ ಏಕೀಕರಿಸಲ್ಪಟ್ಟು ಒಬ್ಬನೇ ಮನುಷ್ಯನೆಂದು ಭಾವಿಸಲ್ಪಟ್ಟಿರುವರು. ಆದರೆ ಮೇಲೆ ಹೇಳಿದ ಪುಸ್ತಕಗಚ್ಛದ ಮಾಘನಂದಿಯ ಶಿಷ್ಯನಾದ ಮೇಘಚಂದ್ರನೂ, ನಯಕೀರ್ತಿಯ ಶಿಷ್ಯನಾದ ಮೇಘಚಂದ್ರನೂ ಬೇರೆ ಮನುಷ್ಯರಾಗಿದ್ದರೆಂದು ಇಲ್ಲಿ ಸೂಚಿಸಲ್ಪಟ್ಟಿರುವುದು.

"ತತ್ಸಧರ್ಮರು ||

ಶ್ರೀಬಾಳಚಂದ್ರಮುನಿರಾಜಪವಿತ್ರಪುತ್ರಃ
ಪ್ರೋದ್ಧೃಪ್ತವಾದಿಜನಮಾನಲತಾಲವಿತ್ರಃ |
ಜೀಯಾದಯಂ ಜಿತಮನೋಜಭುಜಪ್ರತಾಪಃ
ಸ್ಯಾದ್ವಾದಕೀರ್ತಿಸುಭಗಃ ಶುಭಕೀರ್ತಿದೇವಃ ||

ಎಂದು ಒಬ್ಬ ಶುಭಕೀರ್ತಿದೇವನ ಸ್ತುತಿಯಿರುವುದು. ನಾಗಚಂದ್ರನ ಗುರುವು ವಕ್ರಗಚ್ಛದ ಬಾಲಚಂದ್ರನೆಂದೂ ಮೇಘಚಂದ್ರನು ಈ ಬಾಲಚಂದ್ರನ ಸಧರ್ಮನೆಂದೂ ಕವಿಚರಿತಕಾರರು ಮೇಲೆ ಹೇಳಿರುವರಷ್ಟೆ. ಆದುದರಿಂದ ಮೇಘಚಂದ್ರನು ವಕ್ರಗಚ್ಛದ ಬಾಲಚಂದ್ರನಿಗೂ ಅವನ ಮಗ ಶುಭಕೀರ್ತಿಗೂ, ಎಂದರೆ ತಂದೆ ಮಕ್ಕಳಿಬ್ಬರಿಗೂ ಸಧರ್ಮನೆಂದು ಕವಿಚರಿತಕಾರರು ಹೇಳಿದ ಹಾಗಾಯಿತು. ಇದು ಪ್ರಾಯಃ ಅಸಂಭಾವ್ಯವೆಂದೇ ಹೇಳಬೇಕಾಗಿರುವುದು. ಅಲ್ಲದೆ, ಕವಿಚರಿತಕಾರರಿಂದ ಹೇಳಲ್ಪಟ್ಟಿರುವ ವಕ್ರಗಚ್ಛದ ಬಾಲಚಂದ್ರನು ಕ್ರಿ. ಶ. ೧೧೭೬-೧೧೯೬ರಲ್ಲಿ ಜೀವಿಸಿದ್ದುದರಿಂದ (ಇದು ಉತ್ತರಕ್ಷಣದಲ್ಲಿಯೇ ವ್ಯಕ್ತಮಾಡಲ್ಪಡುವುದು) ಈ ಬಾಲಚಂದ್ರನಾಗಲಿ ಇವನ ಮಗನಾಗಲಿ ಕ್ರಿ. ಶ. ೧೧೧೫ರಲ್ಲಿ ಲೋಕಾಂತರವನ್ನೈದಿದ ಮೇಘಚಂದ್ರನ ಸಧರ್ಮರಾಗಿದ್ದರೆಂಬುದು ಸುತರಾಂ ಅಸಂಭವವಾಗಿರುವುದು. ಸಾಲದುದಕ್ಕೆ 'ಶ್ರೀಬಾಲಚಂದ್ರಗುರುರಾಜ ಪವಿತ್ರಪುತ್ರಃ' ಎಂದು ಮೇಲಿನ ಶ್ಲೋಕದಲ್ಲಿರುವ 'ಪುತ್ರ' ಎಂಬ ಪದಕ್ಕೆ ಮಗ ಎಂದು ಅರ್ಥಮಾಡುವುದೇ ಅನುಚಿತ. ಶ್ರವಣ ಬೆಳ್ಗೊಳದ ಶಾಸನಗಳಲ್ಲಿಯೂ ಮತ್ತು ಜೈನಗುರ್ವಾವಳಿಗಳನ್ನು ಕೀರ್ತಿಸುವ ಇತರ ವಾಕ್ಯಗಳಲ್ಲಿಯೂ 'ಪುತ್ರ' 'ಸುತ' 'ತನೂಭವ' ಇತ್ಯಾದಿಪದಗಳು 'ಶಿಷ್ಯ'* ಎಂಬ ಅರ್ಥದಲ್ಲಿಯೇ ವಿಶೇಷವಾಗಿ ಪ್ರಯೋಗಿಸಲ್ಪಡುವುವು. ಆದುದರಿಂದ ಇಲ್ಲಿಯೂ 'ಶ್ರೀ ಬಾಲಚಂದ್ರಗುರುರಾಜ ಪವಿತ್ರಪುತ್ರಃ' ಎಂಬುದಕ್ಕೆ 'ಶ್ರೀ ಬಾಲಚಂದ್ರನ ಶಿಷ್ಯನು' ಎಂದು ಅರ್ಥಮಾಡುವುದೇ ಉಚಿತ. ಈ ಬಾಲಚಂದ್ರನು ಪ್ರಾಯಶಃ ಮೇಘಚಂದ್ರನ ಗುರುವಾದ ಸಕಲಚಂದ್ರನ ಸಧರ್ಮರಲ್ಲಿ (ಈ ಸಧರ್ಮರ ಹೆಸರುಗಳು ಶಾಸನದಲ್ಲಿ ಹೇಳಲ್ಪಟ್ಟಿಲ್ಲ) ಒಬ್ಬನಾದುದರಿಂದ ಅವನ ಶಿಷ್ಯನಾದ ಶುಭಕೀರ್ತಿಯು ಮೇಘಚಂದ್ರನ ಸಧರ್ಮನೆಂದು ಇಲ್ಲಿ ಹೇಳಲ್ಪಟ್ಟಿರುವಂತೆ ತೋರುವುದು. (ಶ್ರ. ಬೆ. ೫೫ನೆಯ ಶಾಸನವನ್ನು ನೋಡಿ.)

---

* ಹೀಗೆಯೇ 'ಅಗ್ರಜ, ಅನುಜ' ಎಂಬ ಪದಗಳೂ ಕೂಡ 'ಹಿರಿಯ ಸಧರ್ಮ' 'ಕಿರಿಯ ಸಧರ್ಮ' ಎಂಬ ಅರ್ಥಗಳಲ್ಲಿಯೇ ಈ ಗುರ್ವಾವಳಿಗಳಲ್ಲಿ ಉಪಯೋಗಿಸಲ್ಪಟ್ಟಿರುವುವೇ ಹೊರತು ಅಣ್ಣ, ತಮ್ಮ ಎಂಬ ಮುಖ್ಯಾರ್ಥಗಳಲ್ಲಿ ಸಾಮಾನ್ಯವಾಗಿ ಉಪಯೋಗಿಸಲ್ಪಟ್ಟಿಲ್ಲ.

ಹೀಗೆಯೇ ಮೇಲೆ ಹೇಳಿದ ಶ್ರ. ಬೆ. ೫೫ ನೆಯ ಶಾಸನದಲ್ಲಿ ಹೊಗಳಲ್ಪಟ್ಟಿರುವ 'ವಕ್ರಗಚ್ಛದ ಬಾಲಚಂದ್ರನೇ ನಾಗಚಂದ್ರನ ಗುರು' ಎಂಬ ಕವಿಚರಿತಕಾರರ ಅಭಿಪ್ರಾಯವೂ ತಪ್ಪೆಂದೂ ಈ ಬಾಲಚಂದ್ರನು ಕ್ರಿ. ಶ. ೧೧೭೬ರಲ್ಲಿ ಜೀವಿಸುತ್ತಿದ್ದನೆಂದೂ, ಇವನು ನಾಗಚಂದ್ರನ ಗುರುವಾಗಿರಲಾರನೆಂದೂ ಮ|| ಶಾಮಶಾಸ್ತ್ರಿಗಳಿಂದ ಬರೆಯಲ್ಪಟ್ಟ ೧೯೨೩ ನೆಯ ವರ್ಷದ 'ಆರ್ಕೆಯಲಾಜಿಕಲ್ ಡಿಪಾರ್ಟ್‌ಮೆಂಟ್ ರಿಪೋರ್ಟಿನ ೩೬-೩೯ ನೆಯ ಪುಟಗಳಲ್ಲಿ ಮುದ್ರಿತವಾಗಿರುವ ಕಲಸಾಪುರದ ಶಿಲಾಶಾಸನದಿಂದ ವ್ಯಕ್ತವಾಗುವುದು. ಈ ಶಾಸನವು ಹೊಯ್ಸಲ ವೀರಬಲ್ಲಾಳನ ಕಾಲದಲ್ಲಿ ಶಕವರ್ಷ ೧೦೯೮ನೆಯ ದುರ್ಮುಖಿ ಸಂವತ್ಸರದಲ್ಲಿ ಹುಟ್ಟಿದ್ದು. ಆ ಸಂವತ್ಸರದ ಉತ್ತರಾಯಣ ಸಂಕ್ರಮಣದಂದು ವೀರಬಲ್ಲಾಳದೇವನು ಅಮರದಾನವ ಮಾಡುವಲ್ಲಿ ಶ್ರೀಮನ್ಮಹಾವಡ್ಡವ್ಯವಹಾರಿ ಕವಡಮಯ್ಯನ ಮಗ ದೇವಿಸೆಟ್ಟಿಯು ಬಿನ್ನಪಮಾಡಿಕೊಂಡು ತಾನು ಮಾಡಿಸಿದ ವೀರಬಲ್ಲಾಳ ಜಿನಾಲಯವೆಂಬ ಶಾಂತಿನಾಥದೇವರ ಬಸದಿಯ ಖಂಡಸ್ಫುಟಿತ ಜೀರ್ಣೋದ್ಧಾರಾದಿಗಳಿಗಾಗಿ ತನ್ನ ಗುರುವಾದ ಮಹಾಮಂಡಲಾಚಾರ್ಯ ಬಾಲಚಂದ್ರ ಸಿದ್ಧಾಂತದೇವರಿಗೆ ಒಂದು ದತ್ತಿಯನ್ನು (ವೀರಬಲ್ಲಾಳದೇವನಿಂದ ?) ಕೊಡಿಸಿದನೆಂದು ಈ ಶಾಸನದಲ್ಲಿ ಹೇಳಿರುವುದು.*

ಈ ಬಾಲಚಂದ್ರನು ಮೂಲಸಂಘದ ದೇಶಿ [ಯ] ಗಣದವನೆಂದೂ...ಗಚ್ಛದವನೆಂದೂ (ಇಲ್ಲಿ 'ಗಚ್ಛ' ಎಂಬ ಪದದ ಹಿಂದಿನ ಅಕ್ಷರಗಳು ಲುಪ್ತಗಳಾಗಿರುವವು) ಇಲ್ಲಿ ಹೇಳಲ್ಪಟ್ಟು ಇವನ ಗುರುಗಳ ಆನುಪೂರ್ವಿಯು ಈ ರೀತಿಯಾಗಿ ಹೇಳಲ್ಪಟ್ಟಿರುವುದು. (ಪಂಕ್ತಿ ೩೮ ಆದಿ) ದೇವೇಂದ್ರ-ಸೈದ್ಧಾಂತಿಕ; ತಚ್ಛಿಷ್ಯ 'ಚತುರ್ಮುಖಾಖ್ಯೆಯಂ ಆಳ್ದ' ವೃಷಭನಂದಿಮುನಿ; ಅವನ ಶಿಷ್ಯರು ಗೋಪನಂದಿಪಂಡಿತ, ಜಿನಚಂದ್ರ, [ಮಾಘನಂದಿ-ಸೈದ್ಧಾಂತಿಕದೇವ]ರು; ಈ ಮಾಘನಂದಿಯ ಶಿಷ್ಯರು ರತ್ನನಂದಿಮುನಿ, ಬಾಲಚಂದ್ರಮುನಿಗಳು. ಈ ಗುರುಪರಂಪರೆ

---

* ಈ ಶಾಸನವನ್ನು ಮುದ್ರಿಸಿದನಂತರ ಇದರ ಅಡಿಯಲ್ಲಿ ಮ|| ಶಾಮಶಾಸ್ತ್ರಿಗಳು ೩೯ನೆಯ ಪುಟದಲ್ಲಿ ನೋಟ್ (ವಿವರಣ) ಎಂದು ಕೆಲವು ವಾಕ್ಯಗಳನ್ನು ಬರೆದಿರುವರು. ಈ ಶಾಸನದಲ್ಲಿ ಸ್ತುತನಾದ ದೇವಿಸೆಟ್ಟಿಯು ಕವಡಮಯ್ಯನ ವಂಶದಲ್ಲಿ ಹುಟ್ಟಿದವನೆಂದೂ (a descendant of the family of Kavadamayya), ಈ ದೇವಿಸೆಟ್ಟಿಯು ತನ್ನ ಗುರುವಾದ ಮೂಲಸಂಘದ ಕೊಂಡಕುಂದಾನ್ವಯದ....ಗಣದ ದೇಶಿಗಚ್ಛದ ಬಾಲಚಂದ್ರಮುನಿಯ ಬಿನ್ನಪಕ್ಕನುಸಾರವಾಗಿ (!) ವೀರಬಲ್ಲಾಳ ಜಿನಾಲಯವನ್ನು ಕಟ್ಟಿಸಿದನೆಂದೂ ಇಲ್ಲಿ ಅವರು ಹೇಳಿರುವರು ! ದೇಶಿಯಗಣವೆಂದು ಒಂದು ಗಣದ ಹೆಸರನ್ನು ನಾವು ಕೇಳಿರುವೆವೇ ಹೊರತು ದೇಶಿಯಗಚ್ಛವೆಂಬ ಒಂದು ಗಚ್ಛವುಂಟೆಂದು ಈ ವರೆಗೆ ನಾವು ಕೇಳಿಲ್ಲ.

ಯನ್ನು ಮೇಲೆ ಹೇಳಿದ ಶ್ರವಣಬೆಳ್ಗೊಳದ ೫೫ನೆಯ ಶಾಸನದಲ್ಲಿ ಹೇಳಿರುವ ಮೂಲಸಂಘದ ದೇಶಿಯಗಣದ ವಕ್ರಗಚ್ಛದ ಗುರ್ವಾವಳಿಯೊಡನೆ (ಮೇಲೆ ೩೫ನೇ ಪುಟವನ್ನು ನೋಡಿ) ಹೋಲಿಸಿ ನೋಡಿದರೆ ಈ ಎರಡು ಶಾಸನಗಳಲ್ಲಿ ಪ್ರೋಕ್ತವಾಗಿರುವ ಗುರುಪರಂಪರೆಯು ಒಂದೇ ಎಂಬ ವಿಷಯವು ಸ್ಪಷ್ಟವಾಗಿ ಕಾಣಿಸಿಕೊಳ್ಳುವುದು.† ಸಾಲದುದಕ್ಕೆ ಆ ಶ್ರ. ಬೆ. ಶಾಸನದಲ್ಲಿ ಹೇಳಿರುವ 'ಸಿದ್ಧಾಂತಾದ್ಯಖಿಲಾಗಮಾರ್ಥ ನಿಪುಣ ವ್ಯಾಖ್ಯಾನಸಂಶುದ್ಧಿಯಿಂ' ಎಂದು ಮೊದಲಾದ ಬಾಲಚಂದ್ರ ಮುನಿಯನ್ನು ಹೊಗಳುವ ಪದ್ಯವೂ, ಆದರ ಹಿಂದೆ ಇರುವ 'ಶ್ರೀ ಮೂಲಸಂಘ ಕಮಲಾಕರರಾಜಹಂಸಃ' ಎಂದು ಮೊದಲಾಗುವ ಬಾಲಚಂದ್ರಸ್ತೋತ್ರರೂಪವಾದ ಶ್ಲೋಕವೂ ಕೂಡ ಈ ಕಲಸಾಪುರದ ಶಾಸನದಲ್ಲಿ (ಪಂಕ್ತಿ ೪೨ ಆದಿ) ಹೇಳಲ್ಪಟ್ಟಿರುವವು. ಆದುದರಿಂದ ಈ ಕಲಸಾಪುರದ ಶಾಸನದಲ್ಲಿ ಸ್ತುತನಾಗಿರುವ ಬಾಲಚಂದ್ರನು 'ಈ ವಕ್ರಗಚ್ಛದ ಬಾಲಚಂದ್ರನೇ ನಾಗಚಂದ್ರನ ಗುರು' ಎಂದು ಕವಿಚರಿತಕಾರರು ಹೇಳಿರುವ ಶ್ರ. ಬೆ. ೫೫ನೇ ಶಾಸನದಲ್ಲಿ ಕೀರ್ತಿತನಾಗಿರುವ ಬಾಲಚಂದ್ರನೇ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಈ ಬಾಲಚಂದ್ರನು ಮೇಲೆ ಹೇಳಿದ ಕಲಸಾಪುರದ ಶಾಸನದಲ್ಲಲ್ಲದೆ ಬೇಲೂರು ೧೨೯ನೆಯ ಶಾಸನದಲ್ಲಿಯೂ ಕೀರ್ತಿತನಾಗಿರುವನು. ಈ ಶಾಸನದ ಉಪಕ್ರಮದಲ್ಲಿಯೂ ಮೇಲೆ ಹೇಳಿದ 'ಶ್ರೀ ಮೂಲಸಂಘ ಕಮಲಾಕರ ರಾಜಹಂಸಃ' ಎಂದು ಮೊದಲಾಗುವ ಬಾಲಚಂದ್ರ ಸ್ತುತಿರೂಪವಾದ ಶ್ಲೋಕವಿರುವುದು. ತದನಂತರ ಶ್ರೀಮನ್ಮಹಾವಡ್ಡವ್ಯವಹಾರಿ ಕವಡಮಯ್ಯನ ದೇವಿಸೆಟ್ಟಿ ಮಾಡಿಸಿದ ಶಾಂತಿನಾಥದೇವರ ಬಸದಿಯ ಪರಿಸೂತ್ರದೊಳಗೆ ತಾವು ಮಾಡಿಸಿದ ಮಲ್ಲಿನಾಥದೇವರ ಅರ್ಚನಾದಿಗಳಿಗಾಗಿ ಅಪ್ಪಯ್ಯ, ಗೋಪಯ್ಯ, ಮಾಚಯ್ಯ ಎಂಬ ಮೂರು ಸಹೋದರರು ಶ್ರೀಮತ್ಪ್ರತಾಪಚಕ್ರವರ್ತಿ ವೀರಬಲ್ಲಾಳನ ಆಳಿಕೆಯಲ್ಲಿ 'ನಳ

† ಆದರೆ ಈ ಕಲಸಾಪುರದ ಶಾಸನದಲ್ಲಿ ವೃಷಭನಂದಿಮುನಿಯ ಶಿಷ್ಯರಲ್ಲಿ ಎರಡು ಮೂರು ಜನರ ಹೆಸರನ್ನು ಮಾತ್ರ ಹೇಳಿ, ಮಾಘನಂದಿಯ ಶಿಷ್ಯರಲ್ಲಿ ಇಬ್ಬರ ಹೆಸರನ್ನು ಮಾತ್ರ ಹೇಳಿರುವುದು. ಶ್ರ. ಬೆ. ೫೫ನೆಯ ಶಾಸನದಲ್ಲಾದರೆ ವೃಷಭನಂದಿಮುನಿಯ ಶಿಷ್ಯರಲ್ಲಿ ಏಳುಜನರ ಹೆಸರನ್ನು ಹೇಳಿ, ಇವರಲ್ಲಿ ಇಬ್ಬರ ಶಿಷ್ಯರು ಹೇಳಲ್ಪಟ್ಟಿರುವರು. ಮಾಘನಂದಿಯ ಶಿಷ್ಯರಲ್ಲಿ ನಾಲ್ಕು ಜನರ ಹೆಸರುಗಳು ಇಲ್ಲಿ ಹೇಳಲ್ಪಟ್ಟಿರುವುವು ; ಮತ್ತು ಈ ಕಲಸಾಪುರದ ಶಾಸನದಲ್ಲಿ 'ರತ್ನನಂದಿ' ಎಂದು ಹೇಳಲ್ಪಟ್ಟಿರುವ ಮಾಘನಂದಿಶಿಷ್ಯನು ಶ್ರ. ಬೆ. ಶಾಸನದಲ್ಲಿ 'ತ್ರಿರತ್ನನಂದಿ' ಎಂದು ಹೇಳಲ್ಪಟ್ಟಿರುವನು. ಈ ಕಲಸಾಪುರದ ಶಾಸನವು ಕ್ರಿ. ಶ. ೧೧೭೬ರಲ್ಲಿ ಹುಟ್ಟಿದ್ದು. ಇದರಲ್ಲಿನ ಗುರುಪರಂಪರೆಯನ್ನೇ ಹೇಳುವ ಶ್ರ. ಬೆ. ೫೫ನೆಯ ಶಾಸನವು ಸುಮಾರು ಅದೇ ಕಾಲದಲ್ಲಿ ಎಂದರೆ ಕ್ರಿ. ಶ. ೧೧೮೦ರಲ್ಲಿ ಹುಟ್ಟಿರಬಹುದು.

ಸಂವತ್ಸರದ ಕಾರ್ತಿಕಶುದ್ಧ ಪಾಡಿವ ಬೃಹವಾರದಂದು' ಎಂದರೆ ಕ್ರಿ.ಶ. ೧೧೯೬ನೆಯ ಅಕ್ಟೋಬರ್ ೨೪ನೇ ಬೃಹಸ್ಪತಿವಾರದಂದು ಮಹಾಮಂಡಲಾಚಾರ್ಯರಾದ ಮಾಂಡವಿಯ ಬಾಲಚಂದ್ರದೇವರ ಶಿಷ್ಯ ರಾಮಚಂದ್ರಮುನಿಯಿಂದ ಬಮತಿಗಟ್ಟವೆಂಬ ಗ್ರಾಮವನ್ನು ಕ್ರಯಕ್ಕೆ ಪಡೆದರೆಂದು ಈ ಶಾಸನದಲ್ಲಿ ಹೇಳಿರುವುದು. ಇಲ್ಲಿ ಹೇಳಲ್ಪಟ್ಟಿರುವ ಕವಡಮಯ್ಯ ದೇವಿಸೆಟ್ಟಿಯರೂ ದೇವಿಸೆಟ್ಟಿಕಾರಿತ ಶಾಂತಿನಾಥ ದೇವರ ಬಸದಿಯೂ, ಮಹಾಮಂಡಲಾಚಾರ್ಯ ಬಾಲಚಂದ್ರನೂ ಮೇಲಿನ ಕಲಸಾಪುರದ ಶಾಸನದಲ್ಲಿ ಹೇಳಲ್ಪಟ್ಟಿರುವರೇಯೆ ಎಂಬುದು ಸುಸ್ಪಷ್ಟವಾಗಿರುವುದು.

ಕವಿಚರಿತಕಾರರಿಂದ ಹೇಳಲ್ಪಟ್ಟಿರುವ ಈ ವಕ್ರಗಚ್ಛದ ಬಾಲಚಂದ್ರನು ಶಕವರ್ಷ ೧೦೯೮ನೆಯ ದುರ್ಮುಖಿ ಸಂವತ್ಸರದ ಉತ್ತರಾಯಣ ಸಂಕ್ರಾಂತಿಯಂದು ಎಂದರೆ ಕ್ರಿ. ಶ. ೧೧೭೬ನೇ ವರ್ಷದ ಅಂತ್ಯದಲ್ಲಿ ಜೀವಿಸಿದ್ದನೆಂದು ಮೇಲೆ ಹೇಳಿದ ಕಲಸಾಪುರದ ಶಾಸನದಿಂದ ವ್ಯಕ್ತವಾಗುವುದಷ್ಟೆ. ಬೇಲೂರು ೧೨೪ನೆಯ ಶಾಸನದಲ್ಲಿ ಇವನು ಮಾಂಡವಿಯಲ್ಲಿ ಮಹಾಮಂಡಲಾಚಾರ್ಯನಾಗಿದ್ದನೆಂದು ಹೇಳಿರುವುದರಿಂದ ಆ ಶಾಸನವು ಹುಟ್ಟಿದ ಕಾಲದಲ್ಲಿ ಎಂದರೆ ಕ್ರಿ. ಶ. ೧೧೯೬ನೆಯ ಅಕ್ಟೋಬರ್ ತಿಂಗಳಿನಲ್ಲಿಯೂ ಇವನು ಜೀವಿಸಿದ್ದನೆಂದು ತೋರುವುದು. ಎಂದರೆ ಈ ವಕ್ರಗಚ್ಛದ ಬಾಲಚಂದ್ರನು ಕವಿಚರಿತಕಾರರಿಂದ ಮೇಲೆ ಪ್ರಸ್ತುತನಾಗಿರುವ ಅಧ್ಯಾತ್ಮಿ-ಬಾಲಚಂದ್ರನ ಸಮಕಾಲೀನನು.† ಈ ಅಧ್ಯಾತ್ಮಿ-ಬಾಲಚಂದ್ರನ ವಿಷಯದಲ್ಲಿ 'ಇವನು ೧೧೮೨ರಲ್ಲಿ ಬದುಕಿದ್ದನೆಂದು ತಿಳಿಯುತ್ತದೆ. ಇವನು ಬೇರೆ ನಾಗಚಂದ್ರನ ಗುರುವಾಗಿರಲಾರನು' ಎಂದು ಕವಿಚರಿತಕಾರರು ಹೇಳಿರುವ (ಮೇಲೆ ೩೪ನೆಯ ಪುಟವನ್ನು ನೋಡಿ) ವಾಕ್ಯದಿಂದಲೇ ಕ್ರಿ. ಶ. ೧೧೭೬-೧೧೯೬ರಲ್ಲಿ ಬದುಕಿದ್ದ ಈ ವಕ್ರಗಚ್ಛದ ಬಾಲಚಂದ್ರನೂ ನಾಗಚಂದ್ರನ ಗುರುವಾಗಿರಲಾರನೆಂದೂ ಹೇಳಲ್ಪಟ್ಟಂತಾಯಿತು.

ಕವಿಚರಿತಕಾರರು ಮೆ|| ರೈಸ್ ಮತ್ತು ಮೆ|| ಪಾಠಕರ ಅಭಿಪ್ರಾಯಗಳನ್ನು ಮೇಲೆ ಹೇಳಿದಂತೆ ಖಂಡಿಸಿ ನಾಗಚಂದ್ರನು ಕ್ರಿ. ಶ. ಸುಮಾರು ೧೧೦೫

---

† ಅಧ್ಯಾತ್ಮಿ-ಬಾಲಚಂದ್ರನ ನಿಯೋಗದಿಂದ ಸುಜನೋತ್ತಂಸ ಅಥವಾ ಬೊಪ್ಪಣಪಂಡಿತನು 'ಪೇಳಿದ' ಗುಮ್ಮಟಸ್ತುತಿಯು ಶ್ರ. ಬೆ. ೮೫ನೆಯ ಶಾಸನದಲ್ಲಿ ಒಳಪಟ್ಟಿದೆ. ಈ ಶಾಸನವನ್ನು ಕವಡಮಯ್ಯನ ದೇವಣನು ಎಂದರೆ ಮೇಲೆ ಹೇಳಲ್ಪಟ್ಟ ವಕ್ರಗಚ್ಛದ ಬಾಲಚಂದ್ರನ ಗುಡ್ಡನಾದ ಶ್ರೀಮನ್ಮಹಾವಡ್ಡವ್ಯವಹಾರಿ ಕವಡಮಯ್ಯನ ಮಗನಾದ ದೇವಿಸೆಟ್ಟಿಯು ಈ ಅಧ್ಯಾತ್ಮಿ-ಬಾಲಚಂದ್ರನ ನಿಯೋಗದಿಂದ ಕಡಯಿಸಿದನೆಂದು ಈ ಶಾಸನದ ಕೊನೇ ಪದ್ಯದಲ್ಲಿ ಹೇಳಿದೆ. ಇದರಿಂದಲೂ ಕೂಡ ಈ ಇಬ್ಬರು ಬಾಲಚಂದ್ರಮುನಿಗಳು ಸಮಕಾಲೀನರಾಗಿದ್ದರೆಂಬ ಅಂಶವು ವ್ಯಕ್ತವಾಗುವುದು.

(೧೧೦೦) ರಲ್ಲಿ ಇದ್ದನೆಂದು ನಿರ್ಣಯಿಸಿರುವರು. ಈ ನಿರ್ಣಯಕ್ಕೆ ಆಧಾರಭೂತವಾದ ಕಾರಣಗಳು ಹೀಗೆಂದು ಅವರಿಂದ ಕೊಡಲ್ಪಟ್ಟಿರುವುವು :—

"(1) ಎರಡನೆಯ ನಾಗವರ್ಮನು (ಸು. 1145) ಭಾಷಾಭೂಷಣದಲ್ಲಿ 'ದ್ವಿತೀಯಾರ್ಥೇ ಚತುರ್ಥೀ' ಎಂಬ ಸೂತ್ರದ (ಸೂತ್ರ 93) ಕೆಳಗೆ—"ಬಹುತಾಪಕ್ಕೆ ಬಿಗುತರ್ಪ ವಿಪ್ಪಣ್ಣಪಡೆದಂ ಮತ್ಸ್ಯಾವತಾರಕ್ಕೆ" ಎಂಬ ಪದ್ಯಭಾಗವನ್ನು ಪಂಪರಾಮಾಯಣದಿಂದ (ಆಶ್ವಾಸ 7, ಪದ್ಯ 98) ತೆಗೆದು ಉದಾಹರಿಸಿದ್ದಾನೆ. ಇದರಿಂದ ನಾಗಚಂದ್ರನು ನಾಗವರ್ಮನ ಕಾಲಕ್ಕೆ ಹಿಂದೆಯೇ ಪ್ರಸಿದ್ಧನಾಗಿದ್ದಿರಬೇಕೆಂದು ವ್ಯಕ್ತವಾಗುತ್ತದೆ. ಒಂದು ತಲೆಯಾದರೂ ಹಿಂದೆ ಇದ್ದಿರಬೇಕೆಂಬುದರಲ್ಲಿ ಸಂಶಯವಿಲ್ಲ. (2) ದುರ್ಗಸಿಂಹನು (ಸು. 1145) ಪೂರ್ವಕವಿಗಳ ಗೋಷ್ಠಿಯಲ್ಲಿ ಸೇರಿಸಿ ಸ್ತುತಿಸಿರುವ ಕರ್ಣಪಾರ್ಯನು ತನ್ನ ನೇಮಿನಾಥಪುರಾಣದಲ್ಲಿಯ—

ಅದ್ಯತನನಾಗಿಯುಂ ನೆಗ | ಱ್ದಾದ್ಯರ ದೊರೆಯೆನಿಸಿ ಮೆಱೆದು ಸಾಹಿತ್ಯಕಳಾ |
ಹೃದ್ಯತೆಯಿನೇದನಾನಿರ | ವದ್ಯಗುಣ ಸಂದ ನಾಗಚಂದ್ರಕವೀಂದ್ರಂ ||

ಎಂಬ ಪದ್ಯದಲ್ಲಿ ನಾಗಚಂದ್ರನನ್ನು ಹೊಗಳಿದ್ದಾನೆ. 'ಅದ್ಯತನನಾಗಿಯುಂ' ಎಂಬುದರಿಂದ ಕರ್ಣಪಾರ್ಯನಿಗೆ ಸುಮಾರು ಒಂದುತಲೆ ಹಿಂದೆ ಇದ್ದಿರಬಹುದು ಎಂದು ತೋರುತ್ತದೆ. (3) ಮೇಘಚಂದ್ರನನ್ನು ಸ್ತುತಿಸುವ 'ಮುನಿನಾಥಂ ದಶಧರ್ಮಧಾರಿ' ಎಂಬ ಪಂಪರಾಮಾಯಣ ಪದ್ಯವು (ಆಶ್ವಾಸ 1 ಪದ್ಯ 30) ಆ ಮೇಘಚಂದ್ರನು 1115 ರಲ್ಲಿ ಗತಿಸಿದುದಾಗಿ ತಿಳಿಸುವ ಸುಮಾರು ಅದೇ ವರ್ಷದಲ್ಲಿ ಬರೆದ ಶ್ರವಣಬೆಳ್ಗೊಳದ 47ನೆಯ ಶಾಸನದಲ್ಲಿ ದೊರೆಯುತ್ತದೆ. ಇದರಿಂದ ಪಂಪರಾಮಾಯಣವು ಈ ಶಾಸನ ಹುಟ್ಟಿದ 1115 ಕ್ಕೆ ಹಿಂದೆ ಇದ್ದುದು ವ್ಯಕ್ತವಾಗುತ್ತದೆ. (4) ಮದರಾಸ್ ಪ್ರಾಚ್ಯಕೋಶಾಲಯದಲ್ಲಿ ನಮಗೆ ದೊರೆತ ತ್ರಿಭುವನಮಲ್ಲನ ಆಳಿಕೆಯಲ್ಲಿ ಶಕ 1027 ಎಂದರೆ 1105 ರಲ್ಲಿ ಬರೆದ ಒಂದು ಶಾಸನದಲ್ಲಿ ಒಬ್ಬ ಹಂಪಕವಿಯ ದೊರೆಯುತ್ತದೆ. ಈ ಕವಿ ನಾಗಚಂದ್ರನೇ ಆಗಿರಬಹುದು.

ಈ ಕಾರಣಗಳಿಂದ ನಾಗಚಂದ್ರನು ಸುಮಾರು 1105ರಲ್ಲಿ† ಇದ್ದಿರಬೇಕೆಂದು ಊಹಿಸುತ್ತೇವೆ.

ಕಂತಿ ಎಂಬ ಪ್ರಖ್ಯಾತಳಾದ ಒಬ್ಬ ಕಬ್ಬಿಗಿತಿ ದ್ವಾರಸಮುದ್ರದ ಬಲ್ಲಾಳರಾಯನ ಸಭೆಯಲ್ಲಿ ಪಂಡಿತೆಯಾಗಿದ್ದಂತೆ ತಿಳಿಯುತ್ತದೆ. ಕಂತಿಹಂಪನ ಸಮಸ್ಯೆಗಳೆಂದು ವಾಡಿಕೆಯಾಗಿ ಕರೆಯಲ್ಪಡುವ ಕೆಲವು ಪದ್ಯಗಳಿಂದ ಈ ಕಂತಿಗೂ ನಾಗಚಂದ್ರನಿಗೂ ಸಂವಾದಗಳು ನಡೆದಂತೆ ತಿಳಿಯಬರುತ್ತದೆ. ಇದೇ ವಿಷಯವಾಗಿ ದೇವಚಂದ್ರನೂ ಹೀಗೆ ಬರೆದಿದ್ದಾನೆ :—'ದೋರರಾಯಂ ಆಸ್ಥಾನದ ಕನ್ನಡಸಂಸ್ಕೃತಮಹಾಕವಿಗಧಿಪಂ ಪಂಪಕವಿಯುಂ ಕಳುಹಲ್ ಆತಂ ಬಂದು ವಿದ್ಯೆಯಿಂ ಸಾವಿರಪ್ರಶ್ನೆಯಂ ಕೇಳಲ್ ಆಕೆ (ಕಂತಿ) ಉತ್ತರಮಂ ಕುಡಲ್ ಆಕೆಯಂ ರಾಜಸಭೆಗೆಯ್ದಿಸೆ ವಿದ್ವತ್ಸಮೂಹದೊಳಧಿಕಕವೀಶ್ವರಿಯಾಗಿರ್ದಳ್.' ಈ ಹೇಳಿಕೆ ನಿಜವಾಗಿದ್ದ ಪಕ್ಷದಲ್ಲಿ* ನಾಗಚಂದ್ರನು 1104ರಿಂದ 1141ರ ವರೆಗೆ ಆಳಿದ ಬಲ್ಲಾಳ ವಿಷ್ಣುವರ್ಧನರಾಜನ ಆಸ್ಥಾನಪಂಡಿತನಾಗಿದ್ದಿರಬೇಕು.* (ಕವಿಚರಿತೆ I, ಪುಟ ೮೧—೮೨)

---

† '1105' ಎಂಬುದಕ್ಕೆ ಬದಲು ಎರಡನೇ ಮುದ್ರಣದಲ್ಲಿ '1100' ಎಂದು ಇದೆ.

* ಎರಡನೆಯ ಮುದ್ರಣದಲ್ಲಿ ಈ ವಾಕ್ಯದ ಬದಲು 'ನಾಗಚಂದ್ರನು 1100 ರಿಂದ 1106 ವರೆಗೆ ಆಳಿದ ಹೊಯ್ಸಳರಾಜನಾದ 1 ನೆಯ ಬಲ್ಲಾಳನ ಆಸ್ಥಾನಪಂಡಿತನಾಗಿದ್ದಿರಬೇಕು' ಎಂದು ಇದೆ.

ಕಂತಿಯೆಂಬ ಕಬ್ಬಿಗಿತಿಯ ವಿಷಯವಾದ ವಿಚಾರವನ್ನು ಮುಂದೆಮಾಡುವೆವು.

ದುರ್ಗಸಿಂಹನು ಕ್ರಿ.ಶ. ೧೦೨೪ ರಿಂದ ೧೦೪೨ರ ಒಳಗೆ ತನ್ನ ಪಂಚತಂತ್ರವನ್ನು ಬರೆದನೆಂದು ಮೇಲೆ ವ್ಯಕ್ತಮಾಡಲ್ಪಟ್ಟಿರುವುದರಿಂದ ಆ ಗ್ರಂಥದಲ್ಲಿ ಸ್ತುತಿಸಲ್ಪಟ್ಟ ನಾಗಚಂದ್ರನೂ ಕೂಡ ೧೦೪೨ರ ಹಿಂದೆಯೇ ಇದ್ದನೆಂಬುದು ಸ್ಪಷ್ಟವಾಗುವುದಷ್ಟೆ. ಹೀಗೆಯೇ ಕಾವ್ಯಾವಲೋಕನ ಕರ್ಣಾಟಕಭಾಷಾಭೂಷಣಗಳ ಕರ್ತೃವಾದ ನಾಗವರ್ಮನು ಛಂದೋಂಬುಧಿಯ ಕರ್ತೃವಾದ ನಾಗವರ್ಮನಿಂದ ಅಭಿನ್ನನೆಂದೂ, ಕ್ರಿ.ಶ. ೧೧ನೆಯ ಶತಮಾನದ ಸುಮಾರು ಮಧ್ಯಭಾಗದಲ್ಲಿ ಇದ್ದನೆಂದೂ ನಾವು ಮುಂದೆ ವ್ಯಕ್ತಪಡಿಸುವೆವು. ಇದರಿಂದಲೂ ಕೂಡ ನಾಗಚಂದ್ರನು ೧೦೪೨ ಕ್ಕಿಂತ ಹಿಂದೆ ಇದ್ದನೆಂಬುದು ಸ್ಪಷ್ಟವಾಗುವುದು. ಆದುದರಿಂದ ಅವನು ಕ್ರಿ.ಶ. ೧೧ ನೆಯ ಶತಮಾನದ ಆದಿಭಾಗದಲ್ಲಿಯೋ ೧೦ ನೆಯ ಶತಮಾನದ ಅಂತ್ಯಭಾಗದಲ್ಲಿಯೋ* ಜೀವಿಸಿರಬೇಕು. ಅವನು '೧೧೦೪ ರಿಂದ ೧೧೪೧ ವರೆಗೆ ಆಳಿದ ಬಲ್ಲಾಳವಿಷ್ಣುವರ್ಧನರಾಜನ ಆಸ್ಥಾನಪಂಡಿತನಾಗಿದ್ದಿರಬೇಕು'† ಎಂಬ ಕವಿಚರಿತಕಾರರ ಅಭಿಪ್ರಾಯವಂತೂ ಸರ್ವಥಾ ತಪ್ಪು.

* * * *

---

* ಆದಿಪಂಪನು ಕ್ರಿ.ಶ. ೯೪೧ರಲ್ಲಿ ಎಂದರೆ ಕ್ರಿ.ಶ. ೧೦ನೆಯ ಶತಮಾನದ ಪ್ರಥಮಾರ್ಧದಲ್ಲಿ ಜೀವಿಸುತ್ತಿದ್ದುದರಿಂದ ಅಭಿನವಪಂಪನಾದ ನಾಗಚಂದ್ರನು ಆ ಶತಮಾನದ ಪ್ರಥಮಾರ್ಧದಲ್ಲಿ ಜೀವಿಸಿರಲಾರನೆಂಬುದು ಸ್ವತಃ ವ್ಯಕ್ತವಾಗಿರುವುದು.

† ಎರಡನೇ ಮುದ್ರಣದಲ್ಲಿ ಈ ವಾಕ್ಯದ ಬದಲು 'ನಾಗಚಂದ್ರನು ೧೧೦೦ರಿಂದ ೧೧೦೬ ವರೆಗೆ ಆಳಿದ ಹೊಯ್ಸಳರಾಜನಾದ ೧ನೆಯ ಬಲ್ಲಾಳನ ಆಸ್ಥಾನಪಂಡಿತನಾಗಿದ್ದಿರಬೇಕು' ಎಂದು ಇದೆ. ಈ ಅಭಿಪ್ರಾಯವೂ ಕೂಡ ತಪ್ಪೆಂಬುದನ್ನು ನಾವು ಕಂಠತಃ ಹೇಳಬೇಕಾಗಿಲ್ಲ.

ಎರಡನೇ ಮುದ್ರಣದ ೪೪೯ ನೆಯ ಪುಟದಲ್ಲಿ ಕವಿಚರಿತಕಾರರು 'ನಾಗಚಂದ್ರನು ಬಿಜಾಪುರದ ಮ್ಯೂಜಿಯಮಿನಲ್ಲಿ ಇಟ್ಟಿರುವ ಒಂದು ಶಾಸನವನ್ನೂ ಬರೆದಿರಬಹುದೋ ಎಂಬ ಸಂದೇಹಕ್ಕೆ ಅವಕಾಶವಿರುವಂತೆ ತೋರುತ್ತದೆ. ಈ ಶಾಸನದ ಕೆಲವು ಪದ್ಯಗಳಿಗೂ ನಾಗಚಂದ್ರನ ಗ್ರಂಥಗಳ ಪದ್ಯಗಳಿಗೂ ಬಹಳವಟ್ಟಿಗೆ ಹೋಲಿಕೆಗಳು ಕಾಣುತ್ತವೆ' ಎಂದು ಹೇಳಿ ನಿದರ್ಶನಕ್ಕಾಗಿ ಕೆಲವು ಉದಾಹರಣಗಳನ್ನು ಕೊಟ್ಟಿದ್ದಾರೆ. ಕವಿಚರಿತಕಾರರು ಹೇಳುವಂತೆ ಬಹಳವಟ್ಟಿಗೆ ಹೋಲಿಕೆಗಳು ಇರುವುವೋ ಇಲ್ಲವೋ ಎಂಬ ವಿಷಯವನ್ನು ಇಲ್ಲಿ ನಾವು ವಿಚಾರಮಾಡಬೇಕಾದ ಅವಶ್ಯಕತೆ ಇಲ್ಲ. ಈ ವಿಷಯವನ್ನು ವಾಚಕರೇ ಪರಿಶೀಲಿಸಿ ನೋಡಿಕೊಳ್ಳಬಹುದು. ಪ್ರಕೃತ, ಶಾಸನವು ಚಾಳುಕ್ಯಚಕ್ರವರ್ತಿಯಾದ ತ್ರಿಭುವನಮಲ್ಲ ವಿಕ್ರಮಾದಿತ್ಯನ (ಕ್ರಿ. ಶ. ೧೦೭೬—೧೧೨೬) ಆಳಿಕೆಯಲ್ಲಿ ಹುಟ್ಟಿತೆಂದು ಕವಿಚರಿತಕಾರರು ಹೇಳುವುದರಿಂದ ಅದು ಪ್ರಾಯಶಃ ನಾಗಚಂದ್ರನಿಂದ ಬರೆಯಲ್ಪಟ್ಟುದಲ್ಲವೆಂದು ನಾವು ಹೇಳಬಹುದು. ಅಲ್ಲದೆ ಇವನು 'ಮಲ್ಲಿಜಿನೇಂದ್ರಗೇಹಮಂ ವಿಜಯಪುರಕ್ಕಲಂಕರಣಮಾಗಿರೆ ಮಾಡಿಸಿ' ಎಂದು ಹೇಳಿರುವ ವಿಜಯಪುರವು ಬಿಜಾಪುರವೇ ಎಂಬ ವಿಷಯದಲ್ಲಿ ಕೂಡ ನಮಗೆ ಪ್ರಬಲವಾದ ಸಂದೇಹವಿರುವುದು.

ಹೀಗೆ ಶ್ರವಣಬೆಳ್ಗೊಳದ ೪೭ನೆಯ ಶಿಲಾಲೇಖನದಲ್ಲಿ 'ಮುನಿನಾಥಂ ದಶ ಧರ್ಮಧಾರಿ...' ಎಂಬ ಪಂಪರಾಮಾಯಣ ಪದ್ಯದಿಂದ ಸ್ತುತಿಸಲ್ಪಟ್ಟು ಕ್ರಿ. ಶ. ೧೧೧೫ರಲ್ಲಿ ಸ್ವರ್ಗಗತನಾದನೆಂದು ಹೇಳಲ್ಪಟ್ಟಿರುವ ಮೇಘಚಂದ್ರನು ಪಂಪರಾಮಾಯಣದಲ್ಲಿ ನಾಗಚಂದ್ರನಿಂದ ಸ್ತುತಿಸಲ್ಪಟ್ಟ ಮೇಘಚಂದ್ರನೇಯೆ ಎಂಬ ಕವಿಚರಿತಕಾರರ ಅಭಿಪ್ರಾಯವು ತಪ್ಪಾಗಿರುವ ಪಕ್ಷದಲ್ಲಿ, ಈ ಶಿಲಾಲೇಖನದಲ್ಲಿ ಸ್ತುತನಾಗಿರುವ ಮೇಘಚಂದ್ರನು ಯಾರು? 'ಮುನಿನಾಥಂ ದಶಧರ್ಮಧಾರಿ...' ಎಂಬ ಪಂಪರಾಮಾಯಣ ಪದ್ಯದಿಂದ ಇವನು ಏತಕ್ಕೆ ಶಿಲಾಲೇಖನದಲ್ಲಿ ಸ್ತುತಿಸಲ್ಪಟ್ಟಿರುವನು? ಎಂಬ ಪ್ರಶ್ನೆಗಳು ತತ್ಕ್ಷಣದಲ್ಲಿಯೇ ಅಂಕುರಿಸುವುವಷ್ಟೆ. ಇವುಗಳಿಗೆ ಸಮಾಧಾನವನ್ನು ಈ ರೀತಿಯಾಗಿ ಹೇಳಬೇಕಾಗಿರುವುದು:—ಹಿಂದೆ ಹೇಳಿದುದರಿಂದ ನಾಗಚಂದ್ರನು ಕ್ರಿ. ಶ. ೧೦೪೨ ರಿಂದ ಹಿಂದಿನವನೆಂದೂ ಕ್ರಿ. ಶ. ೧೧ನೆಯ ಶತಮಾನದ ಆದಿಭಾಗದಲ್ಲಿಯೋ ೧೦ನೆಯ ಶತಮಾನದ ಅಂತ್ಯಭಾಗಲ್ಲಿಯೋ ಇದ್ದನೆಂದೂ ಸ್ಪಷ್ಟವಾಗುವುದು. ಹೀಗೆ ಪಂಪರಾಮಾಯಣವು ಕ್ರಿ. ಶ. ೧೦೪೨ ಕ್ಕಿಂತ ಹಿಂದೆಯೇ ವಿರಚಿತವಾಗಿ ಬಹಳಕಡೆ ಪ್ರಸಿದ್ಧವಾಗಿದ್ದುದರಿಂದ ಈಚೆಗೆ ಬರೆಯಲ್ಪಟ್ಟ ಶ್ರವಣಬೆಳ್ಗೊಳದ ಶಿಲಾಲೇಖನಗಳ ಕರ್ತೃಗಳು ಮೇಘಚಂದ್ರ, ವೀರಣಂದಿ, ಶ್ರುತಕೀರ್ತಿ ಮತ್ತು ಬಾಲಚಂದ್ರನೆಂದು ಹೆಸರುಳ್ಳ ಜೈನಗುರುಗಳನ್ನು ಹೊಗಳಬೇಕಾದ ಸಮಯ ಬಂದಾಗ, ಈ ಹೆಸರಿನ ಗುರುಗಳನ್ನು ಸ್ತುತಿಸುವ ಪಂಪರಾಮಾಯಣದ ಪದ್ಯಗಳನ್ನು ಉದ್ಧರಿಸಿ ಶಿಲಾಲೇಖನಗಳಲ್ಲಿ ಸೇರಿಸಿಬಿಟ್ಟಿರಬೇಕು. ಇದು ಶ್ರ. ಬೆ. ೪೦ನೆಯ ಶಿಲಾಲೇಖನದಿಂದ ಸ್ಪಷ್ಟವಾಗುವುದು. ಈ ಶಿಲಾಲೇಖನದಲ್ಲಿ 'ಆವೊಂದಾದಿ ಕಥಾತ್ರಯಪ್ರವಣದೊಳ್ ವಿದ್ವಜ್ಜನಂ ಮೆಚ್ಚೆ...' ಎಂಬ ಶ್ರುತಿಕೀರ್ತಿ-ತ್ರೈವಿದ್ಯನನ್ನು ಸ್ತುತಿಸುವ ಪಂಪರಾಮಾಯಣದ ಎರಡುಪದ್ಯಗಳು ಗಂಡವಿಮುಕ್ತಸಿದ್ಧಾಂತಿದೇವನ ಸಧರ್ಮನಾದ ಒಬ್ಬ ಶ್ರುತಕೀರ್ತಿಯನ್ನು ಸ್ತೋತ್ರಮಾಡುವುದಕ್ಕಾಗಿ ಉಪಯೋಗಿಸಲ್ಪಟ್ಟಿರುವುವು. ಪಂಪರಾಮಾಯಣದಲ್ಲಿ ಹೊಗಳಲ್ಪಟ್ಟಿರುವ ಶ್ರುತಕೀರ್ತಿಯ ಹಿಂದೆ ಬಾಲಚಂದ್ರ, ಮೇಘಚಂದ್ರ-ತ್ರೈವಿದ್ಯ, ಶುಭಕೀರ್ತಿ, ವಾಸುಪೂಜ್ಯರೂ, ಶ್ರುತಕೀರ್ತಿಯನಂತರ ವೀರಣಂದಿಯೂ ಸ್ತುತಿಸಲ್ಪಟ್ಟಿರುವರು. ಆದುದರಿಂದ ಈ ಪಂಪರಾಮಾಯಣಪ್ರೋಕ್ತನಾದ ಶ್ರುತಕೀರ್ತಿಯು ಬಾಲಚಂದ್ರನ ಅಥವಾ ಮೇಘಚಂದ್ರತ್ರೈವಿದ್ಯನ ಶಿಷ್ಯನೋ ಅಥವಾ ಸಧರ್ಮನೋ ಆಗಿರಬೇಕಷ್ಟೆ.* ಈ ಶ್ರುತಕೀರ್ತಿ ಬೇರೆ

* ಬಾಲಚಂದ್ರನು ನಾಗಚಂದ್ರನ ಗುರುವಾದುದರಿಂದ, ಅವನೇ ಮೊದಲಾಗಿ ಕೀರ್ತಿಸಲ್ಪಟ್ಟಿರುವ ಆರು ಜೈನಗುರುಗಳು ಗುರುಶಿಷ್ಯರಾಗಿರಬೇಕೇ ಹೊರತು ಗುರುಶಿಷ್ಯಪ್ರಶಿಷ್ಯರಾಗಿ ಇರಲಾರರು. ಎಂದರೆ ಇಲ್ಲಿ ಕೀರ್ತಿತರಾದ ಜೈನಗುರುಗಳು ಎರಡುತಲೆಗಳವರೇ ಅಲ್ಲದೆ ಮೂರುತಲೆಯವರಲ್ಲ.

ಶ್ರ. ಬೆ. ೪೦ನೆಯ ಶಿಲಾಲೇಖನದಲ್ಲಿ ಕೀರ್ತಿತನಾಗಿಲ್ಲ ; ಇಲ್ಲಿ ಕೀರ್ತಿತನಾದ ಶ್ರುತಕೀರ್ತಿಯು ಮಾಘನಂದಿಮುನಿಯ ಶಿಷ್ಯನಾದ ಗಂಡವಿಮುಕ್ತಸಿದ್ಧಾಂತದೇವ ಮತ್ತು ಕನಕನಂದಿಮುನಿಗಳ ಸಧರ್ಮನು. ಇವರ ಗುರುವಾದ ಮಾಘನಂದಿಮುನಿಯೇ ಈ ಶ್ರುತಕೀರ್ತಿಗೂ ಗುರುವಾಗಿದ್ದನೆಂದು ತೇರ್ದಾಳದ ಒಂದು ಶಿಲಾಲೇಖನದಿಂದ (ಇಂಡಿಯನ್ ಆಂಟಿಕ್ವೆರಿ, ಸಂಪುಟ ೧೪) ತಿಳಿದುಬರುತ್ತದೆ.

ಈ ಶಿಲಾಲೇಖನವು ಮ|| ಪಾಠಕರಿಂದ ಮೇಲ್ಕಂಡ ಪತ್ರಿಕೆಯಲ್ಲಿ (ಪುಟ ೧೪ ಆದಿ) ಪ್ರಕಾಶಮಾಡಲ್ಪಟ್ಟಿರುವುದು. ಇಲ್ಲಿ ಚಾಳುಕ್ಯಚಕ್ರವರ್ತಿ ವಿಕ್ರಮಾದಿತ್ಯ-ತ್ರಿಭುವನಮಲ್ಲನ ಮಂಡಲಿಕನಾದ ಗೊಂಕದೇವರಸನು ತನಗೂ ಸಾಮಂತ ನಿಂಬರಸ ಕಾಮದೇವರಿಗೂ ಗುರುವೂ, ಮಂಡಲಾಚಾರ್ಯನೂ, ಕುಳಚಂದ್ರಪಂಡಿತ ಶಿಷ್ಯನೂ ಆದ ಕೊಲ್ಲಾಪುರದ ಮಾಘನಂದಿ-ಸೈದ್ಧಾಂತಿಕನಿಗೆ ಶಕವರ್ಷ ೧೦೪೫ನೆಯ ಶೋಭಕೃತ್ ಸಂವತ್ಸರದ ವೈಶಾಖ ಪುಣ್ಣಮಿ ಬೃಹಸ್ಪತಿವಾರದ ದಿವಸ ಎಂದರೆ ಕ್ರಿ. ಶ. ೧೧೨೩ನೆಯ ಏಪ್ರಿಲ್ ೧೨ನೆಯ ಬೃಹಸ್ಪತಿವಾರದ ದಿವಸ ಒಂದು ದತ್ತಿಯನ್ನು ಕೊಟ್ಟಂತೆ ಹೇಳಿ, ಈ ಮಾಘನಂದಿ ಸೈದ್ಧಾಂತಿಕನ ಶಿಷ್ಯರಾದ ಕನಕನಂದಿ, ಶ್ರುತಕೀರ್ತಿ-ತ್ರೈವಿದ್ಯ, ಚಂದ್ರಕೀರ್ತಿ, ಪ್ರಭಾಚಂದ್ರ, ವರ್ಧಮಾನ ಮುನಿಗಳನ್ನು ಹೊಗಳಿರುವದು. ಇಲ್ಲಿ ಸ್ತುತನಾಗಿರುವ ಮಾಘನಂದಿಯು ಶ್ರ. ಬೆ. ೪೦ನೇ ಶಿಲಾಲೇಖನದಲ್ಲಿ ಕುಳಚಂದ್ರಶಿಷ್ಯನೆಂದೂ ''ಕೊಲ್ಲಾಪುರೇ ತೀರ್ಥಕೃತ್'' ಎಂದೂ ಸ್ತುತನಾದ ಮಾಘನಂದಿಯೇಯೆ. ಈ ಶಿಲಾಲೇಖನದಲ್ಲಿ ಪ್ರೋಕ್ತರಾದ ಸಾಮಂತ-ನಿಂಬರಸಕಾಮದೇವರೂ ಕನಕನಂದಿಮುನಿಯೂ ಕೂಡ ತೇರ್ದಾಳದ ಶಿಲಾಲೇಖನದಲ್ಲಿ ಸ್ತುತರಾದ ನಿಂಬದೇವ, ಕಾಮದೇವ, ಕನಕನಂದಿಗಳೇ ಆಗಿರುವರು. ಹೀಗೆಯೇ ಮೇಲಿನ ಶ್ರ. ಬೆ. ಶಿಲಾಲೇಖನದಲ್ಲಿ ' ಅವೊಂದಾದಿಕಥಾತ್ರಯಪ್ರವಣದೊಳ್... ' ಎಂದು ಮೊದಲಾದ ಪಂಪರಾಮಾಯಣಗ್ರಂಥಸ್ಥವಾದ ಎರಡುಪದ್ಯಗಳಿಂದ ಸ್ತುತಿಸಲ್ಪಟ್ಟಿರುವ ಶ್ರುತಕೀರ್ತಿ-ತ್ರೈವಿದ್ಯನು ತೇರ್ದಾಳದ ಶಿಲಾಲೇಖನದಲ್ಲಿ—

**ಶ್ರುತಕೀರ್ತಿತ್ರೈವಿದ್ಯ | ವ್ರತಿಪರ್ಷಟ್ತರ್ಕಕರ್ಕಶರ್ ಪರವಾದಿ ||**
**ಪ್ರತಿಭಾಪ್ರದೀಪಪವನರ್ | ಜಿತದೋಷರ್ನೆಗಳ್ದರಖಿಲಭುವನಾಂತರದೊಳ್ ||**

ಎಂದು ಸ್ತುತನಾದ ಶ್ರುತಕೀರ್ತಿ-ತ್ರೈವಿದ್ಯನೇ ಆಗಿರುವನು. ಈ ಶಿಲಾಲೇಖನದಲ್ಲಿ ಶ್ರುತಕೀರ್ತಿ-ತ್ರೈವಿದ್ಯನನ್ನು ಹೀಗೆ ಒಂದು ಪದ್ಯದಿಂದ ಹೊಗಳಿದ್ದಾಗ್ಯೂ ಅವನು ರಾಘವಪಾಂಡವೀಯವೆಂಬ ಗತಪ್ರತ್ಯಾಗತಕಾವ್ಯದ ಕರ್ತೃವೆಂದು ಹೇಳಿಲ್ಲ. ಅಲ್ಲದೆ ಶ್ರುತಕೀರ್ತಿತ್ರೈವಿದ್ಯನ ಗುರುವಾದ ಮಾಘನಂದಿಸೈದ್ಧಾಂತಿಕನು

ಕ್ರಿ. ಶ. ೧೧೨೩ ರಲ್ಲಿ ಜೀವಿಸಿದ್ದನೆಂದು ಈ ಶಿಲಾಲೇಖನದಿಂದ ತಿಳಿದುಬರುವುದರಿಂದ ಈ ಶ್ರುತಕೀರ್ತಿತ್ರೈವಿದ್ಯನು ಕ್ರಿ. ಶ. ೧೧೩೩ ರಲ್ಲಿ ಜೀವಿಸಿದ್ದನೆಂದೂ ನಾವು ಹೇಳಬಹುದು.

ಹೀಗೆ ಮಾಘನಂದಿಸೈದ್ಧಾಂತಿಕನ ಶಿಷ್ಯನೂ, ಗಂಡವಿಮುಕ್ತಸಿದ್ಧಾಂತದೇವ, ಕನಕನಂದಿ, ಚಂದ್ರಕೀರ್ತಿ, ಪ್ರಭಾಚಂದ್ರ ಮತ್ತು ವರ್ಧಮಾನಮುನಿಗಳ ಸಧರ್ಮನೂ ಆಗಿ ಸುಮಾರು ಕ್ರಿ. ಶ. ೧೧೩೩ರಲ್ಲಿ ಜೀವಿಸುತ್ತಿದ್ದ ಈ ಶ್ರುತಕೀರ್ತಿತ್ರೈವಿದ್ಯನ ಸಂಬಂಧದಲ್ಲಿ 'ಅವೊಂದಾದಿ ಕಥಾತ್ರಯಪ್ರವಣದೊಳ್...' ಎಂದು ಮೊದಲಾದ ಎರಡುಪದ್ಯಗಳು ಶ್ರ. ಬೆ. ೪೦ನೆಯ ಶಿಲಾಲೇಖನದಲ್ಲಿ ಹೇಳಲ್ಪಟ್ಟು ಈ ಶ್ರುತಕೀರ್ತಿಯು ರಾಘವಪಾಂಡವೀಯವೆಂಬ ಗತಪ್ರತ್ಯಾಗತಕಾವ್ಯವನ್ನು ಮಾಡಿದನೆಂದು ಹೇಳಲ್ಪಟ್ಟಿರುವುದು. ಕ್ರಿ. ಶ. ೧೦೪೨ ಕ್ಕಿಂತ ಹಿಂದೆ ಹುಟ್ಟಿದ ಪಂಪರಾಮಾಯಣದಲ್ಲಿಯೂ ಕೂಡ ಬಾಲಚಂದ್ರ ಅಥವಾ ಮೇಘಚಂದ್ರನ ಶಿಷ್ಯನೋ ಅಥವಾ ಸಧರ್ಮನೋ ಆದ ಒಬ್ಬ ಶ್ರುತಕೀರ್ತಿಯು ರಾಘವಪಾಂಡವೀಯವೆಂಬ ಗತಪ್ರತ್ಯಾಗತ ಕಾವ್ಯವನ್ನು ಮಾಡಿದನೆಂದು ಹೇಳಲ್ಪಟ್ಟಿರುವುದು.

ಶ್ರುತಕೀರ್ತಿಯೆಂಬ ಜೈನಕವಿವಿರಚಿತವಾದ ರಾಘವಪಾಂಡವೀಯವೆಂಬ ಗತಪ್ರತ್ಯಾಗತ ಕಾವ್ಯವು ಒಂದು ಇರಬಹುದೇ ಹೊರತು ಅಂತಹ ಎರಡು ಕಾವ್ಯಗಳು ಇರಲಾರವಷ್ಟೆ. ಆದುದರಿಂದ ಈ ಕಾವ್ಯದ ಕರ್ತೃವು ಪಂಪರಾಮಾಯಣದಲ್ಲಿ ಸ್ತುತಿಸಲ್ಪಟ್ಟಿರುವ ಶ್ರುತಕೀರ್ತಿಯೇ ಆಗಿರಬೇಕೆಂದೂ, ಈ ಶ್ರುತಕೀರ್ತಿಯನ್ನು ಸ್ತುತಿಸುವ ಪದ್ಯಗಳು ಶ್ರ.ಬೆ. ೪೦ನೆಯ ಶಿಲಾಲೇಖನದ ಕರ್ತೃವಿನಿಂದ ಪಂಪರಾಮಾಯಣದಿಂದ ಉದ್ಧರಿಸಲ್ಪಟ್ಟು ಗಂಡವಿಮುಕ್ತಸಿದ್ಧಾಂತದೇವನೇ ಮೊದಲಾದವರ ಸಧರ್ಮನಾಗಿ ಸುಮಾರು ೧೦೦ ವರ್ಷಗಳನಂತರ ಜೀವಿಸುತ್ತಿದ್ದ ಶ್ರುತಕೀರ್ತಿಯ ಸಂಬಂಧದಲ್ಲಿ ಉಪಯೋಗಿಸಲ್ಪಟ್ಟಿರುವವೆಂದೂ ಸ್ಪಷ್ಟವಾಗುವುದು. 'ಮುನಿನಾಥಂ ದಶಧರ್ಮಧಾರಿ...' ಎಂದು ಮೇಘಚಂದ್ರನನ್ನು ಸ್ತುತಿಸುವ ಪದ್ಯಗಳೂ, 'ಗಣಧರರಂ ಶ್ರುತಧರರೊಳ್...' ಎಂದು ವೀರಣಂದಿಯನ್ನು ಸ್ತುತಿಸುವ ಪದ್ಯಗಳೂ, 'ಪ್ರಚುರಕಲಾನ್ವಿತ...' ಎಂದು ಬಾಲಚಂದ್ರನನ್ನು ಸ್ತುತಿಸುವ ಪದ್ಯವೂ ಕೂಡ ಹೀಗೆಯೇ ಪಂಪರಾಮಾಯಣಕ್ಕಿಂತ ಈಚೆ ಜೀವಿಸುತ್ತಿದ್ದ ಆಯಾ ಹೆಸರಿನ ಗುರುಗಳನ್ನು ಸ್ತುತಿಸುವುದಕ್ಕಾಗಿ ಶ್ರ. ಬೆ. ಶಿಲಾಲೇಖನದ ಕರ್ತೃಗಳಿಂದ ಉಪಯೋಗಿಸಲ್ಪಟ್ಟಿರುವುವು.*

* ಹೀಗೆಯೇ ಶ್ರ.ಬೆ. ೪೭ನೇ ಮತ್ತು ೫೦ನೇ ಶಿಲಾಲೇಖನಗಳಲ್ಲಿ 'ಮುನಿನಾಥಂ ದಶಧರ್ಮಧಾರಿ....' ಎಂದು ಮೇಘಚಂದ್ರನನ್ನು ಸ್ತುತಿಸುವ ಪದ್ಯದ ಹಿಂದೆ ಇರುವ 'ಶಿಷ್ಯಸ್ತಸ್ಯ ದೃಢ

ಮೇಲ್ಕಂಡ ತೇರ್ದಾಳದ ಶಿಲಾಲೇಖನವನ್ನು ಮ|| ಪಾಠಕರು ಪ್ರಕಾಶಪಡಿಸಿದ ಸಮಯದಲ್ಲಿ ಮೇಲ್ಕಂಡ ಶ್ರವಣಬೆಳ್ಗೊಳದ ಶಿಲಾಲೇಖನವು ಮುದ್ರಿತವಾಗಿರಲಿಲ್ಲ. ಆದಾಗ್ಯೂ 'ಶ್ರುತಕೀರ್ತಿ ತ್ರೈವಿದ್ಯ' ಎಂಬ ನಾಮೈಕ್ಯದ ಆಧಾರವೊಂದರ ಬಲದಿಂದಲೇ ಮ|| ಪಾಠಕರು ಈ ತೇರ್ದಾಳದ ಶಿಲಾಲೇಖನದಲ್ಲಿ ಕೀರ್ತಿತನಾದ ಶ್ರುತಕೀರ್ತಿಯೇ ಪಂಪರಾಮಾಯಣದಲ್ಲಿ ಕೀರ್ತಿತನಾದ ಶ್ರುತಕೀರ್ತಿಯೆಂದೂ, ಅವನೇ ರಾಘವಪಾಂಡವೀಯಕಾವ್ಯದಕರ್ತೃವೆಂದೂ, ಅವನು ಆ ಶಿಲಾಲೇಖನದ ಕಾಲದಲ್ಲಿ ಎಂದರೆ, ಕ್ರಿ. ಶ. ೧೧೨೩ ರಲ್ಲಿ ಜೀವಿಸುತ್ತಿದ್ದನೆಂದೂ ಹೇಳಿಬಿಟ್ಟರು.* ಹೀಗೆಯೇ ಪಂಪರಾಮಾಯಣದಲ್ಲಿ ಸ್ತುತನಾದ ಮೇಘಚಂದ್ರನ

---

ವ್ರತಃ ಶಮನಿಧಿಃ....' ಇತ್ಯಾದಿ ಸಂಸ್ಕೃತಶ್ಲೋಕಗಳಲ್ಲಿ ಕೆಲವೂ ಕೂಡ ಬೇರೆ ಮೇಘಚಂದ್ರನ (ರ)ನ್ನು ಸ್ತುತಿಸುವ ಗ್ರಂಥಗಳಿಂದ ಉದ್ಧೃತವಾಗಿದ್ದರೂ ಇರಬಹುದು.

* ಇಷ್ಟುಮಾತ್ರವೇ ಅಲ್ಲ. ಈ ಶ್ರುತಕೀರ್ತಿಕೃತವಾದ ರಾಘವಪಾಂಡವೀಯವು ಈಗ ಉಪಲಭ್ಯಮಾನವಾದ ಧನಂಜಯಕೃತವಾದ ರಾಘವಪಾಂಡವೀಯವೆಂಬ ಸಂಸ್ಕೃತಗ್ರಂಥವೇ ಎಂದೂ, ತತ್ಕರ್ತೃವಾದ ಶ್ರುತಕೀರ್ತಿಯು ತನ್ನ ಕರ್ತೃತ್ವವನ್ನು ಗೋಪನಮಾಡುವುದಕ್ಕಾಗಿ ಧನಂಜಯ ಎಂಬ ಹೆಸರಿನಿಂದ ಆ ಕಾವ್ಯವನ್ನು ಬರೆದನೆಂದೂ, ಈ ರಹಸ್ಯವು ಪಂಪರಾಮಾಯಣದ ಕರ್ತೃವಾದ ನಾಗಚಂದ್ರನಿಗೆ ತಿಳಿದಿದ್ದುದರಿಂದ ಅವನು ಆ ಗ್ರಂಥದಲ್ಲಿ ಶ್ರುತಕೀರ್ತಿಯೇ ರಾಘವಪಾಂಡವೀಯದ ಕರ್ತೃವೆಂದು ಸ್ಪಷ್ಟವಾಗಿ ಹೇಳಿಬಿಟ್ಟನೆಂದೂ, ಮ|| ಪಾಠಕರು ಮೇಲ್ಕಂಡ ಪತ್ರಿಕೆಯಲ್ಲಿಯೂ (ಪುಟ ೧೪) ಮತ್ತು ಜರ್ನಲ್ ಆಫ್ ದಿ ಬಾಂಬೆ ಬ್ರ್ಯಾಂಚ್ ಆಫ್ ದಿ ರಾಯಲ್ ಏಷ್ಯಾಟಿಕ್ ಸೊಸೈಟಿ ಎಂಬ ಪತ್ರಿಕೆಯ ೨೧ನೆಯ ಸಂಪುಟದಲ್ಲಿಯೂ (ಪುಟ ೧ ಆದಿ) ಬರೆದಿರುವರು. ಇದನ್ನು ಡಾಕ್ಟರ್ ವಿಂಟರ್ನಿಟ್ಸ್‌ರವರೂ ಒಪ್ಪಿಕೊಂಡು, Geschichte der indischen Litteratur (ಭರತವರ್ಷೀಯ ವಾಙ್ಮಯದ ಇತಿವೃತ್ತ) ಎಂಬ ತಮ್ಮ ಗ್ರಂಥದ ೩ನೆಯ ಸಂಪುಟದ ೭೫ನೆಯ ಪುಟದಲ್ಲಿ 'ರಾಘವಪಾಂಡವೀಯ ಅಥವಾ ದ್ವಿಸಂಧಾನ ಕಾವ್ಯವನ್ನು ಶ್ರುತಕೀರ್ತಿಯೆಂಬ ನಾಮಾಂತರವುಳ್ಳ ಧನಂಜಯನೆಂಬ ದಿಗಂಬರಜೈನನು ಕ್ರಿ. ಶ. ೧೧೨೩—೧೧೪೦ ರಲ್ಲಿ ಬರೆದನು' ಎಂದು ಹೇಳಿರುವರು.

ಇದೆಲ್ಲವೂ ತಪ್ಪು. ಶ್ರುತಕೀರ್ತಿಯು ರಾಘವಪಾಂಡವೀಯವೆಂಬ ಕಾವ್ಯವನ್ನು ಬರೆದನೆಂದು ಮ|| ಪಾಠಕರು ಹೇಳುವುದಕ್ಕೆ ಪಂಪರಾಮಾಯಣದಲ್ಲಿನ 'ಶ್ರುತಕೀರ್ತಿ ತ್ರೈವಿದ್ಯ | ವ್ರತಿ ರಾಘವಪಾಂಡವೀಯಮುಮಂ ವಿಬುಧಚಮತ್ || ಕೃತಿಯೆನಿಸಿ ಗತಪ್ರತ್ಯಾ | ಗತದಿಂ ಪೇಳ್ದಮಳಕೀರ್ತಿಯಂ ಪ್ರಕಟಿಸಿದಂ ||' ಎಂಬ ಪದ್ಯವೊಂದಲ್ಲದೆ ಬೇರೆ ಯಾವ ಆಧಾರವೂ ಇಲ್ಲ. ಈ ಗ್ರಂಥವು ಒಂದು 'ಗತಪ್ರತ್ಯಾಗತ' ಕಾವ್ಯವೆಂದು ಇದೇ ಪದ್ಯದಲ್ಲಿಯೇ ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು. ಧನಂಜಯಕೃತವಾದ ರಾಘವಪಾಂಡವೀಯ ಅಥವಾ ದ್ವಿಸಂಧಾನಕಾವ್ಯವಾದರೋ (ಇದು ಕಾವ್ಯಮಾಲಾಗ್ರಂಥಾವಳಿಯಲ್ಲಿ ೪೯ ನೆಯದಾಗಿರುವದು ; ಕ್ರಿ.ಶ. ೧೮೯೫ನೆಯ ವರ್ಷದಲ್ಲಿ ಮುದ್ರಿತವಾಯಿತು) ಗತಪ್ರತ್ಯಾಗತಕಾವ್ಯವಲ್ಲವೆಂಬುದು ಆ ಕಾವ್ಯವನ್ನು ನೋಡುವವರೆಲ್ಲರಿಗೂ ಸ್ಪಷ್ಟವಾಗುವುದು. ಅಲ್ಲದೆ, ಈ ಕಾವ್ಯವನ್ನು ತಾನು ಬರೆದನೆಂಬ ವಿಷಯವನ್ನು ಮರೆಮಾಚು

ಸಮಾಧಿಶತಕವ್ಯಾಖ್ಯೆಯನ್ನು ಕ್ರಿ.ಶ. ೧೧೪೮ ರಲ್ಲಿ ಬರೆದ ಮೇಘಚಂದ್ರನೆಂದೂ, ಆ ಗ್ರಂಥದಲ್ಲಿ ಸ್ತುತನಾದ ಬಾಲಚಂದ್ರನು ಸುಜನೋತ್ತಂಸನ ಸಮಕಾಲೀನನಾದ ಬಾಲಚಂದ್ರನೆಂದೂ ಅವರ ಅಭಿಪ್ರಾಯ. ಎಂದರೆ ನಾಗಚಂದ್ರನಿಂದ ಪಂಪರಾಮಾಯಣದಲ್ಲಿ ಪರಿವಿಡಿಯಿಂದ ಸ್ತುತರಾಗಿರುವ ಬಾಲಚಂದ್ರ, ಮೇಘಚಂದ್ರ, ಶುಭಕೀರ್ತಿ, ವಾಸುಪೂಜ್ಯ, ಶ್ರುತಕೀರ್ತಿ, ವೀರಣಂದಿಗಳೆಂಬ ಜೈನಗುರುಗಳಿಗೆ ಪರಸ್ಪರ ಯಾವಸಂಬಂಧವೂ ಇಲ್ಲವೆಂದು ಅವರು ಭಾವಿಸಿರುವಂತೆ ತೋರುತ್ತದೆ.

ಇದೇವಿಧವಾದ ಅಭಿಪ್ರಾಯವೇ ಕವಿಚರಿತಕಾರರಿಗೂ ಇರುವುದೆಂದು ನಾವು ಮೇಲೆ ನೋಡಿದಂತೆ ಅವರು ಮೂರುನಾಲ್ಕುಮಂದಿ ಮೇಘಚಂದ್ರನಾಮಕರಾದ ಗುರುಗಳನ್ನು ಏಕೀಕರಿಸಿ ಒಬ್ಬಮನುಷ್ಯನನ್ನಾಗಿ ಮಾಡಿರುವುದರಿಂದಲೂ, ಕವಿಚರಿತೆಯಲ್ಲಿ ಇತರ ಕವಿಗಳ ಜೀವನಕಾಲವಿಚಾರದಲ್ಲಿರುವ ಬೇರೆ ವಾಕ್ಯಗಳಿಂದಲೂ ಕೂಡ ಸ್ಪಷ್ಟವಾಗುತ್ತದೆ.

ಈ ವಿಧವಾದ ಅಭಿಪ್ರಾಯವು ಸಾಧುವಾಗಿರುವಂತೆ ನಮಗೆ ಕಾಣುವುದಿಲ್ಲ. ಶ್ರವಣಬೆಳ್ಗೊಳದ ೫೫, ೪೭, ೫೦, ೪೦ ಮೊದಲಾದ ಶಿಲಾಲೇಖನಗಳಲ್ಲಿ ಕೀರ್ತಿತರಾದ ಗುರುಗಳು ಒಂದೇ ಗುರುಪರಂಪರೆಗೆ ಹೇಗೆ ಸೇರಿರುವರೋ ಹಾಗೆಯೇ ಜೈನಕವಿರಚಿತವಾದ ಕನ್ನಡಗ್ರಂಥಗಳ ಪ್ರಾರಂಭದಲ್ಲಿ ಕೀರ್ತಿತರಾದ ಜೈನಗುರುಗಳೂ ಪ್ರಾಯಶಃ* ಒಂದೇ ಪರಂಪರೆಗೆ ಸೇರಿರುವರೆಂದು ನಮಗೆ ತೋರುವುದು.

---

ವುದಕ್ಕಾಗಿ ಶ್ರುತಕೀರ್ತಿತ್ರೈವಿದ್ಯನು ಧನಂಜಯ ಎಂಬ ಹೆಸರಿನಿಂದ ಇದನ್ನು ಬರೆದನೆಂದೂ, ಈ ರಹಸ್ಯವು ಪಂಪರಾಮಾಯಣದ ಕರ್ತೃವಾದ ನಾಗಚಂದ್ರನಿಗೆ ತಿಳಿದಿತ್ತೆಂದೂ, ಅವನು ಅದನ್ನು ಪ್ರಕಾಶಪಡಿಸಿದನೆಂದೂ ಇದೇ ಮೊದಲಾದ ವಿಷಯಗಳನ್ನು ಬರೆಯುವುದಕ್ಕೆ ಮ|| ಪಾಠಕರಿಗೆ ಯಾವ ಆಧಾರವೂ ಇಲ್ಲದುದರಿಂದ ಅವರು ಇದನ್ನೆಲ್ಲಾ ಸ್ವಯಂ ಊಹಿಸಿರುವರೆಂದೇ ನಮಗೆ ತೋರುವುದು. ಅದು ಹೇಗಾದರೂ ಇರಲಿ. ಧನಂಜಯಕೃತವಾದ ರಾಘವಪಾಂಡವೀಯವಂತೂ ನಾಗಚಂದ್ರನು ಹೇಳಿರುವಂತೆ ಶ್ರುತಕೀರ್ತಿತ್ರೈವಿದ್ಯನಿಂದ ಬರೆಯಲ್ಪಟ್ಟ ಗತಪ್ರತ್ಯಾಗತಕಾವ್ಯವಲ್ಲವೆಂಬುದು ಸ್ಪಷ್ಟ. ಆ ಕಾವ್ಯದ ಕರ್ತೃವು ದಿಗಂಬರಜೈನನೆಂದೂ, ಅವನು ಕ್ರಿ. ಶ. ೧೧೨೩-೧೧೪೦ ರಲ್ಲಿ ಜೀವಿಸುತ್ತಿದ್ದನೆಂದೂ, ಹೇಳುವದಕ್ಕೂ ಕೂಡ ಯಾವ ಆಧಾರವೂ ಇಲ್ಲವೆಂಬುದು ಕೂಡ ಸ್ಪಷ್ಟವಾಗಿರುವದು.

* ಎಂದರೆ ಬೇರೆ ಪರಂಪರೆಗೆ ಸೇರಿದ ಗುರುಗಳು ಕೆಲವು ಕವಿಗಳಿಂದ ಕೀರ್ತಿತರಾಗಿಲ್ಲವೆಂದು ನಮ್ಮ ಅರ್ಥವಲ್ಲ. ಜನ್ನನು ತನ್ನ ಅನಂತನಾಥಪುರಾಣದ ಪ್ರಾರಂಭದಲ್ಲಿ ತನ್ನ ಗುರುವಿನ ಗುರುಪರಂಪರೆಯನ್ನು ಕೀರ್ತಿಸಿರುವುದಲ್ಲದೆ, ತನ್ನ ಹೆಂಡತಿ ಲಕುಮಾದೇವಿಯ ಗುರುವಾದ ಬಾಲಚಂದ್ರನ ಗುರುಪರಂಪರೆಯಲ್ಲಿ ಕೆಲವರನ್ನೂ ಕೂಡ ಹೊಗಳಿರುವನು (ಕವಿಚರಿತೆ I. ೨೬೬) ಆದರೆ ಈ ಎರಡುಪರಂಪರೆಯ ಗುರುಗಳನ್ನು ಒಂದುಮಾಡಿ ಸೇರಿಸಿಲ್ಲ. ಗ್ರಂಥವನ್ನು ಓದುವವರೆಲ್ಲರಿಗೂ ಎರಡು ಪರಂಪರೆಯ ಗುರುಗಳು ಸ್ತುತರಾಗಿರುವರೆಂಬುದು ಸ್ಪಷ್ಟವಾಗಿ ಕಾಣುವುದು.

ಎಂದರೆ ಕನ್ನಡಗ್ರಂಥಗಳ ಪ್ರಾರಂಭದಲ್ಲಿ ಕವಿಯು ತನ್ನ ಮನಸ್ಸಿಗೆ ತೋರಿದಂತೆ ಬೇರೆಬೇರೆ ಪರಂಪರೆಗಳಿಗೆ ಸೇರಿರುವ ಗುರುಗಳನ್ನು ಒಂದುಕಡೆ ಸೇರಿಸಿ ಸ್ತುತಿಸಿಲ್ಲ ವೆಂದೂ, ಅಲ್ಲಿ ಕೀರ್ತಿತರಾಗಿರುವ ಜೈನಗುರುಗಳು ಪ್ರಾಯಃ ಒಂದೇ ಗುರುಪರಂ ಪರೆಗೆ ಸೇರಿದವರೆಂದೂ ನಮ್ಮ ಅಭಿಪ್ರಾಯ. ಇದನ್ನು ನಿದರ್ಶಿಸುವುದಕ್ಕಾಗಿ ಅಗ್ಗ ಳನ ಚಂದ್ರಪ್ರಭಪುರಾಣದ ಪ್ರಾರಂಭದಲ್ಲಿ ಕೀರ್ತಿಸಲ್ಪಟ್ಟಿರುವ ಗುರುಗಳ ಹೆಸ ರುಗಳನ್ನು ಇಲ್ಲಿ ನಾವು ಉದಾಹರಿಸುವೆವು. ಇಲ್ಲಿ ಕ್ರಮವಾಗಿ (ಕವಿಚರಿತೆ I. ೨೨೫ ನ್ನು ನೋಡಿ) ಕೊಂಡಕುಂದ, ಭೂತಬಲಿ, ಪುಷ್ಪದಂತ, ವೀರಸೇನ, ಜಿನಸೇನ, ಅಕಳಂಕ, ಗೃಧ್ರಪಿಂಛ, ಅರ್ಹದ್ಬಲಿ, ಸಿಂಹನಂದಿ, ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ಕುಂದಕುಂದಾನ್ವಯಕುಲಚಂದ್ರ, ಮಾಘಣಂದಿ, ಕನಕನಂದಿ, ಶ್ರುತಕೀರ್ತಿ, ಮುನಿಚಂದ್ರ, ನಯಕೀರ್ತಿ, ಉದಯಚಂದ್ರ, ವೀರಣಂದಿ, ಮಾಘ ಣಂದಿ, ವರ್ಧಮಾನ, ದೇವಚಂದ್ರ, ದಾಮನಂದಿ, ನೇಮಿಚಂದ್ರ, ಶ್ರುತಕೀರ್ತಿ ಯೆಂಬ ಗುರುಗಳು ಸ್ತುತಿಸಲ್ಪಟ್ಟಿರುವರು. ಇಲ್ಲಿ ಸ್ತುತನಾಗಿರುವ ಕುಂದಕುಂದಾ ನ್ವಯದ ಕುಲಚಂದ್ರನೂ, ಮಾಘಣಂದಿ, ಕನಕನಂದಿ, ಶ್ರುತಕೀರ್ತಿಗಳೂ ನಾವು ಮೇಲೆಹೇಳಿದ ತೇರ್ದಾಳದ ಶಿಲಾಲೇಖನದಲ್ಲಿಯೂ ಶ್ರ. ಬೆ. ೪೦ನೆಯ ಶಿಲಾಲೇಖ ನದಲ್ಲಿಯೂ ಸ್ತುತಿಸಲ್ಪಟ್ಟಿರುವ ಆ ಹೆಸರಿನ ಗುರುಗಳೇ ಆಗಿರುವರು. ಎಂದರೆ, ಅಗ್ಗಳನು ದೇಶೀಯಗಣದ ಪುಸ್ತಕಗಚ್ಛದ ಕೊಂಡಕುಂದಾನ್ವಯದ ಇಂಗಳೇ ಶ್ವರದ ಬಳಿಯ ಜೈನಗುರುಗಳ ಪರಂಪರೆಯನ್ನು ಸ್ತುತಿಸಿರುವನು. ಇದೇ ಗುರು ಪರಂಪರೆಯೇ ಶಾಂತೀಶ್ವರಪುರಾಣದಲ್ಲಿ ಕಮಲಭವನಿಂದಲೂ ಕೂಡ ಸ್ತುತವಾಗಿರು ವುದು. ಆದರೆ ಈ ಕಮಲಭವನು ಅಗ್ಗಳನಿಗಿಂತ ಸುಮಾರು ೪೦ ವರ್ಷ ಈಚೆಯ ವನಾದುದರಿಂದ ಅಗ್ಗಳನಿಂದ ಕೊನೆಯಲ್ಲಿ ಸ್ತುತನಾದ ಶ್ರುತಕೀರ್ತಿಗುರುವಿನಿಂದೀ ಚೆಗೆ ಇದೇ ಪರಂಪರೆಗೆ ಸೇರಿದ ಇನ್ನೂ ಕೆಲವು ಗುರುಗಳನ್ನು ಸ್ತುತಿಸಿರುವನು.

---

ಈ ಲಕುಮಾದೇವಿಯ ಗುರುವಾದ ಬಾಲಚಂದ್ರನ ಗುರುಪರಂಪರೆಯಲ್ಲಿ ಜನ್ನನಿಂದ ಹೊಗ ಳಲ್ಪಟ್ಟಿರುವ ಬಾಲಚಂದ್ರನ ಗುರುವಿನ ಗುರುವಾದ ಸಕಲಚಂದ್ರನೂ, ಅವನ ಗುರು ಕುಲಭೂಷ ಣನೂ, ಅವನ ಗುರು ಮುನಿಚಂದ್ರನೂ ಸೊರಬದ ೧೪೦ ನೆಯ ಶಾಸನದಲ್ಲಿಯೂ, ಈ ಮುನಿ ಚಂದ್ರನು ಶಿವಮೊಗ್ಗಾಜಿಲ್ಲೆಯ ಇನ್ನೂ ಇತರ ಶಾಸನಗಳಲ್ಲಿಯೂ ಸ್ತುತರಾಗಿರುವರು. ಇವರು ಮೂಲಸಂಘದ ಕ್ರಾಣೂರ್ (ಕಾಣೂರ್) ಗಣದ ತಿಂತ್ರಿಣೀಗಚ್ಛಕ್ಕೆ ಸೇರಿದವರೆಂದು ಈ ಶಾಸನ ಗಳಿಂದ ತಿಳಿಯುವುದು. ಬಾಲಚಂದ್ರನ ಗುರುವಿನಗುರುವಾದ ಸಕಲಚಂದ್ರನು (ಕ್ರಿ.ಶ. ೧೧೯೪ನೆಯ ಜನವರಿ ೨೨ನೇ ತಾರೀಖಿನಲ್ಲಿ) ಒಂದು ದಾನವನ್ನು ಸ್ವೀಕರಿಸಿದನೆಂದು ಮೇಲೆಹೇಳಿದ ಸೊರಬದ ೧೪೦ನೇ ಶಾಸನದಲ್ಲಿ ಹೇಳಲ್ಪಟ್ಟಿರುವುದು.

ಹೀಗೆ ಜೈನಕವಿಗಳು ತಮ್ಮ ಕನ್ನಡಗ್ರಂಥಗಳ ಆದಿಯಲ್ಲಿ ಸ್ತೋತ್ರ ಮಾಡುವ ಜೈನಗುರುಗಳು ಪ್ರಾಯಃ ಒಂದೇ ಗುರುಪರಂಪರೆಗೆ ಸೇರಿದವರಾದುದರಿಂದ ಹೀಗೆ ಕೀರ್ತಿಸಲ್ಪಟ್ಟ ಗುರುಗಳಲ್ಲಿ ಪ್ರತಿಯೊಬ್ಬನೂ ತನ್ನಹಿಂದೆ ಕೀರ್ತಿಸಲ್ಪಟ್ಟವನ ಶಿಷ್ಯನೋ* ಅಥವಾ ಸಧರ್ಮನೋ ಆಗಿರಬೇಕು. ಆದುದರಿಂದ ಒಂದು ಪರಂಪರೆಯಲ್ಲಿ ಸ್ತುತನಾದ ಜೈನಗುರುವಿನ ಹೆಸರು ಇನ್ನೊಂದುಕಡೆಯಲ್ಲಿ ಒಂದು ಪರಂಪರೆಯ ಮಧ್ಯದಲ್ಲಿ ಬಂದರೆ ಪ್ರಕೃತ ಜೈನಗುರುವಿನ ಹೆಸರಿನ ಹಿಂದೆಮುಂದೆ ಇರುವ ಹೆಸರುಗಳನ್ನು (ಎಂದರೆ ಈ ಹೆಸರಿನ ಗುರುವಿನಗುರು, ಶಿಷ್ಯ, ಸಧರ್ಮರ ಹೆಸರುಗಳನ್ನು) ನಾವು ಪರೀಕ್ಷಿಸಿ, ಅವುಗಳಲ್ಲಿ ಐಕ್ಯಬಂದಾಗ ಮಾತ್ರ ಪ್ರಕೃತ ಹೆಸರಿನಿಂದ ನಿರ್ದಿಷ್ಟರಾದ ಮನುಷ್ಯರು ಅಭಿನ್ನರೆಂದು ಹೇಳುವುದು ಯುಕ್ತವೇ ಹೊರತು ಹಿಂದೆಮುಂದೆ ಬರುವ ಹೆಸರುಗಳಲ್ಲಿ ಭೇದಗಳಿದ್ದಾಗ ಪ್ರಕೃತಹೆಸರಿನಿಂದ ನಿರ್ದಿಷ್ಟರಾದ ಮನುಷ್ಯರು ಅಭಿನ್ನರೆಂದು ಹೇಳುವುದು ಅಯುಕ್ತವಾಗಿರುವುದು.

ಎಂದರೆ, ಮೇಲೆಕಂಡ ತೇರ್ದಾಳದ ಶಿಲಾಲೇಖನದಲ್ಲಿ ಕೀರ್ತಿತನಾದ ಶ್ರುತಕೀರ್ತಿ-ತ್ರೈವಿದ್ಯನೂ, ಶ್ರ. ಬೆ. ೪೦ನೆಯ ಶಿಲಾಲೇಖನದಲ್ಲಿ ಕೀರ್ತಿತನಾದ ಶ್ರುತಕೀರ್ತಿ-ತ್ರೈವಿದ್ಯನೂ ಅಭಿನ್ನರೆಂದು ನಾವು ಹೇಳುವುದು ಯುಕ್ತವು. ಏಕೆಂದರೆ ಈ ಎರಡು ಶಿಲಾಲೇಖನಗಳಲ್ಲಿಯೂ ಕೂಡ ಈ ಶ್ರುತಕೀರ್ತಿ-ತ್ರೈವಿದ್ಯನ ಗುರುವು ಕುಲಚಂದ್ರಶಿಷ್ಯನಾದ ಮಾಘನಂದಿಯೆಂದೂ, ಇವನ ಸಧರ್ಮನು ಕನಕನಂದಿಯೆಂದೂ ಹೇಳಲ್ಪಟ್ಟಿರುವುದು. ಹೀಗೆಯೇ ಅಗ್ಗಳನಿಂದ ಗ್ರಂಥಾದಿಯಲ್ಲಿ ಸ್ತುತರಾದ ಜೈನಗುರುಗಳಲ್ಲಿ ಕನಕನಂದಿಯನಂತರ ಸ್ತುತನಾಗಿರುವ ಶ್ರುತಕೀರ್ತಿಯೂ ಇವನೇಯೆಂದು ಹೇಳುವುದೂ ಕೂಡ ಯುಕ್ತವಾಗಿರುವುದು. ಪಂಪರಾಮಾಯಣದ ಆದಿಯಲ್ಲಿ ಕೀರ್ತಿತವಾದ ಬಾಲಚಂದ್ರ, ಮೇಘಚಂದ್ರ, ಶುಭಕೀರ್ತಿ, ವಾಸುಪೂಜ್ಯ, ಶ್ರುತಕೀರ್ತಿ, ವೀರಣಂದಿಯೆಂಬ ಜೈನಗುರುಪರಂಪರೆಯಲ್ಲಿ ಹೇಳಲ್ಪಟ್ಟಿರುವ ಶ್ರುತಕೀರ್ತಿಯು ಮೇಲಿನ ತೇರ್ದಾಳದ ಮತ್ತು ಶ್ರ. ಬೆ. ೪೦ನೆಯ ಶಿಲಾಲೇಖನಗಳಲ್ಲಿ ಸ್ತುತನಾಗಿರುವ ಶ್ರುತಕೀರ್ತಿಯೇ ಎಂದು (ಮ|| ಪಾಠಕರು ಹೇಳಿರುವಂತೆ) ಹೇಳುವುದು ಅಯುಕ್ತವು. ಈ ಎರಡುಕಡೆಗಳಲ್ಲಿಯೂ 'ಶ್ರುತಕೀರ್ತಿ' ಎಂಬ ಹೆಸರಿನ ಹಿಂದೆಯೂ ಮುಂದೆಯೂ ಕೀರ್ತಿತವಾದ ಹೆಸರುಗಳು ಒಂದೇಯಾಗಿಲ್ಲದೆ ಬೇರೆಬೇರೆಯಾಗಿದ್ದು, ಈ ಎರಡುಕಡೆಗಳಲ್ಲಿ ಉಪಯುಕ್ತವಾಗಿರುವ ಶ್ರುತಕೀರ್ತಿ ಎಂಬ ಹೆಸರು ಬೇರೆಬೇರೆ ಮನುಷ್ಯರನ್ನು ನಿರ್ದೇಶಿಸುವುದೆಂದು ಸೂಚಿ

* ಶಿಷ್ಯನೆಂದರೆ ಸಾಕ್ಷಾತ್ತಾಗಿಯೇ ಆಗಲಿ ಅಥವಾ ಪರಂಪರಾಸಂಬಂಧದಿಂದಾಗಲೀ ಶಿಷ್ಯನೆಂದು (ಎಂದರೆ, ಶಿಷ್ಯ, ಶಿಷ್ಯನಶಿಷ್ಯ, ಶಿಷ್ಯನಪ್ರಶಿಷ್ಯ, ಪ್ರಶಿಷ್ಯನಪ್ರಶಿಷ್ಯ, ಇತ್ಯಾದಿ) ಅರ್ಥವು.

ಸುವುವು. ಹೀಗೆಯೇ ಪಂಪರಾಮಾಯಣದ ಆದಿಯಲ್ಲಿ ಕೀರ್ತಿತವಾದ ಜೈನಗುರು ಪರಂಪರೆಯಲ್ಲಿರುವ ಮೇಘಚಂದ್ರನೂ, ಶ್ರ. ಬೆ. ೪೭, ೫೫ ಮತ್ತು ೪೨ನೆಯ ಶಿಲಾಲೇಖನಗಳಲ್ಲಿ ಕೊಡಲ್ಪಟ್ಟಿರುವ ಜೈನಗುರುಪರಂಪರೆಗಳಲ್ಲಿ ಕೀರ್ತಿತರಾದ ಮೇಘಚಂದ್ರರೂ ಅಭಿನ್ನರೆಂದು (ಕವಿಚರಿತಕಾರರು ಹೇಳಿರುವಂತೆ) ಹೇಳುವುದು ಅಯುಕ್ತವೆಂದೂ, ವಸ್ತುತಃ ಈ ನಾಲ್ಕು ಗುರ್ವಾವಳಿಗಳಲ್ಲಿ ಕೀರ್ತಿತರಾದ ನಾಲ್ಕುಮಂದಿ ಮೇಘಚಂದ್ರರೂ ಬೇರೆಬೇರೆ ಮನುಷ್ಯರಾಗಿದ್ದರೆಂದೂ ಮೇಲೆಯೇ ಹೇಳಲ್ಪಟ್ಟಿರುವುದು.

* * * *

ಪಂಪರಾಮಾಯಣಕರ್ತೃವಾದ ಈ ನಾಗಚಂದ್ರನಿಂದ ವಿರಚಿತವಾದು ದೆಂದು ಪ್ರತೀತಿಯಿರುವ 'ಜಿನಮುನಿತನಯ' ಎಂಬ ಒಂದು ಗ್ರಂಥವು ಮುದ್ರಿತ ವಾಗಿ ಈಗ ಪ್ರಚಾರದಲ್ಲಿರುವುದು. ಇದು ನಾಗಚಂದ್ರನಿಂದ ರಚಿತವಾದುದೆಂಬು ದನ್ನು ಕವಿಚರಿತಕಾರರು ಒಪ್ಪುವುದಿಲ್ಲ. ಈ ವಿಷಯದಲ್ಲಿ ಅವರು

"'ಜಿನಮುನಿತನಯ' 'ಜಿನಾಕ್ಷರಮಾಲೆ' ಮೊದಲಾದ ಇತರ ಗ್ರಂಥಗಳನ್ನೂ ಕೂಡ ಈತನು ರಚಿಸಿದ್ದಾನೆಂದು ದೇವಚಂದ್ರನು ರಾಜಾವಳೀಕಥೆಯಲ್ಲಿ ಹೇಳುತ್ತಾನೆ. ಈಗ ಅಚ್ಚಾಗಿ ರುವ ಜಿನಮುನಿತನಯ ಎಂಬ ಗ್ರಂಥವು ಈ ಕವಿಯಿಂದ ರಚಿತವಾದುದೆಂಬ ಪ್ರತೀತಿಯಿದೆ. ಆದರೆ ಈ ಗ್ರಂಥದ ರಚನೆಯನ್ನು ನೋಡಿದರೆ ಇದಕ್ಕೂ ನಾಗಚಂದ್ರನ ಗ್ರಂಥಗಳಿಗೂ ಆವ ವಿಧ ವಾದ ಹೋಲಿಕೆಯೂ ಇರುವಂತೆ ತೋರುವುದಿಲ್ಲ. ಆಧುನಿಕನಾದ ಆವನೋ ಒಬ್ಬ ಸಾಧಾರಣ ಕವಿಯಿಂದ ಈ ಗ್ರಂಥವು ರಚಿತವಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ನಮಗೆ ಸಿಕ್ಕಿದ ಈ ಗ್ರಂಥದ ಓಲೆಯಪ್ರತಿಯಲ್ಲಿ—

ಕೇಳುವಭವ್ಯರಪುಣ್ಯಂ | ಪೇಳುವಕವಿನೂತನಾಗಚಂದ್ರನಭಾಗ್ಯಂ ||
ಪಾಲಿಪಜಿನೇಂದ್ರಧರ್ಮವ | ನೇಳಿಸದಿರುಮೋಕ್ಷಗಾಮಿಜಿನಮುನಿತನಯಾ ||

ಎಂಬ ಪದ್ಯವು ಇದೆ. "ಕವಿನೂತನಾಗಚಂದ್ರ" ಎಂಬುದರಿಂದ 'ಜಿನಮುನಿತನಯ' ವನ್ನು ಬರೆ ದವನು 'ಅಭಿನವನಾಗಚಂದ್ರ' ಎಂದು ಹೆಸರಿಟ್ಟುಕೊಂಡಿದ್ದ ಹಾಗೆ ತೋರುತ್ತದೆ. 'ಕವಿನೂತ ನಾಗಚಂದ್ರ' ಎಂಬುದನ್ನು 'ಕವಿವಿನುತನಾಗಚಂದ್ರ' ಎಂದು ಅಚ್ಚುಹಾಕಿರುವುದರಿಂದ ಈ ಗ್ರಂಥವು ನಾಗಚಂದ್ರಕೃತವೆಂಬ ಭ್ರಮೆಗೆ ಅವಕಾಶವುಂಟಾದಂತೆ ಕಾಣುತ್ತದೆ. ಜಿನಾಕ್ಷರಮಾಲೆ ಎಂಬ ಒಂದು ಗ್ರಂಥವು ಪೊನ್ನನಿಂದ ರಚಿತವಾಗಿದೆ ಎಂದು ಹಿಂದೆಯೇ ತಿಳಿಸಿದ್ದೇವೆ. ನಾಗಚಂ ದ್ರನೂ ಒಂದು ಜಿನಾಕ್ಷರಮಾಲೆಯನ್ನು ರಚಿಸಿದ್ದಾನೆಯೋ ಅಥವಾ ದೇವಚಂದ್ರನೇ ಭ್ರಮಿಸಿ ದ್ದಾನೆಯೋ ತಿಳಿಯದು"

ಎಂದು ಕವಿಚರಿತೆ I. ೮೦–೮೧ರಲ್ಲಿ ಹೇಳಿ, ಕವಿಚರಿತೆಯ ೨ನೇ ಸಂಪುಟದ ೪೨೦ನೆಯ ಪುಟದಲ್ಲಿಯೂ ಕೂಡ

"ನೂತನನಾಗಚಂದ್ರ—ಸು. 1650—ಈತನು ಜಿನಮುನಿತನಯ ಎಂಬ ಗ್ರಂಥವನ್ನು ಬರೆದಿದ್ದಾನೆ. ಇವನು ಜೈನಕವಿ. ರಾಮಚಂದ್ರಚರಿತಪುರಾಣ, ಮಲ್ಲಿನಾಥಪುರಾಣ ಇವುಗಳನ್ನು ಬರೆದ ಪ್ರಸಿದ್ಧನಾದ ನಾಗಚಂದ್ರನಿಗೆ ತಾನು ಎರಡನೆಯವನು ಎಂಬ ಭಾವದಿಂದ "ನೂತನಾಗಚಂದ್ರ" ಅಥವಾ "ಅಭಿನವನಾಗಚಂದ್ರ" ಎಂದು ಹೆಸರಿಟ್ಟುಕೊಂಡಂತೆ ಕಾಣುತ್ತದೆ. ಅಚ್ಚಾಗಿರುವ ಒಂದು ಪುಸ್ತಕದಲ್ಲಿ ಕವಿನೂತನಾಗಚಂದ್ರ ಎಂಬುದನ್ನು ಕವಿವಿನುತನಾಗಚಂದ್ರ ಎಂದು ತಿದ್ದಿದ್ದಾರೆ. ಇದರಿಂದ ಪ್ರಸಿದ್ಧನಾದ ನಾಗಚಂದ್ರನೇ ಈ ಗ್ರಂಥವನ್ನು ಬರೆದಿರಬಹುದು ಎಂಬ ಭ್ರಮೆಗೆ ಅವಕಾಶವಾಯಿತು. ನಾಗಚಂದ್ರನ ಶೈಲಿಗೂ ಇವನ ಶೈಲಿಗೂ ಸಂಬಂಧವೇ ಇಲ್ಲ. ಇವನು ಆಧುನಿಕ ಕವಿ. ಸುಮಾರು 1650ರಲ್ಲಿ ಇದ್ದಿರಬಹುದು."

ಎಂದು ಬರೆದಿರುವರು.

ಇಲ್ಲಿ 'ಕವಿನೂತನಾಗಚಂದ್ರ' ಎಂಬ ಪದಾಂತರ್ಗತವಾದ 'ನೂತ' ಎಂಬ ಪದವು ನೂತ್ನ, ನೂತನ, ಎಂಬಪದಗಳ ಸಜಾತೀಯವೆಂದೂ ಈ ಪದಗಳಂತೆ 'ಅಭಿನವ' ಎಂಬ ಅರ್ಥವನ್ನು ಬೋಧಿಸುವುದೆಂದೂ ಕವಿಚರಿತಕಾರರು ಭಾವಿಸಿರುವಂತೆ ತೋರುವುದು. ಈ ಭಾವನೆಯು ತಪ್ಪು. ನೂತ ಎಂಬ ಪದವು ಸ್ತುತ್ಯರ್ಥಕವಾದ ನೂ* ಎಂಬ ಧಾತುವಿನಿಂದ (ತುದಾದಿ ೧೧೬ ಣೂಸ್ತವನೇ) ನಿಷ್ಪನ್ನವಾಗಿದ್ದು 'ಸ್ತುತ' ಎಂಬ ಪದಕ್ಕೆ ಸಮಾನಾರ್ಥಕವಾಗಿರುವುದು. ಈ ನೂ ಧಾತುವು ವೇದಮಂತ್ರಗಳಲ್ಲಿ† ವಿಶೇಷವಾಗಿ ಉಪಯೋಗಿಸಲ್ಪಟ್ಟಿದ್ದು ಕಾವ್ಯಪುರಾಣಾದಿಗಳಲ್ಲಿಯೂ ಕೂಡ ಸ್ವಲ್ಪಮಟ್ಟಿಗೆ ಪ್ರಯುಕ್ತವಾಗಿರುವುದು.‡ 'ನೂತ' ಎಂಬ ಪದವಂತೂ ಸಂಸ್ಕೃತಕವಿಗಳಿಗಿಂತಲೂ ಕನ್ನಡಕವಿಗಳಲ್ಲೇ ವಿಶೇಷವಾಗಿ ಬಳಕೆಯಲ್ಲಿರುವುದು; ಉದಾಹರಣೆ: ದುರ್ಗಸಿಂಹನ ಪಂಚತಂತ್ರ, ಪದ್ಯ ೩೪ (ಇದನ್ನು ನಾವು ಮೇಲೆ ೧೯ನೆಯ ಪುಟದಲ್ಲಿ ಅನುವದಿಸಿರುವೆವು):—"ಸಕಳೋರ್ವೀಶ್ವರದಂಡನಾಯಕವಿನೂತಾಂಘ್ರಿದ್ವಯಂ;" ಇದೇ ಪಂಚತಂತ್ರದ ೯ನೆಯ

* ಸ್ತುತ್ಯರ್ಥಕವಾದ ನು ಎಂಬ ಬೇರೆ ಧಾತುವೂ ಒಂದು ಉಂಟು. ಇದು ಹ್ರಸ್ವ ಉಕಾರಾಂತಧಾತು, (ಅದಾದಿ ೨೫ ಣುಸ್ತುತೌ); ನೂ ಧಾತುವು ದೀರ್ಘ ಊಕಾರಾಂತಧಾತು; ಇದು ತುದಾದಿಗಣಕ್ಕೆ ಸೇರಿದ್ದು. ಆರ್ಧಧಾತುಕಲಕಾರಗಳಲ್ಲಿ ಈ ಎರಡು ಧಾತುಗಳ ರೂಪಗಳಿಗೆ ಭೇದ ಕಾಣುವುದಿಲ್ಲ.

† ಉದಾಹರಣೆಗಳನ್ನು ವೆಸ್ಟರ್‌ಗಾರ್ಡ್‌ರವರ 'ರ್‍ಯಾಡಿಕೆಸ್ ಲಿಂಗ್ವೆ ಸಂಸ್ಕೃತೆ' ಎಂಬ ಗ್ರಂಥದಲ್ಲಿ (Westergaard: Radices Linguae Sanskritae) ನೋಡಿ.

‡ ಭಾಗವತ ೧-೮-೪೪: ಪೃಥಯೇತ್ಥಂ ಕಲಪದೈಃ ಪರಿಣೂತಾಖಿಲೋದಯಃ ।
ಮಂದಂ ಜಹಾಸ ವೈಕುಂಠೋ ಮೋಹಯನ್ನಿವ ಮಾಯಯಾ ॥

ಸಿದ್ಧಾಂತಕೌಮುದೀ (ತಿಜಂತತುದಾದಿಪ್ರಕರಣ): ಪರಿಣೂತಗುಣೋದಯಃ.

ಪುಟದಲ್ಲಿ ೧, ೨ ನೆಯ ಪಂಕ್ತಿಗಳು:—"ಮನ್ವಾದಿಪುರಾಣಮುನಿಗಣಪ್ರಣೂತ ಶ್ರುತಿವಿಹಿತಶುದಮಾರ್ಗನುಂ ಪ್ರಣೂತಾತ್ಮೀಯಬಂಧುವರ್ಗನುಂ"; ಶ್ರ. ಬೆ. ೪೧ ನೆಯ ಶಾಸನ, ೧೮ ನೆಯ ಪಂಕ್ತಿ :—"ನಿಖಿಳಮುನಿವಿನೂತೋರಾಗಕೋಪಾದಿಘಾತಃ"; ೫೧ ನೆಯ ಶಾಸನ, ೪ ನೇ ಪಂಕ್ತಿ:—"ಸಕಳಜನವಿನೂತಂ ಚಾರುಬೋಧತ್ರಿನೇತ್ರಂ"; ಚಿಕ್ಕನಾಯಕನಹಳ್ಳಿ ೨೧ ನೇ ಶಾಸನ, ೧೪ ನೆಯ ಪಂಕ್ತಿ:—"ದೇವಶ್ರೀನರಸಿಂಹಭೂಪ ವಿಜಯಶ್ರೀಶಪ್ರಣೂತೋಭವ"; ತುಮಕೂರ ೯ನೆಯ ಶಾಸನ, ೨೦ನೇ ಪಂಕ್ತಿ:—"ಸುಭಟನಧಿಕವಿನೂತಂ ತಾಂನೆಗರ್ದನೆಳೆಗೆ ಗಡ್ಡದಗಂಗ."

ಹೀಗಿರುವಾಗ ಕವಿಚರಿತಕಾರರು ಇದನ್ನೆಲ್ಲಾ ಅರಿಯದವರಂತೆ ಕವಿನೂತನಾಗಚಂದ್ರ ಎಂಬ ಸಮಸ್ತಪದವನ್ನು ಕವಿ, ನೂತನಾಗಚಂದ್ರ ಎಂದು ವಿಭಾಗಿಸಿ 'ಜಿನಮುನಿತನಯ'ವನ್ನು ಬರೆದ ಕವಿಗೆ ನೂತನಾಗಚಂದ್ರ ಎಂದು ನಾಮಕರಣ ಮಾಡಿ, ಆ ಕವಿಯು 'ರಾಮಚಂದ್ರಚರಿತಪುರಾಣ, ಮಲ್ಲಿನಾಥಪುರಾಣ ಇವುಗಳನ್ನು ಬರೆದ ಪ್ರಸಿದ್ಧನಾದ ನಾಗಚಂದ್ರನಿಗೆ ತಾನು ಎರಡನೆಯವನು ಎಂಬ ಭಾವದಿಂದ "ನೂತನಾಗಚಂದ್ರ" ಅಥವಾ "ಅಭಿನವನಾಗಚಂದ್ರ" ಎಂದು ಹೆಸರಿಟ್ಟುಕೊಂಡಂತೆ ಕಾಣುತ್ತದೆ' ಎಂದು ಹೇಳಿರುವುದನ್ನು ನೋಡಿದರೆ ನಮಗೆ ಅತ್ಯಾಶ್ಚರ್ಯವಾಗುವುದು.

'ಕವಿನೂತನಾಗಚಂದ್ರ' ಎಂದರೆ ಕವಿಸ್ತುತನಾದ ನಾಗಚಂದ್ರನೆಂದು* ಅರ್ಥವು. 'ಕವಿವಿನುತನಾಗಚಂದ್ರ' ಎಂದರೂ ಇದೇ ಅರ್ಥವಾದ್ದರಿಂದ, ಮುದ್ರಿತ ಗ್ರಂಥದಲ್ಲಿರುವ ಈ ಪಾಠವು ಪ್ರಾಯಶಃ ಒಂದು ಪಾಠಾಂತರವೇ ಇರಬಹುದು. ಆದುದರಿಂದ ಗ್ರಂಥವನ್ನು ಅಚ್ಚುಹಾಕಿದ ಪಂಡಿತರು 'ಕವಿನೂತ' ಎಂಬುದನ್ನು 'ಕವಿವಿನುತ' ಎಂದು ತಿದ್ದಿದ್ದಾರೆಂಬ ಕವಿಚರಿತಕಾರರ ಅಭಿಪ್ರಾಯವೇ ಸರಿಯೆಂದು ಹೇಳುವುದಕ್ಕಾಗುವುದಿಲ್ಲ.

ಅದು ಹೇಗಾದರೂ ಆಗಲಿ. ಜಿನಮುನಿತನಯ ಎಂಬ ಗ್ರಂಥವನ್ನು ನಾಗಚಂದ್ರನೆಂಬವನು ಬರೆದನೆಂಬುದು ಸ್ಪಷ್ಟ. ಈ ಜಿನಮುನಿತನಯ ಎಂಬ ಗ್ರಂಥದ ಶೈಲಿಗೂ ನಾಗಚಂದ್ರನು ಬರೆದಿರುವ ರಾಮಚಂದ್ರಚರಿತಪುರಾಣ ಮಲ್ಲಿನಾಥಪುರಾಣಗಳ ಶೈಲಿಗೂ ಯಾವ ವಿಧವಾದ ಹೋಲಿಕೆಯೂ ಇಲ್ಲವೆಂದು ಕವಿಚರಿತ

* ಕನ್ನಡಕವಿಗಳು ತಮ್ಮ ಕೃತಿಗಳಲ್ಲಿ ತಮ್ಮನ್ನೇ ಹೊಗಳಿಕೊಳ್ಳುವ ವಾಡಿಕೆಯುಂಟಷ್ಟೆ. ಇದಕ್ಕನುಸಾರವಾಗಿ ಕವಿಯು ಇಲ್ಲಿ ತಾನು 'ಕವಿವಿನುತ' ಎಂದರೆ ವಿಬುಧಸ್ತುತನಾಗಿದ್ದನೆಂದು ಹೇಳಿಕೊಂಡಿದ್ದಾನೆ.

ಕಾರರು ಹೇಳಿ 'ಜಿನಮುನಿತನಯ' ವನ್ನು ಬರೆದ ನಾಗಚಂದ್ರನು ಮೇಲ್ಕಂಡ ಗ್ರಂಥಗಳ ಕರ್ತೃವಾದ ನಾಗಚಂದ್ರನಿಂದ ಭಿನ್ನನೆಂದೂ ಅವನು ಯಾವನೋ ಒಬ್ಬ ಸಾಧಾರಣಕವಿಯೆಂದೂ ಸುಮಾರು ೧೬೫೦ ರಲ್ಲಿ ಇದ್ದಿರಬಹುದು ಎಂದೂ ಹೇಳಿರುವರು.

ಮೇಲ್ಕಂಡ ಈ ಎರಡು ಗ್ರಂಥಗಳ ಶೈಲಿಗೂ 'ಜಿನಮುನಿತನಯ' ದ ಶೈಲಿಗೂ ಹೋಲಿಕೆಯೇನೂ ಇಲ್ಲವೆಂಬುದನ್ನು ಬೇಕಾದರೆ ನಾವೂ ಒಪ್ಪಿಕೊಳ್ಳೋಣ. ಆದರೆ ಅಷ್ಟುಮಾತ್ರದಿಂದ ಈ 'ಜಿನಮುನಿತನಯ' ದ ಕರ್ತೃವು ಮೇಲ್ಕಂಡ ಎರಡು ಗ್ರಂಥಗಳ ಕರ್ತೃವಿನಿಂದ ಭಿನ್ನನೆಂದು ನಾವು ಹೇಳುವುದಕ್ಕಾಗುವುದಿಲ್ಲ. ಜಿನಮುನಿತನಯ, ಜಿನಾಕ್ಷರಮಾಲೆ ಮೊದಲಾದ ಈ ವಿಧ ಗ್ರಂಥಗಳಲ್ಲಿ ಕವಿಗೆ ಕವಿತಾಶಕ್ತಿಯನ್ನು ಪ್ರಕಟಿಸುವದಕ್ಕೆ ಏನು ಅವಕಾಶ ದೊರಿಯುವುದು ? ಇಂತಹ ಗ್ರಂಥದಲ್ಲಿ ಅವಕಾಶ ದೊರೆಯದಿದ್ದುದರಿಂದ ಕವಿಯು ತನ್ನ ಶಕ್ತಿಯನ್ನು ಪ್ರಕಟಿಸದಿದ್ದಮಾತ್ರಕ್ಕೆ ಆ ಕವಿಗೆ ಕವಿತಾಶಕ್ತಿಯೇ ಇಲ್ಲವೆಂದೂ, ಕವಿತಾಶಕ್ತಿಯನ್ನು ಪ್ರಕಟಿಸುವುದಕ್ಕೆ ಅವಕಾಶ ದೊರೆತು, ಹಾಗೆ ತನ್ನ ಕವಿತಾಶಕ್ತಿಯನ್ನು ಪ್ರಕಟಿಸಿರುವ ಇತರ ದೊಡ್ಡ ಗ್ರಂಥಗಳನ್ನು ಇವನು ಬರೆದಿರಲಾರನೆಂದೂ, ಹೇಳುವುದು ನ್ಯಾಯವೇ ? ಶಾಂತಿಪುರಾಣದ ಕರ್ತೃವಾದ ಪೊನ್ನನು ಜಿನಾಕ್ಷರಮಾಲೆಯೆಂಬ ಒಂದು ಗ್ರಂಥವನ್ನು ಬರೆದಿರುವನೆಂಬುದನ್ನು ಕವಿಚರಿತಕಾರರೂ ಒಪ್ಪಿ, ೩೮, ೩೯ನೆಯ ಪುಟಗಳಲ್ಲಿ ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆದಿರುವರು. ಈ ಜಿನಾಕ್ಷರಮಾಲೆಯ ಶೈಲಿಗೂ ಶಾಂತಿಪುರಾಣದ ಶೈಲಿಗೂ ಅಂತಹ ಹೋಲಿಕೆಯೇನೂ ಕಾಣುವುದಿಲ್ಲವಾದ್ದರಿಂದ ಕವಿಚರಿತಕಾರರ ಯುಕ್ತಿವಾದವನ್ನವಲಂಬಿಸಿ, ಈ ಜಿನಾಕ್ಷರಮಾಲೆಯನ್ನು ಬರೆದ ಪೊನ್ನನು ಶಾಂತಿನಾಥಪುರಾಣವನ್ನು ಬರೆದಿರಲಾರನೆಂದೂ, ಆ ಗ್ರಂಥವನ್ನು ಬರೆದಿರುವ ಪ್ರಸಿದ್ಧನಾದ ಪೊನ್ನನಿಂದ ಭಿನ್ನನಾದ ಯಾವನೋ ಒಬ್ಬ ಸಾಧಾರಣಕವಿಯಾಗಿರಬೇಕೆಂದೂ ವಾದಿಸುವದಕ್ಕಾಗುವುದಿಲ್ಲವೇ ?

ಇದನ್ನೆಲ್ಲಾ ಪರ್ಯಾಲೋಚಿಸಿದಲ್ಲಿ ಕವಿಚರಿತಕಾರರ ಯುಕ್ತಿವಾದವು ಅಷ್ಟೇನೂ ಪ್ರಯೋಜನಕಾರಿ ಅಲ್ಲವೆಂದೂ, ರಾಮಚಂದ್ರಚರಿತಪುರಾಣದ ಕರ್ತೃವಾದ ನಾಗಚಂದ್ರನೇ ಈ ಜಿನಮುನಿತನಯುವನ್ನು ಬರೆದನೆಂದು ಈಗ ಹರಡಿಕೊಂಡಿರುವ ಪ್ರತೀತಿಯು* ವಾಸ್ತವವಾಗಿ ತಪ್ಪೆಂಬುದನ್ನು ಸ್ಪಷ್ಟವಾಗಿ ಸ್ಥಾಪಿಸುವ

* ಪಂಪರಾಮಾಯಣದ ಕರ್ತೃವಾದ ನಾಗಚಂದ್ರನು ಜಿನಮುನಿತನಯ, ಜಿನಾಕ್ಷರಮಾಲೆ ಮೊದಲಾದ ಇತರ ಗ್ರಂಥಗಳನ್ನು ರಚಿಸಿದ್ದಾನೆಂದು ದೇವಚಂದ್ರನು ರಾಜಾವಳೀ ಕಥೆಯಲ್ಲಿ ಹೇಳಿ

ದಕ್ಕೆ ಸಾಕಾದಷ್ಟು ಆಧಾರಗಳು ದೊರೆಯುವವರೆಗೂ ಈ ನಾಗಚಂದ್ರನೇ ಜಿನ ಮುನಿತನಯವನ್ನು ಬರೆದನೆಂದು ತಿಳಿದುಕೊಂಡಿರುವುದೇ ಸದ್ಯಸ್ಥಿತಿಯಲ್ಲಿ ಉತ್ತಮ ಪಕ್ಷವೆಂದೂ, ನಮಗೆ ತೋರುವುದು.

---

ರುವನು. ಈ ದೇವಚಂದ್ರನ ಮಾತುಗಳಲ್ಲಿ ನಮಗೆ ಸ್ವಲ್ಪವಾದರೂ ನಂಬಿಕೆ ಇದ್ದಿದ್ದರೆ ಈಗ ಮುದ್ರಿತ ವಾಗಿರುವ ಜಿನಮುನಿತನಯವು ಈ ನಾಗಚಂದ್ರನಿಂದಲೇ ಬರಿಯಲ್ಪಟ್ಟಿತೆಂದು ನಿಸ್ಸಂದೇಹವಾಗಿ ಹೇಳಿಬಿಡುತ್ತಿದ್ದೆವು. ಆದರೆ ಇವನು ಸುತರಾಂ ಅವಿಶ್ವಾಸ್ಯನಾಗಿರುವುದರಿಂದ ಇವನ ಮಾತಿಗೆ ಯಾವ ಬೆಲೆಯನ್ನೂ ಕೊಡುವುದಕ್ಕಾಗುವುದಿಲ್ಲ.

ನಿರೀಶ :—ನನಗೇನೋ ಸ್ವಲ್ಪ ಸಂದೇಹ ; ಏಕೆಂದರೆ,.........

ಯುವಕಪೌರ :—(ಕಂಗನೆ ಕೆರಳ್ದು,) ಏನೋ ! ನಮ್ಮ ವೀರಮಹಾರಾಜರನ್ನು ಬಯ್ಯುವುದೂ ಅಲ್ಲದೆ, ನಾವೀಗ ಇಲ್ಲಿ ಮಾತನಾಡಿದವರನ್ನಿನಿಬರನ್ನೂ ಸುಳ್ಳರೆಂದು ಕಿರುಕುಳರೆಂದು ಕೂಗುವೇ ?—ಜೋಕೆ !

ಪಟ್ಟಣಿಗರೆಲ್ಲ :—(ಕ್ರುದ್ಧರಾಗಿರುವರು.)

ನಿರೀಶ :—(ಸಮಸ್ತರನ್ನೂ ಪರಿಕಿಸುತಿದ್ದು,) ಮಹನೀಯರೆ, ನಿಮ್ಮಂತಹ ಸದ್ಗೃಹಸ್ಥರ ಮಾತುಗಳನ್ನು ಕಟ್ಟುಕವೆಂದು ಕೀಳ್ಪಡಿಸಲು ನನಗಿಷ್ಟವಿಲ್ಲ ; ನಿಮ್ಮ ಮಹಾರಾಜರು ನೀವು ಕೀರ್ತಿಸಿದಂತಹವರೇ ಆಗಿರುವುದಾದರೆ, ನೀವು ಬಹಳ ಪುಣ್ಯವಂತರು.

ಪೌರರು :—(ಕಳಿಯೇರುವರು.)

ಯುವಕಪೌರ :—(ಪ್ರಸನ್ನನಾಗಿ,) ಹಾಗೆ ಮಾತನಾಡು.—ಈಗಳೀಗ ನೀನೊಂದು ಮನುಷ್ಯನಾದೆ.

ನಿರೀಶ :—ಅಯ್ಯಾ, ಶ್ರೀಮನ್ಮಹೀಶೂರಮಹಾರಾಜ ಶ್ರೀ ರಣಧೀರಕಂಠೀರವನರಸರಾಜಒಡೆಯರ ಪ್ರಜೆಗಳಾಗಿರುವ ಸೌಭಾಗ್ಯರೆ!—ಅಷ್ಟುಹೊತ್ತಿನಿಂದ ನಿಮ್ಮ ಮಹಾರಾಜರನ್ನು ನಾನು ಅವಹೇಳನ ಮಾಡುತಿದ್ದ ನನ್ನ ಮಹಾಪರಾಧವನ್ನು ನೀವೆಲ್ಲರೂ ಕೃಪೆಮಾಡಿ ಕ್ಷಮಿಸಬೇಕೆಂದು ಪ್ರಾರ್ಥಿಸಿಕೊಳ್ವೆನು. (ಕಯ್ಮುಗಿದು ನಮಿಸುವನು.)

ಆಯ್ದನೆಯವನು :—ಭಾಪು !

ಮೊದಲನೆಯವನು :—ಒಳ್ಳೆಯ ಹುಡುಗ.

ಎರಡನೆಯವನು :—ಪಾಪ !

ಆರನೆಯವನು :—ಹೆದರಿಬಿಟ್ಟನು, ಅಹುದು.

ಮೂರನೆಯವನು :—(ಜನಾಂತಿಕದಲ್ಲಿ,) ಇಲ್ಲ, ಮಾವ ; ಅವನ ಮುಖವನ್ನು ನೋಡು ; ಹೆದರಿದವರ ಮುಖದಲ್ಲಿ ಆ ಗಾಂಭೀರ್ಯವೂ ಆ ತೇಜಸ್ಸೂ ಇರುವುವೆ ?

4



ಯುವಕಪೌರ :—(ಸನ್ತೋಷದಿಂದ,) ಅಯ್ಯಾ, ನರಸೀಪುರದ ಪುತ್ರನೆ! ನಿನ್ನ ಆ ಮಹಾಪರಾಧಕ್ಕೆ ಪ್ರಾಯಶ್ಚಿತ್ತವಾಗಿ ನಿನ್ನೆರಡು ಕೆನ್ನೆಗಳಿಗೂ ನೀನೇ ಬೆಚ್ಚಗೆ ಹೊಡೆದುಕೊ, ನೋಡೋಣ!

ನಿರೀಶ :—(ತನ್ನೆರಡು ಕೆನ್ನೆಗಳಿಗೂ ಹೊಡೆದುಕೊಂಡು,) ಪುಣ್ಯಶಾಲಿಗಳಿರಾ! ನಿಮ್ಮ ರಣಧೀರಮಹಾರಾಜರು ನೀವು ಸೂಚಿಸಿದಂತೆ ಅಂತಹ ಶೂರಪರಾಕ್ರಮಿ ಸೋಲವೆಡೆಗಿಡಿಸದ ಸಾಹಸಿಯೇ ಆಗಿರುವುದುಂಟಾದರೆ, ಅಜ್ಞಾತಕುಲಗೋತ್ರನಾದ ದಳವಾಯಿಯೊಬ್ಬನು ಅವರನ್ನು ಇಷ್ಟು ಸುಲಭವಾಗಿ ಹಿಡಿದು, ಕಯ್ಸೆರೆಯ ಬಂದಿಯನ್ನೆಂಬಂತೆ ಅರಮನೆಯೊಳಗೆ ಕೂಡಿಸಿ, ಕಾವಲಿಡುವುದು ಸಾಧ್ಯವಾಗುತ್ತಿದ್ದಿತೆ?—ಎಂದು ನನಗೆ ಸಂಶಯವುಂಟಾಗಿದ್ದಿತು.

ಪೌರರೆಲ್ಲ :—ಹಾ!

ಎರಡನೆಯವನು :—ಅರಮನೆಯ ಒಳಗೆ ಅಲ್ಲವಯ್ಯಾ; ಅಲ್ಲಿಯ ಹೊರಗಣ ಅಂಗಣದಲ್ಲಿ.

ಯುವಕಪೌರ :—ಆ ದಳವಾಯಿ! ರಾಕ್ಷಸವಿಕ್ರಮರಾಯ!

ಅಯ್ದನೆಯವನು :—ನಮ್ಮ ಮಹಾರಾಜರನ್ನು ಪಟ್ಟಾಭಿಷೇಕಕ್ಕೆಂದು ಈ ಮಹೀಸುರಪುರಕ್ಕೆ ಕರೆಯಿಸಿ, ಅವರಿಲ್ಲಿಗೆ ಬಂದೊಡನೆ ತಾನು—ಇಲ್ಲಿಯೇ ಇದ್ದೂ ಅವರ್ಗೆ ಕಯ್ಗಾಣ್ಕೆಯನ್ನೊಪ್ಪಿಸದೆಯೇ—ಅವಸರದ ರಾಜಕಾರ್ಯಕ್ಕೆಂದು ಕನ್ನಂಬಾಡಿಯತ್ತ ಹೊರಟು ಹೋದನು. ಅದರರ್ಥವು ನಿಮಗೆಲ್ಲ ತಿಳಿದುದೇನು?

ಪಟ್ಟಣಿಗರು :—ಧೂರ್ತ! ಧೃಷ್ಟದಳವಾಯಿ!

ಅಯ್ದನೆಯವನು :—ಹೀಗೆಯೇ ತನ್ನ ದುರಧಿಕಾರವು ಬಳೆದಂತೆ ಪಟ್ಟಕ್ಕೇರುವ ಮಹಾರಾಜರ ವಿಷಯದಲ್ಲಿ ಅಲಕ್ಷ್ಯ ಉಪೇಕ್ಷೆ ಕೃತ್ರಿಮ ವಂಚನೆ ದ್ರೋಹ ಇವನ್ನು ಕಯ್ಕೊಗಡಿಸಿಕೊಳ್ಳುತಿದ್ದು, ಕಟ್ಟಕಡೆಗೆ, ಸಮಯವಳವಟ್ಟು ಬಂದಾಗ, ಮಹೀಸುರದೇಶದ

ರತ್ನಸಿಂಹಾಸನವನ್ನು ಈ—ದಳವಾಯಿ ವಿಕ್ರಮರಾಯನು ಏರಿ, ನಮ್ಮ ಮಹಾರಾಜನಾಗಬೇಕೆಂದಾಲೋಚಿಸಿ ಹೊಂಚುತಿದ್ದಾನೆ.

ಪೌರರು :—ಅಯ್ಯೋ! ಅವನು ನೆಗೆದುಬೀಳ!

ಆ ಚಣ್ಡಾಲನು ಸತ್ತು ಹಾಳಾಗಲಿ!

ಅವನು ಉರಿದು ಬಿದ್ದುಹೋಗಲಿ!

ಅಯ್ಯೋ! ಅವನು ನಾಶವಾಗ!

ಅಯ್ದನೆಯವನು :—ಆದರೆ, ಹಾಗಾಗಬೇಕಾದರೆ, ಈ ದಳವಾಯಿಯು ......ಈ ಗಾಂಧರ್ವಪುತ್ರನು......ಈ ವಿಕ್ರಮರಾಯನು ರಕ್ತ ಸಮುದ್ರಗಳನ್ನೀಸಿ, ಮನುಷ್ಯರ ಅಸ್ಥಿಪಂಜರಗಳ ಸೇತುವೆಯ ಮೇಲೆ ನಡೆದು, ಮಾಡಬಾರದ ಕೊಲೆಗಳನ್ನು ಮಾಡಿ, ತನ್ನಿಂದ ಹತಾಹತರಾದವರು ನರಲುವ ಗೋಳಿಟ್ಟಳುವ ಧ್ವನಿಗಳೇ ಮನ್ತ್ರಗಳೂ ಶುಭವಾದ್ಯಗಳೂ ಆಗಿ ಘೂರ್ಣಿಸುತ್ತಿರಲು—ಅಂತವರ ದುಕ್ಕದ ಕಣ್ಣೀರ ಧಾರೆಗಳಿಂದ ತಾನು ಪಟ್ಟಾಭಿಷೇಕ ಮಾಡಿಕೊಳ್ಳಬೇಕಾಗುವುದು!

ಪೌರರು :—(ವಿವರ್ಣರಾಗಿ,) ದೆವ್ವ! ಪಿಶಾಚ!

ನಿರೀಶ :—ಆಗಳ್ಗೆ ನಿಮ್ಮ ವಿಕ್ರಮರಾಯನಿಗೆ—

ಯುವಕಪೌರ :—(ಕ್ರೋಧೋದ್ವೇಗದಿಂದ,) ನಮ್ಮ ವಿಕ್ರಮರಾಯನಲ್ಲ! ನರಕದ ವಿಕ್ರಮರಾಯ!

ನಿರೀಶ :—ಆಗಳ್ಗೆ ಹಾಗೆ ಶ್ರೀರತ್ನಸಿಂಹಾಸನಾರೋಹಣಮಾಡಿ ಮಹೀಶೂರದೇಶಕ್ಕೆ ಮಹಾರಾಜನಾಗಲು ಆಳವಡುವ ವಿಕ್ರಮರಾಯನಿಗೆ ನೆರವಾಗಿ, ಈ ಸ್ವಾಮಿದ್ರೋಹಿಯ ಬಲ್ಪಿನ ಸ್ವಾರ್ಥಪರತ್ವಕ್ಕೆ ಬಲಿಯಾಗುವ ಜನರ ಜಂಗುಳಿಯು ಪ್ರಜಾವಳಿಯು ಸೈನ್ಯವು ಮಹಾಪಾತಕರ ಸನ್ತೆಯಾಗಿ......ತಮ್ಮನ್ನು ಸೃಷ್ಟಿಸಿದ ಬ್ರಹ್ಮನಿಗೆ, ರಕ್ಷಿಸುವ ಶ್ರೀಮನ್ಮಹಾವಿಷ್ಣುವಿಗೆ, ತಾವು ಪ್ರವೇಶಿಸಬೇ

ಕಾದ ಮೃತ್ಯುಮುಖಕ್ಕೂ ಒಂದಪಮಾನವನ್ನೊದವಿಸುವಂತಹವ ರಲ್ಲವೇನು ?

ಪಟ್ಟಣಿಗರು :—ಅಹುದು ! ಅಹುದು ! ಅಹುದು !

ಅಯ್ದನೆಯವನು :—ಇಂದೀಗ ಕವಡನ್ನರಿಯದೆ ಬಂದ ನಮ್ಮ ಶೂರ ಮಹಾರಾಜರನ್ನು ಹೀಗೆ ಅರಮನೆಯ ಹೊರವಳಯದಲ್ಲಿ— ಪ್ರತ್ಯಕ್ಷವಾಗಿ ಸೆರೆಗೊಂಡು, ತನ್ನ ಸೊಕ್ಕಿನ ಅಧಿಕಾರದ ಉದ್ಧತಿಯ ಪರಾಕಾಷ್ಠತೆಯನ್ನು ಪ್ರಕಟಿಸುವುದಕ್ಕೋಸ್ಕರವಾಗಿ ಕನ್ನಂಬಾಡಿಗೆ ಹೊರಟುನಡೆದ ಆ ದ್ರೋಹಿದಳವಾಯಿಗೆ ನಾವು ಅನುವರ್ತಿಗಳಾಗಿ ಮೆಯ್ಯಾರದ ಮಾನವಿಲ್ಲದ ಕುರುಡ ಕೀಟಗಳಾಗಿದ್ದೇವೆ.

ಪೌರರು :—ಇಲ್ಲ ! ಇಲ್ಲ ! ಇಲ್ಲ !

ಯುವಕಪೌರ :—(ಮಾವುಕಗಿ, ರೋಷಗದ್ಗದಕಂಠದಿಂದ,) ಹೇಗೆ ?

ಅಯ್ದನೆಯವನು :—ನಮ್ಮ ರಣಧೀರಮಹಾರಾಜರನ್ನು ಬಿಡಿಸಿಕೊಳ್ಳದೆ, ಆ ಧೂರ್ತಪಾಮರದಳವಾಯಿಯು ಅವರನ್ನು ತನ್ನ ಕಾಲಕೆಳಗೆ ಸಿಕ್ಕಿಸಿಕೊಂಡು ಹೊಸೆದಾಡುತ್ತಿದ್ದರೂ, ಕುರಿಗಳಂತೆ ಸುಮ್ಮನಿರುವ ನಾವು ನರಕದ ಹನ್ದಿಗಳಲ್ಲದೆ—ಬೇರೇನು ?

ಪಟ್ಟಣಿಗರು :—ಅಯ್ಯೋ !

ಯುವಕಪೌರ : – ಹೋ ! ನಮ್ಮ ಮಹಾರಾಜರನ್ನೀಗಳೇ ನಾವು ಬಿಡಿಸಿಕೊಳ್ಳಬೇಕು !

ನಿರೀಶ :—ಒಂದು ದೇಶದ ಪ್ರಜಾಲೋಕದ ಐಶ್ವರ್ಯವು ಮಾನವು ಗೌರವವು ಧರ್ಮವು ಶಕ್ತಿಯು ಸತ್ತ್ವವು ಕಲಿತನವು ಸ್ವತಂತ್ರತೆಯು ಅದರ ರಾಜನಲ್ಲಿ ಮೆಯ್ಗೊಂಡಿರುವುವು ; ಆ ರಾಜನಿಗಡಸಿದ ಭಂಗವು ದುಃಖವು ಸಂಕಟವು ಅಪಮಾನವು ಆ ಪ್ರಜಾವಳಿಗಾದಂತೆ. ಅಹುದು ; ಇಂದು ಆ ವಿಕ್ರಮರಾಯನು ಕಾವಲೊಳಿರಿಸಿ ಲೆಕ್ಕಿಸ

ದಿರುವುದು ಶ್ರೀರಣಧೀರಕಣ್ಠೀರವನರಸರಾಜಒಡೆಯರನ್ನಲ್ಲ; ಮಹೀಶೂರದೇಶದ ಪ್ರಜೆಗಳನ್ನು!

ಪೌರರು :—ಹೋ! ನಡೆಯಿರಿ! ನಮ್ಮ ಮಹಾರಾಜರನ್ನು ಬಿಡಿಸಿಕೊಳ್ಳೋಣ!

ಬನ್ನಿ, ವಿಕ್ರಮರಾಯನ ಮನೆಗೆ ಬೆಂಕಿಯನ್ನಿಡುವ!

ಹೋ! ಅವನ ಸೈನ್ಯದವರನ್ನೂ ತತ್ತರದರಿದೇ ತೀರಿಸೋಣ!

ಹೊರಡಿರಿ, ಕನ್ನಂಬಾಡಿಗೇ ಹೋಗೋಣ.

ಅಲ್ಲಿ ಆ ದ್ರೋಹಿಯನ್ನು ಸೀಳಿ, ಅವನ ಹೆಣವನ್ನು ಕಾವೇರಿಗೆ ಬಿಸಾಡಿ ಬರುವಣ!

ಕಾವೇರಿಗೆ ಬೇಡ!

ಇರಿ!

ಕಡಿ!

ಹೊಯ್!

ಕೊಲ್ಲು!

ಹೋ!

ಯುವಕಪೌರ :—(**ಕಯ್ಗಳನ್ನೆತ್ತಿ,**) ನಮ್ಮ ಮಹಾರಾಜರಿಗೆ ಜಯವಾಗಲಿ! ದ್ರೋಹಿ ವಿಕ್ರಮರಾಯನು ನಾಶವಡೆಯಲಿ! ಅಹೋ! ಜಯಜಯರಣಧೀರ!

ಪೌರರು :—ಮಹಿಶೂರಿಗೆ ಗೆಲ್ಲವಾಗಲಿ!

ದ್ರೋಹಿ ವಿಕ್ರಮರಾಯನು ನಿರ್ಮೂಲವಾಗಲಿ!

ಜಯಮಹಾರಾಜ!

ಮೈಸೂರ್ಗೆ—ರಣಧೀರನಿಗೆ ಜಯವೊಸೆಯಲಿ! (**ಕೋಲಾಹಲಿಸುತ್ತಿರುವರು.**)

(**ಚೆನ್ನರಂಗರ ಪ್ರವೇಶ.**)

ಯುವಕಪೌರ :—ದ್ರೋಹಿ ವಿಕ್ರಮರಾಯನ ಪರಿವಾರದವರು ! ಅವರ ಕುಡುತೆಯನ್ನು ನೋಡು ! ಅವರನ್ನು ಹಿಡಿದು ಪುಟವೇರಿಸೋಣ !

(ಚೆನ್ನರಂಗರತ್ತ ನುಗ್ಗುವನು.)

ನಿರೀಶ :—(ಯುವಕಪೌರನನ್ನು ತಡೆದು ನಿಲ್ಲಿಸಿ, ಗಂಭೀರಭಾವದಿಂದ,) ನೀವು ಹೀಗೆ ವ್ಯರ್ಥವಾಗಿ ಬಲಪ್ರಯೋಗಕ್ಕೆ ಆತುರಿಸಲಾಗದು. ನಿಮ್ಮ ಮಹಾರಾಜರನ್ನು ಆ ಕಾರಾಗೃಹದಿಂದ ಬಿಡಿಸಿಕೊಳ್ಳುವ ಆಶೆಯು ನಿಮಗೆ ನಿಶ್ಚಯವಾಗಿಯೂ ಇದ್ದರೆ,.........

ಪಟ್ಟಣಿಗರು :—ಇದೆ ! ಇದೆ !

ಚೆನ್ನ
ರಂಗ } :—(ಹೋಗುವರು.)

ನಿರೀಶ :—......ಹೀಗಾಡದಿರಿ. ನಿಮ್ಮ ಮುಂದಾಳುಗಳು ಆದ್ಯಂತವಾಗಿ ವಿಚಾರಿಸಿ ಆಲೋಚಿಸಿ ನಿರ್ಣಯಿಸಿದಂತೆ ನೀವೆಲ್ಲರೂ ತಪ್ಪದೆ ಆಚರಿಸಬೇಕು.

ಅಯ್ದನೆಯವನು :—(ನಿರೀಶನನ್ನೇ ನೋಡುತಿದ್ದು,) ನಮ್ಮಲ್ಲಿ ಅಂತಹ ನೊದಲಿಗರಾರೂ ಈಗ ಇಲ್ಲ, ಸ್ವಾಮಿ ; ನೀವೇ ನಮಗೆ ದಿಕ್‌ಪ್ರದರ್ಶಕರಾಗಿ.........

ಪೌರರು :—ಅಹುದು, ನೀವೇ ನಮ್ಮ ಹೆಗ್ಗಡೆ !

ನಿರೀಶ :—(ಹಿಮ್ಮೆಟ್ಟಿ,) ಶ್ರೀಚಾಮುಂಡೇಶ್ವರೀರಥೋತ್ಸವದ ಜಾತ್ರೆಗೆಂದು ಇತ್ತ ಬಂದಿದ್ದ ನನಗೆ......ನಿಮ್ಮಾ ದಳವಾಯಿಪ್ರಜೆಗಳ ಯುದ್ಧದ ಕೋಟಲೆಯೇಕೆ? ಈ ರಾಜಕೀಯವಾದ ಜಂಜಡ—ತೊಡಕುಗಳು ನನಗೆ ಬೇಕಾಗಿಲ್ಲ. (ಹೊರಡುವನು.)

ಪೌರರು :—(ನಿರೀಶನ ಸುತ್ತ ಬಳಸಿಕೊಂಡು ನಿಂತು,) ಇಲ್ಲ! ಆದಾಗುವುದಿಲ್ಲ ! ನೀವೇ ನಮ್ಮ ಮುಖ್ಯಸ್ಥ ! ಈಗಳೇನು ಮಾಡಬೇಕು ? ಹೇಳಿ !

ನಿರೀಶ :—ಈಗ ಹೀಗೆ ಒಡಂಬಡುವಿರಿ ; ಆಬಳಿಕ—

ಪಟ್ಟಣಿಗರೆಲ್ಲ :—ಇಲ್ಲ ! ಇಲ್ಲ ! ನಾವೆಲ್ಲಾ ನೀವು ಹೇಳಿದಹಾಗೆ ನಡೆದು ಕೊಳ್ಳುವೆವು !

ಸಿರೀಶ :—ಆದರೂ,............

ಪೌರರು :—ದೇವರಾಣೆ !

ನಮ್ಮಯ್ಯನಾಣೆ !

ನನ್ನ ಮಾತೃಪಾದಸಾಕ್ಷಿಯಾಗಿ !

ನಮ್ಮ ಗುರುಪಾದಸಾಕ್ಷಿಯಾಗಿ !

ನಮ್ಮ ರಣಧೀರಮಹಾರಾಜರ ಪಾದದಾಣೆ !

ರಾಕ್ಷಸ—ವಿಕ್ರಮರಾಯನ ಆತ್ಮಸಾಕ್ಷಿಯಾಗಿ !

ನನ್ನಾಣೆಗೂ !

ನನ್ನ ಮಕ್ಕಳಾಣೆ !—

ಸಿರೀಶ :—(**ಹುಬ್ಬುಗಂಟಿಕ್ಕಿ, ನಿಷೇಧದ ಕಯ್ಯನ್ನೆತ್ತಿ,**) ಈಗ ಈಕ್ಷಣವೇ ನೀವಿನಿಬರೂ ಮೈಸೂರ ಇತರ ಸುಭಟಪೌರರೊಡಗೂಡಿ, ಕೆರೆಯ ಮುಂದಣ ತಪ್ಪಲ ಪಸಲೆಯಲ್ಲಿ ನೆರೆಯಬೇಕು. ಅಲ್ಲಿ ನಮ್ಮ ಸ್ಥಿತಿಗತಿಗಳನ್ನೆಲ್ಲ ಸಮಾಳೋಚಿಸಿ, ನಮ್ಮ—ನಮ್ಮ ಶ್ರೀರಣಧೀರ ಮಹಾರಾಜರಿಗೆ·····ಎಂದರೆ, ಈ ಮಹೀಶೂರದೇಶದ ಪ್ರಜೆಗಳಿಗೆ·····ಸ್ವಾತಂತ್ರ್ಯವನ್ನು ಪುನಃ ಪಡೆದುಕೊಳ್ಳುವದಕ್ಕೆ ತಕ್ಕ ಸಾಧನಸನ್ನಾಹಗಳನ್ನು ಉಪಾಯಗಳನ್ನು ನಿಶ್ಚಯಮಾಡಿಕೊಂಡು, ಆದರಂತೆ ಉಜ್ಜುಗಿಸಿ ನಮ್ಮಕುರಿತ ಫಲವನ್ನು ಸಾಧಿಸೋಣ; ಹಾಗಾಗದೆ, ನಮ್ಮ ಪುಣ್ಯಾಪ್ರಯತ್ನಗಳೆಲ್ಲಾ ಬಯಲಾಗುವುದೇ ಸಿದ್ಧಿಯಾದರೆ, ನಮ್ಮ ಏಕಾಗ್ರತೆಯ ಉದ್ದಾಮತ್ವದಿಂದ ನಮ್ಮೆದೆಯ ಬಿಸುನೆತ್ತರನ್ನು ಬಸಿದು, ಆ ಗಭೀರಪ್ರವಾಹದೊಳಗೆ ನಮ್ಮ ರಣಧೀರಮಹಾರಾಜರ ಸೆರೆವನೆಯ ನಾಲ್ಕೂಗೋಡೆಗಳನ್ನು ಮುಳುಕಿಸಿ ಕೆಡಹಿ ಕೊಚ್ಚಿಸಿ ಕೃತಾರ್ಥರಾಗೋಣ ! ನಡೆಯಿರಿ !

ಯುವಕಪೌರ :—(ಮುಂದಕ್ಕೆ ಹಾರಿ, ನಿರೀಶನನ್ನು ಗಾಢಾಲಿಂಗನಮಾಡಿಕೊಳ್ಳು ವನು.)

ಪೌರರು :—ನಮ್ಮ ಮಹಾರಾಜರಿಗೆ ಜಯವಾಗಲಿ!
ಮಹಿಶೂರಿಗೆ ಜಯಜಯ!
ಹೋ! ದಳವಾಯಿ ವಿಕ್ರಮರಾಯನು ಹಾಳೇರಿಹೋಗಲಿ!
ಜಯಜಯತು ರಣಧೀರ!
ಮೈಸೂರಿಗೆ ಮಂಗಳವಾಗಲಿ!

## ಪ್ರವೇಶ ೮.

[ಸ್ಥಾನ ;—ಕನ್ನಂಬಾಡಿ, ಗೋಪಾಲಕೃಷ್ಣಸ್ವಾಮಿಯ ದೇವಸ್ಥಾನದ ಹೆಬ್ಬಾಗಿಲು.]

(ಆ ಗ್ರಾಮದ ಗೌಡ ಕರಣಿಕ ಪುರೋಹಿತ ಮುಂತಾದವರೂ ಊರುಗರೂ ಫಲಪುಷ್ಪಾದಿಗಳೊಡನೆ ಸಿದ್ಧರಾಗಿ ನಿಂತಿರುವರು.)

(ಹೊರಗೆ):—(ರಾಜವಾದ್ಯಗಳು ಭೋರ್ಗರೆಯುವುವು.)

(ಮಹಾರಾಜವೈಭವದಿಂದ ಸಪರಿವಾರ ವಿಕ್ರಮರಾಯನ ಪ್ರವೇಶ.)

ತಕ್ಕವರು :—(ವಿಕ್ರಮರಾಯನಿಗೆ ಕೈಮುಗಿದು ಬಾಗುವರು.)

ಪುರೋಹಿತ :—(ಅವನಿಗೆ ಆಶೀರ್ವದಿಸಿ, ಫಲಪುಷ್ಪಾದಿಗಳನ್ನು ಸಮರ್ಪಿಸುವನು.)

ವಿಕ್ರಮರಾಯ :—ಗೌಡನಾವನು ? ನೀನೊ ?

ಗೌಡ :—(ಮುಂದೆಯ್ದಿವಂದು, ವಂದಿಸಿ,) ಅಹುದು, ಶ್ರೀಮಂತರ ಸೇವಕನು ನಾನು.

ವಿಕ್ರಮರಾಯ :—ಈವೂರ ಹಿಂದಣ ವರುಷದ ಕರದ ಉಳಿಕೆ—ಇನ್ನೂರ ಎಪ್ಪತ್ತೊಂಭತ್ತು ವರಹ ಆರು ಹಣಗಳು ಇನ್ನೂ ಬಂದಿಲ್ಲವೇಕೆ ?

ಗೌಡ :—ಇನ್ನೆಣ್ಟುದಿನಗಳೊಳಗಾಗಿ ಅಷ್ಟನ್ನೂ ಅರಮನೆಯ ಭಣ್ಡಾರಕ್ಕೆ ಸಲ್ಲಿಸಿ, ಶ್ರೀಮನ್ತರಿಗೆ ಬಿನ್ನವಿಸುವೆನು.

ವಿಕ್ರಮರಾಯ :—ಒಳ್ಳೆಯದು. ಇಲ್ಲಿಯ ಕೆರೆಯೇಕೆ ನೀರು ನಿಲ್ಲದಷ್ಟು ಕೆಟ್ಟು—ಹಾಗಿದೆ ?

ಗೌಡ :—ಒಕ್ಕಲರು ಬಿಟ್ಟಿಕೆಲಸಕ್ಕೆ ಸಿಕ್ಕದೆ ತಪ್ಪಿಸಿಕೊಳ್ಳುತ್ತಿದ್ದಾರೆ ; ಶ್ರೀಮಂತರು ದಯೆಗೆಯ್ದು, ಅರಮನೆಯಿಂದ ಸಾಕಾಗುವಷ್ಟು ಹಣವನ್ನು ಕೊಡಿಸಿದರೆ,......

ವಿಕ್ರಮರಾಯ :—(ಹುಬ್ಬುಗಂಟಿಕ್ಕಿ,) ಒಡೆದು ಶಿಥಿಲವಾಗಿರುವ ಚಿಕ್ಕದೊಂದು ಕೆರೆಯನ್ನು ಪುನಃ ಕಟ್ಟಿಸಿ ನೇರ್ಪಡಿಸಿಕೊಳ್ಳದೆ, ಮುಂದಣ ಹಿಂಗಾರಿಗೆ ಬೆಳೆಯಾಗಲಿಲ್ಲವೆಂದೂ, ಅದರಿಂದ ರಾಜಾರ್ಥವನ್ನು ಕುಡಲಾರೆವೆಂದೂ ಈ ಗ್ರಾಮಸ್ಥರು ಗೊಣಗಿದರೆ, ಅದು ಪ್ರಯೋಜನಕಾರಿಯಲ್ಲ.

ಗೌಡ :—ಅಪ್ಪಣೆ ; ಆದರೆ, ಸಿದ್ಧಾಯವನ್ನು ಅರಮನೆಗೆ ತೆಗೆದುಕೊಳ್ಳುವ ಸುಗ್ಗಿಯ ಸಮಯಕ್ಕೆ—ಶ್ರೀಮಂತರು ಅರಮನೆಯ ಪೌಜಿನ ಚಿಕ್ಕದಳವೊಂದನ್ನಿಲ್ಲಿಗೆ ಕಳುಹಿಸಿಕೊಟ್ಟರೆ, ನನ್ನ ಆ ಉದ್ಯೋಗವು ಸುಲಲಿತವಾಗಿ ನೆರವೇರುವುದು.

ವಿಕ್ರಮರಾಯ :—ನಮಗದು ಅರ್ಥವಾಗುವುದಿಲ್ಲ. ಖಣ್ಡಣೆಯಾಗಿರುವಂತೆ ರಾಜಾಯದ ಹಣವನ್ನೆಲ್ಲಾ ನೀನೇ ಸಕಾಲದಲ್ಲಿ ಸಲ್ಲಿಸದಿದ್ದರೆ, ಅರಮನೆಯವರು ನಿನ್ನ ಸರ್ವಸ್ವವನ್ನೂ ತೆಗೆದುಕೊಳ್ವರು.

ಗೌಡ :—ಆಗಬಹುದು ; ಕುರಿಯು ತೊಣ್ಣುಮೇದ ದವಸವನ್ನು ಕುರುಬನಿಂದ ಹೊಡೆದು ಕಾರಿಸಿದಂತೆ !

ವಿಕ್ರಮರಾಯ :—ಮಿತಿಮೀರಿ ಗಳಿಸಿಕೊಂಡಿರುವ ಧನದ ಬಲದಿಂದ ಗೌಡಂದಿರು ಕೊಬ್ಬಿ ಸೊಕ್ಕಿರುವಿರಿ; ಶ್ರೀಮನ್ಮಹಾರಾಜರು ನಿಮ್ಮ ವಿಷಯವನ್ನು ಬೇಗನೆಯೇ ವಿಚಾರಿಸಿ, ನಿಮಗೆ ಬುದ್ಧಿಗಲಿಸುವರು.

ಗೌಡ :—ಶ್ರೀಮನ್ತರಿಗೆ ಯಾವುದೂ ಅಸದಳವಲ್ಲ.

ವಿಕ್ರಮರಾಯ :—ನಾವು ಹೇಳಿದುದು ಶ್ರೀಮನ್ಮಹಾರಾಜರೆಂದು ! ಈಗಳಾದರೂ ಕಿವಿಗೊಟ್ಟೆಯಷ್ಟೆ ?

ಗೌಡ :—ಕೇಳಿಸಿತು, ಮಹಾಸ್ವಾಮಿ !

ವಿಕ್ರಮರಾಯನ ಪರಿವಾರದವರು :—(ನಗುವರು.)

ವಿಕ್ರಮರಾಯ :—(ಅಸಮಾಧಾನದಿಂದ ಸುತ್ತ ಅಭೀಕ್ಷಿಸುವನು.)

ಸಮಸ್ತರೂ :—(ಗಂಭೀರಮುದ್ರೆಯನ್ನು ತಾಳುವರು.)

(ತುಂಗರಾಯನ ಪ್ರವೇಶ.)

ವಿಕ್ರಮರಾಯ :—ಏನದು, ತುಂಗ ?

ತುಂಗರಾಯ :—(ವಿಕ್ರಮರಾಯನಿಗೆ ವಂದಿಸಿ,) ನಾನು ಬರುತ್ತಿರುವುದು ಅಲ್ಲಿಂದ.

ವಿಕ್ರಮರಾಯ :—(ಕೈಯ್ಯಾಸುವನು.)

ಇತರರೆಲ್ಲ :—(ದೂರಕ್ಕೆ ಹೋಗಿ ನಿಲ್ಲುವರು.)

ತುಂಗರಾಯ :—ಶ್ರೀಮನ್ಮಹಾರಾಜರು ಸುರಕ್ಷಿತರಾಗಿರುವರು.

ವಿಕ್ರಮರಾಯ :—ಹುಂ.

ತುಂಗರಾಯ :—ಅವರಿಗೆ ಬಹಳ ಅಸಮಾಧಾನವಾಗಿರುವಂತಿದೆ.

ವಿಕ್ರಮರಾಯ :—ಹೇಳು.

ತುಂಗರಾಯ :—ಶ್ರೀಮನ್ತರು ಏರ್ಪಡಿಸಿಕೊಟ್ಟಿರುವ ಬೀಡಾರ ಊಳಿಗದವರು ಕಾವಲರು ಮುಂತಾದ ವಿಷಯಗಳಲ್ಲಿ.

ವಿಕ್ರಮರಾಯ :—ಹಾಗೆಂದನೇನು ?

ತುಂಗರಾಯ :—ಇಲ್ಲ ; ಆದರೆ, ಅವರ ಅಸಮಾಧಾನವು ಅತೃಪ್ತಿಯು ಅವರ ನಡೆವಳಿಯಲ್ಲಿ—ಪ್ರತಿಯೊಂದು ಅಂಗಚಲನದಲ್ಲಿಯೂ ಸ್ಪಷ್ಟವಾಗುತ್ತಿರುವುವು.

ವಿಕ್ರಮರಾಯ :—ಹುಂ.

ತುಂಗರಾಯ :—ಅವರು ತಮ್ಮ ಸ್ವಾತಂತ್ರ್ಯವನ್ನು ರಾಜ್ಯಾಧಿಪತ್ಯವನ್ನು ಸಾಧಿಸಿಕೊಳ್ಳುವುದಕ್ಕೋಸ್ಕರವಾಗಿ ಪ್ರಯತ್ನಿಸಬಹುದೆಂದು ತೋರುವುದು.

ವಿಕ್ರಮರಾಯ :—(ಬದ್ಧಭ್ರೂಕುಟಿಯಾಗಿ,) ನಾವು—ದಳವಾಯಿ ವಿಕ್ರಮರಾಯನು—ನಾವು ತನಗೆ ಇನ್ನೂ ಪಟ್ಟಾಭಿಷೇಕವನ್ನು ನೆರವೇರಿಸಿಲ್ಲವೆಂಬುದು ಅವನಿಗೆ ಜ್ಞಾಪಕವಿರುವುದಷ್ಟೆ ?

ತುಂಗರಾಯ :—ಇರಬೇಕು.

ವಿಕ್ರಮರಾಯ :—ಇನ್ನೇನದು ?

ತುಂಗರಾಯ :—ಮಹಿಶೂರಿನ ಪೌರರು—' ನಮ್ಮ ರಣಧೀರಮಹಾರಾಜರಿಗೆ ಜಯವುಂಟಾಗಲಿ! '......' ದ್ರೋಹಿವಿಕ್ರಮರಾಯನು ಹಾಳುಹೋಗಲಿ! '........' ಮೈಸೂರಿಗೆ ಗೆಲವಾಗಲಿ! ' ಎಂದು ಕೂಗುತ್ತರುಚುತ್ತ ಸಂಭ್ರಮಿಸುತ್ತಿದ್ದಾರೆ.

ವಿಕ್ರಮರಾಯ :—ಬರಿಯ ಹುಯ್ಯಲೆ ?

ತುಂಗರಾಯ :—ತೆಂಕಣ ವೈಹಾಳಿಯ ಮಾಳದಲ್ಲಿ ಪೌರರೆಲ್ಲ ಸಭೆಗೂಡಿ ವಿಶ್ವಪ್ರಯತ್ನಗಳಿಂದ ತಮ್ಮ ಮಹಾರಾಜರನ್ನು ಸೆರೆಯಿಂದ ಬೀಳ್ಕೊಳಿಸಬೇಕೆಂದೂ, ದಳವಾಯಿ ವಿಕ್ರಮರಾಯನನ್ನು ಸಜೀವವಾಗಿ ಹಿಡಿದು ಮಹೀಶೂರದೇಶದ ಸ್ವಾತಂತ್ರ್ಯಕ್ಕೆ ಬಲಿಗುಡಬೇಕೆಂದೂ ನಿರ್ಣಯಿಸಿಕೊಂಡರು.

ವಿಕ್ರಮರಾಯ :—ಮುಂದಾಳಾರವನು ?

ತುಂಗರಾಯ :—ತಿರುಮಕೂಡಲು-ನರಸೀಪುರದವನಂತೆ.

ವಿಕ್ರಮರಾಯ :—ಹೆಸರು ?

ತುಂಗರಾಯ :—ಆರಿಗೂ ತಿಳಿದಿಲ್ಲ.

ವಿಕ್ರಮರಾಯ :—ಆಗ ನಮ್ಮ ಸೈನ್ಯವದೇನಾಗಿದ್ದಿತು ?

ತುಂಗರಾಯ :—ಆ ನೆರವಿಗರ ಸಂತೆಯನ್ನು ಚೆದರಿಸಲು ಸೈನ್ಯವು ಪ್ರಯತ್ನಿಸಿದುದು ಸಾರ್ಥಕವಾಗಲಿಲ್ಲ.

ವಿಕ್ರಮರಾಯ :—ಆ ದ್ರೋಹಿಗಳನ್ನು ತರಿದಿರಿದೊಟ್ಟದೆ ಬಿಟ್ಟಿರೇಕೆ ?

ತುಂಗರಾಯ :—ಆಗಳೇ ಶ್ರೀಮಂತರ ಅಪ್ಪಣೆಯನ್ನರಿಯದುದರಿಂದ.

ವಿಕ್ರಮರಾಯ :—ನೀನೀಗ ಹೀಗೆಯೇ ಹಿಂದಿರುಗಿಹೋಗಿ, ನಾವು ಸಂಜೆಯೊಳಗಾಗಿ ಅಲ್ಲಿಗೆ ಬರುವೆವೆಂದು ಡಂಗುರಬಡಿಯಿಸಿ, ವ್ಯಕ್ತವಾಗಿ ಪ್ರಕಟಿಸು. ತ್ರಿಣಯನೇಶ್ವರದೇವಸ್ಥಾನದಲ್ಲಿ ಇಂದು

ಪ್ರದೋಷದ ಸೇವೆಯು ತೀರಿದೊಡನೆ ನಾವು ನರಸರಾಜನನ್ನು ನೋಡುವುದಾಗಲಿ.

ತುಂಗರಾಯ :—ಅಪ್ಪಣೆ. (ಹೋಗುವನು.)

## ಪ್ರವೇಶ ೯.

[ಸ್ಥಾನ ;—ಮೈಸೂರ ಅರಮನೆ, ಹೊರಗಣ ಅಂಗಳ]

(ಶ್ರೀರಣಧೀರಕಣ್ಠೀರವನರಸರಾಜಒಡೆಯ—ಸುಖಾಸನದಲ್ಲಿ ಒರಗಿ, ಕಣ್ಮುಗಿದು, ಚಿನ್ತಾಪರವಶನಾಗಿರುವನು.)

ಚೆನ್ನ, ರಂಗ :—(ಬಾಗಿಲೆಡೆಯಲ್ಲಿ ನಿಂತು ಗುಸಗುಸನೆ ಕಿವಿಗಚ್ಚಿ ಮಾತನಾಡಿಕೊಳುತ್ತಿದ್ದು, ಮೆಲ್ಲಗೆ ಪಡಿಯನ್ನು ತೆರೆಯುವರು.)

ರಂಗ :—(ಹೋಗುವನು.)

ಚೆನ್ನ :—(ಕದವನ್ನು ರಂಯ್ಯನೆ ನೂಂಕಿ, ಅಗುಳಿಯನ್ನು ಬಲವಾಗಿ ಹಾಕಿ ಬಿಟ್ಟು, ಬಳಿಕ ಸುತ್ತ ನೋಡಿ, ಹಠಾತ್ತಾಗಿ ಅತ್ಯುಚ್ಚಕಣ್ಠದಿಂದ ಹಾಡಲು ಮೊದಲ್ಗೆಯ್ವನು.)

(ಚೌಪದಿ)

ಸಕುನಗಾರರೆ, ಜೋಯಿಸರೆ, ಸುಮ್ಮಗಿಹುದು ; |
ಉಳಿಗನೇ, ಉಸಿಕನಿರು ; ಗಣ್ಟೆ, ಬಿನ್ನನಿರು ; ||
ತವಕಿಗನ ಬಲಹೆಗಲುಕಣ್ಣುಹುಬ್ಬುಗಳೆ, |
ಕುಣಿಕುಣಿದು ಹಾರದಿರಿ ; ನಿಮ್ಮೆಸಗು ಬೇಡ ||
ಆರ ಹಂಗಿಗುಮೆರಗದುಚ್ಚಕದ ಪದೆಪಿಂ |
ದೊಸಗೆ ನಮ್ಮೊಡೆಯಬಂಚದ ಗಣ್ಡಗಲಿಯ ||
ದಕ್ಕುಗೊಳ್ವುದು ನನ್ನಿ—ದೇವದುನ್ದುಭಿಯೆ, |
ಮೊಳಗದಿರು ಮೊಳಗದಿರು ; ನಿನ್ನೆಸಗು ಬೇಡ ||

ರಣಧೀರ :—(ಕಣ್ದೆರೆದು, ಅಪ್ರತಿಭನಾದ ಚೆನ್ನನನ್ನೀಕ್ಷಿಸುತಿದ್ದು,) ನಮಗೆ ಹಗಲಿರುಳೂ ಹೀಗೆ ನಿದ್ರೆಗೂ ಅವಕಾಶವನ್ನೀಯದಿರಬೇಕೆಂಬುದು ನಿಮ್ಮ ಶ್ರೀಮನ್ತರ ಕಠಿನಾಜ್ಞೆಯೇನು ?

ಚೆನ್ನ :—(ತಳವಳಗೊಂಡು,) ಅಲ್ಲವು, ಬುದ್ಧಿ ; ನಾವು ಹೀಗೆ ಮಾಡಿಕೊಳ್ಳದೇಯಿದ್ದರೆ, ನಮಗೆ ಉಳಿವಿಲ್ಲ. ಮಾಸ್ವಾಮಿ.

ರಣಧೀರ :—ಹಾಗೆಂದರೇನು ?

(ಆರೋ ಒದೆದಂತೆ ಕವಾಟವು ಅಲ್ಲಾಡುವುದು.)

ಚೆನ್ನ :—(ಮಾತಿಲ್ಲದೆ ಕದವನ್ನು ತೆರೆಯುವನು )

(ರಂಗನ ಪ್ರವೇಶ.)

ರಂಗ :—ಮಾಸ್ವಾಮಿಯವರನ್ನ ಕಾಣಬೇಕೆನ್ನುತ ಮೂವರು ಹೆಣ್ಮಕ್ಕಳು ಹೊರಗೆ ನಿಂದಿದ್ದಾರೆ, ಮಾಸ್ವಾಮಿ.

ರಣಧೀರ :—ಹೆಂಗುಸರೆ ?

ರಂಗ :—ಹೌದು, ಮಾಸ್ವಾಮಿ.

ರಣಧೀರ :—ಎಲ್ಲಿಯವರು ?

ರಂಗ :—ಅದೊಂದನ್ನೂ ಹೇಳಲೊಲ್ಲರು, ಮಾಸ್ವಾಮಿ; ಮೊಕದಮೇಗೆ ಮುಸುಕೆಳೆದು ಮುಚ್ಚಿಕೊಂಡಿದ್ದಾರೆ.

ರಣಧೀರ :—ಅವರನ್ನು ಕರೆದುಕೊಂಡುಬಾ.

ರಂಗ :—ಅಪ್ಪಣೆ, ಮಾಸ್ವಾಮಿ.

ರಂಗ } ಚೆನ್ನ } :—(ಒಬ್ಬರ ಮುಖವನ್ನೊಬ್ಬರು ನಿಟ್ಟಿಸಿ, ತಮ್ಮ ಕೊನ್ತಗಳನ್ನೆಡಗಯ್ಯಲ್ಲಿಯೂ, ಒರೆಗಳಿಂದ ಹಿರಿದೆತ್ತಿದ ಕತ್ತಿಗಳನ್ನು ಬಲಗಯ್ಯಲ್ಲಿಯೂ, ಹಿಡಿದುಕೊಳ್ಳುವರು.)

ರಂಗ :—(ಅಲ್ಲಿಯೆಲ್ಲೆಡೆಗಳಲ್ಲಿಯೂ ಕಣ್ಣೊಳಲಿಸಿ, ತೃಪ್ತಿಯ ತಲೆದೂಕದಿಂದ ಚೆನ್ನನನ್ನೆಚ್ಚರಿಸಿ, ಹೋಗುವನು.)

ರಣಧೀರ :—ಯುದ್ಧಕ್ಕೆಂಬಂತೆ ಅನುವಾಗಿ ನಿಂತಿರುವೆ ; ಇದರರ್ಥವೇನು ?

ಚೆನ್ನ :—ಬುದ್ಧಿಯವರು ಅದನ್ನ ಕೇಳಬಾರದು.

(ಅವಕುಣ್ಠಿತೆಯರಾದ ಮೂವರ—ರಂಗನ ಪ್ರವೇಶ.)

ರಣಧೀರ :—.........ಆರು ನೀವು ?

ಹೆಂಗುಸರು :—(ತಮ್ಮ ಮುಖಾವರಣಗಳನ್ನೆಳೆದು ಕಳೆಯುವರು.)

ರಣಧೀರ :—(ಕಟ್ಟಚ್ಚರಿಯಿಂದೇಳುತ್ತ,) ಚಿಕ್ಕಮ್ಮಯ್ಯ !

ಮಹಾಮಾತೃಶ್ರೀ ತಿಮ್ಮಾಜಮ್ಮಣ್ಣಿ :—ಅಹುದು, ಕಂದ, ನಿರ್ಭಾಗ್ಯೆಯಾದ ನಾನು.

ರಣಧೀರ :—(**ಆಕೆಗೆ ನಮಸ್ಕರಿಸುವನು.**)

ಮಹಾಮಾತೃಶ್ರೀ :—(**ರಣಧೀರನ ನಿರಿಗುರುಳಮೇಲೆ ಕಯ್ಯಿರಿಸಿ,**) ರಣಧೀರ, ನೀನಾದರೂ ನಿನ್ನ ದಳವಾಯಿಯ ವಿಷಚೂರ್ಣಕ್ಕೆ ಸಿಲ್ಕದೆ ಮಹೀಶೂರ ಉದ್ದಾಮಯದುವಂಶದ ಅಭಿಮಾನ ಗೌರವ ಸ್ವತಂತ್ರಸ್ಥಿತಿ ಮರ‍್ಯಾದೆ ತೇಜಸ್ವಿತೆ ಶಕ್ತಿಗಳನ್ನು ಕೊರತೆಯಿಲ್ಲದಂತೆ ರಕ್ಷಿಸಿ, ಚಿರಾಯುರಾರೋಗ್ಯೈಶ್ವರ್ಯಗಳಿಂದ ಯಶಸ್ವಿಯಾಗೆಂದು ಆಶೀರ್ವದಿಸುವೆನು.

ಣಧೀರ :—(**ನೆಗೆದೆದ್ದು ನಿಂತು, ವಿವರ್ಣನೂ ವಿಸ್ಫಾರಿತನೇತ್ರನೂ ಆಗಿ,**) ವಿಷಚೂರ್ಣವೆ !

ಮಹಾಮಾತೃಶ್ರೀ :—(**ಕರ್ಕಶವಾಗಿ ನಕ್ಕು, ಬಿರುದನಿಯಿಂದ,**) ಅಹುದು, ಕಂದ ; ನೋಡು ; ಇದೇ ಕಯ್ಯಾರೆ ನಾನೇ—ವಿಕ್ರಮರಾಯನು ಕಳಿಹಿದ ವಿಷವನ್ನು ನನ್ನ ಪುಟ್ಟಸ್ವಾಮಿಗೆ ಕುಡಿಯಿಸಿದೆನು.

ರಣಧೀರ :—ಅಯ್ಯೋ ! (**ಅವಾಙ್ಮುಖನಾಗುವನು.**)

ಚೆಂದವ್ವೆ
ರುದ್ರವ್ವೆ } :—(**ಬಿಕ್ಕಿಬಿಕ್ಕಿ ಅಳುತ್ತಿರುವರು.**)

ಮಹಾಮಾತೃಶ್ರೀ :—(**ಆಕೆಗಳತ್ತ ತಿರುಗಿ,**) ಚಿಃ ! ಇದೆಷ್ಟು ಗಲಬೆ, ಚೆಂದವ್ವೆ ?—ನೀವು ನನಗೆ ತಕ್ಕ ಅವ್ವೆಯರಾಗುವುದೆಂದಿಗೆ ?

ರಣಧೀರ :—(**ಬಾಗಿಲಪಡಿಯನ್ನಾತುರತೆಯಿಂದ ಮುಚ್ಚುತ್ತಿರುವ ಚೆನ್ನರಂಗರನ್ನು ಕಂಡು, ವಿಜಯನಾರಸಿಂಹನನ್ನು ಬಿಚ್ಚಿ ನಡುವಿನ ಪಟ್ಟಿಯ ಒರೆಯೊಳಗಿಂದ ಬರಸೆಳೆದುಕೊಂಡು, ಝಳಪಿಸುತ್ತ, ಅವರೆಡೆಗೆ ಹಾಯುತ್ತ,**) ನಿಲ್ಲಿರಿ ! ಇದರರ್ಥವೇನು ? ಸ್ತ್ರೀಜನರು ಒಳವಂದತರುವಾಯ, ಒರೆಗಳೆದ ಖಡ್ಗಗಳು—ಅವನ್ನನುಮಾಡಿಕೊಂಡು ಹೀಗೆ ಬಾಗಿಲನ್ನು ಒನ್ಧಿಸುತ್ತಿರುವಿರೇಕೆ ?

ಚೆನ್ನ, ರಂಗ :—(ಮಾರ್ನುಡಿಯಿಲ್ಲದೆ ತಾಳನ್ನೇರಿಸಿ ಬಲವಾಗಿ ಬೆಟ್ಟುತ್ತಿರುವರು.)

ರಣಧೀರ :—ಒಡನೆಯೇ ಉತ್ತರವೀಯದಿದ್ದರೆ, ಸಂಹೃತರಾಗುವಿರಿ ! (ವಿಜಯನಾರಸಿಂಹನನ್ನೆತ್ತುವನು.)

ಚೆನ್ನ, ರಂಗ :—(ತಮ್ಮ ಕತ್ತಿ ಕೊಂತ ಹರಿಗೆ ಬಿಲ್ಲು ಬತ್ತಳಿಕೆಗಳನ್ನೆಲ್ಲ ರಣಧೀರನ ಪಾದ ಪ್ರದೇಶದಲ್ಲಿರಿಸಿ, ಸಾಷ್ಟಾಂಗವಾಗಿ ಅಡ್ಡ ಬೀಳುವರು.)

ರಣಧೀರ :—(ಸನ್ದೇಹದಿಂದ,) ಇಂತಿದೇಕೆ ?

ಚೆನ್ನ, ರಂಗ :—(ಎದ್ದು, ಕಯ್ಮುಗಿದುಕೊಂಡು ವಿನಯಾನವಿತರಾಗಿ ನಿಲ್ವರು.)

ಚೆನ್ನ :—ಬುದ್ದಿಯವರು ನಮ್ಮನ್ನ ಕೋಪಮಾಡಬಾರದು. ನಾವಿಬ್ಬರೂ ಅಣ್ಣತಮ್ಮದಿರು, ಮಾಸ್ವಾಮಿ. ನನ್ನ ಹೆಸರು ಚೆನ್ನ; ಅವನ ಹೆಸರು ರಂಗ, ಬುದ್ದಿ.

ರಣಧೀರ :—ಆದರೇನು ?

ಚೆನ್ನ :—ನಮ್ಮಜ್ಜ ಬೆಟ್ಟದ ಚಾಮರಾಜೊಡೆಯರ—ಎಂದರೆ, ನಿಮ್ಮಯ್ಯನವರ—ಕಯ್ಯಾಳಿಗದ ಜೀತಗಾರನಾಗಿದ್ದನುಂಟು, ಬುದ್ದಿ, ಆನಾಟಿ; ಆನಾಟಿಯ ಮಗ ನಮ್ಮಯ್ಯ, ಜುಂಜ······ಮಾರಾಜರು ರಾಜೊಡೆಯರ ಸೆಜ್ಜೆಯಲಿ ಕಾವಲಿರುತಿದ್ದ, ಮಾಸ್ವಾಮಿ.

ಮಹಾಮಾತ್ಯಶ್ರೀ :—(ತಲೆಯೆತ್ತಿ,) ನೀವು ಜುಂಜನ ಮಕ್ಕಳೆ ?

ಚೆನ್ನ, ರಂಗ :—ಹೌದು, ಬುದ್ದಿ.

ಚೆನ್ನ :—ನಾವಿಬ್ಬರುವೆ ಚಾಮರಾಜೊಡೆಯರನ್ನ ಆಡಿಸಿ, ಸಾಕಿದವರು, ಬುದ್ದಿ.

ರಣಧೀರ :—ಅದರಿಂದೇನಾಗಬೇಕು ?

ರಂಗ :—ಮಾಸ್ವಾಮಿಯವರು ದಳವಾಯಿಗಳ್ಗೆ ಹಗೆತನದ ಒಂದೇಮಾತನ್ನ ಆಡಿದರೂ, ನಾವು ನಿಮ್ಮನ್ನ—ಮಾಸ್ವಾಮಿಯವರನ್ನ··· (ಗಡಗಡನೆ ನಡುಗುತ್ತ ಅಧೋಮುಖನಾಗುವನು.)

ರಣಧೀರ :—(ತನ್ನನ್ನೇ ನಡೆದಿಟ್ಟಿಸುತ್ತಿರುವ ಮಹಾಮಾತೃಶ್ರೀಯನ್ನು ನೋಡು ತ್ತಿದ್ದು,) ಈಗಳೇನನ್ನು ಮಾಡಬೇಕೆನ್ನುವಿರಿ ?

ಚೆನ್ನ :—ಬುದ್ದಿಯವರು ನಮ್ಮನ್ನ ಸೂಲಕ್ಕೆ ಗಿಡ್ಡಂಗಿಗೆ ಹಾಕಿಸಲಿಕ್ಕಿ ಲ್ಲವು ಎನ್ನತ ಹೇಳಿದರೆ, ನಾವು...ನಾವು—ಆ ದಳವಾಯಿಯನ್ನ ಹೊಡೆದುಹಾಕಿ ತೀರಿಸಿಬಿಡುತ್ತೇವೆ.

ರಣಧೀರ :—ಈ ಸಾಹಸದ ಮಾತುಗಳು ನಮ್ಮನ್ನು ಸಿಕ್ಕಿಸಿಕೊಳ್ಳುವುದ ಕ್ಕೋಸ್ಕರವಾಗಿ ಒಡ್ಡಿರುವ ಬಲೆಯಲ್ಲವಷ್ಟೆ ?

ಚೆನ್ನ } :—(ವಜ್ರನಿರ್ಘಾತರಂತಾಗಿ,) ಬುದ್ದಿ ! ಬುದ್ದಿ !
ರಂಗ } ಮಾಸ್ವಾಮಿ ! ಮಾಸ್ವಾಮಿ !

ಮಹಾಮಾತೃಶ್ರೀ :—ಅಲ್ಲ, ರಣಧೀರ ; ಚುಂಚನನ್ನೂ ಅವನ ಮಕ್ಕ ಗಳನ್ನೂ ನಾವು ಮೊದಲಿಂದ ಬಲ್ಲೆವು—ಅವರ ರಾಜಭಕ್ತಿವಿಶ್ವಾ ಸಗಳು ಪರಿಶುದ್ಧವಾದುವು.

ರಣಧೀರ :—ನೀವು.........ಈ ಪ್ರಯತ್ನವನ್ನು ಕಯ್ಕೊಳ್ಳದಿರಿ.

ಚೆನ್ನ :—ಈ ಊರಿನವರೆಲ್ಲಾ ಬುದ್ದಿಯವರನ್ನ ಇಲ್ಲಿಂದ ಬಿಡಿಸಿಕೊಳ್ಳ ಬೇಕು—ಎನ್ನುತ ಗಾವಳಿಮಾಡುತ್ತ ಇದ್ದಾರೆ, ಮಾಸ್ವಾಮಿ.

ಮಹಾಮಾತೃಶ್ರೀ :—ಎಂದರೆ, ಇದು ಸೆರೆಯೇನು ?

ರಣಧೀರ :—ಅಹುದು.

ಮಹಾಮಾತೃಶ್ರೀ :—(ಚೆನ್ನರಂಗರತ್ತ ತಿರುಗಿ, ಎದ್ದು,) ನೀವು ನಿಮ್ಮ ಕೆಲಸ ವನ್ನು ಕೊನೆಮುಟ್ಟ ನೆರವೇರಿಸಿದರೆ, ನಿಮಗೆ ಒಂದುಲಕ್ಷ ಒಂದು ಲಕ್ಷ ವರಹಗಳನ್ನು ಸಲ್ಲಿಸುವೆವು.

ರಂಗ :—ನಾವು ದುಡ್ಡಿಗೆ ಇಂಥ ಕೆಲಸವನ್ನ ಮಾಡಲಿಕ್ಕಿಲ್ಲಾ, ಮಾ ಸ್ವಾಮಿ ; ನಾವು ತಲೆತಲಾಂತರದಿಂದ ಮಾರಾಜರ ಅರಮನೆ ಉಪ್ಪನ್ನ ತಿಂದದಕ್ಕೆ ಮಾಡುತ್ತೇವೆ.

(ಕದವು ಅಲ್ಲಾಡತೊಡಗುವುದು.)

ಚೆನ್ನ :—(ಅತ್ತನೋಡಿ,) ಬುದ್ಧಿ ! (ಮಹಾಮಾತೃಶ್ರೀಚೆಂದವ್ವೆರುದ್ರವ್ವೆಯರನ್ನು ತೋರಿ,) ಇವರಿಲ್ಲಿಯೆಲ್ಲಿಯಾದರೂ ಅವಿತಿರಬೇಕು.

ರಣಧೀರ :—ಆರದು ?

ಚೆನ್ನ :—ತುಂಗಪ್ಪನವರು ! (ಹೆಂಗುಸರನ್ನು ನಿರ್ದೇಶಿಸುತ್ತ,) ಇವರಾ ದೊಡ್ಡ ಕನ್ನಡಿಯ ಹಿಂದೆ ಅಡಗಿಕೊಂಡಿರಬೇಕು.

ಸ್ತ್ರೀಯೆರು :—(ಆ ಕನ್ನಡಿಯ ಹಿಂದಣ್ಗೆ ಹೋಗಿ ಅದೃಶ್ಯೆಯರಾಗುವರು.)

ಚೆನ್ನ :—ನಮ್ಮ ಆ ಕಯ್ಮೆಗೆ ಬುದ್ಧಿಯವರ ಅಪ್ಪಣೆ—

(ಬಾಗಿಲು ರಭಸದಿಂದ ಅಲುಗಾಡುವುದು.)

ರಣಧೀರ :—ನಾವು ಸಂಭಾಷಿಸಿದರೆ, ಬಾಗಿಲ ಹೊರಗಿರುವ—ಆವರಿಗೆ ಕೇಳಿಸುವುದಿಲ್ಲವೇನು ?

ರಂಗ :—(ತಳ್ಳಂಕದಿಂದ,) ಇಲ್ಲವು, ಮಾಸ್ವಾಮಿ ! ನಾಮಿಲ್ಲಿ ಏಸು ಕೂಗಿಟ್ಟರೂ, ಕದದ ಅತ್ತಲಾಗೆ ಕೇಳಿಸುವುದಿಲ್ಲವು, ಮಾಸ್ವಾಮಿ ; ನಾವು ಪರೀಕ್ಸೆಮಾಡಿದ್ದೇವೆ.

ಚೆನ್ನ :—ಆದಕೆ ಬುದ್ಧಿಯವರ ಒಪ್ಪು............

ರಣಧೀರ :—(ವಿಜಯನಾರಸಿಂಹನನ್ನೊರೆಯೊಳಗೆ ನೂಕಿ, ಸುಖಾಸನಕ್ಕೆ ನಡೆದು, ಆದರೊಳೊರಗಿ,) ಬಾಗಿಲನ್ನು ತೆರೆಯಿರಿ. (ಕಣ್ಮುಚ್ಚಿಕೊಳ್ಳುವನು.)

ಚೆನ್ನ, ರಂಗ :—(ಬೇಗಬೇಗನೆ ಪಡಿದೆರೆಯುವರು.)

(ಹೊರಗಾವಲ ಯೋಧರೊಡನೆ ತುಂಗರಾಯನ ಪ್ರವೇಶ.)

ತುಂಗರಾಯ :—(ಸುತ್ತ ಕಣ್ಣಾಡಿಸಿ, ಸಂಶಯದಿಂದ,) ಇಷ್ಟುಹೊತ್ತಿನವರೆಗೆ ಬಾಗಿಲನ್ನೇಕೆ ತೆರೆಯಲಿಲ್ಲ ? ಒಳಗೇನುಮಾಡುತಿದ್ದಿರಿ ?

ಚೆನ್ನ :—ಅವರು ಹಾಂಗೆ ನಿದ್ದೆಮಾಡುತ್ತ ಗೊರಕೆಹೊಯ್ಯುತ್ತ ಇದ್ದರು ; ಈ ಕೋಣೆಯಲಿ ಏನನ್ನಾದರೂ ಮುಚ್ಚಿಮಡಗಿದ್ದಾರು— ಎನ್ನುತ ಹುಡುಕಿನೋಡಿದೆವು ; ಉದಕದ ಅಲಸಂದೆಗೂವೆ ಒಂದು ಕಾಸಿಲ್ಲ ! ಏನು ಮಾರಾಜರೋ ! ನಮ್ಮನ್ನೊಂದು ಬೋಳಗುಡ್ಡವ ಕಾವಲಿರು ಎನ್ನುತ ಕಳಿಸಲಿಕ್ಕಿಲ್ಲವಾ, ಇಲ್ಲಿಗಿಂತ ?

ಚೆನ್ನ
ರಂಗ } :—(ತಮ್ಮ ಕಯ್ದುಗಳನ್ನೆತ್ತಿಕೊಳ್ಳುವರು.)

ತುಂಗರಾಯ : —(ನಂಬುಗೆಗೊಳ್ಳದೆ,) ನೀವು ಹೊರಗೆಹೋಗಿರಿ.

ಚೆನ್ನ
ರಂಗ } :—(ಹೋಗುವರು.)

ರಣಧೀರ :—(ಕಣ್ತೆಗೆದು,) ಏನು ಗಲಭೆಯಿದು ?

ತುಂಗರಾಯ :—(ಬಾಗಿ ವಂದಿಸಿ,) ಮಹಾಸ್ವಾಮಿಯವರು ಇಂದು ಪ್ರದೋಷಕಾಲಕ್ಕೆ ತ್ರಿಣಯನೇಶ್ವರಸ್ವಾಮಿಯನ್ನು ಸಂದರ್ಶಿಸಬೇಕೆಂದು ಅಪ್ಪಣೆಯಾಯ್ತಂತೆ.

ರಣಧೀರ :—(ಎದ್ದು ಹೊರಟು,) ಬಲವನ್ತದ ಮಾಘಸ್ನಾನವಾದರೂ, ಇದರಿಂದ ಮುಕ್ತಿಯು ದೊರೆಕೊಳ್ಳುವುದಾದರೆ, ನಮಗೆ ಒಪ್ಪುಗೆ.

## ಪ್ರವೇಶ ೧೦.

[ಸ್ಥಾನ ;—ಮಹೀಶೂರಪುರ, ತ್ರಿಣಯನೇಶ್ವರದೇವಾಗಾರದಲ್ಲಿ ವಿಮಾನದ ಹಿಂದಣ ಕಯ್ಸಾಲೆ.]

(ಶ್ರೀರಣಧೀರಕಣ್ಠೀರವನರಸರಾಜಒಡೆಯ—ವಕ್ಷಸ್ಥಲದಮೇಲೆ ಕಯ್ಗಟ್ಟಿಕೊಂಡು ಶತಪಥ ತಿರುಗುತ್ತಿರುವನು.)

(ಸ್ವಲ್ಪಹೊತ್ತಿನ ಬಳಿಕ, ಸರ್ವಾಯುಧಸಜ್ಜಿತನಾದ ತುಂಗರಾಯನೊಡನೆ ವಿಕ್ರಮರಾಯನ ಪ್ರವೇಶ.)

ವಿಕ್ರಮರಾಯ :—(ರಣಧೀರನಿದಿರಿಗೆ ಹೋಗಿ ನಿಂತು, ಅವನ ಮುಡುಹಿನ ಮೇಲೆ ಕಯಿಯಿಟ್ಟು, ಸಾದರನಾಗಿ,) ಆರೋಗ್ಯವೆ, ನರಸ, ಕುಶಲವೆ ?

ರಣಧೀರ : —(ಕಯ್ಬಿಚ್ಚಿ, ನೆಟ್ಟನೆನಿಂತು,) ಹೀಗೆಯೇ ; ಶ್ರೀನೃಸಿಂಹನ ಅನುಗ್ರಹ.

ವಿಕ್ರಮರಾಯ :—ಬಾ, ಕುಳಿತುಕೊ. (ಅಲ್ಲಿ ಅನುವಾಗಿರುವ ರತ್ನಗಂಬಳಿಯ ಮೇಲೆ ಕೌಳುಡೆಯನ್ನೊರಗಿ ಕುಳಿತು, ತನ್ನ ಕೆಲದ ಬೇರೊಂದನ್ನು ರಣಧೀರನಿಗೆ ಸರಿಯಿಸುವನು.)

ರಣಧೀರ:—(ಸೂಚಿತವಾದಂತೆ ಕುಳ್ಳಿರುವನು.)

ವಿಕ್ರಮರಾಯ:—ಊರಲ್ಲಿ ಎಲ್ಲರೂ ಕ್ಷೇಮಿಗಳಷ್ಟೆ?

ರಣಧೀರ:—ನಮ್ಮ ಸೌಭಾಗ್ಯ.

ವಿಕ್ರಮರಾಯ:—ನರಸ, ಹಿಂದಣ ಮಹಾರಾಜರ ಅಕಾಲಮರಣದ ತೀವ್ರಶೋಕದಿಂದ ನೊಂದು ದಿಗ್ಭ್ರಾನ್ತರಾಗಿರುವೆವಾದರೂ, ಈಗಳೇ ನಿರ್ವಾಹವಿಲ್ಲದೆ ನಿನ್ನ ಪಟ್ಟಾಭಿಷೇಕದ ವಿಷಯವನ್ನೆತ್ತಿ ನಿರ್ಧಾರಿಸಿಕೊಳ್ಳಬೇಕಾಗಿದೆ.

ರಣಧೀರ:—(ಮೆಲ್ಲಗೆ,) ನನ್ನ ಅವಸ್ಥೆಯೂ ಹಾಗೆಯೇ ಆಗಿರುವುದು.

ವಿಕ್ರಮರಾಯ:—ಈ ರಾಜ್ಯಾಭಿಷೇಕವು ನಿನಗೆ ಸಮ್ಮತವೆ, ನರಸ?

ರಣಧೀರ:—ನನ್ನನ್ನೀ ಮಹೀಶೂರರಾಜಪಟ್ಟಕ್ಕೆ ಆಯ್ದುಕೊಂಡುದಕ್ಕೋಸ್ಕರವಾಗಿ ನಾನು ನಿಮಗೆ ಆಜೀವನವೂ ಕೃತಜ್ಞನಾಗಿರುವೆನು.

ವಿಕ್ರಮರಾಯ:—ಮಹಿಶೂರರತ್ನಸಿಂಹಾಸನವ್ಯವಸ್ಥೆಯು ಇಂದು ಅಷ್ಟು ಸುಲಭವಾದುದಲ್ಲ.

ರಣಧೀರ:—ಶ್ರೀನೃಸಿಂಹನ ಪ್ರಸಾದದಿಂದ, ನಮ್ಮ ಹೆಸರ ಹಿರಿಯರ ಸುಕೃತದಿಂದ, ಆಸ್ತಿಕರ ಆಶೀರ್ವಾದದಿಂದ, ನಮ್ಮ ಮಹೀಶೂರ ರಾಜ್ಯಕ್ಕೆ ಬಂದಡಸಬಹುದಾದ ಕಣ್ಟಕಗಳನ್ನೆಲ್ಲ ಇರಿದೊಡೆದು ಸುಟ್ಟು ಕೊಂದು, ಹಿಂದಣ ಎರೆವೆಟ್ಟಿನ ಆ ಸಮೃದ್ಧತೆಯು ಪ್ರತಾಪಪ್ರಭಾವತೆಗಳು ಒದವಿ ಮಾಸದಂತೆ ಮುದ್ರಿಸಿರಿಸಲು ಪ್ರಯತ್ನಿಸಿ—ಸಾಧಿಸುವೆನು.

ವಿಕ್ರಮರಾಯ:—ರಾಜ್ಯದ ಸುತ್ತುಮುತ್ತಣ ನರಿಗಳು ಪ್ರಬಲವಾಗತೊಡಗಿ, ಊಳ್ದು ನಮ್ಮನ್ನು ಕೆಣಕುತ್ತಿವೆ.

ರಣಧೀರ:—ಮಹೀಶೂರಮಹಾರಾಜರೇರಿರುವುದು ಸಿಂಹಾಸನವೆಂಬುದನ್ನು ಆ ಅವರಿಗೆ ಸಾಕ್ಷಾತ್ಕರಿಸಿಕುಡುವೆನು.

ವಿಕ್ರಮರಾಯ :—ಹಾಗೆಂದರೆ, ಯುದ್ಧಗಳು ಆವಶ್ಯಕವಾದುವು.

ರಣಧೀರ :—ಯುದ್ಧಗಳಿಗಾಗಲಿ, ಸ್ವತಃ ತನ್ನ ವೈಯಕ್ತಿಕ ಕ್ಷೇಮಕ್ಕೋಸ್ಕರವಾಗಿಯಾಗಲಿ, ಬರಿತು ನಡುಗುವ ಹೇಡಿಯು ಮಹೀಶೂರರಾಜಪಟ್ಟ—ಅದನ್ನು ಕನಸಿನಲ್ಲಿಯೂ ನೆನೆಯಲಾಗದು.

ವಿಕ್ರಮರಾಯ :—(ಮುಗುಳ್ನಗೆಗೊಂಡು,) ಭಾಪು! ನರಸ!—ಅಹುದು· ಮೆಯ್ವಡೆದು ಮೊಗದೋರುತ್ತಿರುವ ಯುದ್ಧಗಳನಿತಕ್ಕೂ ಬೇಕಾದಷ್ಟು ಶಸ್ತ್ರಾಸ್ತ್ರಗಳನ್ನು ತುಪಾಕಗಳನ್ನು ಫಿರಂಗಿಗಳನ್ನು ಮದ್ದುಗುಂಡುಗಳನ್ನು ಬಾಣಗಳನ್ನು ರಣವಾದ್ಯಗಳನ್ನು ಆನೆಕುದುರೆಗಳನ್ನು ಗುಡಿಗೂಡಾರಗಳನ್ನು ಆಹಾರಪದಾರ್ಥಗಳನ್ನು ಬಟ್ಟಿಹಣ ಮುಂತಾದುವನ್ನು ತರಿಸಿ, ಅನುಗೊಳಿಸಿಟ್ಟಿರುವೆವು. ಸೈನ್ಯದವರ ಸಾಧಕಚಾತುರ್ಯ ಯುದ್ಧಕೌಶಲ್ಯ ಯೋಗ್ಯತೆಗಳಿಗೆ ತಕ್ಕ ಅಧಿಕಾರಿಗಳನ್ನು ನಿಯಮಿಸಿ ನೇರ್ಪಡಿಸಿಕೊಂಡು, ಹಗೆಗಳನ್ನು ಗೆದ್ದು ಬಾಯ್ಕೇಳಿಸಿ ಅಡಗಿಸುವುದು·········ನಿನ್ನ ಕರ್ತವ್ಯ.

ರಣಧೀರ :—(ತೀಕ್ಷ್ಣದೃಷ್ಟಿಯಿಂದ ನೋಡಿ,) ಆಗಬಹುದು.

ವಿಕ್ರಮರಾಯ :—ಇನ್ನು ನಿನಗೆ ವಿನೋದಕಾಲಕ್ಷೇಪಕ್ಕೋಸ್ಕರವಾಗಿ ಪಟ್ಟಣದಲ್ಲಿ—ಅರಮನೆಗೆ ಸಮೀಪವಾಗಿಯೇ—ಮಹಾರಾಜಯೋಗ್ಯವಾದುದೊಂದು ಗರುಡಿಯ ಮನೆಯನ್ನು ಕಟ್ಟಿಸಿ, ಅಲ್ಲಿಗೆ ತಗುವ ಸಾಧನಸಾಮಗ್ರಿಯಗಳನ್ನು ಕುಂದಿಲ್ಲದಂತೆ ಸಜ್ಜುಗೊಳಿಸುತ್ತಿರುವೆವು. ಮತ್ತೆ, ಈ ಪ್ರಾನ್ತದಲ್ಲಿಯೂ ಸುತ್ತಣ ನಾಡುಗಳಲ್ಲಿಯೂ ಅರಿಕೆಗೊಂಡಿರುವ ಜಟ್ಟಿಗರನ್ನೆಲ್ಲಾ······ಎಷ್ಟೇ ವೆಚ್ಚವಾದರೂ······ನಿನಗೆ ಕರೆಯಿಸಿಕುಡುವ ಸನ್ನಾಧನಕ್ಕೂ ಒಪ್ಪಿದ್ದೇವೆ.

ರಣಧೀರ :—ಹಾಗೆ ಸಿದ್ಧವಾದ ಗರುಡಿಯಿಂದ ಮಹೀಶೂರರತ್ನಸಿಂಹಾಸನಾಧೀಶ್ವರರಿಗೂ, ಆ ಮೂಲಕವಾಗಿ ಮೈಸೂರ ದೇಶಕ್ಕೂ

ಮನೋವಾಕ್ಕರ್ಮಗಳಲ್ಲಿ ದ್ರೋಹವನ್ನೆಣಿಸಿ ನೆರವೇರಿಸಿದ ಆ— ದುರಾತ್ಮರವರನ್ನು ನಿಗ್ರಹಿಸಲು ಸಮರ್ಥರಾದ ಮಲ್ಲವೀರರು ಹೊರಟು ಕೃತಕೃತ್ಯರಾಗಲಿ!

ವಿಕ್ರಮರಾಯ :—(ನಕ್ಕು,) ತಥಾಸ್ತು. ನಿನ್ನ ವೀರವಿಹಾರಕಾಲಗಳ್ಗನುಕೂಲಿಸುವಂತೆ ಕಾರ್ಕೋಡಿಹಳ್ಳದ ಘಟ್ಟದ ಕೆಳಗೂ, ಹೆಗ್ಗಡೆ ದೇವನ ಕೋಟೆಯ ಕಾಡಿನೊಳಗೆಯೂ, ಬಿಳಿಗಿರಿರಂಗನ ಬೆಟ್ಟದ ಮೇಲೆಯೂ, ಹೀಗೆ ಮೂರು ಬೇಡರ ಪಾಳೆಯಗಳನ್ನೇರ್ಪಡಿಸಿ ಸಾಂಗವಾಗಿ ಕಟ್ಟಿಸುತ್ತಿರುವೆವು.

ರಣಧೀರ :—(ಮನ್ದಹಾಸದಿಂದ,) ನಿಮ್ಮ ಈ ದಯಾಮಯವಾದ ದೂರಾಲೋಚನಗಳ ಸಮಗ್ರತೆಯು ನನ್ನ ಮನಕ್ಕೂ ನಾಲಗೆಗೂ ಪರವಶತೆಯನ್ನುಂಟುಮಾಡುತ್ತಿರುವುದು ; ಅವುದನ್ನು ಹೇಗೆ ವ್ಯಕ್ತಗೊಳಿಸಬೇಕೆಂಬುದನ್ನು ನಿರ್ಣಯಿಸಲಾರದವನಾಗಿರುವೆನು.

ವಿಕ್ರಮರಾಯ :—ನಿನ್ನ ಇಷ್ಟಾನುಸಾರವಾಗಿ ಆಟವೋ, ಬೇಟೆಯೋ, ಗರುಡಿಯೋ, ಯುದ್ಧವೋ—ಅವುಗಳನ್ನು ಕಯ್ಗೂಡಿಸಿಕೊಳ್ಳುತಿರುವುದಕ್ಕೆ ನಮ್ಮ ಆಕ್ಷೇಪಣವೇನೂ ಇಲ್ಲ.

ರಣಧೀರ :—(ತಲೆವಾಗಿದ್ದು,) ಆಗಬಹುದು.

ವಿಕ್ರಮರಾಯ :—ನಾಳಿನ ಸಂಜೆಗೆ ನಿನ್ನನ್ನಿಲ್ಲಿ ಕಾಣಬೇಕಾಗಿದೆ, ನರಸ!

ರಣಧೀರ :—(ಎದ್ದು,) ಅವಶ್ಯವಾಗಿ ಬರುವೆನು. (ಹೊರಟುಹೋಗುವನು.)

ವಿಕ್ರಮರಾಯ :—ತುಂಗ, ಹೋಗಿ, ಅಲ್ಲಿಯ ಕಾವಲ್ಗೆ ನಮ್ಮ ಮೂಲಬಲದಿಂದಿನ್ನೊಂದು ದಳವನ್ನಾಯ್ದುಯ್ದು ಒಡ್ಡಿ ಹುರಿಮಾಡಿ, ಎಚ್ಚರಿಂದಿದ್ದು, ನಾಳೆ ಬೆಳಗಾದೊಡನೆ ಬಂದು ನಮ್ಮನ್ನು ನೋಡು.

ತುಂಗರಾಯ :—ಅಪ್ಪಣೆ. (ಹೋಗುವನು.)

ವಿಕ್ರಮರಾಯ :—(ನಕ್ಕು,) ನಮ್ಮ ತೊಡೆಯ ಮೇಲೆ ತೊದಲುತ್ತ ಬಳೆದ ಈ ಪಿಳ್ಳೆಗೆ ನಮ್ಮೊಡನೆ ವ್ಯಂಗ್ಯಜಿಜ್ಞಾಸೆ! ಶ್ಲೇಷೆಯ ವಾಕ್ಯಾ

ರ್ಥ ! ಹುಂ·········(ಹುಬ್ಬುಗಂಟಿಕ್ಕಿ,) ತಂದೆಯಂತಲ್ಲದ ಮಗನಹುದು ; ಆದರೆ, ದೈವಶಾಸನ ! ············ ಬಿತ್ತರಿಗೆಗೆ ಮುಂದಣ ಉತ್ತರಾಧಿಕಾರಿ ? ಈ ಮನೆತನದಲ್ಲಿ—ರಾಜಒಡೆಯನ ಮಲತಮ್ಮನಾ ಮುಪ್ಪಿನ ದೇವರಾಜನ ಮಕ್ಕಳು ; ಹಿರಿಯುವನಿಗಿನ್ನೂ ಹತ್ತುವರುಷಗಳ ವಯಸ್ಸು·········ನೋಡೋಣ.

## ಪ್ರವೇಶ ೧೧.

[ಸ್ಥಾನ;—ಮೈಸೂರು, ವಿಕ್ರಮರಾಯನ ಸೌಧದ ಮುಂದಣ ಆರಾಮ, ಪಕ್ಷದ್ವಾರದೆಡೆ.]

(ದೀವಟಿಗನೊಡನೆ ವಿಕ್ರಮರಾಯನ ಪ್ರವೇಶ.)

ದೀವಟಿಗ :—(ತಟ್ಟನೆ ನಿಂತು,) ಹೋ ! ಯಾರಲ್ಲಿ ?

ವಿಕ್ರಮರಾಯ :—(ನಿಂತು,) ಏನದು ?

ದೀವಟಿಗ :—ಸೌಧದಿಂದ ಯಾರೋ ಬರುತ್ತಿದ್ದಾರೆ.—ಯಾರಲ್ಲಿ ? ಹೋಯ್ !

(ಆಳಗರಾಜಯ್ಯನ ಪ್ರವೇಶ.)

ವಿಕ್ರಮರಾಯ :—ಇದೇನು, ಅಳಗರಾಜ ?

ಅಳಗರಾಜಯ್ಯ :—(ನಮಿಸಿ,) ಶ್ರೀಮನ್ತರನ್ನು ಅರಸುತ್ತಿದ್ದೆನು.

ವಿಕ್ರಮರಾಯ :—ನಟ್ಟಿರುಳು ಕಳೆದ ಈ ಅಸಮಯದ ಕಗ್ಗತ್ತಲೆಯಲ್ಲಿ ?

ಅಳಗರಾಜಯ್ಯ :—ಅಹುದು, ತುಂಗರಾಯನು ನನ್ನನ್ನಟ್ಟಿದನು.

ವಿಕ್ರಮರಾಯ :—ಹೇಳು.

ಅಳಗರಾಜಯ್ಯ :—ಶ್ರೀಮನ್ಮಹಾರಾಜರನ್ನು ದೇಗುಲದಿಂದ ಅವರ ಬೀಡಾರಕ್ಕೆ ಕರೆದುಯ್ಯುತ್ತಿದ್ದಾಗ ಜನರು ಸನ್ದಣಿಗೊಂಡು ಅವರಿಗೆ ಅಡ್ಡಬೀಳುತ್ತ, ಅವರನ್ನು ಬೇಗನೆಯೇ ಆ ಕಾರಾಗೃಹದಿಂದ ಬಿಡಿಸಿ ಅವರಿಗೆ ಪಟ್ಟಾಭಿಷೇಕವನ್ನೊಪ್ಪಿಸುವುದಾಗಿಯೂ, ಶ್ರೀಮಂತರನ್ನು ಅವರ ರಾಯತನದ ಹಾವುಗೆಯ ಮಂಗಳಕ್ಕೆ ಸೀಳ್ದಿಡುವುದಾಗಿಯೂ ಕೂಗಿ ಕಳಕಳಮಾಡಿದರು.

ವಿಕ್ರಮರಾಯ :—ಅದಕ್ಕೆ ಇವನ ಉತ್ತರವೇನು ?

ಆಳಗರಾಜಯ್ಯ :—ಏನೂ ಇಲ್ಲ.—ಸುಮ್ಮನೆ ಮುಗುಳ್ನಗೆನಕ್ಕರು.

ವಿಕ್ರಮರಾಯ :—ಆ ಮುಗುಳ್ನಗೆಯು ಸರ್ಪಚುಂಬನದಂತೆ ವಿಷ—ವಿಪತ್ಸಿದ್ಧವಾದುದೆಂಬುದು ತುಂಗನಿಗೆ ಅರ್ಥವಾಗಲಿಲ್ಲವೇನು ?

ಆಳಗರಾಜಯ್ಯ :—ಆ ನಿಮಿಷವೇ ತುಂಗರಾಯನು ಪುರರಕ್ಷಕರ ದಳವನ್ನು ಕಳಿಹಿ, ಆ ಸಮ್ಮರ್ದವನ್ನು ಒಗ್ಗೊಡೆಯಿಸಿ ಚೆದರಿಸಬೇಕೆಂದೂ, ಹಾಗೆ ಬಗ್ಗದವರನ್ನು ನಿರ್ದಾಕ್ಷಿಣ್ಯವಾಗಿ ಹೊಯ್ದೋಡಿಸಬೇಕೆಂದೂ, ಅದಕ್ಕೂ ಮೀರಿದವರನ್ನು ನಿಶ್ಶಂಕೆಯಿಂದಿರಿದು ಕೊಂದುಬಿಡಬಹುದೆಂದೂ, ಸ್ಪಷ್ಟವಾಗಿ ಸಾರಿಸಿ ಶಾಸಿಸಿದನಲ್ಲದೆ —ಆ ನರಸೀಪುರದ ತುಂಟನನ್ನು ತೋರಿ ಅಥವಾ ಹಿಡಿದುಕೊಟ್ಟವರಿಗೆ ಅಯ್ದುಸಾಸಿರ ವರಹಗಳ ಸಮ್ಮಾನವು ಲಭಿಸುವುದೆಂದೂ ಪ್ರಕಟಿಸಿದನು.

ವಿಕ್ರಮರಾಯ :—ಹುಂ.

ಆಳಗರಾಜಯ್ಯ :—ಅಷ್ಟರೊಳಗಾಗಿ ಜನರು ಅಲ್ಲಲ್ಲಿಯೇ ಅಡಗಿಕೊಂಡು ಅಗೋಚರರಾದರು; ಆ ದಳದವರು ಏನನ್ನೂ ಮಾಡಲಾರದೆ, ತಟಸ್ಥರಾಗಿ, ಅರಮನೆಯ ಮುಂದೆ ಬೀಡುಗೊಂಡಿದ್ದಾರೆ.

ವಿಕ್ರಮರಾಯ :—ಪಂಜುಗಳೇನಾದುವು ?

ಆಳಗರಾಜಯ್ಯ :—ಪಂಜುಗಳನ್ನು ತರುವುದಕ್ಕೆ ನಮ್ಮವರು ಹಳೆಯ ಉಗ್ರಾಣಕ್ಕೆ ಆಗಳೇ ಹೋದರು.

ವಿಕ್ರಮರಾಯ :—ಆ ನರಸೀಪುರದವನನ್ನು ಹಿಡಿದಿರಾ ?

ಆಳಗರಾಜಯ್ಯ :—ಇಲ್ಲ ; ಸದ್ಯಃ ಅವನೆಲ್ಲಿಯೋ ಮೆಯ್ಗರೆದಿರುವಂತಿದೆ.

ವಿಕ್ರಮರಾಯ :—ನಮ್ಮಾಳ್ಗಳು ಅರಸಹೊರಟಾಗಳೇ ನಮ್ಮ ವಿಪಕ್ಷದವರಿಗೆ ಅದೃಶ್ಯಾಂಜನವು ಸಿದ್ಧಿಸುವುದು.—ಮತ್ತದೇನು? ಹೇಳಿ, ತೊಲಗು.

ಆಳಗರಾಜಯ್ಯ :—ಮಹಾರಾಜರಿರುವ ಕೋಣೆಯ ಬಾಗಿಲಲ್ಲಿ ಕಾವಲಿರುತ್ತಿದ್ದ ಚೆನ್ನರಂಗರಿಬ್ಬರೂ ಒಳಗೆ ಸೇರಿ, ಆ ಕದವನ್ನು ಮುಚ್ಚಿ ಭದ್ರಪಡಿಸಿ, ಮಹಾರಾಜರೊಡನೆ ಏನನ್ನೋ ಮನ್ತ್ರಣಮಾಡುತ್ತಿದ್ದುದನ್ನು ತುಂಗರಾಯನು ಕಂಡುಹಿಡಿದನು. ಅವರ ವಿಷಯದಲ್ಲಿ ಅವನಿಗೆ ತೀವ್ರಸಂಶಯವುಂಟಾಗಿದೆ.

ವಿಕ್ರಮರಾಯ :—ಚೆನ್ನರಂಗರಿಬ್ಬರನ್ನೂ ಒಡನೆಯೇ ಹಿಡಿದು, ಅರಮನೆಯ ಗುಪ್ತಗೃಹದಲ್ಲಿ ಚಿತ್ರಹಿಂಸೆಗೊಳಗಾಗಿಸಿ, ಆ ಗುಟ್ಟನೊಳಗನ್ನು ಹೊರವಡಿಸಬೇಕು. ಅಲ್ಲಿ ಅವರು ತೀರಿಹೋಗಲಿ.

ಆಳಗರಾಜಯ್ಯ :—ಅಪ್ಪಣೆ.

ವಿಕ್ರಮರಾಯ :—ಚೆನ್ನರಂಗರೂ ಆ ಸರಸೀಪುರದವನಂತಾಗದಿರಲಿ! ಜೋಕೆ!

ಆಳಗರಾಜಯ್ಯ :—ಅಪ್ಪಣೆ. (ವಂದಿಸಿ, ಹೋಗುವನು.)

ವಿಕ್ರಮರಾಯ :—(ಅನತಿಕಾಲ ಸ್ತಬ್ಧನಾಗಿ ಚಿಂತಾನ್ತರ್ಗತನಾಗಿದ್ದು, ಮೊಗವೆತ್ತಿ, ದೀವಟಿಗನತ್ತ ತಲೆದೂಗಿ, ಹೊರಡುವನು.)

(ಅಲ್ಲಿ ಅವಿತಿದ್ದವರಿಬ್ಬರು ಹವ್ವನೆ ಮುಂದಕ್ಕೆ ಹಾರಿಬರುವರು.)

ಚೆನ್ನ :—(ದೀವಟಿಗನ ಪಂಜುಗಯ್ಯ ಮಣಿಕಟ್ಟಿನ ಮೇಲೆ—ಆ ಪಂಜು ಕೆಳಕ್ಕೆ ಬಿದ್ದುಹೋಗುವಂತೆ ರಭಸದಿಂದ ಹೊಡೆಯುವನು )

ದೀವಟಿಗ :—(ತನ್ನ ಕಯ್ಯನ್ನು ಕೊಡಹುತ್ತ, 'ಅಯ್ಯಪ್ಪಾ! ಅಯ್ಯೋ!' ಎಂದು ಚೀರುತ್ತಿರುವನು.)

ರಂಗ :—(ಅದೇ ನಿಮೇಷದಲ್ಲಿ ವಿಕ್ರಮರಾಯನನ್ನಾಕ್ರಮಿಸಿ ತಬ್ಬಿಹಿಡಿದು ಕೆಳಕ್ಕೆ ನೂಕಿ ಕೆಡಹಲು ಪ್ರಯತ್ನಿಸುತಿದ್ದು, ಆರದೆ, ತಾನೇ ವಿಕ್ರಮರಾಯನ ಪಟ್ಟಿನ ಕಟ್ಟೊದೆಗೆ ಗುರಿಯಾಗಿ ಸಿಲ್ಕಿ, 'ಹೋಯೋ!' ಎಂದು ಕೂಗಿಡುತ್ತ, ದಣ್ಡಾಕಾರವಾಗಿ ಬೀಳುವನು.)

ವಿಕ್ರಮರಾಯ :—(ರಂಗನ ಎದೆಯ ಮೇಗಣ್ಗೆ ನೆಗೆದೇರಿಕುಳಿತು, ತನ್ನೆರಡೂ ಕಯ್ಗಳಿಂದವನ ಕೊರಲನ್ನು ಕಿವಿಚುತ್ತ, ತಾರಕಣ್ಠದಿಂದ—'ಹೋ! ಅಳಗರಾಜ! ಅಳಗರಾಜ! ತುಂಗ! ನಂಜ! ದೇವ! ಬನ್ನಿ! ಬೇಗಬನ್ನಿ! ಕೊಲೆ

ಪಾತಕರು ! ನಮ್ಮನ್ನಾಕ್ರಮಿಸಿರುವರು! ಹೋ! ಬನ್ನಿ! ಅಳಗರಾಜ ! ದೇವ! ಅಳಗರಾಜಾ ! '—ಎಂದು ಪುನಃಪುನಃ ಕೂಗುತ್ತಿರುವನು.)

ದೀವಟಿಗ :—(ಭಯಾತಿರೇಕದಿಂದ ಮರವಟ್ಟಿದ್ದು, ಹಿಂದಿರುಗಿ ಓಡತೊಡಗುವನು.)

ಚೆನ್ನ :—(ಆ ದೀವಟಿಗನತ್ತ ಹಾರಿ, ಅವನ ಜುಟ್ಟನ್ನು ಹಿಡಿದೆಳೆದು ನಿಲ್ಲಿಸಿಕೊಂಡು, ತನ್ನ ಬಲಗಯ್ಯಲ್ಲಿ ಹೊಳೆಹೊಳೆಯುತ್ತಿರುವ ಖಡ್ಗವನ್ನು ಮೇಲಕ್ಕೆ ನೆಗಹುವನು.)

(ಪಂಜು ನಂದಿಹೋಗುವುದು............ಗಾಢಾಂಧಕಾರ..........ಒಂದು ದೇಹವು ಕೆಳಗುರುಳ್ದ ಶಬ್ದ............ದಡದಡನೆ ನಡೆದಾಡಿದ ಹಜ್ಜೆಗಳ ಸೊಪ್ಪುಳು............ಚೆನ್ನನ ಕಂಠವು ತವಕದಿಂದ, " ರಂಗ ! ಓ ರಂಗ ! ನೀನ್ ಕೆಳಗೊ ? ನೀನ್ ಮೇಗೋ ?—ನೀನ್ ಕೆಳಗೊ ಮೇಗೊ, ರಂಗಾ ?" ಎಂದು ಕೂಗಿ ಕೇಳುತ್ತಿರುವ ಮಾತು ;............ಉಸಿರಿಲ್ಲದ ಅತ್ಯಂತ ಕ್ಷೀಣಸ್ವರದಿಂದ, 'ಕೆಳಗೆ ! ಕೆಳಗೆ !' ಎಂದ ಉತ್ತರ ; ಒಡನೆಯೇ ಸೌಳಿಂದು ಖಡ್ಗವನ್ನು ಬೀಸಿದ, ತೆಂಗಿನಕಾಯಂತಹುದು ಭೂಮಿಗೆ ಬಿದ್ದುರುಳಿದ, ಸದ್ದುಗಳು............ಆ ಬಳಿಕ ಸಾನ್ದ್ರನಿಶ್ಶಬ್ದತೆ.)

## ಪ್ರವೇಶ ೧೨.

[ಸ್ಥಾನ ; —ಮಹೀಶೂರಪುರ, ಅರಮನೆ, ಹೊರಗಣ ಅಂಗಳ, ಶ್ರೀರಣಧೀರಕಂಠೀರವ ನರಸರಾಜಒಡೆಯ ಇರುವ ಓವರಿ.]

(ರಣಧೀರನು ನಿಲವುಗನ್ನಡಿಯೆಡೆಯಲ್ಲಿ ನಿಂತಿರುವನು.)

(ತುಂಗರಾಯನ ಪ್ರವೇಶ.)

ತುಂಗರಾಯ :—(ವಿನಯವಿನಮಿತನಾಗಿ,) ಆಳುವ ಮಹಾಸ್ವಾಮಿಯವರು ಆರೋಗಣೆಗೂ ಸೆಜ್ಜೆಗೂ ಬಿಜಯಮಾಡಿಸಿ,............

ರಣಧೀರ :—(ಹಿಂದಿರುಗಿ ಸುಖಾಸನದತ್ತ ನಡೆದು,) ಆಳುವ ಮಹಾಸ್ವಾಮಿಯವರು ಆರೋಗಣೆಯನ್ನೂ ಸಜ್ಜೆಯನ್ನೂ ಇಂದು ಇಲ್ಲಿಯೇ ಒಪ್ಪಿಸಿಕೊಳ್ಳುವರು ; ಆ ಊಳಿಗದವರನ್ನು ಕರೆಯಿಸು.

ತುಂಗರಾಯ :—ನಾಳೆ ಹೊತ್ತು ಮೂಡುವುದರೊಳಗಾಗಿ ಇಲ್ಲಿಗೆ ಸುಣ್ಣವನ್ನು ಬಳಿಯಿಸಿ, ಕಸದೂಳಿಲ್ಲಣಗಳಿಲ್ಲದಂತೆ ಪರಿಷ್ಕಾರಮಾಡಿಸಿ, ಪಟ್ಟಣದಿಂದ ಈವರಿಗೆ ಬಂದಿಳಿದಿರುವ ಸುಖಾಸನಗಳು, ಚಿತ್ರಪಟ

ಗಳು, ಕಾಲ್ಮಣೆಗಳು, ಬಾಗಿಲ ಗವಾಕ್ಷದ ತೆರೆಗಳು, ಚಿತ್ರಯವನಿಕೆಗಳು, ದೀಪಸ್ತಂಭಗಳು, ತೂಗುಂಜೊಡರ್ಗಳು, ರತ್ನಗಂಬಳಿಯ ಹಾಸುಗೆಗಳು, ಲಾಮಂಚದ ಬೀಸಣಿಗೆಗಳು, ಕಡವೆಯ ಕೊಂಬುಗಳ ಹುಲಿಯ ಮುಖಗಳ ಅಲಂಕಾರಗಳು ಮುಂತಾದ ಮಹಾರಾಜಯೋಗ್ಯವಾದ ಉಪಸ್ಕರಗಳನ್ನಿಲ್ಲಿಗೆ ಸಮನ್ವಯಿಸಿ, ಶೋಭಿಸುವಂತೆ ಅಣಿಮಾಡಬೇಕೆಂದು ಅಪ್ಪಣೆಯಾಗಿದೆ.

ರಣಧೀರ :—ಶ್ರೀಮನ್ತರ ಕೃಪೆ.

ತುಂಗರಾಯ :—ಮಹಾಸ್ವಾಮಿಯವರ ಅನ್ತಃಪುರದವರು—ಆರೋಗಣೆಗೋಸ್ಕರವಾಗಿ.........ಪ್ರತೀಕ್ಷಿಸುತ್ತಿದ್ದಾರೆ.

ರಣಧೀರ :—(ಸುಖಾಸನಾಸೀನನಾಗಿ,) ನಾವು ಸೂಚಿಸಿದಂತೆ ಆ ಊಳಿಗದವರನ್ನು ಕಳಿಹು.

ತುಂಗರಾಯ :—ಮಹಾಸ್ವಾಮಿ !

ರಣಧೀರ :—ನೀನು ಹೊರಡಬಹುದು.

ತುಂಗರಾಯ :—ಇಂದೀಗಳೇ ಇಲ್ಲಿಯ ಕಸವನ್ನು ತೆಗೆಯಿಸಬೇಕು !

ರಣಧೀರ :—(ಎದ್ದು ನಿಂತು, ಕೋಪಾರುಣನೇತ್ರನಾಗಿ,) ನಾವಿಲ್ಲಿರುವಾಗಳೇ ?

(ಹೊರಗೆ):—(ಯುದ್ಧಲಕ್ಷಣದ ಶಬ್ದಗಳಾಗುವುವು.)

(ಉತ್ತರನಿಮಿಷದಲ್ಲಿಯೇ ರಕ್ತಾಕ್ತವಾದ ಬಿಚ್ಚುಕತ್ತಿಗಳನ್ನಾಂತ ತನ್ನ ದಳದ ಹಲವರೊಡನೆ ನಿರೀಶನ ಪ್ರವೇಶ.)

ತುಂಗರಾಯ : —(ವಿವರ್ಣನಾಗುವನು.)

ಬಂದವರೆಲ್ಲ :—(ನೀರವವಾಗಿ ರಣಧೀರನಿಗೆ ಕತ್ತಿಯನ್ನೊಳಕೊಂಡು ಮುಗಿದ ನೀಡುಂಗಯ್ಗಳಿಂದ ವಣಿದು ವಂದಿಸುವರು.)

ನಿರೀಶ :—(ಅಸಮಾಧಾನದಿಂದ ತುಂಗರಾಯನನ್ನಭೀಕ್ಷಿಸುತ್ತಿದ್ದು, ರಣಧೀರನತ್ತ ತಿರುಗುವನು.)

ರಣಧೀರ :—ಅಹುದು, ನಿರೀಶ ; ಈ ಕೋಣೆಯ ಇಲ್ಲಣಕಸಗಳನ್ನು ನಮ್ಮ ತಲೆಯ ಮೇಲಾದರೂ ಗುಡಿಸಬೇಕೆಂಬುದು ಶ್ರೀಮಂತರ ಕಟ್ಟಾಜ್ಞೆಯದ ಆಜ್ಞೆ.

ನಿರೀಶ :—ಇರಬಹುದು, ಮಹಾಸ್ವಾಮಿ. (ತನ್ನವರಿಬ್ಬರಿಗೆ ಇಂಗಿತಮಾಡುವನು.)

ಆಯಿಬ್ಬರು :—(ಹೋಗಿ, ತುಂಗರಾಯನ ಇಕ್ಕೆಲಗಳಲ್ಲಿ ನಿಂತು, ಆವನ ಕಯ್ಗಳನ್ನು ಬಂದಿಗೊಳ್ವರು.)

ರಣಧೀರ :—(ಸಮಸ್ತರನ್ನೂ ನೋಡಿ, ನಕ್ಕು,) ನಮ್ಮನ್ನು ಮೀರಿ, ನಮ್ಮೊಡನೆ ಇಲ್ಲಿಗೆ ಬಾರೆವೆಂದು ಚಂಡಿಸಿ, ಛಲದಿಂದ ತೆರಕಣಾಂಬಿ—ಅಲ್ಲಿಯೇ ಅಡಗಿಕೊಂಡುದು ಇದಕ್ಕೋಸ್ಕರವಾಗಿ! ನಿಮ್ಮ ಲಕ್ಷ್ಯಾರ್ಥವು ಇದೇ ಎಂಬುದನ್ನಾಗಳೇ ಅರಿಯದಾದೆವು...... ದುಷ್ಟಮಿತ್ರರೆ, ನಿಮಗೆ ಇನ್ನದೆಂತಹ ಶಾಸ್ತಿಯು ತಕ್ಕುದೊ!

ಅಂಗರಕ್ಷಕರೆಲ್ಲ :—(ಮೌನವಾಗಿ ಬಾಗಿ ಪುನಃ ವಂದಿಸುವರು.)

ರಣಧೀರ :—(ನಿರೀಶನತ್ತ ತಿರುಗಿ,) ನಮ್ಮ ಸ್ಥಿತಿಗತಿಗಳ ವಿವರವೇನು ?

ನಿರೀಶ :—ತನುಮನೋಧನಸರ್ವಸ್ವಗಳನ್ನೂ ಒಪ್ಪಿಸಿ, ಮಹಾಸ್ವಾಮಿಯವರಿಗೋಸ್ಕರವಾಗಿ ಕಾದಲು ಸಿದ್ಧರಾಗಿರುವ ಈ ಮಹೀಶೂರ ಪುರಜನರ ಸೈನ್ಯ; ನಮ್ಮೆಲ್ಲರ ಕರ್ತವ್ಯವನ್ನು ಕಯ್ಕೊಂಡು ನಡೆಯಿಸಿ, ತಿಳಿದು ಸಲ್ಗೆಗೇರುತ್ತಿರುವ ವಿಜಯಲಕ್ಷ್ಮಿಯನ್ನು ಕ್ಷೇಮಲಕ್ಷ್ಮಿಯನ್ನು ರಾಜ್ಯಲಕ್ಷ್ಮಿಯನ್ನು ಮಹಾಸ್ವಾಮಿಯವರು—ಶತ್ರುಶಿಬಿರವು ದುರ್ಗವಾಗದ ಮುನ್ನ—ವರಯಿಸುವುದು.

ರಣಧೀರ :—ಪೌರರ ಬಲವೆಷ್ಟು ?

ನಿರೀಶ :—ಆರುಸಾಯಿರದ ನಾಲ್ಕುನೂರು.

ರಣಧೀರ :—ಆಯುಧಗಳು ?

ನಿರೀಶ :—ಸರ್ವಾಯುಧಸಜ್ಜಿತವಾದ ಪದಾತಸೈನ್ಯ.

ರಣಧೀರ :—ಶಿಕ್ಷಣ ?

ನಿರೀಶ :—ಒಬ್ಬನೂ ಹೇಡಿಯಲ್ಲ, ದ್ರೋಹಚಿಂತಕನಲ್ಲ.

ರಣಧೀರ :—ಕಟಕೋಪಾಧ್ಯಾಯನಾರು ?

ನಿರೀಶ :—ಮಹಾಸ್ವಾಮಿ !

ರಣಧೀರ :—(ದರಹಸಿತಮುಖನಾಗಿ,) ಆ—ನರಸೀಪುರದ ತುಂಟ! ಒಳ್ಳಿತು. ಒಂದುಸಾಸಿರ ಸೇನೆಯು ಒಳಕೋಟೆಯ ಕೊತ್ತಲಗಳಲ್ಲಿರುವ ನಾಲ್ಕು ಫಿರಂಗಿಗಳನ್ನು ಮದ್ದುಗುಣ್ಡುಗಳನ್ನೆಲ್ಲ ಸಾಧಿಸಿ, ಸಾಕಾದಷ್ಟುಮಂದಿ ಗೋಲಂದಾಜರಳವಟ್ಟರೆ, ಅವರು ಅಲ್ಲಿ ಸಿದ್ಧರಾಗಿ, ನಮ್ಮಾಜ್ಞೆಯನ್ನು ನಿರೀಕ್ಷಿಸುತ್ತಿರಲಿ. ಆ ಫಿರಂಗಿಗಳು ನಮ್ಮವರ ಸ್ವಾಧೀನವಾದೊಡನೆಯೇ ಅವುಗಳ ಬಾಯ್ಗಳನ್ನು ಹಿಂದಿರುಗಿಸಿ, ಎಂದರೆ ಊರೊಳಗಣ್ಗೆ ತಿರುಗಿಸಿರಿಸಿ, ಆ ಬಳಿಕ ಗುಂಡನ್ನಿಕ್ಕದೆ ಮದ್ದನ್ನುಮಾತ್ರ ತುಂಬಿ, ಒಂದೊಂದುಬಾರಿ ಹಾರಿಸಿ, ನಮಗೆ ತಿಳಿಪಬೇಕು. ಆ ಕೊತ್ತಲಗಳಲ್ಲಿರಬೇಕಾದ ಸೈನಿಕರು ಊರೊಳಗಣ ಶತ್ರುಗಳ ಅಂಬುಗುಂಡುಗಳ ಅಪಾಯಕ್ಕೆ ಗುರಿಯಾಗದಂತೆ—ಈಗಳಿನ ಅವಸರಕ್ಕೆ ಲಭಿಸುವ ತಕ್ಕ ಸಾಧನಗಳಿಂದ ತಮ್ಮಸುತ್ತ ಅಭೇದ್ಯವಾದ ಪ್ರಾಕಾರಗಳನ್ನು ಕಟ್ಟಿಕೊಳ್ವುದು ಅವಶ್ಯಕ.

ನಿರೀಶ :—ಅಪ್ಪಣೆ, ಮಹಾಸ್ವಾಮಿ. (ತನ್ನ ದಳದವನೊಬ್ಬನಿಗೆ ಬೆರಲೆತ್ತಿ ಸನ್ನೆ ಮಾಡುವನು.)

ನಿರ್ದಿಷ್ಟವೀರ :—(ರಣಧೀರನಿಗೆ ವನ್ದಿಸಿ, ಹೋಗುವನು.)

ರಣಧೀರ :—ಎರಡುಸಾವಿರವು ದಳವಾಯಿವಿಕ್ರಮರಾಯನ ಸೌಧವನ್ನು ಮುತ್ತಿ, ಆರೂ ಒಳವುಗದಂತೆ, ಅಲ್ಲಿಂದ ತಪ್ಪಿಸಿಕೊಳ್ಳದಂತೆ—ಅದೇನು, ನಿರೀಶ ?

ನಿರೀಶ :—ಒಂದುಸಾಸಿರದ ಆರುನೂರು ಸೈನ್ಯದೊಡನೆ ಸಕ್ಕನು ವಿಕ್ರಮರಾಯರ ವಾಸಗೃಹವನ್ನು ನಿಶ್ಶಬ್ದವಾಗಿ ಬಳಸಿಕೊಂಡು, ಮಹಾಸ್ವಾಮಿಯವರ ಆಣತಿಗೋಸ್ಕರವಾಗಿ ಪ್ರತೀಕ್ಷಿಸುತ್ತಿರುವನು.

ರಣಧೀರ :—(ತಲೆವಾಗಿದ್ದು, ಮೃದುಮಧುರಕಂಪಿತಸ್ವರದಿಂದ,) ನಿನ್ನ ದಿವ್ಯ ಮೈತ್ರಿ—ನಿರೀಶ !

ನಿರೀಶ :—(ಅವಾಙ್ಮುಖನಾಗಿರುವನು.)

ರಣಧೀರ :—(ಈಷತ್ಕಾಲದ ತರುವಾಯ, ದೃಢಕಣ್ಠದಿಂದ,) ಹುಂ.—ಆ ಒಂದುಸಾಯಿರದ ಆರುನೂರವರು ನೀನು ಹೇಳಿದ ಒಟ್ಟಿನ ಲೆಕ್ಕಕ್ಕೆ ಸೇರಿದವರೆ ?

ನಿರೀಶ :—ಅಲ್ಲ.

ರಣಧೀರ :—ಇನ್ನು........ಎರಡುಸಹಸ್ರಜನರು ವಿಕ್ರಮರಾಯನ ಬಲದವರಿಳಿದುಕೊಂಡಿರುವ ಸೇನಾಗಾರಕ್ಕೆ ಮುತ್ತಿಗೆಯಿಟ್ಟು, ಮೊತ್ತಮೊದಲು ಅವರ ಮದ್ದಿನ ಆಯುಧದ ಉಗ್ರಾಣಸಾಲೆಗಳನ್ನು ನಮ್ಮ ವಶಮಾಡಿಕೊಂಡು, ಹಾಗೆ ನಿಸ್ಸಹಾಯರಾದ ಅವರ್ಗೆ ಸುಮ್ಮನೆ ಕಾವಲಿರಬೇಕು. ತಾವಾಗಿ ಕಯ್ಮಾರದವರು —ಅವರಮೇಲೆ ಕಯ್ಮಾಡದಿರಿ. (ಗಂಭೀರನಾದದಿಂದ,) ವ್ಯರ್ಥವಾಗಿ ಒಂದೇ ಪ್ರಾಣವೂ ನಷ್ಟವಾಗಲಾಗದು ! ವಿಜಯೋತ್ಸವದ ಸಂಭ್ರಮದಿಂದ ಮತಿಗೆಟ್ಟು, ಈ ಕಡುಗಟ್ಟಳೆಯನ್ನು ಮರೆತು ಉಪೇಕ್ಷಿಸಿ ಪ್ರವರ್ತಿಸುವವರಿಗೆ ಆಕ್ಷಣವೇ ಅಲ್ಲಿಯೇ ಪ್ರಾಣಾಂತ ದಣ್ಡಣೆಯಾಗಲಿ.

ನಿರೀಶ :—ಅಪ್ಪಣೆ, ಮಹಾಸ್ವಾಮಿ. (ಮಲ್ಲಹನುಮನಿಗೆ ಕಯ್ಮಾಡಿ ಬೆಸಸುವನು.)

ಮಲ್ಲಹನುಮ :—(ರಣಧೀರನಿಗೆ ನಮಸ್ಕರಿಸಿ, ಹೋಗುವನು.)

ರಣಧೀರ :—ಅಯ್ನೂರುಜನರು ಈ ಮೈಸೂರ ಪುರದ ಗೌಡ ಕರಣಿಕ ತಳಾರ ಕಳ್ಳಬಂಟ ಮುಂತಾದವರನ್ನೂ, ಪುರರಕ್ಷಕರ ದಳವನ್ನೂ, ಕೋಟೆಯ ಬಾಗಿಲ್ಗಳ ಕಾವಲ ಸೈನಿಕರ ಒಡ್ಡುಗಳನ್ನೂ ಹಿಡಿದು ದೊಡ್ಡಗಿಡ್ಡಂಗಿಗೆ ಕೂಡಿ, ಅವರ ಸ್ಥಾನಗಳಲ್ಲಿ ತಕ್ಕವರು ಆಯಾವೂಳಿಗಗಳನ್ನು ಬಲ್ಲಂತೆ ನೆರವೇರಿಸುತ್ತಿರಲಿ.

ನಿರೀಶ :—ಅಪ್ಪಣೆ, ಮಹಾಸ್ವಾಮಿ. (ತನ್ನ ದಳದ ಮತ್ತೊಬ್ಬನಿಗೆ ಸಂಜ್ಞೆ ಮಾಡುವನು)

ಸಿದ್ಧಿಷ್ಟವೀರ :—(ರಣಧೀರನಿಗೆ ನಮಿಸಿ, ಹೋಗುವನು.)

ರಣಧೀರ :—ಅರಮನೆಯನ್ನು ಸುತ್ತಿಕೊಂಡಿರುವ ಶತ್ರುಸೇನೆಯೆಷ್ಟಿರ ಬಹುದು ?

ನಿರೀಶ :—ಮುಂದಣ ಪ್ರಾಂಗಣದಲ್ಲಿ ಪಾಳೆಯಗೊಂಡಿದ್ದ ಚಿಕ್ಕ ದಳ ವೊಂದು ನಮ್ಮನ್ನಿದಿರಿಸಿದುದು ; ಒಬ್ಬನೂ ಉಳಿಯಲಿಲ್ಲ.

ರಣಧೀರ :—ಅಹುದು, ನಿರೀಶ; ಸಮಯವಂತಹುದು.—ಅರಮನೆಯ ಕಾವಲ್ಗೆ ಅಯ್ನೂರ್ವರು ಸಾಕು ; ನೆಲವಾಳಿಗೆಯ ಗುಟ್ಟಿನೋವರಿ ಗಳಿಂದ ಮೇಗಣ ಕಳಶದವರೆಗೆ ಅರಸಿನೋಡಿ, ಅಲ್ಲಲ್ಲಿ ಮರೆಗರೆದು ಹೊಂಚುತ್ತಿರುವ ಪ್ರತಿಪಕ್ಷದ ಬೇಹುಕಾರರನ್ನಾರಯ್ದು ಗಿಡ್ಡಂಗಿ ಯೊಳಗೆ ನೂಕಿರಬೇಕು.

ನಿರೀಶ :—ಅಪ್ಪಣೆ, ಮಹಾಸ್ವಾಮಿ. (ತನ್ನ ದಳದ ಇತರನೊಬ್ಬನಿಗೆ ನಿರೂಪಿ ಸುವನು.)

ನಿರ್ದಿಷ್ಟವೀರ —(ರಣಧೀರನಿಗೆ ವಂದಿಸಿ, ಹೋಗುವನು.)

ರಣಧೀರ :—ಇನ್ನುಳಿದಿರುವುದರಲ್ಲಿ ಕಯ್ಕೋವಿಬಿಲ್ಲುಗಳ ಪ್ರಯೋಗಗಳಲ್ಲಿ ಬಲ್ಲ ಕುಶಲರಾದ ಒಂದು ಸಾಹಸ್ರಜನರನ್ನುಳ್ಳ ಅತ್ಯುತ್ತಮವಾದ ಭಾಗವನ್ನು ಸಾಕಾದಷ್ಟು ಮದ್ದುಗುಂಡುಅಂಬುಗಳೊಡನೆ ಊರ ಹೊರಗೆ ಬೀಡಿಕೆಗೊಂಡು, ಎಚ್ಚರದಿಂದ ಸನ್ನದ್ಧವಾಗಿರ ಬೇಕೆಂದು ಕಳಿಹು, ನಿರೀಶ.—ಈಗ ನಾವು ಮಿಕ್ಕಿರುವ ಸೇನೆ ಯನ್ನೊಡಗೊಂಡು ಸಕ್ಕನ ಸಹಾಯಕ್ಕೆ ಹೋಗೋಣ.

(ರಕ್ತಸಿಕ್ತಗಾತ್ರರಾದ ಚೆನ್ನರಂಗರ ಸಕ್ಕನ ಪ್ರವೇಶ.)

ಸಕ್ಕ :—(ರಣಧೀರನಿಗೆ ಪ್ರಣಾಮಮಾಡಿ,) ಈಯಿಬ್ಬರ ಕಯ್ಮೆಯು ಎದೆ ಯನ್ನು ನಡುಗಿಸುವಂತಹದು.

ನಿರೀಶ :—(ಚೆನ್ನನತ್ತ ತಿರುಗಿ,) ಏನದು ?

ಚೆನ್ನ :—(ರಕ್ತದಿಂದ ತೋದ ಬಟ್ಟೆಯಲ್ಲಿ ಸುತ್ತಲ್ಪಟ್ಟ ಸೆಂಡಿನಾಕಾರದ ವಸ್ತು ವನ್ನು ತನ್ನ ಕವುಂಕುಳಿಂದ ತೆಗೆದು, ಮುಂದೆಯ್ದಿ, ಆದನ್ನು ರಣಧೀರನ ಕಾಲೆಡೆಯಲ್ಲಿಡುವನು.)

ಚೆನ್ನ
ರಂಗ } :—(ಸಾಷ್ಟಾಂಗವಾಗಿ ಅಡ್ಡಬೀಳುವರು.)

ನಿರೀಶ :—(ತೀಕ್ಷ್ಣದೃಷ್ಟಿಯಿಂದ ನೋಡಿ,) ಮಾತನಾಡು, ಅಂತದೇನು ?

ಸಕ್ಕ :—ದಳವಾಯಿವಿಕ್ರಮರಾಯರ ತಲೆ !

ರಣಧೀರ :—(ಹಿಮ್ಮೆಟ್ಟಿನಿಂತು, ಅದನ್ನವಲೋಕಿಸುತ್ತಿರುವನು.)

ತುಂಗರಾಯ :—(ಬರಸಿಡಿಲೆರಗಿದವನಂತಾಗಿ, ಸ್ತಂಭಿತನಾಗಿದ್ದು, ಮೆಯ್ಗೊಡಹಿ, ತನ್ನ ಕಾವಲನೊಬ್ಬನನ್ನೊರಗೊಂಡುನಿಂತು, ನಡುಗುತ್ತಿರುವನು.)

ರಣಧೀರ :—(ಕಡೆಗೆ ಮೊಗವೆತ್ತಿ, ಚೆನ್ನನನ್ನುದ್ದೇಶಿಸಿ,) ಎಲಾ ಪಾಪಿ !—ಇಂತಹ ಅಕಾರ್ಯವನ್ನೇಕೆಮಾಡಿದೆ ?

ಚೆನ್ನ :—(ನಕ್ಕು,) ಕಡೆಗೂ ಬುದ್ದಿಯವರು ಒಪ್ಪಲೇ ಇಲ್ಲ, ಹೌದು, ಮಾಸ್ವಾಮಿ!......ನಾನ್ ಪಾಪಿ, ಬುದ್ದಿ; ಆದರೆ, (ಅಭಿನ್ನಮಸ್ತಕದತ್ತ ತೋಳ್ನೀಡಿ,) ಆ ಅಣ್ಣಾಸಿಗಿಂತ ಆ ಬೂತನಿಗಿಂತ ನಾನಾ, ಮಾಸ್ವಾಮಿ ? ಅವನನ್ನ ಈ ಪಟ್ಟಿಗೆ ಸಿಕ್ಕಿಸಿಕೊಳ್ಳದೆ ಬಿಟ್ಟಿದ್ದರೆ, ನಮ್ಮಿಬ್ಬರನ್ನುವೆ ಅರಮನೆಕೆಳಗೆ ನೆಲಮಾಳಿಗೆಯ ಒಳಗೆ ಕಯ್ಕಾಲ್ತರಿದು ಬೆಂಕಿಯಲಿ ಬೇಯಿಸಿ ಹೊಯ್ದುಕೊಯ್ದು ಚಿವುಟಿ ಚುಚ್ಚಿ ಸೀಳಿ ಹಿಂಸೆಮಾಡಬೇಕು ಎನ್ನುತ ಕಟ್ಟುಮಾಡುತ ಇದ್ದನವ, ಬುದ್ದಿ ! ಮಾಸ್ವಾಮಿಯವರು ನಮ್ಮಿಬ್ಬರನ್ನುವೆ—ನನ್ನನ್ನ ರಂಗನನ್ನ—ಗಿಡ್ಡಂಗಿಗೆ ಹಾಕಿಸಿ, ಸೂಲಕ್ಕೆತ್ತಿಸಿ, ಇನ್ನೇನನ್ನ ಬೇಕಾದರೂ ಮಾಡಿಸಿ, ಬುದ್ದಿ; ನಾಮಿಬ್ಬರುವೆ ಹೋದರೂ, ನಮ್ಮ ದೊರೆಗಳ ಕುಳದವರು ಇನ್ನು ಸೊಕವಾಗಿ ಬೆದರಿಕೆಯಿಲ್ಲದೆ ಬದುಕಿಕೊಳ್ಳುತ್ತಾರೆ.

(ಹೊರಗೆ) :—(ಪ್ರಚಣ್ಡಕೋಲಾಹಲವೇಳುವುದು.)

ರಣಧೀರ :—(ನಿರೀಶನ ಮುಖವನ್ನು ನೋಡುವನು.)

ನಿರೀಶ :—(ಪಂದಲೆಯತ್ತ ನಿರ್ದೇಶಿಸಿ,) ಈ ವೃತ್ತಾನ್ತದರಿವು ಸಿಕ್ಕಿದ ಪ್ರಜಾಲೋಕವು ಸನ್ತೋಷಿಸುತ್ತಿರುವುದು, ಮಹಾಸ್ವಾಮಿ. (ತನ್ನ ದಳದ ಬೇರೊಬ್ಬನಿಗೆ ಸಂಕೇತದಿಂದ ಆಜ್ಞಾಪಿಸುವನು.)

ನಿರ್ದಿಷ್ಟವೀರ :—(ರಣಧೀರನಿಗೆ ವೊಳ್ಗಿ, ಹೋಗುವನು.)

(ಹೊರಗೆ):—(ಸ್ವಲ್ಪಹೊತ್ತಿನೊಳಗಾಗಿ ನೀರವವಾಗುವುದು.)

ರಣಧೀರ :—ಹೀಗೆ ಸುಪ್ರಜಾವಳಿಯ ಗೌರವಕ್ಕೆ ಭಕ್ತಿಗೆ ವಿಶ್ವಾಸಕ್ಕೆ ಸರಲಸ್ನೇಹಕ್ಕೆ ಸನ್ತೋಷಕ್ಕೆ—ಮಹಾಸಮ್ಮತಕ್ಕೆ ಪಾತ್ರವಾಗಿರುವ ಈ ಮಹೀಶೂರಯಾದವಪ್ರಭುವಂಶದ ಪರಮಸುಕೃತದ ಸಂಭಾವನವಿದಹುದು.

ಸಿರೀಶ :—ಅದು ಮಹಾಸ್ವಾಮಿಯವರ ಉತ್ಸಾಹವರ್ಧನದಿಂದ ಧನ್ಯವಾಗುವುದು, ಮಹಾಸ್ವಾಮಿ.

ರಣಧೀರ :—(ತಲೆವಾಗಿದ್ದು,) ಈ—ಇದು ಹೇಗಾಯ್ತು ?

ಚೆನ್ನ :—ದಳವಾಯಿಗಳು ಪಂಜು ನಂದಿಹೋಗುತ್ತಲೇ, ರಂಗನನ್ನ ಕೆಳಕ್ಕೆ ಕೆಡಹಿಕೊಂಡು, ಅವನೆದೆಮೇಗೆ ಮಂಡಿಯೂರಿ ಕುಳ್ಳಿರುತ್ತ, ಅವನ ಕತ್ತನ್ನ ಎರಡೂ ಕಯ್ಯಿಂದ ಹೀಗೆ ಕಿವುಚುತ್ತ—'ಓ ದಾಸ! ಓ ತುಂಗ! ಓ ಸಿಂಗ!' ಎನ್ನುತ ಒದರುತ್ತಿದ್ದರು, ಬುದ್ಧಿ; ಆಗ ನಾನ್—

ಎಲ್ಲರೂ :—(ವಿಸ್ಮಯಕೌತುಕಗಳಿಂದ ನಿಲವುಗನ್ನಡಿಯತ್ತ ನೋಡುತಿರುವರು.)

(ಮಹಾಮಾತೃಶ್ರೀ ತಿಮ್ಮಾಜಮ್ಮಣ್ಣಿಯು ಚೆಂದವ್ವೆರುದ್ರವ್ವೆಯರ ಪ್ರವೇಶ.)

ಅಸಿಬರೂ :—(ನೀರವರಾಗಿ ಬಾಗಿ ಮುಗಿದ ನೀಡುಂಗಯ್ಗಳಿಂದ ವಂದಿಸುವರು.)

ತುಂಗರಾಯ :—(ನಿಮಿರಿ ನಿಲ್ಲುವನು.)

ಮಹಾಮಾತೃಶ್ರೀ :—(ಚೆನ್ನನತ್ತ ತಿರುಗಿ, ಭಯಂಕರಕಂಠದಿಂದ,) ಅದು ನಿಜವೆ? ಆ ದ್ರೋಹಿರಾಕ್ಷಸನು ಸತ್ತನೆ? ಅದು ಅವನ ತಲೆಯೆ ?

(ದಡದಡನೆ ಮುಂಬರಿದು, ಆ ರುಂಡದತ್ತ ಕಯ್ನೀಡಿ ಬಗ್ಗುವಳು.)

ರಣಧೀರ :—(ಚಿಕ್ಕನೆ ಹಾರಿ, ಅವಳ ಕಯ್ಯನ್ನು ಹಿಡಿದು ತಡೆದೆಬ್ಬಿಸಿ, ಮೆಲ್ಲಗೆ ಹಿಮ್ಮೆಟ್ಟಿಸಿ,) ಚಿಕ್ಕಮ್ಮಯ್ಯ, ನಿಮ್ಮ ಪವಿತ್ರಹಸ್ತವು ಆ ಮಹಾಪಾತಕನವನ ತಲೆಯನ್ನೇಕೆ ಮುಟ್ಟಬೇಕು ?

ಮಹಾಮಾತೃಶ್ರೀ :—ಸತ್ತವನು ಅವನೇ ಅಲ್ಲದಿದ್ದರೆ ?

ರಣಧೀರ :—ಬನ್ನಿ, ಚಿಕ್ಕಮ್ಮಯ್ಯ ;—ಈ ಸುಖಾಸನದಲ್ಲಿ........
ಕುಳ್ಳಿರಿ. ಆವುದನ್ನೂ ಈಗಳೇ ಶಂಕೆಯುಳಿವಂತೆ ನೋಡೋಣ.

ಚೆನ್ನ :—(ಮುನ್ನಡೆದು, ಆ ತಲೆಯನ್ನೆತ್ತಿಕೊಂಡು, ಆದರ ಮೇಲ್ಮುಸುಕನ್ನು ಸುಲಿದು ಬಿಸುಟು, ದಳವಾಯಿವಿಕ್ರಮರಾಯನ ರುಣ್ಡದ ವಿಕಾರವದನವನ್ನೆತ್ತಿ ಎಲ್ಲರಿಗೂ—ಸುತ್ತ ತೋರುವನು.)

ತುಂಗರಾಯ :—(ರೋಷೋನ್ಮತ್ತನಾಗಿ ಆವುಡುಗಚ್ಚುತ್ತ ತನ್ನ ಕಾವಲರ ಕಯ್ಗಳಿಂದ ಝಾಡಿಸಿ ಕೊಡಹಿ ಬಿಡಿಸಿಕೊಂಡು, ಚೆನ್ನನತ್ತ ನೆಗೆದು ನುಗ್ಗುವನು.)

ನಿರೀಶ :—(ಹಾರಿ, ತುಂಗರಾಯನಿಗಡ್ಡವಂದು, ಆವನನ್ನು ತಬ್ಬಿಹಿಡಿದು ನಿಲ್ಲಿಸಿ, ಆ ಕಾವಲ ಮಲ್ಲರ ವಶಮಾಡಿ, ಹೊರಗಣ್ಗುಯ್ವಂತೆ ಕಯ್ಸನ್ನೆ ಸುವನು.)

ಕಾವಲ ಮಲ್ಲರು :—(ತುಂಗರಾಯನನ್ನು ಹೊರಕ್ಕೆಳೆದುಕೊಂಡುಹೋಗುವರು.)

ಚೆನ್ನ :—ಬುದ್ಧಿ, ನಮ್ಮಿಬ್ಬರನ್ನ—

ನಿರೀಶ :—ನಿಮ್ಮಿಬ್ಬರ ವಿಷಯದಲ್ಲಿ ಮಹಾಸ್ವಾಮಿಯವರಿಗೆ ಬಹಳ ಅಸಮಾಧಾನವುಂಟಾಗಿದೆ. ಈ ಕೊಲೆಗೆ ತಕ್ಕ ದಂಡನವೇನೆಂಬುದು ನಿರ್ಣೀತವಾಗುವವರೆಗೆ—ನೀವು ಹೋಗಿ, ಕೈಲಾಸವಾಸಿಗಳಾದ ದಳವಾಯಿವಿಕ್ರಮರಾಯರ ರುಂಡಮುಂಡಗಳನ್ನು ಒಜ್ಜೈರಿಸಿ, ಈವೊಡನೆಯೇ ಹೊರಟು, ಕ್ರಮಪ್ರಕಾರವಾಗಿ ಶವಸಂಸ್ಕಾರ ಮಾಡಿ ಬರಬೇಕು......ಸಕ್ಕ, ನೀನಿವರಾ ಕಾರ್ಯಕ್ಕೆ ಆವಶ್ಯಕವಾದ ಸಾಧನಸೌಕರ್ಯಗಳನ್ನೊದವಿಸಿಕುಡುವುದಲ್ಲದೆ, ನಿನ್ನ ಹಲವುಮಂದಿ ಸೈನಿಕರೊಡನೆ ಇವರ ಮೇಲೆ ಕಾವಲಿದ್ದು, ಗತಶ್ರೀಮನ್ತರ ಶವಕ್ಕೆ ಆವವಿಧವಾದ ಅಪಮಾನವೂ ಉಂಟಾಗದಂತೆ ನೋಡಿಕೊಳ್ಳುತ್ತಿರಬೇಕು.

ಸಕ್ಕ :—ಅಪ್ಪಣೆ.

ಚೆನ್ನ :—(ತಾನು ಬಿಸಾಡಿದ್ದ ಆ ರಕ್ತಾಕ್ತವಾದ ಬಟ್ಟೆಯನ್ನೆತ್ತಿಕೊಂಡು, ಅದರೊಳಗೆ ವಿಕ್ರಮರಾಯನ ಶಿರವನ್ನು ಸುತ್ತಿಕೊಳ್ಳುತ್ತ, ರಂಗನೊಡನೆ ಹೋಗುವನು.)

ಮಹಾಮಾತೃಶ್ರೀ :—(ಸ್ತಂಭಿತೆಯಾಗಿದ್ದು, ಮೆಲ್ಲಗೆ ದೀರ್ಘನಿಶ್ವಾಸವನ್ನು ಬಿಡುವಳು.)

ರಣಧೀರ :—............ಇದು ವೀರಮರಣವಲ್ಲ, ನಿರೀಶ.

ನಿರೀಶ :—ಮಹಾಸ್ವಾಮಿ, ಅದು ಪತಂಗದ ದುರದೃಷ್ಟ.

ಮಹಾಮಾತೃಶ್ರೀ :—(ಎಚ್ಚತ್ತು,) ವೀರಮರಣ !—ನನ್ನ ಕಂದನಿಗೆ, ಈ ದೆವ್ವನು ಸಾಧಿಸಿದ ವಿಷಚೂರ್ಣಪ್ರಯೋಗಕ್ಕೆ ಬಲಿಯಾದ ನನ್ನ ಪುಟ್ಟಸ್ವಾಮಿಗೆ ವೀರಮರಣವುಂಟಾಯ್ತೆ? ಅಯ್ಯೋ ! ಅಯ್ಯೋ ! (ಗಳಗಳನೆ ಅಳುವಳು)

ರಣಧೀರ :—(ಮೆಲ್ಲನೆ,) ಚಿಕ್ಕಮ್ಮಯ್ಯ !

ಮಹಾಮಾತೃಶ್ರೀ :—ಅಯ್ಯೋ ! (ಮೂರ್ಛಿತೆಯಾಗುವಳು.)

ಚೆಂದವ್ವೆ, ರುದ್ರವ್ವೆ :—(ಬೇಗನೆ ಹೋಗಿ, ಮಹಾಮಾತೃಶ್ರೀಗೆ ಶೈತ್ಯೋಪಚಾರಮಾಡಲಾರಂಭಿಸುವರು.)

ರಣಧೀರ :—(ಖಿನ್ನನಾಗಿ, ಅವಾಙ್ಮುಖನಾಗಿದ್ದು,) ನಿರೀಶ, ನಮ್ಮ ಅನ್ತಃಪುರದವರು ಮಹಾಮಾತೃಶ್ರೀಯವರ ಪಾದಸೇವೆಗೆ ಈಗಳೇ ಇಲ್ಲಿಗೆ ಬರಬೇಕು.

ನಿರೀಶ :—ಆಹುದು, ಮಹಾಸ್ವಾಮಿ. ನಾವು ಮಲ್ಲಹನುಮನ ಬೆಂಬಲಕ್ಕೆ ಹೊರಡಬೇಕಾದ ಸಮಯವಾಯ್ತು.

ರಣಧೀರ :—(ವಿಜಯನಾರಸಿಂಹನನ್ನು ಬಿಚ್ಚಿ ಕಟಿಬನ್ಧದೊರೆಯಿಂದೆಳೆದುಕೊಳ್ಳುತ್ತ ನಿಷ್ಕ್ರಮಿಸುವನು.)

ಗಂಡುಸರೆಲ್ಲ :—(ರಣಧೀರನ ಹಿಂದೆ ನಡೆಯುವರು.)

ಮಹಾಮಾತೃಶ್ರೀ :—(ಕಿರಿದುಹೊತ್ತಿನಬಳಿಕ ತೆಪ್ಪತ್ತು, ಸುತ್ತ ನಿಟ್ಟಿಸುತಿದ್ದು, ಕ್ಷೀಣಸ್ವರದಿಂದ,) ರಣಧೀರನೆಲ್ಲಿ, ಚೆಂದವ್ವೆ ?

ಚೆಂದವ್ವೆ :—ಸೈನ್ಯದೊಡನೆ ಹೋಗಿದ್ದಾರೆ.

ಮಹಾಮಾತೃಶ್ರೀ :—(ನಿಟ್ಟುಸಿರ್ಗರೆದು,)......ನಾಳೆ ಬೆಳಗಾಗುತ್ತಲೇ ನಾನು ಶ್ರೀಕಾಶಿಗೆ ಹೊರಡುವೆನು.—ನೀವೂ ಬರುವಿರಷ್ಟೆ ?

ರುದ್ರವ್ವೆ :—ಬುದ್ಧಿಯವರು ಎಲ್ಲಿಗೆ ಹೋದರೂ, ಅಲ್ಲಿಗೆ ನಾವು ಬರುವೆವು.

ಚೆಂದವ್ವೆ :—ಆದರೆ, ಹೊಸಮಹಾರಾಜರು—

ಮಹಾಮಾತೃಶ್ರೀ:—(ಕಣ್ಣಳನ್ನೊರಸಿಕೊಂಡು,) ಅಹುದು, ಚೆಂದವ್ವೆ; ದತ್ತ ಸ್ವೀಕಾರವೇನೂ ಆಗಬೇಕಾಗಿಲ್ಲ. ಆವಶ್ಯಕವಾದರೂ, ಆ ಶಾಸ್ತ್ರವು ನಾಳಿನ ದಿನವೇ ನಡೆದುತೀರಬೇಕು. ಆ ಬಳಿಕ ಶುಭಲಗ್ನವನ್ನು ನೋಡಿ, ಅವರು ಪಟ್ಟಾಭಿಷೇಕಮಾಡಿಕೊಳ್ಳಲಿ.

ಚೆಂದವ್ವೆ :—ಹಾಗಾಗುವುದೆ ?—ಅವರು ಒಪ್ಪುವರೆ ?

ಮಹಾಮಾತೃಶ್ರೀ :—(ಮೆಲ್ಲಗೆ,) ಇಲ್ಲ,........ಅಹುದು. ನಾಳೆ ಶುದ್ಧ—ಬಿದಿಗೆ ; ಮಹಾದೇವನ ದಯೆಯಿಂದ ದಿವಸವು ಎರಡ ಕ್ಕೂ ಪ್ರಶಸ್ತವಾಗಿದ್ದರೆ !

(ಹೊರಗೆ) :—(ನಾಲ್ಕು ಫಿರಂಗಿಗಳು ಮೊಳಗುವುವು.)








# ಹಳೆಯ ನೆನಹು.

ಹರಿವುದೆನ್ನ ಮನವು ಹಿಂದೆ ತಳೆದ ದಿನದ ಹಾದಿ ಹಿಡಿದು
ಪರಿಮಳಕ್ಕೆ ಹಾರುತಿರುವ ತುಂಬಿಯಂತೆ ಸುಳಿದು ಸುಳಿದು ||
ಬಳಲುತಿಹುದು ಬಾರದಿರುವ ಸಮಯವನ್ನು ಕಂಡು ಕಂಡು
ಗಳಿಯಿಪಶ್ರುಧಾರೆಯೆನ್ನ ಕದಪನಿಂದು ತೊಳೆಯುತಿಹುದು ||

ಇಂದು ಹರಯವೇರುತಿರಲು ಸಂತಸದಲಿ ನಲಿವ ಮಕ್ಕ
ಳೊಂದು ಮುಗುದತನವ ನೋಡಿ ಬಾಲ್ಯವೇಕೆ ಹೋಯಿತೆಂದು ||
ನೊಂದು ಬೇನೆಗೊಳ್ಳುವೆನ್ನ ಮನದ ದನಿಯ ಸಂಗಡಕ್ಕೆ
ಬಂದು ಹಳೆಯ ನೆನಹು ತನ್ನ ಹಾಡುಗಳನು ಹಾಡುತಿಹುದು ||

ಎಮ್ಮ ಮನೆಯ ಮುಂದೆ ಕಾಂಬ ಮಾವಿನಡಿಯ ನೆಳಲ ನೋಡೆ
ಜುಮ್ಮದಟ್ಟುತಿಹುದು ದೇಹವಲ್ಲಿ ನಲಿದ ಮಕ್ಕಳೀಗ ||
ಎಲ್ಲಿರುವರೊ ತಿಳಿಯೆನಾವ ಮರದ ನೆಳಲನಾಶ್ರಯಿಪರೊ
ಬಲ್ಲನಾರು ? ಕಾಣಲಾರೆನಂದಿನೆನ್ನ ಸಂಗಡಿಗರ ||

ಅಂದಿನೊಂದು ಶೋಭೆಯಿಲ್ಲವಂದಿನೊಂದು ಚಂದವಿಲ್ಲ
ಅಂದಿನೊಂದು ಹರ್ಷವಿಲ್ಲವೆಮ್ಮ ಮಾವಿನಡಿಯೊಳೀಗ ||
ರೆಂಬೆಯೊಂದು ನೆಲಕೆ ಬಾಗಿ ಮೆಲ್ಲೆಲರ್ಗೆ ತೂಗಿ ತೂಗಿ
ಕಾಂಬುದಕಟ ಶೋಕದಿಂದ ಕೊರಗಿ ಕಂದಿದಂತೆ ||

ಎಳೆಯನೊಬ್ಬ ತಮ್ಮನಿದ್ದನವನೊಳೆನಗೆ ಪ್ರೇಮವಧಿಕ
ವೊಳೆಯೆ ಹಲ್ಲು ಸುರಿಯೆ ಜೊಲ್ಲು ಮುದ್ದುಮಾತಿಸಿಂದಲೆನ್ನ ||
ಕರೆದು ಕರೆದು ಚೆನ್ನ ಬಿಡದೆ ಮಾವಿನಡಿಯ ನೆಳಲಿಗೆಂದು
ಬರುತ ಬರುತ ಬೀಳುತೇಳುತಿದ್ದನವನ ಮರೆವೆನೆಂತು ?

ಒಂದುದಿನದೊಳೆಂದಿನಂತೆ ಆಟವಾಡುತಿರಲು ನಾನು
"ಕಂದ! ಎಮ್ಮನಿಂತು ನೀನು ಬಿಟ್ಟು ಹೋಗಲಹುದೆ?" ಎಂದು ||
ತಂದೆ ಕೂಗಲದನು ಕೇಳಿ ಬೆದರಿ ಭಯದೊಳೋಡುತಿರಲು
ಅಂದು ಕಂಡೆನೆನ್ನ ತಮ್ಮ ಹಾಸಿಗೆಯಲಿ ಮಲಗಿದುದನು ||

ಒರಗಿದಾತನೇಳಲಿಲ್ಲ ಮಂಜು ಬೀಳ್ವ ಭರಕೆ ಬಳುಕಿ
ಧರೆಗೆ ಮುರಿದು ಕೆಡೆವ ಮುಗುಳಿನಂತೆ ತಮ್ಮ ಮಲಗಿರಲ್ಕೆ ||
ಸೆಳೆದು ಬಿಗಿದು ತೋಳ್ಗಳಿಂದ "ಮಗವೆ! ಒಬ್ಬನಾದೆಯಿನ್ನು
ನಲಿವುದೆನ್ನ ಕಣ್ಣ ಮುಂದೆ" ಎಂದು ಮಾತೆ ರೋದಿಸಿದಳು ||

ಅವನ ನಯನವೆಂದು ಗಗನತಲದಿ ಮಿರುಪ ತಾರೆಯಾಗಿ
ಭುವನಗಳನು ಬೆಳಗುತಿರಲುಬಹುದು ತೊದಲುನುಡಿಗಳೀಗ ||
ಗಿರಿಯ ದರಿಯ ವನದ ನಡುವೆ ಹುಟ್ಟಿ ಹರಿವ ತೊರೆಯ ದನಿಯ
ಸರಸದಲ್ಲಿ ಪಡಿನುಡಿಗಳ ಕೂಟದಲ್ಲಿ ಕೇಳಬಹುದು ||

ಅಲ್ಲಿ ತೆಂಗು ಕೌಂಗಿನಿಂದ ಹೊನ್ನೆ ಸುರಗಿ ಮರಗಳಿಂದ
ಮಲ್ಲಿಗೆಗಳ ಬನಗಳಿಂದ ಕೂಡಿದೆಮ್ಮ ತೋಟದೊಳಗೆ ||
ಮಲ್ಲಳಿಗಳ ಮಂಜುಘೋಷವೆಲ್ಲಿ ಕೇಳ್ವುದಲ್ಲಿ ಬೆಳೆದ
ಹುಲ್ಲು ತಮ್ಮನೊರಗಿದೆಡೆಗೆ ಕಾವಲಾಗಿ ಕಾಂಬುದೀಗ ||

ಅಣ್ಣ! ಮಾವಿನಡಿಗೆ ಬರುವ ತಮ್ಮನಿವನ ಕರೆಯೊ ಎಂದು
ಕಣ್ಣ ನೀರ ಮಿಡಿಯುತಿಹನೊ! ನಿಮ್ಮ ನಾನು ನೋಡುತಿರಲು ||
ಎನ್ನನೇಕೆ ಮರೆತಿರೆಂದು ತೊದಲುನುಡಿಯನಾಡುತಿಹನೊ!
ತನ್ನ ತಾನೆ ಹಿಡಿದು ಮೌನದಿಂದ ಮಾತನಾಡದಿಹನೊ! ||

ಆವನೊಂದು ಕೂಟದಿಂದ ಪ್ರೇಮವಾವುದೆಂದು ತಿಳಿದೆ
ಆವನೊಂದು ನೋಟದಿಂದ ನೋವನೆಲ್ಲವನ್ನು ಮರೆತೆ ||
ಆವನೆಳೆಯ ನಗೆಯೆ ಮನದ ತಮಕೆ ಜೊನ್ನವಾದುದವನ
ಸಾವವರೆಗೆ ಮರೆಯಲುಂಟೆ ಎನ್ನ ಬೆನ್ನೊಳುದಿಸಿದವನ? ||

ಮಗನೆ! ಎಂದು ಹೇಳುವನಿತು ಹರಯವಾಗಲಿಲ್ಲವೆನಗೆ
ಮಗನೆ! ಎಂದೆ ಕರೆವೆ ನಿನ್ನ, ಲೋಕವೆಲ್ಲ ಕೇಳಿ ನಗುಗೆ! ||
ಜಗದಿ ನಮ್ಮ ವಂಶವಿರಲಿ! ಎಂದು ವಿಧಿಯು ನಿಯಮಿಸಿದರೆ
ಮಗನೆನಿಸುತೆ ಹುಟ್ಟು ತಮ್ಮ ನಿನ್ನ ಮರೆಯದಣ್ಣನೆನಗೆ ||

ಊರ ಬಿಟ್ಟು ಬಿಜ್ಜೆಗಾಗಿ ದೇಶದೇಶದಲ್ಲಿ ತಿರುಗಿ
ತಾರುತಿರಲು ದೇಹ ಹುಟ್ಟುಮನೆಯ ನೋಡುವಳ್ತಿಯಿಂದ ||

ದಾರಿ ನಡೆದು ಮನೆಯ ಸೇರೆ ಮಾವಿನಡಿಯ ನೆಳಲ ಕಂಡು
ಭೋರೆನುತ್ತೆ ಮನದ ಶೋಕ ಹರಿಯುತಿದೆ ಪ್ರವಾಹಗೊಂಡು ||

ತಂದೆತಾಯ್ಗಳಣ್ಣ ! ನಮ್ಮ ಬಂಧುಬಳಗವೆಲ್ಲ ನಿನ್ನ
ಎಂದೊ ಮರೆತು ಮನದೆ ನಿನಗೆ ಠಾವನೀಯದಿರಲುಬಹುದು ||
ಕಂದ ! ಕಿನಿಸನಾನಬೇಡ ! ಎನ್ನ ಬೆನ್ನ ಹಿಂದೆ ನಡೆದು
ಬಂದ ನಿನ್ನ ನೆನಹು ಬಗೆಯ ಗಣಿಗೆ ರತ್ನವಾಗಿರುವುದು ||

ಎರಡುದಿವಸದಿಂದ ನಿನ್ನ ಹಿರಿಯನಾಗಿ ಹುಟ್ಟಿದುದಕೆ
ಬರೆಹವನ್ನು ತಿಳಿದೆನೆಂಬ ಹೆಮ್ಮೆಯೆನ್ನೊಳಿರುವುದಕ್ಕೆ ||
ಎಳೆಯ ! ಮೂರುದಿನಗಳಾಯುವೆನಗೆ ದೊರೆತ ಕಾರಣಕ್ಕೆ
ಹಳೆಯ ನೆನಹಿನೂರಿನೊಳಗೆ ನಿನ್ನನರಸುಗೈವೆ, ಸಾಕೆ ? ||

ಮಲಗು, ಮಗನೆ ಮಲಗು, ಪ್ರಕೃತಿದೇವಿಯಿಟ್ಟ ತೊಟ್ಟಿಲೊಳಗೆ
ನೆಲದ ಮಾಟ ನಿನ್ನ ಮುಟ್ಟದಿರಲಿ ಒರಗು ನಿದ್ದೆಯೊಳಗೆ ||
ಮನವ ಬಿಗಿದು ಮೇಲೆ ಹಾರಿ ಬರುವ ಭಾವವಿಂದು ನಿನ್ನ
ನೆನೆದು ನೆನೆದು ಜೋಗುಳವನು ಹಾಡುತಿಹುದು ಮಲಗೊ, ತಮ್ಮ ||

ಶಂಕರಭಟ್ಟ ಕಡೆಂಗೋಡ್ಲು,
ಮಂಗಳೂರು.



---

# ಕಾಮನಹಬ್ಬದ ಒಂದು ಕತೆ

## (೧)

ಕಾಮನಹಬ್ಬದ ದಿನ ಬಂದರೆ ನನಗೆ ನಮ್ಮೂರ ಸಾವಿತ್ರಮ್ಮನವರ ಕತೆ ಜ್ಞಾಪಕಕ್ಕೆ ಬರುತ್ತದೆ. ಈ ಹಬ್ಬ ಎಂದರೆ ಹಿಂದೆ ನಮ್ಮೂರಲ್ಲಿ ಮಹಾವಿಜೃಂಭಣೆ. ಕಾಮನಹಬ್ಬದ ವಿಜೃಂಭಣೆ ಯಾವುದರಲ್ಲಿ ಎಂದು ಹೇಳಬೇಕಾದ್ದಿಲ್ಲ. ಎಂದರೆ ಮಲೆನಾಡಿನಲ್ಲಿ ಈ ಹಬ್ಬವನ್ನು ಏನೋ ಕೊಚ್ಚೆಕೊಚ್ಚೆಯಾಗಿ ಮಾಡುತ್ತಾರಂತೆ. ಅದರಂತೆ ಎಂದು ತಿಳಿಯಬಾರದು. ನಮ್ಮ ಕಡೆ ಅದೆಲ್ಲಾ ಇಲ್ಲ. ನಮ್ಮ ವಿಜೃಂಭಣೆ ಎಂದರೆ ಎಲ್ಲರ ಮನೆಯ ಮುಂದೆಯೂ ತಪ್ಪದೆ ಬಾಯಿಬಡಿದುಕೊಳ್ಳುವುದು, ಎಲ್ಲ ರಿಂದಲೂ ಸೌದೆ ವಸೂಲುಮಾಡಿಕೊಂಡು ಬರುವುದು, ಹಳೇಪರಕೆ, ಮೊರ, ಮಕ್ಕರಿ, ಚಾಪೆ, ಎಲ್ಲವನ್ನೂ ಸೇರಿಸಿ ಎರಡಾಳೆತ್ತರ ರಾಶಿ ಒಟ್ಟುವುದು, ರಾತ್ರಿ ಚೆನ್ನಾಗಿ ಬಾಯಿಬಡಿದುಕೊಂಡು ಅದಕ್ಕೆ ಬೆಂಕಿ ಹಚ್ಚುವುದು. ಈಚೆಗೆ ಇದೆಲ್ಲಾ ಸ್ವಲ್ಪ ಕಡಿ ಮೆಯಾಗಿದೆ. ಚೆನ್ನಾಗಿ ಗಂಟಲೆತ್ತಿ ಕೂಗಿ ರಪರಪರಪನೆ ಬಾಯಿಕ್ಕೈಗೆ ಜಗಳಮಾಡು ವುದಕ್ಕೆ ಹಿಂದೆಗೆದರೆ ಕಾಮನಹಬ್ಬ ಮಾಡುವುದು ಹೇಗೆ? ಸೌದೆ ಬೆಲೆ ಏರಿಹೋ ಯಿತು ಎಂತ ಯಾರೂ ಸೌದೇ ಕೊಡದೇ ಬಿಟ್ಟರೆ ಕಾಮನನ್ನು ಸುಡುವುದು ಹೇಗೆ? ಹಿಂದೆ ನಮಗೆ ಇಂಥ ಸಂಕೋಚಕಾರ್ಪಣ್ಯಗಳು ಇರಲಿಲ್ಲ. ಸಾಲದ್ದಕ್ಕೆ ನಾವು ಹಬ್ಬಮಾಡುತ್ತಿದ್ದಾಗ ಸಾವಿತ್ರಮ್ಮನವರು ಅವರ ವ್ರತವನ್ನು ನಡೆಸುತ್ತ ಇದ್ದರು. ಆಗ್ಯೆ ಅದು ಒಂದು ವಿಶೇಷ. ಹಬ್ಬದ ಮಾರನೆಯದಿನ ನಾವು ಸಾವಿತ್ರಮ್ಮನವರ ಮೇಲೆ ಕಾಮನಬೂದಿ ಸುರಿಸಿ ಅವರ ಸುತ್ತ ಸುತ್ತಿ ಬಾಯಿಬಡಿದುಕೊಂಡು ಕೂಗಾ ಡುತ್ತಿದ್ದೆವು. ಜರವುಹಂಚಿಕೊಂಡು ವಸಂತ ಹುಯಿದುಕೊಂಡು ಸ್ನಾನಕ್ಕೆ ಹೊರ ಡುವುದು ಆಮೇಲೆ. ನಾನು ಕೊನೆಯಸಲ ಕಾಮನಹಬ್ಬದ ಗಲಭೆಯಲ್ಲಿ ಸೇರಿದ್ದಾಗ ಸಾವಿತ್ರಮ್ಮನವರ ವ್ರತವೂ ಕೊನೆಯಾಯಿತು. ಅವರ ಆ ವ್ರತದ ವಿಚಾರವನ್ನೇ ನಾನು ಈಗ ನಿಮಗೆ ಹೇಳಬೇಕೆಂದಿರುವುದು.

ಕಾಮನಹಬ್ಬದ ವಿಷಯದಲ್ಲಿ ನಮ್ಮ ಕಡೆಯ ಜನಕ್ಕೆ ಒಂದು ಕುರುಡು ನಂಬಿಕೆ. ಬೂದಿಕಲೆಸುವ ದಿನ ವಿಧವೆಯರಾರಾದರೂ ಬಂದು ಮೇಲೆ ಬೂದಿ ಸುರಿಸಿ ಕೊಂಡು ಹುಡುಗರು ತನ್ನ ಸುತ್ತ ಬಾಯಿಬಡಿದುಕೊಳ್ಳುವುದಕ್ಕೆ ಸಮ್ಮತಿಸಿದರೆ ಅಂಥಾ ಆಕೆಗೆ ಮುಂದಿನ ಜನ್ಮದಲ್ಲಿ ಹೋದ ಗಂಡನೊಂದಿಗೆ ಸಂಸಾರಸುಖ ಲಭಿಸು ವುದಂತೆ; ಆ ಜನ್ಮದಲ್ಲಿ ಸುಮಂಗಲಿಯ ಸಾವಂತೆ. ಜನರಿಗೆ ಈ ನಂಬಿಕೆ ಇರುವು ದಾದರೂ ಯಾವ ವಿಧವೆಯೂ ಹೀಗೆ ಮಾಡಿಸಿಕೊಂಡದ್ದನ್ನು ನಾನು ನೋಡಿರಲಿಲ್ಲ.

ನನಗೆ ತಿಳಿದ ಹಾಗೆ ಈ ವ್ರತಕ್ಕೆ ಒಪ್ಪಿದವರು ಸಾವಿತ್ರಮ್ಮನವರು ಒಬ್ಬರೇ. ಅವರು ಈ ವ್ರತವನ್ನು ಆರಂಭಿಸಿದಾಗ ನಾನು ಸುಮಾರು ಐದುವರುಷದ ಹುಡುಗ. ಆ ಮೇಲೆ ಬೂದಿಕಲೆಸುವ ದಿನ ವರ್ಷವರ್ಷವೂ ಬಂದು ಅವರು ಈ ವ್ರತವನ್ನು ನಡೆಸುವರು. ಅವರು ವ್ರತಹಿಡಿದ ಮೊದಲುವರ್ಷ ಬೂದಿಹಾಕಿ ಎಂದಾಗ ಹುಡುಗರು ಒಂದುಮೊರ ಬೂದಿಯನ್ನು ಅವರ ಮೇಲೆ ಸುರಿದರಂತೆ. ಎಷ್ಟಾದರೂ ಹುಡುಗು ಹುಡುಗೇ. ಆಟದಮೇಲೆ ಕಣ್ಣಿರುವಂತೆ ಸರಿ ತಪ್ಪು ಎನ್ನುವುದರ ಮೇಲೆ ಇರುವುದಿಲ್ಲ. ಅಲ್ಲದೆ ಸಾವಿತ್ರಮ್ಮನವರು ಏಕೆ ಹಾಗೆ ಮಾಡಿಸಿಕೊಂಡರೆಂದು ಹುಡುಗರಿಗೆ ಆಗ ತಿಳಿಯದು. ಎರಡನೆಯ ವರ್ಷದವೇಳೆಗೆ ತಿಳಿದಿತ್ತು. ಅವರು ಅಷ್ಟು ಚೇಷ್ಟೆ ಮಾಡಲಿಲ್ಲ. ಮೇಲೆ ಒಂದು ಚಿಟಿಕೆ ಬೂದಿ ಹಾಕಿ ಒಂದುಸಲ ಬಾಯಿಬಡಿದುಕೊಂಡು ನಡೀರಿ ಎಂದರು. ಸಾವಿತ್ರಮ್ಮನವರು ಅದು ಸಾಲದು ಎಂದರಂತೆ. ಲಂಗಡಾ ಭೀಮನ ಅಣ್ಣ ಶ್ಯಾಮ "ಇದೇನಮ್ಮ ನಿಮಗೆ ಇಷ್ಟು ಆಶೆ. ನಾವೇನು ಸಂಗೀತಗಾರರೇ ಹಾಡುತೇವೆಯೇ. ಬಾಯಿಬಡುಕೊಳ್ಳುವುದನ್ನು ಕೇಳುವುದಕ್ಕೆ ಇಷ್ಟು ಆಶೆಯೆ? ನಡೀರಿ" ಎಂದ. ಸಾವಿತ್ರಮ್ಮನವರು "ಅಪ್ಪಾ ಒಳ್ಳೇ ಮಾತನಾಡು ಎಂದರೆ ಹ್ಯಾಗೆ ಎನ್ನಬೇಕು. ಕೆಟ್ಟದ್ದು ಮಾಡುವುದಕ್ಕೂ ಕಾರ್ಪಣ್ಯವೆ?" ಎಂದರಂತೆ. ಶ್ಯಾಮ "ಯಾವುದಕ್ಕೂ ಅಧಿಕಾರ ಬೇಡವೆ? ಪಕ್ಕಾಹೆಣ ಬಂದರೆ ಬೇಕಾದಷ್ಟು ಬಾಯಿಬಡಿದುಕೊಂಡೇವು. ಹೆಣಕ್ಕೆ ಮಾಡುವ ಮರ್‍ಯಾದೆ ಬದುಕಿದವರಿಗೆ ಎಷ್ಟು ಎಂತ ಮಾಡೋಕೆ ಆಗುತ್ತೆ" ಎಂದನು. ಸಾವಿತ್ರಮ್ಮನವರು "ಅಪ್ಪಾ ಸತ್ತಹೆಣಕ್ಕಿಂತ ಬದುಕಿದ ಹೆಣಕ್ಕೆ ಈ ಮರ್‍ಯಾದೆ ಹೆಚ್ಚಾಗಿ ಮಾಡಬೇಕು. ನಾನು ಬದುಕಿದ ಹೆಣ; ಜೀವಶವಾ ಅಪ್ಪಾ" ಎಂದರಂತೆ. ಹುಡುಗರು ಕೊನೆಗೆ ಮೂರು ಹಿಡಿ ಬೂದಿಹಾಕಿ ಮೂರುಸಾರಿ ಸುತ್ತಿ ಬಾಯಿಬಡಿದುಕೊಂಡರು. ಹೀಗೆ ಎರಡು ಮೂರು ವರುಷದಲ್ಲಿ ವ್ರತದ ಹೆಜ್ಜೆಹೆಜ್ಜೆಯೂ ಮಾಮೂಲಿನಿಂದ ನಿರ್ಧರವಾಯಿತು. ಸಾವಿತ್ರಮ್ಮನವರು ಬಂದು ಕುಳಿತ ಒಡನೆ ನಮ್ಮಲ್ಲಿ ಮೂವರು ಕೈಯಲ್ಲಿ ಒಂದೊಂದುಹಿಡಿ ಬೂದಿಯನ್ನು ಹಿಡಿದುಕೊಂಡುಬಂದು ಬಾಯಿಬಡಿದುಕೊಂಡು ಅವರಮೇಲೆ ಹಾಕಿ ಎಲ್ಲರೂ ಒಂದುಸಲ ಅವರ ಸುತ್ತ ಸುತ್ತುವುದು; ಇದಿಷ್ಟಕ್ಕೆ ಹೆಚ್ಚಾಗಿ ಒಂದಿಷ್ಟನ್ನೂ ಮಾಡುತ್ತಿರಲಿಲ್ಲ. ಹುಡುಗರಾದರೇನು ಹೆಣ್ಣುಹೆತ್ತ ಮಕ್ಕಳಲ್ಲವೆ? ಹೀಗೆ ಮಾಡಬೇಕಾದರೆ ಕೆಲವರ ಕಣ್ಣಿನಲ್ಲಿ ನೀರೂ ಬರುವುದು. ಎಲ್ಲ ಆದಮೇಲೆ ಸಾವಿತ್ರಮ್ಮನವರು ಹೋಗಿ ಕೆರೆಯಲ್ಲಿ ಸ್ನಾನಮಾಡಿ ಹಿಂದಕ್ಕೆ ಬರುವರು. ಇದು ಇನ್ನೆಲ್ಲಿಯೂ ನಡೆಯದೆ ಇದ್ದದ್ದರಿಂದ ನಮ್ಮೂರಿನ ಕಾಮನಹಬ್ಬಕ್ಕೆ ನಮ್ಮ ಕಡೆ ಅಗ್ಯೆ ಹೆಚ್ಚು ಗೌರವ ಉಂಟಾಗಿತ್ತು. ಸಾವಿತ್ರಮ್ಮನವರು ಈ ವ್ರತವನ್ನು ಏಕೆ

ಕೈಗೊಂಡರೆಂದು ತಿಳಿಯುವುದಕ್ಕೆ ಅದರ ಪೂರ್ವದ ಚರಿತ್ರೆಯು ನಿಮಗೆ ತಿಳಿಯ ಬೇಕು.

(೨)

ಸಾವಿತ್ರಮ್ಮ ಅವರ ತಂದೆತಾಯಿಗಳಿಗೆ ಒಬ್ಬಳೇ ಮಗಳಂತೆ. ಅವರು ಬಹಳ ಬಡವರಾಗಿದ್ದರು. ಮಗಳನ್ನು ನಮ್ಮೂರಿನಲ್ಲಿಯೇ ಸಂಬಂಧದಲ್ಲಿ ಒಬ್ಬರ ಮನೆಗೆ ಕೊಟ್ಟರು. ಸಾವಿತ್ರಮ್ಮನ ಮಾವ ನರಸಿಂಹಶಾಸ್ತ್ರಿಗಳು. ಗಂಡನ ಹೆಸರು ಶೀನೀ. ಮದುವೆ ಆದಾಗ ಹುಡುಗ ಹುಡುಗಿಯರಿಗೆ ಕೇವಲ ಚಿಕ್ಕವಯಸ್ಸು. ಸಾವಿತ್ರಮ್ಮನೂ ಶೀನಿಯೂ ಮಕ್ಕಳಂದಿನಿಂದ ಜತೆಯಾಗಿ ಇದ್ದವರು. ಶೀನಿಯ ಶಾಸ್ತ್ರೀಯವಾದ ಹೆಸರು ಶ್ರೀನಿವಾಸಶಾಸ್ತ್ರಿ. ಆದರೆ ಅವನನ್ನು ಊರೆಲ್ಲ ಶೀನೀ ಎಂದು ಕರೆಯುವುದು. ಸಾವಿತ್ರಮ್ಮನೂ ಶೀನೀ ಎಂದು ಕರೆಯುತ್ತಿದ್ದಳಂತೆ. ಮದುವೆಯಾದ ಮೇಲೂ ಅವಳು ಅವನನ್ನು ಶೀನೀ ಎಂದೇ ಕರೆಯುವಳು. ಅವನು ಅವಳನ್ನು ಸಾತೀ ಎಂದು ಕರೆಯುವನು. ಆಗ ಊರಿನವರಿಗೆಲ್ಲ ಇದು ಒಂದು ಪರಿಹಾಸ್ಯ. ಶೀನೀಗೆ ನಾಲ್ಕುಜನ ಅಣ್ಣಂದಿರು. ಅವರ ತಂದೆ ನರಸಿಂಹಶಾಸ್ತ್ರಿಗಳು ಆಗ್ಯೆ ತಕ್ಕ ಮಟ್ಟಿಗೆ ಮುದುಕರಾಗಿದ್ದರು. ಶೀನೀ ಹಳ್ಳಿಯಲ್ಲೇ ಬೆಳೆದ ಹುಡುಗ. ಓದುಬರಹ ಕಡಿಮೆ; ಮಾಡುವುದಕ್ಕೆ ಕೆಲಸವಿಲ್ಲ; ಬಾಲ್ಯದಲ್ಲಿ ಸ್ವಭಾವವಾಗಿಯೂ ಸ್ವಲ್ಪ ತುಂಟನಾಗಿದ್ದನು. ತುಂಟ ಎಂದರೆ ಮತ್ತೇನೂ ಇಲ್ಲ, ಯಾರ ಮನೆಯ ದಾಳಿಂಬೆ ಮರದಲ್ಲಿ ಹಣ್ಣುಬಿಟ್ಟರೂ ಅವರಿಗೆ ತಿಳಿದೋ ತಿಳಿಯದೆಯೋ ಮೊದಲಹಣ್ಣನ್ನು ಈತನು ಸಂಗ್ರಹಿಸುತ್ತಿದ್ದನು. ಊರಲ್ಲಿ ವರ್ಷವರ್ಷವೂ ಮೊದಲಮಾವಿನಹಣ್ಣು ತಿನ್ನುವವನು ಶೀನೀ. ಅವನು ದೊಡ್ಡಹುಡುಗನಾದಮೇಲೆ ಊರಿನಲ್ಲಿ ಮೊದಲು ಮಾವಿನಕಾಯಿ ಉಪ್ಪಿನಕಾಯಿ ಹಾಕುವುದು ನರಸಿಂಹಶಾಸ್ತ್ರಿಗಳ ಮನೆಯಲ್ಲಿ. ಅದು ಶೀನೀ ತಂದ ಕಾಯಿ. ನೆಲ್ಲೀಕಾಯಿ, ಅಮಟೇಕಾಯಿ, ಮಾಗಳದ ಬೇರು ಎಲ್ಲಾ ಅಷ್ಟೇ. ಶೀನೀ ಇಂಥ ಕೆಲಸಕ್ಕೆ ಹೊರಟಾಗ ಉಪ್ಪಿನಕಾಯಿ ಹಾಕುವ ದಿನ ಬಂತೆಂದು ಎಲ್ಲರಿಗೂ ಜ್ಞಾಪಕ. ಬೇಕಾದವರು ಅವನ ಜತೆಗೂ ಹೋಗುವರು. ಅವನು ಅವರಿಗೂ ಅಷ್ಟು ಕಾಯಿ ಸರಿಮಾಡಿ ಕೊಡುವನು. ದೇವಸ್ಥಾನದಲ್ಲಿ ಉತ್ಸವದ ದಿನಗಳಲ್ಲಿ ಗಂಟೆಬಾರಿಸುವುದು ಕೂಗಾಡುವುದು ಈ ಕೆಲಸ ಶೀನೀದು. ಅದಕ್ಕೆ ಇವನನ್ನು ಯಾರೂ ನೇಮಿಸಿರಲಿಲ್ಲ. ಅವನೇ ಅದನ್ನು ಕೈಗೊಂಡು ದಿನವೂ ಅರ್ಚಕನಿಂದ ಇದಕ್ಕಾಗಿ ಎರಡು ಕಾಯಿಹೋಳು ವಸೂಲುಮಾಡುವನು. ಊರಿನಲ್ಲಿ ಯಾವ ಜಗಳ ನಡೆದರೂ ಅದರಲ್ಲಿ ಶೀನೀ ಇರಲೇಬೇಕು. ಇಲ್ಲ ಜಗಳಬಿಡಿಸುತ್ತಿರಬೇಕು.. ಮದುವೆಯಾದ ಮೇಲೆ ಹುಡುಗುತನ ಬಿಡುವನೆಂದು ಮನೆಯವರು

ತಿಳಿದುಕೊಂಡಿದ್ದರು. ಆಗಲೂ ಅದು ಬಿಡಲಿಲ್ಲ. ಇಷ್ಟಬಂದಂತೆ ಬೆಳೆದು ಹುಡುಗ ಒಳ್ಳೆ ಪುಷ್ಟಿಯಾಗಿ ತುಂಬಿ ಗಟ್ಟಿಯಾಗಿದ್ದನು. ಒಂದುಸಲ ಇವನು ಜಗಳ ಬಿಡಿಸುವುದಕ್ಕೆ ಹೋಗಿ ಯಾರೋ ಕುಡುಗೋಲಿನಿಂದ ಹೊಡೆದು ಇವನ ಮುಖದಮೇಲೆ ಹುಬ್ಬುಗಳ ನಡುವೆ ಒಂದು ಗಾಯವಾಗಿತ್ತು. ಸಾವಿತ್ರಮ್ಮ ಶೀನೀಗೆ ಮದುವೆಯಾದ ಎರಡುವರ್ಷದ ಮೇಲೆ ಯಾವುದೋ ಒಂದು ರೀತಿಯ ಜ್ವರ ಬಂದು ಅವಳ ತಂದೆತಾಯಿ ಇಬ್ಬರೂ ತೀರಿಹೋದರು. ಸಾವಿತ್ರಮ್ಮ ಬಂದು ಮಾವನ ಮನೆಯಲ್ಲಿ ನಿಂತಳು. ತಂದೆಯ ಕಡೆಯಿಂದ ಅವಳಿಗಿದ್ದದ್ದು ಅವರಿದ್ದ ಒಂದು ಹಳೆಯಮನೆ ಮಾತ್ರ. ಹುಡುಗಿ ಮಾವನ ಮನೆಯಲ್ಲೇ ದೊಡ್ಡವಳಾದಳು. ಆಮೇಲೆ ಎರಡು ವರ್ಷವಾದರೂ ನಿಷೇಕಪ್ರಸ್ತ ನಡೆಯಲಿಲ್ಲ. ಮಾವನಮನೆಯವರು ಅಷ್ಟೇನೂ ಐಶ್ವರ್ಯವಂತರಲ್ಲ. ಒಂದು ಮದುವೆ ಒಂದು ಪ್ರಸ್ತ ಒಂದು ಚೌಲ ಒಂದು ಉಪನಯನ ಹೀಗೆ ನಾಲ್ಕಾರು ಸಂದರ್ಭ ಸೇರುವಂತೆ ಕಾಲನೋಡಿಕೊಂಡು ಇಂಥ ಪ್ರಸ್ತ ನಡೆಯಿಸಬೇಕು. ಇದರಿಂದ ಅದು ಸಾವಕಾಶವಾಯಿತು. ಹೀಗಿರುತ್ತಿರುವಲ್ಲಿ ಶಿವಗಂಗೆಯ ಸ್ವಾಮಿಗಳು ದೇಶಾಟನಕ್ಕಾಗಿ ಹೊರಟು ಹೊಳೆನರಸೀಪುರಕ್ಕೆ ದಯಮಾಡಿಸಿದರು. ನಮ್ಮೂರಿಂದ ಜನ ಸ್ವಾಮಿಗಳ ದರ್ಶನಕ್ಕೆಂದು ಹೊಳೇನರಸೀಪುರಕ್ಕೆ ಹೋದರು. ನರಸಿಂಹಶಾಸ್ತ್ರಿಗಳೂ ಅವರ ಸಂಸಾರವೂ ಒಂದುದಿನ ಹೋದರು. ಶೀನೀ ಹೋಗಿ ಅವರ ಗುಂಪಿನಲ್ಲಿ ಸೇರಿದ; ಸ್ವಾಮಿಗಳ ಶುಶ್ರೂಷೆ ಮಾಡಿದ; ಮೂರುದಿನದ ಮೇಲೆ ಗುರುಗಳು ಮುಂದಕ್ಕೆ ಹೊರಟಾಗ ಅವರೊಂದಿಗೆ ಹೊರಟ. ತಂದೆತಾಯಿಗಳು ಎಷ್ಟುದೂರ ಹೋಗುತ್ತೀಯಪ್ಪಾ ಎಂದು ಕೇಳಿದರು. ಎಳೆಂಟು ದಿನ ಸ್ವಾಮಿಗಳ ಜತೆಯಲ್ಲಿದ್ದು ಬರುತ್ತೇನೆ ಎಂದು ಶೀನೀ ಉತ್ತರಹೇಳಿದ. ಸಾತಮ್ಮನಿಗೆ ಗಂಡನೆಂದರೆ ಪಂಚಪ್ರಾಣ ಅವಳಿಗೆ ತನ್ನದೆನ್ನುವುದು ಇನ್ನೂ ಯಾವುದೂ ಇಲ್ಲದೆ ಹೋಗಿತ್ತು. ಗಂಡನೊಬ್ಬನೇ ತನ್ನ ವಸ್ತು. ಮಾವ ಅತ್ತೆ ಎಲ್ಲ ಗಂಡನಿಂದ ನೆಂಟರು. ಹತ್ತುವರ್ಷದ ಹುಡುಗಿ ಮಾವನ ಮನೆಗೆ ಬಂದು ಐದುವರುಷ ಸದಾ ಅವನನ್ನೇ ನೋಡುತ್ತ ಅವನು ಮನೆಯಲ್ಲಿಲ್ಲದಾಗಲೆಲ್ಲ ಅವನನ್ನು ನೆನೆಯುವುದೇ ಅವಳಿಗೆ ವಾಡಿಕೆಯಾಗಿ ಹೋಗಿತ್ತು. ಹೊಳೆನರಸೀಪುರದಲ್ಲಿ ಅಂದು ಗಂಡನು ಗುರುಗಳೊಂದಿಗೆ ಹೋಗುತ್ತೇನೆಂದಾಗ ಅವಳ ಮನಸ್ಸಿಗೆ ಏನೋ ಭಯ ತಟ್ಟಿತು. ಆದರೆ ಅವರು ಆಗ ಇದ್ದ ಸ್ಥಿತಿಯಲ್ಲಿ ಅವಳು ಅವನನ್ನು ಯಾವ ಮಾತನ್ನೂ ಕೇಳುವಂತಿಲ್ಲ, ಅವನು ಏನನ್ನೂ ಹೇಳುವಂತಿಲ್ಲ. ಅವನು ಹಾಗೆ ಗುರುಗಳ ಜತೆಯಲ್ಲಿ ಹೋಗಲು ಸಾವಿತ್ರಮ್ಮ ಹೀಗೆ ಎಲ್ಲರೊಂದಿಗೆ ಊರಿಗೆ ಬಂದಳು.

ಗುರುಗಳೊಂದಿಗೆ ಹೋದ ಶೀನೀ ಹಿಂದಕ್ಕೆ ಬರಲಿಲ್ಲ. ಎಂಟುದಿನವಾಯಿತು. ಒಂದು ತಿಂಗಳಾಯಿತು. ನಾಲ್ಕು ತಿಂಗಳಾಯಿತು. ಅವನ ಸುಳಿವಿಲ್ಲ. ಆದರೆ ಮನೆಯಲ್ಲಿ ಯಾರೂ ವಿಶೇಷ ಯೋಚನೆಮಾಡಲಿಲ್ಲ. ಹುಡುಗ ಊರಲ್ಲಿದ್ದರೆ ಪೋಲಿತಿರುಗುತ್ತಿದ್ದ, ಗುರುಗಳೊಂದಿಗಿದ್ದಾನೆ, ಬರುತ್ತಾನೆ ಎಂದು ತಂದೆತಾಯಿಗಳು ಹೇಳಿಕೊಳ್ಳುತ್ತಿದ್ದರು. ಸಾವಿತ್ರಮ್ಮನಿಗಾದರೊ ಈ ಮಾತುಗಳಿಂದ ಸಮಾಧಾನ ಬರಲಿಲ್ಲ. ಒಂದೆರಡುಸಲ ತಾನು ಗಂಡಸಾಗಿದ್ದರೆ ಹೋಗಿ ಅವನನ್ನು ಹುಡುಕಿಕೊಂಡು ಬರಬಹುದಾಗಿತ್ತು ಎಂದುಕೊಂಡಳು. ಆದು ತನ್ನ ಕೈಯಲ್ಲಾಗುವ ಕೆಲಸವಲ್ಲ. ಕೈಯಲ್ಲಾದದ್ದು ಗೌರೀಪೂಜೆ. ಗಂಡ ಎಂದು ಬರುವನೋ ಎಂದು ನಿರೀಕ್ಷಿಸುತ್ತ ಅವಳು ದಿನವೂ ಪೂಜೆಮಾಡುವಳು. ಒಂದು ವರ್ಷ ಕಳೆದರೂ ಶೀನೀ ಹಿಂದಕ್ಕೆ ಬಾರದಿರಲು ಮನೆಯವರಿಗೂ ಸ್ವಲ್ಪ ಕಳವಳವುಂಟಾಯಿತು. ಹಿರಿಯಣ್ಣ ಅಲ್ಲಿ ಇಲ್ಲಿ ವಿಚಾರಿಸಿ ಸ್ವಾಮಿಗಳು ದೇಶಾಟನ ಮುಗಿಸಿಕೊಂಡು ಮಠಕ್ಕೆ ಬಂದರಂತೆ ಎಂದನು. ಹಾಗಾದರೆ ಇನ್ನು ಕೊಂಚದಿನಕ್ಕೆ ಶೀನೀ ಬರಬಹುದೆಂದು ನಿರೀಕ್ಷಿಸಿದ್ದಾಯಿತು; ಅವನು ಬರಲಿಲ್ಲ. ಹೋಗಿ ವಿಚಾರಿಸಿಕೊಂಡು ಬರೋಣ ಎಂದು ಹಿರಿಯಣ್ಣನಾದವನು ಹೋಗಿ ಬಂದನು. ಸ್ವಾಮಿಗಳ ಜೊತೆಯಲ್ಲಿ ಹಿಂದಿರುಗಿ ಬಂದವರು ಶೀನಿಯನ್ನು ಬಲ್ಲರು. ಸ್ವಾಮಿಗಳು ಕಾಶೀನಗರವನ್ನು ಸೇರಿ ಅಲ್ಲೇ ಇರುವವರೆಗೆ ಅವನು ಜತೆಯಲ್ಲಿಯೇ ಇದ್ದನಂತೆ. ಸ್ವಾಮಿಗಳು ಅಲ್ಲಿಂದ ಹಿಂದಿರುಗಲು ಅವನೂ ಅವನ ಜೊತೆಗೆ ಇನ್ನೊಬ್ಬನೂ ಬದರಿಕಾಶ್ರಮಕ್ಕೆ ಹೋಗಿ ಬರುತ್ತೇವೆಂದು ಹೊರಟರಂತೆ. ಎಲ್ಲರೂ—ಎಲ ಬದರಿಕಾಶ್ರಮವೆಲ್ಲಿ? ನೀನೆಲ್ಲಿ? ಎಂದರೆ ಕೇಳಲಿಲ್ಲ. ಹೀಗೆಂದು ಇವರಿಗೆ ಸಮಾಚಾರ ತಿಳಿಯಿತು. ಹಿರಿಯಣ್ಣ ಬಂದು ತಂದೆಗೆ ಹೇಳಿದನು.

ಎಲ್ಲರೂ ಹುಡುಗನ ಆಸೆಯನ್ನು ಬಿಟ್ಟರು. ಸಾವಿತ್ರಮ್ಮ ಚಿಂತೆಗೆ ಸಿಕ್ಕಿ ದಿನಗಳನ್ನು ಎಣಿಸತೊಡಗಿದಳು.

ನಾಲ್ಕು ವರ್ಷವಾಯಿತು. ಶೀನಿ ಹಿಂದಿರುಗಿ ಬರಲಿಲ್ಲ. ಇಷ್ಟರಲ್ಲಿ ಮನೆಯಲ್ಲಿ ಅತ್ತೆಗೂ ಇತರ ಸೊಸೆಯರಿಗೂ ಸರಿಹೋಗದೆ ಭಾಗವಾಗುವ ಮಾತು ಬಂತು. ಆಗ ಶೀನಿಗಾಗಿ ಒಂದು ಭಾಗ ಇಡುವುದೇ ಬಿಡುವುದೇ ಎಂದು ಸಮಸ್ಯೆಹುಟ್ಟಿತು. ಆಸ್ತಿ ಇದ್ದದ್ದು ಕೊಂಚ. ಹಂಚಿಕೊಳ್ಳುವವರು ಕಡಿಮೆಯಾದಷ್ಟೂ ಒಳ್ಳೆಯದು. ಅಣ್ಣತಮ್ಮಂದಿರು, ಏನಾದನೋ ಬದರಿಕಾಶ್ರಮಕ್ಕೆ ಹೋದರೆ ತಾನೇ ಇಷ್ಟುದಿನ ಬರದೆ ಇರುತ್ತಾರೆಯೆ? ಕಳ್ಳರು, ಕಾಕರು, ರೋಗ, ರುಜಿನ, ಎಂದರು. ಸಾವಿತ್ರಮ್ಮನಿಗೆ ಹೊಟ್ಟೆಯಲ್ಲಿ ಬೆಂಕಿಹಾಕಿದ ಹಾಗಾಯಿತು. ಹೀಗೆಯೇ ಇರುತ್ತಿರುವಲ್ಲಿ

ಮನೆಯ ಯಜಮಾನ ತೀರಿಹೋಗಿ ಭಾಗಗಳಾಗಲೇಬೇಕಾಯಿತು. ಭಾವಮೈದ ಮೊದಲಾದವರು ಜಗಳಮಾಡಿ ಶೀನಿ ತೀರಿಹೋಗಿರಬೇಕೆಂದು ನಿಶ್ಚಯಿಸಿ ಪಂಚಾಯಿತರನ್ನು ಹೇಗೋ ಒಪ್ಪಿಸಿ ಸಾವಿತ್ರಮ್ಮನಿಗೆ ಮತ್ತು ತಮ್ಮ ತಾಯಿಗೆ ಜೀವನಾಂಶವೆಂದು ಏರ್ಪಾಡುಮಾಡಿ ತಾವು ಬೇರೆಬೇರೆಯಾದರು. ಸಾವಿತ್ರಮ್ಮ ಅತ್ತೆಯೊಂದಿಗೆ ತನಗೆ ತಂದೆ ತಾಯಿಗಳಿಂದ ಬಂದಿದ್ದ ಮನೆಯಲ್ಲಿ ನಿಂತಳು. ಆಗ್ಗೆ ಸಾವಿತ್ರಮ್ಮನಿಗೆ ಸುಮಾರು ಇಪ್ಪತ್ತೆರಡು ವರ್ಷ.

ಇದಾದ ಕೊಂಚ ದಿನದಮೇಲೆ ಮನೆಯ ಹಿರಿಯಣ್ಣ ಎಲ್ಲಿಗೋ ಹೋಗಿದ್ದವನು ಶೀನಿಯ ಜತೆಗೆ ಬದರಿಕಾಶ್ರಮಕ್ಕೆ ಹೋಗಿದ್ದಾತ ಹಿಂದಕ್ಕೆ ಬಂದನೆಂದೂ ಶೀನಿ ಕಲಿಕತ್ತೆಯ ಬಳಿ ತೀರಿಹೋದನೆಂದು ಹೇಳಿದನೆಂದೂ ತಾಯಿಗೆ ಹೇಳಿ ಕಳುಹಿಸಿದನು. ಯಾವುದನ್ನು ಹೆದರಿದ್ದೆನೋ ಅದು ಆಗಿಹೋಯಿತು ಎಂದು ಸಾವಿತ್ರಮ್ಮ ವಿಧವೆಯ ವೇಷವನ್ನು ಅಂಗೀಕರಿಸಿದಳು. ಅತ್ತೆ ಭಾವ ಊರಿನ ಜನ ಎಲ್ಲರೂ ಬೇಡ ಬೇಡ ಎಂದರು. ಗಂಡ ದೇಶಾಂತರ ಹೋದರೆ ಈ ವೇಷ ಯಾಕೆ ಎಂದರು. ಸಾವಿತ್ರಮ್ಮ ಕೇಳಲಿಲ್ಲ. ಏನಾಯಿತು ಎಂತ ತಿಳಿಯದೇ ಇದ್ದಾಗ ಎಲ್ಲಾದರೂ ಸುಖವಾಗಿರಲಿ ಎಂತ ನಾನು ಅರಿಸಿನ ಕುಂಕುಮ ಹಚ್ಚಿಕೊಳ್ಳುತ್ತಾ ಇದ್ದೆ. ನನಗೇನು ಆಸೆಯಿಲ್ಲವೇ? ನನಗೆ ಪ್ರಾಪ್ತಿಯಿಲ್ಲ. ಅವರು ಹೋದರು ಎಂದಮೇಲೆ ನಾನು ಹೋದಹಾಗೆಯೇ. ನನಗೇಕೆ ಸೊಗಸು ನಾನು ಕೂದಲಿಟ್ಟುಕೊಂಡು ಅವರು ನರಕದೊಳಗೆ ಯಾಕೆ ಇರಬೇಕು ಎಂದರು. ಈ ಜನ್ಮದಲ್ಲಿ ಸೇವೆಮಾಡುವುದಕ್ಕೆ ಸಿಕ್ಕದೇ ಹೋದ ಅವಕಾಶ ಮುಂದಿನ ಜನ್ಮಕ್ಕೆ ಸಿಕ್ಕಲಿ ದೇವರೇ ಎಂದು ತಮಗೆ ತಿಳಿದ ವ್ರತಗಳನ್ನೆಲ್ಲಾ ಮಾಡುವುದಕ್ಕೆ ಮೊದಲುಮಾಡಿದರು. ಕಾಮನಹಬ್ಬದ ಬೂದಿಯನ್ನು ಚೆಲ್ಲಿಸಿಕೊಂಡು ಹುಡುಗರಿಂದ ಅಶುಭಕಾರ್ಯವನ್ನು ನಡೆಯಿಸಿಕೊಂಡರು. ಅದೂ ಈ ವ್ರತಗಳಲ್ಲಿ ಒಂದು. ಏನಾದರೂ ಮಾಡು, ಈ ಒಂದು ಅವಲಕ್ಷಣದ ವ್ರತ ಬೇಡ ಎಂದು ಅತ್ತೆ ಬೇಡಿದರು. ಸಾವಿತ್ರಮ್ಮ ಕೇಳಲಿಲ್ಲ. ನನಗೆ ಅವಮಾನ, ನನ್ನನ್ನ ಕಂಡರೆ ನಗುತ್ತಾರೆ, ನಾನು, ನಾನು, ಎಂತ ಮಾಡದೆ ಬಿಟ್ಟರೆ ಪತಿಭಕ್ತಿ ಏನು ತೋರಿಸಿದ ಹಾಗಾಯಿತು? ಅವರು ಇದ್ದಿದ್ದರೆ ಹೊಡೆದರೆ ಬೇಡಾ ಎಂದಿತ್ತೆ? ಬೈದರೆ ಬೇಡಾ ಎಂದಿತ್ತೆ? ಅದಕ್ಕೆಲ್ಲಾ ಅವಮಾನ ಎನ್ನುತ್ತಿದ್ದೆವೆ? ಯಾರು ನಕ್ಕರೆ ನನಗೇನು ಎಂದು ಹೇಳಿದರು.

(೩)

ನಾನು ಈ ಹಬ್ಬದಲ್ಲಿ ಸೇರಿದ್ದ ಕಡೆಯ ಸಲ ಅದು ನಡೆದಷ್ಟು ಸೊಗಸಾಗಿ ನಮ್ಮೂರಲ್ಲಿ ಕೂಡ ಇನ್ನ್ಯಾವಾಗಲೂ ನಡೆದಂತೆ ನನಗೆ ಜ್ಞಾಪಕವಿಲ್ಲ. ನಾವೆಲ್ಲ

ಹುಡುಗರು ಒಟ್ಟಿಗೆ ಸೇರಿ ಮನೆಮನೆಗೂ ಹೋಗಿ ಮನೆಯ ಮುಂದೆ ಬಾಯಿ ಬಡಿದು ಕೊಂಡು ಸೌದೆಯ ಭಿಕ್ಷೆ ಕೇಳುವುದು ವಾಡಿಕೆ. ಈ ಹಬ್ಬದ ದಿನ ಮನೆಯ ಮುಂದೆ ಬಾಯಿಬಡಿದುಕೊಂಡರೆ ವರ್ಷವೂ ನಗುತ್ತ ಇರಬಹುದು ಎಂದು ನಮ್ಮ ಜನರಲ್ಲಿ ನಂಬಿಕೆ ಇದೆಯಷ್ಟೆ. ನನ್ನ ಜತೆಗೆ ಇದ್ದ ಒಂದೈದಾರು ಜನ ಈಗ ಅಲ್ಲಲ್ಲಿ ಬಹು ದೊಡ್ಡ ಮನುಷ್ಯರಾಗಿ ಗೌರವಸ್ಥರೆನಿಸಿಕೊಂಡಿರುವವರು ಕಾಮನ ಹಬ್ಬದ ಈ ಜಂಟಿ ಗೌರವದ ಹುದ್ದೆಯಲ್ಲಿದ್ದಾಗ ಬಹಳ ದಕ್ಷರೆನಿಸಿಕೊಂಡರು. ನಾನೂ ತಕ್ಕಮಟ್ಟಿಗೆ ಗದ್ದಲಕ್ಕೆ ಸಹಾಯಮಾಡುತ್ತಿದ್ದೆನು. ಅಶುಭದ ಶಬ್ದಮಾಡುವುದರಲ್ಲಿಯೂ ಒಂದು ಕೌಶಲವಿದೆ. ಅದಕ್ಕೂ ಒಂದು ಪರಿಶ್ರಮ ಬೇಕು. ನಮಗೆ ಹಿರಿಯರಾಗಿದ್ದವರಿಂದ ನಾವು ಆ ವಿದ್ಯವನ್ನು ಕಲಿತು ವರ್ಷಾಂತರ ಅಭ್ಯಾಸಮಾಡಿದ್ದುದರಿಂದ ನಾವೆಲ್ಲ ಸೇರಿ ಲಬೋಲಬೋ ಎಂದು ಕೂಗಿದಾಗ ಉಂಟಾದ ಶಬ್ದವು ಭೀಕರವಾಗಿದ್ದರೂ ಕೇಳುವುದಕ್ಕೆ ಅಸಹ್ಯವಾಗಿರುತ್ತಿರಲಿಲ್ಲ. ನಾವು ತಿಳಿದುಕೊಂಡಿದ್ದದ್ದಂತೂ ಹಾಗೆ. ಅಲ್ಲದೆ ಕಾಮನಹಬ್ಬದ ಸಂಭ್ರಮದಲ್ಲಿ ನಮ್ಮ ಭೀಮನಂತಹವರ ಕವಿತೆಯು ಬನಕೆ ಚಿಗುರಿ ಒಂದು ರೀತಿಯ ಪದ್ಯಉಂಟಾಗಿತ್ತು. 'ಬೋಲಬೋಲ ಬಸಪ್ಪ ನಿಮ್ಮಪ್ಪ ಸತ್ತರೆ ಲಬೋಲಬೋ' ಎನ್ನುವುದು ಅದರ ಮುಖ್ಯಭಾಗ. ಇದು ಈಚೆಗೆ ನಮ್ಮೂ ರಿಂದ ಬೇರೆ ಊರುಗಳಿಗೂ ಹರಡಿದೆ ಎನ್ನಿ. ನಾವೆಲ್ಲ ಸೇರಿ ಇದನ್ನು ಒಟ್ಟಿಗೆ ಕೂಗಿ ದಾಗ ಅದರ ಸೊಗಸನ್ನು ನೋಡಿ ನಮಗೇ ಆನಂದ. ಆ ವರ್ಷ ನಾನೂ ಇನ್ನು ಕೆಲ ವರೂ ಲೋವರ್ ಸೆಕಂಡರೀ ಪರೀಕ್ಷೆಗೆ ಕಟ್ಟಿದ್ದೆವು. ಪ್ಯಾಸಾದಮೇಲೆ ಒಬ್ಬೊಬ್ಬರದು ಒಂದೊಂದುದಾರಿ. ಈ ಕಾಮನ ಹಬ್ಬ ನಮಗೆ ಕೊನೆಯ ಹಬ್ಬ ಎಂದು ಬಹಳ ಮೆಹನತ್ತು ಮಾಡಿದೆವು. ಅಲ್ಲದೆ ಸೌದೆಯ ಸಂಪಾದನೆಯಲ್ಲಿ ಆಸಲ ಅಡಚಣೆ ಸ್ವಲ್ಪ ಹೆಚ್ಚಾದದ್ದರಿಂದ ಮೆಹನತ್ತೂ ಹೆಚ್ಚಾಯಿತು. ಕಲ್ಲುಬಂಡೆಗಳು ಅಡ್ಡಬಂದಾಗ ಘೋಷವನ್ನು ಹೆಚ್ಚಿಸುವ ಪ್ರವಾಹದಂತೆ ನಮ್ಮ ಲಬೋಲಬೋ ಶಬ್ದವು ಉಬ್ಬಿ ಮೊರೆಯಿತು. ನಾರಾಯಣಶಾಸ್ತ್ರಿಗಳು ಮನೆಯ ಒಂದಂಕಣವನ್ನು ಕೀಳಿಸಿ ಹೊಸ ದಾಗಿ ಕಟ್ಟಬೇಕೆಂದು ಒಂದಷ್ಟು ತೊಲೆ ದೂಲ ತರಿಸಿ ಹಾಕಿಕೊಂಡಿದ್ದರು. ಸಾಮಾನ್ಯವಾಗಿ ಅವರು ಕೊಡುತ್ತಿದ್ದದ್ದು ಒಂದು ಕೊರಡು. ಆ ವರ್ಷ ಮನೆ ಕೀಳಿಸಿದ ಮಹಾರಾಯ ಕೊರಡಿನ ಜತೆಗೆ ಹಳೇ ಗಳ ಕೆಲವು ಕೊಡಿ ಎಂದು ನಾವು ಕೇಳಿದೆವು. ಅವರು ಕೊರಡನ್ನೂ ಕೊಡುವುದಿಲ್ಲ ಎಂದರು. ತಂಟೆಗೆ ಬಂದಿತು. ಎಷ್ಟು ಮಾತನಾಡಿದರೂ ಅವರು ನ್ಯಾಯಕ್ಕೆ ಒಪ್ಪಲಿಲ್ಲ. ಅಷ್ಟರಲ್ಲಿ ಲಂಗಡಾಭೀಮ— ಅವನೇ ನಮ್ಮ ಬನಕೇಚಿಗುರಿನ ಕವಿ—ನಾವು ಇತ್ತಲಾಗಿ ಮಾತನಾಡುತ್ತಿ ದ್ದರೆ ಅತ್ತಲಾಗಿ ಶಾಸ್ತ್ರಿಗಳ ಮನೆಯ ಹಿತ್ತಲ ಕಡೆಯಿಂದ ಒಳಕ್ಕೆ ಹೊಕ್ಕು ತಾನು

ಹೊರುವಷ್ಟು ಗಳ ಒಂದು ಸಣ್ಣ ಕಂಬ ಇಷ್ಟನ್ನು ಕಂಕುಳಲ್ಲಿರಿಕಿಕೊಂಡು ಕಾಮನ್ನ ಸುಡುವ ಕಡೆಗೆ ನಡೆದುಬಿಟ್ಟನು. ಮೊದಲು ನಾವು ಮೋಸಮಾಡಬೇಕೆಂದು ಉದ್ದೇಶಿಸದೇ ಇದ್ದರೂ ಮೋಸ ನಡೆದಮೇಲೆ ನಮ್ಮವರನ್ನು ಬಿಟ್ಟುಕೊಡುವುದೇ ಎಂದು ನಾವು ಕಂಡೂಕಾಣದಂತಿದ್ದು ಶಾಸ್ತ್ರಿಗಳೊಡನೆ ಇನ್ನೆರಡುಮಾತನಾಡಿ "ಒಳ್ಳೆಯದು ಶಾಸ್ತ್ರಿಗಳೇ ನಿಮಗೇಕೆ ಅಸಮಾಧಾನ ನೀವು ಮನೆಕಟ್ಟುವರು. ಆ ಸೌದೇತುಂಡು ತೊಲೆಯೋ ಜಂತೆಯೋ ಆಗಬಹುದು ಇಟ್ಟುಕೊಳ್ಳಿ''ಎಂದು ಹೇಳಿ ಹೊರಟು ಹೋದೆವು. ನಮ್ಮ ಮಾತಿನ ವೈಖರಿಯಿಂದ ಶಾಸ್ತ್ರಿಗಳು ಸ್ವಲ್ಪ ಬೆರಗಾದರೆಂದು ಕಾಣುತ್ತದೆ. ಸಾಯಂಕಾಲ ಹಿತ್ತಲಕಡೆ ಹೋದಾಗ ಗಳ ಕಂಬ ಮಾಯವಾಗಿರುವುದನ್ನು ನೋಡಿದರು. ಖರದೂಷಣರಂತೆ ಭೋಯೆಂದು ಕಾಮನಸುಡುವ ಕಡೆಗೆ ನುಗ್ಗಿಬಂದರು. ನಮ್ಮ ಕಾವಲವರು ಕೂಗು ಹಾಕಲು ಕಾಷ್ಠಸಂಪಾದನೆಗೆ ಹೋಗಿದ್ದ ನಾವೆಲ್ಲ ಪರಕೆ ಒಬ್ಬರ ಕೈಯಲ್ಲಿ ಹಳೇಮೊರ ಒಬ್ಬರ ಕೈಯಲ್ಲಿ ಎರಡು ಬೆರಣಿ ಒಬ್ಬರ ಕೈಯಲ್ಲಿ ಹಿಡಿದುಕೊಂಡು ಓಡಿಬಂದೆವು. ದೊಡ್ಡ ವಾಗ್ಯುದ್ಧವಾಯಿತು. ಶಾಸ್ತ್ರಿಗಳು ನನ್ನ ಗಳ ಕಂಬ ಹೊತ್ತು ಸುಟ್ಟರೆ ನಿಮ್ಮ ಬುರುಡೆ ಒಡೆಯುತ್ತೇನೆ ಎಂದರು. ಲಂಗಡಭೀಮ ಮತ್ತೆ ಕವಿಯಾದ. ಬುರುಡೆ ಒಡೆಯುವುದು ಸುಳ್ಳು, ಬುರುಡೆ ಹೊಡೆಯುತ್ತೀರಿ ಎಂದ ತಿರುಮಳ ಬುರುಡೆ ಒಡೆಯಬೇಡಿ-ಬುರುಡೆ ತೆಗೆಯಿರಿ ಒಂದು ಚಿಟಿಕೆ ನಸ್ಯಕೊಡಿ ಎಂದು ಹೇಳಿ ನಸ್ಯಹಾಕಿಕೊಳ್ಳುವಂತೆ ಶಿರ್ ಎಂದು ಉಸಿರೆಳೆದು ಶಾಸ್ತ್ರಿಗಳು ನಸ್ಯವನ್ನು ಸೇವಿಸಿದಾಗ ಆಗುತ್ತಿದ್ದ ಗದ್ದಲವನ್ನು ಅಣಕಿ ತೋರಿಸಿದನು. ಶಾಸ್ತ್ರಿಗಳು ಏನಾದರೂ ಬಿಡಲಿಲ್ಲ. ಕೊನೆಗೆ ಲಂಗಡಾಭೀಮ ಎಲಾ ನೀವು ಶಾಸ್ತ್ರಿಗಳನ್ನ ಇಲ್ಲೇ ಹಿಡಿದುಕೊಂಡಿರಿ ಇನ್ನೂ ಇರೋ ಗಳ ಕಂಬ ಎಲ್ಲಾ ತಂದುಬಿಡುತ್ತೇನೆ ಎಂತ ಶಾಸ್ತ್ರಿಗಳ ಮನೆಕಡೆ ಹೊರಟ. ಶಾಸ್ತ್ರಿಗಳಿಗೆ ಬುದ್ಧಿಬಂತು. ಈಗ ಹೋದದ್ದಲ್ಲದೆ ಇನ್ನು ಬೇರೆ ಹೋಗುವುದೇನೋ ಎಂದು ಅವರು ಭೀಮನನ್ನು ಬಹುವಿಧವಾಗಿ ಆಶೀರ್ವದಿಸುತ್ತ ಅವನ ಹಿಂದೆ ಹೊರಟರು. ಭೀಮನು ಆ ಪ್ರಯತ್ನ ಮಾಡಿದ್ದೂ ಶತ್ರುವನ್ನು ಬೇರೆ ಕಡೆ ತಿರುಗಿಸುವುದಕ್ಕಾಗಿಯೇ. ಇಂಥ ಪ್ರತ್ಯುತ್ಪನ್ನಮತಿಯಿಂದಲಲ್ಲವೇ ಶಿವಾಜಿ, ಪೃಥ್ವೀರಾಜ, ಸೀಜರ್ ಮುಂತಾದ ಸೇನಾನಾಯಕರು ಯುದ್ಧಗಳನ್ನು ಗೆದ್ದು ಚರಿತ್ರೆಯಲ್ಲಿ ಪ್ರಸಿದ್ಧರಾದದ್ದು. ಭೀಮನ ಅದೃಷ್ಟ ಕೆಟ್ಟದು. ಅವನು ಈ ಕಾಲದಲ್ಲಿ ಹುಟ್ಟಿ ಅವನ ಬುದ್ಧಿಯೆಲ್ಲಾ ಒಂದಿಷ್ಟು ಕಾಮನಕಟ್ಟಿಗೆ ಸಂಪಾದಿಸುವುದರಲ್ಲಿ ವೆಚ್ಚವಾಯಿತು. ಶಾಸ್ತ್ರಿಗಳು ಗಳಕ್ಕೆ ತಂಟೆಮಾಡಿದಂತೆ ಕಸದಹೆಂಗಸು ಬೋರಿ ಹಳೇಪರಕೆಗೆ ತಂಟೆಮಾಡಿದಳು. ಹೀಗೆಯೇ ಇನ್ನೂ ಬೇರೆ ಕೆಲವುಕಡೆಯೂ ತಂಟೆಯಾಯಿತು. ನಾವು ಅಲ್ಲಲ್ಲ

ಸಾಫ್ ಯುದ್ಧಮಾಡಿ ಕಪ್ಪ ತೆಗೆದುಕೊಂಡೇ ಬಂದೆವು. ಹಾಗೂ ಹೀಗೂ ರಾಶಿ ದೊಡ್ಡದಾಯಿತು.

ರಾತ್ರಿ ರಾಶಿಗೆ ಬೆಂಕಿ ಹಚ್ಚಿದ್ದನ್ನೂ ರಾಶಿ ಉರಿದದ್ದನ್ನೂ ಹೀಗೆಂದು ನಾನು ವರ್ಣಿಸಬೇಕಾದದ್ದಿಲ್ಲ. ಅದರ ಅಂದವನ್ನು ಹೇಳುವುದಕ್ಕೆ ನನಗೆ ಮಾತು ತಿಳಿಯದು. ನಾವು ಕಾಮನನ್ನು ಸುಡುತ್ತಿದ್ದದ್ದು ಊರಿನ ಪಕ್ಕದ ಒಂದು ಬೈಲಿನಲ್ಲಿ. ನಮ್ಮೂರಿಗೆ ಹೋಗಿಬರುವ ದಾರಿ ಬಾವಿ ತೋಟಕ್ಕೆ ಹೋಗುವ ದಾರಿ ಆ ಬಯಲಿನಲ್ಲಿ ಹಾಯ್ದುಹೋಗುವುದು. ಅಲ್ಲಿ ನಾಲ್ಕೈದು ಅಶ್ವತ್ಥಮರಗಳಿವೆ. ಒಂದು ಕಡೆ ಒಂದು ಆಂಜನೇಯ ದೇವಾಲಯ. ದೂರದಲ್ಲಿ ದಾರಿ ಹಾಯ್ದುಹೋಗುವ ಕೆರೆಯಕಟ್ಟೆ ಕಾಣಿಸುತ್ತದೆ. ಕಾಮನನ್ನು ಸುಡುವುದಕ್ಕೆ ಅದು ಪ್ರಶಸ್ತವಾದ ಜಾಗ. ಬೆಳದಿಂಗಳಲ್ಲಿ ಮಂಕಾಗಿದ್ದ ಮನೆ ಮರ ಎಲ್ಲದರ ಮೇಲೆ ಉರಿಯ ಬೆಳಕು ಬಿದ್ದಾಗ ನಮಗೆ ಇದೇನು ಭೂಲೋಕವೋ ಇನ್ನೆಲ್ಲಾದರೂ ಇದೇವೋ ಎನ್ನುವಂತೆ ತೋರುತ್ತಿತ್ತು. ನಾವು ಹಾಕಿದ್ದ ರಾಶಿಯೂ ದೊಡ್ಡದಾಗಿತ್ತು. ಯಜ್ಞೇಶ್ವರನು ಆ ರಾತ್ರಿ ಊರ ಕಸವನ್ನೆಲ್ಲಾ ಸುಟ್ಟುಬಿಟ್ಟನು. ಜ್ಞಾನದಿಂದ ನಿರ್ಮಲವಾದ ಮನಸ್ಸಿನಲ್ಲಿ ಮೋಹಜಾಲ ಉರಿಯುವಂತೆ ಊರ ಹಳೆಯಮೊರ ಪೊರಕೆ ಹಳೆಯಮಕ್ಕರಿ ಹಳೆಯ ಕಸವೆಲ್ಲ ಆ ಬೆಳದಿಂಗಳ ರಾತ್ರಿಯಲ್ಲಿ ಉರಿದುಹೋಯಿತು. ಮಾರನೆಯ ದಿನ ಊರಲ್ಲೆಲ್ಲ ಹೊಸಮೊರ, ಹೊಸಪೊರಕೆ ಹೊಸಮಕ್ಕರಿ. ಅಥವಾ ಹಳೆಯದು ಇದ್ದರೆ ತಿಳಿದೂತಿಳಿದು ಕಸವನ್ನು ಬಿಡಲಾರದೆ ಕಟ್ಟಿಕೊಂಡವರ ಮನೆಗಳಲ್ಲಿ. ಊರಿನ ಕಸವನ್ನು ಸುಡುವುದಕ್ಕೆ ಎಲ್ಲರೂ ಸೇರಿದಂತೆ ಅವರವರ ಮನಸ್ಸಿನ ಕಸವನ್ನು ಸುಡುವುದಕ್ಕೆ ಯತ್ನಮಾಡಿದಲ್ಲಿ ಊರಿನ ಬದುಕು ಅಂದು ಆ ರಾತ್ರಿಯಂತೆ ನಿರ್ಮಲವಾಗಿದ್ದಿರಬೇಕು. ಫಾಲ್ಗುಣದ ಪೂರ್ಣಚಂದ್ರನ ಸೊಗಸನ್ನು ಹೇಳಬಲ್ಲ ಕವಿ ಯಾರು? ದೇವರ ಕೃಪೆಯಿಂದ ಇಂತ ಸೊಗಸನ್ನು ವರ್ಣನೆಯಿಂದ ಕೇಳಿ ತಿಳಿಯಬೇಕಾದದ್ದಿಲ್ಲ. ಮನಸ್ಸುಮಾಡಿದರೆ ಯಾರಾದರೂ ಅದನ್ನು ಅನುಭವಿಸಿ ಸುಖಪಡಬಹುದು. ಕಾಮನನ್ನು ಸುಡುವಾಗ ಊರಿನ ಜನವೆಲ್ಲ ಬಂದು ಸೇರಿತು. ನಾರಾಯಣಶಾಸ್ತ್ರಿಗಳು ಕೂಡ "ಹೋದ ಗಳ ಹೋಯಿತು–ನನ್ನ ಗಳ ಸುಡುವುದನ್ನು ಎಲ್ಲರೂ ನೋಡಿ ಸಂತೋಷಪಟ್ಟರೆ ನಾನ್ಯಾಕೆ ಬಿಡಬೇಕು" ಎಂದು ತಾವೂ ಬಂದು ನಿಂತು ಸೊಗಸನ್ನು ನೋಡಿದರು. ನಾವೆಲ್ಲ ಸೊಗಸು ಇದೆಂದು ತಿಳಿಯದೆ ಅದರಲ್ಲಿ ಮುಳುಗಿ ತೇಲಿ ನಿಜವಾದ ಆನಂದವನ್ನು ಅನುಭವಿಸಿದೆವು. ರಾತ್ರಿ ಹನ್ನೆರಡುಗಂಟೆ ಮುಗಿದ ಮೇಲೆ ನಮ್ಮನಮ್ಮ ಮನೆಗಳಿಗೆ ಹೋದೆವು.

ಮಾರನೆಯದಿನ ಬೂದಿ ಕಲೆಸುವುದು ಮತ್ತು ಸಾವಿತ್ರಮ್ಮನವರ ವ್ರತ. ನಾವೆಲ್ಲ ಕಾಮನನ್ನು ಸುಟ್ಟ ಜಾಗದಲ್ಲಿ ಸೇರಿದೆವು. ನಮ್ಮ ಕಿಟ್ಟು ಸಾವಿತ್ರಮ್ಮನವರನ್ನು ಕರೆಯುವುದಕ್ಕೆ ಹೋದ. ಅದಕ್ಕೆ ಮೊದಲೇ ಅವರು ಸ್ನಾನಮಾಡಿ ಸಿದ್ಧವಾಗಿದ್ದು ಹೇಳಿದೊಡನೆ ಬಂದರು. ಕುಳಿತುಕೊಳ್ಳುವುದಕ್ಕೆ ವಾಡಿಕೆಯಾದ ಜಾಗದಲ್ಲಿ ಕುಳಿತರು. ಆ ಸಲ ಸಾವಿತ್ರಮ್ಮನವರ ವ್ರತಕ್ಕೆ ಒಂಬತ್ತನೆಯ ವರ್ಷವೋ ಹತ್ತನೆಯ ವರ್ಷವೋ. ಸಾವಿತ್ರಮ್ಮನವರು ಬೂದಿಹಾಕಿಸಿಕೊಳ್ಳುವುದಕ್ಕೆ ಬಂದಾಗ ದಾರಿಯಲ್ಲಿ ಜನ ಬರುತ್ತಾಹೋಗುತ್ತಾ ಇದ್ದರು. ಎಂದಿನಂತೆ ಹೊತ್ತುಹೋಗದ ಹತ್ತುಜನ ಅಲ್ಲಿ ನಿಂತು ನೋಡುತ್ತಿದ್ದರು. ನಾವು ಮೂರುಜನ ಮಾಮೂಲಿನಂತೆ ಒಂದುಹಿಡಿ ಬೂದಿಯನ್ನು ತೆಗೆದುಕೊಂಡು ಅವರ ಬಳಿ ಬಂದೆವು. ಇನ್ನೇನು ಅವರ ಮೇಲೆ ಹಾಕಬೇಕು. ಆ ವೇಳೆಗೆ ಸಾವಿತ್ರಮ್ಮನವರು ಒಮ್ಮೆಗೆ ಜನದಕಡೆ ನೋಡಿದರು. ಒಂದು ಕ್ಷಣದಲ್ಲಿ ಎದ್ದುನಿಂತರು. ಗುಂಪಿನ ಕಡೆಗೆ ದುರದುರನೆ ನೋಡಿ ಶೀನೀ ಎಂದು ಕೂಗುಹಾಕಿ ಕೆಳಗೆ ಬಿದ್ದುಬಿಟ್ಟರು.

ನಮಗೆ ಹಿಂದುಮುಂದು ತೋರಲಿಲ್ಲ. ಬೂದಿಯನ್ನು ಹಿಡಿದಂತೆಯೇ ಸುಮ್ಮನೆ ನಿಂತಿದ್ದೆವು ಗುಂಪಿನಿಂದ ಯಾವನೋ ಒಬ್ಬನು ಹತ್ತಿರಕ್ಕೆ ಬಂದನು. ಸಾವಿತ್ರಮ್ಮನವರ ಹತ್ತಿರಕ್ಕೆ ಬಂದು ಇದೇನುವೇಷ ಏನುಅವಸ್ಥೆ ಎಂದು ಸ್ವಲ್ಪ ನೀರು ತನ್ನೀ ಅಪ್ಪಾ ಎಂದನು. ಹುಡುಗರು ಇವನು ಯಾರು ಏನು ಎನ್ನದೆ ಅವನು ಹೇಳಿದಂತೆ ಮಾಡಿದರು. ನಾನು ಏನೂ ತೋರದೆ ಅವನ ಮುಖವನ್ನೇ ನೋಡುತ್ತಿದ್ದೆನು. ಅವನ ಅಂದವಾದ ಆ ಹಣೆಯಮೇಲೆ ಇದ್ದ ಒಂದು ಗಾಯದ ಗುರ್ತು ಹೊರತು ನನಗೆ ಇನ್ನೇನೂ ಕಾಣಲಿಲ್ಲ.

ಬಂದವನು ಶ್ರೀನಿವಾಸಶಾಸ್ತ್ರಿ ಅಥವಾ ಶೀನೀ. ನಾವು ಬೂದಿಯನ್ನು ಹಿಡಿದುಕೊಂಡು ಸಾವಿತ್ರಮ್ಮನವರ ಬಳಿ ಬಂದಾಗ್ಯೆ ಅವನು ದಾರಿಯಿಂದ ಬಂದು ಅಲ್ಲಿ ನಿಂತಿದ್ದ ಗುಂಪನ್ನು ಸೇರಿದನಂತೆ. ಇದೇನೋ ನಡೆಯುತ್ತಿದೆಯೆಂದು ನಿಂತು ಅಲ್ಲಿ ಒಬ್ಬನನ್ನು ಇದೇನೆಂದು ಕೇಳಿದನಂತೆ. ಆಗ ನಾವು ಅವನನ್ನು ನೋಡಲೂ ಇಲ್ಲ, ಏನು ನಡೆಯಿತೆಂಬುದನ್ನು ಕೇಳಲೂ ಇಲ್ಲ. ಅವನ ಮಾತಿಗೆ ಗುಂಪಿನಲ್ಲಿ ಯಾರೋ ಗಂಡ ದೇಶಾಂತರದಲ್ಲಿ ತೀರಿಹೋದ ಎಂತ ಈಕೆ ಕಾಮನಬೂದಿ ಚೆಲ್ಲಿಸಿಕೊಳ್ಳುತ್ತಿದಾಳೆ ಎಂದರಂತೆ. "ಇವರು ಯಾರು" "ನರಸಿಂಹಶಾಸ್ತ್ರಿಗಳ ಸೊಸೆ" "ಇವರ ಹೆಸರೇನು?" "ಸಾವಿತ್ರಮ್ಮ" "ಸಾವಿತ್ರಮ್ಮನೇ" ಎಂದು ಶ್ರೀನಿವಾಸಶಾಸ್ತ್ರಿ ಆಕೆಯ ಕಡೆ ನೋಡಿದನಂತೆ. ಈ ಮಾತು ನಡೆಯುತ್ತಿದ್ದಾಗಲೇ ಸಾವಿತ್ರಮ್ಮ

ನವರು ಎದ್ದುನಿಂತು ಗುಂಪಿನಕಡೆ ನೋಡಿ ಕೂಗಿಕೊಂಡು ಬಿದ್ದದ್ದು. ಶ್ರೀನಿವಾಸಶಾಸ್ತ್ರಿ ಹುಡುಗರು ತಂದ ನೀರಿನಿಂದ ಹೆಂಡತಿಗೆ ಶೈತ್ಯೋಪಚಾರವನ್ನು ಮಾಡಿದನು. ಇವನು ಸಾವಿತ್ರಮ್ಮನವರ ಗಂಡನೆಂದು ತಿಳಿದ ಒಂದುಕ್ಷಣ ನಾವು ಹಬ್ಬ ಅರ್ಧಕ್ಕೆ ನಿಂತುಹೋಯಿತಲ್ಲಾ ಎಂದು ಕ್ಷಿಣ್ಣರಾದೆವು. ಉತ್ತರಕ್ಷಣದಲ್ಲಿ ಆ ಸಲದ ಹಬ್ಬ ಎಂದಿಗಿಂತ ಹೆಚ್ಚಾಗಿ ಸಾಂಗವಾಯಿತೆಂದು ಉತ್ಸಾಹದಿಂದ ಜಯಘೋಷವನ್ನು ಹಾಕಿದೆವು.

ಗಂಡಂದಿರು ಹೆಂಡತಿಯರ ವಿಷಯದಲ್ಲಿ ಬಹಳ ಪ್ರೀತಿ ತೋರಿಸುವರೆಂದು ಜನರಲ್ಲಿ ಒಂದು ಭಾವನೆ ಇದೆ. ಪ್ರಾಯಶಃ ಇದು ನಿಜವಾದದ್ದೇ ಆದರೆ ಅಂದು ಆ ಗಂಡನು ಆ ಹೆಂಡತಿಯಲ್ಲಿ ತೋರಿದ ಮಮತೆ ಕನಿಕರ ದಾಕ್ಷಿಣ್ಯ ಭ್ರಮೆ ಇದನ್ನೆಲ್ಲ ಒಳಗೊಂಡ ಆ ಪ್ರೇಮರಸಕ್ಕೆ ಸಮನಾದ ಪ್ರೇಮವನ್ನು ಬೇರೆ ಯಾವಾಗಲೂ ನಾನು ಕಣ್ಣಿನಲ್ಲಿ ನೋಡಿಲ್ಲ. ಸಂದರ್ಭವೂ ಅಂಥದೇ ಸರಿ.

## (೪)

ಬಂದವನು ಶೀನಿ ಹೌದೇ ಅಲ್ಲವೇ ಎಂದು ಊರಿನಲ್ಲಿ ಒಬ್ಬಿಬ್ಬರು ಮಾತನ್ನೆತ್ತಿದರು. ಹೆತ್ತವಳೂ ಕೈಹಿಡಿದವಳೂ ಒಪ್ಪಿದಮೇಲೆ ಪಂಚಾಯಿತಿ ಏಕೆ ಎನ್ನಬಹುದು. ಆದರೆ ಆಸ್ತಿಯ ಹಂಚಿಕೆ ಮಾತು ಇದ್ದದ್ದರಿಂದ ಈ ಸಂದೇಹಕ್ಕೆ ಕಾರಣ ಉಂಟಾಯಿತು. ಶೀನೀ ಸಂದೇಹಪಟ್ಟವರ ವಿಷಯದಲ್ಲೆಲ್ಲಾ ಅವರ ಅಪ್ಪ ತಾತ ಮುತ್ತಾತನ ಕತೆ ಎಂತೆಂತ ಅವಮಾನಕರವಾದದ್ದನ್ನೋ ಹೇಳಿದನು. ಎಲ್ಲರೂ ಬಾಯಿಮುಚ್ಚಿಕೊಂಡರು. ಆಸ್ತಿ ಮತ್ತೆ ಹಂಚಿಕೆಯಾಯಿತು. ಶ್ರೀನಿವಾಸಶಾಸ್ತ್ರಿ ಊರಿನಲ್ಲಿ ಒಬ್ಬ ಸಂಸಾರಿಯಾಗಿ ನಿಂತನು. ಈಗ ಅವನಿಗೆ ಇಬ್ಬರು ಗಂಡುಮಕ್ಕಳಾಗಿದಾರೆ. ಈ ಸಲ ನಾನು ನಮ್ಮ ಊರಿಗೆ ಹೋಗಿದ್ದಾಗ ಶ್ರೀನಿವಾಸಶಾಸ್ತ್ರಿಯ ಪ್ರಯಾಣದ ಕತೆಯನ್ನೆಲ್ಲಾ ಕೇಳಿದೆನು. ಅವನ ಜತೆಯಲ್ಲಿದ್ದವನು ಅವನನ್ನು ಕಲಿಕತ್ತೆಯಲ್ಲಿ ಬಿಟ್ಟುಬಂದಾಗ ಶಾಸ್ತ್ರಿ ಕಲಿಕತ್ತೆಯ ಒಂದು ಛತ್ರದಲ್ಲಿ ಪ್ಲೇಗಿನಿಂದ ಸಾಯುವಂತೆ ಬಿದ್ದಿದ್ದನು. ಜತೆಯವನು ಅವನು ಸತ್ತನೆಂದೇ ಎಣಿಸಿಯೋ ಹೆದರಿಯೋ ಅವನನ್ನು ಮ್ಯುನಿಸಿಪಾಲಿಟಿಯವರಿಗೆ ಒಪ್ಪಿಸಿ ತಾನು ಊರಿಗೆ ಬಂದುಬಿಟ್ಟನಂತೆ. ಶಾಸ್ತ್ರಿ ಬಂದಮೇಲೆ ಅವನೂ ಅದನ್ನು ಒಪ್ಪಿಕೊಂಡನಂತೆ. ಶಾಸ್ತ್ರಿಯು ಕಾಯಿಲೆಯಿಂದ ಉಳಿದುಕೊಂಡು ಉತ್ತರದೇಶದಲ್ಲೆಲ್ಲಾ ಓಡಿಯಾಡಿ ಯೋಗಾಭ್ಯಾಸದ ಒಳಮರ್ಮವನ್ನು ತಿಳಿಯುವುದಕ್ಕಾಗಿ ಅಷ್ಟುವರ್ಷ ಯಾರ್ಯಾರನ್ನೋ ಸೇವಿಸಿದನಂತೆ. ಅವನು ಹೇಳಿದ್ದನ್ನೆಲ್ಲಾ ಬರೆಯುವುದಕ್ಕೆ ಇಲ್ಲಿ ಅವಕಾಶವಿಲ್ಲ. ಬರೆದರೆ

ಅದೇನೆ ಒಂದು ಕತೆಯಾಗುವುದು. ಹಾಗೆಯೇ ನಾನು ಸಾವಿತ್ರಮ್ಮನವರನ್ನೂ ಮಾತನಾಡಿಸಿದೆನು. ವಿಧವೆಯ ವೇಷದಲ್ಲಿ ಹೇಗೋ ಇದ್ದ ಅವರ ಆಕಾರವು ಈಗ ಮಂಗಳಗೌರಿಯ ಪ್ರತಿಬಿಂಬದಂತಾಗಿದೆ. ಧೃಢವ್ರತದಿಂದ ಅವರು ಯಾವ ಫಲ ವನ್ನು ಮುಂದಿನಜನ್ಮಕ್ಕೆಂದು ಬೇಡಿದರೋ ಅದನ್ನು ಈ ಜನ್ಮದಲ್ಲಿಯೇ ಪಡೆದರು. ಅವರಿಗೆ ನಮ್ಮೂರಿನಲ್ಲಿ ಈಗ ಮದುವೆ ಮುಂತಾದ ಸಂದರ್ಭದಲ್ಲಿ ಎಲ್ಲರಿಗಿಂತ ಮೊ ದಲು ಅರಿಶಿನ ಕುಂಕುಮ ಕೊಡುತ್ತಾರೆ. ಹೆಣ್ಣುಮಕ್ಕಳ ಕೈಯಲ್ಲಿ ಗೌರೀಹಬ್ಬದ ಬಾಗಿನಗಳನ್ನು ಕೊಡಿಸುವಾಗ ಮೊದಲು ಇವರ ಹತ್ತಿರ ಕರೆತಂದು ಕೊಡಿಸಿ "ಸಾವಿತ್ರಮ್ಮ, ನಿಮ್ಮ ವ್ರತ ದೃಢವಾದ ವ್ರತ, ನಿಮ್ಮ ಆಶೀರ್ವಾದ ಚೆನ್ನಾಗಿ ಫಲಿಸುತ್ತೆ, ಹುಡುಗಿಗೆ ಚೆನ್ನಾಗಿ ಹರಸಿ" ಎನ್ನುತ್ತಾರೆ.

---

# ಕಾವ್ಯಾವಲೋಕನ

**ಶ್ರೀ ಸಮರ್ಥ ರಾಮದಾಸಸ್ವಾಮಿಗಳ ಚರಿತ್ರವು**—ಲೇಖಕರು ಮತ್ತು ಪ್ರಕಾಶಕರು, ರಾಮಚಂದ್ರ ತ್ರ್ಯಂಬಕ ಕರ್ಪೂರ, ಮ್ಯಾನೇಜರ, ಸದ್ಬೋಧಚಂದ್ರಿಕೆ, ಆನಂದವನ. ೧೯೨೬. ಡೆಮ್ಮಿ ಪುಟಗಳು ೧೬೦. ಬೆಲೆ ರೂ. ೧—೨—೦.

ಯಾವುದಾದರೂ ಒಂದು ದೇಶದಲ್ಲಿ ಹುಟ್ಟಿ ಬಾಳಿದ ಮಹಾಪುರುಷರ ಜೀವನ ಚರಿತ್ರೆಗಳನ್ನು ಒಟ್ಟುಗೂಡಿಸಿದರೆ ಅದು ಆ ದೇಶದ ಚರಿತ್ರೆಯಾಗುತ್ತದೆ ಎಂದು ಹೇಳುವುದುಂಟು. ಈ ಹೇಳಿಕೆಯನ್ನು ಪೂರ್ತಿಯಾಗಿ ಒಪ್ಪಲಾಗುವುದಿಲ್ಲವಾದರೂ ಇದರಲ್ಲಿ ಬಹುಮಟ್ಟಿನ ನಿಜಾಂಶವಿದೆಯೆಂದು ಒಪ್ಪಿಕೊಳ್ಳಬೇಕು. "ರಾಜಾ ರಾಷ್ಟ್ರಸ್ಯ ಕಾರಣಂ" ಎಂಬುದಕ್ಕೆ ಇದೇ ಅರ್ಥ. ಈ ಹೇಳಿಕೆಯನ್ನು ಅಂಗೀಕರಿಸಿಕೊಂಡರೇ ರಾಜರ ಆಳಿಕೆಗಳನ್ನು ಹಿಡಿದು ಬರೆದಿರುವ ಚರಿತ್ರೆಗಳ ಲೇಖನ ಕ್ರಮವನ್ನು ಒಪ್ಪಬಹುದು. ಯಾವುದಾದರೊಂದು ಕಾವ್ಯದ ಪ್ರತಿಯೊಂದು ಪ್ರಧಾನ ಘಟನೆಯೂ ಅದರ ನಾಯಕನಿಗೆ ಸಾಕ್ಷಾತ್ತಾಗಿಯೋ ಪರಂಪರೆಯಿಂದಲೋ ಸಂಬಂಧಿಸಿಯೇ ಇರುವಂತೆ, ಯಾವುದಾದರೊಂದು ಚರಿತ್ರಭಾಗದ ಘಟನೆಗಳೂ ಆ ಕಾಲದ ರಾಜನಿಗೆ—ಅಥವಾ ಮಂತ್ರಿ ಮುಂತಾದ ಕೆಲವು ಪ್ರಧಾನಪುರುಷರಿಗೆ—ಸಂಬಂಧಿಸಿಯೇ ಇರುತ್ತವೆ. ಆದ್ದರಿಂದಲೇ ಒಬ್ಬ ಅರಸನ ಕಾಲದಲ್ಲಿ, ಕುಡಿದ ನೀರು ಅಲ್ಲಾಡದಂತಿದ್ದ ರಾಜ್ಯವು ಮತ್ತೊಬ್ಬ ವಿಪರೀತಗುಣದ ಅರಸನ ಕೈಗೆ ಬಂದ ಕೂಡಲೆ ಅಲ್ಲೋಲಕಲ್ಲೋಲವಾಗಿ ದೇಶಕ್ಷೋಭವಾಗಿರುವುದನ್ನು ನೋಡಿದ್ದೇವೆ—ಅಥವಾ ಓದಿದ್ದೇವೆ. ದುಷ್ಟಮೃಗ ಭರಿತವಾದ ಕಾಡಿನಲ್ಲಿ ನೆಲೆಸಿ ತಮ್ಮ ತಪೋಮಹಿಮೆಯಿಂದ ಅಲ್ಲಿ ಶಾಂತಿಯನ್ನು ನೆಲೆಗೊಳಿಸಿ ಆರಣ್ಯವನ್ನು ಉದ್ಯಾನವನವಾಗಿ ಮಾಡುವ ತಪಸ್ವಿಯಂತೆ, ಅವ್ಯವಸ್ಥೆಗೆ ಸಿಕ್ಕಿದ ದೇಶವನ್ನು ರಾಜ್ಯತಂತ್ರ ಶಕ್ತಿಯಿಂದ ಪುನಃ ಕಟ್ಟಿ ದೇಶಭಕ್ತಿಯನ್ನೂ ಸತ್ವವನ್ನೂ ಧರ್ಮವನ್ನೂ ನೆಲೆಗೊಳಿಸಿ ಚಿರಸ್ಥಾಯಿಯಾದ ಕೀರ್ತಿಯನ್ನು ಗಳಿಸಿಕೊಂಡ ಮಹಾಪುರುಷರನ್ನೂ ನೋಡಿದ್ದೇವೆ ಆದ್ದರಿಂದ ಪ್ರಧಾನಪುರುಷರ ಚರಿತ್ರೆಯೇ ದೇಶದ ಚರಿತ್ರೆಯೆಂದು ಏಕೆ ಹೇಳಬಾರದು? ಈಗ ಯಾರಾದರೂ ತಿಲಕರ, ಗೋಖಲೆಯವರ ಅಥವಾ ಮ. ಗಾಂಧಿಯವರ ಜೀವನಚರಿತ್ರೆಯನ್ನು ಬರೆಯುವುದಕ್ಕೆ ಹೋದರೆ ಈ ಕಾಲದ ಹಿಂದೂ ದೇಶದ ಚರಿ

ತ್ರೆಯ ಮುಖ್ಯಾಂಶಗಳನ್ನೆಲ್ಲಾ ತರದೇ ಬರೆಯುವುದು ಸಾಧ್ಯವೇ? ಎಂಥವನೂ ಹತ್ತರಲ್ಲಿ ಹನ್ನೊಂದಾಗಿ ಹೋಗುವ ಈ ಪ್ರಜಾಪ್ರಾಧಾನ್ಯದ ಕಾಲದಲ್ಲಿಯೇ ಹೀಗಾದರೆ, ರಾಜನು ನಿಜವಾದ ರಾಜನಾಗಿದ್ದು ರಾಜ್ಯಸೂತ್ರಗಳನ್ನೆಲ್ಲಾ ತನ್ನ ಕೈಯಲ್ಲಿಟ್ಟುಕೊಂಡಿದ್ದ ಕಾಲದಲ್ಲಿ ರಾಜನ ಚರಿತ್ರೆಯೇ ದೇಶದ ಚರಿತ್ರೆಯೆಂದು ಹೇಳಿದರೆ ತಪ್ಪಾಗಲಾರದು. ಹೀಗಿರಲು ಆ ಕಾಲದಲ್ಲಿ, (ಕುರುಬನನ್ನು ಮಹಾಕವಿಯಾದ ಕಾಳಿದಾಸನಾಗಿ ಮಾಡಿದಂತೆ) ಅನಾಮಧೇಯರನ್ನು ಮಹಾ ಸತ್ತ್ವಶಾಲಿಗಳಾದ ರಾಜರನ್ನಾಗಿ ಮಾಡಿದ ವಿದ್ಯಾರಣ್ಯಸ್ವಾಮಿಗಳು, ರಾಮದಾಸಸ್ವಾಮಿಗಳು ಇಂಥ ಮಹಾ ಪುರುಷರ ವಿಚಾರದಲ್ಲಿ ಹೇಳುವುದೇನು?

ಜೀವನಚರಿತ್ರೆಯು ದೇಶಚರಿತ್ರೆಯೇ ಆಗದಿದ್ದರೂ ಅದೂ ಒಂದು ವಿಧವಾದ ಚರಿತ್ರೆಯೇ ಆದ್ದರಿಂದ, ಜೀವನಚರಿತ್ರಲೇಖಕರೂ ದೇಶಚರಿತ್ರಲೇಖಕರ ಮಾರ್ಗದಲ್ಲಿಯೇ ಹೋಗಬೇಕು. ಆದರೆ ನಾವು ಪುರಾಣಿಕರು, ಚರಿತ್ರಲೇಖಕರಲ್ಲ; ಚರಿತ್ರಲೇಖನ ವಾಸನೆಯು ನಮಗೆ ಹಿಂದಿನಿಂದ ಬಂದಿಲ್ಲ. ಆದ್ದರಿಂದ ಈಗ ನಮ್ಮಲ್ಲಿ ದೊಡ್ಡದೊಡ್ಡ ಪದವೀಧರರು ಬರೆಯುತ್ತಿರುವ ಚರಿತ್ರೆಗಳೂ ಸರಿಯಾದ ಬಣ್ಣಕ್ಕೆ ಬರುವುದು ಅಪರೂಪ. ಜೀವನ ಚರಿತ್ರೆಗಳ ಪಾಡೂ ಅಷ್ಟೇ ಆಗಿದೆ. ಹಿಂದೆ ಆದದ್ದನ್ನು ತಿಳಿದುಕೊಂಡು ಆ ತಿಳಿವಳಿಕೆಯ ಬೆಳಕಿನಲ್ಲಿ ಈಗ ನಾವು ಮಾಡಬೇಕಾದ ಕಾರ್ಯವನ್ನು ಹೆಚ್ಚು ಪರಿಷ್ಕಾರವಾಗಿ ಮಾಡುತ್ತ ಉತ್ತಮತರವಾಗಿ ಬಾಳುವುದೇ ಚರಿತ್ರವ್ಯಾಸಂಗದ ಉದ್ದೇಶ್ಯ. ಆದ್ದರಿಂದ ಚರಿತ್ರೆಯ ನಿಜವಾದ ಉಪಯೋಗವನ್ನು ಪಡೆಯಬೇಕಾದರೆ ಅದರಲ್ಲಿ ಯಾಥಾರ್ಥ್ಯಕ್ಕೆ ಪ್ರಾಶಸ್ತ್ಯ ಕೊಡಬೇಕು. ಚರಿತ್ರೆಗೆ ಯಾಥಾರ್ಥ್ಯವೇ ಜೀವ. ಆದರೆ ಯಥಾರ್ಥವಾದದ್ದನ್ನು ಗ್ರಹಿಸುವುದು ಕಷ್ಟ. ಪುರಾಣಗಳನ್ನು ಬರೆದವರೂ ಸುಳ್ಳನ್ನು ಬರೆಯುತ್ತೇವೆಂದು ಬರೆದಿಲ್ಲ; ಅದೆಲ್ಲವೂ ನಿಜವೆಂದೇ ಅವರ ಭಾವ. ವೇದದಲ್ಲಿಯಾದರೂ 'ಅರ್ಥವಾದ' ವನ್ನು ಒಪ್ಪಿಕೊಂಡಾರು, ಪುರಾಣಗಳಲ್ಲಿ ಅದು ಸಲ್ಲದು. ನಿಜವಾದ ಸಂಗತಿಯೇನೆಂದರೆ, ವಿವರ್ಣವಾದ ಯಾಥಾರ್ಥ್ಯದ ನಿಜಸ್ವರೂಪವನ್ನು ನಮ್ಮ ಸವರ್ಣದೃಷ್ಟಿಯಿಂದ ಅರಿಯುವುದು ಅಸಾಧ್ಯ. ಪ್ರತಿಯೊಬ್ಬರೂ ಕಣ್ಣಿನೊಳಗೆ ಒಂದೊಂದು ಬಣ್ಣದ ಗಾಜನ್ನು ಇಟ್ಟುಕೊಂಡೇ ಇರುತ್ತೇವೆ. ಒಬ್ಬನಿಗೆ ಹಸುರಾಗಿ ಕಂಡದ್ದು ಮತ್ತೊಬ್ಬನಿಗೆ ಹಳದಿಯಾಗಿ ಕಂಡೀತು; ಅಷ್ಟೇಯೆ. ಅದರ ನಿಜವಾದ ಬಿಳಿಯ ಬಣ್ಣವನ್ನು ನೋಡಬೇಕಾದರೆ ಆ ಗಾಜಿನ ಚೂರನ್ನು ಕಣ್ಣಿನಿಂದ ತೆಗೆದಿಡಬೇಕು. ಇದು ಒಂದು ವಿಧವಾದ ಬ್ರಹ್ಮವಿದ್ಯೆ; ಎಲ್ಲರಿಗೂ ಸಾಧ್ಯವಾದದ್ದಲ್ಲ. ಕೃಷ್ಣನು "ಸ್ತ್ರೀಯರಿಗೆ ಕಾಮನಂತೆಯೂ, ಅರ್ಥಿಗಳಿಗೆ ಕಲ್ಪವೃಕ್ಷದಂತೆಯೂ ಶತ್ರುಗಳಿಗೆ ಯಮನಂತೆಯೂ ಕಂಡನು"

ಎಂದು ಒಬ್ಬ ಆಲಂಕಾರಿಕನು ಉಲ್ಲೇಖಿಸಿದ್ದಾನೆ. ಚರಿತ್ರೆಯನ್ನು ಬರೆಯುವುದಕ್ಕೆ ಹೋದರೆ ಆಗುವುದೂ ಹೀಗೆಯೇ. ಚರಿತ್ರೆಯ ಮಾತಿರಲಿ, ಮೈಸೂರು ನವರಾತ್ರಿಯ ನೋಟದಂಥ ಒಂದು ಸಣ್ಣ ಸಂಗತಿಯನ್ನು ತೆಗೆದುಕೊಳ್ಳೋಣ. ಅದರ ಅನುಭವವು ಸರ್ಕಾರದ ಒಬ್ಬ ದೊಡ್ಡ ಅಧಿಕಾರಿ, ಪೊಲೀಸಿನವನು, ಪರಸ್ಥಳದಿಂದ ಬಂದ ನೋಟಕ, ಸ್ಥಳಿಕನಾದ ಒಬ್ಬ ಬಡ ಸಂಸಾರಿ ಇವರೆಲ್ಲರಿಗೂ ಒಂದೇ ವಿಧವಾಗಿರುವುದೇ? ಹೀಗೆಯೇ ನಾನಾ ಮುಖವಾದ ಒಂದು ದೇಶದ ಚರಿತ್ರೆಯೇ ಆಗಲಿ ಒಬ್ಬ ಮಹಾಪುರುಷನ ಜೀವನವೇ ಆಗಲಿ ಲೇಖಕನ ಯೋಗ್ಯತಾಪಾತ್ರೆಯಲ್ಲಿ ಹಿಡಿಸುವಷ್ಟು, ಮತ್ತು ಅದರ ಗುಣವನ್ನು ಅನುಸರಿಸಿ, ಸಿಕ್ಕುತ್ತದೆಯೇ ಹೊರತು ಅಖಂಡವಾಗಿ ಸಿಕ್ಕುವುದು ಅಸಾಧ್ಯ. ಅದರಲ್ಲಿಯೂ ಜೀವನಚರಿತ್ರೆಗೆ ನಾಯಕನು ಧಾರ್ಮಿಕ ಪುರುಷನಾದರೆ, ಅಂಥ ಚರಿತ್ರೆಯನ್ನು ಬರೆಯುವಷ್ಟು ಕಷ್ಟವಾದ ಕೆಲಸ ಮತ್ತೊಂದಿರುವುದಿಲ್ಲ. ಧರ್ಮವು ಆಂತರಿಕವಾದದ್ದು, ಬಾಹ್ಯವಾದದ್ದಲ್ಲ; ಆದರೆ "ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ" ಸೃಷ್ಟಿಕರ್ತನು ಹೊರಗನ್ನು ನೋಡುವುದಕ್ಕೆ ಶಕ್ತಿಕೊಟ್ಟಂತೆ ಒಳಗನ್ನು ನೋಡಲು ಕೊಡಲಿಲ್ಲ. ಅಲ್ಲದೆ, ನಮಗೆ ಇಲ್ಲದ್ದನ್ನೂ ನಾವು ಮಾಡಲಾರದ್ದನ್ನೂ ದೇವತೆಗಳಲ್ಲಿಯೂ ಅವರ ಆವಾಸಸ್ಥಾನಗಳಲ್ಲಿಯೂ ಆರೋಪಿಸುವಂತೆ, ನಮಗಿಂತ ದೊಡ್ಡವರಲ್ಲಿಯೂ ಆರೋಪಿಸುವುದುಂಟು; ಅವು ಗಳು ಇದ್ದರೆ ಅವುಗಳನ್ನು ಗುಣಾಕಾರ ಮಾಡುವುದುಂಟು. ಆದ್ದರಿಂದಲೇ ಧಾರ್ಮಿಕ ಪುರುಷರ ಚರಿತ್ರೆಯನ್ನು ಬರೆಯುವುದಕ್ಕೆ ಹೋದರೆ ಅವುಗಳಲ್ಲಿ ಅದ್ಭುತಕಾರ್ಯಗಳು ಬರದೆ ಇರುವುದಿಲ್ಲ; ಬುದ್ಧ ಕ್ರಿಸ್ತ ಮುಂತಾದವರನ್ನು ಮೊದಲು ಮಾಡಿಕೊಂಡು ಈಗಿನ ಮಠಾಧಿಪತಿಗಳವರೆಗೆ ಅದ್ಭುತಕಾರ್ಯಗಳನ್ನು ಮಾಡದಿರುವವರಾರು? ಅದ್ಭುತಕಾರ್ಯಗಳೂ ಲೀಲೆಗಳೂ ಪವಾಡಗಳೂ ಅವರ ಜೀವನದೊಳಗಿನ ಹೂರಣವಾಗಿ ಹೋಗಿವೆ—ಅವರ ಚರಿತ್ರೆಯಂತೂ ಈ ಭಾವವನ್ನು ಕೊಡುತ್ತದೆ. ಮಹಾಪುರುಷರ ಜೀವನದಲ್ಲಿ ಅದ್ಭುತಗಳು ನಡೆಯಬಹುದು. ಆದರೆ ಅವುಗಳನ್ನೇ ಮುಂದುಮಾಡುವುದರಿಂದ ಮನುಷ್ಯಸಾಮಾನ್ಯನ ವ್ಯವಹಾರಕ್ಕೆ ಏನು ಪ್ರಯೋಜನ? 'ಅವರಂತೂ ದೊಡ್ಡವರು, ಹಾಗೆ ಮಾಡಿದರು ಎಂದರೆ, ನಾವೂ ಮಾಡುವುದು ಸಾಧ್ಯವೇ?'—ಎಂದು ಮನಸ್ಸನ್ನು ಜೋಲುಬಿಡುವುದಾಗುತ್ತದೆಯೇ ಹೊರತು ಆ ತೇಜಸ್ಸಿನಿಂದ ನಮ್ಮ ಹಣತೆಯನ್ನು ಹತ್ತಿಸಿಕೊಂಡು ನಮ್ಮ ಗುಡಿಸಿಲನ್ನು ಬೆಳಕು ಮಾಡಿಕೊಳ್ಳುವುದಕ್ಕಾಗುವುದಿಲ್ಲ. ಅಲ್ಲದೆ, ಅದ್ಭುತಕಾರ್ಯಗಳು ನಾಟಕಶಾಲೆಯ ಹೊರಗಡೆಯಲ್ಲಿ ನಡೆಯುತ್ತಿರುವ ವಾದ್ಯಗಳ ಹಾಗೆ. ಅವುಗಳ

ಮುಂದೇ ಪದ್ಮಾಸನ ಹಾಕಿಕೊಂಡು ಪರಿಷ್ಕಾರವಾಗಿ ಕುಳಿತುಬಿಡುವವನಿಗೆ ನಾಟಕದ ನೋಟವೇ ತಪ್ಪಿಹೋಗುತ್ತದೆ.

"ರಾಮದಾಸಸ್ವಾಮಿಗಳ ಚರಿತ್ರೆ" ಯೂ ಸ್ವಲ್ಪ ಈ ಜಾತಿಯ ಗ್ರಂಥವಾಗಿದೆ; ಆದರೂ ಇದರ ಹಿಂದೆ ಪ್ರಕಟವಾದ 'ಶೇಷಾಚಲಸಾಧುಗಳ ಚರಿತ್ರೆ' ಗಿಂತ ಉತ್ತಮ. ಈ ಸಾಧುಗಳ ಸತ್ಸಂಗವು ದೊರೆತವರಿಂದ ಅವರ ಜೀವನವಿಚಾರಗಳನ್ನು ಕೇಳಿಬಲ್ಲೆವು. ಆದರೆ ಯಾವ ಘಟನೆಗಳಿಂದ ಅವರಲ್ಲಿ ನಮಗೆ ಪೂಜ್ಯತೆಯುಂಟಾಗಿದೆಯೋ ಅವು ಆ ಚರಿತ್ರೆಯಲ್ಲಿ ಅದೃಶ್ಯವಾಗಿ ಅಥವಾ ಮೂಲೆಗೆ ಬಿದ್ದು ಮೊದಲಿಂದ ತುದಿಯವರೆಗೆ ಬರಿಯ ಅದ್ಭುತಗಳೇ ತುಂಬಿ ಹೋಗಿವೆ. ಈ ಗ್ರಂಥಗಳು ಜನರಂಜಕವಾಗಿರುವುದೇನೋ ನಿಜ; ಆದರೆ ವಸ್ತುತಃ ಈ ಕ್ರಮದಿಂದ ಯಾಥಾರ್ಥ್ಯಕ್ಕೆ ಎಷ್ಟುಮಟ್ಟಿಗೆ ಗೌರವಕೊಟ್ಟಂತಾಯಿತು? ವ್ಯಕ್ತಿಜ್ಞಾನವು ಏಕಮುಖವಾಗಿ ಆದಂತಾಯಿತೇ ಸರ್ವತೋಮುಖವಾಗಿಯೂ ಆಯಿತೇ? ರಾಮದಾಸರು ರಾಮಲಕ್ಷ್ಮಣರೊಡನೆ ಮಾತನಾಡಿದರೋ ಬಿಟ್ಟರೋ, ಅವರ ಜೊತೆಯಲ್ಲಿ ಊಟಮಾಡಿದರೋ ಬಿಟ್ಟರೋ, ಅವರು ಆಂಜನೇಯನ ಅವತಾರ ಹೌದೋ ಅಲ್ಲವೋ ಇದರ ವಿಸ್ತರದಿಂದ ಏನು ಫಲ? ಜನಗಳಲ್ಲಿ ಭಕ್ತಿಯುಂಟಾಗಬಹುದೆಂದರೆ ಇದೇನು ಹರಿಕಥೆಯೇ? ಇಂಥ ಮರಳಿನಮೇಲೆ ಕಟ್ಟಿದ ಭಕ್ತಿಮಂದಿರಕ್ಕೆ, ಅದರಲ್ಲಿಯೂ ಈಗಿನಕಾಲದಲ್ಲಿ, ಎಂದಿದ್ದರೂ ಅಪಾಯವೇ! ಅವರ ಜೀವನದಲ್ಲಿ ದೃಢವಾದ ತಳಪಾಯಕ್ಕೆ ಅನುಕೂಲವಾದ ಬೇರೆ ಸಾಮಗ್ರಿಗಳು ಸಿಕ್ಕದಿದ್ದರಂತೂ ಸರಿ; ಅವು ಯಥೇಷ್ಟವಾಗಿ ಸಿಕ್ಕುವಾಗಲೂ ಕಿಂಕೃತಿಯೇಕೆ? ಶ್ರೀಕೃಷ್ಣನು ಅರ್ಜುನನನ್ನೂ, ವಿದ್ಯಾರಣ್ಯರು ಹರಿಹರನನ್ನೂ ಉದ್ದೀಪನಗೊಳಿಸಿ ಅವರು ಕರ್ಮದಲ್ಲಿ ತೊಡಗುವಂತೆ ಮಾಡಿ ಅವರಿಗೆ ಸಾರಥ್ಯ ಮಾಡಿದಂತೆ ರಾಮದಾಸರೂ ಶಿವಾಜಿಯನ್ನು ಕರ್ಮಪರನನ್ನಾಗಿಸಿ ಅವನಿಗೆ ಸಾರಥ್ಯಮಾಡಿದರು. ನಿಜವಾದ —ಎಂದರೆ ಸ್ವಾರ್ಥತ್ಯಾಗಪೂರ್ವಕವಾದ --ಕರ್ಮವೂ ನಿಜವಾದ ಭಕ್ತಿಯೂ ಎರಡೂ ಫಲದಲ್ಲಿ ಒಂದೇ ಆಗಿ ಪರಿಣಮಿಸುವುವು. ಆದರೂ ಈಗಿನ ಕಾಲಕ್ಕೆ ಭಕ್ತಿಬೋಧೆಯು ಹರಿಕಥೆಗಳಿಗಿರಲಿ; ಮಹಾಪುರುಷರ ಜೀವನಚರಿತ್ರೆಗಳಿಂದ ಕರ್ಮೋದ್ದೀಪನವಾಗಬೇಕು. ರಾಮದಾಸರ ಮತ್ತು ವಿದ್ಯಾರಣ್ಯರ ಚರಿತ್ರೆಯಿಂದಲೂ ಇದು ಆಗದಿದ್ದರೆ ಏನು ಗತಿ?

ಮ|| ರಾಮಚಂದ್ರ ತ್ರ್ಯಂಬಕ ಕರ್ಪೂರರವರು ಬರೆದಿರುವ ಗ್ರಂಥವು ತಕ್ಕಮಟ್ಟಿಗೆ ದೊಡ್ಡದಾಗಿದೆ; ಬಹು ವಿಷಯಗಳಿಂದ ತುಂಬಿದೆ. ಆದರೆ ಅವರು ಯಾವ

ಯಾವ ಆಧಾರಗಳ ಮೇಲೆ ಈ ಗ್ರಂಥವನ್ನು ಬರೆದಿದ್ದಾರೆಂಬುದನ್ನು ತಿಳಿಸಿಲ್ಲ. ಚರಿತ್ರ ಲೇಖನದಲ್ಲಿ ಆಧಾರಗ್ರಂಥಗಳು ಯೋಗ್ಯವಾಗಿರತಕ್ಕದ್ದು ಬಹು ಮುಖ್ಯವಾದ ಸಂಗತಿ. ಅವುಗಳ ಗುಣದೋಷಗಳ ಮೇಲೆ ಚರಿತ್ರೆಯ ಗುಣದೋಷಗಳೂ ಹೋಗುತ್ತವೆ.

ಶೈಲಿಯು ಸುಲಭವಾಗಿದೆ; ಭಾಷೆಯಲ್ಲಿ ಧಾರವಾಡದವರಿಗಾಗಲಿ ಮೈಸೂರು ಮಂಗಳೂರು ಕಡೆಯವರಿಗಾಗಲಿ ವಿಶೇಷ ವೈಲಕ್ಷಣ್ಯಗಳಿರುವಂತೆ ಕಾಣುವುದಿಲ್ಲ. 'ಸದ್ಬೋಧಚಂದ್ರಿಕೆ' 'ಸದ್ಗುರು'ಗಳ ಶೈಲಿಯೇ ಹೀಗೆಂದು ಹೇಳಬಹುದು.

ಎ. ಆರ್. ಕೃ.

---

**ಶ್ರೀ ರಾಮಕೃಷ್ಣವಚನಾಮೃತ.** (ಪ್ರಥಮ ಭಾಗ.) ಬೆಂಗಳೂರು ಬಸವನಗುಡಿಯಲ್ಲಿರುವ ಶ್ರೀ ರಾಮಕೃಷ್ಣಾಶ್ರಮದಿಂದ ಪ್ರಕಟಿಸಲ್ಪಟ್ಟದ್ದು. ಡೆಮ್ಮಿ ಪುಟಗಳು ೨೭೨. ಬೆಲೆ ರೂ. ೧—೮—೦.

ಈಗಿನ ಕಾಲದಲ್ಲಿ ಸ್ವಾಮಿ ವಿವೇಕಾನಂದರ ಹೆಸರನ್ನು ಕೇಳದಿರುವ ಭಾರತೀಯನು ಯಾರೂ ಇರಲಾರನು. ಪ್ರಪಂಚದಲ್ಲೆಲ್ಲಾ ಸಂಚಾರಮಾಡಿ ತಮ್ಮ ಉದಾಹರಣೆಯಿಂದಲೂ ಜ್ಞಾನದಿಂದಲೂ ವಾಗ್ಧೋರಣೆಯಿಂದಲೂ ಭರತಖಂಡಕ್ಕೇ ಗೌರವವನ್ನು ತಂದುಕೊಟ್ಟವರಲ್ಲಿ ಅವರು ಮುಖ್ಯರು. ಆದರೆ ಇಂಥ ವಿವೇಕಾನಂದರನ್ನು ವಿವೇಕಾನಂದರನ್ನಾಗಿ ಮಾಡಿದವರು ಅವರ ಗುರುಗಳಾದ ಶ್ರೀ ರಾಮಕೃಷ್ಣಪರಮಹಂಸರು. ಶ್ರೀ ವಿವೇಕಾನಂದರು ಕೇವಲ ವ್ಯಾಖ್ಯಾನ; ಆ ವ್ಯಾಖ್ಯಾನಕ್ಕೆ ಮೂಲಸೂತ್ರ ಶ್ರೀ ರಾಮಕೃಷ್ಣರು. ಸರ್ವಧರ್ಮಗಳೂ ಸತ್ಯವೆಂದೂ ಸರ್ವಮತಗಳ ಉದ್ದೇಶವೂ ಒಂದೇ ಎಂದೂ ಅವರು ಸ್ವಾನುಭವದಿಂದ ಲೋಕಕ್ಕೆ ಸಾರಿ "ಸರ್ವಧರ್ಮಸಮನ್ವಯ"ವನ್ನು ಸ್ಥಾಪಿಸಿದರು. ಧರ್ಮದ ಹೆಸರಿನಲ್ಲಿ ನಡೆಯುವ ಅನಾಹುತಗಳನ್ನು ಯೋಚಿಸಿದರೆ ಈ ಕಾರ್ಯವು ಎಷ್ಟು ಲೋಕೋಪಕಾರಕವೆಂದು ಹೇಳಬೇಕಾಗಿಲ್ಲ. ಇವರ ಚರಿತ್ರೆಯನ್ನು ಬಂಗಾಳಿಯಲ್ಲಿ ಬರೆದಿರುವವರೊಳಗೆ ಮಹೇಂದ್ರನಾಥಗುಪ್ತರು ಒಬ್ಬರು. ಇವರು ಮೂಲಗ್ರಂಥವನ್ನು "ಶ್ರೀ ರಾಮಕೃಷ್ಣ ಚರಿತಾಮೃತ" ಎಂಬ ಹೆಸರಿನಲ್ಲಿ ಐದು ಭಾಗಗಳಾಗಿ ಬರೆದು ಪ್ರಕಟಿಸಿದ್ದಾರೆ. ಈಗ ಅವಲೋಕನಕ್ಕೆ ವಿಷಯವಾಗಿರುವ ಗ್ರಂಥವು ಅವುಗಳಲ್ಲಿ ಮೊದಲನೆಯ ಭಾಗದ ಕನ್ನಡ ಭಾಷಾಂತರ. ಮ|| ಗಳಾದ ಎಸ್. ಜಿ. ಗೋವಿಂದರಾಜ ಅಯ್ಯಂಗಾರ್ಯರೂ, ವಿದ್ವಾನ್ ಎನ್. ಎಸ್. ತಿರುನಾರಣಯ್ಯಂಗಾರ್ಯರೂ ಈ ಭಾಷಾಂತರವನ್ನು ಮಾಡಿದವರೆಂದು 'ಅವತಾರಿಕೆ' ಯಿಂದ ತಿಳಿದುಬರುತ್ತದೆ. ಭಾಷಾಂತರದ ಭಾಷೆಯೂ ಶೈಲಿಯೂ ಚೆನ್ನಾಗಿವೆ.

ಎ. ಆರ್. ಕೃ.

---

**ಸ್ಕೌಟುಗಳ ಕನ್ನಡ ಕೈಪಿಡಿ** (ಸಚಿತ್ರ). ಮ|| ಎಂ. ಆರ್. ಶ್ರೀನಿವಾಸಮೂರ್ತಿ ಬಿ.ಎ., ಅವರಿಂದ ರಚಿತವಾಗಿ ಮೈಸೂರು ಬಾಯ್‌ಸ್ಕೌಟ್ ಮಂಡಲಿಯಿಂದ ಪ್ರಕಟಿಸಲ್ಪಟ್ಟದ್ದು. ಕ್ರೌನ್ ಪುಟಗಳು ೨೨೭, ಬೆಲೆ ೮ ಆಣೆ.

ಸ್ಕೌಟುಪದ್ಧತಿಯ ವಿಚಾರವಾಗಿ ನಮ್ಮ ಜನರಲ್ಲಿ ಅನೇಕರಿಗೆ ಒಂದುವಿಧವಾದ ದುರ್ಭಾವವಿದೆ. ಇದರಿಂದ ಉಪಯೋಗವಿಲ್ಲವೆಂದು ಅವರೂ ಇದನ್ನು ಉಪಯೋಗಿಸಿಕೊಂಡಿಲ್ಲವೆಂದು ಸ್ಕೌಟು ಪಕ್ಷಪಾತಿಗಳೂ ಹೇಳುತ್ತಿರುವರು. ಈ ಕಾಲದಲ್ಲಿ ಸ್ಕೌಟಿನ ಸ್ವರೂಪವನ್ನು ವಿವರಿಸಿ ಈ ಪುಸ್ತಕವನ್ನು ಪ್ರಕಟಿಸಿದ್ದು ಒಳ್ಳೆಯ ಕೆಲಸವಾಯಿತು.

ಈ ಗ್ರಂಥವು ಮುಖ್ಯವಾಗಿ ಬೇಡನ್ ಪೊವೆಲ್‌ಸಾಹೇಬರ ಗ್ರಂಥದ ಆಧಾರದಮೇಲೆ ಬರೆದದ್ದು. ಮ|| ಶ್ರೀನಿವಾಸಮೂರ್ತಿಗಳಿಗೆ ಕನ್ನಡವನ್ನು ಬರೆದುಬರೆದು ಕೈ ಪಳಗಿರುವುದರಿಂದ ನಮಗೆ ಅಪರಿಚಿತವಾದ ಅನೇಕ ಸಂಗತಿಗಳು ಇದರಲ್ಲಿ ಅಚ್ಚ ಕನ್ನಡರೂಪವನ್ನು ತಾಳಿ ನಿಂತಿವೆ. ಆದರೂ ಇದರಲ್ಲಿ ಇಂಗ್ಲಿಷ್ ಪದಗಳಿಗೂ ಹೆಸರುಗಳಿಗೂ ಏನೂ ಕಡಿಮೆಯಿಲ್ಲ. ನಮ್ಮದೇಶದ ಹುಡುಗರಿಗೂ ಜನರಿಗೂ ಮನಸ್ಸಿಗೆ ಅಂಟುವಂಥ ಅನೇಕ ದೃಷ್ಟಾಂತಗಳೂ ಕಥೆಗಳೂ ಮಧ್ಯೆಮಧ್ಯೆ ಸೇರಿಸಲ್ಪಟ್ಟಿರುವುದರಿಂದ ಇದು ಸ್ಕೌಟು ಹುಡುಗರಿಗೆ ಎಷ್ಟು ಉತ್ತೇಜಕವೂ ಉಪಯುಕ್ತವೂ ಆಗುವುದೋ ಇತರರಿಗೆ ಅಷ್ಟು ರಸವತ್ತೂ ಆಗಬಹುದು. ಇದನ್ನು ಓದುವುದರಿಂದ ಕನ್ನಡಿಗರಿಗೆ ಸ್ಕೌಟಿನಲ್ಲಿರುವ ದುರ್ಭಾವವೂ ಅನಾದರವೂ ಬಹುಮಟ್ಟಿಗೆ ಕಮ್ಮಿಯಾಗಬಹುದೆಂದು ಭಾವಿಸುತ್ತೇವೆ. ಹಿಂದೂದೇಶದ ಮಿಕ್ಕ ಯಾವ ದೇಶಭಾಷೆಯಲ್ಲಿಯೂ ಸ್ಕೌಟುವಿಷಯವನ್ನು ಇಷ್ಟು ವಿಸ್ತಾರವಾಗಿ ಪ್ರತಿಪಾದಿಸುವ ಗ್ರಂಥವಿಲ್ಲವೆಂದು ಹೇಳುತ್ತಾರೆ.

---

**ನವಯುಗ**—ಮಹಾವಿದ್ವಾನ್ ಕೆ. ಆರ್. ಚಕ್ರವರ್ತಿ ಸರಳಕವಿಸೂರಿ ವಿದ್ಯಾವಿಭೂಷಣ ಇವರಿಂದ ಬರೆಯಲ್ಪಟ್ಟದ್ದು. ಕ್ರೌನ್ ಪುಟಗಳು ೫೯.

ಇದು ಈಗ ಮೈಸೂರುಸಂಸ್ಥಾನದ ದಿವಾನ್‌ಪದವಿಯನ್ನು ಅಲಂಕರಿಸಿರುವ ಸರ್ ಎ. ಆರ್. ಬಾನರ್ಜಿಯವರ ತಂದೆಗಳಾದ ಶ್ರೀಯುತ ಶಶಿಪಾದ ಬಾನರ್ಜಿಯವರ (೧೮೪೦-೧೯೨೪) ಚರಿತ್ರೆಯಾಗಿದೆ. ಇಂಗ್ಲೀಷ್ ಮತ್ತು ಬಂಗಾಳಿ ಭಾಷೆಯಲ್ಲಿರುವ ಕೆಲವು ಗ್ರಂಥಗಳ ಆಧಾರದಮೇಲೆ ಈ ಗ್ರಂಥವು ರಚಿತವಾಗಿದೆಯೆಂದೂ '' ನಮ್ಮ ಈಗಿನಕಾಲವು ನವಯುಗವಾಗಿ ಪರಿಣಮಿಸಲೆಂದು ಶಶಿಪಾದ ಬಾನರ್ಜಿಯವರು ಸಾಹಸಪಟ್ಟು ತಮ್ಮ ಇಷ್ಟಾರ್ಥವನ್ನು ಸಾಧಿಸುತ್ತಿದ್ದುದರಿಂದ ಈ ಗ್ರಂ

ಥಕ್ಕೆ ನವಯುಗ'' ವೆಂದು ಹೆಸರಿಟ್ಟಂತೆಯೂ ಪೀಠಿಕೆಯಿಂದ ತಿಳಿಯುಬರುತ್ತದೆ. ದೇಶಸೇವೆ ಪರೋಪಕಾರ ಸಮಾಜಸಂಸ್ಕರಣ ಮುಂತಾದ ಕಾರ್ಯಗಳಲ್ಲಿ ನಿರತರಾಗಿದ್ದ ಶ್ರೀ ಶಶಿಪಾದ ಬಾನರ್ಜಿಯವರು "ಸೇವಾವ್ರತ" "ಬ್ರಹ್ಮರ್ಷಿ" ಎಂಬ ಬಿರುದುಗಳನ್ನು ಪಡೆದರು. ಅವರು ದಿವಂಗತರಾದ ಇಷ್ಟು ಸ್ವಲ್ಪಕಾಲದಲ್ಲಿಯೇ ನಾನಾಭಾಷೆಗಳಲ್ಲಿ ಅವರ ಚರಿತ್ರೆಗಳು ಬರೆಯಲ್ಪಡುತ್ತಿರುವುದೇ ಅವರ ಮಹತ್ವಕ್ಕೆ ನಿದರ್ಶಕವಾಗಿದೆ.

ಪುಸ್ತಕದ ತುಂಬ ಒಳ್ಳೆಯ ಹಾಫ್‌ಟೋನ್ ಚಿತ್ರಗಳಿವೆ. ಕಾಗದ ಮುದ್ರಣ ಎಲ್ಲವೂ ಮುದ್ದಾಗಿವೆ.

---

**ಸ್ವರ್ಗಾರೋಹಣಪರ್ವ**—(ತಿಮ್ಮಣಕವಿವಿರಚಿತ ಕನ್ನಡ ಮಹಾಭಾರತದ ಒಂದು ಭಾಗ.) ಕನ್ನಡ ಷಟ್ಪದೀಗ್ರಂಥಮಾಲೆ, ಪುಷ್ಪ ೨. ಪರಿಶೋಧಕರು ಮತ್ತು ಪ್ರಕಾಶಕರು. ಮ|| ಶೇಷಾಚಾರ್ಯ ಹೊಂಬಾಳಿ, ಗದಗ. ಡೆಮ್ಮಿ ಪುಟಗಳು ೨೦, ಬೆಲೆ ೨ ಆಣೆ.

---

# ವ ಸ್ತು ಕೋ ೯ ಶ

ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳಾಗಿದ್ದು, ಪ್ರಬುದ್ಧ ಕರ್ಣಾಟಕದ ಪೋಷಕರೂ ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ಗಣಿತಶಾಸ್ತ್ರೋಪನ್ಯಾಸಕರೂ ಆಗಿರುವ ಮ|| ಕೆ. ಎ. ಶ್ರೀಕಂಠೇಶ್ವರನ್, ಬಿ. ಎಸ್‌ಸಿ. ಎಲ್‌ಎಲ್. ಬಿ. ಯವರು ಈ ಸಾರಿ ಎಫ್. ಸಿ. ಎಸ್. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಮೊದಲನೆಯವರಾಗಿ ನಿಂತರೆಂದು ತಿಳಿಸಲು ಸಂತೋಷಪಡುತ್ತೇವೆ. ಹೀಗೆ ವರ್ಷೇವರ್ಷೇ ದೊಡ್ಡದೊಡ್ಡ ಪರೀಕ್ಷೆಗಳಲ್ಲಿ ನಮ್ಮವರು ಜಯಶೀಲರಾಗಿ ಅಗ್ರಸ್ಥಾನವನ್ನು ಪಡೆಯುತ್ತಿರುವರೆಂಬುದು ಅವರಿಗೂ ಅವರ ಇಷ್ಟಮಿತ್ರರಿಗೂ ಆನಂದಜನಕವೆಂಬ ಮಾತು ಹಾಗಿರಲಿ; ಇದು ನಮ್ಮ ವಿಶ್ವವಿದ್ಯಾಲಯಕ್ಕೂ ಸಂಸ್ಥಾನಕ್ಕೂ ಗೌರವಾವಹವೆಂದು ಧಾರಾಳವಾಗಿ ಹೇಳಬಹುದು. ಸಂಘವು ಈ ಮೂಲಕ ಮ|| ಶ್ರೀಕಂಠೇಶ್ವರನ್‌ರವರನ್ನು ಅಭಿನಂದಿಸಿ ಅವರು ಉತ್ತರೋತ್ತರಾಭಿವೃದ್ಧಿಯನ್ನೂ ಆಯುರಾರೋಗ್ಯೈಶ್ವರ್ಯಗಳನ್ನೂ ಪಡೆಯಲೆಂದು ಭಗವಂತನನ್ನು ಪ್ರಾರ್ಥಿಸುವುದು. (ಪೋಷಕರು ಪುಷ್ಟರಾದಷ್ಟೂ ಪೋಷ್ಯವರ್ಗಕ್ಕೂ ಪುಷ್ಟಿಯಾಗಿಯೇ ಆಗುವುದು !)

**ಅಭಿನಂದನ.**

---

ವಿತರಣೆಯಾಗಿ ನಡೆದ ಸಮಾರಾಧನೆಯ ಊಟಕ್ಕೆ ಹೋಗಿಬಂದವರನ್ನು 'ಅಲ್ಲಿ ಅಡಿಗೆಯೇನು ?' ಎಂದು ಕೇಳಿದರೆ ಅವರು ಸಾಮಾನ್ಯವಾಗಿ ನಿತ್ಯಕಟ್ಟಲೆಯಲ್ಲಿ ಕಂಡುಬರಬಹುದಾದ ಪರಿಕರಗಳನ್ನು ಬಿಟ್ಟು ದೊಡ್ಡ ದೊಡ್ಡ ಭಕ್ಷ್ಯಗಳನ್ನು ಮಾತ್ರ ಹೇಳಿಬಿಡುವರು. ಹಾಗೇ ಈ ವರ್ಷ ಸಂಘದಲ್ಲಿ ನಡೆದ ಕಾರ್ಯಗಳನ್ನು ತಿಳಿಸುವುದಕ್ಕೆ ಹೋದರೂ, 'ಮುದ್ದಣ' 'ಜ. ವಾಸುದೇವಯ್ಯನವರು' ಎಂದು ಎರಡು ಹೆಸರು ಹೇಳಿ ಮುಗಿಸಿಬಿಡೋಣವೆನ್ನಿಸುವುದು. ಏಕೆಂದರೆ, ಸಂಘದಲ್ಲಿ ಎಂದಿನಂತೆ ನಡೆಯುವ ಉಪನ್ಯಾಸಗಳೇನು ಚರ್ಚೆಗಳೇನು ಕಾವ್ಯಪಠನಗಳೇನು ಸ್ಪರ್ಧೆಗಳೇನು ನಡೆದದ್ದೂ ನಡೆದದ್ದೇ ! ಅವಕ್ಕೇನು ಕೊರತೆ ಇಲ್ಲ. ಆದರೆ ಇವೆಲ್ಲಕ್ಕಿಂತ, ಕಣ್ಣು ಕಿವಿ ಬಾಯಿಗಳಲ್ಲಿ ಹತ್ತಿಕೊಂಡಿರುವುವು ಎರಡೇ. ಮೊದಲನೆಯದು—ವರ್ಷಾದಿಯಲ್ಲಿ, ಅಷ್ಟೇಕೆ

**ಕರ್ಣಾಟಕ ಸಂಘದ ಕಾರ್ಯಗಳು.**

ಈ ವರ್ಷದ ಉದ್ದಕ್ಕೂ, ನಮ್ಮ ಪಾಠಕರಿಗೆ ತಲೆ ಚಿಟ್ಟುಹಿಡಿದು ಹೋಗುವವರೆಗೆ, ಮುದ್ದಣನ ವಿಚಾರವನ್ನು ಸಂಗ್ರಹಿಸಿ ಪ್ರಕಟಿಸಿದ್ದು ; ಎರಡನೆಯದು ವರ್ಷಾಂತ್ಯದಲ್ಲಿ ಮ|| ಚ. ವಾಸುದೇವಯ್ಯನವರಿಗೆ ವಿಜ್ಞಾಪನಪತ್ರಿಕೆಯನ್ನು ಸಮರ್ಪಿಸಿದ್ದು. ಈ ಆಚಾರ್ಯಪೂಜಾಪ್ರಕರಣವು ಒಂದು ಅಪೂರ್ವ ಸಂತೋಷ ಸಮಯವನ್ನು ಒದಗಿಸಿತು. ಅಂದು ಬ್ರಿಟಿಷ್ ಸರ್ಕಾರದ ಶಾಸನಸಂಶೋಧಕರಾದ ರಾವ್‌ಬಹದ್ದೂರ್ ಎಚ್. ಕೃಷ್ಣಶಾಸ್ತ್ರಿಗಳು ಅಗ್ರಾಸನಾಧಿಪತ್ಯವನ್ನು ವಹಿಸಿದರು. ಅವರವರಿಗೆ ಗುರುಶಿಷ್ಯಭಾವ. ಅದನ್ನು ನೋಡಿದರೆ, ನಾರದರನ್ನು ಕೃಷ್ಣನು ಪೂಜೆಮಾಡಿದನೆಂದು ಓದುತ್ತೇವಲ್ಲಾ ಅದು ಜ್ಞಾಪಕಕ್ಕೆ ಬರುತ್ತಿತ್ತು. ಮ|| ಶಾಸ್ತ್ರಿಗಳು ಪ್ರಕೃತೋಚಿತವಾಗಿ ಹೇಳಬೇಕಾದ್ದನ್ನು ಸ್ವಲ್ಪದಲ್ಲಿ ಹೇಳಿದರೂ, ಕೈತುಂಬ ಮಾತನಾಡಿಬಿಟ್ಟರು. ಕೆಲವರ ಭಾಷಣಗಳೂ ಸಂಗೀತವೂ ಆರಂಭವಾದರೆ ಆಗ ಮಹಾಜನಗಳನೇಕರು ಅದೇ ಸಮಯವೆಂದು ಎದ್ದುಹೋಗಿ ಅದು ಮುಗಿಯುವ ತನಕ ತಮ್ಮ ಕೆಲಸವೇನಾದರೂ ಇದ್ದರೆ ಮಾಡಿಕೊಂಡೋ (ಒಂದು ನಿದ್ದೆಹೋಗಿಯೋ ?) ಬರುವುದುಂಟು. ಆದರೆ ರಾವ್‌ಬಹದ್ದೂರರವರು ಈ ಆಕ್ಷೇಪಣೆಗೆ ಗುರಿಯಾಗಲಿಲ್ಲ. ಅನಂತರ ನಡೆದ ವಿದ್ವಾನ್ ರಾ|| ಅನಂತಕೃಷ್ಣಶರ್ಮರವರ ಸಂಗೀತವೋ ! ಮ|| ಶರ್ಮರವರು ತೆಲುಗು ಸಂಸ್ಕೃತಗಳಲ್ಲಿ ವಿದ್ವಾಂಸರು, ಕವಿಗಳು, ವಿಮರ್ಶಕರು. ಇದರ ಜೊತೆಗೆ ಸಂಗೀತದಲ್ಲಿ ಒಳ್ಳೆಯ ಪಾಂಡಿತ್ಯ, ಸುಖವಾದ ಶಾರೀರ, ಒಳ್ಳೆಯ ರಸಿಕತೆ, ಸೌಜನ್ಯಸೌಶೀಲ್ಯಗಳು. ಇಷ್ಟು ಗುಣಗಳೂ ಸೇರಿದರೆ ಬರುವ ಆನಂದಕ್ಕೆ ನೆಲೆಯುಂಟೇ ? ಈ ಸಭೆಯಲ್ಲಿಯೇ ಮ|| ಬೆನಗಲ್ ರಾಮರಾಯರ 'ಮುದ್ದಣ ಸ್ವರ್ಣಪದಕ'ವನ್ನು ಉತ್ತಮವಾದ ಸಣ್ಣಕಥೆಗಾಗಿ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳಾದ ಮ|| ಕೆರೋಡಿ ಕೃಷ್ಣಮೂರ್ತಿಗಳವರಿಗೆ ಸಂಘವು ಕೊಡಿಸಿತು. ಈ ಕಥೆಯ ಶ್ರೇಷ್ಠತೆಯನ್ನು ಮ|| ಬೆನಗಲ್ ರಾಮರಾವ್, ಎಂ.ಎ.,ಎಲ್‌ಎಲ್.ಬಿ. ಯವರೂ ಮ|| ಪಂಡಿತ ಮಹಾದೇವ ಪ್ರಭಾಕರ ಪೂಜಾರರವರೂ ಮ|| ಎಸ್. ಜಿ. ಶಾಸ್ತ್ರಿ, ಎಂ.ಎಸ್‌ಸಿ. ಯವರೂ ಮುಂಚೆಯೇ ವಿಮರ್ಶಿಸಿ ಗೊತ್ತುಮಾಡಿದ್ದರು. ಹೀಗೆ ಒಳ್ಳೊಳ್ಳೆಯ ವಿದ್ವಾಂಸರ ವಾಕ್ಸಹಾಯವೂ ಬುದ್ಧಿಬಲವೂ ಧನಕನಕ ಸಂಪತ್ತೂ ನಾನಾ ರೂಪದಲ್ಲಿ ಬರುತ್ತಿರುವುದನ್ನು ನೋಡಿದರೆ, ಇವರ ಸಾಲವನ್ನು ತೀರಿಸುವುದು ಹೇಗೆ ಎಂದು ನಿರಾಶೆ ಹುಟ್ಟುವುದು. ಆದ್ದರಿಂದ, ನಮ್ಮ ಅಶಕ್ತತೆಯನ್ನು ಮುಚ್ಚಿಕೊಂಡು "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾ ಚ ನ" ಎಂದು ಅವರನ್ನು ಕುರಿತು ವೇದಾಂತವನ್ನು ಉದ್ಘೋಷಿಸಿ ಹೇಳಿಬಿಡೋಣ !

---

ಮ|| ವಾಸುದೇವಯ್ಯನವರನ್ನು ಕನ್ನಡಿಗರಿಗೆ ಹೊಸದಾಗಿ ಪರಿಚಯಮಾಡಿ ಕೊಡಬೇಕಾದದ್ದಿಲ್ಲ. ಅವರು ಕನ್ನಡದೇಶದ ಬಾಲಬಾಲೆಯರಿಗೆ **ಆಟ ಊಟ ಓಟ** ಗಳನ್ನು ಹೇಳಿಕೊಟ್ಟವರು ; ಯುವಕ ಯುವತಿಯರಿಗೆ ಕ್ಷತ್ರಿಯ ವೀರರ ಮತ್ತು ರಮಣಿಯರ ಉಚ್ಚಾದರ್ಶವನ್ನು ಉದ್ದೀಪಕವಾದ ಭಾಷೆಯಲ್ಲಿ ರೂಪುಗೊಳಿಸಿಟ್ಟು **ಆರ್ಯಕೀರ್ತಿ** ಯನ್ನು ಬೆಳಗಿದವರು. ಗುಣದಲ್ಲಿ ಶುದ್ಧವಾದ ಅಪರಂಜಿಯಂಥವರು. ಅವರಿಗೆ ಸಂಘವು ಈ ವಿಜ್ಞಾಪನಪತ್ರಿಕೆಯನ್ನು ಸಮರ್ಪಿಸಿತು :—

ಮ|| ಚ. ವಾಸುದೇವಯ್ಯನವರು.

ಕರ್ಣಾಟಕ ಸಂಘವು ಮ|| ರಾ|| ಚ. ವಾಸುದೇವಯ್ಯನವರಿಗೆ ಸಮರ್ಪಿಸಿದ ವಿಜ್ಞಾಪನಪತ್ರಿಕೆ.

ಶ್ರೀಃ

ಶ್ರೀಮತ್ಸಕಲಸದ್ಗುಣಸಂಪನ್ನರಾದ

## ಮ|| ರಾ|| ಚೆನ್ನಪಟ್ಟಣದ ವಾಸುದೇವಯ್ಯನವರ

ಸನ್ನಿಧಿಯಲ್ಲಿ

**ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕಸಂಘದ ಸದಸ್ಯರು**

ಮಾಡುವ ವಿನಯಪೂರ್ವಕವಾದ ಬಿನ್ನಹಗಳು.

ಆರ್ಯರೆ,

ನಮಗೆ ತಮ್ಮ ವಿಷಯದಲ್ಲಿರುವ ಗೌರವಭಾವವನ್ನು ಸಭೆಯಲ್ಲಿ ವ್ಯಕ್ತಪಡಿಸಿ ಆನಂದಪಡಬೇಕೆಂಬ ಬಹುಕಾಲದ ಕುತೂಹಲವು ಈದಿನ ನೆರವೇರುವಂತಾದುದಕ್ಕಾಗಿ ನಾವು ತಮಗೆ ಬಹಳ ಕೃತಜ್ಞರಾಗಿರುವೆವು.

ತಾವು ಈಗ ಮೂವತ್ತು ವರ್ಷಗಳಿಂದಲೂ ಕನ್ನಡದ ಏಳಿಗೆಗಾಗಿ ಸದ್ದಿಲ್ಲದೆ ಕೆಲಸ ಮಾಡುತ್ತಿರುವುದು ತಮ್ಮನ್ನರಿತ ಕನ್ನಡಿಗರೆಲ್ಲರಿಗೂ ಉತ್ಸಾಹಕರವಾದ ವಿಷಯವಾಗಿದೆ. ತಮ್ಮ ಕೃತಿಗಳ ಪ್ರಭಾವವನ್ನು ತಮ್ಮ ಸತ್ವಸ್ವಭಾವದ ಕಾಂತಿಯು ಮತ್ತಷ್ಟು ಬೆಳಗುತ್ತಿರುವುದು. ವಯೋವೃದ್ಧರೂ ಜ್ಞಾನವೃದ್ಧರೂ ಸಚ್ಚರಿತ್ರರೂ ಆದ ತಮ್ಮಂತಹ ಹಿರಿಯರನ್ನು ಪಡೆದಿರುವುದೇ ನಮ್ಮದೊಂದು ದೊಡ್ಡ ಭಾಗ್ಯವೆಂದು ನಾವು ಎಣಿಸಿಕೊಂಡಿರುವೆವು.

ಮಹನೀಯರೆ, ತಾವು ಮಾಡಿರುವ ಭಾಷಾಸೇವೆಯು ಅನೋಘವಾದುದು. ಎಳೆಯಮಕ್ಕಳ ನೈಜಸ್ವಭಾವವನ್ನು ಸಂಪೂರ್ಣವಾಗರಿತು ಅವರ ಮನಸ್ಸಿಗೆ ಸುಲಭವಾಗಿ ಹಿಡಿಯುವಂತೆ ಬೋಧಿಸುವ ತಮ್ಮ ಅಸಾಧಾರಣವಾದ ಕೌಶಲವನ್ನೂ ತಮಗೆ ಅವರಲ್ಲಿರುವ ಅಪಾರವಾದ ಪ್ರೇಮವನ್ನೂ ತಾವು ರಚಿಸಿರುವ 'ಕನ್ನಡಬಾಲಬೋಧೆ'

ಯು ತೋರಿಸುತ್ತಿರುವುದು. ಹಾಗೆಯೇ, ದೊಡ್ಡವರಿಗಾಗಿ ತಾವು ರಚಿಸಿರುವ ‘ಆರ್ಯಕೀರ್ತಿ’ ಎಂಬ ರಾಜಪುತ್ರವೀರಕಥಾವಳಿಯೂ ‘ಮಹಾರಾಷ್ಟ್ರಛತ್ರಪತಿಯ ಚರಿತ್ರೆ’ಯೂ, ಪಾಠಕರಲ್ಲಿ ಸದ್ಗುಣಗಳನ್ನು ಬಿತ್ತಿ, ದೇಶಾಭಿಮಾನವು ಉಕ್ಕೇರುವಂತೆ ಮಾಡುವ ತಮ್ಮ ಅತಿಶಯವಾದ ಪಾಂಡಿತ್ಯವನ್ನೂ ಜನಾನುರಾಗವನ್ನೂ ಪ್ರಕಟಗೊಳಿಸುತ್ತಿರುವುವು. ಈ ಕೃತಿಗಳು ಕನ್ನಡ ವಾಙ್ಮಯಾಂಗಣದಲ್ಲಿ ಆದರ್ಶಪ್ರಾಯಗಳಾಗಿ ನಿಂತು ಬಹುಕಾಲ ಮನ್ನಣೆಯನ್ನು ಪಡೆಯುತ್ತಿರುವುವೆಂಬುದಕ್ಕೆ ಸಂದೇಹವಿಲ್ಲ.

ತಮ್ಮ ಶೀಲಸ್ವಭಾವವಾದರೋ ತಮ್ಮ ಮುಖವರ್ಚಸ್ಸಿನಲ್ಲಿಯೇ ಬಿಂಬಿಸುತ್ತಿರುವುದು. ನಯ, ವಿನಯ, ಸಹನ, ಕಾರುಣ್ಯ, ಸತ್ಯಸಂಧತೆ ಅದಾಂಭಿಕತೆ, ನಿರ್ಮಲಚಿತ್ತತೆ, ಶಿಷ್ಟಾಚಾರವರ್ತನೆ, ಸತ್ಕಾರ್ಯೋತ್ಸಾಹ—ಈ ಸದ್ಗುಣಗಳೆಲ್ಲವೂ ತಮ್ಮಲ್ಲಿ ನೆಲಸಿರುವುವೆಂಬುದನ್ನು ತಮ್ಮನ್ನರಿತವರೆಲ್ಲರೂ ತಿಳಿದಿರುವರು.

ಹೀಗೆ ನಾವು ಹೇಳುವುದರಲ್ಲಿ ಸ್ವಲ್ಪವೂ ಅತಿಶಯೋಕ್ತಿಯಿಲ್ಲದಿದ್ದರೂ ಲೋಕಾಡಂಬರಕ್ಕೆ ವಿಮುಖರಾದ ತಮಗೆ ಇದೆಲ್ಲವೂ ರುಚಿಸದೆಂದು ನಾವು ಬಲ್ಲೆವು. ಆದರೂ ತಮ್ಮ ವಿಷಯದಲ್ಲಿ ನಮಗಿರುವ ಭಾವನೆಗಳನ್ನು ಮಿತಭಾಷೆಯಿಂದಾದರೂ ಸೂಚಿಸಿದಲ್ಲದೆ ನಮಗೆ ತೃಪ್ತಿಯುಂಟಾಗಲಾರದು ಆದುದರಿಂದ ತಾವು ತಮಗೆ ಸಹಜವಾದ ತಾಳ್ಮೆಯಿಂದ ಇದನ್ನು ನಮಗಾಗಿ ಸಹಿಸಿಕೊಳ್ಳಬೇಕೆಂದು ಬೇಡಿಕೊಳ್ಳುತ್ತೇವೆ.

ಪೂಜ್ಯರೆ, ತಮ್ಮಂಥವರ ಜೀವನವು ನಮ್ಮ ದೇಶಕ್ಕೆ ಪವಿತ್ರಕರವಾಗಿಯೂ ಮಂಗಳಪ್ರದವಾಗಿಯೂ ಉತ್ಸಾಹಜನಕವಾಗಿಯೂ ಇರುವುದು. ತಮಗೆ ಜಗದೀಶ್ವರನು ಆಯುರಾರೋಗ್ಯ ಭಾಗ್ಯಗಳನ್ನೂ ಸುಖಸಂಪತ್ತಿಯನ್ನೂ ಅನುಗ್ರಹಿಸಿ ತಮ್ಮ ಹಿತೋಪದೇಶವೂ ಆಶೀರ್ವಾದಬಲವೂ ನಮಗೆ ಚಿರಕಾಲ ದೊರೆಯುವಂತೆ ಕರುಣಿಸಲಿ ಎಂಬುದೇ

ಸೆಂಟ್ರಲ್ ಕಾಲೇಜು,
ಬೆಂಗಳೂರು.
೨೦ನೆಯ ಫೆಬ್ರುವರಿ ೧೯೨೬.

ತಮ್ಮ ಪ್ರೀತಿಗೆ ಪಾತ್ರರಾದ
**ಕರ್ಣಾಟಕಸಂಘದ ಸದಸ್ಯರ**
ಪ್ರಾರ್ಥನೆ.

ಅದಕ್ಕೆ ಪ್ರತ್ಯುತ್ತರವಾಗಿ ಅವರು ಹೀಗೆ ಅಪ್ಪಣೆಕೊಡಿಸಿದರು :—

ನಮ್ಮ ಕಾಲದ ವಿದ್ಯಾರ್ಥಿದೆಶೆಗೂ ಈ ಕಾಲದ ವಿದ್ಯಾರ್ಥಿದೆಶೆಗೂ ವಿಶೇಷ ತಾರತಮ್ಯವು ಕಾಣಬರುವುದು. ಆಗ ಕಾಲೇಜಿನ ಆವರಣದಲ್ಲಿ ಸಂಗೀತಕ್ಕಾಗಲಿ ಸಾಹಿತ್ಯಕ್ಕಾಗಲಿ ಈ ವೈಭವವು ಇರಲಿಲ್ಲ. ಸಂಗೀತವೂ ಸಾಹಿತ್ಯವೂ, ವಿನೋದವೊಂದಕ್ಕೆ ಅಲ್ಲದೆ ವಿದ್ಯಾರ್ಥಿಗಳಲ್ಲಿ ದೇಶಾಭಿಮಾ

ನವೂ ಐಕಮತ್ಯವೂ ಪರಸ್ಪರ ಸೌಹಾರ್ದವೂ ಹುಟ್ಟುವುದಕ್ಕೂ ಉತ್ತಮಸಾಧನಗಳಾಗಿರುವುವು. ಸಂಗೀತ ಸಾಹಿತ್ಯಗಳಲ್ಲಿ ಅಭಿರುಚಿಮಾತ್ರವಲ್ಲದೆ, ಈಗಣ ವಿದ್ಯಾರ್ಥಿಗಳ ಕಾರ್ಯದಲ್ಲಿ ಉತ್ಸಾಹವೂ ಸಭೆಯಲ್ಲಿ ದಾಷ್ಟಿಕವೂ ಇರುವಂತೆ ಕಾಣುತ್ತಿರುವುದು.

ಪ್ರಕೃತದಲ್ಲಿ ನನ್ನ ವಿಷಯುವೇನೆಂದರೆ—ಇಂಥ ವಿದ್ವತ್ಸಭೆಯ ಮುಂದೆ ನಿಂತು ಮಾತನಾಡು ವಷ್ಟು ಸಾಹಸವನ್ನು ನಾನು ಎಂದೂ ಮಾಡಿದವನಲ್ಲ. ಆದರೂ ಪ್ರಾಜ್ಞರೂ ಕರ್ಣಾಟಕಭಾಷಾ ಸೇವಾಧುರೀಣರೂ ಆದ ಈ ಸಂಘದ ಸದಸ್ಯರು ಈ ದಿವಸ ನನಗೆ ತೋರಿಸಿದ ಗೌರವವನ್ನು ಭರಿಸ ಲಾರದೆ ಒಂದೆರಡು ಮಾತನಾಡಲು ಯತ್ನಿಸುವೆನು.

ಕೆಲವುದಿನಗಳ ಹಿಂದೆ ನನ್ನ ಮಿತ್ರರಾದ ಮ|| ರಾ|| ವೆಂಕಣ್ಣಯ್ಯನವರೂ ಗುಂಡಪ್ಪ ನವರೂ ದಯೆಮಾಡಿಸಿ ಈಗ ನನಗೆ ಮಾಡಿದ ಸತ್ಕಾರವನ್ನು ಕುರಿತು ಪ್ರಸ್ತಾಪಮಾಡಿದರು. ಅದಕ್ಕೆ ನಾನು ಅರ್ಹನಲ್ಲವೆಂದು ಹೇಳಿಕೊಂಡು ಆ ಯೋಚನೆಯನ್ನು ಬಿಡಬೇಕೆಂದು ಅವರನ್ನು ನಾನು ಪ್ರಾರ್ಥಿಸಿದೆನು. ನನ್ನ ಪ್ರಾರ್ಥನೆಯನ್ನು ಅವರು ಕಿವಿಗೆ ಹಾಕಿಕೊಳ್ಳಲಿಲ್ಲ. ಅಷ್ಟೇ ಅಲ್ಲ, ಕರ್ಣಾ ಟಕಸಂಘವೇ ತಮ್ಮ ಪರವಾಗಿ ನಿಂತಿರುವುದೆಂದು ಕೂಡ ಸೂಚಿಸಿದರು. ನಾನು ಇಷ್ಟು ದಂಡುಳ್ಳ ವರ ವಿರೋಧಕ್ಕೆ ಹೆದರಿದೆನು. ಶತ್ರುಬಲವನ್ನಾದರೂ ಪ್ರತಿಭಟಿಸಬಹುದು; ಮಿತ್ರಬಲವನ್ನು ಪ್ರತಿ ಭಟಿಸುವುದು ಸಾಧ್ಯವಲ್ಲ. ನಾನು ಸೋತು ಅವರ ವಶನಾದೆನು. ಆದರೂ ಅವರು ನನಗೆ ಮಾಡಲಿ ಚ್ಛಯಿಸಿದ ಮರ್ಯಾದೆ ನನಗೆ ಸಲ್ಲದೆಂದು ನಾನು ಅವರ ಸಂಗಡ ಅಂತರಂಗವಾಗಿ ಹೇಳಿದ ಮಾತನ್ನೇ ಈ ವಿದ್ವತ್ಸಭೆಯಲ್ಲಿ ನಾನು ಬಹಿರಂಗವಾಗಿ ಹೇಳಬೇಕಾಗಿದೆ.

ಕರ್ಣಾಟಕಸಂಘದ ಮಹನೀಯರೆ! ತಾವುಗಳು ನನ್ನ ಲೋಪಗಳನ್ನು ಲಕ್ಷ್ಯಕ್ಕೆ ತಾರದೆ ಕೇವಲ ಸ್ನೇಹಪರವಶರಾಗಿ ನನಗೆ ಕೊಟ್ಟಿರುವ ಈ ಅಭಿನಂದನಪತ್ರಿಕೆಯನ್ನು ವಿನಯಪೂರ್ವಕವಾಗಿ ಶಿರಸಾ ವಹಿಸಿರುವೆನು. ತಾವು ನನ್ನಲ್ಲಿಟ್ಟಿರುವ ಪ್ರೀತಿವಿಶ್ವಾಸಕ್ಕೆ ಅತ್ಯಂತ ಕೃತಜ್ಞನಾಗಿದ್ದೇನೆ; ಆದರೆ ತಾವು ಪ್ರೇಮಾಧಿಕ್ಯದಿಂದ ನನ್ನನ್ನು ಕುರಿತು ಮಾಡಿರುವ ಪ್ರಶಂಸೆಗೆ ಮಾತ್ರ ತಕ್ಕ ಪಾತ್ರನಲ್ಲವೆಂದು ತಮ್ಮಗಳಿಗೆ ತಿಳಿಸದಿರಲಾರೆನು.

ತಮ್ಮ ಪತ್ರಿಕೆಯಲ್ಲಿ ನಾನು ಅಮೋಘವಾದ ಭಾಷಾಸೇವೆಯನ್ನು ಮಾಡಿರುವೆನೆಂದು ತಾವು ಗಳು ಸೂಚಿಸುತ್ತೀರಿ. ನಾನು ಮಾಡಿರುವ ಅತ್ಯಲ್ಪಸೇವೆಯನ್ನೇ ಈ ರೀತಿಯಲ್ಲಿ ತಾವು ಪುರಸ್ಕರಿಸು ವುದು ನನ್ನ ಭಾಗ್ಯವೇ ಸರಿ. ಆದರೆ ಇದು ತಮ್ಮ ಸೌಜನ್ಯವನ್ನು ವ್ಯಕ್ತಪಡಿಸುವುದೇ ಹೊರತು ಮತ್ತೇನು ಅಲ್ಲ. ತಾವು ಸೂಚಿಸುವಂತೆ ಆರ್ಯಕೀರ್ತಿಯನ್ನು ಓದುವವರ ಹೃದಯದಲ್ಲಿ ಭರತಖಂಡ ದೊಳಗೆ ಜನ್ಮವೆತ್ತಿದ ಮಹಾಪುರುಷರಲ್ಲಿ ಶ್ರದ್ಧಾಭಕ್ತಿ, ಸ್ವದೇಶವಾತ್ಸಲ್ಯ, ಸ್ವಧರ್ಮಾಭಿಮಾನ, ಧೈರ್ಯೋತ್ಸಾಹಾದಿ ಸದ್ಗುಣಗಳು ಅಂಕುರಿಸಿದಲ್ಲಿ ನಾನು ಕೃತಾರ್ಥನೆಂದು ಭಾವಿಸುವೆನು.

ತಾವುಗಳು ದೇಶಭಾಷಾಸೇವೆಯನ್ನು ಕೈಕೊಂಡಿದ್ದೀರಿ. ಕಾಲಪರಿಸ್ಥಿತಿಯನ್ನು ನೋಡಲಾಗಿ ಹಿಂದೂಸ್ಥಾನದಲ್ಲಿ ದೇಶಭಾಷೆಗಳೆಲ್ಲವೂ ಅಭಿವೃದ್ಧಿಗೆ ಬರುವುದಕ್ಕೆ ಇದು ಸಮಯವೆಂದು ತೋರು ತ್ತಿದೆ. ದೇಶಭಾಷೆಯ ಪ್ರಕಾರವಾಗಿ ರಾಷ್ಟ್ರವಿಭಾಗಗಳೂ ವಿಶ್ವವಿದ್ಯಾಲಯಗಳೂ ಏರ್ಪಡುತ್ತಿವೆ. ದೇಶಭಾಷೆಯ ಮೂಲಕವಾಗಿ ಉಚ್ಚಪಾಠಶಾಲೆಗಳಲ್ಲಿ ವಿದ್ಯಾಭ್ಯಾಸವನ್ನು ಮಾಡಿಸುವ ಪ್ರಯತ್ನಗಳು ನಡೆಯುತ್ತಿವೆ. ವೃತ್ತಾಂತಪತ್ರಿಕೆಗಳಲ್ಲಿ ರಾಜಕೀಯ ಸಾಮಾಜಿಕವಿಷಯುಗಳ ವಿಚಾರವು ದೇಶಭಾಷೆ ಗಳಲ್ಲಿ ನಡೆಯುತ್ತಿವೆ. ಕಾಲಸ್ಥಿತಿಯನ್ನನುಸರಿಸಿ ನೂತನಭಾವಗಳು ಹುಟ್ಟುತ್ತಿವೆ. ನೂತನಭಾವಗಳು ಹುಟ್ಟಿದಹಾಗೆಲ್ಲ ಭಾಷೆಯು ಬೆಳೆದು ಪುಷ್ಟಿಯನ್ನು ಹೊಂದಲೇಬೇಕು. ಆಂಗ್ಲೇಯ ಭಾಷೆಯು

ರಾಜಕೀಯ ಭಾಷೆಯಾಗಿಯೂ ಅರ್ಥಕರಿಭಾಷೆಯಾಗಿಯೂ ಇರುವುದರಿಂದ ಅದಕ್ಕೆ ಪ್ರಾಶಸ್ತ್ಯವಿರದೆ ತೀರದು. ಆದರೂ ಆ ಭಾಷೆಯ ಪ್ರಾಶಸ್ತ್ಯಕ್ಕೆ ನ್ಯೂನತೆಯಿಲ್ಲದಂತೆಯೇ ಆಯಾ ರಾಷ್ಟ್ರಗಳಲ್ಲಿ ದೇಶಭಾಷೆಗಳು ವೃದ್ಧಿಗೆ ಬರುವುದಕ್ಕೆ ಯಥೇಚ್ಛವಾಗಿ ಅವಕಾಶವಿರುವುದು. ಇಂತಹ ಸುಯೋಗದಲ್ಲಿ ಕರ್ಣಾಟಕಭಾಷೆಯು ಹಿಂದೆ ಬೀಳಲಾರದೆಂದು ನಾವು ನಂಬಬಹುದು.

ಕರ್ಣಾಟಕಸಂಘದ ಸದಸ್ಯ ಮಹಾಶಯರೇ ! ಪ್ರಾಜ್ಞರಾದ ತಮ್ಮ ಅಧ್ಯಕ್ಷರ ನೇತೃತ್ವದಿಂದಲೂ, ಅವರಿಂದ ಪ್ರೋತ್ಸಾಹಿತರಾದ ತಮ್ಮಗಳ ಅಧ್ಯವಸಾಯದಿಂದಲೂ ಸಂಘದ ಉದ್ದೇಶ್ಯವು ನೆರವೇರುವುದರಲ್ಲಿ ಸಂದೇಹವಿಲ್ಲ. ತಾವು ಕರ್ಣಾಟಕಭಾಷಾಭಿವೃದ್ಧಿಗಾಗಿಯೂ ತನ್ಮೂಲಕವಾಗಿ ದೇಶಾಭಿವೃದ್ಧಿಗಾಗಿಯೂ ಪಡುತ್ತಿರುವ ಪರಿಶ್ರಮಕ್ಕೆ ತಕ್ಕ ಆಯುರಾರೋಗ್ಯಾದಿ ಭಾಗ್ಯವನ್ನು ಕೊಟ್ಟು ತಮ್ಮ ಪ್ರಯತ್ನಗಳನ್ನು ಸಫಲಗೊಳಿಸಲಿ ಎಂದು ಕರುಣಾಪೂರ್ಣನಾದ ಭಗವಂತನನ್ನು ಸರ್ವದಾ ಪ್ರಾರ್ಥಿಸುತ್ತಿರುವೆನು.

ತಾವು ನನ್ನ ಆಯುರಾರೋಗ್ಯಾರ್ಥವಾಗಿ ಜಗದೀಶ್ವರನನ್ನು ಪ್ರಾರ್ಥಿಸುತ್ತೀರಿ. ಈಶಾನುಗ್ರಹವಿದ್ದಲ್ಲಿ ತಮ್ಮಗಳ ಪುರೋವೃದ್ಧಿಯನ್ನು ನೋಡಿ ಸಂತೋಷಪಡಬೇಕೆಂಬ ಆಸೆಯಿಂದ ಇನ್ನು ಕೆಲವು ಕಾಲ ಇರಬೇಕೆಂದು ಹಾರೈಸುತ್ತೇನೆ.

ಇಂದು ತಮ್ಮ ಸತ್ಕಾರದಿಂದ ನನ್ನ ಮನಸ್ಸಿನಲ್ಲಿ ಹುಟ್ಟಿರುವ ಭಾವಗಳನ್ನು ವ್ಯಕ್ತಪಡಿಸುವುದಕ್ಕೆ ನನಗೆ ಶಕ್ಯವಿಲ್ಲ. ಆದರೂ ಈ ಸತ್ಕಾರವನ್ನು ಮಾತ್ರ ನಾನೆಂದಿಗೂ ಮರೆಯೆನು.

---

**ಗೌರವ ಚಿಣ್ಣೋ? ಪ್ರೀತಿ ಚಿಣ್ಣೋ?**

"ರಿಕ್ತಹಸ್ತೇನ ನೋಪೇಯಾತ್ ರಾಜಾನಂ ದೈವತಂ ಗುರುಂ"—ದೊರೆಯನ್ನೂ ದೇವರನ್ನೂ ಗುರುಗಳನ್ನೂ ನೋಡುವುದಕ್ಕೆ ಬರಿಯ ಕೈಯಲ್ಲಿ ಹೋಗಬಾರದು—ಎಂದು ಹೇಳುತ್ತಾರಷ್ಟೆ. ಈ ವಾಕ್ಯವು ಕೇವಲ ಭಕ್ತಿಜಾಡ್ಯಪೀಡಿತರಾದ, ವಾತ್ಸಲ್ಯ ಪ್ರೇಮ ಪ್ರಣಯ ಮುಂತಾದ ಮೃದುಮಧುರ ಭಾವಗಳನ್ನರಿಯದಿರಬಹುದಾದ, ಯಾರಿಂದಲೋ ಉಕ್ತವಾಗಿರಬೇಕೆಂದು ತೋರುತ್ತದೆ. ಇಲ್ಲದಿದ್ದರೆ ಮೇಲಿನ ಪಟ್ಟಿಯಲ್ಲಿ ಮಕ್ಕಳನ್ನು ಬಿಡುತ್ತಿದ್ದರೇ ? ಈಗ ರಾಜರಲ್ಲಿ ಹೋಗುವ ಸಂಭವ ಕಡಿಮೆ, ದೇವರಲ್ಲಿ ನಂಬಿಕೆ ಇಲ್ಲ, ಗುರುಗಳಲ್ಲಿ ಗೌರವವಿಲ್ಲ—ಇದ್ದರೂ ಅವರು ಕುಚೇಲನನ್ನು ಕೃಷ್ಣನು ಕೇಳಿದಂತೆ "ಏನು ತಿಂಡಿ ತಂದಿದ್ದೀಯಯ್ಯಾ ?" ಎಂದು ಕೇಳಿ ತಿರಿದು ತಂದ ಒಣಕಲ ಅಕ್ಕಿಯಕಾಳನ್ನಾದರೂ ಮೊಂಡಾಟಮಾಡಿ ತೆಗೆದುಕೊಂಡು ತಿಂದು ಪ್ರತಿಯಾಗಿ ಐಶ್ವರ್ಯವನ್ನು ಸೂಸುವುದಿಲ್ಲ. ಈಗ ನಾವು ನೋಡುತ್ತಿರುವುದೆಲ್ಲಾ ಮಕ್ಕಳಿರುವ ಮನೆಗೆ ಬರಿಯ ಕೈಯಲ್ಲಿ ಹೋಗದಿರುವುದೊಂದೇ. ಇದೊಂದು ಅಶಾಸ್ತ್ರವಿಹಿತವಾದ, ಆದರೆ ಶಿಷ್ಟಸಮ್ಮತವಾದ, ಸಂಪ್ರದಾಯ. ಆದ್ದರಿಂದಲೇ ರಾವ್‌ಬಹದ್ದೂರ್ ಎಚ್. ಕೃಷ್ಣಶಾಸ್ತ್ರಿಗಳು ಪ್ರಬುದ್ಧ ಕರ್ಣಾಟಕನ ಮನೆಗೆ ಬರುತ್ತ ಐವತ್ತು ರೂಪಾಯಿನ ಒಂದು ಬಹುಮಾನವನ್ನು ಕೈಯಲ್ಲಿ ಹಿಡಿದುಕೊಂಡೇ

ಬಂದರು. ಅದನ್ನು ಕೊಡುವಾಗ ಅದರ ಜೊತೆಯಲ್ಲಿಯೇ ವರ್ಷವರ್ಷವೂ ಐವತ್ತು ರೂಪಾಯಿನ ಇಂಥ ಒಂದೊಂದು ಬಹುಮಾನವನ್ನು ಕೊಡುತ್ತ ಹೋಗುವೆವೆಂದು ಮಾತನ್ನೂ ಕೊಟ್ಟರು. ಅದಕ್ಕೆ ಬದಲಾಗಿ ಕರ್ಣಾಟಕ ಸಂಘವೂ ಪ್ರಬುದ್ಧ ಕರ್ಣಾಟಕವೂ ಮಾಡಿದ್ದೇನು ? ಪೆಪ್ಪರ್‌ಮೆಂಟನ್ನೋ ಬಿಸ್ಕತ್ತನ್ನೋ ಮಕ್ಕಳಿಗೆ ಕೊಟ್ಟರೆ ಅವು ಏನು ಮಾಡುವುವೋ ಅದನ್ನೇ ಮಾಡಿತು—ಬಾಯಿಗೆ ಹಾಕಿಕೊಂಡು ಕುಣಿದಾಡಿಬಿಟ್ಟಿತು.

---

ವಿದ್ಯಾರ್ಥಿವೇತನವನ್ನು ಪಡೆದ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳು ಎಂದಿನಂತೆ ಕರ್ಣಾಟಕಸಂಘಕ್ಕೆ ಸಹಾಯದ್ರವ್ಯವನ್ನು ಕೊಟ್ಟಿರುವರು. ಇವರುಗಳೆಲ್ಲರಿಗೂ ಸಂಘವು ಕೃತಜ್ಞವಾಗಿದೆ :—

| ಮ|| ಗಳಾದ | | ಮ|| ಗಳಾದ | |
|---|---|---|---|
| ಪಿ. ವೆಂಕಟರಾಯರೆಡ್ಡಿ | 3-0-0 | ಆರ್. ವಿ. ನರಸಿಂಹಾಚಾರ್ | 2-0-0 |
| ಎ ಚಿನ್ನನಾಯಕ್ | 3-0-0 | ಎಸ್. ರಾಮಕೃಷ್ಣನ್ | 2-0-0 |
| ಎಲ್. ಗೋಪಾಲಯ್ಯ | 2-0-0 | ಟಿ. ರಂಗಮಲ್ಲಯ್ಯ | 2-0-0 |
| ಡಿ. ಚಂದ್ರಶೇಖರಯ್ಯ | 2-0-0 | ಕೆ. ವೀರಣ್ಣ | 2-0-0 |
| ವಿ. ಕೃಷ್ಣಯ್ಯಶೆಟ್ಟಿ | 2-0-0 | ಎಂ. ಜಿ. ಸುಬ್ಬರಾವ್ | 2-0-0 |
| ವಿ. ಆರ್. ಕೃಷ್ಣರಾವ್ | 2-0-0 | ಶಿವಲಿಂಗಪ್ಪ | 2-0-0 |
| ಎ. ನಾಗರಾಜರಾವ್ | 2-0-0 | ಡಿ. ಎಚ್. ದೊಡ್ಡಯ್ಯ | 2-0-0 |
| ಕೆ. ಹನುಮಂತರಾವ್ | 2-0-0 | ಕೆ. ಶ್ರೀನಿವಾಸಾಚಾರ್ | 1-0-0 |
| ಎಲ್. ರಾಮಚಂದ್ರನಾಯಿಡು | 2-0-0 | ಬಿ. ಎಂ. ಕೃಷ್ಣಾಜಿರಾವ್ | 1-0-0 |
| ಎಚ್. ಕೆ. ರಂಗಶೆಟ್ಟಿ | 2-0-0 | ಟಿ. ಕಲ್ಲಪ್ಪ | 1-0-0 |
| ಪಿ. ಎಂ. ಶ್ರೀನಿವಾಸಲು | 2-0-0 | ಎಚ್. ಸಿ. ವೀರಶೆಟ್ಟಿ | 1-0-0 |
| ಜಿ. ವೆಂಕಟಸ್ವಾಮಿ | 2-0-0 | ಎಸ್. ವೀರಭದ್ರಪ್ಪ | 1-0-0 |
| ವಿ. ವಿಶ್ವನಾಥಲ್ | 2-0-0 | ಆರ್. ಎಂ ಕೃಷ್ಣಪ್ಪ | 1-0-0 |
| ಕಡಬ ವೆಂಕಟಾಚಲಯ್ಯಂ | | ಸಿ. ರಂಗಾಚಾರ್ | 1-0-0 |
| ಗಾರ್ | 2-0-0 | ಎಂ. ಬಿ. ನರಸಿಂಹಯ್ಯಂಗಾರ್ | 1-0-0 |
| ಕಡಬ ಆರ್. ಶ್ರೀನಿವಾಸಯ್ಯಂ | | ವಿ. ಆರ್. ತಿರುವೆಂಕಟಾಚಾರ್ | 1-0-0 |
| ಗಾರ್ | 2-0-0 | ಮಹಮದ್‌ಅಲಿ | 0-8-0 |
| ಬೇಲೂರ್ ಆರ್. ಸುಂದರರಾಜ | | ನರಸಿಂಹಸ್ವಾಮಿನಾಯಕ್ | 0-8-0 |
| ಯ್ಯಂಗಾರ್ | 2-0-0 | ಎಸ್. ರಂಗರಾವ್ | 0-8-0 |

| | | | |
|---|---|---|---|
| ಕೆ. ಗೋಪಾಲಯ್ಯಂಗಾರ್ | 2-0-0 | ಬಿ. ಕೃಷ್ಣರಾವ್ | 0-8-0 |
| ಆರ್. ಗಂಗಾಜಿರಾವ್ | 1-0-0 | ಕೆ. ಎಸ್. ರಾಘವಾಚಾರ್ | 0-8-0 |
| ಎಂ. ಬಸಪ್ಪ | 1-0-0 | ಕೆ. ರಾಮಸ್ವಾಮಿಅಯ್ಯಂಗಾರ್ | 0-8-0 |
| ಎಚ್. ಮಲ್ಲಾರಿರಾವ್ | 1-0-0 | ಎನ್. ಪಾಂಡುರಂಗರಾವ್ | 0-8-0 |
| ಟಿ. ಎಲ್. ಕಸ್ತೂರಿ ರಂಗಾಚಾರ್ | 1-0-0 | ಶ್ರೀಮತಿ ಪಿ. ಎನ್. ತಂಗಮ್ಮ | 1-8-0 |
| | | ,, ಡಿ. ವೆಂಕಟಸುಬ್ಬಮ್ಮ | 1-8-0 |
| ಎಚ್. ಕೆ. ವೆಂಕಟರಮಣಶೆಟ್ಟಿ | 1-0-0 | ,, ಬಿ. ಎ. ಮುನಿವೆಂಕಟಮ್ಮ | 1-8-0 |
| ಇ. ಎ. ಭಾಸ್ಕರ್ | 1-0-0 | ,, ಜಿ. ಆರ್. ಪಿಚ್ಚುಮುತ್ತು | 2-0-0 |
| ಬಿ. ಕೃಷ್ಣಾಚಾರ್ | 1-0-0 | | |
| ಎ. ಆರ್. ತಿರುವೆಂಗಡಯ್ಯ | 1-0-0 | | 76-14-0 |

# ಪ್ರಬುದ್ಧ ಕರ್ಣಾಟಕದ ಪೋಷಕರು ಮತ್ತು ಆಶ್ರಯದಾತರು

## ಪ್ರದಾತೃಗಳು.

| | |
|---|---|
| ಸೆಂಟ್ರಲ್ ಕಾಲೇಜಿನ ನಾಟಕಸಂಘ | 50-0-0 |
| ಮ\|\| ಗಳಾದ ಎನ್. ಎಸ್ ಸುಬ್ಬರಾವ್, ಎಂ. ಎ. | 20-0-0 |
| ರಾಜಕಾರ್ಯಪ್ರಸಕ್ತ ರಾವ್‌ಬಹದ್ದೂರ್ ಎಂ. ಶ್ಯಾಮರಾವ್, ಎಂ. ಎ. | 2-0-0 |

## ಆಶ್ರಯದಾತೃಗಳು

| | |
|---|---|
| ಅಮೆಚೂರು ನಾಟಕಮಂಡಲಿ | 30-0-0 |
| ಡಾ\|\| ಎಂ. ಎ ಸಂಪತ್ಕುಮಾರನ್ ಎಂ. ಎ. ಪಿ. ಎಚ್‌ಡಿ. | 15-0-0 |
| ಮ\|\| ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾವ್ | 12-0-0 |
| ,, ಮೋಕ್ಷಗುಂಡಂ ಕೃಷ್ಣಮೂರ್ತಿ ಬಿ. ಎ. ಬಿ. ಎಲ್. | 10-0-0 |
| ,, ಸಂಘದ ಆಪ್ತರೊಬ್ಬರು | 10-0-0 |

## ಪೋಷಕರು.

ಬೆಂಗಳೂರು.

ಮ|| ಗಳಾದ

ರಾಜಕಾರ್ಯಪ್ರಸಕ್ತ ರಾವ್‌ಬಹದ್ದೂರ್.

ಎಂ. ಶ್ಯಾಮರಾವ್, ಎಂ.ಎ.

ಎನ್. ವೆಂಕಟೇಶಯ್ಯಂಗಾರ್, ಬಿ.ಎ.

ಬಿ. ಪುಟ್ಟಯ್ಯ, ಬಿ.ಎ.

ಟಿ. ಅಪ್ಪೂರಾವ್, ಬಿ.ಎ., ಬಿ.ಎಲ್.

ಪುಟ್ಟರಾಜೆ ಅರ್ಸ್ ಎಂ.ಎ. ಬಿ.ಎಲ್.

ಎಂ. ವೆಂಕಟೇಶಯ್ಯಂಗಾರ್, ಎಂ.ಎ.

ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ.

ಬಿ. ಶ್ರೀನಿವಾಸಯ್ಯಂಗಾರ್.

ಸಿ. ಎಸ್. ರಾಮರಾವ್.

ಡಾ|| ಎಸ್. ಸುಬ್ಬರಾವ್, ಬಿ.ಎ., ಎಂ.ಬಿ.ಸಿ.ಎಂ. ಇತ್ಯಾದಿ.

ಸಿ. ಸುಬ್ಬರಾವ್, ಎಂ.ಎ. (ಆನರ್ಸ್)

ಎ. ಎನ್. ನರಸಿಂಹಯ್ಯ, ಬಿ.ಎ., ಎಲ್.ಟಿ.
ಬಿ. ವೆಂಕಟನಾರಣಪ್ಪ, ಎಂ.ಎ.
ವಿ. ಶ್ರೀನಿವಾಸಾಚಾರ್, ಬಿ.ಎ.
ಬಿ. ವೆಂಕೋಬರಾವ್, ಬಿ.ಎ.
ಎಂ. ವೆಂಕಟಾದ್ರಿಶಾಸ್ತ್ರಿ.
ನಿಟ್ಟೂರು ಶ್ರೀನಿವಾಸರಾವ್, ಬಿ.ಎಸ್‌ಸಿ.
ಎನ್. ಸೀತಾರಾಮಯ್ಯ, ಬಿ.ಎ., ಬಿ.ಎಲ್.
ಎಸ್. ಡಿ. ದಾಸಪ್ಪ.
ಎಂ. ವೆಂಕಟಸುಬ್ಬಯ್ಯ.
ಎಸ್. ಗರಲಪುರಿ ಶಾಸ್ತ್ರಿ, ಬಿ.ಎ., ಎಂ.ಎಸ್‌ಸಿ.
ಎನ್. ಎನ್. ಅಯ್ಯಂಗಾರ್, ಬಿ.ಎ.
ಪಿ. ಎಚ್. ಕೃಷ್ಣರಾವ್, ಎಂ.ಎ.
ವಿ. ವೇದವ್ಯಾಸಾಚಾರ್, ಬಿ.ಎ.
ಜಿ. ಸುಂದರರಾವ್, ಬಿ.ಎ.
ಎಮ್. ಎನ್. ಬಾಳರಾಜೆ ಅರ್ಸ್.
ಡಿ. ಕೊಂಗಾಡಿಯಪ್ಪ.
ಡಿ. ರಾಮಯ್ಯ.
ಕ್ಯಾಪ್ಟನ್ ಎ. ಬಸವರಾಜೆ ಅರ್ಸ್.
ಟಿ. ಮಾದಯ್ಯ, ಬಿ.ಎ.

### ಸೆಂಟ್ರಲ್ ಕಾಲೇಜು.

ಮ|| ಗಳಾದ

ಎಫ್. ಆರ್. ಸೆಲ್, ಎಂ.ಎ.
ಪಿ. ಎಸ್. ಅಣ್ಣಾಜಿರಾವ್, ಎಂ.ಎ., ಬಿ.ಎಲ್.
ಬಿ. ನಾಗೇಶರಾವ್, ಎಂ.ಎ.
ಕೆ. ಅನಂತರಾಮಯ್ಯ, ಎಂ.ಎ.
ಎನ್. ಎಸ್. ಸೂರ್ಯನಾರಾಯಣರಾವ್, ಬಿ.ಎ.
ಬಿ. ಎನ್. ಶ್ಯಾಮರಾವ್, ಬಿ.ಎ.
ಟಿ. ಎಸ್. ವೆಂಕಣ್ಣಯ್ಯ, ಎಂ.ಎ.
ಬಿ. ವೆಂಕಟೇಶಾಚಾರ್, ಎಂ.ಎ.
ಎ. ವೆಂಕಟರಾವ್ ಟೆಲಂಗ್, ಎಂ.ಎ.
ಸಿ. ಕೆ. ಸುಂದರಾಚಾರ್, ಎಂ.ಎ. (ಆನರ್ಸ್)
ಪಿ. ಶ್ರೀನಿವಾಸರಾವ್, ಬಿ.ಎಸ್‌ಸಿ.
ಎಸ್. ವಿ. ರಾಮರಾವ್, ಬಿ.ಎಸ್‌ಸಿ.
ಎಂ. ಜಿ. ಶ್ರೀನಿವಾಸರಾವ್, ಎಂ.ಎ.

ಸಿ. ಶ್ರೀಕಂಠಯ್ಯ, ಬಿ.ಎ.
ಎಂ. ಶೇಷಯ್ಯಂಗಾರ್, ಎಂ.ಎ.
ಎನ್. ವೆಂಕಟನರಸಿಂಹಾಚಾರ್, ಬಿ.ಎ.
ಎಚ್. ರಾಮಸ್ವಾಮಿ ಅಯ್ಯಂಗಾರ್, ಬಿ.ಎಸ್‌ಸಿ.
ವಿ. ಗೋಪಾಲಸ್ವಾಮಿ ಅಯ್ಯಂಗಾರ್, ಎಂ.ಎ.
ಎಂ. ನಾರಣಯ್ಯಂಗಾರ್, ಎಂ.ಎ.
ಸಿ.ಎನ್. ಶ್ರೀನಿವಾಸಯ್ಯಂಗಾರ್, ಎಂ.ಎಸ್‌ಸಿ.
ಪಿ. ಸಂಪತ್ತಯ್ಯಂಗಾರ್, ಎಂ.ಎ.
ಎಲ್. ರಾಮರಾವ್, ಎಂ.ಎ.
ಎ. ಸಿ. ದೇವೇಗೌಡ.

### ಮೆಡಿಕಲ್ ಕಾಲೇಜು.

ಮ|| ಗಳಾದ

ಎಲ್. ಎಸ್. ದೊರೆಸಾಮಿ, ಬಿ.ಎಸ್‌ಸಿ.
ಸಿ. ದೊರೆಸಾಮಿ, ಬಿ.ಎ.
ಜಿ. ಎಸ್. ರಘುನಾಥರಾವ್, ಬಿ.ಎಸ್‌ಸಿ.
ವಿ. ನರಸಿಂಹಮೂರ್ತಿ, ಬಿ.ಎಸ್‌ಸಿ.
ಬಿ. ಐ. ಗೋಪಾಲರಾವ್, ಬಿ.ಎಸ್‌ಸಿ.
ಆರ್. ವೆಂಕಟರಾವ್. ಬಿ.ಎಸ್‌ಸಿ.
ಹೆಬ್ಲಿಕರ್, ಬಿ.ಎ.
ಸಿ. ರಾಮಸ್ವಾಮಿಶೆಟ್ಟಿ.
ಮಲ್ಲಪ್ಪ.

### ಇಂಜನಿಯರಿಂಗ್ ಕಾಲೇಜು.

ಮ|| ಗಳಾದ

ಬಿ. ಎಸ್. ಮಾಧವರಾವ್, ಎಂ.ಎಸ್‌ಸಿ.
ಎಚ್. ಸಿ. ಕಪನೀಪತಿಭಟ್ಟ, ಬಿ.ಎ.
ಎಲ್. ಸಿ. ಕೇಶವರಾವ್, ಬಿ.ಎ.
ಡಿ. ಸುಬ್ಬರಾವ್.

### ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್

ಮ|| ಕೆ. ಅಮೃತರಾವ್, ಎಂ.ಎ.

### ಚಿತ್ರದುರ್ಗ.

ಮ|| ಗಳಾದ

ಎನ್. ಎಸ್. ಲಿಂಗಾಶಾಸ್ತ್ರಿ, ಬಿ.ಎಸ್‌ಸಿ.
ಬಿ. ವೆಂಕಟಶಾಮಣ್ಣ, ಬಿ.ಎ., ಬಿ.ಎಲ್.
ಎ. ತಾಂಡೋಣಿರಾವ್, ಎಲ್.ಸಿ.ಇ.

ಹಾಸನ.

ಮ|| ಗಳಾದ

ಎ. ಎಸ್. ನಂಜುಂಡಪ್ಪ.
ಬಿ. ವೆಂಕಟಾಚಾರ್, ಬಿ.ಎ.
ಕೆಳಗಿನಮನೆ ಸೂರ್ಯನಾರಣಪ್ಪನವರು
ಎಚ್. ಪುಟ್ಟಸಾಮಯ್ಯ.
ಎ. ನಾರಣಯ್ಯಂಗಾರ್.
ಎಚ್. ಎಸ್. ಸುಬ್ಬರಾಯಸೆಟ್ಟಿ.
ಎನ್. ಎಸ್. ನಾರಾಯಣರಾವ್.

ಕಡೂರು.

ಕೆ. ಸತ್ಯನಾರಾಯಣಶೆಟ್ಟಿ.
ಡಿ. ರಾಘವೇಂದ್ರರಾವ್, ಬಿ.ಎ., ಎಲ್ಎಲ್.ಬಿ.
ಟಿ. ಎನ್. ಕೃಷ್ಣಸ್ವಾಮಿ ಅಯ್ಯಂಗಾರ್.
ಎನ್. ಮಾಧವರಾವ್, ಬಿ.ಎ.

ಕೋಲಾರ.

ಮ|| ಗಳಾದ

ಸಿ. ರಾಮಚಂದ್ರರಾವ್, ಬಿ.ಎ., ಬಿ.ಎಲ್.
ಎಸ್. ಸೀತಾರಾಮಯ್ಯ, ಬಿ.ಎ.
ವಿ. ನಾರಾಯಣರಾವ್. ಬಿ.ಎ.
ಕೆ. ಸಂಪಂಗಿರಾಮಯ್ಯ, ಬಿ.ಎ., ಬಿ.ಎಲ್.

ಮೈಸೂರು.

ಬಿ. ಎಂ. ಶ್ರೀಕಂಠಯ್ಯ, ಎಂ.ಎ. ಬಿ.ಎಲ್.
ಬಿ.ಕೆ. ರಾಮಕೃಷ್ಣಯ್ಯ,ಎಂ.ಎ.,ಎಲ್ಎಲ್.ಬಿ.
ಎಸ್. ವಿ. ರಂಗಣ್ಣ, ಎಂ.ಎ.
ಕೆ. ವಿ. ಶ್ರೀಕಂಠೇಶ್ವರನ್. ಬಿ.ಎಸ್‌ಸಿ. ಎಲ್ಎಲ್.ಬಿ., ಎಫ್.ಸಿ.ಎಸ್.
ಬಿ. ಮಾಧವರಾವ್.
ಬಿ. ವೆಂಕೋಬರಾವ್, ಬಿ.ಎ.
ಆರ್. ರಾಮರಾವ್, ಬಿ.ಎ.
ಕೆ. ಎಸ್. ಧೀರೇಂದ್ರದಾಸ್, ಬಿ.ಎ.
ಎ. ವೆಂಕಟರಾವ್.
ಕೆ. ಆರ್. ರಾಮಸ್ವಾಮಿ, ಎಂ.ಎ.
ವಿ. ಸೀತಾರಾಮಯ್ಯ, ಎಂ.ಎ.
ಎ. ಆರ್. ಕೃಷ್ಣಶಾಸ್ತ್ರಿ, ಎಂ.ಎ.
ದೇವೋಜೀರಾವ್ (ಎಡತೊರೆ)

ಶಿವಮೊಗ್ಗ.

ಬಿ. ಎಸ್. ರಾಘವಯ್ಯ, ಬಿ.ಎ., ಬಿ.ಎಲ್.
ಎಸ್. ಸೀತಾರಾಮಯ್ಯ.
ಬಿ. ಆರ್. ಗುರುರಾಜಾರಾವ್.
ಎನ್. ಶೇಷಶಾಸ್ತ್ರಿ, ಬಿ.ಎ., ಬಿ.ಎಲ್.
ಎಂ. ಮಂಜಪ್ಪ.
ಎಂ. ವೆಂಕಟನಾರಣಪ್ಪ, ಬಿ.ಎ.
ಎ. ಕೆ. ನಾರಣಯ್ಯರ್.
ಮಾಲೂರ್ ಸುಬ್ಬರಾವ್, ಬಿ.ಎ.,ಎಲ್ಎಲ್.ಬಿ.
ಕೆ. ಆರ್. ವೆಂಕಟರಾವ್, ಬಿ.ಎ.
ಕೆ. ರಾಮಕೃಷ್ಣಭಟ್ಟರು.
ಎ. ಅನಂತಯ್ಯ.
ಕಲ್ಲಹಳ್ಳದ ಶ್ರೀನಿವಾಸಭಟ್ಟರು.
ಎನ್. ಗಂಗಾಧರಯ್ಯ.
ಶ್ರೀಕಂಠಪ್ಪಗೌಡ.

ತುಮಕೂರು.

ಮ|| ಗಳಾದ

ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.
ಆರ್. ಎಲ್. ನರಸಿಂಹಯ್ಯ, ಬಿ.ಎಸ್‌ಸಿ.
ಜಿ, ಎಸ್. ತಮ್ಮಯ್ಯ, ಬಿ.ಎ.
ಎನ್. ವೆಂಕಟರಮಣಪ್ಪ, ಬಿ.ಎ.

ಇತರ ಪ್ರಾಂತದವರು.

ರ. ಭಿ. ಪೊದ್ದಾರ. ಬಿ.ಎ.
ಬಿ. ಶಂಕರಗೌಡ, ಪಾಟೀಲ.
ವಿ. ಬಿ. ಆಲೂರ್, ಬಿ.ಎ., ಎಲ್ಎಲ್.ಬಿ.
ಕೆ. ರಾಮಸ್ವಾಮಯ್ಯ.
ರಾಮರಾವ್, ಜಿ. ತೆರಗೊಂಡಿ, ಎಂ.ಎ.
ವ್ಹಿ. ಡಿ. ನವಲಗುಂದ್, ಬಿ.ಎ.
ಆರ್.ಎ. ಜಹಗೀರ್‌ದಾರ್, ಎಂ.ಎ.,ಎಲ್ಎಲ್.ಬಿ.
ಎನ್. ಆರ್. ಸುಬ್ಬಣ್ಣಯ್ಯ.
ನರಹರಿರಾವ್, ಎಂ.ಎ. (ಆನರ್ಸ್)
ಎಂ. ಎಸ್. ಸುಬ್ಬರಾವ್.
ಎನ್. ವಿ. ಶ್ರೀನಿವಾಸಮೂರ್ತಿ, ಬಿ.ಎ., ಬಿ.ಇ.
ಎನ್. ಲಕ್ಷ್ಮೀನಾರಾಯಣರಾವ್, ಎಂ.ಎ.
ಡಿ. ಎಸ್. ಆರ್. ರಾವ್, ಬಿ.ಇ.
ಆರ್. ಕೆ. ಅಸುಂಡಿ, ಬಿ.ಎ., ಎಮ್.ಎಸ್‌ಸಿ.
ಎಸ್. ಶ್ರೀನಿವಾಸರಾವ್, ಬಿ.ಎ.
ಎಂ. ರಂಗಸ್ವಾಮಿ, ಬಿ.ಎ.
ಟಿ. ಶಿವಶಂಕರಯ್ಯ, ಬಿ.ಎಸ್‌ಸಿ. (ಮ್ಯಾಂಚೆಸ್ಟರ್)

---




# ಕರ್ಣಾಟಕ

ಅಕ್ಷಯ ಸಂವತ್ಸರ —೨೭— ವಿನಾಯಕನ ಸಂಚಿಕೆ

ಸಂಪುಟ ೮] ವಿಷಯ ಸೂಚಿಕೆ [ಸಂಚಿಕೆ ೧


೧. ಪ್ರಾರ್ಥನೆ— ಡಿ. ವಿ. ಜಿ.
೨. ವಿದ್ಯಾರಣ್ಯರ ಸಮಕಾಲಿಕರು— ,,
೩. ಮೈಸೂರು ದೇಶದ ವಾಸ್ತುಶಿಲ್ಪ ಮ|| ಬಿ. ವೆಂಕೋಬರಾವ್, ಬಿ.ಎ.
೪. ಕೆಲವು ಕನ್ನಡಕವಿಗಳ ಜೀವನಕಾಲವಿಚಾರ—
ಡಾ|| ಎ. ವೆಂಕಟಸುಬ್ಬಯ್ಯ, ಎಂ.ಎ., ಪಿಎಚ್.ಡಿ., ಎಲ್ಎಲ್.ಬಿ.
೫. ಗದಾಯುದ್ಧನಾಟಕಂ—
೬. ನೆನಪು (ಒಂದು ಸಣ್ಣಕಥೆ) — ಮ|| ಕೆರೋಡಿ ಕೃಷ್ಣಮೂರ್ತಿ.
೭. ಪಾರಿಜಾತ— ಮ|| ತೀ. ನಂ. ಶ್ರೀಕಂಠಯ್ಯ, ಬಿ.ಎ.
೮. "ಕಾವ್ಯಾವಲೋಕನ"
೯. "ವಸ್ತುಕೋಶ"



ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಟಿಸಲ್ಪಟ್ಟಿದೆ.

೧೯೨೭




Printed at the Crown Electric Press, Mysore.





# ಪ್ರಾರ್ಥನೆ

ರಾಗ—ರೀತಿಗೌಳ.

ಅರೆಮೂಕನಾಗಿಹೆನು
ಕರೆಕರೆಯ ಪಡುತಿಹೆನು
ಬರೆಯಲರಿಯೆ—ನುಡಿವ ಪರಿಯನರಿಯೆ |
ಮನವಿಹುದು ತವಕದಲಿ
ಪನಿ ಬಹುದು ಕಣ್ಗಳಲಿ
ಮಾತನರಿಯೆ—ಪೇಳ್ವ ರೀತಿಯರಿಯೆ ||
ಜೀವನವು ಕುಂದಿಹುದು
ಆವುದೋ ಬೇಕಿಹುದು
ಪೇಳಲರಿಯೆ—ನುಡಿದು ಕೇಳಲರಿಯೆ |

ಅಳಲಿನಲಿ ಮೊರೆಯಿಡಲು
ನಲವಿನಲಿ ನುತಿಕುಡಲು
  ನುಡಿಯ ತಿಳಿಯೆ—ಬಾಯ ಬಿಡಲು ತಿಳಿಯೆ ||
ಶಿರವೆತ್ತಿ ನೋಡುವೆನು
ಕರವೆತ್ತಿ ಜೋಡಿಪೆನು
  ಬೇಡಲರಿಯೆ—ಪದದಿ ಪಾಡಲರಿಯೆ ||

ಡಿ. ವಿ. ಜಿ.

---

ಶ್ರೀಃ

# ವಿದ್ಯಾರಣ್ಯರ ಸಮಕಾಲೀನರು

---

## ಪೀಠಿಕೆ

ವಿಜಯನಗರ ಪ್ರಾದುರ್ಭಾವ ಕಾಲದ ಪ್ರಜಾ ಪ್ರಮುಖರಲ್ಲಿ ಅಗ್ರಗಣ್ಯರಾಗಿದ್ದವರು ವಿದ್ಯಾರಣ್ಯರಾದರೂ, ಅವರಿಗೆ ಸಹಾಯಭೂತರಾಗಿ ನಿಂತು ಕೆಲಸ ಮಾಡಿದವರಲ್ಲಿಯೂ ಅನೇಕ ಮಂದಿ ಗಣ್ಯ ಮಹನೀಯರಿದ್ದರೆಂಬುದನ್ನು ಹಿಂದೆ ಸೂಚಿಸಿರುವೆವು. ಒಂದು ದೇಶವನ್ನು ಅಥವಾ ಒಂದು ಜನಾಂಗವನ್ನು ಮುಂದಕ್ಕೆ ತರಲು ಪಂಡಿತನೂ ದೇಶಾಭಿಮಾನಿಯೂ ಆದ ಮಾರ್ಗದರ್ಶಕನು ಮಾತ್ರ ಇದ್ದರೆ ಸಾಲದು; ಆತನು ತೋರುವ ದಾರಿಯಲ್ಲಿ ನಡೆಯುವಂತೆ ದೇಶದ ಸಾಮಾನ್ಯ ಜನರನ್ನು ಪ್ರೋತ್ಸಾಹಪಡಿಸಿ ಪ್ರೇರಿಸಲು ಅನೇಕ ಮಂದಿ ಉಪೋದ್ಬಲ ಕರ್ತರೂ ಇರಬೇಕು. ಸಮಾಜದಲ್ಲಿ ಗಣ್ಯರಾಗಿಯೂ ಅನುಸರಣೀಯರಾಗಿಯೂ ಇರತಕ್ಕ ಪ್ರಮುಖ ಜನರಲ್ಲಿ ಒಬ್ಬನ ವಿನಾ ಉಳಿದವರು ದೇಶ ವಾತ್ಸಲ್ಯವಿಲ್ಲದವರಾಗಿ, ಪ್ರಜಾಭಿಮಾನವನ್ನು ತೊರೆದು, ಸಮಾಜ ವಿಷಯದಲ್ಲಿ ಉದಾಸೀನರಾಗಿದ್ದರೆ, ಆ ಒಬ್ಬನು ಮಾತ್ರವೇ ಪಡುವ ಪ್ರಯಾಸವು ಅವನೆಷ್ಟು ಸಮರ್ಥನಾದರೂ ಸಾರ್ಥಕವಾಗಲಾರದು.

ಒಂದು ಮರವು ಎಷ್ಟು ದೊಡ್ಡದಾದರೂ ಅದೊಂದೇ ಒಂದು ತೋಟವೆನಿಸದಷ್ಟೆ? ಒಂದು ಕಲ್ಲು ಎಷ್ಟು ದೊಡ್ಡದಾದರೂ ಅದೊಂದರಿಂದಲೇ ಒಂದು ಬೆಟ್ಟವಾಗಲಾರದಷ್ಟೆ? ಹಾಗೆಯೇ ಒಬ್ಬನೇ ಆದ ಮನುಷ್ಯನ ಬುದ್ಧಿ ಧೈರ್ಯ ಶೌರ್ಯಗಳು ಎಷ್ಟು ದೊಡ್ಡವಾದರೂ ಅವುಗಳಿಂದ ಮಾತ್ರವೇ ಒಂದು ಜನಪದ ಸಮಾರಂಭವು ನಡೆಯಲಾರದು. ಒಂದು ತೋಪಿನಲ್ಲಿ ಅನೇಕ ಮರ ಗಿಡಗಳು ಒಂದಕ್ಕೊಂದು ಒತ್ತಾಸೆಯಾಗಿ ಬೆಳೆದಿರುವಂತೆ, ಒಂದು ಬೆಟ್ಟದಲ್ಲಿ ಅನೇಕ ಬಂಡೆ ಗುಡ್ಡಗಳು ಒಂದಕ್ಕೊಂದು ಬಲಕೊಟ್ಟು ನಿಂತಿರುವಂತೆ, ಒಂದು ಜನಪದ ಪ್ರಯತ್ನದಲ್ಲಿ ಅನೇಕ ಮಂದಿ ದೇಶ ಭಕ್ತರು ಒಬ್ಬರಿಗೊಬ್ಬರು ಸಹಾಯ ಕೊಡುವವರಾಗಿ ಸೇರಿರಬೇಕು. ಇದೇ ಅರ್ಥವನ್ನೇ

ನ ಹಿ ಜಾನಪದಂ ದುಃಖಮೇಕಶ್ಶೋಚಿತು ಮರ್ಹತಿ

ಎಂಬ ಪುರಾತನ ವಾಕ್ಯವು ತಿಳಿಸುತ್ತದೆ. ಅದಕ್ಕೆ ತಕ್ಕಂತೆಯೇ, ವಿಜಯ ನಗರ ಪ್ರತಿಷ್ಠೆಯ ಸಮಾರಂಭವು ಒಬ್ಬ ವ್ಯಕ್ತಿಯನ್ನು ಮಾತ್ರವೇ ಅವಲಂಬಿಸಿದ್ದುದಾಗದೆ, ಬಹು ಮಂದಿಯ ಆಶ್ರಯದಿಂದ ಬೆಳೆಯಿತು. ದೇಶಕಾರ್ಯದಲ್ಲಿ ಒಬ್ಬಂಟಿಗರಾಗಿಯೂ ಸಹಾಯ ಶೂನ್ಯರಾಗಿಯೂ ಕ್ಲೇಶ ಪಡಬೇಕಾದ ಸಂದರ್ಭವು ವಿದ್ಯಾರಣ್ಯಸ್ವಾಮಿಗಳವರಿಗೆ ಎಷ್ಟುಮಾತ್ರವೂ ಒದಗಿರಲಿಲ್ಲ. ಅವರು ಕೈಗೊಂಡಿದ್ದ ಮಹಾ ವ್ಯವಸಾಯದಲ್ಲಿ ನೆಲವನ್ನು ಉತ್ತು ಸರಿಪಡಿಸಿಕೊಡುವುದಕ್ಕೂ ಪೈರಿಗೆ ನೀರು ಕಟ್ಟಿ ಕಳೆ ತೆಗೆಯುವುದಕ್ಕೂ ತಕ್ಕಷ್ಟು ಮಂದಿ ಸಾಹ್ಯಕರ್ತರು ಸಿದ್ಧರಾಗಿದ್ದರು. ಅಂಥವರಲ್ಲಿ ಮುಖ್ಯರಾದವರ ವೃತ್ತಾಂತಗಳನ್ನು ಸಾಧ್ಯವಿರುವ ಮಟ್ಟಿಗೆ ಇಲ್ಲಿ ತಿಳಿಸಲು ಯತ್ನಿಸುವೆವು.

ಇವರಲ್ಲಿ ಕೆಲವರ ಚರಿತ್ರೆಗಳು ವಿದ್ಯಾರಣ್ಯರ ಸ್ವಂತ ಚರಿತ್ರೆಗೆ ಅಂಗಗಳಂತೆ ಸಂಬಂಧಪಟ್ಟಿವೆ. ವಿದ್ಯಾರಣ್ಯೇತಿಹಾಸದಲ್ಲಿ ವಾಚಕರಿಗೆ ಸಂದೇಹಾಸ್ಪದವೆಂದು ತೋರಿರಬಹುದಾದ ಕೆಲವು ಅಂಶಗಳು ಈ ಮಹನೀಯರುಗಳ ಉಪಾಖ್ಯಾನಗಳಿಂದ ನಿಷ್ಕರ್ಷೆಯಾಗಿ ವಿಶದವಾಗುತ್ತವೆ; ಮತ್ತು ವಿದ್ಯಾರಣ್ಯರ ಕಾರ್ಯಕಲಾಪದ ಬಹು ಭಾಗವು ಈ ಮಹನೀಯರುಗಳ ಮೂಲಕವೇ ಪ್ರಕಾಶಗೊಂಡಿರತಕ್ಕುದಾಗಿದೆ. ಇದೂ ಅಲ್ಲದೆ, ಪಂಡಿತರೂ ಸಮರ್ಥರೂ ಆಗಿದ್ದ ಇವರುಗಳ ಪ್ರಭಾವವನ್ನು ಸ್ಮರಿಸಿ ನೋಡಿದರೆ, ಅವರ ಕಾಲವು ಎಷ್ಟು ಕಾಂತಿವಿಶಿಷ್ಟವಾಗಿದ್ದಿತು, ಎಷ್ಟು ಮಹಿಮಾನ್ವಿತವಾಗಿದ್ದಿತು, ಎಷ್ಟುಮಟ್ಟಿಗೆ ಜೀವಕಳಾ ಸಂಪನ್ನವಾಗಿದ್ದಿತು—ಎಂಬುದು ನಮ್ಮ ಮನಸ್ಸಿಗೆ ಚೆನ್ನಾಗಿ ಸ್ಫುರಿಸುತ್ತದೆ.

ಅವರಲ್ಲಿ ಮೊದಲು ನಮ್ಮ ಗಮನವನ್ನು ಪಡೆಯಬೇಕಾದವರು ವಿದ್ಯಾರಣ್ಯರ ಗುರುವರ್ಗದವರು. ಅವರು ನಾಲ್ಕು ಮಂದಿ:—

೧. ಶ್ರೀ ವಿದ್ಯಾತೀರ್ಥರು
೨. ಶ್ರೀ ಭಾರತೀಕೃಷ್ಣತೀರ್ಥರು
೩. ಶ್ರೀ ಶಂಕರಾನಂದರು
೪. ಶ್ರೀ ಶ್ರೀಕಂಠನಾಥರು

ಇವರಲ್ಲಿ ಮೊದಲನೆಯವರನ್ನು ವಿದ್ಯಾರಣ್ಯರು "ಮುಖ್ಯ ಗುರು" ವೆಂದು ಭಾವಿಸಿದ್ದರು. ಅಲ್ಲದೆ ಮೇಲಿನ ೨ನೆಯ ಮತ್ತು ೩ನೆಯ ಗುರುಗಳಿಗೂ ಆ ವಿದ್ಯಾತೀರ್ಥರೇ ಗುರುವಾಗಿದ್ದರು. ಆದಕಾರಣ ಮೊದಲು

ಅವರ ವೃತ್ತಾಂತವನ್ನು ತಿಳಿಸುವುದು ನ್ಯಾಯವಾಗಿದೆ. ಈ ವಿದ್ಯಾತೀರ್ಥಾಖ್ಯಾನವೂ ವಿದ್ಯಾರಣ್ಯಾಖ್ಯಾನವೂ ವಸ್ತುತಃ ಒಂದೇ ಇತಿಹಾಸದ ಎರಡು ಭಾಗಗಳೆಂದು ಹೇಳಬಹುದು; ಆ ಇಬ್ಬರು ಮಹಾ ಪುರುಷರುಗಳ ಆಶಯಗಳೂ, ಮನೋಭಾವಗಳೂ, ಜೀವಿತೋದ್ಯಮಗಳೂ ಅಷ್ಟು ಮಟ್ಟಿಗೆ ಸಂಮಿಳಿತವಾಗಿ ಏಕೀಭವಿಸಿದ್ದುವು.



---

# ಶ್ರೀ ವಿದ್ಯಾತೀರ್ಥರು

## ಅವತರಣಿಕೆ

ಶ್ರೀ ವಿದ್ಯಾತೀರ್ಥಸ್ವಾಮಿಗಳವರು ಕಾಂಚೀಪುರದಲ್ಲಿಯೂ ಶೃಂಗಗಿರಿಯಲ್ಲಿಯೂ ಶ್ರೀಮಚ್ಛಂಕರಾಚಾರ್ಯರಿಂದ ಪ್ರತಿಷ್ಠಿತಗಳಾಗಿರುವ ಕಾಮಕೋಟಿಪೀಠ ಶಾರದಾಪೀಠಗಳೆಂಬ ಎರಡು ಮಠಗಳಿಗೂ ಅಧಿಪತಿಯಾಗಿದ್ದರು. ಇವರ ಪೂರ್ವಾಶ್ರಮದ ಹೆಸರು ಸರ್ವಜ್ಞವಿಷ್ಣುವೆಂದು; ಜನ್ಮಸ್ಥಲವು ಬಿಲ್ವಾರಣ್ಯ; ತಂದೆ ಶಾರ್ಙ್ಗಪಾಣಿಯೆಂಬಾತನು. ಅವರಿಗೆ ಸಂನ್ಯಾಸವನ್ನಿತ್ತ ಗುರುಗಳು ಕಾಂಚೀಮಠಾಧೀಶ್ವರರಾದ ಚನ್ದ್ರಶೇಖರಮುನಿಗಳು; ಇವರನ್ನು ಪೂರ್ವಿಕರು "ಜಾಹ್ನವೀ ಚನ್ದ್ರಚೂಡೇನ್ದ್ರಸರಸ್ವತೀ" ಎಂದೂ ಕರೆದಿರುವರು. ಈ ಸಂಗತಿಗಳು ಕಾಂಚೀ ಮಠದ ಗುರುಪರಂಪರಾ ಸ್ತೋತ್ರರೂಪವಾದ "ಪುಣ್ಯಶ್ಲೋಕ ಮಂಜರಿ"ಯಿಂದ ತಿಳಿದುಬರುತ್ತವೆ. ಆ ಶ್ಲೋಕಗಳನ್ನು ಮುಂದೆ ಕಾಣಬಹುದು. ಮಾಧವ–ವಿದ್ಯಾರಣ್ಯ ರಚಿತವೆನಿಸಿರುವ "ಸರ್ವದರ್ಶನಸಂಗ್ರಹ"ವೆಂಬ ಪ್ರಸಿದ್ಧ ಗ್ರಂಥವೂ ಮೇಲಿನ ಅಂಶಗಳಲ್ಲಿ ಕೆಲವನ್ನು ದೃಢಪಡಿಸುತ್ತದೆ. ಅದರ ಪ್ರಸಕ್ತ ವಾಕ್ಯಗಳನ್ನೂ ಮುಂದೆ ಕಾಣಲಾಗುವುದು.

ವಿದ್ಯಾತೀರ್ಥರನ್ನು "ವಿದ್ಯಾಶಂಕರ," "ವಿದ್ಯಾನಾಥ," "ವಿದ್ಯೇಶ್ವರ" ಎಂಬ ಹೆಸರುಗಳಿಂದಲೂ ಕರೆದಿರುವರು.

## ವ್ಯಕ್ತಿನಿರ್ದೇಶ

ಶೃಂಗೇರಿಯ ಮತ್ತು ಕಂಚಿಯ ಮಠಗಳೆರಡರ ಗುರುಪರಂಪರಾ ಪಟ್ಟಿಕೆಗಳಲ್ಲಿಯೂ ಇರುವ ಹೆಸರುಗಳಲ್ಲಿ, ಮೂಲಕರ್ತರಾದ ಶ್ರೀಶಂಕರಭಗವತ್ಪಾದಾಚಾರ್ಯರನ್ನೂ ಅವರ ತರುವಾಯ ಪೀಠಕ್ಕೆ ಬಂದ ತಚ್ಛಿಷ್ಯರಾದ ಸುರೇಶ್ವರಾಚಾರ್ಯರನ್ನೂ ಬಿಟ್ಟು ಇತರರ ಹೆಸರುಗಳನ್ನು ಹೋಲಿಸಿ ನೋಡಿದರೆ, ವಿದ್ಯಾತೀರ್ಥರ ಹೆಸರೊಂದು ಮಾತ್ರ ಎರಡರಲ್ಲಿಯೂ ಸಮಾನಾಂಶವಾಗಿ ಕಾಣಬರುತ್ತದೆ. ಕಂಚಿಯ ಪರಂಪರೆಯಲ್ಲಿ ವಿದ್ಯಾತೀರ್ಥರು ಐವತ್ತೊಂದನೆಯವರು; ಶೃಂಗೇರಿಯದರಲ್ಲಿ ಅವರು ಹತ್ತನೆಯವರು. ಕಂಚಿಯ ಪಟ್ಟಿಯಲ್ಲಿ ವಿದ್ಯಾತೀರ್ಥರ ಹೆಸರಿಗೆ ಹಿಂದೆ ಬಂದಿರುವ ಹೆಸರುಗಳಲ್ಲಿ ಯಾವುದೊಂದೂ (ಮೊದಲಿನ ಎರಡನ್ನು ಬಿಟ್ಟರೆ) ಶೃಂಗೇರಿಯ ಪಟ್ಟಿಯಲ್ಲಿ ಆ ಹೆಸರಿನ ಹಿಂದುಗಡೆ ಕಾಣಬರುವು

ದಿಲ್ಲ. ಇದರಿಂದ ವಿದ್ಯಾತೀರ್ಥರ ಕಾಲಕ್ಕೆ ಹಿಂದೆ ಎರಡು ಮಠಗಳಿಗೂ ಮೊದಲಿನ ಇಬ್ಬರ ಹೊರತು ಒಂದೇ ಹೆಸರಿನ ಗುರುಗಳು ಯಾವಾಗಲೂ ಇರಲಿಲ್ಲವೆಂಬುದು ಸ್ಪಷ್ಟವಾಗಿದೆ.

ವಿದ್ಯಾತೀರ್ಥರಿಂದೀಚಿನ ಗುರುಪರಂಪರೆಯಲ್ಲಿಯಾದರೋ ಕಂಚಿಯ ಪಟ್ಟಿಕೆಯಲ್ಲಿನ ಒಂದೆರಡು ಹೆಸರುಗಳು ಶೃಂಗೇರಿಯ ಪಟ್ಟಿಕೆಯಲ್ಲಿನ ಹೆಸರುಗಳಲ್ಲೊಂದೆರಡನ್ನು ಪೂರ್ವಾರ್ಧ ಭಾಗದಲ್ಲಿ ಮಾತ್ರ ಸ್ವಲ್ಪ ಮಟ್ಟಿಗೆ ಹೋಲುತ್ತವೆ. ಅವುಗಳನ್ನು ಈ ಕೆಳಗಿನ ಪಟ್ಟಿಯಲ್ಲಿ ಕಾಣಬಹುದು:—

| ಶೃಂಗೇರಿ | ಕಂಚಿ |
|---|---|
| ೧೦. ವಿದ್ಯಾತೀರ್ಥ (ವಿದ್ಯಾಶಂಕರ) | ೫೧. ವಿದ್ಯಾತೀರ್ಥ |
| ೧೧. ಭಾರತೀಕೃಷ್ಣತೀರ್ಥ | ೫೨. ಶಂಕರಾನಂದ |
| ೧೨. ವಿದ್ಯಾರಣ್ಯ | ೫೩. ಪೂರ್ಣಾನಂದಸದಾಶಿವ |
| ೧೩. ಚಂದ್ರಶೇಖರಭಾರತೀ | ೫೪. ಮಹಾದೇವ ಸರಸ್ವತೀ |
| ೧೪. ನರಸಿಂಹಭಾರತೀ | ೫೫. ಚಂದ್ರಚೂಡ " |
| ೧೫. ಭಕ್ತಶಂಕರ ಪುರುಷೋತ್ತಮ ಭಾರತೀ | ೫೬. ಸರ್ವಜ್ಞಸದಾಶಿವಬೋಧ " |
| ೧೬. ಶಂಕರಾನಂದಭಾರತೀ | ೫೭. ಪರಮಶಿವ ಸರಸ್ವತೀ |
| ೧೭. ಚಂದ್ರಶೇಖರಭಾರತೀ | ೫೮. ಆತ್ಮಬೋಧ " |
| ೧೮. ನರಸಿಂಹಭಾರತೀ | ೫೯. ಬೋಧ " |
| ೧೯. ಪುರುಷೋತ್ತಮಭಾರತೀ | ೬೦. ಅದ್ವಯಾತ್ಮಪ್ರಕಾಶ " |

ಆದರೂ ಇಲ್ಲಿ ಕೊಂಚವಾದ ಹೋಲಿಕೆಯುಳ್ಳ ಹೆಸರುಗಳ ಪ್ರತಿಯೊಂದು ಜೊತೆಯೂ ಒಬ್ಬ ವ್ಯಕ್ತಿಗೇ ಸೇರಿದುದೆಂದು ಹೇಳಲಾಗುವುದಿಲ್ಲ. ಏಕೆಂದರೆ ಯತಿನಾಮಧೇಯದ ಅಂತಿಮ ಸಂಕೇತಗಳು ಎರಡು ಪಟ್ಟಿಕೆಗಳಲ್ಲಿಯೂ ಬೇರೆ ಬೇರೆಯಾಗಿವೆ. ಶೃಂಗೇರಿಯ ಗುರುಗಳ ಹೆಸರಿನ ಕೊನೆಯಲ್ಲಿ ಸಾಮಾನ್ಯವಾಗಿ "ಭಾರತೀ" ಎಂಬ ಗುರುತು ಇರುತ್ತದೆ. ಕಂಚಿಯವರ ಹೆಸರಿನ ಕಡೆಯಲ್ಲಿ "ಇಂದ್ರ ಸರಸ್ವತೀ" ಅಥವಾ "ಸರಸ್ವತೀ" ಎಂಬ ಗುರುತು ಇರುತ್ತದೆ. ಕಂಚಿಯಲ್ಲಿ ಚಂದ್ರಶೇಖರರೆಂಬ ಸಂನ್ಯಾಸ ನಾಮವನ್ನು ಪಡೆದವರಿಗೆ "ಚಂದ್ರಶೇಖರ ಸರಸ್ವತೀ"

ಎಂಬುದು ಸಾಂಪ್ರದಾಯಿಕವಾದ ಹೆಸರು. ಶೃಂಗೇರಿಯಲ್ಲಿ ಚಂದ್ರಶೇಖರ ರೆಂಬ ಸಂನ್ಯಾಸ ನಾಮವನ್ನು ಪಡೆದವರಿಗೆ "ಚಂದ್ರಶೇಖರ ಭಾರತೀ" ಎಂಬುದು ಸಾಂಪ್ರದಾಯಿಕವಾದ ಹೆಸರು. ಯತಿನಾಮಧೇಯದಲ್ಲಿ "ಸರಸ್ವತೀ," "ಭಾರತೀ" ಎಂಬ ಪದಗಳು ಪರ್ಯಾಯ ಪದಗಳಲ್ಲವಾದ ಕಾರಣ, ಇವುಗಳನ್ನು ಬೆರೆಸುವುದು—ಎಂದರೆ ಒಬ್ಬ ವ್ಯಕ್ತಿಯ ಹೆಸರಿನಲ್ಲಿ ಒಂದಕ್ಕಿನ್ನೊಂದನ್ನು ಇಷ್ಟಬಂದಂತೆ ಪ್ರತಿಯಾಗಿ ಇಡುವುದು—ಸಂಪ್ರದಾಯವಲ್ಲ. ಆದಕಾರಣ ವಿದ್ಯಾತೀರ್ಥರಿಂದ ಈಚೆಗೆ ಕಂಚಿಯಲ್ಲಿದ್ದ ಒಬ್ಬರಿಬ್ಬರು ಗುರುಗಳ ಹೆಸರುಗಳೂ ಶೃಂಗೇರಿಯಲ್ಲಿದ್ದ ಒಬ್ಬರಿಬ್ಬರ ಹೆಸರುಗಳೂ ವೈಯಕ್ತಿಕವಾದ ಪೂರ್ವಾರ್ಧ ಭಾಗದಲ್ಲಿ ಸ್ವಲ್ಪಮಾತ್ರ ಸಮಾನ ರೂಪವನ್ನು ಹೊಂದಿದ್ದರೂ, ಅವುಗಳ ಸಾಂಕೇತಿಕವಾದ ಉತ್ತರಾರ್ಧ ರೂಪಗಳು ಬೇರೆಯಾಗಿರುವಕಾರಣ ಅವುಗಳು ಆಯಾ ಸಂದರ್ಭಗಳಲ್ಲಿ ಒಬ್ಬ ಯತಿಗೇ ಅನ್ವಯಿಸತಕ್ಕುವೆಂದು ಹೇಳಲಾಗುವುದಿಲ್ಲ. ಇದಲ್ಲದೆ ಈ ಜೋಡಿ ಹೆಸರುಗಳ ಅನುಕ್ರಮದಲ್ಲಿಯೂ ಕಾಲಮಾನದಲ್ಲಿಯೂ ಹೆಚ್ಚಾದ ವ್ಯತ್ಯಾಸಗಳಿವೆ. ಇದನ್ನೂ ವಿಚಾರಮಾಡಿ ನೋಡಿದರೆ, ಶಂಕರ ಸುರೇಶ್ವರರುಗಳ ಅನಂತರ ವಿದ್ಯಾತೀರ್ಥರೊಬ್ಬರು ಮಾತ್ರವೇ ಎರಡು ಮಠಗಳಿಗೂ ಒಟ್ಟಿಗೆ ಅಧಿಪತಿಯಾಗಿದ್ದರೆಂದು ಹೇಳುವುದು ಯಥಾರ್ಥವೆನಿಸುತ್ತದೆ.

"ವಿದ್ಯಾತೀರ್ಥ"ರೆಂಬ ಹೆಸರು ಕೂಡ ಇಬ್ಬರು ಬೇರೆ ಬೇರೆ ಮಠಾಧೀಶ್ವರರಿಗೆ ಸೇರಿದುದೋ ಏನೋ ಎಂಬ ಸಂದೇಹಕ್ಕೆ ಕಾರಣವೇನೂ ತೋರುವುದಿಲ್ಲ. ಕಂಚಿ ಶೃಂಗೇರಿಗಳೆರಡರ ಪಟ್ಟಿಕೆಗಳಲ್ಲಿಯೂ "ವಿದ್ಯಾತೀರ್ಥ" ಎಂಬ ಹೆಸರೂ "ವಿದ್ಯಾಶಂಕರ" ಮೊದಲಾದ ಅದರ ಪರ್ಯಾಯ ಪದಗಳೂ ಒಂದೇ ರೀತಿ (ವ್ಯತ್ಯಾಸವಿಲ್ಲದೆ) ಉಪಯೋಗಿಸಲ್ಪಟ್ಟಿವೆ. ಎರಡರಲ್ಲಿಯೂ ಸೂಚಿತಗಳಾಗಿರುವ ಕಾಲ ನಿರ್ದೇಶಗಳು ಪರಸ್ಪರ ಅಸಂಬದ್ಧಗಳಾಗಿಲ್ಲ. ಎರಡರಲ್ಲಿಯೂ ಭಾರತೀತೀರ್ಥ ವಿದ್ಯಾರಣ್ಯರ ಹೆಸರುಗಳು ವಿದ್ಯಾತೀರ್ಥ ಶಿಷ್ಯ ವರ್ಗದಲ್ಲಿ ಉಕ್ತವಾಗಿವೆ. ಕಂಚಿಯ ವಿದ್ಯಾತೀರ್ಥರ ಮಾಹಾತ್ಮ್ಯವನ್ನು ತೋರುವ ಕಥೆಗಳೇ ಶೃಂಗೇರಿಯ ಆ ಹೆಸರಿನ ಗುರುಗಳ ವಿಷಯದಲ್ಲಿಯೂ ಹೇಳಲ್ಪಟ್ಟಿವೆ. ಈ ಕಾರಣಗಳಿಂದ, ಕಂಚಿಯಲ್ಲಿ ಆಶ್ರಮ ಸ್ವೀಕಾರಮಾಡಿ ಪೀಠಾರೋಹಣ ಮಾಡಿದ ವಿದ್ಯಾತೀರ್ಥರೇ ಸ್ವಲ್ಪ ಕಾಲಾನಂತರ ಶೃಂಗೇರಿಯಲ್ಲಿಯೂ ಅಧಿಕಾರವನ್ನು ವಹಿಸಿಕೊಂಡರೆಂಬ ಬಹು ಕಾಲದ ಪ್ರಬಲ ಐತಿಹ್ಯವು ಕದಲದಂತೆ ಸ್ಥಿರಪಡುತ್ತದೆ.

## ಕಾಲ ನಿರ್ದೇಶ

ವಿದ್ಯಾತೀರ್ಥರು ಪೀಠಾರೋಹಣ ಮಾಡಿದ ಮತ್ತು ಸಮಾಧಿ ಹೊಂದಿದ ಕಾಲಗಳು ಎರಡು ಮಠಗಳ ಆಧಾರಗಳಿಂದ ಈ ಕೆಳಗೆ ಕಾಣುವಂತೆ ತಿಳಿದುಬರುತ್ತವೆ:—

| | ಸಂನ್ಯಾಸ | ಸಿದ್ಧಿ |
|---|---|---|
| ಕಂಚಿ— | ಶಾ.ಶ. ೧೨೧೯ (ಕ್ರಿ.ಶ. ೧೨೯೭) | ಶಾ.ಶ. ೧೩೦೩ (ಕ್ರಿ.ಶ. ೧೩೮೧)* |
| ಶೃಂಗೇರಿ— | ,, ೧೧೫೦ ( ,, ೧೨೨೮) | ,, ೧೨೫೫ ( ,, ೧೩೩೩)* |

ಈ ಕಾಲ ನಿರ್ದೇಶವನ್ನು ಸ್ಥೂಲವಾಗಿ—ಎಂದರೆ ಅದರ ಪರಮಾವಧಿಗಳೆರಡರ, ಅರ್ಥಾತ್ ಕ್ರಿ. ಶ. ೧೨೨೮ರಿಂದ ಕ್ರಿ. ಶ. ೧೩೮೧ರವರೆಗಿನ ೧೫೩ ವರ್ಷಗಳ, ಮಧ್ಯೆ ಯಾವುದೋ ಒಂದು ಕಾಲ ವಿಭಾಗವನ್ನು—ವಿದ್ಯಾತೀರ್ಥರದೆಂದು ನಾವು ಅಂಗೀಕರಿಸಬಹುದೇ ವಿನಾ, ಆ ಅವಧಿಗಳಲ್ಲಾವ ಒಂದನ್ನೂ ನಿಷ್ಕೃಷ್ಟವಾದುದೆಂದು ಒಪ್ಪಲಾಗುವುದಿಲ್ಲ. ಮಠಪಟ್ಟಿಕೆಗಳಿಗೆ ಉಪಷ್ಟಂಭಕಗಳಾದ ಇತರ ಆಧಾರಗಳು ದೊರೆಯದೆ ಇದ್ದು, ಅವುಗಳಿಗೆ ಇತರ ಪ್ರಮಾಣಗಳಿಂದ ಬಾಧಕವುಂಟಾಗುವ ಹಾಗಿದ್ದರೆ, ಆಗ ನಾವು ಅವುಗಳನ್ನು ನಂಬಲೇ ನಂಬಬೇಕಾದ ಕಾರಣವೇನೂ ಇರುವುದಿಲ್ಲ. ಈಗ, ಶೃಂಗೇರಿಯ ಪಟ್ಟಿಕೆಯ ಪ್ರಕಾರ ಶ್ರೀ ವಿದ್ಯಾತೀರ್ಥರು ಕ್ರಿ. ಶ. ೧೩೩೩ರಲ್ಲಿ ಸಿದ್ಧಿ ಪಡೆದಿರಬೇಕು. ಆದರೆ ಕ್ರಿ. ಶ. ೧೩೫೫ಕ್ಕೆ ಸರಿಯಾದ ಮನ್ಮಥ ಸಂವತ್ಸರದಲ್ಲಿ ಬುಕ್ಕರಾಜನು ಶೃಂಗೇರಿಗೆ ಪ್ರಯಾಣ ಮಾಡಿ ವಿದ್ಯಾತೀರ್ಥರನ್ನು ಸಂದರ್ಶಿಸಿ ಯತಿಗಳ ಭಿಕ್ಷಾದಿಗಳಿಗೋಸ್ಕರ ಭೂದಾನಮಾಡಿದನೆಂದು ಶೃಂಗೇರಿಯ ಶಾಸನವೊಂದರಿಂದಲೇ ತಿಳಿದು ಬಂದಿದೆ.† ಅದಲ್ಲದೆ ಬೇರೊಂದು ಸಮಯದಲ್ಲಿ ಕಾಶಿಗೆ ಹೋಗಿದ್ದ ವಿದ್ಯಾರಣ್ಯರನ್ನು ಬರಮಾಡಿಕೊಳ್ಳುವ ನಿಮಿತ್ತದಿಂದ ಬುಕ್ಕರಾಯನು ಅವರ ಹೆಸರಿಗೆ ವಿದ್ಯಾತೀರ್ಥ ಗುರುಗಳ ಕಡೆಯಿಂದ ಒಂದು ನಿರೂಪವನ್ನು ಬರೆಯಿಸಿ ಕಳುಹಿಸಿದನೆಂದು ಇನ್ನೊಂದು ಶಾಸನದಿಂದ ತಿಳಿದು ಬಂದಿದೆ.

ಕ್ರಿ. ಶ. ೧೩೫೫ರಲ್ಲಿ ದೇಹಧಾರಣೆ ಮಾಡಿದ್ದ ವಿದ್ಯಾತೀರ್ಥರು ಕ್ರಿ. ಶ. ೧೩೮೦ಕ್ಕೆ ಹಿಂದೆಯೇ ಮುಕ್ತರಾಗಿರಬೇಕು. ಏಕೆಂದರೆ, ಶೃಂಗೇರಿಯಲ್ಲಿ ವಿದ್ಯಾತೀರ್ಥರ ಸಮಾಧಿರೂಪವಾಗಿ ವಿದ್ಯಾರಣ್ಯರಿಂದ ಕಟ್ಟಿಸಲ್ಪಟ್ಟ ವಿದ್ಯಾಶಂಕರ ದೇವಾಲಯದ ಪ್ರತಿಷ್ಠಾ ಮಹೋತ್ಸವದಲ್ಲಿ

* *Mysore Archaeological Report for 1916, Para 16.*

† *Ibid Para* 18.

ಭಾರತೀತೀರ್ಥರು ಭಾಗಿಗಳಾಗಿದ್ದರೆಂದೂ, ಆ ಸಮಯದಲ್ಲಿ ಹಿಂದೆ ಬುಕ್ಕ ರಾಜನು ದಾನವಾಗಿ ಕೊಟ್ಟಿದ್ದ ಭೂಮಿಗಳನ್ನು ಅವರು ೧೨೦ ವೃತ್ತಿಗಳಾಗಿ ವಿಭಾಗಿಸಿ ಬ್ರಾಹ್ಮಣರಿಗೆ ದಾನಕೊಟ್ಟರೆಂದೂ ಶೃಂಗೇರಿಯ ಕ್ರಿ.ಶ. ೧೩೮೦ರ ಶಾಸನವೊಂದರಿಂದ ಗೊತ್ತಾಗುತ್ತದೆ. ಹೀಗೆ ಕಂಚಿಯ ಕಾಲ ನಿರ್ದೇಶವೂ ಸ್ವಲ್ಪ ಮಟ್ಟಿಗೆ ಅಸಮಂಜಸವಾಗಿರುವಂತೆ ಕಾಣುತ್ತದೆ. ವಿದ್ಯಾತೀರ್ಥರ ಪೀಠಾಧಿಕಾರ ಕಾಲವು ವಿಜಯನಗರ ಸ್ಥಾಪನೆಯ ವರ್ಷವಾದ ಕ್ರಿ.ಶ. ೧೩೩೬ರ ಹಿಂದಿನಿಂದ ಶೃಂಗೇರಿಯ ವಿದ್ಯಾಶಂಕರಾಲಯ ಸ್ಥಾಪನೆಯ ವರ್ಷವಾದ ೧೩೮೦ರ ಹಿಂದಿನವರೆಗೂ ಇದ್ದಿರಬೇಕು ಎಂದು ಮಾತ್ರ ಧಾರಾಳವಾಗಿ ಹೇಳಬಹುದು.

## ಕುಲ ನಿರ್ದೇಶ

ವಿದ್ಯಾತೀರ್ಥರು ಕನ್ನಡಿಗರಾಗಿದ್ದಿರಬಹುದೆ?—ಎಂಬ ಊಹೆಗೆ ಕೆಲವು ಕಾರಣಗಳಿರುವುವೆಂಬ ಅಂಶವನ್ನು ನಾವು ಇಲ್ಲಿ ವಿಚಾರಕ್ಕೆ ತಂದುಕೊಳ್ಳಬೇಕಾಗಿದೆ:—

(೧) ಭರತಖಂಡದಲ್ಲಿ ಅತ್ಯಂತ ಪವಿತ್ರಗಳಾದ ಅಯೋಧ್ಯಾ ಮಧುರಾದಿ ಸಪ್ತ ಕ್ಷೇತ್ರಗಳಲ್ಲಿ ಒಂದೆನಿಸಿ, ಪುರಾಣ ಪ್ರಶಂಸಿತವಾಗಿ, ಪುರಾತನ ಪಟ್ಟಣವಾಗಿರುವ ಕಂಚಿಯು ಹೊಯ್ಸಳ ರಾಜನಾದ ಇಮ್ಮಡಿ ನರಸಿಂಹನ ಕಾಲದಿಂದ—ಎಂದರೆ ಸುಮಾರು ಕ್ರಿ. ಶ. ೧೨೨೨ರಿಂದ—ಕರ್ಣಾಟಕ ಸಮ್ರಾಟರ ಉಪರಾಜಧಾನಿಯಾಗಿತ್ತೆಂಬ ಸಂಗತಿಯನ್ನು ನಾವು ಇಲ್ಲಿ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ನರಸಿಂಹರಾಜನೂ ಆತನ ಮಗ ಸೋಮೇಶ್ವರನೂ ಚೋಳರಾಜ್ಯವನ್ನು ಗೆದ್ದು, ಶ್ರೀರಂಗ ತಿರುಚನಾಪಳ್ಳಿಗಳನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡು, ತಮಿಳು ನಾಡಿನಲ್ಲಿ ಕನ್ನಡಿಗರ ಧ್ವಜವನ್ನು ಹೂಡಿದ್ದರು.* ಆ ಕಾಲದಲ್ಲಿ ಅನೇಕ ಮಂದಿ ಕರ್ಣಾಟಕ ರಾಷ್ಟ್ರದ ವಿದ್ವಜ್ಜನರು ಕಂಚಿ ಮೊದಲಾದ ರಾಜಾಸ್ಥಾನಗಳಿಗೆ ಹೋಗಿ ಅಲ್ಲಿಯ ಕನ್ನಡ ರಾಜ್ಯಾಧಿಕಾರಿಗಳ ಆಶ್ರಯದಲ್ಲಿ ನೆಲೆಸಿರಬೇಕು.

(೨) ಕಂಚಿಯ ಪೀಠಾಧೀಶ್ವರರು ಅದ್ಯಾಪಿ ಕರ್ಣಾಟಕರೇ. ಆ ಮಠದ ಅಧಿಕಾರಕ್ಕೆ ಯತ್ಯಾಶ್ರಮ ಗ್ರಹಣಮಾಡಿಸುವುದಕ್ಕಾಗಿ ಕೆಲವು ಗೊತ್ತಾದ ಕರ್ಣಾಟಕ ಮನೆತನಗಳಿಂದಲೇ ವಟುವನ್ನಾರಿಸಿಕೊಳ್ಳುವುದು ಬಹುಕಾಲದಿಂದ ಬಂದಿರುವ ಪದ್ಧತಿ. ಇದು ವಿದ್ಯಾತೀರ್ಥರ ಕಾಲದಿಂದ ಬಂದುದಾಗಿರಬಹುದು.

---

* *Mysore Gazetteer Vol. I, P. 340, B. L. Rice* (1897).

(೩) ಮಾಧವ ಸಾಯಣರು ಹುಟ್ಟುಕನ್ನಡಿಗರೆಂಬುದು ಈಗ ನಿರ್ವಿವಾದವಾಗಿದೆ. ಅವರು ಕರ್ಣಾಟಕ ದೇಶದಿಂದ ವಿದ್ಯಾರ್ಜನೆಗೋಸ್ಕರ ದೂರ ಪ್ರದೇಶವಾದ ಕಂಚಿಗೆ ಹೋಗಿ ಅಲ್ಲಿ ನೆಲಸಿರಬೇಕಾದರೆ, ಅಲ್ಲಿಗೆ ಅವರನ್ನಾಕರ್ಷಿಸಿದ ಗುರುವು ಸ್ವಕೀಯರಾಗಿ, ಸ್ವದೇಶೀಯರಾಗಿ, ವಿಶೇಷ ವಾದ ಅಭಿಮಾನಕ್ಕೆ ಆಸ್ಪದರಾದವರಾಗಿದ್ದಿರಬೇಕು.

(೪) ವಿದ್ಯಾತೀರ್ಥರು ತಮಿಳು ನಾಡಿನಲ್ಲಿ ಕಂಚಿಯ ಪೀಠವನ್ನಲಂಕರಿಸಿದ್ದರೂ, ಸ್ವಲ್ಪ ಕಾಲದ ತರುವಾಯ ಅವರು ಕನ್ನಡ ನಾಡಿನಲ್ಲಿಯ ಶೃಂಗೇರಿಯ ಪೀಠವನ್ನೂ ಆರೋಹಣಮಾಡಿ, ಈ ಪೀಠದ ಉಚ್ಛ್ರಾಯಕ್ಕಾಗಿ ವಿಶೇಷ ಪ್ರಯತ್ನವನ್ನು ಮಾಡಿಸಿ, ("ದ್ರಾವಿಡ ಸಿಂಹಾಸನ," "ಸ್ಮಾರ್ತ ಸಿಂಹಾಸನ" ಅಥವಾ "ಆರ್ಯ ಸಿಂಹಾಸನ" ಪ್ರತಿಷ್ಠಾಪಕರೆಂಬುದಕ್ಕೆ ಪ್ರತಿಯಾಗಿ) "ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ"ರೆಂಬ ಬಿರುದನ್ನು ಸ್ವಪೀಠಾಧೀಶ ಸಂತತಿಗೆ ಸಂಪಾದಿಸಿಕೊಂಡರಾದ ಕಾರಣ, ಅವರಿಗೆ ಕರ್ಣಾಟಕದಲ್ಲಿ ವಿಶೇಷಾಭಿಮಾನವಿದ್ದಿರಬೇಕೆಂದು ತೋರುತ್ತದೆ. ಅದಕ್ಕೆ ಅವರ ಕರ್ಣಾಟಕೀಯತೆಯೇ ಕಾರಣವಾಗಿದ್ದಿರಬೇಕು.

## ಪೂರ್ವೋತ್ತರ ನಿರ್ಣಯ

ವಿದ್ಯಾತೀರ್ಥ ಯತಿಗಳ ಪೂರ್ವಾಶ್ರಮದ ಹೆಸರು "ಸರ್ವಜ್ಞವಿಷ್ಣು"ವೆಂದೂ ಅವರ ಆಗಿನ ತಂದೆಯ ಹೆಸರು ಶಾರ್ಙ್ಗಪಾಣಿಯೆಂದೂ ಮೇಲೆ ಹೇಳಿದೆಯಷ್ಟೆ? ಅದಕ್ಕೆ ಆಧಾರವು "ಪುಣ್ಯಶ್ಲೋಕ ಮಂಜರಿ"ಯ ಈ ಕೆಳಗಿನ ಶ್ಲೋಕ:—

ಬಿಲ್ವಾರಣ್ಯಜ ಶಾರ್ಙ್ಗಪಾಣಿತನಯಃ ಸ್ಸರ್ವಜ್ಞವಿಷ್ಣುಶ್ಶ್ರಯನ್।
ಸಂನ್ಯಾಸಂ ಗುರು ಚಂದ್ರಶೇಖರಮುನೇರಾಸ್ಥಾಯ ಪೀಠೀಂ ಗುರೋಃ॥
ಯೋಗೇಶಸ್ಯ ಚ ಚಕ್ರರಾಜವಸತೇರ್ದೇವ್ಯಾಶ್ಚ ಸಕ್ತೋऽರ್ಚನೇ।
ಶ್ರೀಮನ್ಮಾಧವ ಬುಕ್ಕ ಭಾರತಿಯತಿ ಪ್ರಷ್ಠೈರ್ಮಹಿಷ್ಠೈರ್ವೃತಃ॥

[ಬಿಲ್ವಾರಣ್ಯದಲ್ಲಿ ಶಾರ್ಙ್ಗಪಾಣಿಯ ಮಗನಾಗಿ ಹುಟ್ಟಿದ ಸರ್ವಜ್ಞವಿಷ್ಣುವು ಸಂನ್ಯಾಸವನ್ನು ಸ್ವೀಕರಿಸಿ, ಚಂದ್ರಶೇಖರ ಮುನಿಗಳು ಅಲಂಕರಿಸಿದ್ದ ಗುರು ಪೀಠವನ್ನು ಅರೋಹಿಸಿ, ಯೋಗೇಶ್ವರನಾದ ಕಂಚಿಯ ಏಕಾಮ್ರನಾಥ ಸ್ವಾಮಿಯ ಮತ್ತು ಶ್ರೀಚಕ್ರವಾಸಿನಿಯಾದ ಕಾಮಾಕ್ಷೀದೇವಿಯ ಅರ್ಚನೆಯಲ್ಲಿ ಆಸಕ್ತನಾಗಿ, ಮಾಧವ ಬುಕ್ಕ ಭಾರತೀತೀರ್ಥ ಮೊದಲಾದ ಮಹನೀಯರಿಂದ ಆಶ್ರಯಿಸಲ್ಪಟ್ಟವನಾಗಿದ್ದನು.]

ಈ ಶ್ಲೋಕದ ಸಂಗತಿಗಳನ್ನು ಮಾಧವ-ವಿದ್ಯಾರಣ್ಯ ವಿರಚಿತವೆಂದು ಪ್ರಸಿದ್ಧವಾಗಿರುವ "ಸರ್ವದರ್ಶನ ಸಂಗ್ರಹ" ಗ್ರಂಥದಲ್ಲಿಯ ಗುರು ಸ್ಮರಣೆಯು ಪುಷ್ಟೀಕರಿಸುತ್ತದೆ. ಹೇಗೆಂದರೆ:—

ಪಾರಂಗತಂ ಸಕಲದರ್ಶನ ಸಾಗರಾಣಾ।
ಮಾತ್ಮೋಚಿತಾರ್ಥ ಚರಿತಾರ್ಥಿತ ಸರ್ವಲೋಕಂ॥
ಶ್ರೀ ಶಾರ್ಙ್ಗಪಾಣಿ ತನಯಂ ನಿಖಿಲಾಗಮಜ್ಞಂ।
ಸರ್ವಜ್ಞವಿಷ್ಣು ಗುರುಮನ್ವಹಮಾಶ್ರಯೇಹಂ॥

[ನಾನಾ ದರ್ಶನ (ಮತ) ಗಳೆಂಬ ಸಮುದ್ರಗಳ ದಡವನ್ನು ಸೇರಿದವರೂ, ಸಮಸ್ತ ಜಗತ್ತಿಗೂ ಆತ್ಮಹಿತ ಬೋಧೆಯನ್ನು ಮಾಡಿ ಕೃತಾರ್ಥತೆಯನ್ನುಂಟು ಮಾಡಿಸುವವರೂ, ಶಾರ್ಙ್ಗಪಾಣಿಯೆಂಬಾತನ ಪುತ್ರರೂ, ಸಕಲ ವೇದಗಳನ್ನು ತಿಳಿದವರೂ ಆದ ಸರ್ವಜ್ಞವಿಷ್ಣುವೆಂಬ (ವಿದ್ಯಾತೀರ್ಥ) ಗುರುಗಳನ್ನು ನಾನು ಯಾವಾಗಲೂ ಆಶ್ರಯಿಸಿರುವೆನು.]

ಈ ಗ್ರಂಥವು ಸ್ವಮತವಾದ ಅದ್ವೈತ ವೇದಾಂತದಿಂದ ಬೇರೆಯಾಗಿ ಚಾರ್ವಾಕಾದಿ ಪಾತಂಜಲಾಂತಗಳಾಗಿರುವ ಮತ ಮತಾಂತರಗಳನ್ನು ವಿವರಿಸತಕ್ಕುದು. ಆದಕಾರಣದಿಂದಲೇ ಇದರಲ್ಲಿ ಗ್ರಂಥಕಾರರು ತಮ್ಮ ಗುರುಗಳ ಅದ್ವೈತ ಪೀಠೋಚಿತವಾದ ಯತಿ ನಾಮಧೇಯವನ್ನು ಬಿಟ್ಟು, ಅವರ ಲೌಕಿಕ ವ್ಯವಹಾರ ನಾಮವನ್ನು ಸ್ಮರಿಸಿರುವರೆಂದು ನಾವು ಊಹಿಸಬಹುದಾಗಿದೆ. ಈ ಸಂಕೇತವನ್ನೇ ಮಾಧವ-ವಿದ್ಯಾರಣ್ಯರು ಸ್ವವಿಷಯದಲ್ಲಿಯೂ ಅನುಸರಿಸಿರುವಂತೆ ಕಾಣುತ್ತದೆ. ಮಾಧವ-ವಿದ್ಯಾರಣ್ಯರ ಹೆಸರಿನಿಂದ ಪ್ರಸಿದ್ಧವಾಗಿರುವ ಗ್ರಂಥಗಳಲ್ಲಿ ವೇದ ವೇದಾಂಗ ಸ್ಮೃತಿ ಪುರಾಣಗಳಿಗೆ ಸಂಬಂಧಪಟ್ಟು ಪ್ರವೃತ್ತಿಮಾರ್ಗಕ್ಕೇ ವಿಶೇಷ ಉಪಯುಕ್ತಗಳಾಗಿರತಕ್ಕವುಗಳು ಅವರ ಪೂರ್ವಾಶ್ರಮಾಭಿಧಾನದಿಂದ "ಮಾಧವೀಯ"ಗಳೆನಿಸಿಯೂ, ನಿವೃತ್ತಿಮಾರ್ಗೋಚಿತಗಳಾದ ಬ್ರಹ್ಮವಿದ್ಯಾ ವಿಷಯಕ ಗ್ರಂಥಗಳು ಮಾತ್ರ ಯತ್ಯಾಶ್ರಮಾಭಿಧಾನದಿಂದ ವಿದ್ಯಾರಣ್ಯ ಕೃತಗಳೆನಿಸಿಯೂ ಇವೆ. ಈ ನಾಮಧೇಯ ವಿಧಾನದಲ್ಲಿ ಒಂದು ಔಚಿತ್ಯ ವಿಶೇಷವು ಉಂಟೆಂಬುದನ್ನು ಯಾರೂ ಒಪ್ಪದಿರಲಾರರು.

ಇದರಿಂದ ತೋರಿಬರುವ ಮತ್ತೊಂದಂಶವೇನೆಂದರೆ—ವಿದ್ಯಾತೀರ್ಥರು ಯತ್ಯಾಶ್ರಮವನ್ನು ಸ್ವೀಕರಿಸಿದ ಬಳಿಕ ಮಾಧವಾಚಾರ್ಯರಿಗೆ ಅದ್ವೈತಾಚಾರ್ಯರಾದಂತೆ, ಅದಕ್ಕೆ ಮುಂಚೆ ಅವರಿಗೆ ಇತರ ಶಾಸ್ತ್ರಗಳನ್ನೂ ಪ್ರವಚನಮಾಡಿಸಿದವರಾಗಿದ್ದಿರಬೇಕು. ಮಾಧವಾಚಾರ್ಯರು ಸರ್ವಜ್ಞವಿಷ್ಣುಭಟ್ಟರಲ್ಲಿ ಮೊದಲು ಸಮಸ್ತ ವೈದಿಕ ಲೌಕಿಕ ಶಾಸ್ತ್ರ

ಗಳನ್ನೂ ಕಲಿತು, ಆಮೇಲೆ ವಿದ್ಯಾತೀರ್ಥಾಭಿಧಾನದಿಂದ ಅವರು ಶಾಂಕರ ಪೀಠಾರೋಹಣ ಮಾಡಿದ ಬಳಿಕ ಅವರಲ್ಲಿಯೇ ಮೋಕ್ಷ ಶಾಸ್ತ್ರವನ್ನೂ ಕಲಿತಿರಬೇಕು. ಇದರಿಂದ ಮಾಧವಾಚಾರ್ಯರ ವಿದ್ಯಾಭ್ಯಾಸ ಸ್ಥಲವು ಕಂಚಿಯೆಂಬ ಊಹೆಯು ಬಲಪಡುತ್ತದೆ.

ವಿದ್ಯಾತೀರ್ಥಾಪರನಾಮಕರಾದ ಸರ್ವಜ್ಞವಿಷ್ಣು ಪಂಡಿತರು ಮಾಧವಾಚಾರ್ಯರಿಗೆ ಮಾತ್ರವಲ್ಲದೆ ಸಾಯಣಾಚಾರ್ಯರಿಗೂ ವಿದ್ಯಾಗುರುವಾಗಿದ್ದಿರಬೇಕೆಂದು ಹೇಳುವುದಕ್ಕೂ ಒಂದು ಕಾರಣವಿದೆ. ಬಹುಶಃ ಅಣ್ಣತಮ್ಮಂದಿರಿಬ್ಬರೂ ಒಬ್ಬ ಉಪಾಧ್ಯಾಯರಲ್ಲಿಯೇ ಮೊದಲು ವೇದ ಶಾಸ್ತ್ರ ಪಾಂಡಿತ್ಯವನ್ನು ಸಂಪಾದಿಸಿ, ಆಮೇಲೆ ಆ ಉಪಾಧ್ಯಾಯರೇ ಸಂನ್ಯಾಸಿಯಾಗಲು ಅವರಲ್ಲಿಯೇ ವೇದಾಂತ ತತ್ತ್ವಗಳನ್ನೂ ಉಪದೇಶ ಪಡೆದಿರಬೇಕು. ಈ ಊಹೆಗೆ ಆಧಾರವು ಕಂಚಿಯ "ಜಗದ್ಗುರು ರತ್ನ ಮಾಲಾಸ್ತವ"ದ ಈ ಕೆಳಗಿನ ಶ್ಲೋಕದ ಮೇಲಿನ ವ್ಯಾಖ್ಯಾನ:—

ಹೃದಿ ಸಾಯಣ ಮಾಧವೋಪದೇಷ್ಟ್ವಾನ್
ಮದಿನಾಂ ವಾದ ವಿಧೌ ಶಮಪ್ರದೇಷ್ಟ್ವಾನ್।
ನಮತ ಶ್ರುತಿ ಶೀಲನಾದತಂದ್ರಾನ್
ಯಮಿ ವಿದ್ಯಾಧಿಕ ತೀರ್ಥ ದೇಶಿಕೇಂದ್ರಾನ್ ॥

[ಸಾಯಣ ಮಾಧವರುಗಳಿಗೆ ಉಪದೇಶಕರೂ, ವಾದದಲ್ಲಿ ಮದಿಸಿ ಬಂದವರಿಗೆ ಶಾಸ್ತಿಯನ್ನುಂಟುಮಾಡಬಲ್ಲವರೂ ವೈದಿಕಾಚಾರದಲ್ಲಿ ತಪ್ಪದವರೂ ಆದ ವಿದ್ಯಾತೀರ್ಥ ಗುರುವರ್ಯರಿಗೆ ಮನಸ್ಸಿನಿಂದ ನಮಸ್ಕಾರ.]

ಈ ಶ್ಲೋಕದ ವ್ಯಾಖ್ಯಾನದಲ್ಲಿ—

ಏತೇನಾಸ್ಮಾದೇವ ಸಾಯಣ ಮಾಧವಯೋಃ ಸೂತ್ರ ಭಾಷ್ಯ ಶಾಂತಿರಭಿ
ಹಿತೇತಿ ಧ್ಯೇಯಮ್

ಇದರಿಂದ "ಸಾಯಣ ಮಾಧವರುಗಳಿಗೆ (ದ್ವಿವಚನ) ವಿದ್ಯಾತೀರ್ಥರ ಮುಖದಿಂದಲೇ ಬ್ರಹ್ಮಸೂತ್ರ ಭಾಷ್ಯಪಾಠದ ಶಾಂತಿಯಾಯಿತೆಂದು ತಿಳಿಯಬೇಕು" ಎಂದು ಹೇಳಿದೆ. ಇದು ಕೇವಲ ಐತಿಹ್ಯ.

## "ಸರ್ವದರ್ಶನ ಸಂಗ್ರಹ" ಕರ್ತೃತ್ವ ವಿಚಾರ

ಕೆಲ ಮಂದಿ ಇತಿಹಾಸ ಶೋಧಕರು "ಸರ್ವದರ್ಶನ ಸಂಗ್ರಹ"ದಲ್ಲಿ ವಂದಿತನಾಗಿರುವ ಸರ್ವಜ್ಞವಿಷ್ಣುವು ವಿದ್ಯಾತೀರ್ಥರಲ್ಲದೆ ಬೇರೆ ಯಾರೋ ಆಗಿರಬಹುದೆಂದೂ, ಆ ಸರ್ವಜ್ಞವಿಷ್ಣುವಿನ ಶಿಷ್ಯನಾದ "ಸರ್ವದರ್ಶನ ಸಂಗ್ರಹ" ಕರ್ತೃ ಮಾಧವನು ಬಹುಶಃ ವಿದ್ಯಾರಣ್ಯ-ಮಾಧವನಲ್ಲದೆ,

ಅವರ ವಂಶದಲ್ಲಿ ಹುಟ್ಟಿದ (ಪ್ರಾಯಶಃ ಅವರ ತಮ್ಮ ಸಾಯಣಾಚಾರ್ಯರ ಮಗನಾದ) ಬೇರೊಬ್ಬ ಮಾಧವನಾಗಿರಬೇಕೆಂದೂ ಶಂಕೆಪಟ್ಟಿರುವರು. ಅವರ ಕಾರಣಗಳನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸಿ ಅಲ್ಲಲ್ಲಿಯೇ ಸಮಾಧಾನಗಳನ್ನೂ ತೋರಿಸಲು ಯತ್ನಿಸುವೆವು.

ಪೂರ್ವಪಕ್ಷ ೧.—"ಸರ್ವದರ್ಶನ ಸಂಗ್ರಹ"ಕಾರನು ತಾನು "ಸಾಯಣ" ವಂಶಜನೆಂದು ಹೇಳಿಕೊಂಡಿರುವಂತೆ ತದ್ಗ್ರಂಥಸ್ಥಗಳಾದ ಈ ಕೆಳಗಣ ವಾಕ್ಯಗಳಿಂದ ತಿಳಿದುಬರುತ್ತದೆ:—

(೧) ಶ್ರೀಮತ್ಸಾಯಣ ದುಗ್ಧಾಬ್ಧಿ ಕೌಸ್ತುಭೇನ ಮಹೌಜಸಾ ।
ಕ್ರಿಯತೇ ಮಾಧವಾರ್ಯೇಣ ಸರ್ವದರ್ಶನ ಸಂಗ್ರಹಃ ॥

(೨) ಶ್ರೀಮತ್ಸಾಯಣ ಮಾಧವಃ ಪ್ರಭುರುಪಾನ್ಯಸ್ಯತ್
ಸತಾಂ ಪ್ರೀತಯೇ ॥

(೩) ಇತಿ ಶ್ರೀಮತ್ಸಾಯಣ ಮಾಧವೀಯೇ ಸರ್ವದರ್ಶನಸಂಗ್ರಹೇ ॥

(೧) "ಶ್ರೀ ಸಾಯಣ ಕುಲವೆಂಬ ಕ್ಷೀರಸಮುದ್ರಕ್ಕೆ ಕೌಸ್ತುಭ ರತ್ನದೋಪಾದಿಯಲ್ಲಿರುವ ಮಹಾ ಓಜಸ್ವಿಯಾದ ಮಾಧವಾರ್ಯನಿಂದ ಸರ್ವದರ್ಶನ ಸಂಗ್ರಹವು ರಚಿತವಾಗುತ್ತದೆ."

(೨) "ಪ್ರಭುವಾದ ಶ್ರೀ ಸಾಯಣ ಮಾಧವನು ಸಜ್ಜನರ ತೃಪ್ತಿಗೋಸ್ಕರ ಉಪನ್ಯಸಿಸಿರುವನು."

(೩) "ಎಂಬಿಲ್ಲಿಗೆ ಶ್ರೀ ಸಾಯಣ ಮಾಧವ ಕೃತಿಯಾದ ಸರ್ವದರ್ಶನ ಸಂಗ್ರಹದಲ್ಲಿ . . . . . ದರ್ಶನವು ಮುಗಿದುದು."

ಮಾಧವಾಚಾರ್ಯ (ವಿದ್ಯಾರಣ್ಯ)ರು ತಮ್ಮ ತಂದೆ ಮಾಯಣನೆಂದು "ಪರಾಶರ ಮಾಧವೀಯ"ದಲ್ಲಿಯೂ ಬೇರೆ ಒಂದೆರಡು ಕಡೆಗಳಲ್ಲಿಯೂ ಹೇಳಿಕೊಂಡಿರುವರು. ಆದುದರಿಂದ ಅವರ ಹೆಸರು "ಮಾಯಣ ಮಾಧವ" ಎಂದಾಗಬೇಕು. ಮೇಲಿನ ಶ್ಲೋಕಗಳಲ್ಲಿ ಗ್ರಂಥಕರ್ತೃವು ತಾನು "ಸಾಯಣ" ಕುಲದವನೆಂದು ಹೇಳಿಕೊಂಡು "ಸಾಯಣ" ಎಂಬ ಉಪನಾಮಧೇಯವನ್ನಿಟ್ಟುಕೊಂಡಿದ್ದಾನೆ. ಆದಕಾರಣ ಆತನು ಮಾಧವ–ವಿದ್ಯಾರಣ್ಯನಾಗಿದ್ದಿರಲಾರನು. ಆದರೆ ಈ ಸಂದರ್ಭಕ್ಕೆ ಹೊಂದುವಂತೆ, ವಿದ್ಯಾರಣ್ಯ (ಮಾಧವ)ರ ತಮ್ಮಂದಿರಾದ ಸಾಯಣಾಚಾರ್ಯರಿಗೆ ಮಾಯಣನೆಂಬ ಮಗನೊಬ್ಬನಿದ್ದನೆಂದು ಗೊತ್ತಾಗಿದೆ. ಈ ಮಾಯಣನೇ "ಸರ್ವದರ್ಶನ ಸಂಗ್ರಹ"ವನ್ನು ಬರೆದವನಾಗಿರಬೇಕು. ಅವನು "ಮಾಯಣ" ಎಂಬ ಅಪಭ್ರಂಶ ಶಬ್ದಕ್ಕೆ

ಪ್ರತಿಯಾಗಿ ಅದರ ಸಾಧುರೂಪವಾದ "ಮಾಧವ" ಎಂಬ ಹೆಸರನ್ನು ತನ್ನ ತಂದೆಯ ಹೆಸರಿನೊಡನೆ ಸೇರಿಸಿ ಗ್ರಂಥದಲ್ಲಿ ಹಾಕಿಕೊಂಡಿರಬೇಕು.

ಸಮಾಧಾನ ೧.—"ಸರ್ವದರ್ಶನ ಸಂಗ್ರಹ"ಕಾರನು ಸಾಯಣನು ತನ್ನ ಪೂರ್ವಿಕನೆಂದು ಸೂಚಿಸಿರುವನೇ ಹೊರತು ತನ್ನ ತಂದೆಯೆಂದು ಹೇಳಿಕೊಂಡಿಲ್ಲ. ಮಾಧವಾಚಾರ್ಯ (ವಿದ್ಯಾರಣ್ಯ)ರ ಮನೆತನದ ಮೂಲಪುರುಷನ ಹೆಸರು ಸಾಯಣನೆಂದು ಇದ್ದಿರಬಹುದು. ಮಾಧವ-ವಿದ್ಯಾರಣ್ಯರ ತಮ್ಮ ಸಾಯಣಾಚಾರ್ಯರು ತಮ್ಮ ಮಗನಿಗೆ ತಮ್ಮ ತಂದೆಯಾದ ಮಾಯಣನ ಹೆಸರನ್ನು ಹೇಗೆ ಇಟ್ಟರೋ (ಈ ಸಂಗತಿಯನ್ನು ಮುಂದೆ ಸಾಯಣ ಕಥಾ ಪ್ರಕರಣದಲ್ಲಿ ಕಾಣಬಹುದು), ಅದರಂತೆಯೇ ಅವರಿಗೆ ಅವರ ತಂದೆ ಮಾಯಣಭಟ್ಟರು "ಸಾಯಣ" ಎಂಬ ತಮ್ಮ ತಂದೆಯ ನಾಮಧೇಯವನ್ನೇ ಕೊಟ್ಟಿರಬಹುದು. ಅಜ್ಜನ ಹೆಸರನು' ಮೊಮ್ಮಗನಿಗೆ ಕೊಡುವುದು ಈಗಲೂ ನಮ್ಮಲ್ಲಿರುವ ಪದ್ಧತಿ. ಇದರಿಂದ ಮಾಧವಾಚಾರ್ಯರ ಅಜ್ಜನ ಹೆಸರೋ ಅಥವಾ ಮುತ್ತಜ್ಜನ ಹೆಸರೋ ಸಾಯಣನೆಂದಿದ್ದು, ಅದು ಪ್ರಸಿದ್ಧವಾದುದಾಗಿದ್ದುದರಿಂದ ತಾವು ತದ್ವಂಶ್ಯರೆಂದು ಸೂಚಿಸುವುದಕ್ಕಾಗಿ ಮಾಧವಾಚಾರ್ಯರು ಆ ಹೆಸರನ್ನು ಸ್ಮರಿಸಿರಬಹುದು. ಶ್ರೀರಾಮನು ದಶರಥಸುತನಾಗಿದ್ದರೂ ಆತನನ್ನು ರಘುರಾಮನೆಂದೂ ಕರೆಯುವುದುಂಟಲ್ಲವೆ? ಅರ್ಜುನನು ಪಾಂಡುಪುತ್ರನಾದರೂ ಆತನನ್ನು "ಭಾರತ" ಎಂದು ಭಗವದ್ಗೀತೆಯಲ್ಲಿ ಸಂಬೋಧಿಸಿಲ್ಲವೆ? ಅದೇ ರೀತಿಯಲ್ಲಿ ಮಾಧವಾಚಾರ್ಯರನ್ನು "ಪುಣ್ಯಶ್ಲೋಕ ಮಂಜರಿ", "ಗುರುಪರಂಪರಾ ರತ್ನಮಾಲೆ"ಗಳಲ್ಲಿ "ಸಾಯಣ ಮಾಧವ" ಎಂದೇ ಕರೆದಿದ್ದಾರೆ.

ಹಾಗಾದರೆ ತಂದೆಯ ಹೆಸರನ್ನು ಹೇಳದೆ ಅಜ್ಜನ ಅಥವಾ ಇನ್ನೂ ಹಿಂದಿನವರ ಹೆಸರನ್ನು ಏಕೆ ಹೇಳಬೇಕು? ಇತರ ಕಡೆಗಳಲ್ಲಿ ತಂದೆಯ ಹೆಸರನ್ನು ಹೇಳಿರುವಾಗ ಪ್ರಸಕ್ತ ಗ್ರಂಥದಲ್ಲಿ ಆ ಹೆಸರನ್ನೇಕೆ ಬಿಟ್ಟಿರಬೇಕು?—ಎಂದು ಕೇಳಬಹುದು. ಅದಕ್ಕೆ ಉತ್ತರವೇನೆಂದರೆ—ಗ್ರಂಥಲೇಖಕನು ತನ್ನ ಪ್ರವರವೆಲ್ಲವನ್ನಾದರೂ ಅಥವಾ ಅದರ ಯಾವ ಅಂಶವನ್ನಾದರೂ ಹೇಳಲೇಬೇಕೆಂಬ ನಿರ್ಬಂಧವೇನೂ ಇಲ್ಲ. ಅದು ಆತನ ಇಷ್ಟಾಪತ್ತಿಯ ವಿಷಯ. "ಪರಾಶರ ಮಾಧವೀಯ"ದಲ್ಲಿ ತಾಯಿತಂದೆಗಳಿಬ್ಬರ ಹೆಸರುಗಳನ್ನೂ ತಮ್ಮ ಗೋತ್ರ ಸೂತ್ರಗಳನ್ನೂ ಹೇಳಿದವರು "ಜೈಮಿನೀಯ ನ್ಯಾಯ ಮಾಲಾ ವಿಸ್ತರ"ದಲ್ಲಿ ಯಾವುದನ್ನೂ ಹೇಳಿಲ್ಲ. ಮಾಧವ-ವಿದ್ಯಾರಣ್ಯರು ಕೆಲವೆಡೆಗಳಲ್ಲಿ ತಾಯಿತಂದೆಗಳನ್ನೂ, ಇನ್ನು

ಕೆಲವೆಡೆಗಳಲ್ಲಿ ವಂಶ ಮೂಲಕರ್ತರನ್ನೂ, ಮತ್ತೆ ಕೆಲವೆಡೆಗಳಲ್ಲಿ ಲೌಕಿಕ ಸಂಬಂಧಗಳನ್ನೆಲ್ಲ ವರ್ಜಿಸಿ ತಮ್ಮ ಮುಖ್ಯ ಗುರುಗಳ ಪೂರ್ವಾಶ್ರಮ ನಾಮವನ್ನೂ, ಬೇರೆ ಕಡೆ ಆ ಗುರುಗಳ ಕೇವಲ ತುರೀಯಾಶ್ರಮ ನಾಮ ವನ್ನೂ, ಇನ್ನೂ ಇತರ ಕಡೆಗಳಲ್ಲಿ ಇತರ ಗುರು ನಾಮಗಳನ್ನೂ ಸ್ಮರಿಸಿರುವ ರೆಂದು ಹೇಳುವುದು ನ್ಯಾಯವಾಗಿದೆ.

ಪೂರ್ವಪಕ್ಷ ೨.—ಮೊದಮೊದಲು ಮುದ್ರಿತವಾದ "ಸರ್ವದರ್ಶನ ಸಂಗ್ರಹ" ಪುಸ್ತಕದ ಪ್ರತಿಗಳಲ್ಲಿ ೧೫ನೆಯ ಪ್ರಕರಣವಾದ "ಪಾತಂಜಲ ದರ್ಶನ" ನಿರೂಪಣೆಯ ಕೊನೆಯಲ್ಲಿ—

ಇತಃಪರಂ ಸರ್ವದರ್ಶನ ಶಿರೋಮಣಿಭೂತಂ ಶಾಂಕರದರ್ಶನಮನ್ಯತ್ರ ನಿರೂಪಿತಮಿತ್ಯತ್ರೋಪೇಕ್ಷಿತಂ

"ಇನ್ನು ಮುಂದೆ, ಸಕಲ ಮತಗಳಿಗೂ ಶಿರೋರತ್ನಪ್ರಾಯವಾದ ಶಾಂಕರ ಮತವು ಬೇರೆ ಕಡೆ ಹೇಳಲ್ಪಟ್ಟಿದೆಯಾಗಿ, ಇಲ್ಲಿ ಅದನ್ನು ಬಿಟ್ಟಿದೆ" ಎಂದೂ,

ಶಾಂಕರ ದರ್ಶನ ಮನ್ಯತ್ರಲಿಖಿತಂ

"ಶಾಂಕರ ದರ್ಶನವು ಬೇರೊಂದೆಡೆ ಬರೆಯಲ್ಪಟ್ಟಿದೆ" ಎಂದೂ ಇರುವ ಕಾರಣ ಆ ಶಾಂಕರ ದರ್ಶನ ವಿಷಯಕವಾದ ಕೃತಿಯು "ಸರ್ವ ದರ್ಶನ ಸಂಗ್ರಹ"ವಲ್ಲದೆ ಬೇರೊಂದಾಗಿರಬೇಕು: ಮತ್ತು ಅದು "ಸಂಗ್ರಹ"ಕ್ಕಿಂತ ಹಿಂದಿನದಾಗಿರಬೇಕು.

ಈ ಶಾಂಕರ ದರ್ಶನ ಗ್ರಂಥವು ಬಹುಶಃ ಮಾಧವ-ವಿದ್ಯಾರಣ್ಯ ಕೃತವಾದ "ವಿವರಣ ಪ್ರಮೇಯ ಸಂಗ್ರಹ"ವೋ, "ವೇದಾಂತ ಪಂಚದಶಿಯೋ" ಅಥವಾ ಮತ್ತಾವುದೋ ಒಂದು ಪ್ರಬಂಧವೋ ಆಗಿರಬೇಕು. ಅದನ್ನು ಮನಸ್ಸಿನಲ್ಲಿಟ್ಟುಕೊಂಡೇ, ಆ ಮಾಧವ-ವಿದ್ಯಾರಣ್ಯ ಸಂಬಂಧಿಯಾದ ಬೇರೊಬ್ಬ ಮಾಧವನು ಮೇಲೆ ಕೊಟ್ಟಿರುವ ವಾಕ್ಯ ವನ್ನು ತಾನು ರಚಿಸಿದ "ಸರ್ವದರ್ಶನ ಸಂಗ್ರಹ"ದ ಕಡೆಯ ಪ್ರಕರಣ ದಲ್ಲಿ ಬರೆದಿರಬೇಕು.

ಸಮಾಧಾನ ೨.—ಮೇಲಿನ ಶಂಕೆಗಳು ಈಗ ಆಧಾರಶೂನ್ಯ ಗಳಾಗಿವೆ. ಹೇಗೆಂದರೆ, ೧೯೨೪ನೆಯ ಇಸ್ವಿಯಲ್ಲಿ ಪೂನಾದಲ್ಲಿ ಪ್ರಕಟಿತ ವಾದ "ಸರ್ವದರ್ಶನ ಸಂಗ್ರಹ"ದ ಪ್ರತಿಯಲ್ಲಿ ಶಾಂಕರ ದರ್ಶನ ಪ್ರಕರಣವು ಸಮಗ್ರವಾಗಿ ಅಚ್ಚಾಗಿದೆ. ಅದು ಪುರಾತನವಾದ ಹಸ್ತಲಿಖಿತ ಮಾತೃಕೆಗಳಿಂದ ಸಿದ್ಧವಾದುದೆಂಬ ವಿಷಯವನ್ನು, ಅದರ ಪರಿಶೋಧಕ ರಾದ ಅಭ್ಯಂಕರ ವಾಸುದೇವ ಶಾಸ್ತ್ರಿಗಳವರು ತಿಳಿಸಿದ್ದಾರೆ. ಅದಕ್ಕೆ

ಮೊದಲೇ ಮೈಸೂರಿನ ಸರ್ಕಾರದ ಪ್ರಾಚ್ಯಕೋಶಾಗಾರದಿಂದ ಪ್ರಕಟಿತವಾದ "ಮಾಧವೀಯ ಧಾತುವೃತ್ತಿ"ಯ ಭೂಮಿಕೆಯಲ್ಲಿ ತದ್ಗ್ರಂಥ ಶೋಧಕರಾದ ಪಂಡಿತರತ್ನಂ ಕಸ್ತೂರಿ ರಂಗಾಚಾರ್ಯರವರು, "ಸರ್ವದರ್ಶನ ಸಂಗ್ರಹ"ದ ಹಸ್ತಲಿಖಿತ ಪ್ರತಿಯೊಂದು ತಂಜಾವೂರಿನ ಸರಸ್ವತೀ ಭಾಂಡಾಗಾರದಲ್ಲಿರುವುದೆಂದೂ, ಅದರಲ್ಲಿ "ಶಾಂಕರ ದರ್ಶನ"ವು "ಸಂಗ್ರಹ" ಗ್ರಂಥದ ಉಪಸಂಹಾರ ಪ್ರಕರಣವಾಗಿ ಸಿಕ್ಕುವುದೆಂದೂ ಸೂಚಿಸಿ, ಆ ಪ್ರಕರಣದಿಂದ ಕೆಲವು ವಾಕ್ಯಗಳನ್ನು ಉದಾಹರಿಸಿದ್ದರು. ಇದರಿಂದ "ಸರ್ವದರ್ಶನ ಸಂಗ್ರಹ"ದ ಇತರ ದರ್ಶನಗಳನ್ನು ಬರೆದಾತನೇ ಶಾಂಕರ ದರ್ಶನವನ್ನೂ ಬರೆದನೆಂಬುದೂ, ಆ ಶಾಂಕರ ದರ್ಶನವೆಂಬುದು ಮಾಧವ-ವಿದ್ಯಾರಣ್ಯ ಪ್ರಣೀತಗಳಾದ ಇತರ ಗ್ರಂಥಗಳಲ್ಲದೆ "ಸಂಗ್ರಹ"ಗ್ರಂಥದ ಒಂದು ಭಾಗವೇ ಆಗಿದೆಯೆಂಬುದೂ ನಿಸ್ಸಂಶಯವಾಗಿ ಗೊತ್ತಾಗುತ್ತದೆ.

ಪೂರ್ವಪಕ್ಷ ೩.—"ಸರ್ವದರ್ಶನ ಸಂಗ್ರಹ"ದ ಪೂರ್ಣಪ್ರಜ್ಞ ದರ್ಶನದ ವಿವರಣೆಯಲ್ಲಿ ಜಯತೀರ್ಥ (ಟೀಕಾಚಾರ್ಯ) ಕೃತ ಗ್ರಂಥಗಳ ವಾಕ್ಯಗಳು ಉದಾಹೃತಗಳಾಗಿವೆ. ಜಯತೀರ್ಥರು ಬಹುಶಃ ಕ್ರಿ. ಶ. ೧೩೮೮ರಲ್ಲಿ ಪರಮಪದವನ್ನು ಸೇರಿದರಾದಕಾರಣ, ಅವರ ವಾಕ್ಯಗಳನ್ನು ತೆಗೆದುಕೊಂಡಿರುವ "ಸಂಗ್ರಹ"ವು ಅವರ ಕಾಲಕ್ಕಿಂತ ಬಹಳ ಈಚಿನದಾಗಿ, ಈಚಿನವನಿಂದ ಬರೆಯಲ್ಪಟ್ಟುದಾಗಿರಬೇಕು.

ಸಮಾಧಾನ ೩.—ಮೇಲಿನ ಜಯತೀರ್ಥ ಕಾಲ ನಿರ್ಣಯವನ್ನು ನಾವು ಒಪ್ಪಿಕೊಂಡರೂ, ಮೇಲಿನ ಅನುಮಾನವು ಸಿದ್ಧಿಸುವುದಿಲ್ಲ. ಏಕೆಂದರೆ, ಮಾಧವ-ವಿದ್ಯಾರಣ್ಯರು ಮುಕ್ತರಾದುದು ಕ್ರಿ. ಶ. ೧೩೮೬ರಲ್ಲಿ. ಹೀಗಿರಲಾಗಿ, ಅವರೂ ಜಯತೀರ್ಥರೂ ಕೆಲವು ವರ್ಷಗಳ ಮಟ್ಟಿಗಾದರೂ ಸಮಕಾಲೀನರಾಗಿದ್ದಿರಬೇಕು. ವಿದ್ಯಾರಣ್ಯರು ಜಯತೀರ್ಥರನ್ನು ಒಂದು ಸಲ ಸ್ವತಃ ಕಂಡು ವಾಕ್ಯಾರ್ಥಮಾಡಿ ಅವರ ಪ್ರೌಢಿಮೆಯನ್ನೂ ಪ್ರತಿಭೆಯನ್ನೂ ಕೊಂಡಾಡಿದರೆಂದು ಮಾಧ್ವ ಗ್ರಂಥಗಳಲ್ಲಿ ಹೇಳಿದೆ. ಹೀಗೆ ತಮ್ಮ ಕಣ್ಣೆದಿರಿಗೇ ಸುಪ್ರಸಿದ್ಧರಾಗಿದ್ದ ಮಾಧ್ವ ಪಂಡಿತರ ಗ್ರಂಥದಿಂದ ಮಾಧವ-ವಿದ್ಯಾರಣ್ಯರು ದೃಷ್ಟಾಂತ ವಾಕ್ಯಗಳನ್ನು ತೆಗೆದುಕೊಂಡರೆಂದರೆ ಅದು ಅಸಂಬದ್ಧವೆನಿಸಲಾರದು. ಜಯತೀರ್ಥರಂತೆಯೇ ತಮಗೆ ಸಮಕಾಲೀನರಾಗಿ ಮಿತ್ರರಾಗಿದ್ದ ವೇಂಕಟನಾಥಾಚಾರ್ಯರ ಕೃತಿಗಳಿಂದಲೂ ಮಾಧವ-ವಿದ್ಯಾರಣ್ಯರು ತಮ್ಮ "ಸರ್ವದರ್ಶನ ಸಂಗ್ರಹ"ದ ರಾಮಾನುಜ ದರ್ಶನ ಭಾಗದಲ್ಲಿ ಸಂದರ್ಭೋಚಿತ ವಾಕ್ಯಗಳನ್ನು ಉದಾಹರಿಸಿರುವರು.

# ಮೈಸೂರುದೇಶದ ವಾಸ್ತುಶಿಲ್ಪ

## ಮೊದಲನೆಯ ಅಧ್ಯಾಯ

---

ನಮ್ಮ ದೇಶದಲ್ಲಿ ಪ್ರಚಾರವಾಗಿರುವ ಹಿಂದೂವಾಸ್ತುಪದ್ಧತಿಯಲ್ಲಿ ದ್ರಾವಿಡ ಮತ್ತು ಹೊಯಿಸಳ ಎಂದು ಎರಡು ಸ್ಪಷ್ಟವಾದ ರೀತಿಗಳಿರುವುವೆಂದೂ ಇವುಗಳ ಮುಖ್ಯಲಕ್ಷಣಗಳು ಯಾವುವೆಂದೂ ಈ ಗ್ರಂಥದ ಮೊದಲಭಾಗದಲ್ಲಿ ಹೇಳಿರುವೆವಷ್ಟೆ. ಈ ಎರಡುರೀತಿಗಳಲ್ಲಿ ದ್ರಾವಿಡವು ಹೆಚ್ಚು ಪ್ರಾಚೀನವಾದರೂ ನಮ್ಮ ಸಂಸ್ಥಾನದ ಕಟ್ಟಡಗಳಲ್ಲಿ ಹೊಯಿಸಳ ರೀತಿಯ ದೇವಾಲಯಗಳೇ ಸಂಖ್ಯೆಯಲ್ಲಿ ಹೆಚ್ಚಾಗಿವೆ. ಆದ್ದರಿಂದ ಹೊಯಿಸಳ ರೀತಿಯನ್ನೇ ಮೊದಲು ತೆಗೆದುಕೊಂಡು ಪ್ರತಿಪಾದಿಸಿ ಆ ರೀತಿಯಲ್ಲಿ ಕಟ್ಟಿದ ಮುಖ್ಯಮುಖ್ಯವಾದ ಕಟ್ಟಡಗಳನ್ನು ಸಚಿತ್ರವಾಗಿ ವರ್ಣಿಸಿದೆವು. ಇವುಗಳಂತೆಯೇ ಪ್ರಸಿದ್ಧಿಗೆ ಅರ್ಹವಾದ ದ್ರಾವಿಡ ರೀತಿಯ ಕಟ್ಟಡಗಳು ನಮ್ಮ ಸಂಸ್ಥಾನದಲ್ಲಿ ಇರುವುದು ಬಹು ಸ್ವಲ್ಪ.

ಈ ಭಾಗದಲ್ಲಿ ದ್ರಾವಿಡ ರೀತಿಯನ್ನು ಪ್ರತಿಪಾದಿಸಿ ಆ ರೀತಿಯನ್ನನುಸರಿಸಿ ಕಟ್ಟಿದ ಕಟ್ಟಡಗಳೊಳಗೆ ಮುಖ್ಯಮುಖ್ಯವಾದವುಗಳನ್ನು ವರ್ಣಿಸುವೆವು. ಆದರೆ ಈ ವರ್ಣನೆಯು ಸುಗಮವಾಗಿ ತಿಳಿಯಬೇಕಾದರೆ ಮೊದಲು ಈ ರೀತಿಯು ಹುಟ್ಟಿದ್ದು ಹೇಗೆ ಬೆಳೆದದ್ದು ಹೇಗೆ ಎಂದು ಮುಂತಾಗಿ ಅದರ ಚರಿತ್ರೆಯನ್ನು ಸ್ವಲ್ಪ ಸೂಚಿಸಬೇಕು.

ಪುರಾತನಾರ್ಯರು ಭರತಖಂಡಕ್ಕೆ ವಾಯುವ್ಯದಿಕ್ಕಿನ ಕಣಿವೆಯ ಮಾರ್ಗವಾಗಿ ಬಂದಂತೆಯೇ ಅವರಿಗಿಂತ ಹಿಂದೆ ದ್ರಾವಿಡರು ಅದೇ ಮಾರ್ಗವಾಗಿ ಈ ದೇಶಕ್ಕೆ ಬಂದರೆಂದೂ ಆ ದ್ರಾವಿಡರು ದಕ್ಷಿಣದೇಶಕ್ಕೆ ಬರುವುದಕ್ಕಿಂತ ಮುಂಚೆ ಎಷ್ಟೋ ನಾಗರಿಕರಾಗಿದ್ದರೆಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ದ್ರಾವಿಡರಿಗೆ ಆರ್ಯರ ಸಂಸರ್ಗವಾದ ಕೂಡಲೆ ಅವರು ಆರ್ಯರಲ್ಲಿ ಆಗಲೇ ಪ್ರಚಾರದಲ್ಲಿದ್ದ ರಾಜಕೀಯ ಮತ್ತು ಧಾರ್ಮಿಕ ಸಂಸ್ಥೆಗಳನ್ನು ತಾವು ಅವಲಂಬಿಸಿದರು. ಇದರಂತೆ ಆರ್ಯರೂ ದ್ರಾವಿಡರಿಂದ ಕೆಲವು ಅಂಶಗಳನ್ನು ಕಲಿತುಕೊಂಡರೆಂದೂ ಆರ್ಯರು ಕಟ್ಟಡ ಕಟ್ಟುವುದರಲ್ಲಿ ಅಷ್ಟೇನೂ ನಿಪುಣರಾಗಿರಲಿಲ್ಲವೆಂದೂ, ವಾಸ್ತುವಿದ್ಯೆಯು ದ್ರಾವಿಡರಿಂದ ಅವರು ಕಲಿತುಕೊಂಡದ್ದೆಂದೂ ಹೇಳುತ್ತಾರೆ.

ಪಂಜಾಬು ಮತ್ತು ಸಿಂಧುದೇಶಗಳಿಗೆ ಸೇರಿದ ಮಹೆಂಜೊದಾರೊ ಮತ್ತು ಹರಪ್ಪ ಎಂಬ ಸ್ಥಳಗಳಲ್ಲಿ ಈಗ ಸ್ವಲ್ಪದಿವಸಗಳ ಕೆಳಗೆ ಭೂಸಂಶೋಧನೆ ಮಾಡಿ

ದಾಗ ಕ್ರಿಸ್ತಪೂರ್ವಕ್ಕಿಂತ ಸಾವಿರಾರು ವರ್ಷಗಳ ಹಿಂದೆ ಇಂಡಿಯ ದೇಶದಲ್ಲಿದ್ದ ನಾಗರಿಕತೆಯ ಸ್ವರೂಪವು ಗೊತ್ತಾಯಿತು. ಅಲ್ಲಿ ಭೂಮಿಯೊಳಗೆ ಸಿಕ್ಕಿದ ಪದಾರ್ಥಗಳಲ್ಲಿ ಹಲವು, ದ್ರಾವಿಡ ಬುಡಕಟ್ಟಿನ ಜನರು ಇಂದಿಗೂ ಉಪಯೋಗಿಸುತ್ತಿರುವ ಪದಾರ್ಥಗಳನ್ನು ಹೋಲುತ್ತವೆ. ಆದ್ದರಿಂದ ದ್ರಾವಿಡನಾಗರಿಕತೆಯು ಕ್ರಿಸ್ತಪೂರ್ವಕ್ಕಿಂತ ಆರೇಳು ಸಾವಿರ ವರ್ಷ ಹಿಂದಿನಿಂದ ಬಂದಿರಬಹುದೆಂದೂ ದ್ರಾವಿಡರೇ ಈ ದೇಶದ ಮೂಲನಿವಾಸಿಗಳಿರಬಹುದೆಂದೂ ಊಹಿಸಲ್ಪಟ್ಟಿದೆ. ಆದರೆ ಇದು ಹೀಗೇ ಸರಿ ಎಂದು ನಿಷ್ಕೃಷ್ಟವಾಗಿ ನಿರ್ಧರಿಸುವದಕ್ಕೆ ಸಾಕಾದಷ್ಟು ಪ್ರಮಾಣಗಳು ಇನ್ನೂ ದೊರೆತಿಲ್ಲ.

ಅಂತೂ ದ್ರಾವಿಡ ನಾಗರಿಕತೆಯು ಇದುವರೆಗೂ ಭಾವಿಸಿಕೊಂಡಿದ್ದಕ್ಕಿಂತ ಎಷ್ಟೋ ಪ್ರಾಚೀನವೆಂದು ಅಂಗೀಕರಿಸಬಹುದು. ಆ ಪುರಾತನ ಕಾಲದಲ್ಲಿ ಅವರು ಅನುಸರಿಸುತ್ತಿದ್ದ ವಾಸ್ತುಸಂಪ್ರದಾಯದ ಸ್ವರೂಪವೇನು ಎಂಬುದು ಈಗಾಗಲೇ ತಿಳಿಯುವಂತಿಲ್ಲ. ಅದು ಗೊತ್ತಾದರೆ ದ್ರಾವಿಡರೀತಿಯು ಉತ್ಪನ್ನವಾದ ಬಗೆಯನ್ನು ಕುರಿತು ಈಗ ವಿದ್ವಾಂಸರು ಮಾಡುತ್ತಿರುವ ವಿಚಿತ್ರವಾದ ಊಹಾಪೋಹಗಳು ನಿಲ್ಲುವುವು.

ದ್ರಾವಿಡರೀತಿಗೂ ಈಜಿಪ್ಟ್ ರೀತಿಗೂ ಹತ್ತಿರದ ಸಾದೃಶ್ಯವಿರುವುದೆಂದೂ ಆದ್ದರಿಂದ ದ್ರಾವಿಡ ರೀತಿಯು ನಮ್ಮ ದೇಶಕ್ಕೆ ಈಜಿಪ್ಟಿನಿಂದ ಬಂದಿರಬಹುದೆಂದೂ ಮೆ|| ಫರ್ಗ್ಯುಸನ್ ಸಾಹೇಬರು ಊಹಿಸುತ್ತಾರೆ.

ಹ್ಯಾವೆಲ್ ಸಾಹೇಬರು ಇದನ್ನು ಒಪ್ಪುವುದಿಲ್ಲ. ದೇವಾಲಯವನ್ನು ಕಟ್ಟುವುದು ಆರ್ಯರಿಂದ ಬಂದದ್ದೆಂದೂ, ದ್ರಾವಿಡರ ಗುಡಿಯು ಬೌದ್ಧಸ್ತೂಪದ ವಿಸ್ತಾರ ಮಾತ್ರವೆಂದೂ, ಅವರ ಗುಡಿಗಳ ವಿನ್ಯಾಸದಲ್ಲಿ ದೇಶ್ಯವೆಂದು ಹೇಳಬಹುದಾದ ಭಾಗಗಳು ಯಾವುವೂ ಇಲ್ಲವೆಂದೂ ಅವರ ಅಭಿಪ್ರಾಯ.

ಹಿಂದೆ ಪಾಂಡ್ಯ ಚೋಳ ಪಲ್ಲವ ವಂಶಗಳ ರಾಜರು ಆಳುತ್ತಿದ್ದ ಪ್ರದೇಶವು ಈ ವಾಸ್ತುರೀತಿಯ ಕಟ್ಟಡಗಳಿಗೆ ತವರುಮನೆಯೆಂದು ಹೇಳಬಹುದು. ಈ ಪ್ರದೇಶಕ್ಕೆ ಉತ್ತರದ ಕಡೆ ಕೃಷ್ಣಾನದಿಯೂ, ಪೂರ್ವದ ಕಡೆ ಬಂಗಾಳಕೊಲ್ಲಿಯೂ, ದಕ್ಷಿಣದ ಕಡೆ ಹಿಂದೂಸಾಗರವೂ, ಪಶ್ಚಿಮದ ಕಡೆ ಬಿಜಾಪುರ ಡಿಸ್ಟ್ರಿಕ್ಟಿನಲ್ಲಿರುವ ಬಾದಾಮಿಯಿಂದ ವಿಜಯನಗರ ಶ್ರವಣಬೆಳ್ಗೊಳ ಮತ್ತು ತಲಕಾಡಿನ ಮೇಲೆ ಎಳೆಯಬಹುದಾದ ರೇಖೆಯೂ ಎಲ್ಲೆಗಳಾಗಿವೆ.

ದಕ್ಷಿಣದೇಶದಲ್ಲಿರುವ ಕಟ್ಟಡಗಳಲ್ಲಿ ಯಾವುದೂ ಪ್ರಾಯಶಃ ಕ್ರಿ. ಶ. ಆರನೆಯ ಶತಮಾನಕ್ಕಿಂತ ಹಿಂದಿನದಲ್ಲ. ಅಲ್ಲಿಂದ ಮುಂದಕ್ಕೆ ಕಟ್ಟಿದ ಕಟ್ಟಡಗಳು ಯಥೇಚ್ಛವಾಗಿವೆ. ಆದರೆ ಇವುಗಳಿಂದ ಈ ರೀತಿಯ ಪೂರ್ವಪೂರ್ವಾವಸ್ಥೆಗಳು ತಿಳಿದುಬರುವಂತಿಲ್ಲ. ಹಿಂದೆ ಇದ್ದಿರಬಹುದಾದ ಕಟ್ಟಡಗಳು ಪ್ರಾಯಶಃ ಹೆಚ್ಚು ಕಾಲ ನಿಲ್ಲದಂಥ ವಸ್ತುಗಳಿಂದ ಕಟ್ಟಿದ್ದು ಅವು ಈಗ ನಶಿಸಿಹೋಗಿರಬಹುದಾದದ್ದೇ ಇದಕ್ಕೆ ಕಾರಣವೆನ್ನಬಹುದು. ಇಟ್ಟಿಗೆಗಳು ಸುಮಾರು ಕ್ರಿ. ಪೂ. ಐದುಸಾವಿರ ವರ್ಷಗಳ ಕಾಲಕ್ಕಾಗಲೇ ಉಪಯೋಗದಲ್ಲಿದ್ದುವೆಂಬುದು ಪೂರ್ವೋಕ್ತವಾದ ಭೂಸಂಶೋಧನಗಳಿಂದ ಸ್ಪಷ್ಟವಾಗಿ ತಿಳಿದುಬಂದಿದೆ.

ಜಾವ್ರೋ ಡೂಬ್ರೇಲ್ ಎಂಬ ಫ್ರೆಂಚ್ ವಿದ್ವಾಂಸರು ಈ ವಾಸ್ತುರೀತಿಯ ಬೆಳೆವಳಿಗೆಯನ್ನು ಐದುಕಾಲಗಳಾಗಿ ವಿಭಾಗಿಸುತ್ತಾರೆ. ಅವು ಯಾವುವೆಂದರೆ :—

| | | | | | | |
|---|---|---|---|---|---|---|
| ೧. | ಪಲ್ಲವರ ಕಾಲ | ಕ್ರಿ. ಶ. | ೬೦೦ | ರಿಂದ | ೮೫೦ರ | ವರೆಗೆ. |
| ೨. | ಪ್ರಾಚೀನ ಚೋಳರ ಕಾಲ | ,, | ೮೫೦ | ,, | ೧೦೦೦ | ,, |
| ೩. | ಈಚಿನ ,, ,, | ,, | ೧೧೦೦ | ,, | ೧೩೫೦ | ,, |
| ೪. | ವಿಜಯನಗರದವರ ಕಾಲ | ,, | ೧೩೫೦ | ,, | ೧೬೦೦ | ,, |
| ೫. | ಆಧುನಿಕ ,, | ,, | ೧೬೦೦ | ,, | ಮುಂದಕ್ಕೆ. | |

ಇವುಗಳಲ್ಲಿ ಮೊದಲನೆಯ ಕಾಲವೇ ಶ್ರೇಷ್ಠವಾದದ್ದು ಮತ್ತು ಪರಿಪೂರ್ಣವಾದದ್ದು. ಆಗ ಕಟ್ಟಡದ ವಿನ್ಯಾಸವು ಸುಲಭವೂ ಸರಳವೂ ಆಗಿತ್ತು; ಕಟ್ಟಡವು ಚಿಕ್ಕದು ; ಚಿತ್ರಗಳೂ ಅಲಂಕಾರಗಳೂ ಕಡಿಮೆ ; ವಿಮಾನವು ಎತ್ತರವಿಲ್ಲ ಎರಡನೆಯ ಕಾಲದಲ್ಲಿ ಗರ್ಭಗೃಹದ ಮೇಲಣ ವಿಮಾನವು ತುಂಬ ಬೆಳೆದುಹೋಯಿತು. ಮೂರನೆಯ ಕಾಲದಲ್ಲಿ ದೇವಾಲಯಕ್ಕೆ ಪ್ರವೇಶಿಸುವ ಮಹಾದ್ವಾರದ ಮೇಲಣ ಗೋಪುರಗಳು ಪ್ರಾಮುಖ್ಯತೆಗೆ ಬಂದು ವಿಮಾನಕ್ಕಿಂತಲೂ ದೊಡ್ಡವಾದುವು. ವಿಜಯನಗರದವರ ಕಾಲದಲ್ಲಿ ಗೋಪುರಗಳು ಮತ್ತಷ್ಟು ದೊಡ್ಡವಾದುವು ; ಆದರೂ ಈ ಕಾಲದಲ್ಲಿ ಪ್ರಾಶಸ್ತ್ಯವು ಇವಕ್ಕಿಂತಲೂ ಹೆಚ್ಚಾಗಿ ಕಲ್ಯಾಣಮಂಟಪಕ್ಕೆ ಬಂದಿತು ; ಶಿಲ್ಪಿಗಳು ತಮ್ಮ ಸಾಮರ್ಥ್ಯವನ್ನೆಲ್ಲಾ ಇದರಲ್ಲಿ ತೋರಿಸುತ್ತ ಬಂದರು. ಅನೇಕ ಕಂಬಗಳುಳ್ಳ ಹಜಾರಗಳೂ ಪ್ರತ್ಯೇಕವಾದ ಸಣ್ಣಸಣ್ಣ ಗುಡಿಗಳೂ ಈ ಕಾಲದ ಕಟ್ಟಡದಲ್ಲಿ ಕಂಡುಬರುವ ವೈಲಕ್ಷಣ್ಯಗಳು. ಚಿತ್ರಗಳೂ ಅಲಂಕಾರಗಳೂ ಮರದಲ್ಲಿ ಕೆತ್ತಲ್ಪಟ್ಟಂತೆ ಇರುತ್ತಿದ್ದುವು; ಕಂಬಗಳು ಒಂದೇ ಕಲ್ಲಿನವಾದರೂ ಅನೇಕ

ವೇಳೆ ಅವುಗಳ ರಚನೆಯಲ್ಲಿ ಒಂದೇತರದ ವ್ಯಾಳಿಗಳು, ನಿಂತಿರುವ ಕುದುರೆಗಳು, ದೇವತೆಗಳು, ಯೋಧರು ಮುಂತಾದ ವಿಗ್ರಹಗಳು ಸೇರಿಕೊಂಡು ಇರುತ್ತಿದ್ದುವು.

ಇವುಗಳಲ್ಲಿ ಪ್ರಾಚೀನತಮವಾದ ದೇವಾಲಯಗಳು ದೊಡ್ಡದೊಡ್ಡ ಕಲ್ಲು ತುಂಡುಗಳನ್ನು ಒತ್ತಾಗಿ ಜೋಡಿಸಿ ಕಟ್ಟಿದವುಗಳು ; ಅವುಗಳ ಮಧ್ಯೆ ಗಾರೆ ಗಚ್ಚು ಯಾವುದೂ ಇರುತ್ತಿರಲಿಲ್ಲ. ಬುಡದಿಂದ ಶಿಖರದವರೆಗಿನ ಕಟ್ಟಡವೆಲ್ಲಾ ಕಲ್ಲಿನಲ್ಲಿಯೇ ಕಟ್ಟಿದ್ದಾಗಿರುತ್ತಿತ್ತು. ಆಮೇಲೆ ದೇವಾಲಯದ ಕೆಳಭಾಗವೆಲ್ಲಾ, ಎಂದರೆ ದ್ವಾರದ ಗಂಧವಟ್ಟಿಗೆ ಮತ್ತು ಲೋವೆಕಲ್ಲಿನವರೆಗೆ, ಕಲ್ಲಿನಲ್ಲಿಯೂ ಅಲ್ಲಿಂದ ಮೇಲಕ್ಕೆ ಇಟ್ಟಿಗೆ ಗಾರೆಯಲ್ಲಿಯೂ ಮಾಡಿರುತ್ತಿತ್ತು. ದ್ರಾವಿಡವಾಸ್ತುವು ಮೊದಲು ಗಟ್ಟಿ ಮುಟ್ಟಾಗಿ ಒರಟೊರಟಾಗಿದ್ದರೂ ಮನಸ್ಸಿಗೆ ಅಂಟುವಂತೆಯೂ ಇಂಪನ್ನು ಬೀರು ವಂತೆಯೂ ಇರುತ್ತಿತ್ತು. ಆದರೆ ಆ ವಿದ್ಯೆಯು ಒಂದು ಶತಮಾನಕ್ಕಿಂತ ಮತ್ತೊಂದು ಶತಮಾನಕ್ಕೆ ಕ್ರಮವಾಗಿ ಕೀಳಾಗುತ್ತ ಬಂದಿತು. ಈಚಿನ ಕಟ್ಟಡಗಳಲ್ಲಿ ಹಿಂದಿ ನವುಗಳಲ್ಲಿಲ್ಲದಿದ್ದಂಥ ಒಂದು ವಿಧವಾದ ನಾಜೂಕು ಇದ್ದರೂ, ಘನವಾದ ಲಕ್ಷಣ ಗಳನ್ನು ನೋಡಬೇಕಾದರೆ ಹಿಂದಿನ ಕಟ್ಟಡಗಳಿಗೇ ಹೋಗಬೇಕು.

ಈ ರೀತಿಯಲ್ಲಿ ರಚಿಸಿದ ಪ್ರಾಚೀನತಮವಾದ ಕಟ್ಟಡಗಳು ಒಂದೇ ಕಲ್ಲಿ ನಿಂದ ಮಾಡಿದ "ರಥ"ಗಳು. ಇವು ಮದರಾಸಿಗೆ ಸುಮಾರು ಮುವ್ವತ್ತೆರಡು ಮೈಲಿ ದಕ್ಷಿಣಕ್ಕೆ ಇರುವ ಮಾಮಲ್ಲಪುರದ ಹತ್ತಿರ ಸಮುದ್ರತೀರದಲ್ಲಿ ಇವೆ. ಇಂಥವು ಒಟ್ಟು ಐದು ಇವೆ. ಇವು ಕ್ರಿ. ಶ. ಏಳನೆಯ ಶತಮಾನದಲ್ಲಿ ಕಗ್ಗಲ್ಲಿನಿಂದ ಮಾಡಿ ದವುಗಳು. ಇವುಗಳಲ್ಲೆಲ್ಲಾ "ಧರ್ಮರಾಜರಥ" ವೆಂಬುದೇ ಅತ್ಯಂತ ಸುಂದರ ವಾದದ್ದು. ಬೊಂಬಾಯಿ ಆಧಿಪತ್ಯಕ್ಕೆ ಸೇರಿದ ಬಿಜಾಪುರ ಡಿಸ್ಟ್ರಿಕ್ಟಿನ ಐಹೊಳೆ ಗ್ರಾಮದಲ್ಲಿ ಇದೇ ರೀತಿಯ ಒಂದು ಜೈನಬಸದಿ ಇದೆ. ಇದು ಎರಡನೆಯ ಪುಲಿ ಕೇಶಿಯಿಂದ ಕ್ರಿ. ಶ. ೬೩೪ ರಲ್ಲಿ ಸ್ಥಾಪಿತವಾಯಿತು.

ಇದಾದಮೇಲೆ ಪ್ರಾಮುಖ್ಯತೆಯನ್ನು ಅನುಸರಿಸಿ ಬರತಕ್ಕದ್ದು ಕಂಚಿಯಲ್ಲಿ ರುವ ಕೈಲಾಸೇಶ್ವರದೇವಾಲಯ. ಕ್ರಿ.ಶ. ಏಳನೆಯ ಶತಮಾನದಲ್ಲಿ ಕಾಂಚಿಯನ್ನು ಆಳುತ್ತಿದ್ದ ರಾಜಸಿಂಹನೆಂಬ ಪಲ್ಲವರಾಜನು ಇದನ್ನು ಕಟ್ಟಿಸಿದ್ದರಿಂದ ಇದಕ್ಕೆ ಮೊದಲು ರಾಜಸಿಂಹೇಶ್ವರ ದೇವಾಲಯವೆಂದು ಹೆಸರಿತ್ತು. ನೈಜಾಮರ ಸಂಸ್ಥಾ ನಕ್ಕೆ ಸೇರಿದ ಎಲ್ಲೋರಾದಲ್ಲಿ ಬಂಡೆಯನ್ನು ಕಡಿದು ಮಾಡಿರುವ ಗುಹಾಂತರ್ದೇ ವಾಲಯಗಳು ಎಂಟನೆಯ ಶತಮಾನದ ಉತ್ತರಾರ್ಧದಲ್ಲಿ ಮಾಡಿದವು. ಇವುಗಳಲ್ಲಿ ಕೈಲಾಸದೇವಾಲಯವು ಸಕಲಲಕ್ಷಣಪರಿಪೂರ್ಣವಾದ ದ್ರಾವಿಡರೀತಿಯ ಕಟ್ಟಡ.



ಹೊಸಕೋಟೆಯಲ್ಲಿರುವ ಅಗ್ರಹಾರ ಆಂಜನೇಯ ದೇವಸ್ಥಾನದ ನವರಂಗದ
ಈಶಾನ್ಯದಿಕ್ಕಿನ ಕಂಬ.



ಹೊಸಕೋಟೆಯಲ್ಲಿರುವ ಅಗ್ರಹಾರ ಆಂಜನೇಯ ದೇವಸ್ಥಾನದ ನವರಂಗದ
**ವಾಯುವ್ಯದಿಕ್ಕಿನ ಕಂಬ.**

ಅಷ್ಟೇ ಅಲ್ಲ; ಭರತಖಂಡದ ವಾಸ್ತುಕಲೆಯನ್ನು ನಿದರ್ಶಿಸುವ ಒಂದು ಅತ್ಯಂತ ವಿಚಿತ್ರವೂ ರಮ್ಯವೂ ಆದ ಕಟ್ಟಡ.

ಬಾದಾಮಿಯಲ್ಲಿರುವ ಮಾಲೆಗಿತ್ತಿ ಶಿವಾಲಯವೂ ಈ ರೀತಿಯ ಒಂದು ಸುಂದರವಾದ ಕಟ್ಟಡ. ಇದೂ ಈ ಕಾಲಕ್ಕೆ ಸೇರಿದುದೇ. ಸ್ವಲ್ಪವೂ ಅಳಿಯದೆ ಉಳಿದಿರುವ ಅತ್ಯಂತ ಪ್ರಾಚೀನ ದೇವಾಲಯಗಳಲ್ಲಿ ಇದು ಒಂದಾಗಿದೆ. ಅದೇ ಡಿಸ್ಟ್ರಿಕ್ಟಿನ ಪಟ್ಟದಕಲ್ಲಿನಲ್ಲಿರುವ ವಿರೂಪಾಕ್ಷದೇವಾಲಯವು ಕರ್ಣಾಟಕ ದೇಶದಲ್ಲೆಲ್ಲಾ ಅತ್ಯಂತ ದೊಡ್ಡದೂ ಪ್ರಾಶಸ್ತ್ಯವುಳ್ಳದ್ದೂ ಆದ ಈ ರೀತಿಯ ಕಟ್ಟಡ. ಇದನ್ನು ಚಾಳುಕ್ಯರಾಜನಾದ ಎರಡನೆಯ ವಿಕ್ರಮಾದಿತ್ಯರಾಯನ (ಕ್ರಿ.ಶ. ೭೩೩-೭೪೭) ರಾಣಿಯಾದ ಲೋಕಮಹಾದೇವಿಯು ಕಟ್ಟಿಸಿದಳು. ಈ ಮೇಲ್ಕಂಡ ದೇವಾಲಯಗಳು ಪ್ರಾಚೀನ ದ್ರಾವಿಡಶೈಲಿಯ ಲಕ್ಷಣಗಳನ್ನು ನಿದರ್ಶಿಸುವುದಕ್ಕೆ ಉತ್ತಮವಾದ ಉದಾಹರಣೆಗಳಾಗಿವೆ.

ತಂಜಾವೂರು ಮತ್ತು ಗಂಗೈಕೊಂಡಪುರಗಳಲ್ಲಿರುವ ಭವ್ಯವಾದ ವಿಮಾನಗಳು ಎರಡನೆಯ ಅಥವಾ ಪ್ರಾಚೀನ ಚೋಳರಕಾಲಕ್ಕೆ ಬರುತ್ತವೆ. ಚಿದಂಬರ ಮಧುರೆ ಶ್ರೀರಂಗಗಳಲ್ಲಿರುವ ದೇವಾಲಯಗಳು ಈಚಿನ ಚೋಳರಕಾಲಕ್ಕೆ ಸೇರಿದವುಗಳು. ಹೊಸಪೇಟೆ ತಾಲ್ಲೂಕು ಹಂಪೆಯಲ್ಲಿಯೂ ಕಂಚಿಯಲ್ಲಿಯೂ ಇರುವ ಕಲ್ಯಾಣಮಂಟಪಗಳೂ ವಿಜಯನಗರದ ಕಾಲದಲ್ಲಿ ಕಟ್ಟಿದ ಕಟ್ಟಡಗಳಿಗೆ ಒಳ್ಳೆಯ ಉದಾಹರಣೆಗಳು.

ಹದಿನೆಂಟು ಅಥವಾ ಹತ್ತೊಂಬತ್ತನೆಯ ಶತಮಾನದಲ್ಲಿ ಕಟ್ಟಿದ ತಕ್ಕಮಟ್ಟಿಗೆ ಚೆನ್ನಾಗಿರುವ ಕಟ್ಟಡವು ಅಲ್ಲೊಂದು ಇಲ್ಲೊಂದು ಕಂಡುಬಂದರೂ ಆಧುನಿಕ ಕಾಲದ ಕಟ್ಟಡಗಳಿಗೆ ಉತ್ತಮವಾದ ಉದಾಹರಣೆ ಬೇಕೆಂದರೆ ಸಿಕ್ಕುವಂತಿಲ್ಲ. ಅದರಲ್ಲಿಯೂ ಈಚೀಚೆಗೆ ಮದರಾಸಿನ ನಾಟುಕೋಟಿ ಶೆಟ್ಟಿಗಳು ಕಟ್ಟಿಸಿದ್ದೆಂದು ಹೇಳುವ ಕೆಲವು ದೇವಾಲಯಗಳಂತೂ ಹಿಂದಿನವುಗಳನ್ನು ಅನುಕರಣಮಾಡಿ ರಚಿಸಿದ ವಿಕಾರಸ್ವರೂಪಗಳಾಗಿವೆ. ಅವುಗಳಲ್ಲಿ ವಿನ್ಯಾಸಶುದ್ಧಿಯಿಲ್ಲ, ಒಳ್ಳೆಯ ಅಭಿರುಚಿಯಿಲ್ಲ.

ಈಚಿನ ಚೋಳರ ಮತ್ತು ಅಲ್ಲಿಂದ ಮುಂದಿನ ಕಾಲಗಳ ಕಟ್ಟಡಗಳು ಬಹು ಪ್ರಾಚೀನವಾದ ದೇವಾಲಯಗಳು. ಇವು ಆಮೇಲೆ ಬಂದ ರಾಜರ ಕಾಲದಲ್ಲಿ ವಿಸ್ತೃತವಾಗಿಯೋ ಅತಿಶಯವಾಗಿಯೋ ಜೀರ್ಣೋದ್ಧಾರವಾಗಿಯೋ ಆದವುಗಳು. ಹೇಗೆಂದರೆ, ಚಿದಂಬರದ ದೇವಸ್ಥಾನವು ಬಹು ಪ್ರಾಚೀನದ್ದಂತೆ; ಅದು ಸುಮಾರು

ಕ್ರಿ.ಶ. ಹತ್ತನೆಯ ಶತಮಾನದ್ದೆಂದು ಹೇಳುತ್ತಾರೆ. ಆದರೆ ಹೊರಗಿನ ಗೋಪುರಗಳು ಹದಿನಾಲ್ಕು ಮತ್ತು ಹದಿನೈದನೆಯ ಶತಮಾನಗಳಲ್ಲಿ ಕಟ್ಟಿದವುಗಳು. ಇದರಂತೆಯೇ, ಮಧುರೆಯ ದೇವಸ್ಥಾನದ ಗರ್ಭಗುಡಿಯನ್ನು ಕ್ರಿ.ಶ. ಹದಿಮೂರನೆಯ ಶತಮಾನದಲ್ಲಿ ಸುಂದರಪಾಂಡ್ಯನು ಕಟ್ಟಿಸಿದನೆಂದು ಹೇಳುತ್ತಾರೆ. ಆದರೆ ಅದನ್ನು ತಿರುಮಲನಾಯಕನು ಹದಿನೇಳನೆಯ ಶತಮಾನದಲ್ಲಿ ಜೀರ್ಣೋದ್ಧಾರಮಾಡಿ ವಿಸ್ತರಿಸಿದನು.

ಸಾಮಾನ್ಯವಾಗಿ ಈಚಿನ ಕಟ್ಟಡಗಳಲ್ಲಿ, ಮಧ್ಯದಲ್ಲಿರುವ ಮೂಲದೇವಸ್ಥಾನವು ಬಹು ಚಿಕ್ಕದು. ಮಹಾದ್ವಾರದ ಮೇಲಿನ ಬಹು ಎತ್ತರವಾದ ಗೋಪುರಗಳ ಮಗ್ಗುಲಲ್ಲಿ ಇವು ಬಲು ಗಿಡ್ಡಾಗಿ ಕಾಣುತ್ತವೆ. ಈ ವಿಧವಾದ ಕಟ್ಟಾಣಿಕೆಯು ಅಂದವಾಗಿರುವುದಿಲ್ಲವೆಂದೂ ವಾಸ್ತುವಿನ್ಯಾಸದಲ್ಲಿ ಇದು ಒಂದು ದೊಡ್ಡ ದೋಷವೆಂದೂ ಕೆಲವು ವಿದ್ವಾಂಸರು ಇದನ್ನು ಖಂಡಿಸಿರುತ್ತಾರೆ. ಆದರೆ ಮತ್ತೆ ಕೆಲವರು ಇದು ದೋಷವಲ್ಲವೆಂದೂ ಜಪತಪಾದಿಗಳಿಗೋಸ್ಕರವಾಗಿ ಉದ್ದಿಷ್ಟವಾದ ಗರ್ಭಗುಡಿಯನ್ನು ಬೇಕೆಂದೇ ಹೀಗೆ ಚಿಕ್ಕದಾಗಿಯೂ ಸರ್ವಸಾಧಾರಣವಾಗಿಯೂ ಕಟ್ಟಿರುತ್ತಾರೆಂದೂ, ಅದರಲ್ಲಿ ಭಕ್ತರ ಮನಸ್ಸನ್ನು ಆಕರ್ಷಿಸಿ ಚಂಚಲಗೊಳಿಸುವ ಅಲಂಕಾರಾದಿಗಳು ಯಾವುವೂ ಇರುವುದಿಲ್ಲವೆಂದೂ, ಈ ಅಸಾಮಂಜಸ್ಯಕ್ಕೆ ಅರ್ಥ ಹೇಳುತ್ತಾರೆ.

ಮೊದಲನೆಯ ಭಾಗದ ಒಂದನೆಯ ಅಧ್ಯಾಯದಲ್ಲಿ ಹೇಳಿರುವಂತೆ, ಪೂರ್ತಿಯಾಗಿ ವಿಕಾಸವನ್ನುಪಡೆದ ದ್ರಾವಿಡ ದೇವಾಲಯದಲ್ಲಿ ಈ ಭಾಗಗಳಿರುತ್ತವೆ:—

೧. **ವಿಮಾನ**—ಇದರಲ್ಲಿ ಗರ್ಭಗುಡಿ ಸುಕನಾಸಿ ಎಂದು ಎರಡು ಭಾಗಗಳುಂಟು. ಇದರ ತಳವು ಚೌಕವಾಗಿರುತ್ತದೆ. ಶಿಖರವು ಒಂದು ಅಥವಾ ಹೆಚ್ಚು ಅಂತಸ್ತುಗಳುಳ್ಳದ್ದಾಗಿರುತ್ತದೆ.

೨. **ಮುಖಮಂಟಪ**—ಇದು ವಿಮಾನದ ಮುಂದೆ ಅದಕ್ಕೆ ಸೇರಿದ ಹಾಗೆ ಇರುತ್ತದೆ.

೩. **ಗೋಪುರ**—ಇದು ಮಹಾದ್ವಾರದಮೇಲೆ ಇರತಕ್ಕ ಎತ್ತರವಾದ ಕಟ್ಟಡ; ಸಾಮಾನ್ಯವಾಗಿ ಇದು ದೇವಸ್ಥಾನದಲ್ಲೆಲ್ಲಾ ಬಹು ಎತ್ತರವಾಗಿಯೂ ಭವ್ಯವಾಗಿಯೂ ಇರುತ್ತದೆ.

೪. **ಹಜಾರ**—ಇದು ಎತ್ತರವಾದ ಕಂಬಗಳಿಂದ ಕೂಡಿ ಅನೇಕ ಅಂಕಣಗಳಾಗಿ ವಿಭಾಗಿಸಲ್ಪಟ್ಟಿರುತ್ತದೆ. ಇದು ಮುಖಮಂಟಪಕ್ಕೆ ಮುಂಭಾಗದಲ್ಲಿಯಾ

ಗಲಿ ಅದರ ಅಕ್ಕಪಕ್ಕಗಳಲ್ಲಾಗಲಿ ಅದನ್ನು ಹೊಂದಿಕೊಂಡಾಗಲಿ ಬೇರೆಯಾಗಲಿ ಇರುತ್ತದೆ.

**೫. ದ್ವಾರಮಂಟಪ**—ಇದು ಸಾಧಾರಣವಾಗಿ ಒಂದು ಅಂಕಣ ಅಗಲವುಳ್ಳದ್ದಾಗಿ ಮುಖಮಂಟಪದ ಅಥವಾ ಹಜಾರದ ಬಾಗಿಲುಗಳ ಮುಂಭಾಗದಲ್ಲಿರುತ್ತದೆ.

ವಿಮಾನವು ತಳದಲ್ಲಿ ಚತುರಸ್ರಾಕಾರದಲ್ಲಿದ್ದು, ಅಂತಸ್ತುಗಳಾಗಿ ಮೇಲಕ್ಕೆ ಹೋಗುತ್ತ ಚಿಕ್ಕದಾಗಿ ತುದಿಯಲ್ಲಿ ಸ್ತೂಪಾಕಾರವಾಗುತ್ತದೆ. ಕೆಲವುಕಡೆ ಗರ್ಭಗುಡಿಯ ಮೇಲಿನ ಗೋಪುರದಲ್ಲಿ ಗೂಡುಗಳನ್ನು ಮಾಡಿ ಅವುಗಳಲ್ಲಿ ದೇವದೇವಿಯರ ಮೂರ್ತಿಗಳನ್ನು ಇಟ್ಟಿರುತ್ತಾರೆ. ಲೋವೆಕಲ್ಲು ಹೆಡೆಯೆತ್ತಿದ ಹಾವಿನಂತೆ ದ್ವಿಭಂಗಿಯ ಆಕಾರದಲ್ಲಿರುತ್ತದೆ. ವಾಸ್ತುಸಂಪ್ರದಾಯಾನುಸಾರಿಗಳಾದ ಸಿಂಹಗಳು ಅಥವಾ ವ್ಯಾಳಿಗಳು ಅಲಂಕಾರರಚನೆಯಲ್ಲಿ ವಿಶೇಷವಾಗಿ ಉಪಯೋಗಿಸಲ್ಪಡುತ್ತವೆ. ಕಂಬಗಳ ಮೇಲೆ ಚಿತ್ರ ವಿಚಿತ್ರವಾದ ಬೋದಿಗೆಗಳನ್ನು ರಚಿಸುವುದೂ ಕಂಬಗಳನ್ನು ಒಟ್ಟೊಟ್ಟಿಗೆ ನಿಲ್ಲಿಸುವುದೂ ಅಲ್ಲಲ್ಲೇ ಸಣ್ಣಕಂಬಗಳನ್ನು ಕೆತ್ತುವುದೂ ಈ ರೀತಿಯ ವಿಶೇಷ ವೈಲಕ್ಷಣ್ಯಗಳಾಗಿವೆ.

ಹಿಂದೆಯೇ ತಿಳಿಸಿದಂತೆ, ಈರೀತಿಯನ್ನು ಅನುಸರಿಸಿ ಕಟ್ಟಿದ ಶ್ಲಾಘ್ಯವಾದ ಕಟ್ಟಡಗಳು ನಮ್ಮ ಸಂಸ್ಥಾನದಲ್ಲಿ ಇರುವುದು ಎಲ್ಲಿಯೋ ಕೆಲವು ಮಾತ್ರ. ಇವುಗಳೊಳಗೆ ವಿಜಯನಗರದವರ ಕಾಲದಲ್ಲಿಯೂ ಅಲ್ಲಿಂದ ಮುಂದೂ ಕಟ್ಟಿದ ದೇವಾಲಯಗಳು ಹೆಚ್ಚಾಗಿಯೂ ವರ್ಣನೀಯವಾಗಿಯೂ ಇವೆ.

ದೇವನಹಳ್ಳಿ ತಾಲ್ಲೂಕು ಗಂಗವಾರದಲ್ಲಿರುವ ಈಶ್ವರದೇವಾಲಯವು ಅತ್ಯಂತ ಪ್ರಾಚೀನವಾದದ್ದು; ಚಿಕ್ಕಬಳ್ಳಾಪುರದ ತಾಲ್ಲೂಕು ನಂದಿಯಲ್ಲಿರುವ ಭೋಗನಂದೀಶ್ವರ ದೇವಾಲಯವು ಬಹು ಸೊಗಸಾದದ್ದು; ಮುಳುಬಾಗಿಲು ತಾಲ್ಲೂಕು ವಿರೂಪಾಕ್ಷಪುರದಲ್ಲಿರುವ ವಿರೂಪಾಕ್ಷದೇವಾಲಯವು ಅತ್ಯಂತ ವಿಸ್ತಾರವಾದದ್ದು; ಅದೇ ತಾಲ್ಲೂಕು ಕುರುಡುಮಲೆ ಗ್ರಾಮದಲ್ಲಿರುವ ಸೋಮೇಶ್ವರ ದೇವಾಲಯವು ಚಿಕ್ಕದಾದರೂ ಅತ್ಯಂತ ಸುಂದರವಾದದ್ದು. ಇವುಗಳಲ್ಲದೆ ಶ್ರವಣಬೆಳ್ಗೊಳ ಜಂಬಿಟಿಗೆ ಇಕ್ಕೇರಿ ಹಲಸೂರು ಕೋಲಾರ ನಂಜನಗೂಡು ಈ ಸ್ಥಳಗಳಲ್ಲಿರುವ ಬಸದಿಗಳು ಮತ್ತು ದೇವಾಲಯಗಳು ಈ ರೀತಿಯಲ್ಲಿ ಕಟ್ಟಿದ ಕಟ್ಟಡಗಳಲ್ಲಿ ಮುಖ್ಯವಾದವುಗಳು.

ಮುಂದಿನ ಅಧ್ಯಾಯಗಳಲ್ಲಿ ಇವುಗಳೂ ಇವುಗಳಂತೆ ಇನ್ನೂ ಹಲವು ಕಟ್ಟಡಗಳೂ ವರ್ಣಿಸಲ್ಪಡುವುವು.

---

# ೮. ಕರ್ಣಪಾರ್ಯ

ನೇಮಿನಾಥಪುರಾಣದ ಕರ್ತೃವಾದ ಈ ಕರ್ಣಪಾರ್ಯನ ವಿಷಯವಾಗಿ ಕವಿಚರಿತಕಾರರು—

"ಈತನು ನೇಮಿನಾಥಪುರಾಣವನ್ನು ಬರೆದಿದ್ದಾನೆ. "ಮಾಳವೀಮಾಧವ" ಎಂಬ ಒಂದು ಗ್ರಂಥವನ್ನು ಈತನು ಬರೆದಿರುವುದಾಗಿ ದುರ್ಗಸಿಂಹನ (ಸು. 1145) ಪಂಚತಂತ್ರದಲ್ಲಿಯು—

ಪರಮುಕವೀಶ್ವರಚೇತೋ | ಹರಮೆಂಬಿನಮೆಸೆವ ಮಾಳವೀಮಾಧವಮಂ ||
ವಿರಚಿಸಿದಕನ್ನಮಯ್ಯಂ | ಬರಮಾಗಂ ಸುಕವಿ ಬಗೆವೊಡಿನ್ನುಂ ಮುನ್ನುಂ ||

ಎಂಬ ಪದ್ಯದಿಂದ ತಿಳಿಯಬರುತ್ತದೆ. ಅಲ್ಲದೆ ವೀರೇಶಚರಿತವೆಂಬ ಬೇರೊಂದು ಗ್ರಂಥವನ್ನು ಬರೆದಿರುವುದಾಗಿ ದೊಡ್ಡಯ್ಯನ (ಸು. 16 ನೆಯ ಶತಮಾನ) ಚಂದ್ರಪ್ರಭಸಾಂಗತ್ಯದಲ್ಲಿಯು—

ವರಶಾಂತಿನಾಥನ ಪೊಗಳ್ದ ಹೊನ್ನನ ಸ್ಮರ | ಹರನೇಮಿನಾಥಚರಿತವ ||
ದುರಿತಾರಿವೀರೇಶನ ಚರಿತವ ಪೇಳ್ದ | ಗರುವ ಕಣ್ಣಪನ ನುತಿಪೆನು ||

ಎಂಬ ಪದ್ಯದಿಂದ ತಿಳಿಯಬರುತ್ತದೆ. ಮಾಳವೀಮಾಧವವೂ ವೀರೇಶಚರಿತವೂ ನಮಗೆ ದೊರೆತಿಲ್ಲ.

ಈತನು ಜೈನಮತದವನು; ಈತನ ಹೆಸರು—ಕರ್ಣಪ, ಕಣ್ಣಪ, ಕಣ್ಣಮಯ್ಯ, ಕನ್ನಮ, ಎಂದೂ ಅಲ್ಲಲ್ಲಿ ದೊರೆಯುತ್ತದೆ. ಈತನಿಗೆ—ಪರಮಜಿನಮತಕ್ಷೀರವಾರಾಶಿಚಂದ್ರ, ಭವ್ಯವನಜವನಮಾರ್ತಾಂಡ, ಸಹಜಕವಿತಾರಸೋದಯ—ಎಂಬ ಬಿರುದುಗಳು ಇದ್ದಂತೆ ತೋರುತ್ತದೆ. ಈ ಕವಿಯ ವಿಷಯವಾಗಿ ಈತನ ನೇಮಿನಾಥಪುರಾಣದಿಂದ ಈಯಂಶಗಳು ತಿಳಿಯುತ್ತವೆ:— "ಜೀಮೂತವಾಹನವಿದ್ಯಾಧರಚಕ್ರವರ್ತಿವಂಶತಿಳಕ" ನಾದ ಗೋವರ್ಧನ ಅಥವಾ ಗೋಪಣ ಎಂಬ ರಾಜನು ಕಿಳಿಕಿಳದುರ್ಗಕ್ಕೆ ಅಧಿಪತಿಯಾಗಿದ್ದನು. ಇವನಿಗೆ ಶ್ರೀ ಗಂಡರಾದಿತ್ಯಭೂಪ, ಶ್ರೀಭೂಷಣ ಎಂಬ ಬಿರುದುಗಳುಂಟು. ಈತನ ಹೆಂಡತಿ ಕಂಚವ್ವೆ; ಇವನಿಗೆ ವಿಜಯಾದಿತ್ಯ, ಲಕ್ಷ್ಮಣ ಅಥವಾ ಲಕ್ಷ್ಮೀಧರ, ವರ್ಧಮಾನ, ಶಾಂತ ಎಂಬ ನಾಲ್ವರು ಕುಮಾರರು ಇದ್ದರು. ವಿಜಯಾದಿತ್ಯನ ಹೆಂಡತಿ ಸೊನ್ನಲದೇವಿ; ಲಕ್ಷ್ಮಣನ ಹೆಂಡತಿ ಗೋಪ........ಮಗಳಾದ ಚಂದಲದೇವಿ. "ಪ್ರಥಿತಯಶಂ ಸಮಸ್ತ ವಿಬುಧಾಗ್ರಣಿ" ಯಾದ ಈ ಲಕ್ಷ್ಮಣರಾಜನು ಈ ಪುರಾಣವನ್ನು ಹೇಳಿಸಿದನು. ಈ ಲಕ್ಷ್ಮಣರಾಜನ ಗುರು ನೇಮಿಚಂದ್ರಮುನಿ. ಕವಿಯ ಗುರು—ಮಲಧಾರಿದೇವನ ಶಿಷ್ಯನಾದ ಕಲ್ಯಾಣಕೀರ್ತಿ."

ಎಂದು ಬರೆದು (ಕವಿಚರಿತೆ I. ೧೧೬) ಈ ಕವಿಯು ಸುಮಾರು ಕ್ರಿ.ಶ. ೧೧೪೦ ರಲ್ಲಿ ಇದ್ದನೆಂದು ಊಹಿಸಿ ಈ ವಿಧವಾಗಿ ಊಹಿಸುವುದಕ್ಕೆ ಕಾರಣಗಳನ್ನು ಹೀಗೆಂದು ಕೊಟ್ಟಿರುವರು :—

"(1) ದುರ್ಗಸಿಂಹನು (ಸು. 1145) ಈ ಕವಿಯನ್ನು ಸ್ತುತಿಸುವುದರಿಂದ ಈತನು ಅವನಿಗೆ ಹಿಂದೆ ಇದ್ದಿರಬೇಕು. (2) ಈತನು ನಾಗಚಂದ್ರನನ್ನು (ಸು. 1105) † ಹೊಗಳುವಾಗ "ಅದ್ಯತನನಾಗಿಯುಂ" ಎಂದು ಹೇಳಿರುವುದರಿಂದ ಅವನಿಗಿಂತ ಸುಮಾರು ಒಂದು ತಲೆ ಈಚೆಯವನಾಗಿದ್ದಿರಬಹುದು. (3) ತನ್ನ ಗುರುವಾದ ಕಲ್ಯಾಣಕೀರ್ತಿಯ ಜತೆಯಲ್ಲಿ ಶುಭಚಂದ್ರಮುನಿ

ಯನ್ನೂ ಸ್ತುತಿಸಿದ್ದಾನೆ. ಒಬ್ಬ ಶುಭಚಂದ್ರಮುನಿ 1123 ರಲ್ಲಿ ಗತಿಸಿದಂತೆ ಶ್ರ. ಬೆ. 43ನೆಯ ಶಾಸನದಿಂದ ತಿಳಿಯುತ್ತದೆ. ಕಲ್ಯಾಣಕೀರ್ತಿ 1115 ರಲ್ಲಿ ಗತಿಸಿದ ಮೇಘಚಂದ್ರತ್ರೈವಿದ್ಯನ ಸಧರ್ಮನೆಂದು ಶ್ರ. ಬೆ. 55ನೆಯ ಶಾಸನದಿಂದ ತಿಳಿಯುತ್ತದೆ. ಅಲ್ಲದೆ ಕವಿ ಬೆಟ್ಟದಮುನಿ ಯೆಂಬ ಒಬ್ಬ ಗುರುವನ್ನು ಹೊಗಳಿ—ಬೆಟ್ಟದ ಮುನಿಯಂ ನೆನೆದೊಡೆ ಮುಟ್ಟವು ರಾಕ್ಷಸ ಪಿಶಾಚ ವಿಷಮಾಹಿಗಳುಂ—ಎಂದು ಹೇಳಿದ್ದಾನೆ; ಶ್ರ.ಬೆ. 55ನೆಯ ಶಾಸನದಲ್ಲಿ ಕಲ್ಯಾಣಕೀರ್ತಿ—ಶಾಕಿನ್ಯಾದಿಗ್ರಹಾಣಾಂಚ | ನಿರ್ಘಾಟನಧುರಂಧರಃ—ಎಂದು ಹೇಳಿರುವದರಿಂದ ಬೆಟ್ಟದಮುನಿ ಯೆಂಬುದು ಕವಿಯ ಗುರುವಿನ ಮತ್ತೊಂದು ಹೆಸರಾಗಿರಬಹುದು. *ಕಲ್ಯಾಣಕೀರ್ತಿಯ ಗುರು ವಾದ ಮಲಧಾರಿದೇವನಿಗೆ ಗುಣಚಂದ್ರ ಎಂಬ ಹೆಸರೂ ಉಂಟು (ಶ್ರ.ಬೆ. ಶಾಸನ 55). ಈತನು ಭುವನೈಕಮಲ್ಲನ (1069-1097) ಗುರುವಾಗಿದ್ದಂತೆ ನಯಸೇನನು ಹೇಳುವುದರಿಂದ ಈತನು ಸುಮಾರು 1090 ರಲ್ಲಿದ್ದಿರಬಹುದು. ಈತನ ಶಿಷ್ಯ ಕಲ್ಯಾಣಕೀರ್ತಿ ಸುಮಾರು 1120ರಲ್ಲಿ ಇದ್ದಿರ ಬಹುದು. ಈತನ ಶಿಷ್ಯನಾದ ಕವಿ ಇವನಿಗಿಂತ ಸುಮಾರು 20 ವರ್ಷ ಈಚೆ ಇದ್ದಿರಬಹುದು.* (4) ಲೀಲಾವತಿಯನ್ನು ಬರೆದ ನೇಮಿಚಂದ್ರನಿಗೂ (ಸು. 1170) ಈ ಲಕ್ಷ್ಮಣರಾಜನೇ ಪೋಷಕ ನಾಗಿದ್ದಂತೆ ಆ ಗ್ರಂಥದಿಂದ ತಿಳಿಯಬರುತ್ತದೆ (ನೇಮಿಚಂದ್ರನ ಚರಿತವನ್ನು ನೋಡಿ). ನೇಮಿ ಚಂದ್ರನ ಕಾಲದಲ್ಲಿ ಲಕ್ಷ್ಮಣರಾಜನು ರಾಜ್ಯಭಾರಮಾಡುತ್ತಿದ್ದಂತೆ ವ್ಯಕ್ತವಾಗುತ್ತದೆ. ಕರ್ಣ ಪಾರ್ಯನ ಕಾಲದಲ್ಲಿ ಲಕ್ಷ್ಮಣರಾಜನು ರಾಜ್ಯಭಾರಮಾಡುತ್ತಿರಲಿಲ್ಲ. ಅವನ ತಂದೆಯೋ ಅಥವಾ ಅಣ್ಣನಾದ ವಿಜಯಾದಿತ್ಯನೋ ಆಳುತ್ತಿದ್ದಂತೆ ತಿಳಿಯಬರುತ್ತದೆ. ಆದುದರಿಂದ ಕರ್ಣಪಾರ್ಯನು ನೇಮಿಚಂದ್ರನಿಗೆ ಸುಮಾರು ಒಂದು ತಲೆ ಹಿಂದೆ ಇದ್ದಿರಬೇಕು.

ಈ ಕಾರಣಗಳಿಂದ ಈ ಕವಿ ಸುಮಾರು 1140 ರಲ್ಲಿ ಇದ್ದನೆಂದು ಊಹಿಸಬಹುದಾಗಿದೆ." (ಕವಿಚರಿತೆ I. ೧೧೭)

ಹೀಗೆ ನೇಮಿನಾಥಪುರಾಣದ ಕರ್ತೃವಾದ ಕರ್ಣಪಾರ್ಯನು ಸುಮಾರು ೧೧೪೦ ರಲ್ಲಿ ಇದ್ದನೆಂದು ಊಹಿಸುವುದಕ್ಕೆ ಆಧಾರಭೂತಗಳೆಂದು ಕವಿಚರಿತಕಾ ರರು ನಾಲ್ಕು ಕಾರಣಗಳನ್ನು ಹೇಳಿದ್ದಾಗ್ಯೂ ವಿಚಾರಮಾಡಿ ನೋಡಿದಲ್ಲಿ ಅವು ಗಳಲ್ಲಿ ಪ್ರಯೋಜನಕಾರಿಯಾದುದು ಯಾವುದೂ ಇಲ್ಲದೆ ಎಲ್ಲವೂ ನಿರರ್ಥಕಗಳಾ ಗಿಯೇ ಪರಿಣಮಿಸುವುವು.

(1) ದುರ್ಗಸಿಂಹನು ತನ್ನ ಪಂಚತಂತ್ರವನ್ನು ಕ್ರಿ. ಶ. ೧೦೨೪-೧೦೪೨ ರಲ್ಲಿ ಬರೆದನೆಂದು ನಾವು ಮೇಲೆ (ಪುಟ ೨೦) ವ್ಯಕ್ತಪಡಿಸಿರುವೆವಷ್ಟೆ. ಈ ಪಂಚ ತಂತ್ರದಲ್ಲಿ ಸ್ತುತನಾಗಿರುವ ಕರ್ಣಪಾರ್ಯನು ನೇಮಿನಾಥಪುರಾಣದ ಕರ್ತೃವೇ ಆಗಿದ್ದಪಕ್ಷದಲ್ಲಿ, ಅವನು ಕ್ರಿ. ಶ. ೧೦೪೨ ಕ್ಕಿಂತ ಹಿಂದೆ ಇದ್ದಿರಬೇಕೆಂದು ಸಿದ್ಧ ವಾಗುವುದೇ ಹೊರತು ಕ್ರಿ. ಶ. ೧೧೪೦ರಲ್ಲಿ ಇದ್ದನೆಂದು ಸಿದ್ಧವಾಗುವುದಿಲ್ಲ.

† ಎರಡನೆಯ ಮುದ್ರಣದಲ್ಲಿ '1105' ಎಂಬುದರ ಬದಲು '1100' ಎಂದು ಇದೆ.

*—* ಈ ಗುರುತುಗಳ ಮಧ್ಯದಲ್ಲಿರುವ ಗ್ರಂಥವು ಎರಡನೆಯ ಮುದ್ರಣದಲ್ಲಿಲ್ಲ.

(2) ನಾಗಚಂದ್ರನೂ ಕೂಡ ಕ್ರಿ. ಶ. ೧೧ನೆಯ ಶತಮಾನದ ಆದಿಭಾಗದಲ್ಲಿಯೋ ಅಥವಾ ೧೦ನೆಯ ಶತಮಾನದ ಅಂತ್ಯಭಾಗದಲ್ಲಿಯೋ ಇದ್ದನೆಂದು ಮೇಲೆ (ಪುಟ ೪೪) ವ್ಯಕ್ತಪಡಿಸಲ್ಪಟ್ಟಿರುವುದರಿಂದ, ಇವನನ್ನು ಸ್ತುತಿಸುವ ನೇಮಿನಾಥಪುರಾಣವು ಕ್ರಿ. ಶ. ಸುಮಾರು ೧೦೪೨ ಕ್ಕಿಂತ ಈಚೆಗೆ ಹುಟ್ಟಿತೆಂದು ಮಾತ್ರ ಸಿದ್ಧವಾಗುವುದೇ ಹೊರತು ಅದು ಸುಮಾರು ೧೧೪೦ ರಲ್ಲಿ ಹುಟ್ಟಿತೆಂಬುದು ಸಿದ್ಧವಾಗುವುದಿಲ್ಲ.

(3) ಇಲ್ಲಿ ಕವಿಚರಿತಕಾರರು ಯಥಾಪ್ರಕಾರ ಕರ್ಣಪಾರ್ಯನಿಂದ ಕೀರ್ತಿತರಾದ ಕಲ್ಯಾಣಕೀರ್ತಿ, ಶುಭಚಂದ್ರ ಮತ್ತು ಮಲಧಾರಿ ಎಂಬ ಹೆಸರಿನ ಜೈನಗುರುಗಳು ಶ್ರವಣಬೆಳ್ಗೊಳದ ೪೩ ಮತ್ತು ೫೫ನೆಯ ಶಾಸನಗಳಲ್ಲಿ ಸ್ತುತರಾದ ಆ ಹೆಸರಿನ ಜೈನಗುರುಗಳೇ ಎಂದು ಯಾವ ಆಧಾರವೂ ಇಲ್ಲದೆ ನಿರ್ಧರಿಸಿಬಿಟ್ಟಿರುವರು. ಶ್ರವಣಬೆಳ್ಗೊಳದ ೪೩ನೆಯ ಶಾಸನದಲ್ಲಿ ಸ್ತುತನಾಗಿರುವ ಶುಭಚಂದ್ರನು ದಿವಾಕರಣಂದಿಯ ಶಿಷ್ಯನಾದ ಗಂಡವಿಮುಕ್ತಮಲಧಾರಿದೇವನ ಶಿಷ್ಯನೆಂದೂ, ದೇಶೀಯಗಣದ ಪುಸ್ತಕಗಚ್ಛದವನೆಂದೂ ಆ ಶಾಸನದಿಂದಲೇ ತಿಳಿದುಬರುವುದು. ೫೫ನೆಯ ಶಾಸನದಲ್ಲಿ ಕೀರ್ತಿತನಾದ ಕಲ್ಯಾಣಕೀರ್ತಿಯಾದರೋ ವೃಷಭನಂದ್ಯಾಚಾರ್ಯನೆಂಬ ಚತುರ್ಮುಖದೇವನ ಶಿಷ್ಯನಾದ ಮಾಘನಂದಿಸಿದ್ಧಾಂತದೇವನ ಶಿಷ್ಯನೆಂದೂ, ತ್ರಿರತ್ನನಂದಿಭಟ್ಟಾರಕ, ಮೇಘಚಂದ್ರಪಂಡಿತ ಮತ್ತು ಬಾಲಚಂದ್ರಪಂಡಿತನೇ ಮೊದಲಾದವರ ಸಧರ್ಮನೆಂದೂ, ದೇಶೀಯಗಣದ ವಕ್ರಗಚ್ಛಕ್ಕೆ ಸೇರಿದವನೆಂದೂ ಇದೇ ಶಾಸನದಿಂದಲೇ ವ್ಯಕ್ತವಾಗುವುದು. ದೇಶೀಯಗಣದ ಪುಸ್ತಕಗಚ್ಛಕ್ಕೆ ಸೇರಿದ ಗಂಡವಿಮುಕ್ತಮಲಧಾರಿದೇವನ ಶಿಷ್ಯನಾದ ಈ ಶುಭಚಂದ್ರನಿಗೂ ದೇಶೀಯಗಣದ ವಕ್ರಗಚ್ಛಕ್ಕೆ ಸೇರಿದ ಮಾಘನಂದಿಸಿದ್ಧಾಂತದೇವನ ಶಿಷ್ಯನಾದ ಕಲ್ಯಾಣಕೀರ್ತಿಗೂ ಯಾವ ವಿಧವಾದ ಸಂಬಂಧವೂ ಇಲ್ಲವೆಂಬುದನ್ನು ನಾವು ಕಂಠತಃ ಹೇಳಬೇಕಾಗಿಲ್ಲ. ಕರ್ಣಪಾರ್ಯನಂತೂ ಮಲಧಾರಿದೇವನನ್ನು ಸ್ತುತಿಸಿದನಂತರ† 'ತಚ್ಛಿಷ್ಯರ್ ಚತುರಾನನರ್ಚತುರತಾಸಂಪತ್ತಿಯಿಂ...' ಎಂದು

†ಕರ್ಣಪಾರ್ಯನಿಂದ ಸ್ತುತರಾಗಿರುವರೆಂದು ಕವಿಚರಿತಕಾರರಿಂದ ಕವಿಚರಿತೆ I, ೧೧೮ರಲ್ಲಿ ಕೊಡಲ್ಪಟ್ಟಿರುವ ಮಲಧಾರಿ ಆದಿಯಾಗಿ ಅಕಲಂಕಚಂದ್ರಪರ್ಯಂತವಾದ ಜೈನ ಗುರ್ವಾವಳಿಯಲ್ಲಿ ತಪ್ಪಿರುವಂತೆ ನಮಗೆ ತೋರುವುದು. ನಾವು ನೋಡಿದ ನೇಮಿನಾಥಪುರಾಣದ ಪ್ರತಿಯಲ್ಲಂತೂ ಸಮಂತಭದ್ರರಿಂದ ಹಿಡಿದು ಕೊಂಡಕುಂದಾಚಾರ್ಯರವರೆಗೆ ಗುರುಗಳನ್ನು ಕೀರ್ತಿಸಿದನಂತರ, ಕರ್ಣಪಾರ್ಯನು ಮಲಧಾರಿದೇವ, ತಚ್ಛಿಷ್ಯ ಕಲ್ಯಾಣಕೀರ್ತಿ, ಕೊಲ್ಲಾಪುರದ ಚಂದ್ರಪ್ರಭಬಸ್ತಿಯ ಶುಭಚಂದ್ರ, ಚಿಟ್ಟದಮುನಿ, ಕಾಣೂರ್ಗಣದ ನೇಮಿಚಂದ್ರಮುನಿ, ಕನಕಚಂದ್ರ ಎಂದು ಇಷ್ಟು

ಕಲ್ಯಾಣಕೀರ್ತಿಯನ್ನು ಸ್ತುತಿಸುವ ಪದ್ಯದಲ್ಲಿ 'ತಚ್ಛಿಷ್ಯರ್' ಎಂಬ ಪದವನ್ನು ಉಪಯೋಗಿಸಿ ಕಲ್ಯಾಣಕೀರ್ತಿಯು ಪೂರ್ವಸ್ತುತನಾದ ಮಲಧಾರಿದೇವನ ಶಿಷ್ಯನೆಂದು ಹೇಳಿರುವುದರಿಂದ, ಕರ್ಣಪಾರ್ಯನಿಂದ ಸ್ತುತನಾದ ಕಲ್ಯಾಣಕೀರ್ತಿಯು ಶ್ರ.ಬೆ. ೫೫ನೆಯ ಶಾಸನದಲ್ಲಿ ಸ್ತುತನಾದ ಕಲ್ಯಾಣಕೀರ್ತಿಯಲ್ಲವೆಂಬುದು ಸ್ಪಷ್ಟವಾಗುವುದು. ಆದುದರಿಂದ, ಈ ಕಲ್ಯಾಣಕೀರ್ತಿಯನಂತರ ಕರ್ಣಪಾರ್ಯನಿಂದ ಸ್ತುತಿಸಲ್ಪಟ್ಟು ಇವನ ಶಿಷ್ಯನೋ ಸಧರ್ಮನೋ ಆದ ಶುಭಚಂದ್ರನೂ ಕೂಡ ಶ್ರ.ಬೆ. ೪೩ ನೆಯ ಶಾಸನದಲ್ಲಿ ಸ್ತುತನಾದ ಶುಭಚಂದ್ರನಲ್ಲವೆಂಬುದೂ ವ್ಯಕ್ತವಾಗುವುದು.

ಕರ್ಣಪಾರ್ಯನಿಂದ ಸ್ತುತನಾದ ಬೆಟ್ಟದ ಮುನಿಯೆಂಬ ಗುರುವು ಮೇಲೆ ಹೇಳಲ್ಪಟ್ಟ ಕಲ್ಯಾಣಕೀರ್ತಿಯೇ ಆಗಿರಬಹುದು ಎಂಬ ಕವಿಚರಿತಕಾರರ ಅಭಿಪ್ರಾಯವು ಸಾಧುವಾಗಿರುವಂತೆ ನಮಗೆ ಕಾಣಿಸುವುದಿಲ್ಲ. ಕರ್ಣಪಾರ್ಯನು ಹೇಳಿರುವ ಗುರುಕ್ರಮವನ್ನು ಪರ್ಯಾಲೋಚಿಸಿದರೆ, ಈ ಬೆಟ್ಟದ ಮುನಿಯೆಂಬವನು ಹಿಂದೆ ಸ್ತುತರಾಗಿರುವ ಕಲ್ಯಾಣಕೀರ್ತಿ ಶುಭಚಂದ್ರರಿಬ್ಬರಿಂದಲೂ ಭಿನ್ನನಾದ ಮೂರನೆಯ ಗುರುವಾಗಿದ್ದಂತೆ ತೋರುವುದು.

ಹೀಗೆಯೇ, ಈ ಕಲ್ಯಾಣಕೀರ್ತಿಯು ೧೧೧೫ ರಲ್ಲಿ ಗತಿಸಿದ ಮೇಘಚಂದ್ರನ ಸಧರ್ಮನಾಗಿದ್ದನೆಂಬ ಕವಿಚರಿತಕಾರರ ಅಭಿಪ್ರಾಯವೂ ಕೂಡ ಅಸಾಧುವಾದುದು. ಶ್ರವಣಬೆಳ್ಗೊಳದ ೫೫ ನೆಯ ಶಾಸನದಲ್ಲಿ ಕೀರ್ತಿತನಾದ ಕಲ್ಯಾಣಕೀರ್ತಿಯ ಸಧರ್ಮನಾದ ವಕ್ರಗಚ್ಛದ ಮೇಘಚಂದ್ರನು ಶ್ರ. ಬೆ. ೪೭ ನೆಯ ಶಾಸನದಲ್ಲಿ ಹೇಳಲ್ಪಟ್ಟಿರುವ ಕ್ರಿ. ಶ. ೧೧೧೫ ರಲ್ಲಿ ಲೋಕಾಂತರವನ್ನೈದಿದ ಮೇಘಚಂದ್ರನಿಂದ ಭಿನ್ನನೆಂಬುದನ್ನು ನಾವು ಮೇಲೆಯೇ (ಪುಟ ೩೫-೩೬) ವ್ಯಕ್ತಪಡಿಸಿರುವೆವು.

'ಕಲ್ಯಾಣಕೀರ್ತಿಗೆ ಗುರುವಾದ ಮಲಧಾರಿದೇವನಿಗೆ......' ಎಂದು ಮೊದಲಾದ ಮೂರು ವಾಕ್ಯಗಳನ್ನು ಕವಿಚರಿತಕಾರರೇ ದ್ವಿತೀಯ ಮುದ್ರಣದಲ್ಲಿ ಬಿಟ್ಟು ಬಿಟ್ಟಿರುವುದರಿಂದ ಆ ವಿಷಯವಾಗಿ ನಾವು ವಿಚಾರವನ್ನು ಮಾಡಿ, ಅವುಗಳಲ್ಲಿರುವ ಅನೇಕ ತಪ್ಪುಗಳನ್ನು ವ್ಯಕ್ತಪಡಿಸುವುದು ಅನಾವಶ್ಯಕವಾಗಿರುವುದು.

(4) ಕರ್ಣಪಾರ್ಯನಿಂದ ಸ್ತುತನಾದ ಲಕ್ಷ್ಮಣರಾಜನೂ ನೇಮಿಚಂದ್ರನ ಲೀಲಾವತಿಯಲ್ಲಿ ಸ್ತುತನಾದ ಲಕ್ಷ್ಮಣರಾಜನೂ ಒಬ್ಬನೇ ಎಂದೂ, ಕರ್ಣಪಾ

---

ಜೈನಗುರುಗಳನ್ನು ಸ್ತುತಿಸಿರುವನು. ಕವಿಚರಿತಕಾರರು ಹೇಳಿರುವ ಅಕಲಂಕಚಂದ್ರ ಎಂಬ ಗುರುವನ್ನು ಅವನು ಸ್ತುತಿಸಿಲ್ಲ.

ರ್ಯನು ತನ್ನ ಗ್ರಂಥವನ್ನು ಬರೆದಾಗ ಈ ಲಕ್ಷ್ಮಣರಾಜನು ರಾಜ್ಯವನ್ನಾಳುತ್ತಿರ ಲಿಲ್ಲವೆಂದೂ, ಇವನ ತಂದೆಯೋ ಅಥವಾ ಅಣ್ಣನಾದ ವಿಜಯಾದಿತ್ಯನೋ ಆಳುತ್ತಿದ್ದಂತೆ ತಿಳಿಯುಬರುವುದೆಂದೂ ಕವಿಚರಿತಕಾರರು ಹೇಳಿ ನೇಮಿಚಂದ್ರನು ತನ್ನ ಲೀಲಾವತಿಯನ್ನು ಬರೆದ ಕಾಲದಲ್ಲಾದರೆ ಈ ಲಕ್ಷ್ಮಣರಾಜನು ರಾಜ್ಯವನ್ನಾಳುತ್ತಿದ್ದನೆಂದು ಮೇಲೆ ಬರೆದಿರುವರಷ್ಟೆ. ಇದಲ್ಲದೆ, ಕವಿಚರಿತಕಾರರು ಕವಿಚರಿತೆಯ ಇದೇ ಸಂಪುಟದ ಅವತರಣಿಕೆಯ ೧೨ ನೆಯ ಪುಟದಲ್ಲಿ 'ಕರ್ಣಪಾರ್ಯ, ನೇಮಿಚಂದ್ರ, ಮುನಿಚಂದ್ರ ಮೊದಲಾದ ಕವಿಗಳು ಸೌಂದತ್ತಿಯರಸರ ಕಾಲದಲ್ಲಿ ಗ್ರಂಥಗಳನ್ನು ಬರೆದಿದ್ದಾರೆ' ಎಂದು ಹೇಳಿರುವರು. ಕವಿಚರಿತಕಾರರಾದ ಮ|| ಆರ್. ನರಸಿಂಹಾಚಾರ್ಯರಿಂದ ಬರೆಯಲ್ಪಟ್ಟ ೧೯೧೬ ನೇ ವರ್ಷದ ಮೈಸೂರು ಶಾಸನದ ಇಲಾಖೆಯ ವಾರ್ಷಿಕವರದಿಯ ೫೦ ನೆಯ ಪುಟದಲ್ಲಿಯೂ* (§ 81) ಕೂಡ ಹೀಗೆಯೇ ಸೌಂದತ್ತಿಯ ಅರಸನಾದ ರಟ್ಟವಂಶದ ಮೂರನೆಯ ಕಾರ್ತವೀರ್ಯನ ಮಗನಾದ ಒಂದನೆಯ ಲಕ್ಷ್ಮೀದೇವನ ಆಶ್ರಯದಲ್ಲಿ ಕರ್ಣಪಾರ್ಯನೂ ನೇಮಿಚಂದ್ರನೂ ತಮ್ಮ ಕೃತಿಗಳನ್ನು ಬರೆದರೆಂದೂ, ಇಬ್ಬರು ಕವಿಗಳೂ ಲಕ್ಷ್ಮೀದೇವನ ಅರಸಿಯಾದ ಚಂದಲದೇವಿಯನ್ನು ಸ್ತುತಿಸಿರುವರೆಂದೂ ಕರ್ಣಪಾರ್ಯನ ಕಾಲದಲ್ಲಿ ಲಕ್ಷ್ಮೀದೇವನು ಯುವರಾಜನಾಗಿದ್ದು ನೇಮಿಚಂದ್ರನ ಕಾಲದಲ್ಲಾದರೆ ರಾಜ್ಯಭಾರವನ್ನು ಮಾಡುತ್ತಿದ್ದನೆಂದೂ ಹೇಳಲ್ಪಟ್ಟಿರುವುದು. ಕವಿಚರಿತೆಯ ಎರಡನೆಯ ಸಂಪುಟದ ಅವತರಣಿಕೆಯಲ್ಲಾದರೆ (ಪುಟ ೧೬) 'ಕರಹಾಟದ ಶಿಲಾಹಾರರು—ಗಂಡರಾದಿತ್ಯನ ಮಗನಾದ ಲಕ್ಷ್ಮಣರಾಜನ ಆಜ್ಞಾನುಸಾರವಾಗಿ ಕರ್ಣಪಾರ್ಯನು ನೇಮಿನಾಥಪುರಾಣವನ್ನು ಬರೆದನು. ಅದೇ ರಾಜನ ಆಳಿಕೆಯಲ್ಲಿ ನೇಮಿಚಂದ್ರನು ಲೀಲಾವತಿಯನ್ನು ರಚಿಸಿದನು' ಎಂದು ಹೇಳಲ್ಪಟ್ಟಿ

---

* "It may be of interest to note here the fact that two celebrated Kannada poets, Karnaparya and Nemichandra, wrote some of their works under the patronage of Lakshmideva I, son of the above mentioned Kartavirya III. Both of them mention Lakshmideva's queen as Chandaladevi; but during Karnaparya's time he was only a *yuvaraja*, though he was the king during Nemichandra's time." *Annual Report of the Mysore Archæological Department* for the year 1916, page 50, § 81.

ರುವುದು.* ಎಂದರೆ, ಸೌಂದತ್ತಿಯ ರಾಜನಾದ ರಟ್ಟವಂಶದ ಮೂರನೆಯ ಕಾರ್ತವೀರ್ಯನ ಮಗನಾದ ಒಂದನೆಯ ಲಕ್ಷ್ಮೀದೇವನು ಯುವರಾಜನಾಗಿದ್ದಾಗ ಕರ್ಣಪಾರ್ಯನೂ, ರಾಜನಾಗಿದ್ದಾಗ ನೇಮಿಚಂದ್ರನೂ ತಮ್ಮ ತಮ್ಮ ಕೃತಿಗಳನ್ನು ರಚಿಸಿದರೆಂಬ ತಮ್ಮ ಪೂರ್ವದ ಅಭಿಪ್ರಾಯವನ್ನು ತ್ಯಜಿಸಿ ಕರಹಾಟದೇಶಾಧಿಪನಾದ ಶಿಲಾಹಾರವಂಶದ ಗಂಡರಾದಿತ್ಯನ ಮಗನಾದ ಲಕ್ಷ್ಮಣರಾಜನು ಕುಮಾರನಾಗಿದ್ದಾಗಲೂ, ಮತ್ತು ರಾಜ್ಯವನ್ನಾಳುತ್ತಿದ್ದಾಗಲೂ ಕೂಡ ಈ ಕರ್ಣಪಾರ್ಯ ನೇಮಿಚಂದ್ರರಿಬ್ಬರೂ ತಮ್ಮ ತಮ್ಮ ಕಾವ್ಯಗಳನ್ನು ಬರೆದರೆಂಬುದೇ ತಮ್ಮ ಅಭಿಪ್ರಾಯವೆಂದು ಕವಿಚರಿತಕಾರರು ವ್ಯಕ್ತಪಡಿಸಿರುವರು. ಕವಿಚರಿತೆ ಒಂದನೆಯ ಸಂಪುಟದ ಎರಡನೆಯ ಮುದ್ರಣದಲ್ಲಾದರೆ (ಅವತರಣಿಕೆ ಪುಟ ೧೭) 'ಕರ್ಣಪಾರ್ಯ ನೇಮಿಚಂದ್ರ ಮುನಿಚಂದ್ರ ಮೊದಲಾದ ಕವಿಗಳು ಸೌಂದತ್ತಿಯರಸರ ಕಾಲದಲ್ಲಿ ಗ್ರಂಥಗಳನ್ನು ಬರೆದಿದ್ದಾರೆ' ಎಂಬ ಒಂದನೆಯ ಮುದ್ರಣದ ಅವತರಣಿಕೆಯಲ್ಲಿರುವ ವಾಕ್ಯವನ್ನೇ ಕವಿಚರಿತಕಾರರು ಪುನಃ ಬರೆದಿರುವುದನ್ನು ಪರ್ಯಾಲೋಚಿಸಿದರೆ ಈ ಅಭಿಪ್ರಾಯವೇ ಆದರಣೀಯವಾದುದೆಂದೂ, ಎರಡನೆಯ ಸಂಪುಟದ ಅವತರಣಿಕೆಯಲ್ಲಿ ಹೇಳಲ್ಪಟ್ಟಿರುವ ಅಭಿಪ್ರಾಯವು ಸಾಧುವಲ್ಲವೆಂದೂ ಅವರು ಭಾವಿಸಿರುವಂತೆ ಕಾಣುತ್ತದೆ.

ವಸ್ತುತಃ ಈ ಮೇಲೆ ಹೇಳಿರುವ ಎರಡು ಅಭಿಪ್ರಾಯಗಳಲ್ಲಿ ಯಾವುದೂ ಸರಿಯಲ್ಲ. 'ಮಱುವಕ್ಕಸರ್ಪ' ಎಂದು ನೇಮಿನಾಥಪುರಾಣದ ಪದ್ಯವೊಂದರಲ್ಲಿ (ಮುಂದೆ ೭೯ ನೆಯ ಪುಟದಲ್ಲಿರುವ ೨೨ ನೆಯ ಪದ್ಯವನ್ನು ನೋಡಿ) ಗಂಡರಾದಿತ್ಯನಿಗೆ ಹೇಳಲ್ಪಟ್ಟಿರುವ ಬಿರುದು ನಮಗೆ ತಿಳಿದಂತೆ ಕರಹಾಟದ ಶಿಲಾಹಾರರಿಗೆ ಮಾತ್ರ ಇದ್ದುದರಿಂದಲೂ ಕರ್ಣಾಟಕದೇಶದಲ್ಲಿ ರಾಜ್ಯಭಾರ ಮಾಡುತ್ತಿದ್ದ ಪಟ್ಟಾಭಿಷಿಕ್ತರಾದ ದೊರೆಗಳಲ್ಲಿ ಗಂಡರಾದಿತ್ಯ ಎಂಬ ಹೆಸರುಳ್ಳ ದೊರೆಯು ಈ ಶಿಲಾಹಾರವಂಶದ ಮಹಾಮಂಡಲೇಶ್ವರ ಗಂಡರಾದಿತ್ಯನೊಬ್ಬನೇ† ಆಗಿರುವುದರಿಂ

* ಹೀಗೆಯೇ ಇದೇ ಸಂಪುಟದಲ್ಲಿರುವ ಆಂಗ್ಲ ಉಪೋದ್ಘಾತದ ೧೦ ನೆಯ ಪುಟದಲ್ಲಿಯೂ ಕೂಡ, "The Silaharas of Karad.—By order of Lakshmana-Raja, son of Gandaraditya, Karnaparya wrote the Neminatha purana. The Lilavati also was composed during the same reign by Nemichandra" ಎಂದು ಹೇಳಲ್ಪಟ್ಟಿರುವುದು.

† ಈ ಮಹಾಮಂಡಲೇಶ್ವರ ಗಂಡರಾದಿತ್ಯನಿಗೆ ಸಮಕಾಲೀನನಾಗಿ ಕ್ರಿ. ಶ. ಸುಮಾರು ೧೧೩೦ರಲ್ಲಿ ಹೊಯ್ಸಳ ವಿಷ್ಣುವರ್ಧನದೇವನ ಕೆಳಗೆ ಮಹಾಸಾಮಂತನಾದ ಒಬ್ಬ ಗಂಡರಾದಿತ್ಯನ ಹೆಸರು ತಿಪ್ಟೂರು ೧೦೪, ೧೦೫ನೇ ಶಾಸನಗಳಲ್ಲಿ ಹೇಳಲ್ಪಟ್ಟಿರುವುದು.

ದಲೂ, ಇವನೂ ಇವನ ಪೂರ್ವಪುರುಷರೂ ಜೀಮೂತವಾಹನ ವಿದ್ಯಾಧರವಂಶದಲ್ಲಿ ತಾವು ಹುಟ್ಟಿದವರೆಂದು ಹೇಳಿಕೊಂಡಿರುವುದರಿಂದಲೂ, ಅವರು ಕಿಳಿಕಿಳದುರ್ಗದಲ್ಲಿ ರಾಜ್ಯವನ್ನಾಳುತ್ತಿದ್ದುದರಿಂದಲೂ, ಈ ಗಂಡರಾದಿತ್ಯನಿಗೆ ವಿಜಯಾದಿತ್ಯನೆಂಬ ‡ ಮಗನಿದ್ದುದರಿಂದಲೂ ಕೂಡ, ಕರ್ಣಪಾರ್ಯನಿಂದ ನೇಮಿನಾಥಪುರಾಣದಲ್ಲಿ ಸ್ತುತನಾಗಿರುವ ಗಂಡರಾದಿತ್ಯನು ಕರಹಾಟದೇಶಾಧಿಪನಾದ ಶಿಲಾಹಾರವಂಶದ ಗಂಡರಾದಿತ್ಯನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಇವನು ಕ್ರಿ. ಶ.

---

‡ ಎಪಿಗ್ರಾಫಿಯ ಇಂಡಿಕ ೩ನೆಯ ಸಂಪುಟದ ೨೧೦ನೇ ಪುಟದಲ್ಲಿ ಪ್ರಕಾಶಿತವಾಗಿರುವ ಒಂದು ಶಿಲಾಲೇಖನದಲ್ಲಿ ಈ ವಿಜಯಾದಿತ್ಯನ ಬಿರುದಾವಳಿಯು ಹೀಗೆಂದು ಹೇಳಲ್ಪಟ್ಟಿರುವುದು :— ಶ್ರೀಮದ್ಗಂಡರಾದಿತ್ಯದೇವಸ್ಯ ಪ್ರಿಯತನಯಃ || ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಮಂಡಲೇಶ್ವರಃ ತಗರಪುರವರಾಧೀಶ್ವರಃ | ಶ್ರೀಶಿಲಾಹಾರನರೇಂದ್ರಃ ನಿಜವಿಳಾಸವಿಜಿತದೇವೇಂದ್ರಃ ಜೀಮೂತವಾಹನಾನ್ವಯಪ್ರಸೂತಃ | ಶೌರ್ಯ್ಯವಿಖ್ಯಾತಃ | ಸುವರ್ಣ್ಣಗರುಡಧ್ವಜಃ ಯುವತೀಜನಮಕರಧ್ವಜಃ ನಿರ್ದ್ದಳಿತರಿಪುಮಂಡಳಿಕದರ್ಪ್ಪಃ | ಮಱುವಂಕ [-ವಕ್ಕ-] ಸರ್ಪ್ಪಃ | ಅಯ್ಯಣಸಿಂಗಃ | ಸಕಳಗುಣತುಂಗಃ | ರಿಪುಮಂಡಳಿಕಭೈರವಃ | ವಿದ್ವಿಷ್ಟಗಜಕಂಠೀರವಃ | ಇಡುವರಾದಿತ್ಯಃ | ಕಲಿಯುಗವಿಕ್ರಮಾದಿತ್ಯಃ | ರೂಪನಾರಾಯಣಃ | ನೀತಿವಿಜಿತಚಾರಾಯಣಃ | ಗಿರಿದುರ್ಗ್ಗಲಂಘನಃ | ವಿಹಿತವಿರೋಧಿವಂಘನಃ| ಶನಿವಾರಸಿದ್ಧಿಃ | ಧರ್ಮ್ಮೈಕಬುದ್ಧಿಃ | ಮಹಾಲಕ್ಷ್ಮೀದೇವೀಲಬ್ಧವರಪ್ರಸಾದಃ | ಸಹಜಕಸ್ತೂರಿಕಾಮೋದಃ | ಏವಮಾದಿನಾಮಾವಳೀವಿರಾಜಮಾನ-ಶ್ರೀಮದ್ವಿಜಯಾದಿತ್ಯದೇವಃ.

ವಿಜಯಾದಿತ್ಯನ ಕೊಲ್ಲಾಪುರದ ಶಿಲಾಲೇಖನದಲ್ಲಿ (ಎಪಿ. ಇಂಡಿಕ. ೩ ನೆಯ ಸಂಪುಟ, ಪುಟ ೨೦೯-೨೧೦) ಮಱುವಕ್ಕಸರ್ಪ ಎಂಬುದಕ್ಕೆ ಬದಲು ‘ ಮಱುವಂಕಸರ್ಪ ’ ಎಂದು ಇರುವುದು. ಅಲ್ಲಿಯೇ ೨೧೨ ನೆಯ ಪುಟದಲ್ಲಿ ಪ್ರಕಾಶಿತವಾಗಿರುವ ಬಾಮಣೀ ಶಿಲಾಲೇಖನದಲ್ಲಾದರೆ ‘ ಮಱುವಕ್ಕಸರ್ಪ ’ ಎಂದೇ ಇರುವುದು. ಮಱುವಂಕಸರ್ಪ ಎಂದರೆ ‘ as venomous as a snake in its place of shelter ಎಂದೋ, ಅಥವಾ as venomous as a snake to any one who intrudes on its place of shelter ’ ಎಂದೋ ಅರ್ಥವೆಂದು ಡಾ|| ಫ್ಲೀಟ್‌ರವರು ಹೇಳಿರುವರೆಂದು ಡಾ|| ಕೀಲ್‌ಹೋರ್ನ್‌ರವರು ಉಕ್ತಪುಸ್ತಕದ ೧೦೮ ನೆಯ ಪುಟದಲ್ಲಿ (ಟಿಪ್ಪಣ ೩) ಬರೆದಿರುವರು.

ಇದು ಸುಂದರವಾಗಿರುವಂತೆ ನಮಗೆ ಕಾಣಿಸುವುದಿಲ್ಲ. ಈ ಶಿಲಾಹಾರರಾಜರು ‘ ಜೀಮೂತವಾಹನಾನ್ವಯಪ್ರಸೂತ ’ ರೆಂದು ಹೇಳಿಕೊಳ್ಳುವರಷ್ಟೆ. ಈ ಜೀಮೂತವಾಹನನು ತನ್ನನ್ನು ಮರೆಹೊಕ್ಕ ಶಂಖಚೂಡನೆಂಬ ಸರ್ಪವನ್ನು ಕಾಪಾಡುವುದಕ್ಕಾಗಿ ತನ್ನ ಶರೀರವನ್ನೇ ಗರುಡನಿಗೆ ಅರ್ಪಿಸಿದನೆಂಬುದು ಪ್ರಸಿದ್ಧವಾದ ವಿಷಯುವೇ ಆಗಿರುವುದು. ಆದುದರಿಂದ ಪ್ರಕೃತಬಿರುದೂ ಕೂಡ ಈ ಅಂಶವನ್ನೇ ನಿರ್ದೇಶಿಸುವುದೆಂದು ನಮಗೆ ತೋರುವುದು. ‘ ಶಿಲಾಹಾರ ’ ಎಂಬ ಪದವೂ ಕೂಡ ಹೀಗೆಯೇ ಜೀಮೂತವಾಹನನು ಒಂದು ‘ ಶಿಲೆ ’ ಯಲ್ಲಿ ತನ್ನನ್ನು ಆಹಾರವಾಗಿ ಗರುಡನಿಗೆ ಅರ್ಪಿಸಿದನೆಂಬುದನ್ನೇ ಸೂಚಿಸುವುದೆಂದು ಡಾ|| ಫ್ಲೀಟ್‌ರವರು ತಮ್ಮ ಪುಸ್ತಕದ ೫೩೬ ನೆಯ ಪುಟದಲ್ಲಿ ಬರೆದಿರುವರು.

೧೧೦೫ಲರಲ್ಲಿ ಕಿಳಿಕಿಳದುರ್ಗದಲ್ಲಿ ರಾಜ್ಯವನ್ನಾಳುತ್ತಿದ್ದ ಮಹಾಮಂಡಲೇಶ್ವರನಾದ ಮಾರಸಿಂಹನ ಮಗನೆಂದೂ, ಅವನನಂತರ ರಾಜ್ಯವನ್ನಾಳಿದ ಮಹಾಮಂಡಲೇಶ್ವರನಾದ (ಎರಡನೆಯ) ಗೂವಲ, ಗಂಗದೇವ, (ಒಂದನೆಯ) ಭೋಜದೇವ, ಬಲ್ಲಾಳರ ತಮ್ಮನೆಂದೂ ಡಾಕ್ಟರ್ ಫ್ಲೀಟ್‌ರವರ ಪೂರ್ವನಿರ್ದಿಷ್ಟಗ್ರಂಥದ ೫೪೫ನೇ ಪುಟದಲ್ಲಿರುವ ವಂಶವೃಕ್ಷದಿಂದಲೂ ಎಪಿಗ್ರಾಫಿಯ ಇಂಡಿಕ ೮ನೆಯ ಸಂಪುಟದಲ್ಲಿ ಡಾಕ್ಟರ್ ಕೀಲ್‌ಹೋರ್ನ್‌ರವರು ಕೊಟ್ಟಿರುವ ಎರಡನೆಯ ಅನುಬಂಧದ ೧೨ನೆಯ ಪುಟದಲ್ಲಿರುವ ಈ ಶಿಲಾಹಾರರಾಜರ ರಾಜಾವಳಿಯಿಂದಲೂ ಕೂಡ ತಿಳಿದುಬರುವುದು.

ಈ ಗಂಡರಾದಿತ್ಯನಿಗೆ ವಿಜಯಾದಿತ್ಯನೆಂಬ ಮಗನಿದ್ದು ಆತನನಂತರ ರಾಜ್ಯವನ್ನಾಳಿದನೆಂದೂ, ಈ ವಿಜಯಾದಿತ್ಯನನಂತರ ಇವನ ಮಗನಾದ (ಎರಡನೆಯ) ಭೋಜದೇವನು ರಾಜ್ಯವನ್ನಾಳಿದನೆಂದೂ ಮೇಲೆಹೇಳಿದ ಡಾಕ್ಟರ್ ಫ್ಲೀಟ್‌ರವರ ಗ್ರಂಥದಲ್ಲಿ (ಪುಟ ೫೪೭, ೫೪೮, ೫೪೯) ಹೇಳಲ್ಪಟ್ಟಿರುವುದು. ಡಾ|| ಕೀಲ್‌ಹೋರ್ನ್‌ರವರಿಂದ ಕೊಡಲ್ಪಟ್ಟಿರುವ ಮೇಲೆ ನಿರ್ದಿಷ್ಟವಾದ ಕರಹಾಟದ ಶಿಲಾಹಾರರ ರಾಜಾವಳಿಯಲ್ಲಿಯೂ, 'ಟ್ರಾನ್ಸಾಕ್ಷನ್ಸ್ ಲಿಟರರಿ ಸೊಸೈಟಿ ಆಫ್ ಬಾಂಬೆ, ಸಂಪುಟ ೩' ಎಂಬ ಪುಸ್ತಕದಲ್ಲಿ (ಪುಟ ೩೯೩) ಪ್ರಕಾಶಿತವಾಗಿರುವ ಶಿಲಾಹಾರಮಹಾಮಂಡಲೇಶ್ವರನಾದ (ಎರಡನೆಯ) ಭೋಜದೇವನ ತಾಮ್ರಶಾಸನದಲ್ಲಿಯೂ ಕೂಡ ಹೀಗೆಯೇ ಗಂಡರಾದಿತ್ಯನನಂತರ ವಿಜಯಾದಿತ್ಯನೂ ವಿಜಯಾದಿತ್ಯನನಂತರ ಭೋಜದೇವನೂ ಸಿಂಹಾಸನವನ್ನೇರಿದರೆಂದು ಹೇಳಲ್ಪಟ್ಟಿರುವುದು. ಆದುದರಿಂದ ಈ ವಿಜಯಾದಿತ್ಯನನಂತರ ಲಕ್ಷ್ಮಣರಾಜನೆಂಬವನು ಕರಹಾಟದಲ್ಲಿ ರಾಜ್ಯವಾಳಲಿಲ್ಲವೆಂದು ದೃಢವಾಗಿ ಹೇಳಬಹುದು.

ಅಷ್ಟೇ ಅಲ್ಲ. ಈ ವಿಜಯಾದಿತ್ಯನಿಗೆ ಲಕ್ಷ್ಮಣನೆಂಬ ತಮ್ಮನೇ ಇರಲಿಲ್ಲವೆಂದು ಕೂಡ ನಾವು ಹೇಳಬಹುದು. ಕರಹಾಟಾಧಿಪನಾದ ಗಂಡರಾದಿತ್ಯನಿಗೆ ವಿಜಯಾದಿತ್ಯನೆಂಬ ಮಗನಿದ್ದನೆಂದು ಮೇಲೆ ಹೇಳಿದ ವಂಶವೃಕ್ಷ ರಾಜಾವಳಿಗಳಿಂದ ತಿಳಿದುಬರುವುದಷ್ಟೆ. ಲಕ್ಷ್ಮೀಧರ ಅಥವಾ ಲಕ್ಷ್ಮಣ, ವರ್ಧಮಾನ, ಶಾಂತ ಎಂಬ ಪುತ್ರರೂ ಕೂಡ ಇವನಿಗೆ ಇದ್ದರೆಂದು ಮೇಲೆ ಹೇಳಿದ ವಂಶವೃಕ್ಷ ರಾಜಾವಳಿಗಳಲ್ಲಾಗಲಿ ಅಥವಾ ಮೇಲೆ ಹೇಳಿದ ವಿಜಯಾದಿತ್ಯನ ಕಾಲದ ಶಾಸನಗಳಲ್ಲಾಗಲಿ ಇವನ ಮಗನಾದ (ಎರಡನೆಯ) ಭೋಜದೇವನ ಕಾಲದ ಶಾಸನಗಳಲ್ಲಾಗಲಿ ಎಲ್ಲಿಯೂ ಹೇಳಲ್ಪಟ್ಟಿಲ್ಲ.

ವಸ್ತುತಃ ಕರ್ಣಪಾರ್ಯನ ನೇಮಿನಾಥಪುರಾಣದಲ್ಲಿ ಕೂಡ ಗಂಡರಾದಿತ್ಯನಿಗೆ ಲಕ್ಷ್ಮಣ ಅಥವಾ ಲಕ್ಷ್ಮೀಧರ, ವರ್ಧಮಾನ, ಶಾಂತ ಎಂಬ ಪುತ್ರರಿದ್ದರೆಂದು ಹೇಳಲ್ಪಟ್ಟಿಲ್ಲ. ಕವಿಚರಿತಕಾರರೇನೋ ಹಾಗೆ ನೇಮಿನಾಥಪುರಾಣದಲ್ಲಿ ಹೇಳಲ್ಪಟ್ಟಿರುವುದೆಂದು ಬರೆದಿರುವರಾದಾಗ್ಯೂ ಈ ವಿಧವಾದ ಇವರ ಅಭಿಪ್ರಾಯವು ಭ್ರಮಮೂಲಕವಾದುದೆಂದೇ ನಮಗೆ ತೋರುವುದು. ನಾವು ನೋಡಿದ ನೇಮಿನಾಥಪುರಾಣದ ಒಂದು ಪುಸ್ತಕದಲ್ಲಿ*—

ಮನುಮಾರ್ಗಂ ಮಱುವಕ್ಕಸರ್ಪನವನೀವಿಖ್ಯಾತಜೀಮೂತವಾ
ಹನವಿದ್ಯಾಧರಚಕ್ರಿವಂಶತಿಳಕಂ ಶ್ರೀಗಂಡರಾದಿತ್ಯಭೂ ।
ಪನುದಾತ್ತಂ ಪುರುಷೋತ್ತಮಂ ಕಿಳಿಕಿಳಪ್ರಖ್ಯಾತದುರ್ಗಾಧಿಪಂ
ಜನಸಂರಕ್ಷಣದಕ್ಷನೀಕ್ಷಿತಿನುತಂ ಗಾಂಭೀರ್ಯರತ್ನಾಕರಂ ॥೨೨॥

ತದಪತ್ಯಂ ಕೃತಕೃತ್ಯನತ್ಯಧಿಬಳಂ ಸತ್ಯಾರ್ಣವಂ ನಿತ್ಯಸಂ
ಪದನತ್ಯೂರ್ಜಿತತೇಜನಾರ್ಜಿತಗುಣವ್ರಾತಂ ಬುಧಾಧಾರನು ।
ನ್ಮದವಿದ್ವಿಷ್ಟನೃಪಾಲಜಾಲವಿಪಿನಗ್ರೀಷ್ಮೋರುದಾವಾನಳಂ
ವಿದಿತಂ ವಿಶ್ವಕಲಾವಿರಿಂಚಿ ವಿಜಯಾದಿತ್ಯಾವನೀಪಾಲಕಂ ॥೨೩॥

ಪ್ರತಿಪಕ್ಷೋದ್ಧತರಾಜತೇಜಮುಡುಗಲ್ ಕಾಶಾಕುಳೀಳಾತಳಾ
ನ್ವಿತಸಂಪೂರ್ಣಸವರ್ಣಸೇವ್ಯಕರಮತ್ಯುಗ್ರಪ್ರತಾಪಂ ಧನಾ ।
ಹಿತಧರ್ಮೋದ್ಧುರಜನ್ಮಭೂಮಿಯೊಗೆದಂ ಗೋಮಂತನೈಕಾಗ್ರದಿಂ
ದ್ರಿತಭಾಸ್ವತ್ಕಮಳಾವಿಭೂಷಿ ವಿಜಯಾದಿತ್ಯಂ ಜಗದ್ದೀಪಕಂ ॥೨೪॥

ಆನೃಪನಗ್ರಮಹಿಷಿ—

ವಿತತಕಲಾಪ್ರವೀಣತೆಯನೆಯ್ದೆ ಸರಸ್ವತಿ ರೂಪಿನೇಳ್ಗೆಯಿಂ
ರತಿ ಸೊಬಗಿಂದೆ ಹೈಮವತಿ ದರ್ಶನಶುದ್ಧತೆಯಿಂದ ಸಂದ ರೇ ।
ವತಿ ಪತಿಭಕ್ತಿಯಿಂ ನೆಗೞ್ದರುಂಧತಿಯೆಂದು ಪೊಗಳ್ದು ಬಣ್ಣಿಕುಂ
ನುತವಿಜಯಾವನೀಶಸತಿಯಂ ಸಲೆ ಸೊನ್ನಲದೇವಿಯಂ ಜಗಂ ॥

ವರನಙ್ಗಾನರನಾಥರಾಜ್ಯಭರಧೌರೇಯಂ ಬುಧಜ್ಯಾಯನು

---

* ಮೈಸೂರು ಓರಿಯಂಟಲ್ ಲೈಬ್ರೆರಿಯಲ್ಲಿರುವ ಹಸ್ತಲಿಖಿತಪುಸ್ತಕ—ನಂಬರ್ ಕನ್ನಡ A ೫೨. ಪದ ಸಂಖ್ಯೆಗಳು ಈ ಪುಸ್ತಕದಲ್ಲಿರುವಂತೆ ಕೊಡಲ್ಪಟ್ಟಿರುವವು. ಈ ಪುಸ್ತಕದಲ್ಲಿನ ಪಾಠವು ಬಹು ಅಶುದ್ಧವು. ಸರಿಯಾಗ ಶುದ್ಧವಾದ ಪಾಠವಿರುವ ಪದ್ಯಗಳು ಇದರಲ್ಲಿ ವಿರಳವೆಂದೇ ಹೇಳಬಹುದು. ಆದುದರಿಂದ ನಾವು ಇಲ್ಲಿ ಉದ್ಧರಿಸಿರುವ ಪದ್ಯಗಳಲ್ಲಿ ನಮಗೆ ಕಂಡುಬಂದ ಅಶುದ್ಧಗಳ ಸ್ಥಾನದಲ್ಲಿ ಇಂತಹ ಶುದ್ಧಪಾಠವಿರಬಹುದೆಂದು ಎಲ್ಲೆಲ್ಲಿ ತೋರಿರುವುದೋ ಅಲ್ಲೆಲ್ಲಾ ಹಾಗೆ ತೋರಿದ ಶುದ್ಧಪಾಠಗಳನ್ನು ಕೊಟ್ಟು ಉಳಿದ ಕಡೆಗಳಲ್ಲಿ ಪುಸ್ತಕಸ್ಥವಾದ ಅಶುದ್ಧಪಾಠಗಳನ್ನೇ ಕೊಟ್ಟಿರುವೆವು.

ದ್ಧರತೇಜಂ ವಿಭುಗೋ (ದ್ಯೋ) ಪ (ಯ) ನಳಿಯಂ ವಿಶ್ವಂಭರಾವಿಶ್ರುತಂ |
ಕರಣಂ ಲಕ್ಷ್ಮಣನೀಪುರಾಣಮುನಿಳಾಪ್ರಖ್ಯಾತಮುಂ ಪೂತಮುಂ
ನಿರುತಂ ಪೇಳಿಸಿದಂ ಧರಾಹಿತಕರಂ ಸಮ್ಯಕ್ತ್ವರತ್ನಾಕರಂ ||೨೫||

ಜಿನಚರಣಕಮಲಹಂಸಂ
ಜನನೇತ್ರನಿಭಮೂರ್ತಿ ಗೋತ್ರಾಭರಣಂ |
ಕುನಯತಮೋರಿಪು ನೆನೆಯೆನೆ
ಲಕ್ಷ್ಮಂ ಭವ್ಯವನಜವನಮಾರ್ತಾಂಡಂ ||೨೬||

ಸುರಭೂಜಚ್ಛಾಯನಾನಂದಿತಬುಧಜನಕಂ ಸತ್ಯದಾಕ್ಷಿಣ್ಯಮೇರು
ಸ್ಥಿರವಾಣೀಕರ್ಣಸನ್ಮಂಡನನನುಸ್ತಪಾದಾರಚೂಡಾಮಣಿ ಪ್ರ |
ಸ್ಫುರತೇಜೋರೂಪನಾರಾಯಣನಯನನುಮಾಚಂದ್ರಿಕಾವ್ಯಾಪ್ತಲೋಕಂ
ಪರಮಾರ್ಥಂ ಮಂತ್ರಿಲಕ್ಷ್ಮಂ ಪರಮಜಿನಮತಕ್ಷೀರವಾರಾಶಿಚಂದ್ರಂ ||೨೭||

ಸಕುಲೀನಂ ವಿಬುಧಾನ್ವಿತಂ ಜಿನಪತಿಸ್ನಾನಾಂಬುಪೂತಾತ್ಮಮ
ಸ್ತಕನುದ್ಯತ್ಸಹಜಾತನಂದನಚಯಚ್ಛಾಯಾವೇಷ್ಟಿತಂ ರತ್ನಜಾ |
ಲಕಭಾಸ್ವತ್ಕಟಕಂ ಸುಧರ್ಮಧರನಾರ್ ದುನ್ನತಂ ತಾನೆನಲ್
ಸಕಲಕ್ಷ್ಮಾಧರರಾಜನೆಂದೆನಿಸಿದಂ ಭೂವಧ್ಯದೊಳ್ಲಕ್ಷ್ಮಣಂ ||೨೮||

ಕಳದುದ್ಯದ್ಗುಣಮಾಲ್ಯ....ಗಳನೀಭೂಭಾಗಮುಂ ಕೂಡೆ....
ಕಳಪೊಯ್ದಾಡಮೆ ರಕ್ಷಿಸಿರ್ದು ಸಿರಿಯಂ ಪೆತ್ತಿರ್ದು ಗಾಂಭೀರ್ಯವೆ |
ಗ್ಗಳಿಸಿರ್ದುತ್ತಮಶಂಖಚಕ್ರಚಯಮಂ ತಾಳ್ದಿರ್ದು ಲಕ್ಷ್ಮೀಧರಂ
ಜಲಜಾಕ್ಷಂಗೆ ಮಹಾರ್ಣವಕ್ಕೆ ಸಮನಾಗಿರ್ದಂ ಧರಾಚಕ್ರದೊಳ್ ||೨೯||

ಆವಿಭುವಿನನುಜ ನಿಖಿಳಾ
ಶಾವರ್ತಿತಕೀರ್ತಿ ಮೂರ್ತಿಮಕರಧ್ವಜನು |
ರ್ವೀವಿನುತಗುಣನಿಧಾನಂ
ಕೇವಲನೆ ವರ್ಧಮಾನನನುಪಮಮಾನಂ ||೩೦||

ಅವರಿಂ ಕಿರಿಯಂ ಪಿರಿಯಂ
ಭುವನಜನಕ್ಕೆಯ್ದೆ ಮಿಕ್ಕ ಗುಣದಿಂ ಜಸದಿಂ |
ಯುವತಿಜನಹೃದಯಚಿತ್ತೋ
ದ್ಭವನೆನಿಕುಂ ಶಾಂತನಖಿಳವಿದ್ಯಾಕಾಂತಂ ||೩೧||

ವರಗೋವರ್ಧನಭೂಪತಿಪ್ರಿಯಸುತಂ ಸರ್ವಾಂಗಸದ್ಭಾರತೀ
ಶ್ವರನುರ್ವೀಜನಸೇವ್ಯಸಾರ....ಸನ್ಮಿತ್ರಂ ವಧೂಪೇಟಿಕೋ |
ದ್ಧುರದರ್ಪಾಪಹತೀವ್ರಮೋಹನಕರಂ ಸೌಂದರ್ಯರತ್ನಾಕರಂ
ಸ್ಮರನೆಂತೆಂಬುದು ಧಾತ್ರಿ ಕೀರ್ತಿವೃತವಿಶ್ವಾಶಾನನಂ ಶಾಂತನಂ ||೩೨||

ಅಂತೆನಿಸಿದೀಮಹಾನುಭಾವರ ಜನಕಂ ||೩೪||

ವಿದಿತಂ ದಶದಿಂಪೀತಪ್ರತತಿಯಂ ಸಾಮ್ಯೈಕದಿಂಪೋಷಧಾ
ಸ್ಪದಸಚ್ಚಿತ್ತಸುವೃತ್ತಿಯಿಂ ವಿಗತರಾತ್ರ್ಯಾಹಾರದಿಂ........ |
....ದಿನಾರಂಭಪರಿಗ್ರಹಪ್ರಹತೆಯಿಂ ಸಂದೊಂಭತಲ್ ತಾಳಿ ಸಂ
ಮುದದಿಂ ಶ್ರಾವಕಧರ್ಮಮಂ ಗುಣಮಹಾಮಸ್ನಾಪಣಂ ಗೋಪಣಂ ||೩೮||

ಪ್ರಥಿತಯಶಂ ಸಮಸ್ತವಿಬುಧಾಗ್ರಣಿ ಲಕ್ಷ್ಮಣನೀಕಥಾಪೃಥು
ಗ್ರಥನ ಸಮುಥೆಕಥೆಯಂ ನುತಮೋಕ್ಷಸುಖೈಕಹೇತು ಮ |
ನ್ಮಥಮಥನಂ ಕಥಾಧಿಪತಿ ನೇಮಿಜಿನೇಂದ್ರನೆನಲ್ಕೆ ಸಂದ ಸ
ತ್ಕಥನಮಿದಂ ಸವಿಸ್ತರದೆ ಪೇಳೆ ಮನೋರಥಸಿದ್ಧಿಯಾಗದೇ ||೩೭||

ಎಂಬ ಪದ್ಯಗಳು ಗ್ರಂಥಾವತಾರದಲ್ಲಿಯೂ,

ಜಿನಚಂದ್ರಂ ನೇಮಿಚಂದ್ರಂ ತನಗೆ ನಿರುಪಮಾರಾಧ್ಯನುರ್ವೀಪವಿತ್ರಂ
ಜನಕಂ ಶ್ರೀಭೂಷಣಾರ್ಯಂ ನುತಗುಣನಿಧಿ ಕಂಚವ್ವೆ ತಾಯ್ಸೋದರರ್ |
ಜ್ಜನಸೇವ್ಯರ್ವರ್ಧಮಾನಪ್ರಭುವುಮಸದೃಶಂ ಶಾಂತಿನಾಥಾಖ್ಯನುಂ ತಾ
ಮೆನೆ ಸಂದಂ ಮಂತ್ರಿಲಕ್ಷ್ಮಂ ಪರಮಜಿನಮತಕ್ಷೀರವಾರಾಶಿಚಂದ್ರಂ ||೨೩೫||

ಸ್ಫುರಿತಸುವರ್ಣಪತ್ರಚಯದಿಂ ಸುಮನಃಪ್ರಚುರಪ್ರಯುಕ್ತಿಯಿಂ
ಧರೆಗಭಿವಾಂಛಿತೋತ್ತಮಸ್ಥಳಂಗಳನಾಗಳುಮೀವ ಕಯ್ಗಳಿಂ |
ಸ್ಥಿರತೆಯಿನನ್ವಿತೋನ್ನತಿಯಿನಾಸವಿಭಾರದಿನೆಯ್ದೆ ಭಾವಿಸಲ್
ಸುರತರು ತಾನೆನಲ್ಕೆಸೆದಪಂ ಕರಣಾಗ್ರಣಿ ಲಕ್ಷ್ಮನುರ್ವಿಯೊಳ್ ||೨೩೬||

.................................................ಸ
ಜ್ಜನಮತಿ ಭಕ್ತಿಯೊಳ್ ನೆಗಳ್ದ ಶಾಸನದೇವತೆ ಶೀಲರತ್ನಮಂ
ಡನಯುತೆ ಶಿಷ್ಟಕಲ್ಪಲತೆ ತಾನೆನಲುನ್ನತಿವೆತ್ತ ಗೋ....
ರ್ಧನಸುತೆ ಮಂತ್ರಿಲಕ್ಷ್ಮನಮರಾಂಗನೆ....ಧನ್ಯೆಯಲ್ಲಳೆ ||೨೩೭||

ಶರದುದ್ಯಚ್ಚಂದ್ರಚಂದ್ರಾಭರಣಸುರಸರಿತ್ತಾರತಾರಾಜಳಪ್ರ
ಸ್ಫುರಕೀರ್ತಿ ಶ್ರೀವಿಳಾಸಂ ಸಕಲಗುಣಗಣಾವಾಸನಾಗಿರ್ದ ಲಕ್ಷ್ಮೀ |
ಧರನಿಂ ಸಂಸಿದ್ಧಮಾದೀಕೃತಿ ವಿಬುಧಜನಾಹ್ಲಾದಸಂಪಾದಿ ವಿಶ್ವಂ
ಭರೆಯೊಳ್ ನಿಲ್ಕೆಯ್ದೆ ನಿಲ್ವನ್ನೆಗಮವನಿಕುಳಾದ್ರೀಂದ್ರಚಂದ್ರಾರ್ಕತಾರಂ ||೨೩೮||

ಎಂಬ ಪದ್ಯಗಳು ಗ್ರಂಥಾಂತ್ಯದಲ್ಲಿಯೂ ದೊರೆಯುವುವು. ಈ ಪದ್ಯಗಳಲ್ಲಿ ನೇಮಿನಾಥಪುರಾಣವನ್ನು ಬರೆಯಿಸಿದ ಲಕ್ಷ್ಮ, ಲಕ್ಷ್ಮೀಧರ ಅಥವಾ ಲಕ್ಷ್ಮಣನು ಗಂಡರಾದಿತ್ಯನ ಮಗನಾದ ವಿಜಯಾದಿತ್ಯನಿಗೆ 'ರಾಜ್ಯಭರಧೌರೇಯ'ನಾದ ಮಂತ್ರಿಯೂ 'ಕರಣ'ನೂ (ಎಂದರೆ ಶ್ರೀಕರಣಾಧಿಪನೂ) ಆಗಿದ್ದನೆಂದು ಹೇಳಿರುವುದೇ ಹೊರತು ಅವನ ತಮ್ಮನಾಗಿದ್ದನೆಂದು ಹೇಳಿಲ್ಲ. ಹೀಗೆ ಈ ಲಕ್ಷ್ಮಣನು ಕರಣನೂ

ಮಂತ್ರಿಯೂ ಆಗಿದ್ದನೆಂಬ ಅಂಶವು ಮೇಲಿನ ಪದ್ಯಗಳಲ್ಲಿರುವ 'ನರನಾಥರಾಜ್ಯ ಭರಧೌರೇಯಂ' (ಪದ್ಯ ೨೫) 'ವಿಶ್ವಂಭರಾವಿಶ್ರುತಂ ಕರಣಂ' (ಪ. ೨೫) 'ಕರಣಾಗ್ರಣಿ' (ಪ. ೨೩೬) ಎಂಬ ವಿಶೇಷಣಗಳಿಂದಲೂ, ೨೭, ೨೩೫ ಮತ್ತು ೨೩೭ ನೆಯ ಪದ್ಯಗಳಲ್ಲಿ ಉಕ್ತವಾಗಿರುವ 'ಮಂತ್ರಿಲಕ್ಷ್ಮ' ಎಂಬ ನಾಮಧೇಯದಿಂದಲೂ ಕೂಡ ನಿರ್ವಿವಾದವಾಗಿರುವಂತೆ ವ್ಯಕ್ತಮಾಡಲ್ಪಟ್ಟಿರುವುದು. ಹೀಗೆಯೇ, ಗಂಡರಾದಿತ್ಯನ ಮಗನಾದ ವಿಜಯಾದಿತ್ಯನು ಇವನ ಸಹೋದರನಲ್ಲ ವೆಂಬ ಅಂಶವೂ ಕೂಡ ಗ್ರಂಥಾವತಾರದಲ್ಲಿರುವ 'ಆ ವಿಭುವಿನನುಜಂ...' ಇತ್ಯಾದಿ ಎರಡು ಪದ್ಯಗಳಲ್ಲಿಯೂ ಗ್ರಂಥಾಂತ್ಯದಲ್ಲಿರುವ 'ಜಿನಚಂದ್ರಂ ನೇಮಿ ಚಂದ್ರಂ...' ಎಂಬ (೨೩೫ ನೆಯ) ಪದ್ಯದಲ್ಲಿಯೂ ವರ್ಧಮಾನ ಶಾಂತಿ ನಾಥರಿಬ್ಬರೇ ಇವನ ಸಹೋದರರೆಂದು ಕೀರ್ತಿಸಲ್ಪಟ್ಟಿರುವುದರಿಂದಲೂ, ವಿಜಯಾ ದಿತ್ಯನ ಹೆಸರು ಈ ಸಂದರ್ಭದಲ್ಲಿ ಅನುಕ್ತವಾಗಿರುವುದರಿಂದಲೂ ವ್ಯಕ್ತವಾಗುವುದು.

ಈ ಲಕ್ಷ್ಮಣ ಅಥವಾ ಲಕ್ಷ್ಮೀಧರ, ವರ್ಧಮಾನ, ಶಾಂತಿನಾಥರ ತಂದೆಗೆ ಗೋವರ್ಧನ, ಗೋಪಣ, ಮತ್ತು ಶ್ರೀಭೂಷಣ ಎಂಬ ಹೆಸರುಗಳಿದ್ದವು. ಈ ಲಕ್ಷ್ಮಣ ಮಂತ್ರಿಯ ಹೆಂಡತಿ ಗೋ...ನ ಮಗಳು; ಅವಳ ಹೆಸರು ನಾವು ಮೇಲೆ ಕೊಟ್ಟಿರುವ ಗ್ರಂಥಾಂತ್ಯದ (೨೩೭ ನೆಯ) ಪದ್ಯದಲ್ಲಿ ಲುಪ್ತವಾಗಿರು ವುದು; ಅದು ಕವಿಚರಿತಕಾರರು ಹೇಳುವಂತೆ 'ಚಂದಲದೇವಿ' ಎಂದು ಇದ್ದರೂ ಇರಬಹುದು. ಈ ಲಕ್ಷ್ಮೀಧರ (ಲಕ್ಷ್ಮಣ) ಚಂದಲದೇವಿಯರು ನೇಮಿಚಂದ್ರ ನಿಂದ ಲೀಲಾವತಿಯಲ್ಲಿ ಸ್ತುತರಾಗಿರುವ ಲಕ್ಷ್ಮೀಧರ (ಲಕ್ಷ್ಮಣ) ಚಂದಲದೇವಿ ಯರಲ್ಲವೆಂಬುದನ್ನು ನಾವು ಮುಂದೆ ನೇಮಿಚಂದ್ರನ ಜೀವನಕಾಲವಿಚಾರದಲ್ಲಿ ವ್ಯಕ್ತಪಡಿಸುವೆವು.

'ಪರಮಜಿನಮತಕ್ಷೀರವಾರಾಶಿಚಂದ್ರ' 'ಭವ್ಯವನಜವನಮಾರ್ತಾಂಡ' 'ಸಹಜಕವಿತಾರಸೋದಯ' ಎಂಬ ಬಿರುದುಗಳು ಕರ್ಣಪಾರ್ಯನಿಗೆ ಇದ್ದಂತೆ ತೋರುತ್ತದೆಯೆಂಬ ಕವಿಚರಿತಕಾರರ ಮೇಲೆ ಹೇಳಿರುವ ಅಭಿಪ್ರಾಯವು ಕೂಡ ತಪ್ಪೆಂದು ಮೇಲೆ ಉದ್ಧೃತವಾಗಿರುವ ೨೭, ಮತ್ತು ೨೬ ನೆಯ ಪದ್ಯಗಳಿಂದ ಸ್ಪಷ್ಟವಾಗುವುದು. ಈ ಪದ್ಯಗಳಲ್ಲಿ 'ಪರಮಜಿನಮತಕ್ಷೀರವಾರಾಶಿಚಂದ್ರಂ' ಎಂಬ ಬಿರುದೂ 'ಭವ್ಯವನಜವನಮಾರ್ತಾಂಡಂ' ಎಂಬ ಬಿರುದೂ ಕವಿಗೆ ಆಶ್ರಯದಾತೃವಾದ ಲಕ್ಷ್ಮಣಮಂತ್ರಿಯ ವಿಷಯದಲ್ಲಿ ಉಪಯೋಗಿಸಲ್ಪಟ್ಟಿರು ವುವು. ಆದುದರಿಂದ ಇವೆರಡೂ ಆ ಲಕ್ಷ್ಮಣ ಮಂತ್ರಿಯ ಬಿರುದುಗಳೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಇದಲ್ಲದೆ ಕವಿಯು ತನ್ನ ನೇಮಿನಾಥಪುರಾಣದಲ್ಲಿ ಒಂದನೆಯ ಆಶ್ವಾಸ ವಿನಾ † ಉಳಿದ ಹದಿಮೂರು ಆಶ್ವಾಸಗಳ ಆರಂಭದಲ್ಲಿಯೂ 'ಭವ್ಯವನಜವನ ಮಾರ್ತಂಡಂ' ಎಂಬ ಪದವೇ ಅಂತ್ಯದಲ್ಲಿರುವಂಥ ಕಂದಪದ್ಯಗಳನ್ನೂ, ಕೊನೆಯದಾದ ಹದಿನಾಲ್ಕನೆಯ ಆಶ್ವಾಸವನ್ನು ವಿನಾ † ಉಳಿದ ಹದಿಮೂರು ಆಶ್ವಾಸಗಳ ಕೊನೆಯಲ್ಲಿ 'ಪರಮಜಿನಮತಕ್ಷೀರವಾರಾಶಿಚಂದ್ರಂ' ಎಂಬ ಪದವೇ ಅಂತ್ಯದಲ್ಲಿರುವಂಥ ಸ್ರಗ್ಧರಾವೃತ್ತಪದ್ಯಗಳನ್ನೂ ಗ್ರಥಿಸಿ ಬರೆದಿರುವನು. ಈ ಪದ್ಯಗಳನ್ನು ನೋಡಿದರೆ ಕವಿಯು ಆ ಆ ಕಥಾಪುರುಷರಿಗಲ್ಲದೆ ದೇಹಲೀದೀಪಪ್ರಭೆಯಂತೆ ತನ್ನ ಪೋಷಕನಾದ ಲಕ್ಷ್ಮಣಮಂತ್ರಿಗೂ ಕೂಡ ಅನ್ವಯಿಸುವಂಥ ವಿಶೇಷಣಗಳನ್ನೇ ಉಪಯೋಗಿಸಿ ಪದ್ಯಗಳನ್ನು‡ ಗ್ರಥಿಸಿರುವನೆಂದೂ ತನ್ನ ಪೋಷಕನಾದ ಈ ಲಕ್ಷ್ಮಣರಾಜನ ಜ್ಞಾಪಕಾರ್ಥವಾಗಿಯೂ ಸ್ತುತ್ಯರ್ಥವಾಗಿಯೂ ಇವನ ಬಿರುದುಗಳಾದ 'ಭವ್ಯವನಜವನಮಾರ್ತಂಡಂ' 'ಪರಮಜಿನಮತಕ್ಷೀರವಾರಾಶಿಚಂದ್ರಂ' ಎಂಬ ಅಂಕಿತ ಪದಗಳನ್ನು ಆಶ್ವಾಸಗಳ ಆದ್ಯಂತ ಪದ್ಯಗಳಲ್ಲಿ ಸೇರಿಸಿರುವನೆಂದೂ ಕಾಣುವುದು.*

---

† ಒಂದನೆಯ ಆಶ್ವಾಸದ ಪ್ರಾರಂಭದಲ್ಲಿ ಜಿನನಮಸ್ಕಾರ ರೂಪವಾದ ಮಂಗಳಪದ್ಯವನ್ನೂ ಹದಿನಾಲ್ಕನೆಯ ಆಶ್ವಾಸದ ಅಂತ್ಯದಲ್ಲಿ 'ಈ ಕೃತಿ....ನಿಲ್ಕೆಯ್ದಿ ನಿಲ್ವನ್ನೆಗಮವನಿಕುಳಾದ್ರೀಂದ್ರಚಂದ್ರಾರ್ಕತಾರಂ' ಎಂಬ ಆಶೀರೂಪವಾದ ಮಂಗಳಪದ್ಯವನ್ನೂ ಹೇಳಬೇಕಾದುದರಿಂದ 'ಭವ್ಯವನಜವನಮಾರ್ತಾಂಡಂ', 'ಪರಮಜಿನಮತಕ್ಷೀರವಾರಾಶಿಚಂದ್ರಂ' ಎಂಬ ಪದಗಳಿಂದ ಅಂಕಿತವಾದ ಪದ್ಯಗಳನ್ನು ಅಲ್ಲಿ ಗ್ರಥಿಸುವುದಕ್ಕೆ ಕವಿಗೆ ಅವಕಾಶ ದೊರೆಯಲಿಲ್ಲ.

‡ ಇವುಗಳಲ್ಲಿ ಒಂದಾದ ಹದಿಮೂರನೆಯ ಆಶ್ವಾಸದ ಅಂತ್ಯದಲ್ಲಿರುವ—

ಕರಹಾಟಾ....ಕರ್ಣಾಟಕಮಗಧಕಳಿಂಗಾಂಗ ಕಾಶ್ಮೀರಸದ್ಘೂ
ರ್ಜರಕೇಯೂರಾಂಧ್ರಲಾಟದ್ರಮಿಳಕುರುಮಹಾರಾಷ್ಟ್ರಬಾಹ್ಲೀಕದೇಶೋ |
ತ್ಕರದೊಳ್ ಧರ್ಮಾಮೃತಾಸಾರಮನೆ ಕರೆಯುತಂ ದ್ವಾರವತ್ಯಾಖ್ಯಭಾಸ್ವತ್
ಪುರಮಂ ಬಂದೆಯ್ದಿ ನಿಂದಂ ಪರಮಜಿನಮತಕ್ಷೀರವಾರಾಶಿಚಂದ್ರಂ ||

ಎಂಬ ಪದ್ಯದಲ್ಲಿ ಪರಿಗಣಿತವಾದ ದೇಶಗಳಲ್ಲಿ ಕರಹಾಟ ದೇಶವನ್ನು ಮೊದಲು ಕೀರ್ತಿಸಿರುವುದರಿಂದ ಕವಿಯು ತಾನು ಆ ದೇಶದವನೆಂದೂ, ದೇಹಲೀದೀಪನ್ಯಾಯಾನುಸಾರವಾಗಿ ಇಲ್ಲಿ ಸ್ತುತನಾಗಿರುವ ತನ್ನ ಪೋಷಕನಾದ ಲಕ್ಷ್ಮಣಮಂತ್ರಿಯು ಕರಹಾಟದೇಶದಲ್ಲಿ ಅಧಿಕಾರಮಾಡುತ್ತಿದ್ದನೆಂದೂ ಸೂಚಿಸಿರುವಂತೆ ಕಾಣುವುದು.

* ಹೀಗೆಯೇ ರನ್ನನೂ ಗದಾಯುದ್ಧದಲ್ಲಿ ತನ್ನ ಪೋಷಕನಾದ ಚಾಳುಕ್ಯಚಕ್ರವರ್ತಿ ಸತ್ಯಾಶ್ರಯನ ಬಿರುದಾದ 'ಸಾಹಸಭೀಮಂ' ಎಂಬ ಪದವನ್ನು ಒಂದನೇ ಆಶ್ವಾಸವಿನಾ ಇತರ ಎಲ್ಲಾ ಆಶ್ವಾಸಗಳ ಆದಿಪದ್ಯಗಳ ಕೊನೆಯಲ್ಲಿಯೂ, ಈ ಸತ್ಯಾಶ್ರಯನ ಮತ್ತೊಂದು ಬಿರುದಾದ 'ಚಾಳುಕ್ಯಕಂಠೀರವಂ' ಎಂಬ ಪದವನ್ನು ಅಂತ್ಯಾಶ್ವಾಸ ವಿನಾ ಇತರ ಎಲ್ಲಾ ಆಶ್ವಾಸಗಳ ಅಂತ್ಯಪದ್ಯಗಳ ಕೊನೆಯಲ್ಲಿಯೂ ಉಪಯೋಗಿಸಿ ಪದ್ಯಗಳನ್ನು ಗ್ರಥಿಸಿರುವನು.

'ಸಹಜಕವಿತಾರಸೋದಯಂ' ಎಂಬುದಾದರೆ (ಕವಿಚರಿತಕಾರರು ಹೇಳುವಂತೆ) ಈ ಕವಿಯ ಬಿರುದೇ ಆಗಿತ್ತೆಂದು ಆಶ್ವಾಸಗಳ ಕೊನೆಯಲ್ಲಿರುವ "ಇದು ನಿಖಿಳವಿಬುಧಜನವಿನುತಸಾಶ್ಚರ್ಯಚಾರಿತ್ರಚಕ್ರವರ್ತಿ ಕಲ್ಯಾಣಕೀರ್ತಿಮುನೀಂದ್ರಚಂದ್ರವಾಕ್ಚಂದ್ರಿಕಾಪ್ರಸಾದಪ್ರಬೋಧಿತವಾಕ್ಕುಮುದಸಮುದಯಂ ಸಹಜಕವಿತಾರಸೋದಯಂ ಶ್ರೀಕರ್ಣಪಾರ್ಯವಿರಚಿತಮಪ್ಪ ನೇಮಿನಾಥಪುರಾಣದೊಳ್" ಎಂಬ ಗದ್ಯದಿಂದ ಸ್ಪಷ್ಟವಾಗಿರುವುದು.

ಅಂತೂ ಹಿಂದೆ ಹೇಳಿದುದರಿಂದ, 'ಗಂಡರಾದಿತ್ಯನ ಮಗನೂ ವಿಜಯಾದಿತ್ಯನ ತಮ್ಮನೂ ಆದ ಲಕ್ಷ್ಮಣರಾಜನಿಂದ ಪೋಷಿತನಾಗಿದ್ದ ಕರ್ಣಪಾರ್ಯನು ಗಂಡರಾದಿತ್ಯನೋ ಅಥವಾ ವಿಜಯಾದಿತ್ಯನೋ ರಾಜ್ಯವನ್ನಾಳುತ್ತಿದ್ದಾಗ ತನ್ನ ನೇಮಿನಾಥಪುರಾಣವನ್ನು ಬರೆದನು. ಈ ಲಕ್ಷ್ಮಣರಾಜನೇ ರಾಜ್ಯವನ್ನಾಳುತ್ತಿದ್ದಾಗ ನೇಮಿಚಂದ್ರನು ತನ್ನ ಲೀಲಾವತಿಯನ್ನು ಬರೆದನು' ಎಂಬ ಕವಿಚರಿತಕಾರರ ಅಭಿಪ್ರಾಯವು ತಪ್ಪೆಂಬುದು ಸ್ಪಷ್ಟವಾಯಿತಷ್ಟೆ.

ವಸ್ತುತಃ ಈ ನೇಮಿನಾಥಪುರಾಣವು ವಿಜಯಾದಿತ್ಯನು ರಾಜ್ಯವನ್ನಾಳುತ್ತಿದ್ದಾಗ ಬರೆಯಲ್ಪಟ್ಟಿತೆಂದು ಮೇಲೆ ಉದ್ಧೃತವಾಗಿರುವ ಪದ್ಯಗಳಿಂದ ತಿಳಿದುಬರುವುದು. ಇವುಗಳಲ್ಲಿ ಒಂದಾದ 'ಮನುಮಾರ್ಗಂ...' ಎಂಬ ೨೨ನೆಯ ಪದ್ಯದಲ್ಲಿ ಗಂಡರಾದಿತ್ಯನೆಂಬ ದೊರೆಯು ಕಿಳಿಕಿಳದುರ್ಗಕ್ಕೆ ಅಧಿಪತಿಯಾಗಿದ್ದನೆಂದು ಹೇಳಿ ತದನಂತರ ಅವನ ಮಗನಾದ ವಿಜಯಾದಿತ್ಯಾವನೀಪಾಲಕನನ್ನು ಎರಡು ಪದ್ಯಗಳಲ್ಲಿಯೂ ಈ ವಿಜಯಾದಿತ್ಯನ ಅಗ್ರಮಹಿಷಿಯಾದ ಸೊನ್ನಲದೇವಿಯನ್ನು ಒಂದು ಪದ್ಯದಲ್ಲಿಯೂ ಸ್ತುತಿಸಿ ತದನಂತರ 'ವರನಪ್ಪನರನಾಥರಾಜ್ಯಭರಧೌರೇಯಂ...' ಎಂದು ಈ ವಿಜಯಾದಿತ್ಯರಾಜನ ರಾಜ್ಯಧುರವನ್ನು ಮಂತ್ರಿ ಲಕ್ಷ್ಮನು ವಹಿಸಿದ್ದನೆಂದು ಹೇಳಿರುವುದರಿಂದ, ಕವಿಯು ನೇಮಿನಾಥಪುರಾಣವನ್ನು ಬರೆದಾಗ ವಿಜಯಾದಿತ್ಯನು ರಾಜ್ಯವನ್ನಾಳುತ್ತಿದ್ದನೆಂಬ ಅಂಶವು ಸ್ಪಷ್ಟವಾಗಿ ಉಲ್ಲಿಖಿತವಾಗಿರುವುದು.

ಈ ವಿಜಯಾದಿತ್ಯನು ತನ್ನ ತಂದೆಯಾದ ಗಂಡರಾದಿತ್ಯನ ಅನಂತರ ಸಿಂಹಾಸನಕ್ಕೆ ಬಂದನೆಂದೂ, ಈ ವಿಜಯಾದಿತ್ಯನ ಅನಂತರ ಇವನ ಮಗನಾದ ಎರಡನೆಯ ಭೋಜದೇವನು ರಾಜ್ಯಭಾರಮಾಡಿದನೆಂದೂ ನಾವು ಮೇಲೆಯೇ ಹೇಳಿದ್ದೇವೆಯಷ್ಟೆ. ಇವರಲ್ಲಿ ಗಂಡರಾದಿತ್ಯನು ಕ್ರಿ.ಶ. ೧೧೧೦ ರಲ್ಲಿಯೂ, ೧೧೩೫ ರಲ್ಲಿಯೂ ಆಳುತ್ತಿದ್ದನೆಂದು ಶಾಸನಗಳಿಂದ ತಿಳಿದುಬರುವುದೆಂದೂ, ವಿಜಯಾದಿತ್ಯನು ಕ್ರಿ.ಶ.

೧೧೪೩ ರಲ್ಲಿಯೂ ೧೧೫೩ ರಲ್ಲಿಯೂ ಆಳುತ್ತಿದ್ದನೆಂದು ಹೇಳುವ ಶಾಸನಗಳು ದೊರೆತಿರುವುವೆಂದೂ, ಭೋಜದೇವನು ಕ್ರಿ.ಶ. ೧೧೯೦ ರಲ್ಲಿಯೂ, ೧೨೦೫-೧೨೦೬ ರಲ್ಲಿಯೂ ಆಳುತ್ತಿದ್ದನೆಂದು ತಿಳಿದುಬರುವುದೆಂದೂ ಡಾ|| ಫ್ಲೀಟ್‌ರವರು ತಮ್ಮ ಪೂರ್ವನಿರ್ದಿಷ್ಟಗ್ರಂಥದಲ್ಲಿ (ಪುಟ ೫೪೭-೫೪೯) ಬರೆದಿರುವರು. ಇದಲ್ಲದೆ, ಮ|| ಆರ್. ನರಸಿಂಹಾಚಾರ್ಯರು ಮೈಸೂರು ಶಾಸನದ ಇಲಾಖೆಯ ೧೯೧೬ನೇ ವರ್ಷದ ರಿಪೋರ್ಟಿನಲ್ಲಿ (ಪುಟ ೪೮-೫೦; § ೭೮-೭೯) ಬೆಳ್ಗಾಮ ಜಿಲ್ಲಾ ಚಿಕ್ಕೋಡಿ ತಾಲ್ಲೋಕು ಎಕ್ಸಂಬಿ ಗ್ರಾಮದಲ್ಲಿರುವ ಈ ವಿಜಯಾದಿತ್ಯನ ಕಾಲ ದಲ್ಲಿ ಹುಟ್ಟಿದ ಒಂದು ಶಾಸನದಲ್ಲಿ ಹೇಳಿರುವ ವಿಷಯಗಳನ್ನು ಸಂಕ್ಷೇಪದಿಂದ ನಿರೂಪಿಸಿ, ಈ ಶಾಸನವು ಶಕವರ್ಷ ೧೦೮೭ ನೆಯ ತಾರಣಸಂವತ್ಸರದ ಫಾಲ್ಗುಣ ಶುದ್ಧ ತ್ರಯೋದಶಿ ಬೃಹಸ್ಪತಿವಾರದಂದು ಹುಟ್ಟಿದ್ದೆಂದು ಹೇಳಿರುವರು. ಇದರಿಂದ ಆ ಶಾಸನವು ಹುಟ್ಟಿದ ಕಾಲದಲ್ಲಿ ಎಂದರೆ, ಕ್ರಿ. ಶ. ೧೧೬೫ ನೆಯ ಫೆಬ್ರುವರಿ ೨೫ ನೇ ಬೃಹಸ್ಪತಿವಾರದಲ್ಲಿ ವಿಜಯಾದಿತ್ಯನು ರಾಜ್ಯವನ್ನಾಳುತ್ತಿದ್ದನೆಂದು ವ್ಯಕ್ತ ವಾಯಿತು.

ಕ್ರಿ.ಶ. ೧೧೧೦ ರಿಂದ ೧೨೦೫ ರ ವರೆಗೆ ಗಂಡರಾದಿತ್ಯ, ವಿಜಯಾದಿತ್ಯ, ಭೋಜದೇವರೆಂಬ ಮೂರು ದೊರೆಗಳೇ ರಾಜ್ಯವಾಳಿದರೆಂದು ನಮಗೆ ತಿಳಿದಿರುವದ ರಿಂದ, ಗಂಡರಾದಿತ್ಯನು ಕ್ರಿ.ಶ. ೧೧೧೦ ರಿಂದ ೧೧೪೩ ರ ವರೆಗೂ ಅವನ ಮಗ ವಿಜಯಾದಿತ್ಯನು ೧೧೪೩ ರಿಂದ ೧೧೭೪ ರ ವರೆಗೂ, ಈ ವಿಜಯಾದಿತ್ಯನ ಮಗ ಭೋಜದೇವನು ೧೧೭೪ ರಿಂದ ೧೨೦೫ ರ ವರೆಗೂ ರಾಜ್ಯವನ್ನಾಳಿದರೆಂದು ನಾವು ಊಹಿಸಬಹುದು.

ವಿಜಯಾದಿತ್ಯನು ಕ್ರಿ.ಶ. ೧೧೪೩ ರಿಂದ ೧೧೬೫ ರ ವರೆಗೆ ರಾಜ್ಯವಾಳು ತ್ತಿದ್ದನೆಂಬ ಅಂಶವಂತೂ ನಮಗೆ ಶಾಸನಗಳಿಂದಲೇ ತಿಳಿದುಬರುವುದು. ಆದುದ ರಿಂದ ಕರ್ಣಪಾರ್ಯನು ಕ್ರಿ.ಶ. ೧೧೪೩ ನೇ ವರ್ಷದನಂತರ ೧೧೬೫ ನೆಯ ಅಥವಾ ೧೧೭೪ ನೆಯ ವರ್ಷದ ಒಳಗೆ ಯಾವುದೋ ಒಂದು ವರ್ಷದಲ್ಲಿ ತನ್ನ ನೇಮಿನಾಥ ಪುರಾಣವನ್ನು ಬರೆದನೆಂದು ಸ್ಪಷ್ಟವಾಗುವುದು. ಸುಮಾರು ೧೧೭೩-೧೧೭೪ ರಲ್ಲಿ ಈ ಗ್ರಂಥವನ್ನು ಬರೆದನೆಂದು ನಮಗೆ ತೋರುವುದು.

---

ಮಾಳವೀಮಾಧವದ ಕರ್ತೃವಾದ ಕರ್ಣಪಾರ್ಯನು ಈ ನೇಮಿನಾಥ ಪುರಾಣದ ಕರ್ತೃವಾದ ಕರ್ಣಪಾರ್ಯನಿಂದ ಭಿನ್ನನು. ಕ್ರಿ.ಶ. ೧೦೪೨ ಕ್ಕಿಂತ

ಹಿಂದೆ ಬರೆಯಲ್ಪಟ್ಟ ದುರ್ಗಸಿಂಹನ ಪಂಚತಂತ್ರದಲ್ಲಿ ಅವನು ಸ್ತುತನಾಗಿರುವುದರಿಂದ ಅವನು ಕ್ರಿ.ಶ. ೧೦೪೨ ಕ್ಕಿಂತ ಹಿಂದೆ ಇದ್ದಿರಬೇಕೆಂಬುದು ತಾನಾಗಿಯೇ ವ್ಯಕ್ತವಾಗುವುದು.

---

ಈ ಇಬ್ಬರು ಕರ್ಣಪ ಅಥವಾ ಕರ್ಣಪಾರ್ಯರಲ್ಲದೆ, ಈ ಹೆಸರಿನ ಇನ್ನಿಬ್ಬರು ಕವಿಚರಿತೆಯಲ್ಲಿ ಪ್ರಸ್ತುತರಾಗಿರುವರು. ಇವರಲ್ಲಿ ಒಬ್ಬನು ಸುಕುಮಾರಚರಿತದ ಕರ್ತೃವಾದ ಶಾಂತಿನಾಥನ ಅಣ್ಣನು. ಇವನು ಕವಿಚರಿತೆ I, ೩೬೯ ರಲ್ಲಿ ಉದ್ಧೃತವಾಗಿರುವ 'ಪಿರಿಯಣ್ಣಂ ಕನ್ನಪಾರ್ಯಂ ತನಗಧಿಪತಿ ಲಕ್ಷ್ಮಕ್ಷಮಾಪಾಲನಾತ್ಮಾವರಜಂ ವಾಗ್ಭೂಷಣಂ ರೇವಣನೆನೆ ನೆಗಳ್ದಂ ಧಾತ್ರಿಯೊಳ್ ಶಾಂತಿನಾಥಂ' ಎಂಬ ಪದ್ಯದಲ್ಲಿ ಪ್ರಸ್ತುತನಾಗಿರುವನು. ತನ್ನ ತಮ್ಮಂದಿರಾದ ಶಾಂತಿನಾಥ, ರೇವಣರಂತೆ ಇವನೂ 'ವಾಗ್ಭೂಷಣ' ನಾಗಿದ್ದನೋ ಈ ಮೇಲಿನ ಪದ್ಯದಲ್ಲಿ ಹೇಳಿದ ಲಕ್ಷ್ಮ ಲಕ್ಷ್ಮಣ ಅಥವಾ ಲಕ್ಷ್ಮೀಧರನೃಪನೇ ಇವನಿಗೂ ಸ್ವಾಮಿಯಾಗಿದ್ದನೋ ಇತ್ಯಾದಿ ವಿಷಯ ಏನೂ ನಮಗೆ ತಿಳಿಯದು.

ಎರಡನೆಯವನು ಕವಿಚರಿತೆ I, ೩೬೬ ರಲ್ಲಿ ಪ್ರಸ್ತುತನಾಗಿರುವ ಕಣ್ಣಮಾತ್ಯ ಅಥವಾ ಕನ್ನುಗಮಾತ್ಯನು. (ಮೇಲೆ ೨೪ ನೇ ಪುಟವನ್ನು ನೋಡಿ.) ಕಣ್ಣ ಅಥವಾ ಕನ್ನುಗ ಎಂಬುದು 'ಕರ್ಣಪ' ಎಂಬ ಹೆಸರಿನ ಪ್ರಾಕೃತರೂಪವಾದುದರಿಂದ, ಈ ಅಮಾತ್ಯನ ಸರಿಯಾದ ಹೆಸರು 'ಕರ್ಣಪ' ಎಂದೇ ಇರಬೇಕು.

ಈ ಮೇಲೆ ಹೇಳಲ್ಪಟ್ಟ ನಾಲ್ಕುಜನ ಕರ್ಣಪರೂ ಬೇರೆ ಬೇರೆ ಎಂದು ನಾವು ಕಂಠತಃ ಹೇಳಬೇಕಾಗಿಲ್ಲ.

---

ಶ್ರೀಃ

# ಗದಾಯುದ್ಧನಾಟಕಂ

## ೧ನೆಯ ರಂಗಂ

[ ಕೃಷ್ಣಂ, ಭೀಮಂ, ದ್ರೌಪದಿ ]

ಕೃಷ್ಣಂ—ಶ್ರೀರಮಣಿಗೆ ನೆಲೆ ತನ್ನಯ
ಪೇರುರಮಂ ಮಾಳ್ಪೆನೆಂಬ ಬಗೆ ಮಿಗೆ ಸಮರ
ಪ್ರಾರಂಭಕೆ ಪೂಣ್ದಿರ್ಪಂ
ಕೌರವಕುಲವಿಲಯಕೇತು ಸಾಹಸಭೀಮಂ ೧

ಕುರುಭೂಭೃದ್ಬಲಕೂಲತೂಲಪವನಂ ಕೌರವ್ಯಗಂಧೇಭಕೇ
ಸರಿ ದುಶ್ಶಾಸನರಕ್ತರಕ್ತವದನಂ ದುರ್ಯೋಧನೋರುಕ್ಷಮಾ
ಧರವಜ್ರಂ ಕುರುರಾಜರತ್ನಮಕುಟೋತ್ಕೂಟಾಂಘ್ರಿಸಂಘಟ್ಟಸಂ
ಗರನೆಂದೆಂದಭಿವರ್ಣಿಪೆಂ ರಣಯಶಶ್ರೀರಾಮನಂ ಭೀಮನಂ ೨

ದ್ರೌಪದಿ—ವರ್ಣಿಸು, ವರ್ಣಿಸು. ವೀರ್ಯಮಿಲ್ಲದ ಕಥೆಯೊಳ್ ವರ್ಣನೆಯುಂ ವೇಡಾ ?

ಕೃಷ್ಣಂ—ಕೇಳ್ದೆಯಾ, ಭೀಮ ! ನೊಂದು ನುಡಿವಳ್ ತಂಗೆ.

ಭೀಮಂ—ಸಹಜಂ.

ಕುರುರಾಜಾನುಜಭೀಕರ
ಕರವಿಲುಳಿತನೀಲಕಬರಿಭರಮಂ ಪಿಡಿದುಂ
ಪರಿಭವಿಸಲ್ ಕೃಷ್ಣೆಗೆ ಮಿಗೆ
ದೊರೆಕೊಳಿಸದೆ ಕೋಪಮಂ ಮನಸ್ತಾಪಮುಮಂ ೩

ವೈರಾಗ್ಯಪರಂ ಧರ್ಮಪುತ್ರಂ—

ಧಾತ್ರಿಯುಮನೀಹುತಾಶನ
ಪುತ್ರಿಯುಮಂ ಬಱಿದೆ ಸೋಲ್ತನಲ್ಲಂ ಜೂದಿಂ
ಕ್ಷತ್ರಿಯತೇಜಮುಮಂ ಯಮ
ಪುತ್ರಂ ರಿಪುಗಂದೆ ಸೋಲ್ತನಾಗಲೆವೇಡಾ ೪

ಅವನ ತಮ್ಮಂದಿರ್ ನಾವು—

ಪರವಶದೊಳಿರ್ದೆವೋ ಮೇಣ್
ಪರಾರ್ಜಿತಪ್ರಾಣರಾದೆವೋ ದ್ರೌಪದಿಯಂ
ಪರಿಭವಿಸುವಲ್ಲಿ ನೋಡು
ತ್ತಿರಲಕ್ಕುಮೆ ಪವನಸೂನುಗಂ ಪಾರ್ಥಂಗಂ ೫

ವಿನಯಮನೆ ಬಗೆದು ವಿಕ್ರಮ
ಮನೆ ಬಗೆಯೆವೆ ನರನುಮಾನುಮೆನಗಂ ಸಂಮೋ
ಹನಮಾದುದಕ್ಕುಮಂದ
ಣ್ಣನ ಸೂನೃತವಚನಮೆಂಬ ಮಂತ್ರಾಕ್ಷರದಿಂ ೬

ದ್ರೌಪದಿ—ಪ್ರಿಯಮೆನಗೆ ಈ ಪಶ್ಚಾತ್ತಾಪಂ. ಸಾಹಸಭೀಮ, ಸತ್ಯಾಶ್ರಯ,

ದನುಜವಿರೋಧಿ ಮಾಡಿದೊಡಮಾಗದೆ ಸಂಧಿಯದೆನ್ನ ನಿನ್ನ ಸೈ
ಪಿನೊಳವಶಿಷ್ಟನಿರ್ಧನಸುಯೋಧನಮಾಯ್ತುರಿಸೇನೆ ಸಿಂಧುನಂ
ದನಧೃತರಾಷ್ಟ್ರರಿರ್ದೊರೆಯೆ ನಮ್ಮರಸಂ ಮರಳ್ದಿಂಬುಕ್ಕೈಗುಮೆಂ
ದನುಶಯಮಾದುದಿಂದೆನಗೆ ಸಂಶಯಮಂ ಕಳೆ ಕೌರವಾಂತಕಾ

ಖಳದುಶ್ಶಾಸನವಕ್ಷ
ಸ್ಸ್ಥಳೋಚ್ಚಲತ್ಕೃಷ್ಣರಕ್ತಜಲದಿಂ ಕೋಪಾ

ನಳನಂ ಮನ್ನಿಸಿ ಸೀನುಂ
ಗಳಾ ! ಗಳಿತಕೋಪನಿರ್ಪ ತೆಱದಿಂದಿರ್ಪೈ ೮
ಕ್ಷಮೆದೋಱಿ ಪಗೆವರೊಳ್ ಸಂ
ಧಿಮಾಡಿ ಯಮಸೂನು ಪೇೞ್ದೆ ವನವಾಸವೆ ದಲ್
ನಿಮಗೆ ಶರಣೆನಗಮಂದ
ಗ್ನಿಮುಖದೆ ಪುಟ್ಟಿದುದಱಿಂದೆ ಶರಣಗ್ನಿಮುಖಂ ೯

ಭೀಮಂ——ಸುಯೋಧನಪ್ರಳಯಕಾಲೆ, ಪಾಂಚಾಲಿ !

ಗಳಿಯಿಸುತಿರೆ ಕಬರಿಭರಂ
ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ
ನಳಿನಾನನೆ ನೀನಿರೆ ಕುರು
ಕುಳಾಂತಕಂ ಗಳಿತಕೋಪನೇ ! ಈ ಭೀಮಂ ೧೦

ಕುರುನಂದನರಂ ಕೊಂದೆಂ
ಕುರುಶಾಬಾನುಜನ ನೆತ್ತರಂ ಕುಡಿದೆಂ ಪೂ
ಣ್ದೆರಡಂ ತೀರ್ಚಿದೆನಿರ್ದಪು
ವೆರಡುಮವಂ ತೀರ್ಚಿ ತೀರ್ಚದಿರ್ಪೆನೆ ಪಗೆಯುಂ ? ೧೧

ಊರುಗಳನುಡಿವೆನೊದೆವೆಂ
ಕೌರವಪರಿವೃಢನ ಮಕುಟಮಂ ವೇಣೀಸಂ
ಹಾರಂ ಮಾಡುವೆನದಱಿಂ
ಭಾರಮದಿನಿತಲ್ಲದೆನ್ನ ಪರಿಭವಭಾವಂ ೧೨

ಅಱಿನ ಮಗಂ ಪ್ರಾರ್ಥಿಸೆ ಬಾಂ
ದೊಱೆಯ ಮಗಂ ಮಾಡೆ ಸಂಧಿಯಾದಪುದೆನುತುಂ
ಮಱುಗದಿರಣ್ಣನ ಮಾತಂ
ಪೆಱಗಿಕ್ಕುವೆನಜ್ಜನಿರ್ದು ಮಾೞ್ಪೊಡಮೀಯೆಂ ೧೩

ದ್ರೌಪದಿ—

ಇಱಿವಬೆಡಂಗ ದೇವ ಪರಮೇಶ್ವರ ಸಾಹಸಭೀಮ ನಿನ್ನೊಳಾ
ರಿಱಿದು ಬರ್ದುಂಕುವರ್ ನಿಜಭುಜೋಗ್ರಗದಾಪರಿಘಪ್ರಹಾರದಿಂ
ಪಱಿವಱಿಯಾಗಿ ಪೊಣ್ಮೆವೆಣನಾಗಿ ಮರುಳ್ಗೆಣೆಸಾಗಿ ಯುದ್ಧದೊಳ್
ಕುಱಿದಱಿಯಾಗಿ ಬಿೞ್ದರಿಬಲಂಗಳೆ ಪೇೞುವೆ ನಿನ್ನ ಬೀರಮಂ ೧೪

ಒಡಲೊಡಮೆಯೆಂಬಿವೆರಡುಂ
ಕೆಡಲಿರ್ಪುವು ಕೆಡದ ಕಸವರಂ ಜಸಮದಱಿಂ
ಕೆಡುವೊಡಲೊಡಮೆಯನೆಂದುಂ
ಕೆಡದೊಡಮೆಗೆ ಮಾಱುಗುಡುವುದಿಱಿವಬೆಡಂಗಾ ೧೫

ಮಣಿ ಕನಕಂ ವಸ್ತ್ರವಿಭೂ
ಷಣಂಗಳಂ ಕೊಟ್ಟು ಪೆಂಡಿರೊಲ್ವರೆ? ಗಂಡರ
ಗುಣಮನೆ ಮೆಚ್ಚೆವುದು ಶಸ್ತ್ರ
ವ್ರಣಮುಂ ನಿನ್ನಂತೆ ನೆಱೆವುದಿ ವಬೆಡಂಗಾ ೧೬

ಕೃಷ್ಣಂ—ಒಳ್ಳಿತಾತ್ತಾಗಿ ಮೂದಲಿಸಿದೆ; ಇನ್ನೆಲ್ಲಿಯ ಧೃತರಾಷ್ಟ್ರಂ! ಎತ್ತಣ ಗಾಂಗೇಯಂ! ಎಲ್ಲಿಯ ಸಂಧಿಕಾರ್ಯಂ! ದುಶ್ಶಾಸನಾದಿಗಳಪ್ಪ ನೂರ್ವರ್ ಕೌರವರುಮಂ ಆಗುರ್ವಾಗೆ ಕೊಂದಿಕ್ಕಿದಂ; ಇನ್ನೊರ್ವನುೞಿದಂ; ದುರ್ಯೋಧನನಂ ಕೊಲ್ವುದುಂ ಗೆಲ್ವುದುಂ ನಮ್ಮರಸಂಗಾವುದು ಗಹನಂ! ಆಹಾ, ರೌದ್ರಾವತಾರೆ, ದೇವಾಸುರಯುದ್ಧಕ್ಕೆ ಕರಗಂಬೊತ್ತ ಡಾವರಡಾಕಿನಿ!

ಕುರುಕುಲಮಂ ನುಂಗಿದೆ! ಇ
ನ್ನರೆಬರುಮಂ ನುಂಗಲಿರ್ಪೆ ಕುರುಪತಿಯುಮನೀ
ಎರಡನೆಯ ಹಿಡಿಂಬಿಯನೆ
ಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ! ೧೭

ಭೀಮಂ—ಎನ್ನಾರಾಧನೆಯ ಶಕ್ತಿ ಇವಳ್ ; ಪ್ರಿಯೆ,

ನೀನಗ್ನಿಪುತ್ರಿಯ್ಯೆ ಪವ
ಮಾನತನೂಭವನೆನಾನ್ ; ಚಲಂ ಕೂಡಿರೆ ಸಂ
ಧಾನಮರಿನೃಪರೊಳೆಂತನ
ಲಾನಿಲಸಂಯೋಗಮುರಿಪದಿರ್ಕುಮೆ ಪಗೆಯಂ ! ೧೮

ಕುರುಕುಲಜೀವಾಕರ್ಷಣ
ಪರಿಣತಮಿದು ಕಾಳಹಸ್ತಮಲ್ಲದೆ ಪರಮೇ
ಶ್ವರಿ, ಕೇಶಹಸ್ತಮಕ್ಕುಮೆ
ಪರಾಭವಜ್ವಲನಧೂಮಕೃಷ್ಣಂ ಕೃಷ್ಣೇ ೧೯

ಕೃಷ್ಣಂ—ಭೀಮಸೇನ, ನೀನಱಿವೆಯಲ್ತೆ ದುರ್ಯೋಧನಂಗೆ ಮೈತ್ರೇಯರ್ ಕೊಟ್ಟ ಶಾಪಮಂ. ಇಂದಿನ ನೇಸಱಿಂದೊಳಗೆ ವೈರಿಯನಿಕ್ಕದೆ ಮಾಣ್ದೆವಪ್ಪೊಡೆ ಇನ್ನೆಂದುಮಸಾಧ್ಯಂ. ನಾಳೆ ಬಲರಾಮನುಂ ಬಂದು ಕೂಡುವಂ ಗಡ !

ಭೀಮಂ—ಕೃಷ್ಣ, ಚಿಂತಿಸದಿರು.

ಸತ್ಯಪ್ರತಿಜ್ಞನೆನೆ ಕುರು
ಪತ್ಯೂರುಕಿರೀಟಭಂಗಮಂ ಪಡೆದು ಜಗ
ತ್ಸ್ತುತ್ಯಕೃತಕೃತ್ಯನೆನಿಸದೆ
ಸತ್ಯಾಶ್ರಯುವೆಸರ್ಗೆ ಮುಯ್ಯನಾಂಪನೆ ಭೀಮಂ ? ೨೦

ಬಾ, ಯಜ್ಞಪುತ್ರಿ ! ನಿನ್ನ ಕಾರ್ಯಮಾಯ್ತು.

## ೨ನೆಯ ರಂಗಂ

[ ದುರ್ಯೋಧನಂ, ಸಂಜಯಂ ]

ದುರ್ಯೋಧನಂ—ಸಂಜಯ, ಎನ್ನ ದುಃಖಮಂ ಹೃದಯಮೇ ಬಲ್ಲುದು. ಅಸುಹೃತ್ಸೇನೆಗೆ ಸಾಲ್ವನೊರ್ವನೆ ಗಡಂ ! ರುದ್ರಾವತಾರಂ ಗಡಂ ! ನೊಸಲೊಳ್ ಕಣ್ ಗಡಮೆಂದು ನಚ್ಚಿ ಪೊರೆದೆಂ ತಾನಕ್ಕೆ ತಮ್ಮಮ್ಮನ ಕ್ಕಿಸಲಂಬಂ ತಿರುವಾಯ್ಗೆ ತಂದಱಿವರೇ ! ತಾವಿರ್ವರುಂ ಕಯ್ದುವಂ ಬಿಸುಟರ್ ಜೋಳದಪಾಳಿಯಂ ಬಗೆದುದಿಲ್ಲಾ ದ್ರೌಣಿಯುಂ ದ್ರೋಣನುಂ

ಈಯಲಿಱಿಯಲ್ ಶರಣ್ಬುಗೆ
ಕಾಯಲ್ ಕ್ಷತ್ರಿಯರೆ ಬಲ್ಲರಲ್ಲದೆ ಬ್ರಹ್ಮರ್
ಭೋಯೆನಲುಂ ಬಲ್ಲರ್ ಕೊಲೆ
ಧೋಯೆನಲುಂ ಬಲ್ಲರಿಱಿಯಲವರೆತ್ತಱಿವರ್ ! ೨೨

ಕೆರವಾಳಂ ಮಸೆವಂದದೆ
ಮರವಾಳಂ ಮಸೆಯೆ ಕೂರಿತಕ್ಕುಮೆ ? ಕಲಿಯಂ
ಪೊರೆದೊಡೆ ಕೂರ್ಪಂ ತೋರ್ಪಂ
ತಿರೆ ತೋರ್ಕುಮೆ ಪಂದೆ ಪತಿಗೆ ಸಂಗರದೆಡೆಯೊಳ್ ? ೨೩

ಸಂಜಯಂ—(ಆತ್ಮಗತಂ) ಇನ್ನುಂ ಗುರುದೂಷಣಂ ; ಮತ್ತೆಂತು ?

ಕಾರ್ಯಸಖಂ ಶಕುನಿ ಗಡಾ !
ಶೌರ್ಯಸಖಂ ಸೂತಜಂ ಗಡಾ ! ಭೀಷ್ಮಶರಾ
ಚಾರ್ಯರ ನುಡಿ ತಪ್ಪು ಗಡ ! ಆ
ಕಾರ್ಯಂಗಪಿಕೇತನಂಗೆ ವಿಧಿವಿಳಸನದಿಂ ೨೪

(ಪ್ರಕಾಶಂ) ಕುರುರಾಜ, ಗುರುಗಳ ಶರಾಸಾರಮಂ ನೀನೆ ಕಂಡಯ್.

ಕಳಶನದೀಜರ್ ಭಕ್ತಿಗೆ
ಕಳಶಾರೋಹಣಮಿದೆನಿಸಿ ನೆಱಪಿದರವರೊಂ

ದಳವಲ್ಲುತ್ತ ಕಾದಿ ಗೆಲಲಾ
ರಳವಲ್ತರ್ಜುನನ ಶೌರ್ಯಮಂ ನೀನಱಿಯಾ ? ೨೫

ಬಕನಂ ಹಿಡಿಂಬನಂ ಕೀ
ಚಕನಂ ಕಿಮ್ಮೀರನಂ ಜಟಾಸುರನಂ ಕೊಂ
ದ ಕಲಿ ಜರಾಸಂಧನನಿ
ಕ್ಕಿ ಕೊಂದ ಬಲ್ಲಾಳ್ ಮರುತ್ಸುತಂ ಕೇವಳನೇ ೨೬

ಪವನಸುತಂ ಗದೆಗೊಳೆ ಗಾಂ
ಡಿವಿ ಬಿಲ್ಗೊಳೆ ಕಯ್ದುಗೊಳ್ವ ಮಾಕೆರ್ೊಳ್ವದಟರ್
ಭುವನದೊಳಿಲ್ಲವರ್ಗಳ ಬಾ
ಹುವಿಕ್ರಮಂ ನಿನಗೆ ಪೊಸತೆ ಕೌರವರಾಜಾ ೨೭

ಇವರುಮಿರ್ಕೆ : ಭರತಕುಲಶಿರಶ್ಶೇಖರಂ ಧರ್ಮಪುತ್ರಂ ತನ್ನ ಧರ್ಮಬಲದಿಂದಿರ್ದಲ್ಲಿಯೆ ಗೆಲ್ಲನೆ ?

ದಾನಂ ಪ್ರಿಯವಾಕ್ಸಹಿತಂ
ಜ್ಞಾನಮಗರ್ವಂ ಕೃಪಾನ್ವಿತಂ ಶೌರ್ಯಮೆನಿ
ಪ್ಪೀನುಡಿಯನೆ ನುಡಿಯಿಸಿದುದು
ದಾನಂ ಜ್ಞಾನಂ ಕ್ಷಮಾಗುಣಂ ಧರ್ಮಜನಾ ೨೮

ದುರ್ಯೋಧನಂ—ಇರು, ಇರು, ಸಂಜಯ,

ಸ್ಥಿರಸತ್ಯವ್ರತಿಯೆಂದು ಧರ್ಮರುಚಿಯೆಂದಾ ಧರ್ಮಪುತ್ರಂ ದಯಾ
ಪರನೆಂದೆಲ್ಲರ ಪೇಳ್ದ ಮಾತು ಪುಸಿಯಾಯ್ತಾ ಕಾರ್ಮುಕಾಚಾರ್ಯನಂ
ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಾಗಳ್ ಮಹಾಪಾತಕಂ
ಪರಮೆಂಬೀ ನುಡಿಯಿಂ ಪೃಥಾಪ್ರಿಯಸುತಂ ಪಾಪಕ್ಕೆ ಪಕ್ಕಾಗನೇ ೨೯

ಆ ನಿನ್ನ ವೀರರೋ !

ವನಿತೆಯ ಕೇಶಮಂ ಸಭೆಯೊಳೆನ್ನನುಜಂ ತೆಗೆವಲ್ಲಿ ಗಂಡನಾ
ಗನೆ! ಭಗದತ್ತನಾನೆ ಬರಿಯೆಲ್ವುಡಿವನ್ನೆಗಮೊತ್ತೆ ಗಂಡನಾ
ಗನೆ! ಕೊಲಲೊಲ್ಲದಂಗಪತಿ ಬಿಲ್ಲೊಳೆ ಕೋದೆಡೆವಲ್ಲಿ ಗಂಡನಾ
ಗನೆ! ಕುರುಬಾಲಸಂಹರಣಮಾತ್ರದೆ ಮಾರುತಿ ಗಂಡನಾದನೇ? ೩೦

ಎನಗಾ ಜೂದಿನೊಳಗ್ರಜಾನುಜಸಮೇತಂ ಗಂಡುದೊಟ್ಟಾಗಿ ಕಾ
ನನದೊಳ್ ವಲ್ಕಲಧಾರಿಯಾಗಿ ಹರನೊಳ್ ದಿವ್ಯಾಸ್ತ್ರಮಂ ಬೇಡೆ ಬೆ
ಳ್ತನದಿಂ ತಾಪಸನಾಗಿ ಪೇಡಿಯೆನೆ ಮತ್ಸ್ಯಾವಾಸದೊಳ್ ವಾಸುದೇ
ವನ ನಂಟಂ ನಟನಾಗಿ ಬಾರದ ಭವಂ ಬಂದಂ ಪೃಥಾನಂದನಂ ೩೧

ಸಭೆಯೊಳ್ ತಮ್ಮಯ ಪಕ್ಕದೆನ್ನನುಜನಾಪಾಂಚಾಲಿಯಂ ಪಂಚವ
ಲ್ಲಭೆಯಂ ಮೋದೆಯುಮಲ್ಲಿ ಮಿಳ್ಮಿಳನೆ ನೋಡುತ್ತಿರ್ದ ಬಲ್ಲಾಳ್ಗಳಿ
ಲ್ಲಿ ಭರಂಗೆಯ್ದಪರೀ ಪರಾಕ್ರಮಮುಮಾ ಪೆರ್ಮಾತುಮಾ ಗಂಡುಮಾ
ಸುಭಟಾಲಾಪಮುಮೆಲ್ಲಮಾ ನೃಪಸುತರ್ಗಂದೆಲ್ಲಿ ಪೊಕ್ಕಿರ್ದುದೋ ೩೨

ಬಿಡು ಸಾಲ್ಗುಂ! ಆ ಬಡವುಗಳನೇನೆಂದಾಡುವೆ!

ಗುರುವಂ ಪ್ರೋಜ್ಝಿತಚಾಪನಂ ಪುಸಿದು ಕೊಂದಾಬೀರಮಂ ಭೀಷ್ಮರಂ
ಶರಶಯ್ಯಾಗತರಂ ಕಱುತ್ತು ಗುಱಿಯೆಚ್ಚಾ ಪೊಚ್ಚಱಿಂ ಕರ್ಣನಂ
ವಿರಥಜ್ಯಾಯುಧನೆನ್ನದೆಚ್ಚು ತವೆ ಕೊಂದಾ ಶೌರ್ಯಮಂ ಪಾಂಡುಪು
ತ್ರರೆ ಬಲ್ಲರ್ ಮೆಱೆಯಲ್ಕೆ ಸಾಹಸಧನಂ ದುರ್ಯೋಧನಂ ಬಲ್ಲನೇ?

ಪೊೞ್ತು ಕಳೆವುದು! ನಡೆ, ಭೀಮನಂ ತೋಱು.

ಸಂಜಯಂ—ಸ್ವಾಮಿಹಿತಂ ನುಡಿಯಿಪುದು, ಕ್ಷಮಿಸು! ಈ ಮೂರ್ಖತನಂ ಬೇಡ. ನೀಂ ಪ್ರತಿಕೂಲದೈವನ್ನೈ; ಅನುಕೂಲದೈವರ್ ಪಾಂಡವರ್.

ದುರ್ಯೋಧನಂ—ಮೂರ್ಖ ಸಂಜಯ,

ಸಮರಜಯಂ ದೈವಾಯ
ತ್ತಮದಱನಾ ಪುರುಷಕಾರಮೆನಗಾಯ್ತಿಗಳ್
ಯಮನಂದನಾದಿಗಳೊಳೊಂ
ದೆ ಮೆಯ್ಯೊಳಾಂತಿಱಿವೆನೆನ್ನ ಚಲಮಂ ಮೆಱೆವೆಂ ೩೪

ಸುರಸಿಂಧೂದ್ಭವಕುಂಭಜನ್ಮದಿನಕೃತ್ಪುತ್ರಾದಿಗಳ್ ಸಾಯೆ ಸಂ
ಗರದೊಳ್ ಪಾಂಡವರಂ ಗೆಲಲ್ ನೆಱೆಯನಿನ್ನೇಕಾಕಿ ದುರ್ಯೋಧನಂ
ಸೆರಗಂ ಪಾರ್ದಪನೆನ್ನ ಗಿಮಾ ಧರೆ ಭುಜಾದಂಡಂ ಗದಾದಂಡಮೆಂ
ಬೆರಡುಂ ಸಂಜಯ ಮಜ್ಜಯಕ್ಕೆ ನೆರವಿನ್ ಮತ್ತಾರ್ ನೆರಂಬಾರ್ವನೋ!

ಸಂಜಯಂ—ಅಭಿಮಾನಧನ, ಛಲದಂಕಮಲ್ಲ, ಆರುಮಂ ನಿರಾಕರಿಸು
ವಯ್. ಶ್ರೀಕೃಷ್ಣಂ ಮಹಾವಿಷ್ಣು,

ಪವನಾತ್ಮಜಂ ಮಹಾರಥ
ನವನಿಪ ಸಮರಥನೆ ನೀನದರ್ಕಧಿಕನೊಳಾ
ಪವನಾತ್ಮಜನೊಳ್ ಮಱೆ ಬ
ದ್ಧವೈರಮಂ ಸಂಧಿಮಾಳ್ಪುದುತ್ತಮಪಕ್ಷಂ ೩೬

ದುರ್ಯೋಧನಂ—ಕೃಷ್ಣಂ ಗಡ! ಭೀಮಂ ಗಡ! ದೈವಂ ಗಡ!
ಭೂತಂ ಗಡ!

ಪುರುಷರ್ ಮೂವರೊಳೊರ್ವನೆಂಬರಸುರಪ್ರಧ್ವಂಸಿಯೆಂಬರ್ ಜಗ
ದ್ಗುರುವೆಂಬರ್ ಪೆಱರ್ಗೇಕೆ ತೇರನೆಸಪಂ ಧರ್ಮಾನುಜಂಗೇಕೆ ಕಿಂ
ಕರನಾದಂ ಕರವೇಱಿಯಾದನದಱಿಂ ಸೂತಂ ಭಟಂ ಪೇಱಿಯೆಂ
ಬರ ಮಾತೊಪ್ಪುಗುಮಾದಿದೇವನೆನಿಸಲ್ ಕೃಷ್ಣಂಗದೆಂತೊಪ್ಪುಗುಂ ೩೭

ಅನಿಮೇಷಾದ್ಯವತಾರಂ
ತನಗಾಯ್ತು ದಶಾವತಾರಮಲ್ಲದೊಡಿರದ
ರ್ಜುನನ ರಥಮೆಸಪ ಪನ್ನೊಂ
ದನೆಯದು ಸೂತಾವತಾರಮುಂ ಹರಿಗಾಯ್ತೇ ೩೮

ಅವನ ರಹಸ್ಯಮಂ ಕೇಳ್, ಪೇೞ್ವೆಂ.

ಅನುಜೆಯನಿತ್ತು ನರಂಗಾ
ತನ ತನಯಂಗಿತ್ತು ತನ್ನ ಮಗಳಂ ತಾನಾ
ತನ ರಥಮನೆಸಗಿ ಧರ್ಮಜ
ನನುಜನ ನೆವದಿಂದಮುರಸುಗೈವಂ ಕೃಷ್ಣಂ ೩೯

ನಿನ್ನಾ ಭೀಮನೊರ್ವಂ!

ಅತಿರಥನಾತಂ ಗಡ! ಬಲ
ಯುತಸಮರಥನೆನ್ನೊಳಧಿಕಬಲವಂತಂ ಮಾ
ರುತಿ ಗಡ! ಮಹಾರಥಂ ಮಾ
ರುತಿಯುಂ! ತದ್ರಥದ ಗಾಲಿಗಳ್ ದೊಡ್ಡಿದುವೇ? ೪೦

ಪೆಱರಂ ಪೊಗೞ್ದಪೆ ಯೆಮ್ಮಂ
ಕಿಱಿಯರ್ ಮಾಡಿದಪೆ ಯೆಲವೊ ಸಂಜಯ! ನೀನುಂ
ಪೆಱನೊರ್ವಂ ಬಿಲ್ಲೋಜಂ
ಪೆಱನೊರ್ವಂ ಸಿಂಧುಪುತ್ರನಾಗಲ್ ಬಗೆವೋ? ೪೧

ಸಂಜಯಂ—(ಆತ್ಮಗತಂ)

ಎನಿತೆನಿತಂ ಕಲಿಸಿದೊಡಂ
ತನಿತನಿತುಂ ನೈಜಭಾವಮಕ್ಕುಂ ನೃಪನಂ
ದನನೆಂತುಮಂತು ಕರ್ಕಶ
ತನುವಂತಶ್ಶೂನ್ಯಮಕ್ಕುಮುನ್ನತವಂಶಂ ೪೨

(ಪ್ರಕಾಶಂ) ಫಣಿರಾಜಕೇತನ, ಯುದ್ಧಮನೆ ನೀಂ ಪಿಡಿವೊಡೆ ಅಶ್ವತ್ಥಾಮನಿರ್ಪಂ, ಬಲರಾಮನಿರ್ಪಂ; ಅವರೊಳೊರ್ವಂಗೆ ಸೇನಾಧಿಪತ್ಯಾಭಿಷೇಕಮಂ ಮಾಡಿ ಪಗೆಯುಂ ಕೈಗೆ ಮಾಱ್ಪುದು.

ದುರ್ಯೋಧನಂ—ತ್ರಿದಶನದೀಸುತನಿಂ ತೀ
ರದ ಕಜ್ಜಂ ಮುನ್ನೆ ಕಳಶಸಂಭವನಿಂ ತೀ
ರದ ಕಜ್ಜಮಿನಜನಿಂ ತೀ
ರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ ೪೩
ದ್ರೋಣನೆಮಗೊಳ್ಳಿಕೈದಂ
ದ್ರೋಣನ ಸುತನೊಳ್ಳಿಕೈಯದಿರ್ಕುಮೆ ಸಮರ
ಕ್ಷೋಣಿಯೊಳಿನ್ನವನಾಸೆಯೆ ?
ಮಾಣೆಯಣಂ, ಕಯ್ಪಸೊರೆಯ ಕುಡಿಯೇಂ ಮಿಡಿಯೇಂ ೪೪
ತಪನಸುತಂ ಬೇಱಾಂ ಬೇ
ಱೆ ಪೊಲ್ಲದಂ ನುಡಿದನಾತನಂ ಬಿಸುಟಂ ಟ
ಕ್ಕಿಪ ನುಡಿಯಂ ನುಡಿವನೆ ಮಱೆ
ಯ ಪಾಂಡವಂ ಬಗೆದು ನೋೞ್ಪೊಡಶ್ವತ್ಥಾಮಂ ೪೫
ಹಲಿಯುಂ ರಣಕೇಳಿಕುತೂ
ಹಲಿಯುಂ ನಚ್ಚಿರ್ದೆನವನುಮಾಹವಕೋಲಾ
ಹಲದಲ್ಲಿ ತೀರ್ಥಯಾತ್ರಾ
ಚ್ಛಲದಿಂದಮುಗಲ್ದು ಪೋದನಿನ್ನುಂ ಬಾರಂ ೪೬
ಮಡಿಗುಮೆ ಪಗೆ, ರವಿಸುತನಿಂ
ಮಡಿಗುಂ, ಮೇಣ್ ಶೌರ್ಯಶಾಲಿ ದುಶ್ಶಾಸನನಿಂ
ಮಡಿಗುಂ, ಮೇಣೆನ್ನಿಂದಂ
ಮಡಿಗುಂ, ಪೆಱಪೆಱರಿನೆನ್ನ ಪಗೆ ಮಡಿದಪುದೇ ? ೪೭
ಕಾನೀನಂ ದ್ರೋಣನದೀ
ಸೂನುಗಳೞಿದಿಂಬೞಿಕ್ಕೆ ಪೆಱರೆನಗಿಲ್ಲೆಂ
ದಾನೆ ಗಳಿತಾಶ್ರುಜಲದಿಂ
ಸೇನಾಪತ್ಯಾಭಿಷೇಕಮಂ ಮಾಡಿದಪೆಂ ೪೮

ಅಯ್ಯೋ, ಸಂಜಯ,

ಎನಗಿರ್ವರುಮೆರಡುಂ ತೋಳ್
ಎನಗಿರ್ವರುಮೆರಡು ಕಣ್ಗಳೆನ್ನರೆ ಯುವರಾ
ಜನುಮಂಗರಾಜನುಂ ಪೋ
ಱನೆ ಸಂಜಯ ಮತ್ತಮೆನಗೆ ಮಾನಸವಾಱೇ ೪೯

ಕೞಿದಂ ದಿನಕರತನಯಂ
ಕೞಿದಂ ಯುವರಾಜನಪ್ಪ ದುಶ್ಶಾಸನನುಂ
ತುೞಿಲಾಳ್ಗಳಿನಿರ್ವರುಮಂ
ಕೞಿಪಿ ಸುಯೋಧನನ ಬಾೞ್ವುದಂ ನಂಬಿದಿರೇ ? ೫೦

ಎನಗೆ ಮನಮಿಂದು ಶೂನ್ಯಂ
ಮನೆ ಶೂನ್ಯಂ ಬೀಡು ಶೂನ್ಯಮಾದುದು ಸಕಲಾ
ವನಿ ಶೂನ್ಯಮಾಯ್ತು, ದುಶ್ಶಾ
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ ? ೫೧

[ ಕೆರೆಯಲ್ಲಿ ]

ಆಳ್—ಇತ್ತಲಿತ್ತಲ್ ವೃದ್ಧರಾಜರ್ !

ಸಂಜಯಂ—ಹಾ, ಕಷ್ಟಂ, ಕಷ್ಟಂ. ಕುಮಾರ ಸುಯೋಧನ, ಸೈರಿಸು ಸೈರಿಸು. ನಿನ್ನಲ್ಲಿಗೆ ಜನನೀಜನಕರ್ ಅಱಸುತ್ತುಂ ಬಂದರ್. ಅವರ ಚರಣಾರವಿಂದವಂದನಂಗೆಯ್ದು ಮನಃಕ್ಷತಮನಾಱಿಸಲ್ವೇೞ್ಪುದು.

ದುರ್ಯೋಧನಂ—ಬಾಂಧವರನಿಱಿಸಿ ಸರಸಿಜ
ಬಾಂಧವತನಯನುಮನೆನ್ನ ತಮ್ಮನುಮಂ ನ
ಮ್ಮಂಧನರೇಂದ್ರನ ಮೊಗಮಂ
ಗಾಂಧಾರಿಯ ಮೊಗಮನಾವ ಮೊಗದೊಳ್ ನೋೞ್ಪೆಂ ? ೫೨

ಅರಿಭೂಪಾಲರನಿಕ್ಕಿ ಗೆಲ್ದೊಸಗೆಯಿಂ ತೂರ್ಯಸ್ವನಂ ಪೊಣ್ಮೆ ಸೋ
ದರರುಂ ಮಕ್ಕಳುಮಾಪ್ತರುಂಬೆರಸು ಬಂದಾನಂದದಿಂ ಕಾಣ್ಬೆನೆಂ
ದಿರಲಿಂತಾಯ್ತು ವಿಧಾತ್ರ ಮದ್ಗುರುಗಳಂ ದುಃಖಾತ್ಮರಂ ಶೋಕತ
ಪ್ತರರಂ ಮೆಯ್ಯೊಳೆ ಬೀೞ್ವ ಕಣ್ಬನಿಗಳಿಂ ಕಾಣ್ಬಂತುಟಂ ಮಾಡಿದೈ ೫೩

ಕಂದ ನಿಜಾನುಜರೆಲ್ಲಿದ
ರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇ
ನೆಂದು ಮಱುಮಾತುಗುಡುವೆಂ ?
ಕೊಂದರ್ ಕೌಂತೇಯರೆಂದು ಬಿನ್ನೈಸುವೆನೋ ! ೫೪

ಹಾ ! ದುಶ್ಶಾಸನಾ ! ಹಾ ಕರ್ಣಾ ! (ಮೂರ್ಛೋಪೇತಂ)

[ ಆಳ್, ಧೃತರಾಷ್ಟ್ರಂ, ಗಾಂಧಾರಿ, ]

ಆಳ್—ಇತ್ತಲಿತ್ತಲ್ ವೃದ್ಧರಾಜರ್ !

ಧೃತರಾಷ್ಟ್ರಂ—ಪಡೆ ಪನ್ನೊಂದಕ್ಷೋಹಿಣಿ
ಗೊಡೆಯನೆ ಮೂರ್ಧಾಭಿಷಿಕ್ತನೇ ಮೂಱುಂ ಬೆ
ಳ್ಗೊಡೆಯ ನಡುವಿರ್ಪ ನೀನಿ
ರ್ದೆಡೆಯುಮನೆಮಗಱಿಯದಂತುಟಾದುದೆ ಮಗನೇ ೫೫

ಆಳ್—ತಾಯೆ, ಪಿಂತಿರಿಂ. ಕಾರ್ಯಂ ಕೆಟ್ಟುದು. ಇದೊ, ಮಹಾರಾಜನ
ಮೇಲೆ ಕವಿದು ಬಿೞ್ದು ಸಂಜಯುಂ ಅೞುತ್ತಿರ್ಪಂ.

ಧೃತರಾಷ್ಟ್ರಂ—ಹಾ ಕುರುಕುಲಚೂಡಾಮಣಿ !
ಹಾ ಕುರುಕುಲಚಕ್ರವರ್ತಿ ! ಹಾ ಸಕಲಧರಿ
ತ್ರೀಕಾಂತ ! ನಿನ್ನುಮಂ ಪರ
ಲೋಕಕ್ಕಟ್ಟಿದನೆ ಕಾಯ್ದು ಮಾಯ್ದ ವಿಧಾತ್ರಂ ! ೫೬

ಗಾಂಧಾರಿ—ಮೃಗಧರಕುಲಲಕ್ಷ್ಮೀವ
ಲ್ಲಿಗೆ ಪೆಱರಾರ್ ನೀನೆ ಮುನ್ನಡರ್ಪೆನಲಿರ್ದೈ

ಮಗನೆ, ಲಯಕಾಲಭೀಮೋ
ರಗನುರಗಪತಾಕ ನಿನ್ನುಮಂ ನುಂಗಿದನೇ? ೪೭

ಎಮಗಂಧಯಷ್ಟಿಯಾಗಿ
ರ್ದ ಮಗನೆ, ನೀನುಳ್ಳೊಡೆಲ್ಲಮೊಳವೆಂದಿರೆ ನಿ
ನ್ನುಮನಿರಿಸದೆ ಕುರುವಂಶಾ
ನಿಮಿತ್ತರಿಪು ಪಾಶಪಾಣಿ ಸವಿನೋಡಿದನೇ! ೪೮

ಗುರುಚರಣಂಗಳ್ಗೆಱಗದೆ
ಪರಕೆಯನಾದರದಿನಾಂತುಕೊಳ್ಳದೆ ಮೋನಂ
ಬೆರಸಿರ್ಪುದು ನಿನಗುಚಿತಮೆ
ಗುರುವಿನಯಮನೇಕೆ ಮಱೆದೆ ಕುರುಕುಲತಿಲಕಾ ೪೯

ಮಡಿದೀ ದುಶ್ಶಾಸನನೇಂ
ನುಡಿಯಿಸುವನೊ ಕುರುನರೇಂದ್ರ ದುರ್ಮರ್ಷಣನೇಂ
ನುಡಿಯಿಸುವನೊ ದುಷ್ಕರ್ಣಂ
ನುಡಿಯಿಸುವನೊ ನೀನುಮುಸಿರದಿರ್ಪುದೆ ಮಗನೇ! ೫೦

ಸಂಜಯಂ—ತಾಯೆ, ಪ್ರಳಾಪಂಗೆಯ್ಯದಿರ್. ಕರ್ಣದುಶ್ಶಾಸನಾದಿಗಳ ಸಾವಿನೊಳ್ ಶೋಕೋದ್ರೇಕದಿಂ ಮೂರ್ಛೆಗೆ ಸಂದಿರ್ದಪಂ. ಈಗಳೆ ಚೇತರಿಸುಗುಂ.

ದುರ್ಯೋಧನಂ—ನಮಸ್ಕರಿಸುವೆಂ ನಿರ್ಭಾಗ್ಯಂ.

ಗಾಂಧಾರಿ—ಅಪ್ಪ, ಬರ್ದುಕಿದೆಯ!

ಧೃತರಾಷ್ಟ್ರಂ—ನಮ್ಮ ಸಕಲಸೌಭಾಗ್ಯ, ಶಾಂತಮಕ್ಕೆ ನಿನ್ನೀ ಕ್ರೂರ ವಿಧಿ!

ಸಂಜಯಂ—ಅದರ್ಕೆ ತಕ್ಕ ಶಾಂತಿಯಂ ಬೆಸಸುವುದು ಪಿರಿಯರ್.

ಧೃತರಾಷ್ಟ್ರಂ—ಕಂದ, ಸುಯೋಧನ, ಸಮರಾನುಬಂಧಮಂ ಮಾಣ್ಬುದು.

ಶ್ರೀವನಿತೆಗೆ ನಿಜವಿಜಯ
ಶ್ರೀವನಿತೆಯೆ ಸವತಿಯಾಗ ರಿಪುನೃಪರಂ ಶೌ
ರ್ಯಾವಷ್ಟಂಭದೆ ಗೆಲ್ದ ಜ
ಯಾವಸಥನಸಾಧ್ಯನಲ್ತೆ ಸಾಹಸಭೀಮಂ ೬೧

ಧರ್ಮಪುತ್ರನಾದೊಡೆ ಇನ್ನುಂ ಪ್ರೇಮಾರ್ಥಿಯಾಗಿರ್ಪಂ.

ಯಮಸುತನಿಂಬುಕ್ಕೈವನೆಮಗಿನ್ನುಮೊಡಂಬಡು ಕಂದ ಸಂಧಿಯಂ
ಸಮಗೊಳಿಸಲ್ಕೆ ಸಂಜಯನನಟ್ಟುವೆ, ಭೀಮನೊಳಾದ ಬದ್ಧವೈ
ರಮನುೞಿ, ನೋಡದಿರ್ ಸುತಸಹೋದರದುಃಖಮನೀವುದರ್ಧರಾ
ಜ್ಯಮನವರ್ಗಣ್ಣ ! ಕಾಲ್ವಿಡಿದು ಬೇಡುವೆನಂಧಪಿತಂ ಸುಪುತ್ರನಂ ೬೨

ಗಾಂಧಾರಿ—ಪರಿಣತವಯಸರೆಮಿರ್ಕ
ಣ್ಗುರುಡರೆಮೆಮಗಿಂಬುಕ್ಕೈವುದುಚಿತಂ ನಿನ್ನೀ
ಗುರುನುಡಿದ ನುಡಿಗೊಡಂಬಡು
ಗುರುವಚನಮಲಂಘನೀಯಮೆಂಬುದು ಮಗನೇ ೬೩

ಸಮರವ್ಯಾಪಾರಂ ಮಾ
ಣ್ದು ಮಗನೆ ನಿಜಶಿಬಿರದತ್ತ ಬಿಜಯಂಗೆಯ್ ! ಸ
ತ್ತ ಮಗಂದಿರ್ ಸತ್ತರ್, ನೀ
ನೆಮಗುಳ್ದೊಡೆ ಸಾಲ್ವುದವರಸಿಂ ತಂದಪೆವೇ ೬೪

ಧೃತರಾಷ್ಟ್ರಂ—ವೀರಶತಜನನಿಗೀ ಗಾಂ
ಧಾರಿಗೆ ದುಃಖಶತಜನನಿವೆಸರಾಯ್ತಿಾಗಳ್
ಕೌರವಪತಿ, ದುಃಖಮಹಾ
ಭಾರಮನಾಂತಾಯುಸಕ್ಕೆ ಗುಱಿಯಾದುದೞಿಂ ೬೫

ಈಕೆಯಂ ಸಂತೈಸುವುದು ನಿನಗೆ ಧರ್ಮಂ. ಚಲದಿಂದೇನಪ್ಪುದು ?
ನಿನ್ನ ತಮ್ಮಂದಿರಾದುದಂ ಕಂಡು ತನ್ನ ತಮ್ಮಂದಿರ್ಗೆ ಬೆದಱಿ

ಧರ್ಮಜಂ ಸಂಧಿಮಾಡಲ್ ಬಗೆದಂ. ನೀನೊಪ್ಪುವುದು ತಡಂ, ಸಂಧಿಯಕ್ಕುಂ.

ಸಂಜಯಂ—ಯುಕ್ತಮಿದು ; ಕೈಕೊಳ್ ನಿನ್ನ ತಂದೆ ಯೆಂದುದಂ.

ದುರ್ಯೋಧನಂ—ನಿಮ್ಮ ಪೂರ್ವಪಕ್ಷಮೇ ನಮಗೆ ಸಿದ್ಧಾಂತಂ.

ತನ್ನೊಡವುಟ್ಟಿದರ್ ಪೆಸರ ನಾಲ್ವರೊಳೊರ್ವರುಮಿಲ್ಲದಿರ್ದೊಡಂ
ತನ್ನಸುವಂ ನಿವೇದಿಸುವನಗ್ನಿಗೆ ಧರ್ಮತನೂಜನೆಂದೊಡಾ
ನೆನ್ನೊಡವುಟ್ಟಿದರ್ ಪೆಸರ ನೂರ್ವರೊಳೊರ್ವರುಮಿಲ್ಲ ಬಾಳ್ವೆನೆಂ
ಬೆನ್ನಱಿಯಾಸೆಯುಂ ಬಿಸುಡಿಮೆನ್ನವರಾದುದನಾಗದಿರ್ಪನೇ ೬೬

ಸಾಧಿಸುವೆಂ ಫಲ್ಗುಣನಿಂ
ಸಾಧಿಸುವೆಂ ಪವನಸುತನ ಬಸಿಱಿಂ ಹಾ ಕ
ರ್ಣಾ ! ದುಶ್ಶಾಸನ ! ತೆಗೆವೆಂ,
ಸಾಧಿಸಿ ನಿರ್ದೋಷಿಯಮುಜನೊಳ್ ಪುದುವಾಳ್ವೆಂ ೬೭

ಅಮ್ಮಗನೆ ನಿಮಗೆ ಧರ್ಮಜ
ನೇಮ್ಮಗನಲ್ಲನೆ ಬೞಿಕ್ಕೆ ನೀಮುಂ ತಾಮುಂ
ನಿಮ್ಮೊಳ್ ನೇರ್ಪಡುಗಿಡದೆ ಸು
ಖಮ್ಮಿನ್ನಿನ ತೆಱದೆ ಬಾೞ್ವುದಿನ್ ಬಿಡಿಮೆನ್ನಂ ೬೮

ಧೃತರಾಷ್ಟ್ರಂ—ನೀನೆಂತುಂ ಎಮ್ಮ ಪೇೞ್ವುದಂ ಕೈಕೊಳ್ಳದೆ ವೈರಮನೆ ಕೈಕೊಂಡು ಪಾಂಡುನಂದನರೊಳ್ ಕಾದಿದಲ್ಲದೆ ಸಂಧಿಯನೊಡಂಬಡೆಯಪ್ಪಿನಂ ನೀನೆಮಗಿನಿತನೊಳ್ಳಿಕೈಯಲ್ವೇೞ್ಪುದು. ನೆಗೞ್ವಕಜ್ಜಮಾವುದುಮಂ ನಿಮ್ಮಜ್ಜನೊಳಾಲೋಚಿಸಿ ನೆಗೞ್ವುದು. ಇದೊಂದಂ ಮಾಡು.

ದುರ್ಯೋಧನಂ— ಮಹಾಪ್ರಸಾದಂ.

# ನೆನಪು.

“ ಮೂರ್ತಿ, ಇದೇನು ಗಂಟುಕಟ್ಟುತ್ತಿದ್ದೀಯೆ ! ”

“ ನಾನೀಗಲೇ ಹೊರಡಬೇಕು ; ಡ್ರೈವರ್ ಪೇಟೆಕಡೆಗೆ ಹೋಗಿದ್ದಾನಂತೆ. ಯಾರನ್ನಾದರೂ ಕಳುಹಿಸು ”

“ ಅದೆಲ್ಲಾ ಆಗುವದಿಲ್ಲ ; ಹುಚ್ಚನಹಾಗೆ ಆಡಬೇಡ. ಈ ಸರಿರಾತ್ರಿಯಲ್ಲಿ ನೂರಾರುಮೈಲಿ ಮೋಟಾರಿನಲ್ಲಿ ಹೋಗುವದೆಂದರೇನು ? ”

“ ಹೋಗದೆ ಏನು ? ಬರುವಾಗ ಬರಲಿಲ್ಲವೇ ? ”

“ ಬರುವಾಗ ನಾನು ಜತೆಯಲ್ಲಿದ್ದೆ ; ಬಹಳ ಕೆಟ್ಟದಾರಿ. ಮಧ್ಯದಲ್ಲಿ ತಲೆ ಹೊಡೆದುಹಾಕಿದರೂ ಕೇಳುವರಿಲ್ಲ ”

“ ಏನು ರಾಜ ! ಮೊಟಾರನ್ನು ಅಡ್ಡಗಟ್ಟಿ ? ಏನೇ ಆಗಲಿ ನಾನು ಹೊರ ಡಲೇಬೇಕು.”

“ ಆಗುವದಿಲ್ಲವೆಂದು ಹೇಳಲಿಲ್ಲವೆ ? ಬೆಳಿಗ್ಗೆ ಅಷ್ಟುಹೊತ್ತಿಗೆ ಎದ್ದು ಬೇಕಾ ದರೆ ಹೊರಡು. ಈ ಸಮರಾತ್ರಿಯಲ್ಲಿ ಕಕ್ಷಿಗಾರರು ಯಾರೂ ಹುಡುಕಿಕೊಂಡು ಬರುವದಿಲ್ಲ.”

“ ರಾಜ ! ಹೀಗೆ ಅಡ್ಡಿಮಾಡಬೇಡ. ಮೊದಲೇ ಹೇಳಿದಂತೆ ನಿನ್ನೆರಾತ್ರಿಯೇ ಹೊರಡಬೇಕಾಗಿತ್ತು. ಈಗ ನನಗಿಲ್ಲಿ ಏನುಕೆಲಸ ? ”

“ ಕೆಲಸವೇ ? ಇದೆ. ಆಮೇಲೆ ಹೇಳುತ್ತೇನೆ. ಮೊದಲು ಕೈಕಾಲು ತೊಳೆ ದುಕೋ.”

“ ರಾಜ, ಎಲ್ಲಾ ಆಗದ ಮಾತು. ನಾನು ಹೊರಡಲೇಬೇಕು. ನಿನ್ನ ಕೆಲ ಸವೇನು ಹೇಳು ”

“ ಸ್ವಲ್ಪ ಮಾತನಾಡಬೇಕಾಗಿದೆ.”

“ ಅದು ನನಗೆ ಗೊತ್ತು. ಆದರೆ ಆ ಮಾತನ್ನೆತ್ತಬೇಡ.”

“ ಹೀಗೆ ಹೇಳುತ್ತಲೇ ಎಂಟುವರ್ಷಗಳನ್ನು ಕಳೆದುದಾಯಿತು. ಇಷ್ಟು ದಿನವೂ ನೀನು ಹೇಳಿದಂತೆ ನಾನಾವ ಪ್ರಸ್ತಾಪವನ್ನೂ ಮಾಡಲಿಲ್ಲ; ಇವತ್ತು ನಡೆದು ದನ್ನು ನೋಡಿ ನಾನದನ್ನು ತಿಳಿಯಬೇಕೆಂದು ಮಾಡಿದ್ದೇನೆ. ನಾನಿನ್ನು ತಾಳಲಾರೆ.”

“ ಅದೆಲ್ಲಾ ಕಟ್ಟಿಕೊಂಡೇನು ? ಹೋಗುವದಕ್ಕೆ ಅಡ್ಡಿಮಾಡಬೇಡ.”

"ನಾನು ಅಡ್ಡಿಮಾಡುವದಿಲ್ಲ. ನನ್ನನ್ನು ಈ ವ್ಯಾಕುಲಕ್ಕೆ ಗುರಿಮಾಡಿ ಹೋಗಬೇಡವೆಂದು ಬೇಡಿಕೊಳ್ಳುತ್ತೇನೆ. ಮೂರ್ತಿ, ನಿನ್ನನ್ನು ಕರೆದುಕೊಂಡು ಬಂದುದೇ ತಪ್ಪಾಯಿತೆ?"

"ಅದೇನೂ ಇಲ್ಲ; ನಿನ್ನಿಂದಲೇ ಬಹಳ ಉಪಕಾರವಾಯಿತು. ಆದರೂ ನಾನೀಗ ನಿಲ್ಲಲಾರೆ."

"ಅಯ್ಯೋ ಮೂರ್ತಿ! ನಿನ್ನ ಎದೆ ಎಷ್ಟು ಕಲ್ಲಾಗಿದೆಯೋ? ನಿನಗೀಸ್ಥೈರ್ಯವೆಲ್ಲಿಂದ ಬಂತೊ? ನನ್ನ ಕಾತರವನ್ನು ಕಂಡೂ ಸುಮ್ಮನಿದ್ದೀಯಲ್ಲೊ? ಮೂರ್ತಿ ......" ಎಂದು ಕಣ್ಣೀರಿಡುವದಕ್ಕೆ ಪ್ರಾರಂಭಮಾಡಲು ಮೂರ್ತಿಯು ರಾಜನನ್ನು ಮಂಚದಮೇಲೆ ಕುಳ್ಳಿರಿಸಿಕೊಂಡು "ರಾಜ! ಹೀಗೆ ಹೆಂಗಸರ ಹಾಗೆ ಅತ್ತರೆ ಆದೀತೆ? ನನ್ನನ್ನು ನೋಡು. ನಾನೆಲ್ಲವನ್ನೂ ಆಗಲೇ ಮರೆತುಬಿಟ್ಟೆ. ಮನಸ್ಸು ಸ್ವಲ್ಪ ಅಶಾಂತವಾಗಿದೆ. ಆದುದರಿಂದ ಮನೆಗೆ ಹೋಗಬೇಕು. ಹೋಗಲೇ ಬೇಕು" ಎಂದನು.

"ಮೂರ್ತಿ! ನಿನಗೆ ಹೇಳುವ ಶಕ್ತಿ ನನ್ನಲ್ಲಿಲ್ಲ. ಏನು ಬೇಕಾದರೂ ಮಾಡು. ಆದರೆ ನಾವು ಹೊಳೆಯಹತ್ತಿರ ನೋಡಿದೆವಲ್ಲಾ ಆಕೆ ಯಾರೆಂದು ಮಾತ್ರ ಹೇಳು. ಅಷ್ಟು ದಯೆಮಾಡು."

"ಹೇಳುತ್ತೇನೆ ರಾಜ. ಅದೆಲ್ಲಾ ಹೇಳುತ್ತೇನೆ. ಈಗ ಬೇಡ. ಡ್ರೈವರು ಬಂದನೆ ನೋಡು."

"ಹಿಂದೆ ನಡೆದುದನ್ನು ಹೇಳಬೇಡ. ಆಕೆಯ ಹೆಸರನ್ನೂ ಹೇಳಕೂಡದೆ? ನಿನ್ನ ಸ್ನೇಹಿತನಾದಮೇಲೆ ಅಷ್ಟೂ ಬೇಡವೆ? ನಿನಗೆ ತೀರ ಸಂಕಟವಾದರೆ ಬಿಡು. ನನಗೂ ಸಂಕಟವಾಗಬಾರದೆಂದು ನಿನ್ನ ಮನಸ್ಸಿನಲ್ಲಿದ್ದರೆ ಹೆಸರು ಮಾತ್ರ ಹೇಳು."

"ಆಗಲಿ. ಆಕೆಯ ಹೆಸರು ರಮಾ......" ಎಂದು ಹೇಳುತ್ತಿದ್ದ ಹಾಗೆಯೇ ಅವನ ಕಣ್ಣುಗಳಿಂದ ನೀರು ಸುರಿಯಿತು ರಾಜನಿಗೆ ಏನೂ ತಿಳಿಯದೆ ದೊಡ್ಡದಾಗಿ ಕಣ್ಣುಬಿಟ್ಟು ಮಾತಿಲ್ಲದೆ ಕುಳಿತುಬಿಟ್ಟನು. ಅಷ್ಟುಹೊತ್ತಿಗೆ ಡ್ರೈವರು ಬಂದನು. ರಾಜನ ತಂದೆತಾಯಿಗಳು ಅಂಗಲಾಚಿಕೊಂಡರೂ ನಿಲ್ಲದೆ ರಾತ್ರಿ ಹತ್ತು ಗಂಟೆಗೆ ಮೂರ್ತಿಯು ಹೊರಟೇಹೋದನು.

ಹೋಗುವದಕ್ಕೆ ಮುಂಚೆ ಚಿನ್ನದ ಪದಕ ಹಾಕಿದ ಒಂದೆಳೆಯ ಹಾರವನ್ನು ರಾಜನ ಕೈಗೆ ಕೊಟ್ಟು ಆದನ್ನು ಹುಡುಗನ ಕತ್ತಿಗೆ ಹಾಕಬೇಕೆಂದು ಹೇಳಿದನು. ಆ ಪದಕದ ಒಂದುಕಡೆ ಅವನ ಹೆಸರೂ ಮತ್ತೊಂದುಕಡೆ "ಕರ್ಣಾಟಕ ವಿದ್ಯಾಪೀಠ ಕವಿತಾಸ್ಪರ್ಧೆ ೧೯" ಎಂದೂ ಬರೆದಿತ್ತು.

(೨)

ಮೂರ್ತಿಯೂ ರಾಜನೂ ಬೊಂಬಾಯಿನಲ್ಲಿ ಎಲ್‌ಎಲ್.ಬಿ. ಪರೀಕ್ಷೆಗೆ ಓದುತ್ತಿದ್ದಾಗ ಸ್ನೇಹಿತರಾದರು. ಆ ಸ್ನೇಹವು ಬೆಳೆಯಿತು. ಈಗ ಇಬ್ಬರೂ ದೊಡ್ಡವಕೀಲರು. ಮೂರ್ತಿಯು ತನ್ನ ಜನ್ಮಸ್ಥಳವಾದ...ಲ್ಲಿ ನಿಂತು ಅಲ್ಲಿ ಇಪ್ಪತ್ತೈದುಸಾವಿರ ರೂಪಾಯಿ ಮುಟ್ಟಿಸಿ ತನ್ನ ಮನಸ್ಸಿಗೊಪ್ಪುವಂತೆ ದೊಡ್ಡ ಬಂಗಲೆಯನ್ನು ಕಟ್ಟಿ, ಉದ್ಯಾನವನ್ನು ರಚಿಸಿದ್ದನು. ಮೊಟಾರು, ಕುದುರೆಗಾಡಿ, ಗುಮಾಸ್ತರು, ಅಡಿಗೆಯವರು ಆಳುಕಾಳುಗಳಿಗೆ ಕೊರತೆಯಿರಲಿಲ್ಲ. ಅನೇಕ ಅನಾಥಬಾಲಕರನ್ನು ಮನೆಯಲ್ಲಿಟ್ಟುಕೊಂಡು ಅನ್ನವಸ್ತ್ರಗಳನ್ನು ಕೊಟ್ಟು ಓದಿಸುತ್ತಿದ್ದನು. ಅವನ ಮನೆಯೊಂದು ಅನ್ನಸತ್ರವಾಗಿತ್ತು. ಆದರೆ ಅವೆಲ್ಲಕ್ಕೂ ಭೂಷಣಳಾದ ಗೃಹದೇವತೆಯು ಮಾತ್ರ ಇರಲಿಲ್ಲ. ಯಾರು ಎಷ್ಟು ಹೇಳಿದರೂ ಅವನು ವಿವಾಹವಾಗಲಿಲ್ಲ.

ರಾಜನು ಇದ್ದದ್ದು ಶ್ರೀಪುರ. ಅವನು ಮೂರ್ತಿಯಂತೆ ಪ್ರಸಿದ್ಧನಾಗದಿದ್ದರೂ ಬೇಕಾದಹಾಗೆ ಸಂಪಾದಿಸುತ್ತಿದ್ದನು. ಮೂರ್ತಿಯ ಉಪದೇಶದಂತೆ ದೇಶಸೇವೆಯಲ್ಲಿ ಆಸಕ್ತನಾಗಿದ್ದನು. ಯಾವ ರಾಜಕರಣವನ್ನು ಕೈಕೊಳ್ಳಬೇಕಾದರೂ ಮೂರ್ತಿಯ ಅನುಮತಿಯನ್ನು ಪಡೆಯುವನು. "ನ್ಯಾಯವಿಧಾಯಕಸಭೆಯಲ್ಲಿ ಅಧಿಕಾರಿಗಳು ಅಲುಗಾಡುವಂತಹ ಪ್ರಶ್ನೆಗಳನ್ನು ರಾಜನು ಕೇಳುವುದಕ್ಕೆ ಮೂರ್ತಿಯೇ ಕಾರಣನೆಂದು ಎಲ್ಲರೂ ನಂಬಿದ್ದರು.

ರಾಜನು ಈಗ ಮೂರು ಮಕ್ಕಳ ತಂದೆ. ಮೊದಲಮಗ ಚಕ್ರಪಾಣಿಗೆ ಬೇಸಗೆಯ ರಜಾದಲ್ಲಿ ಚೌಲವನ್ನು ನೆರವೇರಿಸಬೇಕೆಂದು ನಿಶ್ಚಯಿಸಲು, ಮೂರ್ತಿಯನ್ನು ಕರೆತರಬೇಕೆಂದು ತಂದೆ ತಾಯಿಗಳೂ ಹೇಳಿದರು. ಕಾಗದ ಬರೆದರೆ ಮೂರ್ತಿ ಎಂದಿಗೂ ಬರುವನಲ್ಲ ; ಆದುದರಿಂದ ರಾಜನು ತಾನೇ ಹೋದನು.

ರಾಜನ ಅನಿರೀಕ್ಷಿತ ಆಗಮನದಿಂದ ಮೂರ್ತಿಗೆ ಬಹು ಸಂತೋಷವಾಯಿತು. ಬಂದುದರ ಕಾರಣವೇನೆಂದು ಅವನು ಕೇಳಲಿಲ್ಲ ; ರಾಜನೂ ಹೇಳಲಿಲ್ಲ. ಸಾಯಂಕಾಲ ಮೂರ್ತಿಯು ಸಂಧ್ಯಾವಂದನೆ ದೇವರಪೂಜೆ ಮಂಗಳಾರತಿ ಮಾಡುವುದಕ್ಕಾಗಿ (-ಅವನಲ್ಲಿ ಇವುಗಳ ಕಲಾಪ ಸ್ವಲ್ಪ ಹೆಚ್ಚು-) ದೇವರಕೋಣೆಗೆ ಹೋಗಲು ರಾಜನು ಮಹಡಿಯಮೇಲಕ್ಕೆ ನಡೆದನು. ಅಲ್ಲಿ ಅವನ ಮನಸ್ಸನ್ನು ಅಪಹರಿಸುವ ಮೂರು ಸ್ಥಳಗಳಿದ್ದವು. ಮೊದಲನೆಯದು ಮೂರ್ತಿಯ ಪುಸ್ತಕಾಲಯ, ಎರಡನೆಯದು ಮಲಗುವಮನೆ, ಮೂರನೆಯದು ಅವನ ಏಕಾಂತಗೃಹ. ಏಕಾಂತಗೃಹಕ್ಕೆ

ಬೀಗಹಾಕಿದುದರಿಂದ ಪುಸ್ತಕಾಲಯಕ್ಕೆ ಹೋದನು. ಆಲಯದ ಮಧ್ಯದಲ್ಲಿ ಬಂದು "ನ್ಯಾಂಟಲ್‌ಲೈಟ್" ಉರಿಯುತ್ತಿತ್ತು. ಆ ಪ್ರಭೆಯಲ್ಲಿ, ಅಲ್ಲಿದ್ದ ಮೂವತ್ತು ನಾಲ್ವತ್ತು ಕನ್ನಡಿಬೀರೂಗಳಲ್ಲಿ ತುಂಬಿದ್ದ ಇಂಗ್ಲಿಷು ಕನ್ನಡ ಸಂಸ್ಕೃತ ಪುಸ್ತಕಗಳು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದ್ದವು. ನೆಲಕ್ಕೆ ಬೆಲೆಬಾಳುವ ರತ್ನ ಗಂಬಳಿ ಹಾಸಿತ್ತು. ಆಲಯದ ನಡುವಿನಲ್ಲಿ ಗುಂಡಾದ ಮೇಜಿಗೆ ಬನಾರಸಿ ಬಟ್ಟೆ ಯನ್ನು ಹಾಕಿ ಅಂದವಾದ ದೌತಿ ಲೇಖನಿ ಮತ್ತು ಇತರ ಬರೆಯುವ ಸಾಮಗ್ರಿ ಗಳನ್ನು ಇಟ್ಟಿದ್ದರು. ಗೋಡೆಗಳಲ್ಲಿ ದೇಶಭಕ್ತರ ಕವಿಗಳ ಮತ್ತು ಭಗವದ್ಭಕ್ತರ ಭಾವಚಿತ್ರಗಳು ಕಟ್ಟಿದ್ದುವು. ಒಂದುಕಡೆ ಎರಡು ಮೂರು ಬೀರೂಗಳಲ್ಲಿ ಗಂಧದ ಮರದ ಸಾಮಾನುಗಳೂ ಶಿಲಾವಸ್ತುಗಳೂ ಇದ್ದು, ವಸ್ತುಪ್ರದರ್ಶನಶಾಲೆಯ ನೆನಪನ್ನು ತರುತ್ತಿದ್ದವು. ಮೂರ್ತಿಯು ತರಿಸುತ್ತಿದ್ದ ಪತ್ರಿಕೆಗಳೆಲ್ಲವನ್ನೂ ಒಂದು ಮೇಜಿನಮೇಲಿಟ್ಟಿದ್ದರು. ಅಲ್ಲಿದ್ದ ಕುರ್ಚಿಗಳು ಬಹು ನಾಜೋಕಾಗಿಯೂ, ಬೆಲೆ ಬಾಳತಕ್ಕವಾಗಿಯೂ ಇದ್ದವು. ಒಂದು ಕಡೆಯ ಬಾಗಿಲನ್ನು ತೆರೆದರೆ ಬಿಸಲು ಮಾಳಿಗೆಗೆ ಹೋಗುತ್ತದೆ. ಅಲ್ಲಿ ಇದ್ದರೆ ಸ್ವಪ್ನವನ್ನು ನೋಡುವಹಾಗೆ ಭಾಸವಾ ಗುತ್ತದೆ.

ಮೂರ್ತಿಯ ಶಯ್ಯಾಗೃಹವೂ ಆದೇರೀತಿಯ ವೈಭವವನ್ನು ಸೂರೆಗೊಳ್ಳು ವದು. ಬಾಗಿಲನ್ನು ತೆರೆಯುತ್ತಲೇ ಶ್ರೀ ತಿರುಪತಿವೆಂಕಟೇಶನ ದಿವ್ಯಚಿತ್ರವು ಕಣ್ಣಿಗೆ ಬೀಳುವದು. ಒಂದು ಮಗ್ಗುಲಲ್ಲಿ ಕರೀಮರದ ಮಂಚ; ಮಂಚದಮೇಲೆ ಬನಾರ ಸಿಯ ಸುಪ್ಪತ್ತಿಗೆ, ಕಾಶ್ಮೀರದಶಾಲು, ಪರ್ಷಿಯೊದ ರಗ್ಗು, ಸೊಳ್ಳೆಯಪರದೆ; ನೆಲಕ್ಕೆ ಸಾಧಾರಣವಾದ ಜಮುಕಾನೆ; ಮಂಚದ ಎದುರಿಗೆ ನಿಲುವುಗನ್ನಡಿಯನ್ನು ಹಾಕಿದ ಮೇಜು; ಮೇಜಿನ ಪಕ್ಕದಲ್ಲಿ ಕನ್ನಡಿ ಕೂಡಿಸಿದ ಬಾಗಿಲುಳ್ಳ ಬೀರೂವಿ ನಲ್ಲಿ ಮೂರ್ತಿಯ ಉಡುಪುಗಳಿದ್ದವು. ಮೇಜಿಗೂ ಮಂಚಕ್ಕೂ ಮಧ್ಯೆ ಗೋಡೆಯ ಬಳಿಯಲ್ಲಿ ಒಂದು ವ್ಯಾಘ್ರಾಸನ; ಮೂರ್ತಿಯು ಮಂಚವನ್ನು ಮೆಟ್ಟದೆ ವ್ಯಾಘ್ರಾ ಸನದ ಮೇಲೆ ಮಲಗುವನು.

ಊಟ ತಾಂಬೂಲಗಳಾದಮೇಲೆ ರಾಜನು ಮೂರ್ತಿಯ ಶಯ್ಯಾಗೃಹದ ಲ್ಲಿಯೇ ಮಲಗಿಕೊಂಡು ಮಾತನಾಡುತ್ತ ತಾನು ಬಂದ ಉದ್ದೇಶವನ್ನು ಹೇಳಿದನು. ಮೂರ್ತಿಯು ಎಂದಿನಂತೆ ಹೊರಡಲು ಸಮ್ಮತಿಸಲಿಲ್ಲ. ರಾಜನು ಬಿಡಲಿಲ್ಲ. ಕೆಲವು ಹೊತ್ತು ಚರ್ಚೆನಡೆದು ಮಾರನೆಯದಿನ ರಾತ್ರಿ ಮೋಟಾರಿನಲ್ಲಿ ಹೊರಟು ಚೌಲದ ದಿನ ಬೆಳಗ್ಗೆ ಶ್ರೀಪುರಕ್ಕೆ ಹೋಗಿ, ಅಂದು ರಾತ್ರಿ ಆರತಿಯಾದೊಡನೆಯೇ ಕಳುಹಿ

ಸುವದಾದರೆ ಹೊರಡುವದಾಗಿ ಹೇಳಿದನು. ರಾಜನು ಅಷ್ಟಕ್ಕೇ ಸಂತೋಷಪಟ್ಟು ಊರಿಗೆ ಟೆಲಿಗ್ರಾಂ ಕೊಟ್ಟನು.

ಮೂರ್ತಿ ಬರುವ ಸಮಾಚಾರವು ಕ್ಷಣದಲ್ಲಿ ಶ್ರೀಪುರವನ್ನು ಹಬ್ಬಿತು. ಅವನು ಹಜಾರದಲ್ಲಿ ಕುಳಿತು ನಗುಮುಖದಿಂದ ಸರಸವಾಗಿ ಬಂದವರೊಡನೆ ಮಾತನಾಡಿದನು. ಊಟವಾಗಿ ತಾಂಬೂಲ ತೆಗೆದುಕೊಳ್ಳುವಾಗ ಆ ಊರಿನ ವಯೋವೃದ್ಧ ವಕೀಲ ಕೋದಂಡರಾಮರಾಯರು, ಮೂರ್ತಿಯನ್ನು ಒಂದು ಉಪನ್ಯಾಸಕೊಡುವಂತೆ ಕೇಳಿಕೊಂಡರು. ಎಂದಿನಂತೆ ಮೂರ್ತಿಯು ಒಡಂಬಡಲಿಲ್ಲ. ಆದರೆ ಸೇರಿದ ಜನರು ಕೇಳದೆ ಹಟಮಾಡಲು ಮಾರನೆಯ ದಿನ ಪ್ರಾತಃಕಾಲ ಉಪನ್ಯಾಸವು ಏರ್ಪಾಡಾಯಿತು.

" ಟೌನ್‌ಹಾಲ್ " ನಲ್ಲಿ ಉಪನ್ಯಾಸವನ್ನು ಕೇಳಲು ಬಂದವರ ಸಂತೆ. ಮೂರ್ತಿಯು " ಭಕ್ತಿ " ಯನ್ನು ಕುರಿತು ಒಂದೂವರೆಗಂಟೆಯ ಕಾಲ ಗಂಭೀರ ವಾಣಿಯಿಂದ ಚಮತ್ಕಾರವಾಗಿಯೂ ಸರಸವಾಗಿಯೂ ಉಪನ್ಯಾಸಮಾಡಿ ಎಲ್ಲರ ಮನಸ್ಸನ್ನೂ ಆಕರ್ಷಿಸಿಬಿಟ್ಟನು. ಎಲ್ಲಿ ಯಾರ ಬಾಯಲ್ಲಿಯೂ ಮೂರ್ತಿಯ ಮಾತೇ ಮಾತು.

ಅಂದು ಮಧ್ಯಾಹ್ನ ಮೂರ್ತಿಯು ತನ್ನ ಮನಸ್ಸಿಗೇಕೋ ಕಳವಳ ಉಂಟಾಗಿರುವದೆಂದೂ, ಜನರು ಬಂದು ನೆರೆಯುವದಕ್ಕೆ ಮುಂಚಿತವಾಗಿ ಎಲ್ಲಿಗಾದರೂ ಹೋಗಿದ್ದು, ಆರುಗಂಟೆಗೆ ಹೊರಡಬೇಕೆಂದೂ ಹೇಳಲು, ರಾಜನು ಆರುಮೈಲಿ ದೂರದಲ್ಲಿದ್ದ ಶ್ರೀರಾಮಗಿರಿ ಎಂಬ ಬೆಟ್ಟಕ್ಕೆ ಹೋಗಬಹುದೆಂದು ಹೇಳಿದನು. ತಿರುಗಿ ಬರುವಾಗ ಶ್ರೀಪುರಕ್ಕೆ ಅರ್ಧಮೈಲು ದೂರದಲ್ಲಿ ಹರಿಯುವ ತುಂಗಾನದಿಯನ್ನು ಕಂಡು ಮೂರ್ತಿಯು ಮೋಟಾರನ್ನು ಮನೆಗೆ ಕಳುಹಿಸಿ ನದಿಯ ಸೊಬಗನ್ನು ನೋಡುತ್ತ ರಾಜನೊಂದಿಗೆ ನಡೆದುಕೊಂಡು ಬರುತ್ತಿದ್ದನು.

ಸಂಧ್ಯಾಕಾಲವು ಮನೋಹರವಾಗಿತ್ತು. ಸೂರ್ಯನ ಆರಕ್ತವಿಶಾಲಬಿಂಬವು ರಾಮಗಿರಿಯ ಹಿಂದೆ ಸ್ವಲ್ಪಸ್ವಲ್ಪವಾಗಿ ಅದೃಶ್ಯವಾಗುತ್ತಿತ್ತು. ಗಿರಿಯ ತಪ್ಪಲನ್ನು ಬಳಸಿಕೊಂಡು ಹರಿಯುತ್ತಿದ್ದ ತುಂಗೆಯ ನಿರ್ಮಲೋದಕದಲ್ಲಿ ಪ್ರತಿಫಲಿಸಿದ ಸಂಧ್ಯಾರಾಗರಂಜಿತ ಪಶ್ಚಿಮಾಕಾಶವು ತೆಳುವಾದ ಅಲೆಗಳೊಂದಿಗೆ ಕಂಪಿಸುವಂತೆ ತೋರುತ್ತಿತ್ತು. ನದೀತೀರದಲ್ಲಿದ್ದ ತೋಪಿನಲ್ಲಿ ಕೋಕಿಲೆಯು ಹೃದಯಂಗಮವಾಗಿ ಸ್ವರಗೈಯುತ್ತಿತ್ತು. ವಿಶಾಲವಾದ ಮರಳಲ್ಲಿ ಜನರು ಸಂಧ್ಯಾಸಮೀರಣವನ್ನು ಸೇವಿಸುತ್ತ ಆನಂದಿಸುತ್ತಿದ್ದರು. ದೂರದಲ್ಲಿ ಯಾರೋ ಮನೋಹರವಾಗಿ

ತೀರವಿಲ್ಲದ ಮೋಹವಾರಿಧಿಯ ನಾನೇರಿ
ದಾರಿಗಾಣದಪಾರಪರಿತಾಪಪಡುವೆ ||ಪ||

ಎಂದು ಪ್ರೇಮಗೀತೆಯೊಂದನ್ನು ಹಾಡುತ್ತಿದ್ದರು. ಮೂರ್ತಿ ಅದನ್ನು ಕೇಳುತ್ತ ಸ್ವಲ್ಪಹೊತ್ತು ನಿಂತನು. ಸೋಪಾನದ ಬಳಿಗೆ ಬರಲು ಅದರ ಕೊನೆಯಲ್ಲಿ ಹೆಂಗಸೊಬ್ಬಳು ಯಾರೊಡನೆಯೂ ಸೇರದೆ ಒಂದುಹೊರೆ ಬಟ್ಟೆಯನ್ನು ಭುಜದಮೇಲೆ ಹಾಕಿಕೊಂಡು ಕಂಕುಳಲ್ಲಿ ದೊಡ್ಡದೊಂದು ಕೊಡವನ್ನು ಇಟ್ಟುಕೊಂಡು ಮೇಲುಸಿರು ಬಿಡುತ್ತಾ ಸೋಪಾನವನ್ನು ಹತ್ತಿಬರುತ್ತಿದ್ದಳು. ದುಃಖದಿಂದ ಅತ್ತು ಸಮಾಧಾನ ಮಾಡಿಕೊಂಡು ಹೊರಟಿರಬೇಕೆಂದು ಅವಳ ಕೆಂಪಾದ ಕಣ್ಣುಗಳಿಂದಲೂ, ಬಾಡಿದ ಮುಖದಿಂದಲೂ ಗೊತ್ತಾಗುತ್ತಿತ್ತು. ಮೂರ್ತಿಯು ಅವಳನ್ನು ನೋಡಿ ತಟ್ಟನೆ ನಿಂತುಬಿಟ್ಟನು. ರಾಜನು ಏನೋ ಯೋಚನೆಮಾಡುತ್ತಾ ಮುಂದೆ ಹೋದವನು ತಿರುಗಿ ನೋಡಿದಾಗ ಮೂರ್ತಿಯು ಆಕೆಯನ್ನು ಎವೆಯಿಕ್ಕದೆ ನೋಡುತ್ತಿರಲು ಸ್ತಂಭಿತನಾಗಿ ನಿಂತುಬಿಟ್ಟನು.

ಎತ್ತರವಾದ ಮೆಟ್ಟಲನ್ನು ಹತ್ತಲಾರದೆ ಆಕೆಯು ತಲೆ ಎತ್ತಿದಾಗ ಮೂರ್ತಿಯನ್ನು ನೋಡಿದಳು. ಒಂದು ಕ್ಷಣ ದೃಷ್ಟಿಸಿ ನೋಡಿ ತಲೆತಗ್ಗಿಸಿದಳು. ಪುನಃ ತಲೆ ಎತ್ತಿ ನಿರ್ಲಜ್ಜೆಯಾಗಿ ನೋಡುತ್ತ ನಿಂತಳು. ಚಂದ್ರೋದಯವಾಗಿ ಬೆಳದಿಂಗಳು ಬಿದ್ದಿದ್ದರೂ ಇಬ್ಬರೂ ಶಿಲಾಪ್ರತಿಮೆಗಳಂತೆ ನಿಂತುನೋಡಿದರು. ಇಬ್ಬರ ಮುಖಗಳೂ ವಿಲಕ್ಷಣವಾದುವು. ಅಷ್ಟುಹೊತ್ತಿಗೆ ಸೋಪಾನದ ದೀಪವನ್ನು ಹೊತ್ತಿಸಲು ಲಾಂದ್ರದವನು ಏಣಿಯನ್ನು ರಭಸದಿಂದ ಇಡಲು ಮೂರ್ತಿಯು ಎಚ್ಚರಗೊಂಡು ಹುಚ್ಚುಹಿಡಿದವನಂತೆ ಮನೆಯಕಡೆಗೆ ಬಿರಬಿರನೆ ಹೊರಟುಹೋದನು. ರಾಜನು ಕೂಗಿದರೂ ನಿಲ್ಲದಿರಲು ಹಿಂದೆ ನಿಂತು ಆಕೆಯು ಕಣ್ಣೊರಸಿಕೊಳ್ಳುತ್ತಾ ಒಂದೊಂದೇ ಮೆಟ್ಟಲನ್ನು ಹತ್ತಲಾರದೆ ಹತ್ತುತ್ತಿರುವದನ್ನು ನೋಡಿದನು. ಆಕೆಯು ರೂಪವತಿ ; ಆದರೆ ಆ ರೂಪವು ಸ್ಫುಟವಾಗಿರಲಿಲ್ಲ. ಮಾಂಗಲ್ಯ ಒಂದಲ್ಲದೆ ಮತ್ತಾವ ಆಭರಣವೂ ಇರಲಿಲ್ಲ. ಸೆರಗು ಹರಿದುಹಾಕಿದ ನೂಲಂಚಿನ ಕಪ್ಪುಸೀರೆಯನ್ನೇ ಒಪ್ಪವಾಗಿ ಉಟ್ಟಿದ್ದಳು. ರೇಷ್ಮೆಯ ಕುಚ್ಚಿನಂತಿದ್ದ ಕೂದಲನ್ನು ಅಸಡ್ಡೆಯಿಂದ ಬಾಚಿ ತುರುಬುಕಟ್ಟಿ ಒಂದುಚೂರು ಹೂಮಾಲೆಯನ್ನು ಮುಡಿದಿದ್ದಳು. ಆ ಸ್ಥಿತಿಯಲ್ಲಿಯೂ ಅವಳ ಮುಖದಲ್ಲಿ ಚಿಂತೆಯಿಂದ ಸೇರಿದ ಒಂದು ಅಪೂರ್ವ ಗಾಂಭೀರ್ಯವಿತ್ತು. ರಾಜನಿಗೆ ಯಾವುದೂ ತೋಚದೆ ಶೂನ್ಯಮನನಾಗಿ ಮನೆಗೆ ಬಂದಾಗ ಮೂರ್ತಿಯು ಹೊರಡಲನುವಾಗಿ ಗಂಟುಕಟ್ಟುತ್ತಿದ್ದನು. ಏನು ಹೇಳಿದರೂ ಕೇಳದೆ ರಾತ್ರಿಯೇ ಊರಿಗೆ ಹೊರಟುಹೋದನು.

(೩)

ಊರಿಗೆ ಹೋಗಿ ನಾಲ್ಕು ದಿನಗಳಾದರೂ ಮೂರ್ತಿಯಿಂದ ಕಾಗದವಿಲ್ಲ. ಅವನ ಸಮಾಚಾರವು ತಿಳಿಯದೆ ರಾಜನು ಕಾತರನಾದನು; ಕಾರ್ಯವಿರಕ್ತನಾದನು; ಮನಸ್ಸಿನ ಶಾಂತಿಯು ನಷ್ಟವಾಯಿತು; ಮನೆಯು ಶೂನ್ಯವಾದಂತೆ ತೋರಿತು; ಕೂತಲ್ಲಿ ನಿಂತಲ್ಲಿ ಮೂರ್ತಿಯೇ ಕಾಣತೊಡಗಿದನು; ತಾಯಿತಂದೆಗಳು ಚಿಂತಾಕ್ರಾಂತರಾದರು; ಅವನ ಹೆಂಡತಿ ಪದ್ಮಾವತಿಯು ಅಧೀರಳಾದಳು.

ಐದನೆಯ ದಿನ ರಾತ್ರಿ ರಾಜನು ಊಟದ ಶಾಸ್ತ್ರವನ್ನು ತೀರಿಸಿಕೊಂಡು ಮಲಗಿದನು; ನಿದ್ರೆಬರಲಿಲ್ಲ; ಕಳವಳವನ್ನು ಕಳೆಯಲು ಮಾಳಿಗೆಗೆ ಬಂದನು. ಬೇಸಗೆಯ ಚಂದ್ರನು ನೀಲಾಕಾಶದಲ್ಲಿ ಶುಭ್ರಜ್ಯೋತ್ಸ್ನೆಯನ್ನು ಬೀರುತ್ತ ರಾಜಿಸುತ್ತಿದ್ದನು. ಉತ್ತರ ಸಮುದ್ರದ ನೀಲಲೋಕದ ಮೇಲೆ ತೇಲುವ ಮಂಜುಗಡ್ಡೆಗಳಂತೆ ಕೆಲವು ಬಿಳಿಯಮೋಡಗಳು ತೇಲುತ್ತಿದ್ದವು. ಪ್ರಶಾಂತವಾದ ಬೆಳದಿಂಗಳಲ್ಲಿ ಪ್ರಕೃತಿದೇವಿಯು ನಿದ್ರಾಸಕ್ತ ಪ್ರಪಂಚವನ್ನು ಅವಲೋಕಿಸುತ್ತಿದ್ದಳು. ಗಾಳಿಯು ಮಂದಮಂದವಾಗಿ ಬೀಸುತ್ತಿತ್ತು. ಎಲೆಗಳ ಮರ್ಮರ ಶಬ್ದದೊಂದಿಗೆ ಮಂದಗಾಮಿನಿಯಾಗಿ ಹರಿಯುತ್ತಿದ್ದ ತುಂಗೆಯ ಕಲರವವು ಬೆರೆತು ಅವ್ಯಕ್ತಮಧುರವಾಗಿ ಕೇಳಿಸುತ್ತಿತ್ತು. ಶಾಂತಿಯನ್ನವಲೋಕಿಸುತ್ತಿದ್ದ ಪ್ರಕೃತಿದೇವಿಯ ಎದುರಿಗೆ ಶಾಂತಿಯನ್ನರಸುತ್ತಿದ್ದ ರಾಜನು ಯೋಚನೆಯಲ್ಲಿ ಮುಳುಗಿ ನೀರವವಾಗಿ ನಿಂತಿದ್ದನು. ಆಗ ರಸ್ತೆಯಮೇಲೆ ಪ್ರಕಾಶವಾದ ಬೆಳಕೊಂದು ಬೀಳಲು ರಾಜನು ಚಕಿತನಾದನು; ಅದರೊಂದಿಗೆ ನಿಶಿಯ ನೀರವತ್ವವನ್ನು ಭೇದಿಸಿ ಅವನ ಹೃದಯಕುಹರದಿಂದ ಸೆಲೆಗೊಡುವಂತೆ ಮೋಟಾರಿನ ಕಹಳೆಯ ಶಬ್ದವಾಯಿತು. ರಾಜನ ಕೈಕಾಲು ನಡುಗಿತು; ಕಳವಳವು ಹೆಚ್ಚಾಯಿತು. ಮರಳಿ ನೋಡುವ ಹೊತ್ತಿಗೆ ಮೋಟಾರು ಬಂದು ಅವನ ಮನೆಯ ಬಾಗಿಲಲ್ಲೇ ನಿಂತಿತು. ಓಡಿಹೋಗಿ ಬಾಗಿಲು ತೆಗೆದನು; ಅವನ ತಂದೆ ತಾಯಿಗಳು ಬಂದರು. ಪದ್ಮಾವತಿಯೂ ಬಂದುನಿಂತಳು. ಬಂದವನು ಮೂರ್ತಿಯ ಗುಮಾಸ್ತ ನರಸಿಂಗರಾಯನಾಗಿದ್ದನು.

ನರಸಿಂಗರಾಯನು ರಾಜನ ಕೈಗೆ ಒಂದು ಕಾಗದವನ್ನು ಕೊಟ್ಟನು. ಅದನ್ನೊಡೆದು ನೋಡಲು "ರಾಜ, ಈಗಲೇ ಮೋಟಾರಿನಲ್ಲಿ ಹುಡುಗರು ಮಕ್ಕಳನ್ನೂ ಅಣ್ಣ ಅಮ್ಮನನ್ನೂ ಕರೆದುಕೊಂಡು ಬಾ" ಎಂದು ಬರೆದಿತ್ತು. ರಾಮರಾಯರು ಅದನ್ನು ನೋಡಿ "ರಾಜ! ಯೋಚನೆ ಯಾಕೆ? ಹೋಗೋಣ ನಡಿ, ಅವನ ಮುಖದರ್ಶನವಾದರೂ ಆಗುತ್ತೆ" ಎನ್ನಲು, ರಾಜನು ಗುಮಾಸ್ತನನ್ನು ಕರೆಯಿಸಿ, ಕೆಲಸಗಳನ್ನು ಹೇಳಿ ಎಲ್ಲರೊಡನೆ ಹೊರಟನು.

ಮೋಟಾರಿನಲ್ಲಿರುವಾಗ ನರಸಿಂಗರಾಯನು ಮೂರ್ತಿಯು ಶ್ರೀಪುರದಿಂದ ಬಂದ ಮೊದಲ್ಗೊಂಡು ಹುಚ್ಚನಾಗಿದ್ದನೆಂದೂ, ಊಟತಿಂಡಿಯನ್ನು ಬಿಟ್ಟಿದ್ದನೆಂದೂ, ಶಯ್ಯಾಗೃಹ ಅಥವಾ ಏಕಾಂತಗೃಹವನ್ನು ಬಿಟ್ಟು ಹೊರಗೆ ಬರುತ್ತಿರಲಿಲ್ಲವೆಂದೂ, ಒಂದೊಂದುಬಾರಿ ನಡುರಾತ್ರಿಯಲ್ಲಿ ಎದ್ದು ಉದ್ಯಾನದಲ್ಲಿದ್ದ ಕೊಳದ ಸೋಪಾನದಮೇಲೆ ಕುಳಿತುಕೊಳ್ಳುವನೆಂದೂ, ಯಾರಾದರೂ ಹಿಂದೆ ಹೋದರೆ ಗದರಿಸಿ ಕಳುಹಿಸಿಬಿಡುತ್ತಿದ್ದನೆಂದೂ; ಅಂದು ಮಧ್ಯಾಹ್ನ ಅವನನ್ನು ಕರೆದು ಆ ಕಾಗದವನ್ನು ಕೊಟ್ಟು ಮೊಟಾರಿನಲ್ಲಿ ಹೊರಟುಹೋಗಬೇಕೆಂದು ಆಜ್ಞಾಪಿಸಿದುದರಿಂದ ತಾನು ಬಂದುದಾಗಿಯೂ ಹೇಳಿದನು.

ಬೆಳಗ್ಗೆ ಆರುಗಂಟೆಗೆ ಮೂರ್ತಿಯ ಮನೆಬಾಗಿಲಲ್ಲಿ ಮೊಟಾರು ನಿಲ್ಲಲು ರಾಜನು ಹಾರಿ ಓಡಿಹೋಗಿ ಶಯ್ಯಾಗೃಹದ ಬಾಗಿಲನ್ನು ತೆಗೆದುನೋಡಲು ಮೂರ್ತಿಯು ಅಸ್ತವ್ಯಸ್ತನಾಗಿ ಬಿದ್ದಿದ್ದನು. ಹೆಸರು ಹಿಡಿದು ಕೂಗುತ್ತಲೆ ತಿರುಗಿ ನೋಡಿದನು; ಮುಖದ ಮೇಲೆ ಮೊದಲಿನ ಆ ತೇಜಸ್ಸಿರಲಿಲ್ಲ; ವಿಕಾರವಾಗಿತ್ತು; ಕಣ್ಣುಗಳಿಂದ ಹರಿದ ನೀರು ಕೆನ್ನೆಗಳ ಮೇಲೆ ಆರಿ ಪಟ್ಟೆಪಟ್ಟೆಯಾಗಿತ್ತು. ಏಳುವ ಶಕ್ತಿಯೂ ಅವನಿಗಿರಲಿಲ್ಲ.

"ಅದ್ಯಾರು?

"ನಾನು ಮೂರ್ತಿ!"

"ಬಂದೆಯಾ ರಾಜ! ಬಾ. ಇದಾರು?"

"ಪದ್ಮ"

"ಅಣ್ಣನೆಲ್ಲಿ"

"ಇಗೋ ಮೂರ್ತಿ ಇಲ್ಲಿದ್ದೇನೆ" ಎಂದು ಹತ್ತಿರ ಬಂದರು.

"ಅಮ್ಮ?"

"ಮೂರ್ತಿ, ಏನು ಬೇಕಪ್ಪಾ"

"ಹುಡುಗರೆಲ್ಲಿ?"

"ಹೊರಗಿದ್ದಾರೆ ಕರೆದುಕೊಂಡುಬರಲೇ?"

"ಹುಂ"

ಹುಡುಗರನ್ನು ದಿಟ್ಟಿಸಿ ನೋಡಿದನು. "ರಾಜ" ಎಂದನು. ರಾಜನು ಅವನ ಕೈಹಿಡಿದುಕೊಂಡು ಏನೆಂದು ಕೇಳಿದನು. ಉತ್ತರವಿಲ್ಲ. ಸ್ವಲ್ಪಹೊತ್ತಾಗಲು ಪುನಃ "ರಾಜ" ಎಂದನು.

“ ಏನು ಮೂರ್ತಿ ! ”

“ ಇಲ್ಲಿ ಯಾರಿದ್ದಾರೆ ? ”

“ ಎಲ್ಲರೂ. ಅಮ್ಮ ಅಣ್ಣ ಪದ್ಮ ನರಸಿಂಗರಾಯ.”

“ ಅವರೆಲ್ಲರೂ ಹೊರಟುಹೋದಮೇಲೆ ಹೇಳು.”

ಎಲ್ಲರೂ ಹೊರಟುಹೋದರು. ರಾಜನು ಒಬ್ಬನೇ ಪಕ್ಕದಲ್ಲಿ ಕುಳಿತು “ ಮೂರ್ತಿ, ಏನುಬೇಕು ” ಎಂದನು.

“ ಸ್ವಲ್ಪ ನೀರು.” ರಾಜನು ಹಾಲು ಹಾಕಿ ತನಗೆ ಏನೋ ಹೇಳಬೇಕೆಂದಿರುವನೆಂದು ತಿಳಿದು “ ಮೂರ್ತಿ, ಏನಾದರೂ ಹೇಳಬೇಕೆ ? ” ಎಂದು ಕೇಳಿದನು.

“ ಹುಂ ”

“ ಹೇಳು ಮೂರ್ತಿ ! ಏನು ಬೇಕಾದರೂ ಮಾಡಿಕೊಡುತ್ತೇನೆ.”

“ ನಿನಗೆ ತೊಂದರೆಯಾಗುತ್ತೆ.”

“ ನಿಜವಾಗಿಯೂ ಇಲ್ಲ ಹೇಳು.”

“ ಬಹಳದಿನಗಳ ಹಿಂದೆ ನಿನಗೆ ಮಾತುಕೊಟ್ಟಿದ್ದೆ.”

“ ಯಾವುದು ? ”

“ ಒಂದುದಿನ ನನ್ನ ವಿಚಾರವನ್ನೆಲ್ಲಾ ಹೇಳುತ್ತೇನೆಂದು.”

“ ಮೂರ್ತಿ ! ಅದೆಲ್ಲಾ ಈಗ ಬೇಡ ; ಸ್ವಲ್ಪ ಗುಣವಾಗಲಿ. ಆಮೇಲೆ ಹೇಳುವಿಯಂತೆ.”

“ ಅಯ್ಯೋ ರಾಜ ! ನಿನಗೆ ಹುಚ್ಚು. ನಾನಿನ್ನು ಬದುಕುವುದಿಲ್ಲ. ನಿದಾನವಾಗಿ ಹೇಳುತ್ತೇನೆ ಕೇಳು.”

“ ನೀನು ಇಲ್ಲದುದನ್ನೆಲ್ಲಾ ಹೇಳಬೇಡ.”

“ ಸ್ವಲ್ಪ ನೀರು ” ರಾಜನು ಷರಬತ್ತು ಕೊಡಲು ಮೂರ್ತಿಯು ಹೇಳತೊಡಗಿದನು.

“ ರಾಜ, ಎಲ್ಲಾ ಮರೆತಿದ್ದೆ. ಈಗ ಮತ್ತೆ ಕಣ್ಣಮುಂದೆ ನಿಂತ ಹಾಗೆ ಆಗಿದೆ.”

“ ಏನು ? ”

“ ರಾಜ ! ನಾನು ಬಹಳ ಸುಖವಾಗಿದ್ದೆ ; ಅಪ್ಪನ ಹೆಸರು ಕೇಳಿದ್ದೆಯಾ ? ಬೇಕಾದ ಹಾಗೆ ಸಂಪಾದನೆ. ಅವರ ಕೆಲಸವನ್ನೇ ನಾನೂ ಮಾಡಿದೆ ರಾಜ ”

“ ಆ ”

“ ಅವರು ಮನೋರೋಗದಿಂದ ಸತ್ತರು. ರಾಜ ! ಮನೋರೋಗದಿಂದ.”

"ಯಾಕೆ?"

"ಅವರಿಗೆ ಅರುವತ್ತುವರ್ಷ; ಅಮ್ಮನಿಗೆ ಮುವ್ವತ್ತೇ ವರ್ಷ. ಮೊದಲ ಹೆಂಡತಿಯ ಮಕ್ಕಳಿಬ್ಬರಿದ್ದರು. ಕೈಗೆ ಬಂದವರು. ಒಬ್ಬನಿಗೆ ಬಿ. ಎ. ಆಗಿತ್ತು. ಅವರು ಪ್ಲೇಗಿನಲ್ಲಿ ಸತ್ತುಹೋದರು. ಆಗಲೇ ಅಪ್ಪನ ದುಡ್ಡೆಲ್ಲಾ ಮುಳುಗಿಹೋಯಿತು ಕಂಪನಿಯಲ್ಲಿ. ಎದೆ ಒಡೆದು ಸತ್ತರು··ಸ್ವಲ್ಪ ನೀರು ಹಾ······

"ನನಗೆ ಒಬ್ಬ ಅಕ್ಕ ಮೂರುಜನ ತಂಗಿಯರಿದ್ದರು. ಅಕ್ಕನಿಗೆ ಮದುವೆ ಆಗಿತ್ತು. ಅವಳಿಗೆ ಹದಿನೈದುವರ್ಷ. ನನಗೆ ಹತ್ತೇ ವರ್ಷ. ಆದರಿಂದ ಕಷ್ಟಪಟ್ಟೆ. ರಾಜ ನಿನಗೆ ತೊಂದರೆಯೇ?"

"ಇಲ್ಲ; ಹೇಳು"

"ಚಿಕ್ಕಪ್ಪ ದುಡ್ಡೆಲ್ಲಾ ತಿಂದು ಸತ್ತುಹೋದ; ಇದ್ದುದರಲ್ಲಿ ಬಹಳ ಸುಖವಾಗಿದ್ದೆ. ಸಾವಿತ್ರಿ ಲಗ್ನಬಂತು. ಅಮ್ಮ ಬಹಳ ಕಷ್ಟಪಟ್ಟಳು. ನಂಗೂ ಗೊತ್ತಾಗುತ್ತಿತ್ತು. ಸಾವಿರ ರೂಪಾಯಿ ವರದಕ್ಷಿಣೆ ಕೊಟ್ಟು ಲಗ್ನಮಾಡಿದಳು. ಎರಡು ವರ್ಷಗಳ ಮೇಲೆ ಕಮಲು ಲಗ್ನಬಂತು. ನಾನು ಐದನೇ ತರಗತಿಯಲ್ಲಿದ್ದೆ. ಅಮ್ಮನ್ನ ಕರಕೊಂಡು ಎಲ್ಲೆಲ್ಲೊ ತಿರುಗಿದೆ. ವರ ಸಿಗಲಿಲ್ಲ. ಕೊನೆಗೆ ೮೦೦ ರೂಪಾಯಿ ಕೊಟ್ಟು ಬಡತನದ ಹಾಗೆ ಲಗ್ನಮಾಡಿದಳು. ಆ ಬೀಗರು ವರೋಪಚಾರ ಕೊಡಲಿಲ್ಲ ಅಂತ ಲಗ್ನಕಾಲದಲ್ಲಿ ತಂಟೆ ತೆಗೆದರು. ಅದಕ್ಕೆ ಮತ್ತೆ ಖರ್ಚು. ರಾಜ, ಏನೋ ಒಳ್ಳೆಮನೆ ಸಿಕ್ಕಿತಲ್ಲಾ ಎಂತ ಮಾಡಿಬಿಟ್ಟೆವು. ಆಮೇಲೆ ನನಗೆ ಪ್ಲೇಗಾಯಿತು. ರಾಜ! ಅಮ್ಮನಂಥ ಹೆಂಗಸರಿಲ್ಲ. ಎಷ್ಟುಜನ್ಮ ತಪಸ್ಸುಮಾಡಿದರೂ ಸಿಕ್ಕುವದಿಲ್ಲ. ನನ್ನ ಉಳಿಸಿಕೊಳ್ಳುವದಕ್ಕೆ ಎಷ್ಟು ಕಷ್ಟಪಟ್ಟಳೋ! ಒಂದೊಂದು ದಿನ ಅದೆಲ್ಲಾ ಹೇಳಿಕೊಂಡು ಅತ್ತುಬಿಡುತ್ತಿದ್ದಳು. ಅಂತೂ ಬದುಕಿಕೊಂಡೆ··ರಾಜ·· ಆಗಲೇ ಸಾಯಬಾರದಾಗಿತ್ತೆ············

"ಮರುವರ್ಷ ಓದಲಿಕ್ಕೆ ಊರುಬಿಟ್ಟುಹೋದೆ. ಪರೀಕ್ಷೆ ಹೋಯಿತು. ಆಗ ಕೊನೆತಂಗಿ ಶಾರದೆಗೆ ಲಗ್ನ ಆಗಬೇಕಾಗಿತ್ತು.

"ರಾಜ! ನನಗೆ ಇಬ್ಬರು ಸ್ನೇಹಿತರಿದ್ದರು—ರಾಮಚಂದ್ರ ರಂಗನಾಥ ಎಂತ. ರಾಮಚಂದ್ರನಿಗೆ ಶಾರದೇನ ಕೊಡಬೇಕೆಂದಿದ್ದೆ. ಅವನೂ ಒಪ್ಪಿದ್ದ. ಅಮ್ಮನೂ ಒಪ್ಪಿದ್ದಳು. ಅದಕ್ಕೇ ಬೇರೆಕಡೆ ಹುಡುಕಲಿಲ್ಲ. ರಂಗನಾಥನಿಗೆ ಬಹಳ ಐಶ್ವರ್ಯವಿತ್ತು. ಬಹಳ ಉಪಕಾರಿ.

"ರಾಮಚಂದ್ರ ನಾನೂ ಇಬ್ಬರೂ ಓದುವದಕ್ಕೆ ಮಾಗೂರಿಗೆ ಹೋದೆವು. ರಜಾದಲ್ಲಿ ಮುಹೂರ್ತ ಇಡಿಸಿದ್ದೆ. ಆದರೆ ಲಗ್ನ ಆಗಲಿಲ್ಲ. ವರ ಹುಡುಕುತ್ತಾ

ತಿರುಗಿದೆ ರಾಜ...ಊರು ಊರು ಅಲೆದೆ. ಯಾರಯಾರ ಕಾಲನ್ನೋ ಹಿಡಿದೆ... ಕೇಳಬಾರದವರನ್ನೆಲ್ಲಾ ಕೇಳಿದೆ..ಆಳುದ್ದ ಶರೀರವನ್ನು ಗೇಣುದ್ದ ಮಾಡಿಕೊಂಡೆ.. ಯಾವದೂ ಉಪಯೋಗವಾಗಲಿಲ್ಲ....ಎಲ್ಲಿ ಹೋದರೂ ಸಾವಿರವಲ್ಲ....ಎರಡು ಸಾವಿರ ಮೂರುಸಾವಿರ ಕೇಳುವರು...ಇಲ್ಲದಿದ್ದರೆ ನಾಲ್ಕುವರ್ಷ ಐದುವರ್ಷ ಓದಿಸು ಅನ್ನುವರು...ಇದ್ದಿದ್ದರೆ ಕೊಟ್ಟುಬಿಡುತ್ತಿದ್ದೆ ರಾಜ...ನನ್ನ ಹತ್ತಿ...ರ ಕಾಸಿರಲಿಲ್ಲ ; ಅಪ್ಪ ಇಟ್ಟದ್ದೆಲ್ಲಾ ತೀರಿಹೋಗಿತ್ತು. ಹೊಟ್ಟೆಬಟ್ಟೆ ಕಳಕೊಳ್ಳುವದೇ ಕಷ್ಟ..ಮಳೆಯಿಲ್ಲ ; ಎಷ್ಟೋ ರಾತ್ರಿ ನಿದ್ದೆಬರದೆ ಹಾಸಿಗೆಯಮೇಲೆ ಕುಳಿತು ಕೊಂಡು ಅತ್ತೆ. ಮನಸ್ಸಿಗೆ ಸಮಾಧಾನವಾಗುವವರೆಗೂ ಅತ್ತೆ. ಒಂದು ಸಮಾ ಧಾನದ ಮಾತನಾಡುವವರೂ ಇರಲಿಲ್ಲ. ರಂಗನಾಥ ಊರಲ್ಲಿರಲಿಲ್ಲ. ದುಃಖವನ್ನು ಹೇಳಿಕೊಳ್ಳಲು ಆಪ್ತರಿಲ್ಲದೆ ಸ್ನೇಹಿತರಿಲ್ಲದೆ ಕಷ್ಟಪಟ್ಟೆ ರಾಜ......'' ಎನ್ನುತ್ತಿದ್ದ ಹಾಗೆಯೇ ಕಷ್ಟಗಳೆಲ್ಲವೂ ಕಣ್ಣಿಗೆ ಕಟ್ಟಿದಂತಾಗಿ ಬವಳಿ ಬಂದಿತು. ರಾಜನು ಹಾಲು ಕೊಟ್ಟು '' ಮೂರ್ತಿ ! ಸ್ವಲ್ಪ ವಿಶ್ರಮಿಸಿಕೋ ಬಹಳ ಆಯಾಸಪಡಬೇಡ '' ಎಂದನು.

'' ರಾಜ ! ನನಗಿನ್ನು ವಿಶ್ರಾಂತಿಯೇ..ನನ್ನ ಮನಸ್ಸಿಗೆ ಏನೋ ಆಗಿದೆ. ಆದುದರಿಂದ ಕೇಳಿಬಿಡು. ನನ್ನ ಕಷ್ಟಗಳೆಲ್ಲವೂ ಹೋಗುವ ಕಾಲಬಂತು. ಬಹಳ ದಿನಗಳಿಂದ ಮರೆತಿದ್ದೆ. ಇವತ್ತೆಲ್ಲವೂ ಜ್ಞಾಪಕವಾಗಿದೆ......ನನ್ನ ಸೋದರ ಮಾವನು ಈ ಊರಲ್ಲೇ ಇದ್ದನು. ಅವನಿಗೆ ಮಂಜುಳ ಎಂಬ ಮಗಳಿದ್ದಳು. ಅವಳನ್ನು ಹುಟ್ಟಿದಂದಿನಿಂದ ನನಗೇ ಕೊಡಬೇಕೆಂದು ನಿಶ್ಚಯವಾಗಿತ್ತು. ಆದರೆ ನನ್ನ ಆ ಸ್ಥಿತಿಯಲ್ಲಿ ಅಳಿಯನನ್ನು ಮಾಡಿಕೊಳ್ಳಲು ಅವನು ಒಪ್ಪಲಿಲ್ಲ. ಅತ್ತೆ ಅತ್ತುಕರೆದರೂ ಕೇಳದೆ ದೊಡ್ಡಮನುಷ್ಯರ ಮಗನಿಗೆ ಕೊಟ್ಟರು. ಅವಳ ಮದುವೆ ಯಾದಾಗ ಯಾರೋ ನನಗೇಕೆ ಕೊಡಲಿಲ್ಲವೆಂದು ನಮ್ಮ ಮಾವನನ್ನು ಕೇಳಿದರು. ಅದಕ್ಕೆ ಮಾವನು ' ಶುದ್ಧಪೋಲಿ. ಅಪ್ಪನ ಹೆಸರನ್ನು ಮುಂದಕ್ಕೆ ತರುತ್ತಾನೆಯೆ ? ' ಎಂದನು. ನನಗೆ ಅದು ತಿಳಿಯಿತು. ಆಗಲೇ ಸಂಕಲ್ಪಮಾಡಿದೆ ತಂದೆಯ ಕೆಲಸ ವನ್ನೇ ಮಾಡಬೇಕೆಂದು...............

'' ರಾಜ ! ವರ ಹುಡುಕುತ್ತಾ ಮಾಗೂರಿಗೆ ಹೋದೆ. ಅಲ್ಲಿ ಓದುತ್ತಿದ್ದಾಗ ಬಹಳ ಹೆಸರುವಾಸಿಯಾಗಿದ್ದೆ. ಆಟ ನಾಟಕಗಳೆಲ್ಲಾ ನಂದೇ ಆಗಿತ್ತು. ಆ ಊರಲ್ಲಿ ಪ್ರಕಟವಾಗುತ್ತಿದ್ದ ಮಾಸಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದೆ. ಅದ ರಿಂದ ಊರಿನಲ್ಲಿ ಬಹಳ ಜನರು ಗುರುತಾದರು. ನನ್ನ ಸಹಪಾಠಿಗಳಲ್ಲಿ ಯಾರಾ

ದರೂ ಸಿಗಬಹುದೆಂಬ ಭರವಸೆಯಿತ್ತು. ನನ್ನ ಸ್ನೇಹಿತನೊಬ್ಬನ ಮನೆಯಲ್ಲಿ ಇಳಿದು ಕೊಂಡಿದ್ದೆ. ರಾಜ! ನಾನೇಕೆ ಹೀಗಿರುವೆನೆಂದು ಅನೇಕವೇಳೆ ಕೇಳಿರುವಿ. ನಾನು ಮಾಗೂರಿಗೆ ಹೋದುದೇ ಕಾರಣ...........

" ನಾನು ಅಲ್ಲಿ ಓದುತ್ತಿದ್ದಾಗ ಒಂದು ದಿನ ಹೋಟಲಿನಲ್ಲಿ ಊಟಮಾಡಿ ಕೊಂಡು ಬರುತ್ತಿರುವಾಗ ಶಾಲೆಯಿಂದ ಬಾಲಿಕೆಯರೆಲ್ಲರೂ ಬರುತ್ತಿದ್ದರು. ಅವರಲ್ಲಿ ಒಬ್ಬಳು ತನ್ನ ಸ್ನೇಹಿತಳಿಗೆ ನನ್ನನ್ನು ತೋರಿಸಿ ಕತೆಯನ್ನು ಬರೆದ ವನು ನಾನೇ ಎಂದಳು ಆದರೆ ಅವಳಾರೆಂಬುದನ್ನು ನಾನು ವಿಚಾರಿಸಲಿಲ್ಲ. ನಾವೆಷ್ಟು ಜನರನ್ನು ನೋಡುವದಿಲ್ಲ ? ಅವರೆಲ್ಲರನ್ನೂ ಜ್ಞಾಪಕದಲ್ಲಿಟ್ಟುಕೊಳ್ಳುತ್ತೇ ವೆಯೆ ? ಹಾಗೆಯೇ ಅವಳನ್ನೂ ಮರೆತುಬಿಡಬಹುದೆಂದು ಮಾಡಿದ್ದೆ. ಆದರೆ ಆಗ ಲಿಲ್ಲ. ಅವಳ ಜ್ಞಾಪಕವಾಗುತ್ತಿತ್ತು. ರಾಮಚಂದ್ರನು ನಾನವಳನ್ನು ಎತ್ತಿ ಕೊಂಡು ಓಡಿಹೋಗುವೆನೆಂದು ಹಾಸ್ಯಮಾಡಿದನು. ನಿರ್ಲಜ್ಜನೆಂದು ಬೈದನು. ಹಾಗೆ ನೋಡುವದು ತಪ್ಪೆಂದು ಬುದ್ಧಿ ಹೇಳಿದನು......

" ರಾಜ, ಆಶೆ ನಿರಾಶೆಗಳಿಂದ ಅಲ್ಲೆ ಹದಿನೈದುದಿನ ನಿಂತೆ; ಒಂದುದಿನ ರೈಲ್ವೆ ಷ್ಟೇಷನ್‌ಗೆ ಹೋಗಿದ್ದಾಗ ನಮ್ಮೂರಿನವರೊಬ್ಬರು ಶ್ರೀನಿವಾಸರಾಯರೆಂಬ ತಮ್ಮ ಸ್ನೇಹಿತರ ಪರಿಚಯ ಮಾಡಿಸಿದರು. ಅವರಿಗೆ ಡಿಸ್ಟ್ರಿಕ್ಟ ಆಫೀಸಿನಲ್ಲಿ ಎಪ್ಪತ್ತು ರೂಪಾಯಿ ಸಂಬಳ. ಮಗಳಿಗೆ ವರ ಹುಡುಕುತ್ತಿದ್ದರು. ನನ್ನ ಜಾತಕ ವನ್ನು ಯಾರೋ ಕೊಟ್ಟು ಅಲ್ಲಿಯೇ ಇರುವ ಸಂಗತಿಯನ್ನು ಹೇಳಿದರಂತೆ. ಅವರು ಬಹಳ ಹೊತ್ತು ಮಾತನಾಡಿದರು; ಅಳಿಯನಾಗಬೇಕೆಂದು ಹೇಳಿದರು. ನನ್ನ ಸ್ಥಿತಿಯನ್ನು ಹೇಳಿ ಮದುವೆಯಾಗುವದಿಲ್ಲವೆಂದೆ. ಆದರೆ ಅವರು ಕೇಳಲಿಲ್ಲ. ಶಾರ ದೆಗೆ ವರ ನಿಶ್ಚಯವಾಗುವಹಾಗೆ ಮಾಡುವೆನೆಂದರು. ಜಾತಕವು ಕೂಡಿಬರುತ್ತಿದ್ದು ದರಿಂದ ಕನ್ಯೆ ನೋಡಿಕೊಂಡು ಹೋಗಬೇಕೆಂದು ಒತ್ತಾಯ ಮಾಡಿದರು. ನನ್ನ ಸ್ನೇಹಿತರು ಅಂದು ಸಾಯಂಕಾಲ ಅವರ ಮನೆಗೆ ಕರೆದುಕೊಂಡು ಹೋದರು. ಹುಡುಗಿಯು ಹಾರ್ಮೋನಿಯಂ ನುಡಿಸುತ್ತಿದ್ದಳು. ಕಂಠವನ್ನು ಹಿಂದೆ ಎಲ್ಲೋ ಕೇಳಿದ ಹಾಗೆ ತೋರಿತು. ಆದರೆ ಎಲ್ಲಿ ಎಂಬುದು ಜ್ಞಾಪಕವಾಗಲಿಲ್ಲ; ಟೀ ಕಾಫಿ ಉಪಚಾರವೆಲ್ಲಾ ಆದಮೇಲೆ ಅವಳನ್ನು ನನ್ನೆದುರಿಗೆ ನಿಲ್ಲಿಸಿದರು.

" ರಾಜ! ನನಗಾದ ಸಂತೋಷವನ್ನೂ ಆಶ್ಚರ್ಯವನ್ನೂ ಏನೆಂದು ಹೇಳಲಿ! ಆಗಲೇ ಮಾತನಾಡಿಸಬೇಕೆನಿಸಿತು. ಹಿಂದೆ ನಡೆದುದನ್ನು ನೆನೆದು ಅವಳೂ ಸಂತೋಷಗೊಂಡಳೆಂದು ಕಾಣುತ್ತದೆ. ರಾಜ! ಅವಳೇ ......ಆ ಹುಡು

ಗಿಯೇ ನನ್ನೆದುರಿಗೆ ತಲೆ ತಗ್ಗಿಸಿಕೊಂಡು ಅರೆ ನೋಟದಿಂದ ನೋಡುತ್ತಿದ್ದಳು. 'ರಮಾ' ಎಂಬ ಹೆಸರಿಗೆ ಒಪ್ಪುವಹಾಗಿದ್ದಳು. ಅವಳಿಗೆ ಆಗ ಹದಿಮೂರು ತುಂಬಿ ಹದಿನಾಲ್ಕನೆಯ ವಯಸ್ಸು. ಕನ್ನಡ—ಇಂಗ್ಲೀಷು ಲೋವರ್‌ಸೆಕೆಂಡರಿಗೆ ಓದುತ್ತಿದ್ದಳು.... ...ರಾಜ! ಮದುವೆಯೇ ಆಗಿಹೋಯಿತೆಂದು ಭಾವಿಸಿದೆ. ಏನೇನನ್ನೋ ಭಾವಿಸಿಕೊಂಡೆ; ಬೇರೊಂದು ಪ್ರಪಂಚವನ್ನೇ ನಿರ್ಮಿಸಿದೆ; ಎಷ್ಟೋ ಸುಖದ ಸ್ವಪ್ನಗಳನ್ನು ಕಂಡೆ; ಕೊನೆಗೂ ಅದು ಸ್ವ...ಪ್ನ...ಆ...ಯಿತು..." ಕಂಠವು ಬಿಗಿಯಿತು. ಕಂಬನಿ ತುಂಬಿತು. ತಲೆಯನ್ನು ತಿರುಗಿಸಿ ಕಣ್ಣುಮುಚ್ಚಿ ಕೊಂಡನು. ದೇಹದಲ್ಲಿ ವಿದ್ಯುಚ್ಛಕ್ತಿಯ ಪ್ರವಾಹ ಹರಿದಂತೆ ವಿಲಿವಿಲಿಯಾದನು. ರಾಜನವನನ್ನು ಅಪ್ಪಿಕೊಂಡು ಷರಬತ್ತು ಕುಡಿಸಿ ಮಲಗಿಕೊಳ್ಳುವಂತೆ ಹೇಳಿದನು. ಆದರೆ ಮೂರ್ತಿಯಲ್ಲಿ ಉದ್ವೇಗವನ್ನು ಸಹಿಸುವ ಅಸಾಧಾರಣ ಸಹಿಷ್ಣುತೆಯಿತ್ತು. ಆದುದರಿಂದ ಮುಂದೆ ಹೇಳಲುಪಕ್ರಮಿಸಿದನು :—

"ರಾಜ! ರಿಜಲ್ಟ್ ಬಂತು. ನಾನೂ ಫಸ್ಟ್‌ಕ್ಲಾಸಿನಲ್ಲಿ ಪಾಸಾದೆ. ಏನು ಪ್ರಯೋಜನ? ಸ್ಕಾಲರ್‌ಷಿಪ್ ಬರಲಿಲ್ಲ. ದುಡ್ಡಿನ ಅನಾನುಕೂಲ ಬಹಳವಾಯಿತು; ತಂಗಿಗೆ ಲಗ್ನವಾಗಲಿಲ್ಲ. ಆಷಾಢಮಾಸ ಬಂತು. ಓದುವದನ್ನು ಬಿಟ್ಟು ಕೆಲಸಕ್ಕೆ ಸೇರಿಕೊಳ್ಳಬೇಕೆಂದು ನಿಶ್ಚೈಸಿದೆ. ಅಷ್ಟುಹೊತ್ತಿಗೆ ರಂಗನಾಥನು ಬಂದನು. ನಾನು ಮಾಡಿದ ಆಲೋಚನೆಗೆ ಬೈದು ಐವತ್ತುರೂಪಾಯಿ ಕೊಟ್ಟು ಬೆಂಗಳೂರಿಗೆ ಕಳುಹಿಸಿದನು. ಕಾಲೇಜಿಗೆ ಸೇರಿದೆ. ಕಾಲೇಜಿನಲ್ಲಿದ್ದಾಗ ಒಂದಲ್ಲದೊಂದು ನೆಪಮಾಡಿ ಕೊಂಡು ಮಾಗೂರಿಗೆ ಹೋಗಿ ಅವರೆಲ್ಲರನ್ನೂ ಮಾತನಾಡಿಸಿಕೊಂಡು ಒರುತ್ತಿದ್ದೆ. ಅಮ್ಮನಿಗೆ ಇದೆಲ್ಲವೂ ಗೊತ್ತಿರಲಿಲ್ಲ. ಹುಡುಗಿಯನ್ನು ನೋಡಿದ್ದು ಮಾತ್ರ ಗೊತ್ತಿತ್ತು. ಮೂರುನಾಲ್ಕು ತಿಂಗಳಲ್ಲಿ ಅವರೆಲ್ಲರೂ ನನಗೆ ಎಷ್ಟೋಕಾಲದ ಸಂಬಂಧಿಗಳಷ್ಟು ಸಲಿಗೆಯಾಗಿಬಿಟ್ಟರು. ಅದೇ ಸಮಯಕ್ಕೆ ಶ್ರೀನಿವಾಸರಾಯರ ತಮ್ಮನ ಮಗನಿಗೆ ಬೆಂಗಳೂರಲ್ಲಿ ಉಪನಯನ ನಿಶ್ಚಯವಾಯಿತು. ಎಲ್ಲರೂ ಬಂದು ಒಂದು ತಿಂಗಳು ಅಲ್ಲಿದ್ದರು. ನಾನು ವಾರಕ್ಕೆ ಎರಡುದಿನವಾದರೂ ಹೋಗಿ ಬರುತ್ತಿದ್ದೆ. ನಾನು ಹೋಗುವದು ಒಂದುದಿನ ತಡವಾದರೆ ಹುಡುಗರೇ ನನ್ನ ರೂಮಿಗೆ ಬಂದು ಬಿಡುತ್ತಿದ್ದರು. ಒಂದು ಶನಿವಾರ ಸ್ನೇಹಿತರೆಲ್ಲರೂ ಸೇರಿ ವರದಾಚಾರ್ಯರ ಮನ್ಮಥ ವಿಜಯನಾಟಕಕ್ಕೆ ಹೋದೆವು. ಅವರೆಲ್ಲರೂ ಬಂದಿದ್ದರು. ರಮಾ ನನ್ನನ್ನು ನೋಡಿ ನಸುನಕ್ಕಳು. ನಾನೂ ಅವಳನ್ನು ನೋಡಿದೆನು. ರಾಜ! ನಾನು ನಾಟಕವನ್ನು ನೋಡಲಿಲ್ಲ. ನಮ್ಮದೇ ಒಂದು ನಾಟಕವು ನಡೆಯಿತು...ನಾನದೆಷ್ಟು ತಮಾಷೆ

ಮಾಡಿದೆನೋ, ಅವಳೆಷ್ಟು ತಮಾಷೆಮಾಡಿದಳೋ! ರಾಜ, ಈಗ ನನ್ನೆದುರಿಗೆ ನಡೆಯುತ್ತಿರುವ ಹಾಗಿದೆ......'' ಪೂರ್ವಸ್ಮರಣೆಯುಂಟಾಗಿ ಅಸಹನೀಯವ್ಯಾಕುಲವಾಗಲು ಅನ್ಯಮನಸ್ಕನಾಗಿ ಕೆಲವು ಹೊತ್ತಿನಮೇಲೆ ಪುನಃ ಹೇಳತೊಡಗಿದನು :-

'' ಇನ್ನೊಂದುದಿನ ಅವರ ಮನೆಗೆ ಹೋದಾಗ ಎಲ್ಲರೂ ಎಲ್ಲಿಯೋ ಹೋಗಿದ್ದರು. 'ರಮಾ' ನನ್ನನ್ನು ನಿರೀಕ್ಷಿಸಿದಳೋ ಏನೋ ಮನೆಯಲ್ಲಿಯೇ ಇದ್ದಳು. ಅವಳ ತಮ್ಮ ಶಾಮನೂ ಇದ್ದನು. ಶಾಮನು ನನಗೆ ಕುಳಿತುಕೊಳ್ಳಲು ಹೇಳಿ ಚಿಕ್ಕಪ್ಪನಿಗೆ ಹೇಳಲು ಹೋದನು. ಕೋಣೆಯಲ್ಲಿ ಕುಳಿತು ಮೇಜಿನ ಮೇಲಿದ್ದ ರಮಾನ ವಾಕ್ಯರಚನೆಯ ಪುಸ್ತಕವನ್ನು ನೋಡುತ್ತ ಏನುಮಾಡುತ್ತಿದ್ದೆನೆಂಬ ಅರಿವಿಲ್ಲದೆ ಫೌಂಟನ್‌ಪೆನ್ನಿನಿಂದ ತಪ್ಪುಗಳನ್ನೆಲ್ಲಾ ತಿದ್ದಿಬಿಟ್ಟೆ. ರಾಜ! ಅಷ್ಟುಹೊತ್ತಿಗೆ ರಮಾ ಒಂದು ಬಟ್ಟಲು ಕಾಫಿ ತಂದು ಬಾಗಿಲಬಳಿಯಲ್ಲಿಟ್ಟಳು. ಎದ್ದುಹೋಗಿ ಅಲ್ಲಿಯೇ ನಿಂತುಕೊಂಡು ಕುಡಿದೆ ಅವಳು ಬಾಗಿಲ ಹಿಂದೆಯೇ ನಿಂತಿದ್ದಳು. ಇಬ್ಬರಿಗೂ ಮಾತನಾಡಬೇಕೆಂಬ ಆಸೆ. ಒಬ್ಬರಿಗೂ ಧೈರ್ಯವಿಲ್ಲ. ಬಟ್ಟಲನ್ನು ಕೆಳಗಿಡುವದರ ಬದಲು ಅವಳ ಕೈಗೆ ಕೊಡಲು ಕೈನೀಡಿದೆ. ಅದನ್ನು ತೆಗೆದುಕೊಳ್ಳುತ್ತ " ಈ ಕೈ ಬಿಡಕೂಡದು '' ಎಂದುಬಿಟ್ಟಳು. ನಾನು '' ಖಂಡಿತವಾಗಿಯೂ ಇಲ್ಲ'' ಎನ್ನಬೇಕೆಂದಿದ್ದೆ. ಅಷ್ಟರಲ್ಲಿ ಚಿಕ್ಕಪ್ಪನ ಮಾತು ಕೇಳಿಸಲು ಓಡಿಹೋದಳು. ನಾನು ಏನೂ ಅರಿಯದವನಂತೆ ಕುರ್ಚಿಯಲ್ಲಿ ಕುಳಿತುಕೊಂಡೆ. ರಾಜ! ಅಂದು ರಾತ್ರಿ ಅದನ್ನೇ ಮೂಲವಾಗಿಟ್ಟುಕೊಂಡು ಒಂದು ಕಥೆ ಬರೆದು ಮರುದಿನ ಹೋದಾಗ ಶಾಮನಿಗೆ ಕೊಟ್ಟೆ. ಅದನ್ನು ನೀನೂ ಓದಿರಬೇಕು......'' ಮೂರ್ತಿಯು ಮಾತನಾಡಲಾರದೆ ಹೇಳುತ್ತಿದ್ದನು. ರಾಜನು ಕಣ್ಣಲ್ಲಿ ನೀರುತುಂಬಿಕೊಂಡಿದ್ದನು. ಆ ಕಥೆಯು ಅವನ ಕಣ್ಣೆದುರಿಗೆ ಕಟ್ಟಿತ್ತು. ಮುಖವನ್ನು ತಿರುಗಿಸಿಕೊಂಡೇ ಮುಂದೆ ಹೇಳತೊಡಗಿದನು.

" ಮಾಘಮಾಸವೂ ಬಂತು ; ಶಾರದೆಗೆ ಗಂಡನು ಸಿಕ್ಕಲಿಲ್ಲ. ಅಮ್ಮ ಒಂದೇ ಸಮನೆ ಅಳುತ್ತ ಕುಳಿತುಕೊಂಡಳು. ಶಾರದೆಯು ತಾನೇ ನಮ್ಮ ಕಷ್ಟಕ್ಕೆ ಕಾರಣಳೆಂದು ತಿಳಿದು ಕೊರಗಿಕೊಳ್ಳುತ್ತಿದ್ದಳು. ಅಷ್ಟು ಮುದ್ದಾದ ಮಗು ; ಸೊರಗಿ ಬಾಡಿಹೋಗಿದ್ದಳು. ನೋಡಿದರೆ ಹೃದಯದಲ್ಲಿ ಕಿಚ್ಚೇಳುತ್ತಿತ್ತು. ಎಲ್ಲಿ ಆತ್ಮಹತ್ಯ ಮಾಡಿಕೊಳ್ಳುತ್ತಾಳೋ ಎಂತ ಭಯ. ಊರಲ್ಲಿ ಏನೋನೋ ಸುದ್ದಿ. ಅವಳನ್ನು ಕಣ್ಮರೆಯಾಗದಂತೆ ಕಾಯಬೇಕೆಂದು ಅಮ್ಮನಿಗೆ ಹೇಳಿದೆ. ಮಾಡಿಕೊಳ್ಳಲೊಪ್ಪುವವರೂ ಸುದ್ದಿಯನ್ನು ಕೇಳಿ ಒಲ್ಲೆವೆನ್ನುವರು. ರಾಜ ಆ ಕಷ್ಟ......ಓದುವ

ದನ್ನು ಬಿಟ್ಟು ಊರು ಊರು ತಿರುಗಿದೆ. ಕೊನೆಗೆ ಒಂದೂವರೆ ಸಾವಿರ ರೂಪಾಯಿ ಹೊಂದಿಸಿಕೊಟ್ಟು ಬಿ. ಎ. ಗೆ ಓದುತ್ತಿರುವ ಹುಡುಗನಿಗೆ ಕೊಟ್ಟು ಲಗ್ನಮಾಡಿದೆ. ಇದನ್ನೇ ಕಾದುಕೊಂಡಿದ್ದವರು ನನಗೆ ಹೆಣ್ಣು ಕೊಡಲು ನಾನು ಮುಂದೆ ತಾನು ಮುಂದೆಂದು ಬಂದರು. ಅಮ್ಮನು ಕಡೆಯಪಕ್ಷ ಎರಡುಸಾವಿರ ರೂಪಾಯಿಯನ್ನಾದರೂ ವರದಕ್ಷಿಣೆಯಾಗಿ ಕೊಟ್ಟರೆ ಒಪ್ಪುವದಾಗಿ ಹೇಳಿದಳು. ಶ್ರೀನಿವಾಸರಾಯರು ಅದನ್ನು ಹೇಗೆ ಕೊಟ್ಟಾರೆಂದು ಯೋಚಿಸಿದೆ. ವರದಕ್ಷಿಣೆ ತೆಗೆದುಕೊಳ್ಳುವದು ತಪ್ಪೆಂದು ಅಮ್ಮನಿಗೆ ಎಷ್ಟೋ ಕಾಗದ ಬರೆದೆ. ಅವಳು ' ನೀನು ಓದುವದು ಹೇಗೆ ? ಧಾರವಾಡದವರು ಎರಡು ಸಾವಿರ ಕೊಟ್ಟು ಹುಡುಗಿಗೆ ಒಂದು ಸೇರು ಬಂಗಾರ ಕೊಡುತ್ತಾರೆ. ನಿನಗ್ಯಾಕೆ ಯೋಚನೆ ? ರತಿಯಂಥ ಹುಡುಗಿಯನ್ನು ತರುತ್ತೇನೆ. ಹುಡುಗನ ಹಾಗಿರು; ಒಂದಕ್ಕೂ ಕೈಹಾಕಬೇಡ ' ಎಂದಳು. ' ರಮಾ 'ನ್ನೆ ಮಾಡಿಕೊಳ್ಳೆಂದು ಬಹಳ ಹೇಳಿಕೊಂಡೆ; ಏನಾದರೂ ಕೇಳಲಿಲ್ಲ. ರಂಗನಾಥನಿಂದ ಹೇಳಿಸಿದೆ. ಅದಕ್ಕವಳಿಗೆ ಕೋಪಬಂದು ' ಏನುಮಾಡಿದರೂ ಆ ಹಾಳು ಗುಮಾಸ್ತನ ಮಗಳನ್ನು ಮಾಡಿಕೊಳ್ಳುವದಿಲ್ಲ. ಅವನಿಗೇನೋ ತಲೆ ಸವರಿದ್ದಾರೆ. ಇಲ್ಲದಿದ್ದರೆ ಅವನೇಕೆ ಹೀಗೆ ಮಾಡುತ್ತಿದ್ದ? ಒಂದು ದಿನವಾದರೂ ಮಾತುಮೀರಿ ನಡೆಯುತ್ತಿದ್ದಿಲ್ಲ.'' ಎಂದು ಬಿಟ್ಟಳು. ನಾನೇ ಒಂದು ದಿನ ಹೇಳಿಕೊಂಡಾಗ "ನಿನ್ನನ್ನು ಸಾಕಿ ಸಲಹಿದ್ದಕ್ಕೆ ಸಾರ್ಥಕವಾಯಿತು. ದೊಡ್ಡಮನುಷ್ಯರ ಸಹವಾಸವನ್ನು ಬಿಟ್ಟು ದರಿದ್ರ ಗುಮಾಸ್ತನ ಮಗಳಿಗೆ ಮೆಚ್ಚಿದಿ; ಮುಂದಿನ ಆಲೋಚನೆಯಿಲ್ಲ. ನಿನಗಷ್ಟು ಬೇಕಾಗಿದ್ದರೆ ಮಾಡಿಕೋ; ನನ್ನೊಡನೆ ಇನ್ನು ಮುಂದೆ ಮಾತನಾಡಬೇಡ'' ಎಂದು ಮುಖ ತಿರುಗಿಸಿಕೊಂಡು ಎದ್ದು ಹೋದಳು. ಶ್ರೀನಿವಾಸರಾಯರೇ ಮಗಳನ್ನು ಕರೆದುಕೊಂಡು ಬಂದು, ಒಂದು ಸಾವಿರ ರೂಪಾಯಿ ಕೊಡುವದಾಗಿ ಹೇಳಿದರು. ಹುಡುಗಿಯನ್ನು ನೋಡಿ ಮನಸ್ಸು ಕರಗಿದರೂ ಮೊದಲಿನ ಹಟವನ್ನೇ ಸಾಧಿಸಿದಳು. ನನಗೆ ಸಹಿಸಲಾರದಷ್ಟು ದುಃಖವಾಯಿತು. ಏಕಾಂತದಲ್ಲಿ ಅತ್ತೆ...ರಾಜ! ಆ ಸಮಯದಲ್ಲಿಯೇ ರಂಗನಾಥನೂ ಕೈಬಿಟ್ಟು ಹೋದನು. ನನ್ನ ಪಾಡು ಏನೆಂದು ಹೇಳಲಿ...ಓದಲಿಲ್ಲ...ಬರೆಯಲಿಲ್ಲ...ಮನೋರೋಗ ಹತ್ತಿತು...ಒಂದು ಕಡೆ ಗಂಡನನ್ನು ಕಳೆದುಕೊಂಡು ಕಷ್ಟವೆನ್ನವೆ ನಿಷ್ಠುರವೆನ್ನದೆ ಹೊಟ್ಟೆ ಬಟ್ಟೆಯನ್ನು ಕಟ್ಟಿ ಸಾಕಿ ಸಲಹಿದ ತಾಯಿ ; ಮತ್ತೊಂದುಕಡೆ ಭಕ್ತಿವಿಶ್ವಾಸ ಪ್ರೇಮಗಳಿಂದ ನಾನೇ ಗತಿ ಎಂದಿದ್ದ ಹುಡುಗಿ...ಏನುಮಾಡಲಿ...ಮನಸ್ಸು ಗಟ್ಟಿಮಾಡಿ ತಾಯಿಯ ಇಷ್ಟಕ್ಕೆ ವಿರೋಧವಾಗಿ ಆದರೂ ಚಿಂತೆಯಿಲ್ಲದೆ ರಮಾನ್ನ ಮದುವೆಮಾಡಿಕೊಳ್ಳುವೆ

ನೆಂದು ಶ್ರೀನಿವಾಸರಾಯರಿಗೆ ಕಾಗದ ಹಾಕಿದೆ. ಆದರೆ ಅವರು ಉತ್ತರವನ್ನೇ ಬರೆಯಲಿಲ್ಲ. 'ರಮಾ' ನ ಲಗ್ನವಾದುದೂ ನನಗೆ ಗೊತ್ತಾಗಲಿಲ್ಲ...ರಾಜ! ಬೇಸಗೆ ರಜಾ ಮಾವನ ಮನೆಯಲ್ಲಿ ಕಳೆಯಬೇಕೆಂದು ಮಾಡಿದೆ. ಆದರೆ...ಬಹಳ ಕಷ್ಟ ರಾಜ...ಮನೆಯಲ್ಲಿ ಯಾರೂಯಿಲ್ಲ. ಅಮ್ಮ ಮಾತಾಡುತ್ತಿರಲಿಲ್ಲ. ಹೊರಗೆ ಹೋದರೆ ಸ್ನೇಹಿತರಿಲ್ಲ. ಸಾಲಗಾರರು ಹೊರಗೆ ತಲೆ ತೋರಿಸಲು ಬಿಡದಾದರು. ಅಮ್ಮನು ಮದುವೆಯ ಮಾತನ್ನೇ ಬಿಟ್ಟಳು; ನನಗೂ ಬೇಡವಾಗಿತ್ತು. ದಾರಿಗಾಣದೆ ನಮ್ಮೂರಿನ ಸಾಹುಕಾರರಿಗೆ ಮನೆ ಜಮೀನು ಅಡವುಮಾಡಿ ಎರಡು ಸಾವಿರ ರೂಪಾಯಿ ತೆಗೆದು ಹತ್ತಾರುಕಡೆಯಿದ್ದ ಸಾಲವನ್ನೆಲ್ಲಾ ತೀರಿಸಿದೆ. ಪರೀಕ್ಷೆಯು ಹೋಯಿತೆಂದು ತಿಳಿಯಿತು. ಮುಂದೆ ಯಾರಿಗಾಗಿ ಓದಬೇಕೆಂದು ತೋರಿತು. ಮೂವತ್ತು ರೂಪಾಯಿ ಕೆಲಸಕ್ಕೆ ಸೇರಿಕೊಂಡೆ; ಹೆಚ್ಚಾಗಿ ದುಡಿದು ಸಾಲವನ್ನು ತೀರಿಸಿಬಿಡಬೇಕೆಂದು ಉದ್ಯೋಗಕ್ಕೆ ಬೇಕಾದ ಪರೀಕ್ಷೆಗಳಿಗೆ ಓದಲು ಅದೃಷ್ಟದಿಂದ ಎಲ್ಲದರಲ್ಲಿಯೂ ಫಸ್ಟ್‌ಕ್ಲಾಸ್ ಬಂತು. ಆಫೀಸರಿಗೆ ತುಂಬಾ ಸಂತೋಷವಾಗಿ ಒಂದೇ ವರ್ಷದಲ್ಲಿ ಐವತ್ತು ರೂಪಾಯಿಗೆ ಬಡತಿಮಾಡಿದರು. ಅಮ್ಮ ನಾನೂ ಒಟ್ಟಿಗಿದ್ದರೂ ಮೂರುವರ್ಷ ಮಾತಾಡಲಿಲ್ಲ. ಒಂದುದಿನ ರಾತ್ರಿ ಓದುತ್ತಾ ಮಲಗಿರುವಾಗ ಅಮ್ಮ ಬಂದು 'ಸಾಮಿ' ಎನ್ನಲು 'ಏನಮ್ಮಾ' ಎಂದೆ. ಅಷ್ಟೇ ಸಾಕಾಗಿತ್ತು. ಬಿಕ್ಕಿಬಿಕ್ಕಿ ಅಳುತ್ತ ಹಾಸಿಗೆಯ ಮೇಲೆ ಕುಳಿತು ನನ್ನ ತಲೆಯನ್ನು ತೊಡೆಯ ಮೇಲಿಟ್ಟುಕೊಂಡಳು. ಹೊಟ್ಟೆಯಲ್ಲಿ ತುಂಬಿಕೊಂಡದ್ದೆಲ್ಲಾ ಹೊರಬಿದ್ದು ಅತ್ತಳು. ಇಬ್ಬರೂ ಬಹಳಹೊತ್ತು ಅತ್ತೆವು ಕಡೆಗೆ ಅವಳೇ ಸಮಾಧಾನಮಾಡಿಕೊಂಡು "ಸಾಮಿ! ನಾನು ತಪ್ಪುಮಾಡಿದೆ. ಮನ್ನಿಸು. ಹೀಗೆ ಎಷ್ಟುದಿನ ಕಳೆಯಲಿ?" ಎಂದು ಪುನಃ ಅಳುವದಕ್ಕೆ ಮೊದಲು ಮಾಡಿದಳು.

'ಅಮ್ಮ! ಆದುದು ಆಗಿಹೋಯಿತು. ಈಗ ವ್ಯಥೆಪಟ್ಟೇನು...'

'ಇಲ್ಲ ಸಾಮಿ, ನಾನು ಪಾಪಿ. ಅವರನ್ನು ಕಳೆದುಕೊಂಡು ಇದ್ದೊಬ್ಬ ಮಗನನ್ನೂ ಹಾಳುಮಾಡಿದೆ...'

'ಅಮ್ಮ ಹಾಗೆಲ್ಲಾ ಅಂದುಕೊಳ್ಳಬಾರದಮ್ಮ...'

'ಸಾಮಿ' ನನಗೆ ಗೊತ್ತಾಗಲಿಲ್ಲ. ಒಳ್ಳೆ ದೊಡ್ಡಮನುಷ್ಯರ ಸಂಬಂಧಮಾಡಿ ನಿನಗೆ ದೊಡ್ಡಸ್ತಿಕೆ ತರಬೇಕೆಂತ ಹುಚ್ಚುಹಿಡಿಯಿತು...'

'ಅಮ್ಮ, ಆ ಮಾತು ಬೇಡ. ಮರೆತುಬಿಡೋಣ...'

'ಹೇಗೆ ಮರೆಯತೋ ಸಾಮಿ! ಹೀಗೆ ಆಗಿದ್ದೀಯಲ್ಲೋ ನನ್ನ ಹೊಟ್ಟೆ ಹೇಗೆ ಹಿಡಿಯಲಿ......'

'ಅವ್ಮಾ! ಈಗದಕ್ಕೆ ಏನುಮಾಡಬೇಕು? ಇನ್ನದರ ಯೋಚನೆಯನ್ನು ಬಿಡು. ನೀನು ಎಲ್ಲಾ ಒಳ್ಳೆಯದಕ್ಕೆ ಮಾಡಿದೆ. ನನ್ನ ಅದೃಷ್ಟ ಕೆಟ್ಟದ್ದು...... ಏನೋ ಆಯಿತು.'

ಸಾಮಿ! ನಾನೇನನ್ನೂ ಬೇಡುವದಿಲ್ಲ. ನಿನ್ನ ದಮ್ಮಯ್ಯ ನನ್ನ ಮರ್ಯಾದೆ ಉಳಿಸು...'

'ನೀನು ಹೇಳಿದ ಹಾಗೆ ಕೇಳುತ್ತೇನಮ್ಮಾ. ಏನು ಮಾಡಲಿ ಹೇಳು.'

'ನಾನು ಏನು ಹೇಳುವಹಾಗಿದ್ದೇನೆ? ಹೇಳಿದರೂ ಈ ಪಾಪಿಯ ಮಾತ್ಯಾಕೆ ಕೇಳುತ್ತಿ?'

'ಇಲ್ಲ ಅಮ್ಮಾ ಹೇಳು......'

'ಸಾಮಿ! ನಾನೇನೂ ಕೇಳುವದಿಲ್ಲ. ಅವರು ಬಾಳಿ ಬದುಕಿದರು; ಅವರ ಕೀರ್ತಿ ಉಳಿಸು; ವಂಶವನ್ನು ನಿರ್ವಂಶಮಾಡಬೇಡ. ಈ ಹಾಳು ಕೆಲಸದಲ್ಲಿ ಇನ್ನೆಷ್ಟು ದಿನ ಇರಬೇಕು. ಒಂದು ವರ್ಷ ಓದಿದರೆ ಬಿ. ಎ. ಆಗುತ್ತೆ. ಈಗಾಗಲೇ ಅರ್ಧ ಸಾಲವೆಲ್ಲಾ ತೀರಿದೆ. ನಿನಗೇನಂಥ ವಯಸ್ಸಾಗಿದೆ...ಸಾಮಿ ನನ್ನ ಮಾತು ನಡಿಸು...ನಿನಗೆ ಎಲ್ಲಿ ಬೇಕೋ ಅಲ್ಲಿ......ಲ...ಗ್ನಮಾಡಿಕೊ...ಸಾಮಿ' ಎಂದು ಅತ್ತಳು. ನಾನೂ ಅತ್ತು 'ಅಮ್ಮ ಇನ್ನೊಂದು ವರ್ಷಕ್ಕೆ ಸಾಲ ತೀರುತ್ತೆ. ರಜಾ ತೆಗದುಕೊಂಡು ಓದಲಿಕ್ಕೆ ಹೋಗುತ್ತೇನೆ. ಪರೀಕ್ಷೆ ಆದಮೇಲೆ ಲಗ್ನ ಯೋಚಿಸೋಣ' ಎಂದೆನು.

'ಸಾಮಿ! ಬಿ. ಎ. ಸಾವಕಾಶ ಆಗುತ್ತೆ. ಆಮೇಲೆ ಮಾಡಿದರಾಯಿತು.' 'ಇಲ್ಲ ಅಮ್ಮ ಕಾಲೇಜು ತೆಗೆಯುವದಕ್ಕೆ ನಾಲ್ಕುತಿಂಗಳಿದೆ. ಆಗಲೇ ನಿಶ್ಚಯವಾದರೆ ನೋಡೋಣ' ಎಂದೆ. ರಾಜ, ಅಮ್ಮ ಅಲ್ಲಿ ನಿಂತಿದ್ದಾಳೆ ನೋಡು...ಅಮ್ಮಾ ಅಮ್ಮಾ...ಅಮ್ಮಾ'' ಎಂದು ಚೀರುತ್ತ ಮೂರ್ಛೆ ಹೋದನು. ರಾಮರಾಯರು ಓಡಿಬಂದು ರಾಜನು ಅಳುತ್ತಿರುವದನ್ನು ನೋಡಿ ಮೂರ್ತಿಗೆ ಗಾಳಿಹಾಕಿ ಉಪಚಾರಮಾಡಿದರು. ಎಷ್ಟು ಹೇಳಿದರೂ ಕೇಳದೆ ಗದ್ಗದಿತ ಕಂಠದಿಂದ ಮುಂದೆ ಹೇಳತೊಡಗಿದನು :—

'ರಾಜ! ಹೇಳುವದೆಲ್ಲಾ ಮುಗಿಯಿತು. ಸ್ವಲ್ಪವಿದೆ...ಕಷ್ಟವೆನ್ನದೆ ಕೇಳಿಬಿಡು. ಒಂದು ವರ್ಷ ರಜಾ ತೆಗದುಕೊಂಡು ಬಿ. ಎ. ಮಾಡಿದೆ. ಆಗ ಅಮಲ್ದಾರಿಗೆ ಕೆಲವರನ್ನು ಆರಿಸಿದರು. ಆಫೀಸರ ದಯದಿಂದ ನಾನೂ ಅಮಲ್ದಾರನಾದೆ. ಅಮ್ಮ ಲಗ್ನದ ಏರ್ಪಾಡುಮಾಡುತ್ತಿದ್ದಳು. ನನಗೆ ಇಷ್ಟವಿರಲಿಲ್ಲ. ಆ ವರ್ಷವೇ

ನಮ್ಮ ಮನೆಗೆ ಮಾರಿ ಹೊಕ್ಕಳು. ಇನ್‌ಫ್ಲುಯಂಜಾ ಬಂತು. ಅಕ್ಕ ತಂಗಿಯರೆಲ್ಲಾ ಅದಕ್ಕೆ ಆಹುತಿಯಾದರು. ಮಕ್ಕಳ ಸಾವನ್ನು ಕೇಳಿ ಅಮ್ಮನು ಹಾಸಿಗೆ ಹತ್ತಿದಳು. ಅವಳಿಗೂ ರೋಗ ಉಳಿಸಿಕೊಳ್ಳಲು ಬಹಳ ಕಷ್ಟಪಟ್ಟೆ. ಸಾಯುವದಕ್ಕೆ ಮುಂಚೆ ಕರೆದು 'ಸಾಮಿ! ನಾನು ಪಾಪಿ; ವಂಶವನ್ನುಳಿಸು; ಅವರ ಹೆಸರನ್ನು ಮುಂದೆ ತಂದೇ ತರುತ್ತೀಯಾ-ಸಾವಿತ್ರಿ ಮಗಳನ್ನು......' ಎಂದು ಮುಂದೆ ಹೇಳದೆ ಕಣ್ಣುಮುಚ್ಚಿದಳು. ರಾಜ! ಸಾವಿತ್ರಿಗೆ ಹನ್ನೊಂದುವರ್ಷದ ಮಗಳಿದ್ದಳು. ಅವಳನ್ನು ತಂದು ಒಂದು ವರ್ಷ ಸಾಕಿದೆ. ನನ್ನ ದುರದೃಷ್ಟ ಅವಳೂ ಕೈ ಬಿಟ್ಟಳು. ಉತ್ತಮ ವರನಿಗೆ ಕೊಟ್ಟು ಅವಳ ಹೊಟ್ಟೆಯಲ್ಲಿಹುಟ್ಟಿದ ಮೊದಲು ಮಗುವಿಗೆ ಎಲ್ಲವನ್ನೂ ಕೊಡಬೇಕೆಂದಿದ್ದೆ; ಅದೂ ಸಾಗಲಿಲ್ಲ.'' ಸ್ವಲ್ಪ ಹೊತ್ತು ಸುಮ್ಮನಿದ್ದು ತಿರುಗಿ "ಕೆಲಸ ಬೇಡವಾಯಿತು. ಹಿಂದಿನ ಸಂಕಲ್ಪವನ್ನು ನೆರವೇರಿಸಬೇಕೆಂದು ರಾಜೀನಾಮೆ ಕೊಟ್ಟು ಬೊಂಬಾಯಿಗೆ ಬಂದೆ..ಆಗ ಮಾತ್ರ ದೇವರ ದಯೆ ಅಪಾರವಾಗಿತ್ತು. ದೇವರ ಧ್ಯಾನದಿಂದ ಎಲ್ಲವೂ ಮರೆತು ಹೋಯಿತು. ನಿಶ್ಚಿಂತೆಯಿಂದ ಸುಖವಾಗಿದ್ದುಬಿಟ್ಟೆ. ರಾಜ! ನಾನು ಓದುತ್ತಿದ್ದಾಗ ಒಂದು 'ಕ್ಯಾಮರ' ಇಟ್ಟುಕೊಂಡಿದ್ದೆ. ಅದರಿಂದ 'ರಮಾ' ನ ಫೋಟೋ ಅನೇಕ ತೆಗದಿದ್ದೆ. ಭಗ್ನವಾದ ಮೇಲೆ 'ಕ್ಯಾಮರಾ' ಒಡೆದು ಬಿಟ್ಟೆ. ಫೋಟೋಗಳನ್ನೆಲ್ಲಾ ಹರಿದುಹಾಕಿದೆ. ಅವಳನ್ನು ಜ್ಞಾಪಿಸಿಕೊಳ್ಳಲು ಒಂದೂ ಇರಕೂಡದೆಂದು ಹಾಗೆ ಮಾಡಿದೆ. ಆದರೆ ಈಗ ಹದಿನೈದು ದಿನಗಳ ಹಿಂದೆ ಒಂದು ಪುಸ್ತಕ ತೆಗೆದಾಗ ಅದರಲ್ಲಿ ಅವಳದೊಂದು ಫೋಟೋಯಿತ್ತು. ಅದರ ಜೊತೆಗೆ ನನ್ನ ಫೋಟೋನೂ ಇತ್ತು. ನೋಡಿ ಹಿಂದಿನದೆಲ್ಲಾ ಜ್ಞಾಪಕವಾಗಿ ಮನಸ್ಸು ಕದಲಿತು. ರಮಾ ಸುಖವಾಗಿರುವದನ್ನು ಒಂದು ಬಾ...ರಿ...ಕ...ಣ್ಣಿಂದ...ನೋಡಬೇ...ಕೆಂತ...ಆಶೆಯಾಯಿತು. ನೋಡಿದೆ ರಾಜ..ಆದರೆ...ರಮಾ...ರಮಾ...'' ಎನ್ನುತ್ತ ಅಚೇತನನಾದನು.

ರಾಜನು ಕಣ್ಣೀರು ಸುರಿಸುತ್ತ ಎಲ್ಲರನ್ನೂ ಕರೆದನು. ಡಾಕ್ಟರ್ ಬಂದು ಶೈತ್ಯೋಪಚಾರ ಮಾಡಿದನು. ಏನಾದರೂ ಎಚ್ಚರವಾಗಲಿಲ್ಲ. ಅಂತ್ಯಕಾಲವು ಸಮೀಪಿಸಿತೆಂದು ಎಲ್ಲರೂ ಸುತ್ತ ಕುಳಿತರು. ಬೆಳಗಿನ ಜಾವದಲ್ಲಿ ಮೂರ್ತಿಯು "ರಾಜ" ಎಂದು ಕೂಗಿ ಹತ್ತಿರ ಕರೆದು "ನನ್ನೆರಡುಮಾತು ನಡೆಸುತ್ತೀಯಾ" ಎಂದನು.

"ಮೂರ್ತಿ! ಏನು ಬೇಕಾದರೂ ನಡೆಸಿಕೊಡುತ್ತೇನೆ. ನಿಶ್ಚಿಂತವಾಗಿ ಹೇಳು" ಎನ್ನಲು ಕೈನೀಡಿದನು. ರಾಜನು ಅವನ ಕೈಯಲ್ಲಿ ತನ್ನ ಕೈಯನ್ನಿಡುಲ

" ರಾಜ! ನಾನು...ಬದುಕು...ವ...ದಿಲ್ಲ. ಚಕ್ರಪಾಣಿ.'' ರಾಮರಾಯರು ಚಮಚದಿಂದ ಹಾಲು ಹಾಕಲು '...ಚಕ್ರ...ನ–ನನ್ನ...ಮ...ಡಿ...ಲಲ್ಲಿ...ಹಾಕು...ದತ್ತು...' ಪುನಃ ಹಾಲು ಹಾಕಿದರು. ' ಪೆಟ್ಟಿಗೆ...ಉ...ಯಿ...ಲು...ರ...ಮಾ...ಸ...ಹಾ...ಯ...ಹುಡುಕಿ...' ಮಾತು ನಿಂತಿತು. ದೊಡ್ಡದಾಗಿ ಎರಡು ಕಣ್ಣುಗಳನ್ನೂ ಬಿಟ್ಟು ಎಲ್ಲರನ್ನೂ ಶೂನ್ಯದೃಷ್ಟಿಯಿಂದ ನೋಡಿದನು. ರಾಜನು ಕಣ್ಣೀರು ಸುರಿಸುತ್ತಾ ಅವನಿಷ್ಟದಂತೆ ನಡೆದುಕೊಳ್ಳುವದಾಗಿ ಹೇಳಿದನು. ಆರು ಗಂಟೆಗೆ ಮೂರ್ತಿಯ ಇಹಲೋಕಯಾತ್ರೆಯು ಮುಗಿಯಿತು.

ಉಳಿದುದು.

' ರಮಾ 'ನ್ನ ಹುಡುಕುವದು ರಾಜನಿಗೆ ಕಷ್ಟವಾಗಲಿಲ್ಲ. ಅವಳ ಗಂಡನು ಪೋಲಿಯಾಗಿ, ಕುಡಿತ ಜೂಜುಗಳಿಗೆ ಬಿದ್ದು, ಇದ್ದ ಸಣ್ಣ ಕೆಲಸವನ್ನೂ ಕಳೆದುಕೊಂಡು ಮನೆಯನ್ನೇ ಸೇರದೆ ಇದ್ದನು. ನಾಲ್ಕುಮಕ್ಕಳಿಗೆ ಹೊಟ್ಟೆಗಿಲ್ಲದೆ ಬಟ್ಟೆಗಿಲ್ಲದೆ, ಮರ್ಯಾದೆವಂತಳಾದ ರಮಾ ಹೇಳತೀರದ ಕಷ್ಟವನ್ನು ಅನುಭವಿಸುತ್ತಿದ್ದಳು. ಅವಳಿಗೂ ಈಗ ರೋಗ. ಮಕ್ಕಳು ಊಟವಿಲ್ಲದೆ ಉಪಚಾರವಿಲ್ಲದೆ ದಿಕ್ಕೆಟ್ಟು ಅವಳ ಸುತ್ತಲೂ ದೀನದರಿದ್ರಾವಸ್ಥೆಯಲ್ಲಿ ಕುಳಿತಿದ್ದುವು. ಅಂತಃಕರುಣಿಯಾದ ರಾಜನು ಆ ಸ್ಥಿತಿಯನ್ನು ನೋಡಿಕೊಂಡು ಅನರ್ಗಳವಾಗಿ ಅತ್ತನು. ವೈದ್ಯರನ್ನು ಕರೆಸಿ ಔಷಧವನ್ನು ಕೊಡಿಸಿದನು. ಎರಡುದಿನಗಳ ಮೇಲೆ ಗುಣಮುಖವಾದುದನ್ನು ಕಂಡು ಮೂರ್ತಿಯು ಅವಳಿಗೆ ಹದಿನೈದುಸಾವಿರ ರೂಪಾಯಿ ಕೊಟ್ಟಿರುವುದಾಗಿ ಹೇಳಲು ಪ್ರಜ್ಞೆತಪ್ಪಿ ಪುನಃ ಎಚ್ಚರಗೊಂಡು ಮೂರ್ತಿಯ ವಿಚಾರವೆಲ್ಲವನ್ನೂ ಕೇಳಿ ಕಣ್ಣೀರು ಸುರಿಸಲು ರೋಗವು ಮರುಕೊಳಿಸಿತು. ಅವಳೂ ಕಣ್ಣುಮುಚ್ಚಿಕೊಂಡಳು.

ರಾಜನು ಅವಳ ಗಂಡನನ್ನು ಹುಡುಕಿದನು. ಎಲ್ಲಿಯೂ ಸಿಕ್ಕಲಿಲ್ಲ. ಎಂಟು ದಿನಗಳ ಮೇಲೆ ಅವನ ದೇಹವು ಊರಹೊರಗಿನ ಬಾವಿಯಲ್ಲಿ ಸಿಕ್ಕಿತು. ಕುಡಿದಾಗ ಎಲ್ಲಿಯೋ ಕಾಲುಜಾರಿ ಬಿದ್ದಿದ್ದನೆಂದು ಹೇಳಿದರು.

' ರಮಾ 'ನ ಸಂಸಾರವು ರಾಜನ ಸೆರಗಿನಲ್ಲಿ ಬಿತ್ತು. ಅವನು ಸಂತೋಷದಿಂದ ವಹಿಸಿದನು.

"Love is no easy path, be sure to tread ;
This soft and perfumed pathway of the rose
Is sown full thick with thorns for lover's feet
Well may he tremble who that journey goes."

---

# ಪಾರಿಜಾತ

(ವರ್ಡ್ಸ್‌ವರ್ತ್ ಕವಿಯ ‘To the small Celandine’ ಎಂಬ ಕವಿತೆಯನ್ನು ನೋಡಿ ಬರೆದುದು).

೧

ಇಂದ್ರನ ಪುರದಲಿ ನೆಲಸಿದ ಹೂವೆ,
ಕೃಷ್ಣನ ಸತಿಯರು ಬಯಸಿದ ಹೂವೆ,
ನಕ್ಷತ್ರದವೊಲು ಮಿನುಗುವ ಹೂವೆ,
ವಜ್ರದ ಹರಳುಗಳಾರನು ಬಿಗಿದು
ಕೆಂಪಿನ ಕಾವನು ಜೋಡಿಸಿದೋಲೆಯ
ಚೆಲುವಿನ ಹೊಸ ಹೂವೆ !

೨

ತಾವರೆಯೊಂದೇ ಜಗದಲಿ ಹೂವೆ ?
ಹುಚ್ಚರು ಹಿಂದಿನ ಕಬ್ಬಿಗರೆಲ್ಲ !
ನಿನ್ನಾಚರಿತೆಯ ಸೊಗಸನು ಮರೆತು,
ಚಿಕ್ಕವನೆನ್ನುತ ನಿನ್ನನು ತೊರೆದು,
ಕಮಲವ ಬಣ್ಣಿಸಿ, ಬಣ್ಣಿಸಿ, ಬಣ್ಣಿಸಿ,
ಗುರಿಯಾದರು ನಗೆಗೆ !

೩

“ ರಮಣಿಯ ಕಂಗಳು ಕುಮುದಗಳಲ್ಲಿ,
ತಾವರೆಯಲಿ ಮುಖವಡಿ ಕಮಲದಲಿ,
ಮಲ್ಲಿಗೆಮುಗುಳಲಿ ದಂತದ ಸಾಲು,
ಕಾಯವು ಸಂಪಗೆಯೆಸಳಲಿ,—ಇಂತು
ನಿರ್ಮಿಸಿ ಕವಿಗಳು ನನ್ನನು ಬಿಟ್ಟರೆ ! ”
ಎನ್ನುತ ಕೊರಗದಿರು.

೪

ಲಲನೆಯರಂಗಕೆ ಸಮವೆಂದೆನಿಸಿ
ಹೊಗಳಿಸಿಕೊಳುವುದೆ ಜನ್ಮದ ಫಲವೆ ?
ಆಸೆಯ ತೊಡಕಿನ ಬಲೆಯಲಿ ಬಿದ್ದು
ಬಳಲುವ ಮಾನವವರ್ಗವಿದೆಲ್ಲಿ,
ಆನಂದವನುಳಿದಿನ್ನೊಂದರಿಯದ
ಕುಸುಮವೆ ನೀನೆಲ್ಲಿ !

೫

ಧರೆಯಲಿ ಹೆಸರನು ಪಡೆಯದೆ ಬಾಳಿ
ಸುಖವೇನೆನ್ನುವ ಚಿಂತೆಯಿದೇಕೆ ?
ಸ್ವರ್ಗಕೆ ಭೂಷಣವೆನಿಸಿದ ನಿನಗೆ
ನೆಲದವರೊಲಿಯದೆ ಬಿಟ್ಟರೆ ಬಿಡಲಿ,
ಮರುಳರು ಗುಣಗಳನರಿಯದೆ ಮರೆತರೆ
ಕುಂದಾವುದು ಗುಣಿಗೆ ?

೬

ಹೆಚ್ಚಿನ ಸೊಬಗನು ಹೊರಗಡೆ ಬೀರಿ
ನೆರೆಯದ, ಸರಳತೆತಾಳಿದ ಹೂವೆ,
ನಾನೇ ನಿನ್ನನು ಮೆಚ್ಚದೆ ಹಿಂದೆ
ಜರೆಯಲು, ಹೆರರನು ದೂರುವುದೇಕೆ ?
ಸಂಪಗೆ, ಕಮಲ, ಗುಲಾಬಿಯ ಹೆಮ್ಮೆಗೆ
ಮರುಳಾದೆನು ಮೊದಲು.

೭

——ಎಳೆತನದಲಿ ಹೂಗೊಯ್ಯುವೆನೆಂದು
ಅರುಣನು ಹೊರಡುವ ಮೊದಲೇ ಬಂದು
ಏರುತ ರೆಂಬೆಯನಲ್ಲಾಡಿಸಲು
ಸುರಿಯದೆ ಕುಸುಮಗಳವಿತಿರಲಾಗ
“ ಪಾಪಿಯೆ ಹೂವೇ, ಬೀಳೆಯ ! ” ಎನ್ನುತ
ನಿನ್ನನು ಶಪಿಸಿದೆನು.

೮

ಮೂಡುವ ಸೂರ್ಯನ ಕೆಂಪಿನ ಬೆಳಕು
ಗಿಡದಲಿ ಹರಡುತ ಥಟ್ಟನೆ ಕಳಚಿ
ತೂರಿದ ಹೂವಿನ ಮಳೆಯಲಿ ನೆಲವು
ಮುಚ್ಚುತ ಹಸುರೇ ಕಾಣಿಸದಿರಲು,
ಪುಷ್ಪವನಾರಿಸಲಾರದೆ ಮಲೆಯುತ
ತುಳಿದೆನು ನಾನವನು.

೯

ಎಳೆತನದಿಂದೊದಗಿದ ಪರಿಚಯವು,
ಗುಂಪಾಗೊಟ್ಟಿದ ಹೂವಿನ ನೋಟ,—
ಇದರಿಂದರಿಯದೆ, "ರೇಕುಗಳುದುರಿ
ಬೇಗನೆ ಕೆಡುವೀಹೂವೇಕೆ"ಂದು
ಜೊತೆಯವರಿದಿರಲಿ ನಿನ್ನತು ಜರೆದೆನು.
—ಮನ್ನಿಸಿದೆಲ್ಲವನು.

೧೦

ಈಚೀಚೆಗೆ ಬಹುದಿನಗಳ ಬಳಿಕ
ನಿನ್ನೊಳಗಡಗಿದ ಸತ್ತ್ವದ ಮಹಿಮೆ,
ಎಂತೋ ತಿಳಿಯೆನು ! ಮೆಲ್ಲನೆ ನನ್ನ
ಅಂತಃಕರಣಕೆ ತಟ್ಟಿತು ಬಂದು,
ಮೊದಲಿನನಾದರವೆಲ್ಲವು ತೊಲಗಿತು ;
ಚಿಗುರಿತು ಭಕ್ತಿಲತೆ.

೧೧

ಪರಮಾತ್ಮನವೊಲು ಮಾತಿಗೆ ಮೀರಿ,
ಕಣ್ಣಿಗೆ ತಿಳಿಯದು ನಿನ್ನಾಬೆಡಗು.
"ಇದು ಗುಣ"ವೆನ್ನುತ ಬೆರಲನು ನೀಡಿ
ತೋರಿಸಲರಿಯೆನು ಕೇಳುವ ಜನಕೆ.
ಆದರೆ ಕುಂದೇನಿದರಲಿ, ಹೃದಯವೆ
ಒಲಿದೊಪ್ಪಿದ ಮೇಲೆ ?

೧೨

ತಿಂಗಳ ಮೊದಲಿನ ಚಂದ್ರನ ಕಳೆಯ
ತೆರದಲಿ ದಿನದಿನಕೇರುವುದೊಲವು.
ಪರಿಚಯದೊಂದಿಗೆ ಹೆಚ್ಚುವ ಕೆಳೆಯೇ
ಮುರಿಯದೆ, ಸಡಿಲದೆ, ಬೇರೂರುವುದು.
ಹೀಗೆಯೆ ಬಲಿಯಲಿ, ಫಲಿಸಲಿ, ನಮ್ಮಾ
ಪ್ರೇಮದ ಲತೆ ಮುಂದೆ.

ತೀ|| ನಂ|| **ಶ್ರೀಕಂಠಯ್ಯ.**

---

# ಕಾವ್ಯಾವಲೋಕನ

**ವಿಮರ್ಶೆ.**—(ಮ॥ ರಾ॥ ಮಾಸ್ತಿವೆಂಕಟೇಶ ಐಯ್ಯಂಗಾರ್, ಎಂ. ಎ., ಅವರಿಂದ. ಬೆಲೆ ೧೦ ಆಣೆ.)

ಕನ್ನಡದ ಗದ್ಯಶೈಲಿಯು ಈಗಿರುವ ರೂಪವನ್ನು ತಾಳಿ ಇನ್ನೂ ಐವತ್ತು ವರುಷಗಳ ಸುಮಾರೇ ಆಗಿದ್ದಾಗ್ಯೂ, ಗದ್ಯವು ನಾನಾ ಮುಖವಾಗಿ ಬೆಳೆದು ಆಗಲೆ ವಿಧವಿಧವಾದ ಕಾವ್ಯಫಲಗಳನ್ನು ನಮಗೆ ದೊರಕಿಸಿಕೊಟ್ಟಿದೆ. ಪ್ರಬಂಧ, ಉಪನ್ಯಾಸ, ಕಾದಂಬರಿ, ಕಟ್ಟುಕಥೆ, ಸಣ್ಣಕತೆ, ವರ್ಣನೆ, ಪ್ರಹಸನ, ಸಂವಾದ, ಜೀವನಚರಿತ್ರೆ, ವಿಮರ್ಶೆ ಮೊದಲಾದ ಸಾಹಿತ್ಯಜಾತಿಗಳು, ಅದರಲ್ಲೂ ಈ ಮೂವತ್ತು ವರುಷಗಳಿಂದೀಚೆಗೆ, ಬಹುವಾಗಿ ಹುಟ್ಟಿಬಂದಿವೆ. ಹಿಂದೆ ಗದ್ಯಗ್ರಂಥಗಳು ಎಷ್ಟು ಅಪರೂಪವಾಗಿದ್ದುವೊ ಈಗ ಅವು ಅಷ್ಟೂ ಅಷ್ಟು ಸಾಮಾನ್ಯವಾಗಿ ಬರುತ್ತಿವೆ. ನಮ್ಮ ಕಾಲವನ್ನು ಗದ್ಯಸಾಹಿತ್ಯದ ಕಾಲವೆಂದೇ ಹೇಳಿದರೂ ಅದಕ್ಕೆ ಆ ಹೆಸರು ಒಪ್ಪುವುದು. ಈ ಜಾತಿಗಳೆಲ್ಲ ಸಾಮಾನ್ಯವಾಗಿ ಪಾಶ್ಚಾತ್ಯಸಾಹಿತ್ಯದ ಪರಿಚಯದಿಂದಲೂ, ಪ್ರಭಾವದಿಂದಲೂ, ಅದರಲ್ಲಿ ಪ್ರವೇಶವುಳ್ಳವರಿಂದ ಆ ಮೇಲುಪಂಕ್ತಿಗಳನ್ನನುಸರಿಸಿ ಪ್ರಚಾರಕ್ಕೆ ಬಂದಿರುವುವು. ಕೆಲವು ನೇರವಾದ ಸ್ವತಂತ್ರವಾದ ಅನುಕರಣಗಳು ; ಇನ್ನುಕೆಲವು ಇತರ ದೇಶಭಾಷೆಗಳಿಂದ ನಮ್ಮಲ್ಲಿಗೆ ಜಾರಿ ಬಂದಿರುವವು. ಹೇಗೇ ಬಂದಿರಲಿ, ಅವು ಬಹುತರವಾಗಿ ನಮ್ಮ ಪ್ರಪಂಚಕ್ಕೇ ಅಪೂರ್ವವಾದ ಜೀವಕಾಂತಿಯನ್ನು ತಂದಿರುತ್ತವೆ. ಆಧುನಿಕಸಾಹಿತ್ಯವು ಹಿಂದಿನ ಪದ್ಧತಿಗಳಲ್ಲಿಲ್ಲದಿದ್ದ ರೀತಿ, ರಚನೆ, ಕಲೆ, ವೈಖರಿಗಳಿಂದ ರಂಜಿಸುತ್ತಿದೆ. ಅದಕ್ಕೆ ಪಾಶ್ಚಾತ್ಯಸಾಹಿತ್ಯವು ಹೊಸ ಸ್ಫೂರ್ತಿಯನ್ನೂ ಆವೇಶಸಾಮಗ್ರಿಗಳನ್ನೂ ಒದಗಿಸಿಕೊಡುತ್ತಿದೆ ; ಹೊಸ ಆಶಯಗಳನ್ನೂ ಲಕ್ಷ್ಯಗಳನ್ನೂ ನಮ್ಮ ಮುಂದಿರಿಸಿದೆ ; ಪುರಾಣ, ಮತ, ಧರ್ಮ, ರಾಜ, ದೇವತೆ, ಋಷಿ, ಸಿದ್ಧರು, ಶ್ರೀಮಂತರು ಇತ್ಯಾದಿಗಳನ್ನು ಮಾತ್ರವೇ ಒಳಗೊಂಡಂತಿದ್ದ ನಮ್ಮ ಸಾಹಿತ್ಯಪ್ರಪಂಚದ ಮೇರೆಯನ್ನು ವಿಸ್ತರಿಸಿಕೊಟ್ಟು ಸಾಹಿತ್ಯವು ವಿಷಯಕ್ಕಾಗಿ ನಮ್ಮ ದಿನಚರಿಯ ಪ್ರಪಂಚಕ್ಕೆ ಇಳಿದುಬರುವಂತೆಯೂ, ನಮ್ಮ ಕಷ್ಟಸುಖಗಳನ್ನೂ, ರಾಗಾದಿಗಳನ್ನೂ, ಚಿತ್ತವಿಲಾಸಗಳನ್ನೂ, ಉದ್ಯಮಗಳನ್ನೂ

ವಿಸ್ತರಿಸಿ ಸಾಮಾನ್ಯರ ಜೀವನದಲ್ಲಿನ ಕ್ಲೇಶ, ಸುಖಸೌಂದರ್ಯಗಳನ್ನು ಪ್ರತಿಪಾದಿಸು ವಂತೆಯೂ ಮಾಡಿಕೊಟ್ಟಿದೆ; ಈ ಸಮಗ್ರವ್ಯವಹಾರ ಪ್ರಪಂಚದಲ್ಲಿ ನಾವು ಮೊದ ಲಿನಂತೆ ಸ್ವತಂತ್ರರಾಗಿ ತಿರುಗಾಡಿ ಇಲ್ಲಿನ ಆಶ್ಚರ್ಯ ಮೋಹನತೆಗಳನ್ನು ಅನುಭ ವಿಸಿ ಆನಂದಿಸಿ ಅದನ್ನು ನಮ್ಮ ಸೋದರರೆಲ್ಲರಿಗೂ ತಿಳಿಯುವ ಭಾಷೆಯಲ್ಲಿ ಹೇಳಲು ಅನುಕೂಲಮಾಡಿಕೊಟ್ಟಿದೆ. ಆ ಆಸೆಯನ್ನಾದರೂ ಹುಟ್ಟಿಸಿದೆ. ಎಂದರೆ, ಬಹು ಕಾಲದವರೆಗೂ ಕೊಳಚೆಯ ನೀರಿನಿಂದ ತುಂಬಿದ್ದು ಆಮೇಲೆ ಬತ್ತಿಹೋದಂತಿದ್ದ ಸಾಹಿತ್ಯಸರಸ್ಸಿಗೆ ತಿಳಿಯಾದ ಶುದ್ಧೋದಕವು ಬಂದು, ಅಲ್ಲಿ ಕಮಲಕನ್ನೈದಿಲೆಗಳೂ ಹಸುರೂ, ಹೂವೂ, ಜೀವವೂ ಹುಟ್ಟಿ ಪ್ರಾಣಿಗಳ ದಾಹಶಾಂತಿಗೆ ಮಾರ್ಗವಾಗಿದೆ.

ಈಗ ಬರುತ್ತಿರುವ ಕೆಲವು ತೆರನಾದ ಉತ್ತಮಕವಿತೆಗಳೆ ಆಗಲಿ, ದೃಷ್ಟಿ ಅಥವಾ ವರ್ಣನಾರೀತಿಗಳೆ ಆಗಲಿ, ಉಕ್ತಿಸ್ವಾತಂತ್ರ್ಯಗಳೆ ಆಗಲಿ, ವಿಮರ್ಶಪದ್ಧತಿ ಗಳೆ ಆಗಲಿ ಇಂಗ್ಲಿಷ್ ಸಾಹಿತ್ಯದ ಪರಿಶ್ರಮವಿಲ್ಲದಿದ್ದವರಿಂದ ಬರುತ್ತಿರಲಿಲ್ಲ; ಈಗ ನಮ್ಮ ಅವಲೋಕನಕ್ಕೆ ವಿಷಯವಾಗಿರುವ 'ವಿಮರ್ಶೆ' ಯೆಂಬ ಸುಫಲವು ದೊರೆ ಯುತ್ತಲೇ ಇರಲಿಲ್ಲ. ಇಂಥ ಪುಸ್ತಕಗಳನ್ನು, ಮನೆಗೆ ವರಲಕ್ಷ್ಮಿಯನ್ನು ಬರಮಾ ಡಿಕೊಳ್ಳುವಂತೆ, ಆದರದಿಂದಲೂ ಭಕ್ತಿಯಿಂದಲೂ ಬರಮಾಡಿಕೊಳ್ಳಬೇಕು.

ವಿಮರ್ಶೆಯ ಕರ್ತರು ಕನ್ನಡನಾಡಿನಲ್ಲಿ ಸುಪ್ರಸಿದ್ಧರು; ಅವರು ಯಾವ ಜಾತಿಯ ಸಾಹಿತ್ಯನಿರ್ಮಾಣದಲ್ಲಿ ಕೈಹಾಕಿರುವರೊ ಅವಕ್ಕೆಲ್ಲ ಕಳೆಯನ್ನೂ ಅಲಂ ಕಾರವನ್ನೂ ತಂದಿದ್ದಾರೆ. ಈ ಪುಸ್ತಕದಲ್ಲಿನ ನಾಲ್ಕು ಉಪನ್ಯಾಸಗಳಲ್ಲಿ ಯಾವು ದೂ ನಮಗೆ ಹೊಸದಲ್ಲ; ಎಲ್ಲವೂ ಆಗಿಂದಾಗ ಮಾಸಪತ್ರಿಕೆಗಳಲ್ಲಿ ಪ್ರಕಟಿತವಾಗಿ ದ್ದವು; ಆದರೂ ಪುಸ್ತಕರೂಪದಲ್ಲಿ ಒಟ್ಟಿಗೆ ಸೇರಿರುವುದು ಈಗಲೆ. ವಿಮರ್ಶೆಯ ವಿಷಯವಾಗಿ ಮೊದಲು ಇವರೇ ಉಪನ್ಯಾಸ ಒರೆದಿರುವವರು; ವಿಮರ್ಶಾತ್ಮಕ ವಾದ ಉಪನ್ಯಾಸಗಳನ್ನು ಪುಸ್ತಕವಾಗಿ ಪ್ರಚಾರಮಾಡಿರುವವರಲ್ಲಿ ಮೊದಲನೆಯ ವರೂ ಇವರೇ. ಹೀಗೆ ಈ ಕೆಲಸದಲ್ಲೆ ಒಂದು ವಿಧವಾದ ಅಪೂರ್ವತೆಯಿದೆ. ಅದರ ಜೊತೆಗೆ ಅಸಾಧಾರಣವಾದ ಗುಣಪ್ರಭಾವವೂ ಇದೆ. ಅಲ್ಲದೆ ಈ ಉಪನ್ಯಾಸಗಳು ಒಂದರ ಜೊತೆಯಲ್ಲಿ ಒಂದು ಸೇರಿ ಒಂದೇ ಕಡೆ ದೊರೆಯುವುದರಿಂದ ತುಲನಕ್ರಮ ದಿಂದಲೂ, ಸಮಷ್ಟಿಯಲ್ಲಿಯೂ ಕೆಲವು ಹೆಚ್ಚು ವಿಷಯಗಳನ್ನು ಇದರಿಂದ ನಾವು ಸಂಗ್ರಹಿಸುವುದು ಸಾಧ್ಯವಾಗಿರುವುದು. ಗ್ರಂಥಕರ್ತರು ಯಾವ ಆಶಯ ಆದರ್ಶ ಪ್ರಮಿತಿಗಳನ್ನಿಟ್ಟುಕೊಂಡು ವಿಮರ್ಶೆಗೆ ಹೊರಟಿದ್ದಾರೆಂಬುದೂ; ವಿವಿಧ ವಿಷಯ ಗಳನ್ನು ಚರ್ಚಿಸುವಾಗ ಅವರ ದೃಷ್ಟಿಯು ಏತರ ಮೇಲೆ ಬೀಳುತ್ತದೆ, ಯಾವ

ಅಂಶವು ಅವರನ್ನು ಆಕರ್ಷಿಸುತ್ತದೆ ಎಂಬುದೂ; ಬೇರೆಬೇರೆ ಕಾಲಗಳಲ್ಲಿ ಬೇರೆಬೇರೆ ವಿಷಯಗಳ ವಿಮರ್ಶೆಯಲ್ಲಿ ಅವರ ಪ್ರತಿಪಾದನಕ್ರಮವು ಹೇಗೆ ವ್ಯತ್ಯಸ್ತವಾಗಿದೆ, ಆ ಕ್ರಮದಲ್ಲಿಯೂ ದೃಷ್ಟಿರೀತಿಯಲ್ಲಿಯೂ ಅವರ ಮನಸ್ಸು ಯಾವ ರೀತಿ ತೊಡಗಿದೆ ಎಂಬುದೂ; ಎಲ್ಲಕ್ಕೂ ಮೇಲಾಗಿ ಅವರ ಮನೋಧರ್ಮವೂ ಹೃದಯವೂ ಎಂಥವು ಎಂಬುದೂ ತಿಳಿದುಬರುವುವು. ಈ ಪುಸ್ತಕದಲ್ಲಿ ಕಾಣಬಹುದಾದ ವಿಶೇಷವು ಇನ್ನೂ ಒಂದುಂಟು. ಮೊದಲನೆಯದರಲ್ಲಿ ವಿಮರ್ಶೆಯ ಮೂಲತತ್ತ್ವಗಳಾವುವು ವಿಮರ್ಶಕರ ಕಾರ್ಯವಾವುದು ಇತ್ಯಾದಿಯಾದ ಎಲ್ಲ ವಿಧ ಸಾಹಿತ್ಯಕ್ಕೂ ಹೊಂದುವ 'ಲಕ್ಷಣ' ಭಾಗವನ್ನು ಹೇಳಿದ್ದಾರೆ; ಉಳಿದ ಮೂರರಲ್ಲಿ ಆ ಸೂತ್ರಗಳು ಉದಾಹೃತವಾಗುವಂತೆ ತಾವೇ ವಿಮರ್ಶೆ ಬರೆದಿದ್ದಾರೆ. ಹೀಗೆ ಸೂತ್ರ ಉದಾಹರಣೆಗಳೆರಡೂ ಈ ಪುಸ್ತಕದಲ್ಲಿಯೆ ಸಿಕ್ಕುವುದರಿಂದ ನಮಗೆ ಅವರ ವಿಮರ್ಶಾಪದ್ಧತಿಯು ಹೀಗೇ, ಅದರ ಸ್ವರೂಪವೂ ಮುಖ್ಯಗುಣವೂ ಇಂಥವೇ ಎಂಬುದು ನಿರ್ಧರವಾಗಿ ತಿಳಿದೂಬರುವುದು.

ಇಲ್ಲಿನ ನಾಲ್ಕು ಉಪನ್ಯಾಸಗಳಲ್ಲೂ ಸಾಮಾನ್ಯವಾಗಿ ಒಂದು ಮೂಲ ಮಂತ್ರವು ಕೇಳಿಸುತ್ತಲೆ ಹೋಗುವುದು :—ಜನರ ತಿಳಿವಿನ ಮಟ್ಟವು ಏರಬೇಕು; ಅವರ ಭಾವವಿಕಾಸವೂ, ರಾಗಸಂಸ್ಕೃತಿಯೂ ಹೆಚ್ಚಾಗಬೇಕು; ಇದಕ್ಕಾಗಿ ದೇಶದಲ್ಲಿ ಸಾಹಿತ್ಯದ ಅಭಿವೃದ್ಧಿಯೂ ಪ್ರಚಾರವೂ ಬಹುವಾಗಿ ಆಗಬೇಕು; ಈ ಕಾರ್ಯದಲ್ಲಿ ಪ್ರತಿಯೊಬ್ಬರೂ ತಮ್ಮ ಕೈಯಲ್ಲಾದುದನ್ನು, ತಮತಮಗೆ ತೋರಿದ ರೀತಿಯಲ್ಲಿ ಶ್ರದ್ಧೆಯಿಂದಲೂ, ಉತ್ಸಾಹದಿಂದಲೂ ಮಾಡಿ ನೆರವಾಗಬೇಕು.—ಎಂಬುದು. ಈ ಆಶಯದ ಘೋಷವು ಹಾಡಿನಲ್ಲಿನ ಪಲ್ಲವಿಯಂತೆ ನಿರಂತರವಾಗಿ ಪುಸ್ತಕದ ನೂರು ಪುಟಗಳಲ್ಲಿಯೂ ಕೇಳಿಸುತ್ತಲೆ ಇರುವುದು. ದಾಸರ ಕೀರ್ತನೆಗಳನ್ನು ಕುರಿತ ಉಪನ್ಯಾಸದ ಕೊನೆಯಭಾಗದಲ್ಲಿ ಇದನ್ನು ವಿಶದವಾಗಿ ಸಹೃದಯರಾದ ಎಲ್ಲರ ಮನಸ್ಸಿಗೂ ನಾಟುವಂತೆ ಹೇಳಿದ್ದಾರೆ. ಇದುವರೆಗೂ ಹೇಗೋ ರಾಜರಿಂದಲೂ ಶ್ರೀಮಂತರಿಂದಲೂ ಸಾಹಿತ್ಯವು ಪೋಷಿತವಾಗಿ ಬೆಳೆದು ಬಂದಿತು. ಇನ್ನುಮೇಲೂ ಮುಂದಿನ ಶತಮಾನಗಳಲ್ಲಿ ಅರಮನೆ ಅರಸುಮನೆಗಳಲ್ಲಿ ಉತ್ತಮ ಸಾಹಿತ್ಯಕ್ಕೆ ಸ್ಥಳವು ದೊರೆವುದೆಂದು ಖಂಡಿತವಾಗಿ ಹೇಳಬಲ್ಲವರಾರು? ಆ ಭರವಸೆಯು ಮುಂದೆಮುಂದೆ ಕಡಿಮೆಯಾಗುತ್ತ ಬರಬಹುದು. ಇನ್ನು ಪಂಡಿತವರ್ಗವಿದೆ. ಆದರೆ ಬರಿಯ ಪಂಡಿತರಂಜನೆಯಿಂದ ಸಾಹಿತ್ಯದ ಮುಖ್ಯ ಕಾರ್ಯವು ನೆರವೇರಿದಂತಾಗುವುದಿಲ್ಲ. ಹಳೆಯ ಕಾಲದ ಪಂಡಿತಕವಿಗಳೂ ರಸಿಕರೂ ಪ್ರಶಂಸಿಸುತ್ತಿದ್ದ ಕಾವ್ಯಭಾಗಗಳನ್ನೂ, ಲಕ್ಷಣ

ಗಳನ್ನೂ ಈಗಿನವರೂ ಮುಂದಿನವರೂ ಅದೇ ಉತ್ಸಾಹದಿಂದ ಪ್ರಶಂಸಿಸುವರೆಂಬುದೂ ಸಂದೇಹವೇ. ಅಲ್ಲದೆ ಸಾಹಿತ್ಯನಿರ್ಮಾಣದಲ್ಲಿ ತೊಡಗುವ ಬಡಜನರ ದಿನ ದಿನದ ಉದರಪೋಷಣೆ ಬೇರೆ ಆಗಬೇಕು. ಆದುದರಿಂದ ಪಾಮರರಂಜನೆಯನ್ನೂ ಅವಶ್ಯವಾಗಿ ಮಾಡಬೇಕಾಗುತ್ತದೆ. ಬರೆದ ಪುಸ್ತಕಗಳನ್ನು ಕೊಂಡು ಓದುವವರು ಮೊದಲು ಉಂಟಾಗಬೇಕು. ಮುಂದೆ ಸಾಹಿತ್ಯದ ಅಭಿಮಾನಿಗಳೂ, ಪ್ರೋತ್ಸಾಹಕರೂ, ಪೋಷಕರೂ ಮಹಾಜನರೇನೆ. ಅವರ ಹೃದಯವನ್ನಾಕರ್ಷಿಸಿ, ಅವರ ಮನಸ್ಸಿನ ಪರಿಪಾಕಕ್ಕೇ ಕಾರಣವಾಗಿ, ಅವರಿಗೆ ಉಚ್ಚಾದರ್ಶಗಳನ್ನೂ ಮಾರ್ಗಗಳನ್ನೂ ತೋರಿಸಿ, ಅವರಲ್ಲಿ ರಸಾಭಿಜ್ಞತೆಯನ್ನೂ ಕಲಾಭಿಮಾನವನ್ನೂ ಉಂಟುಮಾಡಿ, ಆ ಮೂಲಕ ಇನ್ನೂ ಉತ್ತಮವಾದ ಸಾಹಿತ್ಯವೂ ಕಲೆಯೂ ನಿರ್ಮಾಣವಾಗುವುದಕ್ಕೆ ಈಗಿನವರು ದಾರಿಮಾಡಿಕೊಡಬೇಕು. ಈ ವಿಷಯಗಳನ್ನು ನಮ್ಮ ಗ್ರಂಥಕರ್ತರು ಒತ್ತಿಹೇಳಿ ಮಹೋಪಕಾರ ಮಾಡಿದ್ದಾರೆ.

ಈಗ ಕ್ರಮವಾಗಿ ಇಲ್ಲಿರುವ ಉಪನ್ಯಾಸಗಳ ಸಾರಾಂಶವನ್ನೂ ವಿಶೇಷ ಲಕ್ಷಣಗಳನ್ನೂ ಸ್ವಲ್ಪಮಟ್ಟಿಗೆ ಸೂಚಿಸುವೆವು :—

ಮೊದಲನೆಯ ಉಪನ್ಯಾಸವು "ಸಾಹಿತ್ಯದಲ್ಲಿ ವಿಮರ್ಶೆಯ ಕಾರ್ಯ" ಎಂಬುದು. ಈ ಸಂಬಂಧದಲ್ಲಿ ಸರ್ವಸಮ್ಮತವಾಗಿ ಏನೇನನ್ನು ಹೇಳಬಹುದೊ ಅದನ್ನೆಲ್ಲ ಅಡಕವಾಗಿದ್ದರೂ ಸುಲಭವಾದ ರೀತಿಯಲ್ಲಿ ಗ್ರಂಥಕರ್ತರು ಹೇಳಿದ್ದಾರೆ. ವಿಮರ್ಶೆಯೆಂದರೇನು ? ನಮ್ಮಲ್ಲಿ ಹಿಂದೆ ಸಾಹಿತ್ಯದ ಈ ಅಂಗವು ಪ್ರತ್ಯೇಕವಾಗಿ ಏಕೆ ಅಭಿವೃದ್ಧಿಯಾಗಲಿಲ್ಲ ? ವಿಮರ್ಶೆಯ ಮುಖ್ಯಕಾರ್ಯವಾವುದು ? ಅದರ ಮತ್ತು ಕಾವ್ಯದ ಮೂಲಗಳು ಯಾವುವು ? ಕಾವ್ಯನಿರ್ಮಾಣಶಕ್ತಿಗೂ ವಿಮರ್ಶಾಶಕ್ತಿಗೂ, ಕವಿಗೂ ವಿಮರ್ಶಕನಿಗೂ, ಇರುವ ಮುಖ್ಯ ವ್ಯತ್ಯಾಸಗಳೇನು ? ವಿಮರ್ಶೆಯು ಯಾವ ಯಾವ ಮುಖವಾಗಿ ಬೆಳೆಯಬಹುದು ? ಅದಕ್ಕೂ ಕಾಲ ಆವರಣ ಇವುಗಳಿಗೂ ಯಾವ ಸಂಬಂಧವಿದೆ ? ಉತ್ತಮ ವಿಮರ್ಶಕನಲ್ಲಿರಬೇಕಾದ ಅತ್ಯಾವಶ್ಯಕವಾದ ಗುಣವೂ ಶಕ್ತಿಯೂ ಯಾವುವು ? ಸಾಹಿತ್ಯದ ಬೆಳೆವಣಿಗೆಯಲ್ಲಿಯೂ, ಪ್ರಚಾರದಲ್ಲಿಯೂ, ಜನರ ಆಸಕ್ತಿ ಅಭಿರುಚಿಗಳನ್ನು ಹೆಚ್ಚಿಸುವ ಕಾರ್ಯದಲ್ಲಿಯೂ, ಕವಿಗಳ ಗುಣಸ್ಥಾನಗಳನ್ನು ನಿರ್ದೇಶಮಾಡಿ ಅವುಗಳಿಗೆ ಬೆಲೆಗಟ್ಟುವ ಕೆಲಸದಲ್ಲಿಯೂ ವಿಮರ್ಶಕನು ಯಾವ ರೀತಿ ನಡೆಯಬೇಕು ? ಅಲ್ಪಜ್ಞರಾದ ದುಷ್ಟರಾದ ವಿಮರ್ಶಕರಿಂದ ಯಾವ ಹಾನಿಯುಂಟು ? ಈಗಿನ ಕಷ್ಟಾವಸ್ಥೆಯಲ್ಲಿ ವಿಮರ್ಶೆಯು ಮುಖ್ಯವಾಗಿ ಮಾಡಬೇಕಾಗಿರುವುದೇನು ? ಎಂಬುವು ಹೇಳಲ್ಪಟ್ಟಿವೆ. ಅವರು

ಹೇಳಿರುವ ರೀತಿಯಲ್ಲಿ ಚರ್ಚೆಗೆ ಆಸ್ಪದವೆ ಇಲ್ಲವಾದರೂ ಒಂದೆರಡು ಕಡೆ ಮಾತ್ರ ವಿಷಯವನ್ನು ಅವರು ಇನ್ನೂ ಚೆನ್ನಾಗಿ ಸ್ಥಾಪಿಸಿ ಸಂದೇಹನಿವೃತ್ತಿ ಮಾಡಬಹುದಾಗಿತ್ತು. “ ಹಿಂದೆ ನಮ್ಮಲ್ಲಿ ದುಷ್ಟ ಗ್ರಂಥಗಳು ಪ್ರಚುರವಾಗುವುದಕ್ಕೆ ಅವಕಾಶವಿರಲಿಲ್ಲ.......ಸಭೆಗಳ ನಿರ್ದಾಕ್ಷಿಣ್ಯವಾದ ತಿರಸ್ಕಾರದಿಂದಲೂ, ಪ್ರತಿಗಳನ್ನು ಮಾಡುವುದರಲ್ಲಿ ಇದ್ದ ಕಷ್ಟಗಳಿಂದಲೂ ಒಳ್ಳೆಯ ಗ್ರಂಥಗಳು ಮಾತ್ರ ಪ್ರಾಚುರ್ಯಕ್ಕೆ ಬಂದು ಜನರಲ್ಲಿ ಒಳ್ಳೆಯ ಗ್ರಂಥಗಳ ಸ್ವಾರಸ್ಯವನ್ನು ತಿಳಿಯುವ ಶಕ್ತಿ ಹಬ್ಬಿದ್ದದ್ದರಿಂದ ಅಸಾಧು ಪ್ರವೃತ್ತಿಗಳನ್ನು ತಿದ್ದುವುದಕ್ಕಾಗಿ ವಿಮರ್ಶೆಯು ಬೇಕಾಗಿರಲಿಲ್ಲ ” ಎಂದು ಹೇಳುವರು. ದುಷ್ಟಗ್ರಂಥಗಳು ಈಗಲೂ ಇವೆ ಆಗಲೂ ಇದ್ದುವು. ಅವು ಅಚ್ಚಾಗುವುದಕ್ಕೆ ಈಗ ಅವಕಾಶ ಹೆಚ್ಚಾಗಿದ್ದರೂ ಅವಕ್ಕೆ ಸಜ್ಜನರಿಂದಲೂ, ಸಾಹಿತ್ಯ ಸಂಸ್ಕಾರವಿರುವವರಿಂದಲೂ ಮನ್ನಣೆಯೂ ಪುರಸ್ಕಾರವೂ ದೊರೆಯವು. ಈಗ ಸುಮಾರು ೨೦೦ ವರುಷಗಳಿಂದ ಈಚಿನ ಜನರ ಅಭಿರುಚಿಯಲ್ಲಿ ಯಾವುದೊ ಒಂದು ವಿಷಕ್ರಿಮಿ ಹೊಕ್ಕಿರುವಂತೆಯೂ, ಅಲ್ಲಿ ಒಂದು ವಿಧವಾದ ಅರಸಿಕತೆ ಇರುವಂತೆಯೂ ನಮಗೆ ತೋರುತ್ತಿದೆ. ಅವರು ಅದನ್ನು ಚಮತ್ಕಾರವೆಂದೂ, ಪ್ರೌಢಿಮೆಯೆಂದೂ, ರಸಸ್ಫೂರ್ತಿಯೆಂದೂ, ಶೃಂಗಾರ ಹಾಸ್ಯಗಳೆಂದೂ ಕರೆಯುತ್ತಿರುವರು. ಈಗಿನವರು ಅಂಥದನ್ನು ಕಂಡೊಡನೆಯೆ ಅದಕ್ಕೆ ಧೃತಿಗಳನ್ನು ಹಾಕಿ ಅದನ್ನು ನಾಶಮಾಡಿಬಿಡುತ್ತಾರೆ. ನಮ್ಮ ಈ ಅಭಿಪ್ರಾಯವು ತಪ್ಪಾದರೆ ವಾಠಕರ ಕ್ಷಮೆಬೇಡುತ್ತೇವೆ. ಆಮೇಲೆ, ಸದ್ಗ್ರಂಥಗಳು ನಮ್ಮ ಕಾಲದವರೆಗೂ ಉಳಿದು ಬಂದಿರುವುದು ನಿಶ್ಚಯವಾದ ವಿಷಯವೇ. ಕಾಲಪುರುಷನಿಗೆ ಸಮಾನನಾದ ವಿಮರ್ಶಕನೂ ಜಳ್ಳುತೂರುವವನೂ ಈ ಜಗತ್ತಿನಲ್ಲಿ ಬೇರೊಬ್ಬನಿಲ್ಲವಾದರೂ ಈಗ ನಮಗೆ ಉಳಿದುಬಂದಿರುವುದೆಲ್ಲ ಸದ್ಗ್ರಂಥಗಳೆ ಎಂದು ಹೇಳುವುದು ನಮಗೆ ಅಷ್ಟು ಸರಿಯಾಗಿ ತೋರುವುದಿಲ್ಲ.

ಕವಿಯು ವಿಮರ್ಶಕನೂ ಹೌದು. ಆವೇಶಕಾರ್ಯವು ಮುಗಿದು ಅವನು ಮೇಲಿನ ಚಿಲ್ಲರೆ ನಯಕೆಲಸವನ್ನು ಮಾಡುವಾಗ ಒಂದು ವಿಧವಾದ ವಿಮರ್ಶೆಯನ್ನು ಮಾಡಲೇಬೇಕಾಗುತ್ತದೆ. ಆದರೆ ಅನೇಕ ಸಂದರ್ಭಗಳಲ್ಲಿ ಆ ಆವೇಶವೇ ಅವನನ್ನು ನುಡಿಸಿ ಕಟ್ಟಡದ ರೀತಿಯನ್ನು ಕಷ್ಟವಿಲ್ಲದೆ ಹೊಂದಿಸಿಕೊಂಡುಬಿಡುತ್ತದೆ. ಬರೆ ಬರೆಯುತ್ತ ಹಿಂದೆ ಹೊಳೆಯದಿದ್ದವುಗಳು ಹೊಳೆದು ಕೃತಿ ಸೌಂದರ್ಯವು ಬೆಳೆಯುವುದನ್ನು ಕಲೆಗಾರರೆಲ್ಲರೂ ಬಲ್ಲರು. ಉನ್ನತಾವೇಶದಲ್ಲಿ ಶ್ರೇಷ್ಠಕವಿಯು ರಚಿಸಿದುದು ಅವನಿಗೇ ತಿಳಿಯದಿರುವಷ್ಟು ಉತ್ತಮವಾಗಿ ಪರಿಣಮಿಸಬಹುದು. ವಿಮರ್ಶೆಯು

ಹೆಚ್ಚಾದ ಹಾಗೆಲ್ಲ ನಿರ್ಮಾಣಶಕ್ತಿಯು ಅನೇಕವೇಳೆ ಕಮ್ಮಿಯಾಗಿ ಹೋಗಿ ಕೊನೆಗೆ ಇಂಗ್ಲೆಂಡಿನ ವರಕವಿಗಳ ಗುಂಪಿಗೆ ಸೇರಿದ ಕೋಲರಿಜ್, ಆರ್ನಾಲ್ಡ್ ಇವರುಗಳಲ್ಲಾದಂತೆ ಸಂಪೂರ್ಣವಾಗಿ ನಶಿಸಿಯೆ ಹೋಗಬಹುದು. ಅವರ ಕವನದ ನಿಸರ್ಗರಮಣೀಯತೆಯೂ ನಿರ್ಮಲತ್ವವೂ ಅದೃಶ್ಯವಾಗವುದೇನೊ ಖಂಡಿತ. ಕವಿಯ ವಿಮರ್ಶನ ಶಕ್ತಿಯು "ಮೊದಲು ...ಭಾವವನ್ನು ಗ್ರಹಿಸಿ ಅದು ವ್ಯಕ್ತವಾಗುವ ರೀತಿಯನ್ನು ಹುಡುಕುವುದು. ಆದರೆ ಮೊದಲು ಭಾವವನ್ನು ಗ್ರಹಿಸುವುದು. ಆಮೇಲೆ ಅದರಲ್ಲಿ ಎಷ್ಟನ್ನು ಇರಿಸಿಕೊಳ್ಳುವುದು ಎಂದು ನೋಡುವುದು. ಇತ್ಯಾದಿ" ವಾಕ್ಯಗಳಲ್ಲಿ ಸೂಚಿತವಾಗುವ ಕಾಲಾಂತರಾಳ, ಅನಂತರತ್ವಗಳು ನಿಜವಾಗಿಯೂ ಅಷ್ಟು ಹೆಚ್ಚಿನವೆ? ಅವು ಪ್ರತ್ಯೇಕ ಕ್ರಿಯೆಗಳೆ? ಅವು ಒಂದಾದಮೇಲೊಂದು ನಡೆಯುವ ಕ್ರಿಯೆಗಳೆ? ಷೇಕ್ಸ್‌ಪಿಯರ್, ಷೆಲ್ಲಿ, ವಾಲ್ಮೀಕಿ, ಕಾಳಿದಾಸ, ಪಂಪ, ನಾರಣಪ್ಪ ಇವರುಗಳು ಹಾಗೆ ಪರೀಕ್ಷೆಮಾಡುತ್ತ ಕಾಲಹರಣಮಾಡುತ್ತಿರಲಿಲ್ಲವೆಂದು ನಮ್ಮ ಭಾವನೆ. ಕ್ಷುದ್ರರು ಕವನಪಥದಲ್ಲಿ ತೆವಳುತ್ತಿರುವಾಗ ಅವರು ಸ್ವರ್ಗಪಥದಲ್ಲಿ ಹಾರಿ ಹಾರಿ ರೆಕ್ಕೆಬಡಿದ ಪ್ರತಿಯೊಂದು ಸಲವೂ ಮುತ್ತು ರತ್ನಗಳನ್ನು ದಾರಿಯಲ್ಲಿ ನಿರ್ಲಕ್ಷ್ಯವಾಗಿ ಎರಚುತ್ತ ಹೋಗಿರುವಂತೆ ಕಾಣುತ್ತದೆ. ಕೀಳ್ಮಟ್ಟಗಳವರೂ, ಪಂಡಿತ ಕವಿಗಳೂ, ಉನ್ನತಾವೇಶ ಬಾರದಿರುವವರೂ, ತಿಣಿಕಿತಿಣಿಕಿಯಾದರೂ ಪದ್ಯಗಳನ್ನು ಹೊಸೆಯುವವರೂ ಹೆಚ್ಚಾಗಿ ಈ ರೀತಿ ಮಾಡುವರು. ಮಹಾಕವಿಗಳಲ್ಲಿ ಆವೇಶ ಕಟ್ಟಡಗಳಿಗಿರುವ ಸಂಬಂಧವು ದೇಹಾತ್ಮಸಂಬಂಧದಂತೆ...ಹಾಗೇ ಗ್ರಂಥಕರ್ತರು "ಆವೇಶದ ಸಾಮುಗ್ರಿ ಒಂದೇ ಆಗಿದ್ದು ವಿಮರ್ಶೆ ಬೇರೆಯಾಗಿರುವ ಇಬ್ಬರು ಕವಿಗಳು ಒಂದೇ ವಿಷಯವನ್ನು ಕುರಿತು ಬರೆದರೆ ಗ್ರಂಥವು ಎರಡು ವಿಧವಾಗುವುದು. ವಿಮರ್ಶೆಯು ಹೆಚ್ಚಾಗಿದ್ದವನ ಗ್ರಂಥವು ಉತ್ತಮವಾಗುವುದು" ಎಂದಿರುವರು. ಗ್ರಂಥವು ಎರಡು ವಿಧವಾಗುವುದೇನೊ ನಿಜ; ಆದರೆ ಉತ್ತರಾರ್ಧವನ್ನು ನಾವು ಒಪ್ಪಲಾರೆವು. ಸಾಹಿತ್ಯಕೃತಿಯು ಉತ್ತಮವಾಗತಕ್ಕದ್ದು ಪ್ರತಿಭಾಬಲದಿಂದ.

ಕವಿಯ ಕಡೆಯಿಂದ ನಮ್ಮ ಗ್ರಂಥಕರ್ತರು ವಿಮರ್ಶಕನಿಗೆ ಸಲಹೆಗಳನ್ನು ಕೊಟ್ಟಿರುವ ಹಾಗೆ, ಅವರೇ ಶ್ರೇಷ್ಠ ವಿಮರ್ಶಕರೂ ಆಗಿರುವುದರಿಂದ, ಕವಿಗಳಿಗೂ ಒಂದಿಪ್ಪತ್ತು ಪಙ್ತಿಗಳಷ್ಟು ಉಪದೇಶಮಾಡಿದ್ದಾರೆ. (ಪು. ೨೪-೨೫.) ಅದನ್ನು ದಪ್ಪಕ್ಷರಗಳಲ್ಲಿ ಮುದ್ರಿಸಿ ಒತ್ತಿ ಹೇಳಬೇಕು. ಕವಿಯಶಃಪ್ರಾರ್ಥಿಗಳೆಲ್ಲರೂ ಮಮತಾಭ್ರಾಂತಿಗಳನ್ನು ಬಿಟ್ಟು ಸ್ವಪಕ್ಷಪಾತವನ್ನೂ ಇಟ್ಟುಕೊಳ್ಳದೆ, ಅದನ್ನು ಮೇಲೆ ಮೇಲೆ ಓದಿ, ತಮಗೆ ತಾವೆ ಪ್ರಶ್ನೆಹಾಕಿಕೊಂಡು, ತಮ್ಮನ್ನು ತಿದ್ದಿಕೊಳ್ಳುವರೆಂದು

ನಂಬಿದ್ದೇವೆ. ಕವಿ ಇತ್ತುದನ್ನು ಸ್ವೀಕರಿಸಿ ಅದನ್ನು ಸವಿಯುವ ಕೆಲಸ ಪಾಠಕರದು; ಪಾಠಕ ಸಮುದಾಯದ ಪರವಾಗಿ ಅದಕ್ಕೆ ಸ್ವಾಗತಕೊಟ್ಟು ಬರಮಾಡಿಕೊಳ್ಳುವ ಕೆಲಸ ಸಹೃದಯ ವಿಮರ್ಶಕನದು. ಸತ್ಕವಿಗಳ ವಿಚಾರಮಾಡುವಾಗ ಸದ್ವಿಮರ್ಶಕರ ಮಾತನ್ನೆ ಆಡುತ್ತಿರೋಣ. ಹೇಗೆ ಕವಿಗಳಲ್ಲಿ ನಾನಾ ಅಂತಸ್ತಿನವರಿರುವರೊ ವಿಮರ್ಶಕವರ್ಗದಲ್ಲಿಯೂ ಹಾಗೇ ಇರುವರು. ಕವಿಗಳ ವಿಷಯದಲ್ಲಿ ವಿಮರ್ಶಕರು ಸೌಹಾರ್ದ ಸೌಮನಸ್ಯಗಳನ್ನು ಹೇಗೆ ತೋರಿಸಬೇಕೊ, ವಿಮರ್ಶಕರ ವಿಷಯವಾಗಿ ಕವಿಗಳೂ ಹಾಗೇ ಸಹನೆ ತೋರಿಸಬೇಕು. ಅಪ್ರಿಯವಾದುದನ್ನು ನುಡಿದರೆಂದು ಬರಿಯ ಆಕ್ರೋಶಮಾಡಬಾರದು. ಅಹಂಕಾರ ಧೋರಣೆಗಳಿಂದ ಉಭಯತಾಪಿ ಉಪಯೋಗವಿಲ್ಲ. ಅಲ್ಪವಿಮರ್ಶಕನೊಬ್ಬನು ಕುಹಕದಿಂದಲೊ, ಬರಿಯ ಚೇಷ್ಟೆಗಾಗಿಯೋ ಬಾಯಿಗೆ ಬಂದ ಹಾಗೆ ಬರೆದದ್ದಾದರೆ ಉತ್ತಮ ವಿಮರ್ಶಕನು ರಂಗಕ್ಕಿಳಿದು ಬಂದು ಹುಚ್ಚುನಾಯಿಯೊಂದನ್ನು ಓಡಿಸಿಬಿಡುವಂತೆ ಆತನನ್ನು ಓಡಿಸಿಬಿಡಲಿ. ಆದರೆ ಎರಡಕ್ಷರಗಳನ್ನು ಕೂಡಿಸಿ ಪ್ರಾಸಜೋಡಿಸುವ ಸಾಮರ್ಥ್ಯವಿರುವವರೆಲ್ಲರೂ ತಾವು ಮಹಾ ಕವಿಗಳೆಂದುಕೊಂಡು ಹೆಮ್ಮೆಪಡದಿರುವುದೂ ಔದ್ಧತ್ಯದಿಂದ ವರ್ತಿಸದಿರುವುದೂ ಸಮಾಜಕ್ಕೇ ಕ್ಷೇಮಕರ. ಕವಿಗಳಾದವರೆಲ್ಲರೂ ಗಮನಿಸಬೇಕಾದ ಅಂಶವು ಮತ್ತೊಂದು; ವರಕವಿಯು ಕೂಡ ತಾನು ಬರೆದುದೆಲ್ಲ ಒಂದೇ ಸಮನಾಗಿ ಶ್ರೇಷ್ಠವಾದುದು, ಶ್ರೇಷ್ಠವಾಗಿಯೇ ಇರಬೇಕು ಎಂಬ ಹುಚ್ಚು ಭ್ರಾಂತಿಯನ್ನು ಎಷ್ಟು ದೂರದಲ್ಲಿಟ್ಟಿದ್ದರೆ ಅಷ್ಟೂ ಅಷ್ಟು ಕ್ಲೇಶಕಾರಣವನ್ನು ದೂರಧಲ್ಲಿಟ್ಟಂತಾಗುವುದು. ವರ್ಡ್ಸ್‌ವರ್ತ್ ಎಂಬ ಮಹಾಕವಿಯ ವಿಚಾರವು ನಮ್ಮ ಪಾಠಕಮಂಡಲಿಗೆ ತಿಳಿದೇ ಇದೆ. ಸುಮಾರು ೨೦೦೦ ವರ್ಷಗಳಿಗೆ ಹಿಂದೆ ಲಾಂಗೈನಸ್ ಎಂಬ ಗ್ರೀಕ್ ವಿಮರ್ಶಕವರ್ಯನು ಕವಿಗಳಿಗೆ ಉತ್ತಮವಾದ ಬುದ್ಧಿವಾದವೊಂದನ್ನು ಹೇಳಿದ್ದಾನೆ. ಕವಿಯು ತಾನು ಕವಿತಾಕಾರ್ಯದಲ್ಲಿ ತೊಡಗುವ ಮುನ್ನ, ತಾನು ಹೇಳಬೇಕೆಂದಿರುವುದನ್ನು ಹೋಮರ್, ಪ್ಲೇಟೊ, ಡೆಮಾಸ್ಥನೀಸ್ ಇವರುಗಳು ಹೇಗೆ ಹೇಳುತ್ತಿದ್ದರು? ತಾನು ಬರೆದಿರುವುದನ್ನು ಅವರು ಕಿವಿಯಿಂದ ಕೇಳಿದಾಗ ಅವರಲ್ಲಿ ಯಾವ ವಿಧವಾದ ಭಾವ ಪರಿಣಾಮಗಳು ಕಾಣುತ್ತಿದ್ದುವು? ಎಂಬುದನ್ನು ಊಹಿಸಿ, ಚಿಂತಿಸಿ, ಅದರ ಚಿತ್ರವನ್ನು ಮನಸ್ಸಿನಲ್ಲಿ ಮಾಡಿಕೊಳ್ಳುವುದು ಒಳ್ಳೆಯದಂತೆ; ಇವೆರಡಕ್ಕೂ ಮೇಲಾಗಿ, ಮುಂದಿನ ಕಾಲಗಳವರು ತಮ್ಮ ಬರವಣಿಗೆಯನ್ನು ಓದುವಾಗ ತಮ್ಮ ಕೃತಿಯ ವಿಷಯವಾಗಿ ಅವರಿಗೆ ಯಾವ ಅಭಿಪ್ರಾಯಗಳೂ ಭಾವನೆಗಳೂ ಬರಬಹುದು? ಎಂದು ಚಿಂತಿಸು

ವುದು ಅತ್ಯುತ್ತಮವಾದ ಮಾರ್ಗವಂತೆ!—ಸರ್ವಕಾಲದ ಉನ್ನತಿಯನ್ನು ಸಾಧಿಸುವ ಮಾರ್ಗವಂತೆ! ಇದು ನಮ್ಮಂಥ ಸಾಮಾನ್ಯರಿಗೆ ಅಸಾಧ್ಯ, ನಿಶ್ಚಯ; ಆದರೂ ಇದರಲ್ಲಿ ನಿಜಾಂಶ ಬಹಳವಿದೆ; ಬರೆದ ಮೇಲಾದರೂ ತಕ್ಷಣ ಅಚ್ಚುಹಾಕಿಸಿ ಪ್ರಕಟಿಸಲು ಆತುರಪಡದೆ—ಪೋಪ್ ಹೇಳಿದಂತೆ ಒಂಭತ್ತುವರ್ಷಗಳವರೆಗೆ ತಾಳದಿದ್ದರೆ ಹೋಗಲಿ, ಕಡೆಗೆ ಒಂಭತ್ತು ತಿಂಗಳಾದರೂ ತಾಳಿದ್ದು,-ಬರೆದುದಕ್ಕೆ ಮೇಲೆ ಮೇಲೆ ಒಪ್ಪಹಾಕಿ ಆಮೇಲೆ ಜನರಲ್ಲಿಗೆ ಅದನ್ನು ವಿನಯದಿಂದ ಕಳುಹಿಸುವುದು ಲಾಭಕರವಾದುದೆಂದು ನಾವು ಅಭಿಪ್ರಾಯಪಡುತ್ತೇವೆ.

ಎರಡನೆಯ ಉಪನ್ಯಾಸವು "ವೈಷ್ಣವದಾಸರ ಕೀರ್ತನೆಗಳ" ವಿಚಾರವಾದುದು. ದಾಸರು ಎಂಥವರು? ಅವರು ಜನಾಂಗಕ್ಕೆ ಮಾಡಿದುದೇನು? ಅವರ ಕೀರ್ತನೆಗಳು ಹೇಗೆ ಸಾಹಿತ್ಯಕ್ಕೆ ಸೇರುವುವು? ಎಂಬುದನ್ನು ಇಲ್ಲಿ ತಿಳಿಸಿದ್ದಾರೆ. ಮೊತ್ತದಲ್ಲಿ, 'ಇವುಗಳನ್ನು ರಚಿಸಿದ ದಾಸರೂ ಇವರ ಶಿಷ್ಯರೂ ಈ ಕೃತಿಗಳನ್ನು ಹಾಡುತ್ತ ಮನೋರಂಜನವನ್ನು ಮಾಡುತ್ತ ಜನಗಳಿರುವ ಕಡೆಯಲ್ಲೆಲ್ಲ ಅತ್ಯುತ್ತಮವಾದ ನೀತಿಯನ್ನು ಹರಡಿ ಧರ್ಮಬದ್ಧವಾದ ನಡೆವಳಿಕೆಯನ್ನು ಒಂದು ಸಂಪ್ರದಾಯವಾಗಿ ಮಾಡಿದರು' ಎಂಬುದು ಇದರ ತಿರುಳು. ಕೆಲವು ಕೀರ್ತನೆಗಳನ್ನು ಉದಾಹರಣೆಗಾಗಿ ತೆಗೆದುಕೊಂಡು ಅವುಗಳಲ್ಲಿನ ರೀತಿನೀತಿಗಳನ್ನೂ, ಅವು ತತ್ತ್ವವನ್ನು ಪ್ರತಿಪಾದಿಸುವ ಕ್ರಮವನ್ನೂ, ದಾಸರ ಪದಗಳಿಂದ ಆ ಕಾಲದಲ್ಲಿ ದೇಶಕ್ಕಾದ ಉಪಕಾರವನ್ನೂ ತೋರಿಸಿಕೊಟ್ಟಿದ್ದಾರೆ. ಈ ಕೀರ್ತನೆಗಳನ್ನು ಸಾಹಿತ್ಯವಾಗಿ ಏಕೆ ಎಣಿಸಬೇಕು? ಎಂಬ ವಿಷಯವು (೩೦-೧) ರಲ್ಲಿ ಹೇಳಿದೆ. "ಕವನವು ಸಾಹಿತ್ಯವೂ ಆಗಬೇಕಾದರೆ ಅದರಲ್ಲಿ ಮನೋರಂಜನೆ ಮಾಡುವ ಉದ್ದೇಶವು ಗೌಣವಾಗಿಯಾದರೂ ಸೇರಿರಬೇಕು." ಆದರೆ ಮನೋರಂಜನೆಯನ್ನು ಯಾವ ರೀತಿ ಮಾಡುವುದು ಎಂಬುದನ್ನು ಸ್ಪಷ್ಟವಾಗಿ ಹೇಳುವುದು ಯಾರಿಗೂ ಸುಲಭವಲ್ಲ. ದಾಸರು ನೀತಿಗಳನ್ನು ಹೇಳ ಹೊರಟವರು; ಹಾಡಿನ ಮುಖವಾಗಿ ತತ್ವಬೋಧೆ ಮಾಡಿದವರು; ಸಾಹಿತ್ಯ ಸಂಬಂಧವಾದ ಉದ್ದೇಶಕ್ಕೆ ಅವರ ಮನಸ್ಸಿನಲ್ಲಿ ಹೆಚ್ಚಿಗೆಯ ಸ್ಥಾನವಿರಲಿಲ್ಲವೆಂದು ಕಾಣುತ್ತದೆ. ಉತ್ತಮ ಸಾಹಿತ್ಯವು ಕಂಡುಬಂದಾಗ ಅದನ್ನು ಗುರುತಿಸಿ ನಾವು ಅದಕ್ಕೆ ಸಂತೋಷದ ಕಾಣಿಕೆಕೊಡಬಹುದು. ಆದರೆ ಅದು ಹೀಗೇ ಇರಬೇಕು ಹಾಗೇ ಬರಬೇಕು ಎಂದು ನಿಯಮ ಶಾಸನಗಳನ್ನು ಮಾಡುವುದು ಅವಿವೇಕ. ಗ್ರಂಥಕರ್ತರು ಉದಾಹರಿಸಿರುವ ಕೀರ್ತನೆಗಳೊಂದೆರಡರಲ್ಲಿ ಅತ್ಯುತ್ತಮ ಸಾಹಿತ್ಯಗುಣವಿದೆ. "ಕೊಳಲನೂದುವ ಚದುರ..." ಎಂಬು

ದರಲ್ಲಿ ಬಹು ಭಾಗವೂ ಹಾಗೆಯೇ ದಾಸರ ಪದಗಳಲ್ಲಿ "ನಾ ನಿನ್ನ ಧ್ಯಾನದೊಳಿರಲು—" ಎಂಬುದೂ ಉತ್ತಮಜಾತಿಗೆ ಸೇರಿದುವು. ಉಳಿದವುಗಳಲ್ಲಿ ಅಲ್ಲಲ್ಲಿ ಸಾಹಿತ್ಯದ ವೈಖರಿ, ಗುಂಫನ, ಮಾಧುರ್ಯಗಳಿವೆ. ಆದರೆ ರಚನೆಯೂ ಚಿತ್ರವೂ ಧ್ವನಿಯೂ ಎಲ್ಲ ಕಡೆಗಳಲ್ಲೂ ಒಂದೇ ಸಮನಾಗಿಲ್ಲ. ಕನಕ, ಪುರಂದರ, ಜಗನ್ನಾಥ ಮೊದಲಾದ ದಾಸರ ಈ ಕೆಲವು ಕೀರ್ತನೆಗಳು ಎಲ್ಲಾ ಒಂದು ಬಗೆಯಲ್ಲಿ ನೋಡಿದರೆ ರತ್ನಗಳೇನೆ; ಅವುಗಳಿಗೆ ಉತ್ತಮ ಸಾಹಿತ್ಯವಾಗಬಲ್ಲ ಅಂತಶ್ಶಕ್ತಿಯಿದೆ; ಇನ್ನೂ ಸ್ವಲ್ಪ ಚೆನ್ನಾಗಿ ಕಡೆದು ಸಾಣೆಯಿಟ್ಟು, ಹೊಳಪು ಹೆಚ್ಚಿಸಿ, ಚಿನ್ನದ ಕಟ್ಟಡದಲ್ಲಿಟ್ಟು ಅವುಗಳನ್ನು ಸಾಹಿತ್ಯಾಭರಣಗಳನ್ನಾಗಿ ಮಾಡಬೇಕು ಅಷ್ಟೆ. ಸಾಹಿತ್ಯದಲ್ಲಿನ ನೀತಿ ಬೋಧನೆಯು ಸೂಚನೆಯ ಕ್ರಮದಿಂದ; ಆದರದು ಧ್ವನಿಲೋಕ. ಇಲ್ಲಿ ನೀತಿ ಪ್ರಧಾನ, ಸಾಹಿತ್ಯ ಗೌಣ; ಕೆಲವು ಕಡೆ ಹಾಗೂ ಇಲ್ಲ, ಬರಿಯ ನೀತಿವಾಕ್ಯಗಳ ಪಟ್ಟಿಗಳು ಮಾತ್ರ.

ಮೂರನೆಯದು "ಸತೀಹಿತೈಷಿಣೀ" ಗ್ರಂಥಮಾಲೆಯಲ್ಲಿ ಪ್ರಕಟಿತವಾದ ಕಾದಂಬರಿಗಳ ವಿಚಾರ: ಇದನ್ನು ಬರೆದು ೧೩ ವರುಷಗಳಾದವು. ಆಗ ತಾನೆ ಗ್ರಂಥಕರ್ತರು ಹೊಸದಾಗಿ ವಿಮರ್ಶಕಾರ್ಯಕ್ಕೆ ಕೈಹಾಕಿದ್ದರು. ಅದನ್ನೆ ಈಗ ಬರೆದಿದ್ದರೆ ಅವರ ಖಂಡನೆಯು ಸಾರತಃ ಒಂದೇ ಆಗುತ್ತಿದ್ದರೂ, ಮಾತಿನಲ್ಲಿ ಅಷ್ಟು ನಿಷ್ಠುರವಾಗಿರುತ್ತಿರಲಿಲ್ಲವೆಂದೂಹಿಸಬಹುದು. ಅದನ್ನು ಪುನಃ ಅಚ್ಚುಹಾಕಿಸಿದುದಕ್ಕೆ ಕಾರಣಗಳನ್ನು ಅವರೇ ಮುನ್ನುಡಿಯಲ್ಲಿ ತಿಳಿಸಿ "ಕನ್ನಡಕ್ಕಾಗಿ ಕೆಲಸಮಾಡುತ್ತಿರುವ ಯಾರ ವಿಷಯದಲ್ಲೂ ಸೌಹಾರ್ದ ಹೊರತು ಬೇರೆಯ ಭಾವಕ್ಕೆ ನನ್ನ ಮನಸ್ಸಿನಲ್ಲಿ ಸ್ಥಳವಿಲ್ಲ" ಎಂದು ಹೇಳಿದ್ದಾರೆ. ಈ ಮಾತು ಸತ್ಯವೆಂದು ಅವರನ್ನರಿತಿರುವವರೆಲ್ಲರೂ ಒಲ್ಲರು; ಇದು ಅವರ ವಿಮರ್ಶಪದ್ಧತಿಯಲ್ಲಿಯೂ ಇರುವ ಪರಮಪಾವನವಾದ ಗುಣ.

ಇನ್ನುಳಿದಿರುವುದು ಕೊನೆಯ ಉಪನ್ಯಾಸ. ಕನ್ನಡದೇಶದ ಲಾವಣಿ ಸಾಂಗತ್ಯಗಳ ವಿಚಾರ: ಈ ಉಪನ್ಯಾಸವನ್ನು ನಾವು ಎಷ್ಟು ಪ್ರಶಂಸಿಸಿದರೂ ಕಮ್ಮಿಯೆ. ಈ ತೆರನಾದುದನ್ನು ಅವರೇ ಹಿಂದೆ ಬರೆದಿಲ್ಲ. ಇಲ್ಲಿನ ಶೈಲಿ, ಭಾವಾನುವಾದ, ವ್ಯಾಖ್ಯಾನ, ವಿಷಯ ನಿರೂಪಣೆಗಳು ಅಸದೃಶವಾದವು. ಇದುವರೆಗೆ ಪ್ರಕಟಿತವಾಗಿರುವ ಯಾವ ಉಪನ್ಯಾಸದಲ್ಲಿಯಾದರೂ ವಿಮರ್ಶೆ, ಸಾಹಿತ್ಯ, ಕಲೆಗಳು ಏಕಕಾಲದಲ್ಲಿ ಸೇರಿರುವುದೇ ಆದರೆ ಅದು ಹಾಗಿರುವುದು ಇಲ್ಲಿಯೇ. ವಿಮರ್ಶೆಯೆ ಕಲೆಯಾಗಿ ಸಾಹಿತ್ಯವಾಗಿ ರೂಪುಗೊಂಡಿರುವುದಕ್ಕೆ ಇದು ಉತ್ತಮವಾದ ಉದಾ

ಹರಣೆ. ಉಳಿದ ಉಪನ್ಯಾಸಗಳಲ್ಲಿ ವಿಷಯ ಮುಖ್ಯ ; ಅದನ್ನು ಬೇರೆ ರೀತಿಯಲ್ಲಿಯೂ ಅದರ ಗೌರವಕ್ಕೆ ಕುಂದು ಬಾರದಂತೆ ಹೇಳಿ ಅವರು ಬರೆದಿರುವ ವಾಕ್ಯಗಳನ್ನು ಮರೆತು ಬಿಡಬಹುದಾಗಿತ್ತು. ಇದರಲ್ಲಿ, ಹೇಳುವ ರೀತಿಗೆ ನಾವು ಗೌರವ ಕೊಡುತ್ತೇವೆ. ಅದು ತಿಳಿಯಾಗಿ, ಸರಳವಾಗಿ, ಸರಸವಾಗಿದೆ. ಎಲ್ಲಿಯೂ ಒಂದು ಕಠಿನಪದವಿಲ್ಲ ; ಶಬ್ದಾಡಂಬರವಾಗಲಿ, ಬುದ್ಧಿಶಕ್ತಿಯ ಬೆಡಗುಗಳಾಗಲಿ ಇಲ್ಲ. ಇಲ್ಲಿನ ಚಿತ್ರಗಳು ನಮ್ಮ ಮನಸ್ಸಿನಲ್ಲಿ ಅಳಿಸಿ ಹೋಗದಂತೆ ನಿಂತುಬಿಡುವುವು ; ಅವನ್ನು ಬೇರೊಬ್ಬರು ಹೀಗೆ ಬರೆಯಲಾರರು. ಈವರೆಗೂ ಕನ್ನಡದಲ್ಲಿ ಯಾರೂ ಬರೆದಿಲ್ಲ. ಗಂಜಾಂ ಪೈಲವಾನರು, ಕೋಲಾಟದವರು, ಭಿಕ್ಷುಕರು, ಮಲೆನಾಡಿನ ನರ್ತಕರು, ಇವರುಗಳನ್ನು ಹೀಗೆ ಚಿತ್ರಿಸಬಲ್ಲವರು 'ಸಣ್ಣಕತೆಗಳ' ಶ್ರೀನಿವಾಸರೊಬ್ಬರೆ. ಇಷ್ಟು ದಿನಗಳ ಬರೆವಣಿಗೆಯ ಫಲವಾಗಿ ಅವರಿಗೆ ದೊರೆತಿರುವ ಸೌಲಭ್ಯವೂ ಕಲಾಚಾತುರಿಯೂ ಇಲ್ಲಿನ ಪ್ರತಿಯೊಂದು ಪಂಕ್ತಿಯಲ್ಲಿಯೂ ಕಾಣುವುವು. ಅವರ ಅಂತರಂಗವೂ ವಿಷಯದ ಪ್ರವಾಹದೊಂದಿಗೆ ಸೇರಿಕೊಂಡು ಹರಿದುಕೊಂಡು ಹೋಗಿದೆ. ಆದುದರಿಂದಲೆ ಅವರಿಗೆ ಲೇಶವೂ ಶ್ರಮವಿಲ್ಲದಂತೆ ಅವರ ಲೇಖನಿಯು ಹಿಂದುಮುಂದು ನೋಡದೆ ಓಡುತ್ತಿರುವುದು. ಇಲ್ಲಿನ ಕೆಲಸವು ಚಿತ್ರಕಲೆಯ ನಯಗೆಲಸ. ಕನ್ನಡಿಗರೆಲ್ಲರೂ ಇದನ್ನು ಒಂದು ಬಾರಿಯಾದರೂ ಓದಿದರೆ ಇದು ಎಷ್ಟು ಸುಂದರವಾಗಿ ಸ್ವಾರಸ್ಯವಾಗಿರುವುದೆಂಬುದನ್ನೂ, ನಮ್ಮ ಪ್ರಶಂಸೆಯು ಉತ್ಪ್ರೇಕ್ಷೆಯಲ್ಲವೆಂಬುದನ್ನೂ ಖಂಡಿತವಾಗಿ ತಿಳಿಯುವರು. ಕೆಲವರು ಇಲ್ಲಿನ ಲಾವಣಿಗಳಲ್ಲಿ ಒಂದೆರಡು ಭಾಗಗಳನ್ನು (ಸುಮಾರು ೮೯, ೯೧ ನೆಯ ಪುಟಗಳಲ್ಲಿ ಒಂದೆರಡು ಪಾದಗಳಷ್ಟನ್ನು) ಕಿತ್ತುಹಾಕುತ್ತಿದ್ದರು ಎಂದು ಕಾಣುತ್ತದೆ. ಆದರೆ ಯಾವಾಗಲೂ ಹಿಡಿತ ಗಾಂಭೀರ್ಯಗಳೇ ಆಗಿಹೋಗಿ ಸ್ವಲ್ಪವೂ ವಿನೋದವಿಲ್ಲದೆ ಹೋದರೆ ಜೀವನವು ದುರ್ಭರವಾಗಿ ಹೋಗುವುದಲ್ಲವೆ ! ಸತ್ಸಾಹಿತ್ಯದ ಲಕ್ಷಣ ದೋಷರಾಹಿತ್ಯವಲ್ಲ ; ಗುಣಪೂರ್ಣತೆ. ಈ ಉಪನ್ಯಾಸದಲ್ಲಿ ಯಾವ ಭಾಗವನ್ನು ಎಲ್ಲಾದರೂ ತೆಗೆದು ಓದಿನೋಡಿ ; ಈ ಗುಣದ ಪ್ರಭಾವವು ಕಂಡು ಬರುವುದು. ಈ ತೆರನಾದ ವಿಮರ್ಶೆಯನ್ನು ಪ್ರಶಂಸಾತ್ಮಕವಾದ ವ್ಯಾಖ್ಯಾನ ಪದ್ಧತಿ (Interpretative Criticism) ಯದೆಂದು ಕರೆಯಬಹುದು ; ಇದು ಲ್ಯಾಫ್‌ಕ್ಯಾಡಿಯೊ ಹರ್ನ್ ಎಂಬ ವಿಮರ್ಶಕನ ಜ್ಞಾಪಕವನ್ನು ಬಾರಿಬಾರಿಗೂ ತರುತ್ತದೆ. ಇದು ರಸಜ್ಞನಾದ, ಅಭಿಮಾನಿಯಾದ, ಉತ್ತಮ ಉಪಾಧ್ಯಾಯನೊಬ್ಬನು ಮಾಡತಕ್ಕ ಕೆಲಸ. ಕಾವ್ಯಪರಿಚಯಮಾಡಿಕೊಟ್ಟು ತಾನು ಅನುಭವಿಸಿದ ಸುಖ

ವನ್ನು ಇತರರಿಗೆ ಮಾಡಿಕೊಡಬಲ್ಲ ಉತ್ಸಾಹಿಯ ಕೆಲಸ. ಸಾಹಿತ್ಯ ಪಾಠ ಹೇಳಿಕೊಡುವವರು ವಿಷಯದಲ್ಲಿ ವಿದ್ಯಾರ್ಥಿಗೆ ಹೀಗೆ ಪ್ರೀತಿ ಹುಟ್ಟಿಸಬೇಕು. ಪರೀಕ್ಷೆಗಳಲ್ಲಿ ತಮ್ಮ ಶಿಷ್ಯರನ್ನು ಉತ್ತೀರ್ಣರನ್ನಾಗಿ ಮಾಡುವುದನ್ನೇ ಮುಖ್ಯ ಧ್ಯೇಯವನ್ನಾಗಿ ಇಟ್ಟುಕೊಂಡು ಪಾಠ ಹೇಳಿಕೊಡುವ ಪದ್ಧತಿಗಳಿಗೂ ಇದಕ್ಕೂ ಎಲ್ಲಿನ ಹೋಲಿಕೆ! ಹರ್ನ್‍ರವರ ಬರೆವಣಿಗೆಯನ್ನು ನೋಡಿದಾಗಲೆಲ್ಲ ನಮ್ಮ ದೇಶದಲ್ಲಿ ಅಂಥ ಅಧ್ಯಾಪಕರು ನೂರಾರುಜನ ಇರಬಾರದಾಗಿತ್ತೆ ? ಎನ್ನಿಸುವುದು. ಈ ಉಪನ್ಯಾಸವನ್ನೋದಿ ಎಲ್ಲರೂ ಈ ಮಾರ್ಗವನ್ನು ಅನುಸರಿಸಬಾರದೆ ? ಎನ್ನಿಸುವುದು.

ಲಾವಣಿಗಳ ವಿಷಯದಲ್ಲಿ ಜನರಿಗೆ ಇನ್ನೂ ದುರಭಿಪ್ರಾಯವಿದೆ; ಅದನ್ನು ನಮ್ಮ ಗ್ರಂಥಕರ್ತರು ಸ್ವಲ್ಪಮಟ್ಟಿಗೆ ಹೋಗಲಾಡಿಸಬಲ್ಲರೆಂಬುದನ್ನು ಈ ಉಪನ್ಯಾಸವನ್ನೋದಿ ತಿಳಿಯಬಹುದು. ಕಳೆದ ಶತಮಾನದ ಆದಿಭಾಗದಲ್ಲಿ ಸ್ಕಾಟ್, ಪರ್ಸಿ ಎಂಬ ಮಹನೀಯರು ತಮ್ಮ ದೇಶದ ಜನಸಮುದಾಯದಲ್ಲಿ ವಾಡಿಕೆಗೆ ಬಂದಿದ್ದ ಲಾವಣಿ ಗೀತಿಕೆಗಳನ್ನು ಸಂಗ್ರಹಿಸಿ ಕವಿಸಮಯಾದಿ ಕೃತಕತೆಗಳಿಂದ ಜಟಿಲವಾಗಿ ಹೋಗಿದ್ದ ಇಂಗ್ಲಿಷ್ ಕವನಕಲೆಗೆ ವಿಮೋಚನೆಯನ್ನೂ, ಸ್ವಾತಂತ್ರ್ಯವನ್ನೂ, ಹೊಸ ಸ್ಫೂರ್ತಿಯನ್ನೂ ತಂದರು. ನಮ್ಮ ದೇಶದಲ್ಲಿನ ಸಾಹಿತ್ಯದ ಪುನರುಜ್ಜೀವನ ಸಮಾರಂಭದಲ್ಲಿಯೂ ಈ ರೀತಿಯಾಗಿ ಯತ್ನಗಳು ಅನೇಕವಾಗಿ ನಡೆದರೆ ನಮ್ಮ ಅಭೀಷ್ಟಗಳೂ ಸಿದ್ಧಿಯಾಗಲಾರವೇನು ? ನಮಗೂ ಆ ತೆರನಾದ ಫಲಗಳು ದೊರೆಯುವೇನು ?

ವಿಮರ್ಶೆಯಲ್ಲಿ ತುಲನ ಪದ್ಧತಿ, ವಿದ್ವತ್ ಅಥವಾ ಚರ್ಚಾ ಪದ್ಧತಿ, ಚರಿತ್ರ ಪದ್ಧತಿ, ಚಿತ್ರಪದ್ಧತಿ, ಕವಿಯ ಆವರಣಜೀವನ ಚರಿತ್ರಾದಿಗಳಮೇಲೆ ಆಧಾರಮಾಡಿ ಬರೆಯುವ ಪದ್ಧತಿ; ಶಾಸನಪದ್ಧತಿ, ಸ್ಥಾನನಿರ್ದೇಶಪದ್ಧತಿ ಇತ್ಯಾದಿಯಾಗಿ ಹಲವು ಪದ್ಧತಿಗಳಿವೆ; ಇವೆಲ್ಲವೂ ಪರಸ್ಪರಸಹಾಯಕವೇ ಹೊರತು ಒಂದನ್ನು ಬಿಟ್ಟು ಒಂದಕ್ಕೆ ಪ್ರಾಶಸ್ತ್ಯ ಕಡಿಮೆ. ಸೇಂಟ್‍ಬೂವ್, ಟೈನ್ ಇವರುಗಳ ತರುವಾಯ ಬಂದಿರುವ ಶ್ರೇಷ್ಠ ವಿಮರ್ಶೆಗಳಲ್ಲೆಲ್ಲ ಈ ಎಲ್ಲ ಅಂಶಗಳೂ ಒಟ್ಟಿಗೆ ಕಂಡುಬರುವುವು. ನಮ್ಮ ಗ್ರಂಥಕರ್ತರು ಈಗ ಮಾಡಿರುವುದು ವಿಮರ್ಶೆಯ ಮುಖ್ಯವಾದ-ಮೊದಲನೆಯ-ಅತ್ಯಾವಶ್ಯಕವಾದ ಕೆಲಸ. "ಕಾವ್ಯದಿಂದ ಬರಬೇಕಾದ ಸಂಪೂರ್ಣ ಸಂಸ್ಕಾರವು ಓದುವವನಿಗೆ ಬರುವಂತೆ ಮಾಡತಕ್ಕದ್ದು ವಿಮರ್ಶಕನ ಕಾರ್ಯದ ಮುಖ್ಯಾಂಶ" ಎಂದು ಅವರು ಹೇಳಿರುವರು. ಈ ಕೆಲಸಕ್ಕೆ ಕವಿಗೆ ಸದೃಶವಾದ ಪ್ರತಿಭೆಯೂ ವಿಮರ್ಶಕನಿಗೂ ಬೇಕು. ಆ ಪ್ರತಿಭಾಸಂಪತ್ತಿಲ್ಲದಿರುವವರು ವಿಮ

ರ್ಶೆಗೆ ಕೈ ಹಾಕಬಾರದು. ನಮ್ಮ ಗ್ರಂಥಕರ್ತರಿಗೆ ಆ ಸಂಪತ್ತು ವಿಪುಲವಾಗಿದೆ ಯೆಂದು ನಾವು ಈಗ ಹೇಳಬೇಕೆ ?

ಈ ಪುಸ್ತಕವು ವಿಮರ್ಶೆಯ ಮೊದಲನೆಯ ಭಾಗ. ಇನ್ನುಮುಂದೆ ಇಂಥ ಪುಸ್ತಕಗಳನ್ನು ಅನೇಕವಾಗಿ ಇವರು ರಚಿಸುವರು. ಇಂಥ ಪುಸ್ತಕಗಳು ಬರುವ ದಿನಗಳು ನಮಗೆ ಹಬ್ಬದ ದಿನಗಳಂತೆ; ಆದುದರಿಂದ ಅವನ್ನು ಆತುರದಿಂದ ನಿರೀಕ್ಷಿಸುತ್ತಿದ್ದೇವೆ. ಅಲ್ಲಿ ರುಚಿಯಾದ ಭಕ್ಷ್ಯಭೋಜ್ಯಗಳು ದೊರೆಯುವುವೆಂದು ನಮಗೆ ದೃಢವಾದ ನಂಬುಗೆ.

ವಿ. ಸೀ.

---

**ಶ್ರೀ ವಿದ್ಯಾರಣ್ಯವಿಜಯ** (ನಾಟಕ)—ಲೇಖಕರು, ಮ|| ಡಿ. ವಿ. ಗುಂಡಪ್ಪನವರು ; ಡೆಮ್ಮಿ ಪುಟಗಳು ೧೧೪. ಬೆಲೆ ?

ಕರ್ಣಾಟಕದೇಶದಲ್ಲಿ ಪೌರುಷವನ್ನು ಬಿತ್ತಿ ಬೆಳೆದು, ಸಂಪತ್ತು ಸುಖಶಾಂತಿಗಳನ್ನು ತಂದು, ದೇಶವನ್ನು ಪುನರುಜ್ಜೀವನಗೊಳಿಸಿದ ಶ್ರೀ ವಿದ್ಯಾರಣ್ಯರನ್ನು ನೆನೆಸಿಕೊಂಡು ಈಗ ನಮ್ಮ ದೇಶದ ಕವಿಗಳೂ ವಿದ್ವಾಂಸರೂ ಅವರ ಮತ್ತು ಅವರ ಕಾಲದ ಚರಿತ್ರೆಯನ್ನು ವ್ಯಾಸಂಗಮಾಡುತ್ತ ಗ್ರಂಥಗಳನ್ನು ಬರೆಯುತ್ತಿರುವುದು ಒಂದು ಶುಭಸೂಚನೆಯಾಗಿದೆ. ಈಗ ನಾಲ್ಕಾರು ವರ್ಷಗಳಿಂದೀಚೆಗೇ ಈ ವಿಷಯವಾಗಿ ಹಲವು ಗದ್ಯ ಪದ್ಯ ನಾಟಕಗ್ರಂಥಗಳು ಹುಟ್ಟಿ ಗೌರವವನ್ನು ಪಡೆದಿವೆ. ಇಂಥ ಗ್ರಂಥಗಳನ್ನು ಬರೆದಿರುವವರಲ್ಲಿ ಮ|| ಡಿ. ವಿ. ಗುಂಡಪ್ಪನವರು ಗಣ್ಯರಾಗಿದ್ದಾರೆ. ಈ ವಿಷಯವನ್ನು ಅವರು ಎಷ್ಟು ಶ್ರಮವಹಿಸಿ ವ್ಯಾಸಂಗಮಾಡಿದ್ದಾರೆಂಬುದನ್ನೂ, ತಮ್ಮ ವ್ಯಾಸಂಗದ ಫಲವನ್ನು ಎಷ್ಟು ತೃಪ್ತಿಕರವಾಗಿ ಕನ್ನಡಿಗರಿಗೆ ಕೊಟ್ಟಿದ್ದಾರೆಂಬುದನ್ನೂ ತಿಳಿದುಕೊಳ್ಳಬೇಕಾದರೆ ಅವರ "ಶ್ರೀ ವಿದ್ಯಾರಣ್ಯರು ಮತ್ತು ಅವರ ಕಾಲ" ಎಂಬ ಗದ್ಯಗ್ರಂಥವನ್ನು ನೋಡಬೇಕು. ಅವರು ಈಗ್ಗೆ ಸುಮಾರು ನಾಲ್ಕು ವರ್ಷಗಳ ಕೆಳಗೆ ಆ ಗ್ರಂಥವನ್ನು ಪ್ರಕಟಿಸಿದಾಗ ಅದರ "ವಿಜ್ಞಾಪನೆ" ಯಲ್ಲಿ ಹೀಗೆಂದು ಬರೆದಿದ್ದರು :—

> "ಉಪನ್ಯಾಸದ ರೀತಿಯಲ್ಲಿ ಸಮರ್ಪಕವಾಗಿ ಬಣ್ಣಿಸಲಾಗದ ಐತಿಹಾಸಿಕ ತತ್ತ್ವಗಳು ಕೆಲವುಂಟು. ಅವುಗಳನ್ನು ಕಾವ್ಯದ ರೀತಿಯಲ್ಲಿ ಜನರ ಊಹಾಶಕ್ತಿಗೆ ಗೋಚರಪಡಿಸಬಹುದು. ಈ ನಂಬಿಕೆಯಿಂದ, ವಿದ್ಯಾರಣ್ಯರ ಕಾರ್ಯರೀತಿಯನ್ನು ತೋರಿಸಲು ಒಂದು "ನಾಟಕ" ಅಥವಾ ದೃಶ್ಯ ಪ್ರಕರಣವನ್ನು ಬರೆದಿರುವೆನು. ಈ ಉಪನ್ಯಾಸವನ್ನು ಓದುವ ಮಹಾಶಯರು ಇದರ ಪರಿಶಿಷ್ಟಭಾಗವಾದ ಆ "ನಾಟಕ" ವನ್ನೂ ನೋಡಬೇಕೆಂದು ಬೇಡುತ್ತೇನೆ"

ಆ "ನಾಟಕ"ವು ಈಗ "ಶ್ರೀ ವಿದ್ಯಾರಣ್ಯವಿಜಯ" ಎಂಬ ಹೆಸರಿನಿಂದ ಪ್ರಕಟವಾಗಿದೆ. ಬರ್ನಾರ್ಡ್ ಷಾ ಮುಂತಾದವರ (ಸೇಂಟ್ ಜೋನ್ ಇತ್ಯಾದಿ) ಕೆಲವು ಇಂಗ್ಲಿಷ್ ನಾಟಕಗಳನ್ನು ನೋಡಿದವರಿಗೆ ಸ್ವತಂತ್ರ ಗ್ರಂಥಗಳಂತಿರುವ ಮುನ್ನುಡಿಗಳೂ ಪರಿಶಿಷ್ಟಗಳೂ ಹೊಸದಲ್ಲ. ಆದರೆ ಅಲ್ಲಿ ನಾಟಕವೇ ಮುಖ್ಯ; ಮುನ್ನುಡಿ ಪರಿಶಿಷ್ಟಗಳು—ಅವು ಎಷ್ಟೇ ದೊಡ್ಡವಾಗಿರಲಿ—ಕೊಂಬು ಬಾಲಗಳಂತೆ ಗೌಣ. ಇಲ್ಲಿ ಅದು ತಲೆಕೆಳಕಾಗಿದೆ. ಇದರಿಂದ ಗ್ರಂಥಕರ್ತರು ತಮ್ಮ ಗದ್ಯಗ್ರಂಥಕ್ಕೆ ಎಷ್ಟು ಪ್ರಾಶಸ್ತ್ಯ ಕೊಟ್ಟಿರುವರೆಂಬುದು ಗೊತ್ತಾಗುತ್ತದೆ. ಅದರೊಳಗೆ ಎಷ್ಟು ವಿದ್ವತ್ತೂ ವ್ಯಾಸಂಗವೂ ಅಡಕವಾಗಿದೆ ಎಂದು ಅರಿತವರು ಯಾರೂ ಅವರೊಡನೆ ಈ ಸಂಬಂಧವಾಗಿ ವಿವಾದ ಮಾಡಲಾರರು. ಆ 'ನಾಟಕ'ಕ್ಕೂ ಈ 'ನಾಟಕ'ಕ್ಕೂ ಇರುವ ಪರಸ್ಪರ ಸ್ವರೂಪಭೇದವೂ ಈ ಸ್ಥಾನಭೇದವನ್ನು ಸಮರ್ಥಿಸಬಹುದು.

ಎಂಥ ಸಂಗತಿಗಳನ್ನು ನಾಟಕರೂಪದಲ್ಲಿ ಪ್ರತಿಪಾದಿಸಬೇಕು ಮತ್ತು ಏಕೆ ಎಂಬುದನ್ನೂ ಪ್ರಕೃತ ಗ್ರಂಥವು ಎಷ್ಟರಮಟ್ಟಿಗೆ 'ನಾಟಕ' ಅಥವಾ 'ರೂಪಕ'ವೆಂಬ ಹೆಸರಿಗೆ ಅಧಿಕಾರಿಯಾಗಿದೆ ಎಂಬುದನ್ನೂ ಗ್ರಂಥಕರ್ತರೇ ವಿಚಾರಮಾಡಿದ್ದಾರೆ. ಅವರು ಹೇಳುವುದೇನೆಂದರೆ :—

> "ಐತಿಹಾಸಿಕ ಸಂದರ್ಭಗಳ ಬಾಹ್ಯರೂಪವನ್ನು ಗದ್ಯೋಪನ್ಯಾಸರೂಪದ ಚರಿತ್ರೆಯು, ಅಥವಾ ಇತಿಹಾಸವು, ನಿಷ್ಕೃಷ್ಟವಾದ ರೀತಿಯಲ್ಲಿ ವಿವರಿಸಬಲ್ಲುದು. ಆದರೆ ಅವುಗಳ ಅಂತಸ್ತತ್ತ್ವವನ್ನು ಅಂತಹ ಉಪನ್ಯಾಸವೊಂದರಿಂದಲೇ ಸ್ಪಷ್ಟಗೊಳಿಸಲು ಆಗಲಾರದು......ಸ್ಥೂಲಾಂಶಗಳನ್ನು ನ್ಯೂನಾತಿರೇಕಗಳಿಲ್ಲದಂತೆ ನಿರ್ಧರಿಸಿ ಉಲ್ಲೇಖಿಸುವುದು ಗದ್ಯಪ್ರಬಂಧದ ಕೆಲಸ. ಆದರೆ ಈ ಬಾಹ್ಯವ್ಯಾಪಾರಗಳ ನಡುವೆ ಅಡಗಿಕೊಂಡಿರುವ ಸೂಕ್ಷ್ಮಾಂಶಗಳು ಕೆಲವು ಬೇರೆ ಇದ್ದೇ ಇರುತ್ತವೆ...ಇವುಗಳನ್ನು ಬಹುಮಟ್ಟಿಗೆ ಆಯಾಸಂದರ್ಭಗಳಿಗೆ ಸಂಬಂಧಪಟ್ಟ ಪ್ರಮುಖ ಪುರುಷರು ಆಡಿದ ಮಾತುಗಳಿಂದಲೂ ತೋರಿದ ನಡತೆಗಳಿಂದಲೂ ಅವರ ಸಾಮಾನ್ಯ ಶೀಲಸ್ವಭಾವಗಳಿಂದಲೂ ಆಗಿನ ಸಾಮಾನ್ಯ ಜನತೆಯ ಆಚಾರವ್ಯವಹಾರಗಳ ರೀತಿಯಿಂದಲೂ ಅನುಮಾನಿಸಬೇಕಾಗುವುದು.
>
> ...ಹೊರಮೈಯನ್ನು...ವಚನಪ್ರಬಂಧದಲ್ಲಿ ಕಾಣಬಹುದು.... ಆದರ ಒಳಮೈಯನ್ನು ತೋರಿಸುವ ಕೆಲಸವು ಕಾವ್ಯದ ಅಧಿಕಾರಕ್ಕೆ ಸೇರಿದುದು.
>
> ...ಈ ಕೃತಿಯು ದೃಶ್ಯಕಾವ್ಯದ ರೂಪವನ್ನು ಧರಿಸಿದ್ದರೂ ಇದನ್ನು "ನಾಟಕ" ಅಥವಾ "ರೂಪಕ" ಎಂದು ಆ ಪದಗಳ ವಿಶೇಷಾರ್ಥದಲ್ಲಿ

ಕರೆಯುಬಹುದೋ ಇಲ್ಲವೋ ಎಂಬ ವಿಷಯುದಲ್ಲಿ ಲೇಖಕನಿಗೇ ಸಂದೇಹ ವುಂಟು...ಇದು ಪಾಶ್ಚಾತ್ಯರೂಪಕ ಪದ್ಧತಿಯನ್ನನುಸರಿಸಿದೆಯೆಂದೂ ಹೇಳಲಾಗುವಂತಿಲ್ಲ......

ಆದು ಹೇಗಾದರಾಗಲಿ, ನಮ್ಮ ದೇಶದಲ್ಲಿಯೂ ಇತರ ದೇಶಗಳ ಲ್ಲಿಯೂ ಪಠ್ಯ ಕಾವ್ಯಗಳು ಮಾತ್ರವೇ ಆದ ದೃಶ್ಯಕಾವ್ಯಗಳು ಎಷ್ಟೋ ಇವೆ. ಇದು ಅವುಗಳಂತಹುದಿನ್ನೊಂದು ಆದರೂ ಆಗಬಹುದು. ಇದರ ದೃಶ್ಯತೆಯು ಸದ್ಯಃ ಮನಶ್ಚಕ್ಷುವಿಗೆ, ಚರ್ಮಚಕ್ಷುವಿಗಲ್ಲ..."

ಮ|| ಗುಂಡಪ್ಪನವರು ಶ್ರೇಷ್ಠರಾದ ವಿಮರ್ಶಕರು. ಆದ್ದರಿಂದ, ಸಮರ್ಥ ನಾದ ವೈದ್ಯನು ತನ್ನ ದೇಹಸ್ಥಿತಿಯನ್ನು ತಾನೇ ಪರೀಕ್ಷಿಸಿ ನಿರ್ಧರಿಸಿಕೊಳ್ಳುವಂತೆ, ಅವರು ತಮ್ಮ ಕಾವ್ಯದ ಸ್ವರೂಪವನ್ನು ತಾವೇ ಪರೀಕ್ಷಿಸಿ ಹೇಳಿಕೊಂಡಿದ್ದಾರೆ. ಈ ಅವರ ನಿದಾನವು ಸುಲಭವಾಗಿ ತಳ್ಳಿಹಾಕತಕ್ಕದ್ದಲ್ಲ. ಆದರೆ ಒಬ್ಬ ಡಾಕ್ಟರು ಹೇಳುವುದನ್ನು ಮತ್ತೊಬ್ಬನು ಒಪ್ಪುವುದಿಲ್ಲ—ಅಥವಾ ಪೂರ್ತಿಯಾಗಿ ಅಂಗೀಕರಿಸುವುದಿಲ್ಲ. ಅಲ್ಲದೆ ಎಂಥ ಧನ್ವಂತರಿಗೂ ತನ್ನ ಅಂಗಾಂಗಗಳಲ್ಲಿಯೇ ತನಗೆ ಕಾಣದಿರುವ ಭಾಗಗಳುಂಟು ; ಭ್ರಾಂತಿಗೆ ಅವಕಾಶವುಂಟು. ಆದ್ದರಿಂದ ಒಬ್ಬ ಅಳಲೆಕಾಯಿ ಪಂಡಿತನೂ ಧನ್ವಂತರಿಯ ನಿದಾನವನ್ನು ಪರೀಕ್ಷೆ ಮಾಡಬಾರದೇಕೆ ?

"ಶ್ರೀವಿದ್ಯಾರಣ್ಯವಿಜಯ"ವು ಚರಿತ್ರೆ ಉಪನ್ಯಾಸ ಜೀವನಚರಿತ್ರೆ ಕಾದಂಬರಿ (?) ಇವುಗಳು ನಾಟಕರೂಪದಲ್ಲಿ ಸಮ್ಮಿಳಿತವಾಗಿರುವ ಒಂದು ಕಾವ್ಯ ವಾಗಿದೆ. ವಸ್ತುಸ್ವರೂಪವೇ ಇದಕ್ಕೆ ಕಾರಣ. "ಶ್ರೀವಿದ್ಯಾರಣ್ಯವಿಜಯ (ನಾಟಕ)" ಎಂಬ ಹೆಸರನ್ನು ನೋಡಿದರೆ ಇದನ್ನು ನಾಟಕವೆಂದೇ ಭಾವಿಸ ಬೇಕೆಂಬುದು ಗ್ರಂಥಕರ್ತರ ಆಶಯವೆಂದು ತೋರುತ್ತದೆ. ಆದರೆ,

"ಈ ಕೃತಿಯು ದೃಶ್ಯಕಾವ್ಯದ ರೂಪವನ್ನು ಧರಿಸಿದ್ದರೂ ಇದನ್ನು 'ನಾಟಕ' ಅಥವಾ 'ರೂಪಕ' ಎಂದು ಆ ಪದಗಳ ವಿಶೇಷಾ ರ್ಥದಲ್ಲಿ ಕರೆಯುಬಹುದೋ ಇಲ್ಲವೋ ಎಂಬ ವಿಷಯುದಲ್ಲಿ ಲೇಖಕನಿಗೇ ಸಂದೇಹವುಂಟು...ಈ ಪ್ರಬಂಧವು ಒಂದು ರಾಜ್ಯದ ಕಥೆ...ಇದರಲ್ಲಿರ ಬಹುದಾದ ರಸವೂ ಇತರ ನಾಟಕಗಳಲ್ಲಿರುವಷ್ಟು ಮಟ್ಟಿಗೆ ಇಲ್ಲದೆ ಇರಬ ಹುದು...ಇದು ಒಂದು ಬರಿಯ ದೃಶ್ಯಚಿತ್ರಗಳ ಪರಂಪರೆ......ಇದು 'ನಾಟಕ' ವೆಂಬ ಹೆಸರನ್ನು ಸಾಮಾನ್ಯಾರ್ಥದಲ್ಲಿ—ಎಂದರೆ ಔಪಚಾರಿಕ ವಾಗಿ ಮಾತ್ರ—ಇಟ್ಟುಕೊಳ್ಳಬಹುದೆಂದು ತೋರುತ್ತದೆ...ಇದರ ದೃಶ್ಯ ತೆಯು ಸದ್ಯಃ ಮನಶ್ಚಕ್ಷುವಿಗೆ, ಚರ್ಮಚಕ್ಷುವಿಗಲ್ಲ...ಅವರ (ಮಹಾ ಜನರ) ದೃಷ್ಟಿಯು ದಯಾರ್ದ್ರವಾಗಿರಲಿ."

ಎಂದು ಹೇಳಿ, ಇದನ್ನು ನಾಟಕವೆಂದು ಭಾವಿಸಿಕೊಂಡು ಬಾಯಿ ತೆಗೆಯ ಬಹುದಾದ ಖಂಡನಕಾರರ ಶಸ್ತ್ರಾಸ್ತ್ರಗಳನ್ನು ಉಡುಗಿಸಿಬಿಟ್ಟಿರುತ್ತಾರೆ. ಆದ್ದರಿಂದ ಇದನ್ನು ಸಂಪ್ರದಾಯಸಿದ್ಧವಾದ ನಾಟಕದ ದೃಷ್ಟಿಯಿಂದ ವಿಚಾರಮಾಡುವಂತಿಲ್ಲ—ಮಾಡುವುದೂ ಅನ್ಯಾಯ. ಆದರೂ ಈ "ಔಪಚಾರಿಕ" ನಾಟಕವನ್ನಾದರೂ ಬರೆಯುವುದಕ್ಕೆ ಆವಶ್ಯಕತೆ ಉದ್ದೇಶ್ಯಗಳೇನು, ಅವು ಎಷ್ಟರಮಟ್ಟಿಗೆ ಸಿದ್ಧಿಸಿವೆ ಎಂಬಂಶಗಳನ್ನು ಕವಿಸಮಯದ ವಾಸನೆಯನ್ನು ಇಟ್ಟುಕೊಳ್ಳದೆ ವಿಚಾರಮಾಡಬಹುದಷ್ಟೆ.

ಒಂದು ವಸ್ತುವನ್ನು ಉಪನ್ಯಾಸವಾಗಿ ಬರೆಯದೆ, ಚರಿತ್ರೆ ಕಾದಂಬರಿಗಳಾಗಿ ಬರೆಯದೆ, ನಾಟಕರೂಪವಾಗಿ ಬರೆಯುವುದರಲ್ಲಿ ವಿಶೇಷವೇನೆಂದು ನೋಡೋಣ. ಉಪನ್ಯಾಸದಲ್ಲಿ ಗ್ರಂಥಕರ್ತನು ತಾನೇತಾನಾಗಿರುವನು; ಅವನು ಹೇಳಿದ್ದೇ ಮಾತು; ಮತ್ತೊಬ್ಬರು ಮಧ್ಯೆ ಮಾತನಾಡುವಂತಿಲ್ಲ; ಅವನ ವರದಿಗೇ ಆದಷ್ಟು ಅರ್ಥಮಾಡಿಕೊಂಡು ಹೋಗಬೇಕು. ಇದಕ್ಕೆ ವಿಷಯವು ಎಷ್ಟು ಖಚಿತವಾಗಿ ನಿಶ್ಚಿತವಾಗಿದ್ದರೆ, ಪ್ರತಿಪಾದನಕ್ರಮವು ಎಷ್ಟು ಸಂಗ್ರಹವಾಗಿ ನಿಸ್ಸಂದಿಗ್ಧವಾಗಿದ್ದರೆ, ಅಷ್ಟು ಮೇಲು. ಮನುಷ್ಯರ ಕೈ ಸೋಕದೆ ತಯಾರಾದ ಸೀಮೆಯ ಔಷಧಗಳಂತೆ, ಮಾನವ ಭಾವಾನುಭಾವಗಳು ಸೋಕದೆ ಇರುವ ಶಾಸ್ತ್ರಾದಿ ಶುಷ್ಕವಿಷಯಗಳು ಇದಕ್ಕೆ ಅತ್ಯುತ್ತಮ. ಇದಕ್ಕಿಂತ ಚರಿತ್ರೆಯಲ್ಲಿಯೂ ಚರಿತ್ರೆಗಿಂತ ಕಾದಂಬರಿಯಲ್ಲಿಯೂ ಕಾದಂಬರಿಗಿಂತ ರೂಪಕದಲ್ಲಿಯೂ ಮನುಷ್ಯ ಸಹವಾಸವು ಹೆಚ್ಚುತ್ತ ಹೋಗುತ್ತದೆ. ಮಾನವ ಪ್ರಪಂಚಕ್ಕೆ ಪ್ರವೇಶಮಾಡಿದರೆ, ಅದರ ಅನುಭವವನ್ನು ಎಷ್ಟೆಷ್ಟುಮಟ್ಟಿಗೆ ಸ್ವತಃ ಮಾಡಿಕೊಳ್ಳುತ್ತ ಹೋದರೆ ಅದರ ಫಲವೂ ಪರಿಣಾಮವೂ ಅಷ್ಟಷ್ಟು ಹೆಚ್ಚುತ್ತ ಹೋಗುತ್ತದೆ. ನಾಲ್ಕು ಮೂರಲು ಹನ್ನೆರಡು ಹೊರತು ಹದಿಮೂರಾಗಲಿ ಹತ್ತೊಂಬತ್ತರೆಯಾಗಲಿ ಆಗುವುದಿಲ್ಲ. ಅದನ್ನು ಕಣ್ಣಿನಿಂದ ನೋಡಿದರೂ ಒಂದೇ, ಕೈಯಿಂದ ಎಣಿಸಿದರೂ ಒಂದೇ; ಮತ್ತೊಬ್ಬರು ಹೇಳಿದರೂ ಅದೇ, ತಾವಾಗಿ ತಿಳಿದುಕೊಂಡರೂ ಅಷ್ಟೇ; ಆದರೆ ಮನುಷ್ಯನ ಮಾತುಕಥೆಗಳು ಕಾರ್ಯಕಾರಣಗಳು ಮಾತ್ರ, ಮತ್ತೊಬ್ಬರ ಮಾತಿನಿಂದ ಗೊತ್ತಾಗುವುದಿರಲಿ, ತಾವಾಗಿ ನೋಡಿದರೂ ಸರಿಯಾಗಿ ಗ್ರಹಿಸುವುದಕ್ಕಾಗುವುವಲ್ಲ; ಅವರವರ ಸಂಸ್ಕಾರ ಸ್ವಭಾವ ಬುದ್ಧಿಗಳಿಗನುಸಾರವಾಗಿ ಬೇರೆ ಬೇರೆ ವಿಧವಾಗಿ ಗೋಚರಿಸತಕ್ಕುವು. ಆದ್ದರಿಂದ, ಅರಿಯದ ಮಕ್ಕಳಿಗೆ ಆನೆಯನ್ನು ವರ್ಣಿಸಿ ತಿಳಿಸುವುದಕ್ಕಿಂತ ಅದನ್ನೇ ತೋರಿಸುವುದು, ಅಥವಾ ಕಡೆಯಪಕ್ಷಕ್ಕೆ ಅದರ ಚಿತ್ರವನ್ನಾ

ದರೂ ತೋರಿಸುವುದು, ಹೇಗೆ ಉತ್ತಮವೋ ಹಾಗೆಯೇ ಕವಿಯು ಒಂದು ಸನ್ನಿವೇಶವನ್ನು ತನ್ನ ಮಾತುಗಳಲ್ಲಿ ವರ್ಣಿಸದೆ ಅದರ ಕರ್ತೃಗಳೇ ಬಂದು ಅದನ್ನು ಸೃಷ್ಟಿಸುವಂತೆ ಮಾಡುವುದು ಉತ್ತಮ. ಆಗ ತಿಂಡಿಯ ವರ್ಣನೆಯನ್ನು ಕೇಳಿ ಹಸಿವಿನಿಂದ ಪೀಡಿತರಾಗುವದಕ್ಕೆ ಬದಲು, ಸಾಕ್ಷಾತ್ತಾದ ಅನುಭವದಿಂದ ಭಕ್ಷ್ಯಭೋಜ್ಯಗಳನ್ನು ತಿಂದು ಸಂತೋಷಪಡುವಹಾಗಾಗುವುದು. ಇದಕ್ಕೆ ಕವಿಯು ತಾನು ರಂಗಕ್ಕೆ ಬಂದು ನಿಂತು ನಾಟೀ ರಾಗ ಎಳೆಯುವುದನ್ನು ನಿಲ್ಲಿಸಿ, ಬೇಕಾದ ದೃಶ್ಯ ಪರಿಕರಗಳನ್ನೂ ಪಾತ್ರಗಳನ್ನೂ ಮುಂದುಮಾಡಬೇಕು. ಅವರಿಂದ ಮಾತನಾಡಿಸಿ ಕೆಲಸಮಾಡಿಸಬೇಕು. ನಾಟಕವು ಆರಂಭವಾಯಿತೆಂದರೆ ಅವನಿಗೆ (ಪಾರ್ಶಿ ನಾಟಕಗಳ ವಿದೂಷಕನಂತಾಗಲಿ, ತಮಿಳು ನಾಟಕಗಳ ಕೋಡಂಗಿಯಂತಾಗಲಿ) ಮಧ್ಯೆ ತಲೆಹಾಕುವುದಕ್ಕೆ ಅಪ್ಪಣೆಯಿಲ್ಲ. ಈ ನಿಷೇಧವು ಚರಿತ್ರೆಯಲ್ಲಿ ಸೂಕ್ಷ್ಮವಾಗಿಯೂ ವಿಕಲ್ಪವಾಗಿಯೂ ಇದ್ದು, ಕಾದಂಬರಿಯಲ್ಲಿ ಹುಟ್ಟಿ ಬೆಳೆದು, ರೂಪಕದಲ್ಲಿ ಸರ್ವವ್ಯಾಪಿಯಾಗಿ ನಿಲ್ಲುತ್ತದೆ. ತಾತ್ತ್ವಿಕ ಪ್ರಪಂಚದಲ್ಲಿ ಜನರ ಮಾತುಕಥೆಗಳೂ ಕಾರ್ಯಾಕಾರ್ಯಗಳೂ ಹೇಗೆ ಅವರ ಜೀವಸೂಚಕವೋ ಹಾಗೇ ಪಾತ್ರಗಳ ಮಾತುಕಥೆಗಳೂ ಕಾರ್ಯಾಕಾರ್ಯಗಳೂ ಅವುಗಳ ಜೀವಸೂಚಕ. ಅವುಗಳ ಜೀವವೇ ನಾಟಕದ ಜೀವ. ಅವು ಎಷ್ಟೆಷ್ಟು ಅನೈಸರ್ಗಿಕವಾಗಿ, ಅನುಭವವಿಲ್ಲದ ವೇಷಧಾರಿಗಳಂತೆಯೋ, ಸೂತ್ರದ ಬೊಂಬೆಗಳಂತೆಯೋ, ಸೂತ್ರಗಳೂ ಇಲ್ಲದ ಬೊಂಬೆಗಳಂತೆಯೋ ಆಗುವರೋ, ನಾಟಕವೂ ಅಷ್ಟಷ್ಟುಮಟ್ಟಿಗೆ ನಿರ್ಜೀವವಾಗಿ ಹೀನವಾಗಿ ಹೋಗುತ್ತದೆ. ಈ ಅಂಶದಲ್ಲಿ ನೈಪುಣ್ಯ ಒಂದಿದ್ದರೆ ನೋಟಕರಲ್ಲಿ ಸತ್ಯಭ್ರಾಂತಿಯೂ, ಆತ್ಮೀಯತೆಯೂ ಉಂಟಾಗಿ ಸ್ಥಾಯಿಭಾವಗಳು ಉದ್ಬುದ್ಧವಾಗಿ, ರಸಾನುಭವವಾಗುವುದು. ಆದ್ದರಿಂದಲೇ ಪ್ರಾಚೀನಲಾಕ್ಷಣಿಕರು ಶ್ರವ್ಯಕಾವ್ಯಗಳಲ್ಲಿ ರೀತಿ ಗುಣ ಅಲಂಕಾರ ಮುಂತಾದವುಗಳಿಗೆ ಪ್ರಾಶಸ್ತ್ಯ ಹೇಳುತ್ತ ದೃಶ್ಯಕಾವ್ಯಗಳಲ್ಲಿ ಮಾತ್ರ ರಸಕ್ಕೆ ಪ್ರಾಧಾನ್ಯವನ್ನು ಕೊಟ್ಟಿದ್ದರು; ಆದ್ದರಿಂದಲೇ ನಾಟಕವು ಇಂದಿಗೂ ನಾನಾವಿಧವಾದ ರುಚಿ ಸಂಸ್ಕಾರ ಬುದ್ಧಿಶಕ್ತಿಗಳುಳ್ಳ ಜನರಿಗೂ ಆನಂದದಾಯಕವಾಗಿ "ಕಾವ್ಯೇಷು ನಾಟಕಂ ರಮ್ಯಂ" ಎಂಬ ಹೇಳಿಕೆಗೆ ಮೂಲವಾಗಿದೆ.

ರೂಪಕಕ್ಕೂ ಮಿಕ್ಕ ಕಾವ್ಯಜಾತಿಗೂ ಇರುವ ಮತ್ತೊಂದು ಭೇದವು ಬೆಟ್ಟಗುಡ್ಡಗಳಲ್ಲಿ ಧುಮಿಕಿ ಓಡುವ ಗಿರಿನಿರ್ಝರಿಗೂ, ಮೈದಾನದಲ್ಲಿರುವ ಚಚ್ಚೌಕವಾದ ಸರೋವರಕ್ಕೂ ಇರುವ ವ್ಯತ್ಯಾಸದಂತಹದು. ಎರಡರಲ್ಲಿಯೂ ಇರತಕ್ಕ

ಜಲವಸ್ತುವು ಒಂದೇ ಆದರೂ ಒಂದರ ಸೌಂದರ್ಯ ಮತ್ತೊಂದಕ್ಕೆ ಬರುವುದಿಲ್ಲ. ನಾಟಕದ ಕಥೆಯು ವೇಗದಿಂದ ಓಡುತ್ತಿರುತ್ತದೆ. ನಾಟಕ ನೋಡುವುದು ಒಳ್ಳೆಯ ಮೊಟಾರುಗಾಡಿಯಲ್ಲಿ ವೇಗದಿಂದ ಹೊರಟು ಪಟ್ಟಣದಲ್ಲಿ ನೋಡಬೇಕಾದ ಭಾಗ ಗಳನ್ನೆಲ್ಲಾ ಬೇಗಬೇಗ ನೋಡಿಕೊಂಡು ಮನೆಗೆ ಬಂದುಬಿಡುವ ಹಾಗೆ. ಅವುಗಳನ್ನೇ ಒಂಟೆತ್ತಿನ ಗಾಡಿಯಲ್ಲಿಯೂ ಹೋಗಿ ನೋಡಿಕೊಂಡು ಬರಬಹುದು ; ಆದರೆ ಅದು ಅಷ್ಟು ಸ್ವಲ್ಪಕಾಲದಲ್ಲಿ ಆಗುವುದಿಲ್ಲ. ಅಲ್ಲದೆ ಒಂದನ್ನು ನೋಡುವ ಹೊತ್ತಿಗೆ ಮತ್ತೊಂದರ ಅನುಭವವು ಜೀರ್ಣವಾಗಿ ಹೋಗಿರುತ್ತದೆ. ಆದ್ದರಿಂದ ರಸವತ್ತಾದ ಸನ್ನಿವೇಶಗಳನ್ನು ಮೇಲೆಮೇಲೆ ಚರ್ವಣಮಾಡಲು ಸಾಧ್ಯವಾಗುವುದಿಲ್ಲ. ಪಂಚ ಭಕ್ಷ್ಯ ಪರಮಾನ್ನದ ಔತಣವನ್ನು ಒಂದುಸಾರಿ ಕುಳಿತು ಊಟಮಾಡದೆ ಇವೊತ್ತು ಒಂದು ಭಕ್ಷ್ಯವನ್ನೂ ಇನ್ನು ಮೂರುತಿಂಗಳಿಗೆ ಒಂದನ್ನೂ ಆಮೇಲೆ ಹದಿನೈದು ದಿನ ಬಿಟ್ಟುಕೊಂಡು ಮತ್ತೊಂದು ವ್ಯಂಜನವನ್ನೂ (ಇತ್ಯಾದಿ, ಇತ್ಯಾದಿ) ನಾಲ್ಕಾರು ವರ್ಷಗಳವರೆಗೆ ಅನುಭವಿಸುತ್ತಿದ್ದು ಅವೆಲ್ಲವನ್ನೂ ಒಟ್ಟುಗೂಡಿಸಿ ಒಂದು ಔತನದ ಊಟಕ್ಕೆ ಜಮಾಕಟ್ಟಿಕೊಳ್ಳಬೇಕೆಂದರೆ, ಲೆಕ್ಕಾಚಾರವು ಸರಿಹೋ ಗದೆ ಭೋಕ್ತೃಗಳಿಂದ ದೊಡ್ಡ ಆಕ್ಷೇಪಣೆ ಬರುವುದು. ಅಲ್ಲದೆ (ಮೊಟಾರಿನ ಲ್ಲಿಯೇ ಇನ್ನು ಸ್ವಲ್ಪದೂರ ಹೋಗೋಣ !) ಸೊಗಸಾದ ವಸ್ತುಗಳನ್ನು ನೋಡು ವುದಕ್ಕೆ ಹೋದಾಗ ಮೋಟಾರಿನಲ್ಲಿ ಹೋಗುತ್ತಿದ್ದೇನೆಂಬ ದೊಡ್ಡತನದ ಪರಿಜ್ಞಾ ನವೂ ಅದರ ವೇಗವೂ ಸೇರಿ ಬರುವ ಒಂದು ಸುಖವು ಕುಂಟೆಕೊಂಡು ಹೋಗುವ ಒಂಟೆತ್ತಿನ ಗಾಡಿಯಿಂದ ಬರುವುದಿಲ್ಲ.

ಇವಲ್ಲದೆ ರಮಣೀಯವಾದ ವಸ್ತು, ಚಮತ್ಕಾರವಾದ ಸಂವಿಧಾನ, ರಸವ ತ್ತಾದ ಸನ್ನಿವೇಶಗಳು, ಪಾತ್ರಗಳ ಪ್ರದರ್ಶನ, ಸಂಭಾಷಣೆಯಲ್ಲಿ ನೈಸರ್ಗಿಕತೆ, ಇವುಗಳ ಫಲವಾಗಿ ರಸೋದ್ಬೋಧ ಇವೆಲ್ಲಾ ಕಾದಂಬರಿಯಂತೆ ನಾಟಕದಲ್ಲಿಯೂ ಇರುವುವು. ಆದರೆ ಇವೆಲ್ಲಕ್ಕೂ ಕಾದಂಬರಿಗಿಂತಲೂ ನಾಟಕದಲ್ಲಿ ಅತಿಶಯತೆ. ಅತಿಶಯತೆ ಹೆಚ್ಚಾದರೂ ನಾಟಕಕರ್ತನಿಗೆ ಸ್ವಾತಂತ್ರ್ಯವೂ ಅವಕಾಶವೂ ಕಡಿಮೆ. ಹೀಗೆ ಕೈಕಾಲು ಕಟ್ಟಿಸಿಕೊಂಡು ಅಲ್ಪಾವಕಾಶದಲ್ಲಿ ಅವನು ಅರಮನೆಯನ್ನು ಕಟ್ಟ ಬೇಕಾಗಿದೆ. ಇದರಿಂದಲೇ ನಾಟಕ ಬರೆಯುವುದು ಕಷ್ಟ; ಬರೆದರೆ ಅವನಿಗೆ ಉತ್ಕರ್ಷ.

ಈ ಉತ್ಕರ್ಷದಾಯಕವಾದ ವಿಶೇಷ ಲಕ್ಷಣಗಳಿಲ್ಲದಿದ್ದರೆ ನಾಟಕವು ನಾಟಕವಾಗುವುದಿಲ್ಲ—ನಾಟಕದ ಆಕಾರವಿದ್ದರೂ ನಾಟಕದ ಅಂದವೂ ನಾಟ ಕದ ಫಲವೂ ಬರುವುದಿಲ್ಲ. ಒಂದು ದೊಡ್ಡಮರವನ್ನು ಕಿತ್ತು ತಲೆಕೆಳಗಾಗಿ ನಿಲ್ಲಿಸಿ

ದಂತೆ ಆಗುತ್ತದೆ. ಅಂಥ ನಾಟಕಕ್ಕೆ ಬದಲಾಗಿ ಪ್ರತಿಪಾದ್ಯ ವಿಷಯವನ್ನು ಉಪನ್ಯಾಸರೂಪದಲ್ಲೇ ಹೇಳಿ ಆಯಾ ಪಾಠಕರು ಅವರವರ ಪ್ರತಿಭೆಗೆ ಅನುಗುಣವಾಗಿ ಅದನ್ನು ಪುಷ್ಟೀಕರಿಸಿಕೊಳ್ಳುವಂತೆ ಬಿಡುವುದು ಮೇಲು.

"ಪಠ್ಯನಾಟಕಗಳು" ಅಥವಾ "ಶ್ರವ್ಯರೂಪಕ" ಗಳಲ್ಲಿ ಮೇಲೆ ಹೇಳಿದ ಶುದ್ಧರೂಪಕದ ಲಕ್ಷಣಗಳೆಲ್ಲವೂ ಇರುವುದಿಲ್ಲ. ಆದರೂ, ಸೀತಿಕಾವ್ಯ ನರಸಿಂಹಾವತಾರ ತುಂಬುರಗಾನ ಇವುಗಳಂತೆ ಈ ವಿರೋಧಾಭಾಸವನ್ನೂ ಅಂಗೀಕರಿಸಬಹುದು. ಇವು ಅನೇಕ ವೇಳೆ ಅಭಿನಯಕ್ಕೆ ಅನುಕೂಲವಾಗಿಲ್ಲದಿರುವುದರಿಂದ ಪಠ್ಯವೆನ್ನಿಸಿಕೊಳ್ಳುತ್ತವೆಯೇ ಹೊರತು, ಓದುವುದಕ್ಕೆ ಬಹು ಆನಂದಕರವಾಗಿರುತ್ತವೆಂದಲ್ಲ. ಏಕೆಂದರೆ, ಇಂಥವುಗಳಲ್ಲಿ—ಅವುಗಳ ಗಾತ್ರವಿರಲಿ! ಏಕೆಂದರೆ ಗೇಟೆ, ಥಾಮಸ್ ಹಾರ್ಡಿ, ಬರ್ನಾರ್ಡ್‌ಷಾ, ಇಬ್ಸೆನ್ ಮುಂತಾದ ಪಾಶ್ಚಾತ್ಯ ಲೇಖಕರ ಈ ವಿಧವಾದ ಗ್ರಂಥಗಳು ಒಂದೊಂದು ಐನೂರು ಪುಟಗಳಿಂದ ಸಾವಿರ ಪುಟಗಳವರೆಗೂ ಇರುವುದುಂಟು. ಇಂಥವುಗಳಲ್ಲಿ—ಕಥೆಯು ಹೆಚ್ಚಾಗಿರುವುದಿಲ್ಲ. ಇದ್ದರೂ ಅದರಲ್ಲಿ ಸುಪರಿಚಿತವಾದ ರಸಗಳು ಇರುವುದಿಲ್ಲ. ಎಲ್ಲರಿಗೂ ರುಚಿಸುವಂಥ ಸರ್ವಸಾಮಾನ್ಯತೆ ಇರುವುದಿಲ್ಲ, ಕಥೆಯೂ ಬೇಗ ಸಾಗುವುದಿಲ್ಲ. ಒಂದೊಂದು ಪಾತ್ರವೂ ಒಂದೊಂದು "ಲೆಕ್ಚರ್ ಕೊಡ್ತೇನು; ಲಾಲ್ಸಬೇಕು" ಎಂದು ಹೊರಡುವುದುಂಟು. ಇದರಿಂದ ಇವುಗಳನ್ನು ಆಮೂಲಾಗ್ರವಾಗಿ ಉತ್ಸಾಹದಿಂದ ಓದುವವರೂ ಕಡಿಮೆ.

ಈ ವಿಧವಾದ ದೋಷಗಳನ್ನು—ಅಥವಾ ವೈಲಕ್ಷಣ್ಯಗಳನ್ನು—"ವಿದ್ಯಾರಣ್ಯವಿಜಯ" ದಲ್ಲಿಯೂ ಕಂಡೇ ಬಹುಶಃ ಮ|| ಗುಂಡಪ್ಪನವರು ಅದನ್ನು ಮೇಲೆಕಂಡ ಗ್ರಂಥದ ಗುಂಪಿಗೆ ಸೇರಿಸಿದ್ದಾರೆ. ಇದರಲ್ಲಿ ನಾಟಕಕ್ಕೆ ಉಚಿತವಾದ ಅನೇಕ ಸನ್ನಿವೇಶಗಳಿವೆ. ಪಾತ್ರಪ್ರತಿಪಾದನಕ್ರಮದಲ್ಲಿ ಕಣ್ಣಿಗೆ ಬೀಳುವಂಥ ವಿಶೇಷಾಂಶವೇನೂ ಇಲ್ಲ. ಈ ಗ್ರಂಥದಲ್ಲಿ ವ್ಯಕ್ತಿಪ್ರಾಶಸ್ತ್ಯವಿದ್ದರೆ ಈ ಅಂಶಕ್ಕೆ ಇನ್ನೂ ಹೆಚ್ಚಾಗಿ ಗಮನಕೊಡುತ್ತಿದ್ದರೆಂದು ತೋರುತ್ತದೆ. ಆದರೆ ಇದು ವ್ಯಕ್ತಿಯ ಅಥವಾ ವ್ಯಕ್ತಿಗಳ ಕಥೆಯಲ್ಲ—"ರಾಜ್ಯದ ಕಥೆ." ಇದರಲ್ಲಿ ಬರುವ ಪದ್ಯಭಾಗಗಳು ಕೆಲವು ಕಡೆ ಸಣ್ಣ ಖಂಡಕಾವ್ಯಗಳಾಗುವಷ್ಟು ದೊಡ್ಡವಾಗಿವೆ; ವ್ಯಾಸಸ್ತುತಿ, ರಂಗಸ್ತುತಿ ಇವು ವಿಷಯಕ್ಕೆ ತಕ್ಕಂತೆ ಗಂಭೀರವಾಗಿಯೂ ಭಕ್ತಿಪೂರ್ಣವಾಗಿಯೂ ಇವೆ. ಭಾಷೆಯು ಶುದ್ಧವಾಗಿದೆ ಎಂದು ಹೇಳಬೇಕಾಗಿಲ್ಲ. ಮ|| ಗುಂಡಪ್ಪನವರ ಭಾಷೆಯು ಯಾವಾಗಲೂ ಸುಸಂಸ್ಕೃತವಾಗಿ ಕಡೆದ

ಬುಗುರಿಯಂತಿರುತ್ತದೆ. ಆದರೆ ಈ ಗುಣವೇ ಪ್ರಕೃತದಲ್ಲಿ ಕೆಲವುಕಡೆ ಅವಗುಣ ವೆಂದು ತೋರುತ್ತದೆ. ಏಕೆಂದರೆ ಪಂಡಿತ ಪಾಮರರೆಲ್ಲರೂ ಒಂದೇ ಕಾವ್ಯ ಶೈಲಿ ಯಲ್ಲಿ ಮಾತನಾಡುವದು ಅಸಂಭವ, ಅನೈಸರ್ಗಿಕ. ಇದರಲ್ಲಿ ಸಮುದ್ರದ ಗಾಂಭೀ ರ್ಯವಿದ್ದರೂ, ಆ ಗಾಂಭೀರ್ಯವು, ಚಳಿಗೆ ಘನೀಭೂತವಾಗಿ ಒಂದು ಅಖಂಡವಾದ ಸ್ಫಟಿಕಶಿಲಾ ಫಲಕದಂತೆ ಹೊಳೆಯುತ್ತಿರುವ ಸಮುದ್ರದ ಗಾಂಭೀರ್ಯವೇ ಹೊರತು, ಅಲೆಗಳು ಎದ್ದು ಬಿದ್ದು "ವಿಸ್ತೃತಗಭೀರಭೀಕರಗರ್ತ" ಗಳನ್ನೂ "ವಕ್ರಾಶಿ ಲೋಚ್ಚಯ" ಗಳನ್ನೂ ಕಲ್ಪಿಸುತ್ತ ನೊರೆಯಿಂದ ಕೂಡಿ ಉಕ್ಕುಕ್ಕಿಬರುವ ಹಸರು ಸಮುದ್ರದ ಗಾಂಭೀರ್ಯವಲ್ಲ. ಲಾಕ್ಷಿಣಕರು, ಹಿಮತ್ಪರ್ವತ, ಆರಿಸುಚತ್ತಿರು, ಕೈಕೊಳ್ಳತಂ—ಮುಂತಾದ ಕೆಲವು ಮುದ್ರಣ ಸ್ಖಾಲಿತ್ಯಗಳಿವೆ. ಮಹಾತ್ಮ್ಯ, ಮಾಳ್ಕುಗುಂ, ಮಾರಣೆಯದಿನ, ಯವ್ವನ, ಸೇರಿಕ್ಕೊಂಡರು, ಧರ್ಮಿಷ್ಟ ಆವಶ್ಯ ವಾಗಿ, ತಮ್ಮ ಸ್ವಮತ, ಧೃವ, ಧಾರುಣೀ—ಮುಂತಾದ ಕೆಲವು ಪ್ರಯೋಗಗಳು ವಿಚಾರಣೀಯಗಳಾಗಿವೆ. ಶಿಶಿರರ್ತು, ಸೌಭ್ರಾತೃತ್ವ, ತನುಕೋಲ, ಬುದ್ಧ್ಯರಿತ್ರ— ಮುಂತಾದವುಗಳನ್ನು ಸ್ವಲ್ಪ ಸುಲಭಮಾಡಬಹುದಾಗಿತ್ತು. 'ಘರ್ಮಮುಮೋ ಜಮುಂ', 'ಯಾವ ಬಾಧೆಯೂ ಆಗದಂತೆ ಮಹಮದೀಯರು ಬಾಳುವುದಾದರೆ' 'ವಿದೇಶಾಟನೆಯೊಳ್' 'ಗಾಡದಿ ವೇದಶಾಸ್ತ್ರಂಗಳು'—ಮುಂತಾದವುಗಳನ್ನು ಬೇರೆ ಮಾತುಗಳಲ್ಲಿ ಹೇಳಿದರೆ ಉತ್ತಮ. ಮೊದಲಿನಲ್ಲಿಯೂ ಕೊನೆಯಲ್ಲಿಯೂ ಬರುವ ವೃತ್ತದಲ್ಲಿ 'ಖದ್ಯೋತ' ಶಬ್ದಕ್ಕೆ 'ಮಿಣುಕುಹುಳು' ಎಂದೂ ಅರ್ಥವಾ ಗುವುದರಿಂದ ಅದನ್ನು ಲಾಕ್ಷಣಿಕರು ಒಂದು ದೋಷವೆಂದು ಎಣಿಸಿಯಾರು.

ಇನ್ನು ಫಲಶ್ರುತಿ. ವಿದ್ಯಾರಣ್ಯರು ನಮ್ಮವರು ; ಕರ್ಣಾಟಕ ರಾಜ್ಯಸ್ಥಾಪ ಕರು ; ಕರ್ಣಾಟದೇಶೋದ್ಧಾರಕರು ; ಆದ್ದರಿಂದ ಅವರ ಚರಿತ್ರೆಯನ್ನು ಓದು ವುದು ಕನ್ನಡಿಗರೆಲ್ಲರಿಗೂ ಶ್ರೇಯಸ್ಸು. ಈ ಭಕ್ತಿಭಾವವಿಲ್ಲದೆ ಪ್ರಕೃತ ಗ್ರಂಥವನ್ನು ಓದಿದರೆ ಮತಾಭಿಮಾನವಿಲ್ಲದೆ ಮಣಿಮಂಜರಿಯನ್ನು ಓದಿದಂತೆ ಆಗುತ್ತದೆ.

ಎ. ಆರ್. ಕೃ.

---

# ವ ಸ್ತು ಕೋ ೀ ಶ

ಕರ್ಣಾಟಕ ಕಲಾಪ್ರಾಸಾದದ ಮೇಲೆ ನಿಂತಿದ್ದ ಕಲಶಗಳಲ್ಲಿ ದೊಡ್ಡದೊಡ್ಡ ಎರಡು ಸುವರ್ಣಕಲಶಗಳು ಬಿದ್ದುಹೋದುವು ! ಕಾಲನು ಸರಸ್ವತಿಯ ಕಂಠಾಭರಣ ದಿಂದ ಎರಡು ಅಮೂಲ್ಯವಾದ ರತ್ನಗಳನ್ನು ಕಳವುಮಾಡಿ ಬಿಟ್ಟನು. ಒಂದು ದೃಶ್ಯ ಜಗತ್ತನ್ನೂ ಮತ್ತೊಂದು ಶ್ರವ್ಯ ಜಗತ್ತನ್ನೂ ಬೆಳಗುತ್ತಿದ್ದದ್ದರಿಂದ, ಈಗ ಕಲಾಪ್ರಪಂಚವೇ ಕಣ್ಣು ಕಿವಿಗಳಿಲ್ಲದಂತಾಗಿ ಶೂನ್ಯವೆನಿಸುತ್ತಿದೆ. ಈ ವರ್ಷದ ಗೋಕುಲಾಷ್ಟಮಿ ಯಲ್ಲಿ ಜೀವವಿರಲಿಲ್ಲ ; ಕೃಷ್ಣನ ಮುಖದಲ್ಲಿ ಕಳೆಯಿರಲಿಲ್ಲ ; ಅವನ ಮುರಳಿಯು ಮೌನವನ್ನವಲಂಬಿಸಿತು. ವಿನಾಯಕನನ್ನು ನೋಡಿದರೆ ಅಳುತ್ತಿರುವ ವಿದೂಷಕನ ಜ್ಞಾಪಕ ಬರುತ್ತಿತ್ತು ; ಅವನಲ್ಲಿ ಪ್ರೀತಿ ಹುಟ್ಟಲಿಲ್ಲ, ಭಕ್ತಿ ಹುಟ್ಟಲಿಲ್ಲ. ಈ ಸಲದ ನವರಾತ್ರಿಯೂ ಹಾಗೆಯೇ—ಶಾರದೆಯ ವೀಣಾನಾದವು ನಿಂತುಹೋಯಿತು. ರತ್ನಾವಳಿಯಿಂದ ರಂಜಿಸುತ್ತಿದ್ದ ದೃಶ್ಯ ಪ್ರಪಂಚವು ಅದೃಶ್ಯವಾಯಿತು !

ಸರಸ್ವತಿಯ ಮನೆಯಲ್ಲಿ ಕಳವು.

ಇದುವರೆಗೂ ಮೈಸೂರು ಪಟ್ಟಣದಲ್ಲಿ ಚಾತುರ್ಮಾಸವು ಸಂಗೀತೋದ್ಯಾನ ಕ್ಕೆ ವಸಂತಋತುವಿನಂತಿರುತ್ತಿತ್ತು. ಗೋಕುಲಾಷ್ಟಮಿಯು ಆರಂಭವಾಯಿತೆಂದರೆ ಶೇಷಣ್ಣನವರ ಮನೆಯಲ್ಲಿ ಸಂಗೀತದ ಸಮಾರಾಧನೆಗೆ ಆರಂಭ. ಆ ಸಮಾ ರಾಧನ ಪರಂಪರೆಗೆ ಆಹ್ವಾನವಿಲ್ಲದೆ ಹೋಗುವುದು ಸಾರ್ವತ್ರಿಕವಾದ ಶಿಷ್ಟ ಸಂಪ್ರದಾಯ. '' ಹಣ್ಣಿಲ್ಲ ಕಾಯಿಲ್ಲ ಬಾ ನನ್ನ ಗುಡಿಗೆ, ತೀರ್ಥವಿಲ್ಲ ಪ್ರಸಾದವಿಲ್ಲ ಹೋಗು ನಿನ್ನ ಮನೆಗೆ'' ಎಂದು ಭಕ್ತಾದಿಗಳಿಗೆ ದೇವರು ಹೇಳುತ್ತಾನಂತೆ. ಶೇಷಣ್ಣನವರಿಗೆ ದೇವರ ಈ ಸಂಕುಚಿತ ಸ್ವಭಾವವಿರಲಿಲ್ಲ. ಕೈಬೀಸಿಕೊಂಡು ತಮ್ಮ ಮಂದಿರಕ್ಕೆ ಬರುವವರಿಗೆ ಅವರು ಅದೆಂತಹ ಪ್ರಸಾದವನ್ನು ವಿನಿಯೋಗಮಾಡಿಸು ತ್ತಿದ್ದರು ! ಅದರ ಮಾಧುರ್ಯವನ್ನು ಸವಿದು ಮೈಸೂರಿನಲ್ಲಿ ಅನೇಕರು ರಸಜ್ಞ ರಾದರು. ಸಂಗೀತವನ್ನು ಕೇಳಬೇಕೆಂದು ಯಾರಾದರೂ ಅವರ ಮನೆಗೆ ಹೋದ ರೆಂದರೆ ಶೇಷಣ್ಣನವರು ಹಿಡಿದಿದ್ದ ಕೆಲಸವನ್ನಾದರೂ ಬಿಟ್ಟು ಅವರನ್ನು ತೃಪ್ತಿಗೊಳಿ ಸುತ್ತಿದ್ದರು. ವಿದ್ಯಾರ್ಥಿಮಂಡಲಿಗಂತೂ, ವಿಶ್ವವಿದ್ಯಾನಿಲಯದಲ್ಲಿ ಒಂದು ಸಂಗೀತ



ಕೀರ್ತಿಶೇಷರಾದ
**ವೈಣಿಕಶಿಖಾಮಣಿ ಶೇಷಣ್ಣನವರು**



ಕೀರ್ತಿಶೇಷರಾದ
**ನಟಶಿರೋಮಣಿ ವರದಾಚಾರ್ಯರು**

ಶಾಖೆಯನ್ನು ಏರ್ಪಡಿಸಿದ್ದರೂ ಅದು ಶೇಷಣ್ಣನವರ ಮಂದಿರದಷ್ಟು ಶಿಕ್ಷಣ ದಾಯಕವಾಗುತ್ತಿರಲಿಲ್ಲ. ವಿನಾಯಕನ ಹಬ್ಬ ಬಂದಿತೆಂದರೆ ಅವರನ್ನು ಕರೆಯದಿದ್ದ ವಿದ್ಯಾರ್ಥಿಮಂಡಲಿ ಯಾವುದು ? ಎಲ್ಲಿಗೇ ಆಗಲಿ ಸಂತೋಷದಿಂದ ಒಪ್ಪಿ ಬಂದು ಅವರು ಆನಂದವನ್ನು ಸೂಸದಿದ್ದ ಸ್ಥಳವಾವುದು ? ನವರಾತ್ರಿ ಬಂದಿತೆಂದರೆ ಅರ ಮನೆಯಲ್ಲಿ ತಮ್ಮ ತಮ್ಮ ವಿದ್ವತ್ತನ್ನು ಪ್ರದರ್ಶಿಸುವುದಕ್ಕಾಗಿ ಬರುತ್ತಿದ್ದ ನಾನಾ ದೇಶದ ಸಂಗೀತ ಶಾಸ್ತ್ರಜ್ಞರು, ಕಲಾಭಿಜ್ಞರು, ಶೇಷಣ್ಣನವರ ಮಂದಿರದಲ್ಲಿ ಮೊದಲು ತಮ್ಮ ಕಾಣಿಕೆಯನ್ನು ಅರ್ಪಿಸುತ್ತಿದ್ದರು. ಇದರ ಒರೆಯಮೇಲೆ ಅವರವರ ಬಣ್ಣವು ಗೊತ್ತಾಗುತ್ತಿದ್ದದ್ದರಿಂದ ಪ್ರತಿಯೊಬ್ಬರೂ ತಮ್ಮ ಕೌಶಲ್ಯ ಸಾಮರ್ಥ್ಯಗಳ ಉತ್ತ ಮೋತ್ತಮವಾದ ಭಾಗದಿಂದ ಒಂದೊಂದು ತುಂಡನ್ನು ಸಮರ್ಪಿಸುತ್ತಿದ್ದರು. ಶೇಷಣ್ಣನವರ ಅನುಗ್ರಹದಿಂದ ಈ ಸಮರ್ಪಣೆಯ ಪ್ರಸಾದವು ಎಲ್ಲರಿಗೂ ದೊರೆಯು ತ್ತಿತ್ತು. ಇದು ಮೈಸೂರಿನವರಿಗೆ, ಏನು ಕೊಟ್ಟರೂ ಮತ್ತೊಂದುಕಡೆ ಲಭ್ಯ ವಾಗದ ಅಮೂಲ್ಯ ವಸ್ತು. ಅವರ ಈ ವಿಧವಾದ ಅನುಗ್ರಹದಿಂದಲೂ ಔದಾರ್ಯ ದಿಂದಲೂ ಮೈಸೂರಿನ ಪ್ರಜೆಗಳಲ್ಲಿ ಒಂದು ಜಾತಿಯ ಜಿಪುಣತೆಯೂ ಧೋರ ಣೆಯೂ ಬಂದುವು. ಸಂಗೀತವೆಂದರೆ ಎಷ್ಟು ಆಶೆಯೋ ಅಷ್ಟು ಅಲಕ್ಷ್ಯ; ಶೇಷಣ್ಣ ನವರೆಂದರೆ ಎಷ್ಟು ಗೌರವವೋ ಅಷ್ಟು ಅನಾದರ—ಹೀಗಾಯಿತು. ಪರಸ್ಥಳದವರು ಬಂದರೆ, ಮೈಸೂರಿನ ಸಭಾಸದರ ಮುಂದೆ ಘನವಾದ ಕಛೇರಿ ನಡೆಸಿ ಮೆಚ್ಚಿಸು ವುದು ಕಷ್ಟವಾಯಿತು. ನಮ್ಮವರ ಸಂಗೀತವನ್ನು ದುಡ್ಡುಕೊಟ್ಟು ಕೇಳಬೇಕೆಂಬ ಸಂಸ್ಕಾರವು ಹುಟ್ಟದೆ ಹೋಯಿತು.

ಕರ್ಣಾಟಕನಾಟಕರಂಗವು ಇನ್ನೂ ಅನಾಗರಿಕ ಸ್ಥಿತಿಯಲ್ಲಿದೆ ಎಂದು ಪಾಶ್ಚಾತ್ಯದೇಶಗಳಿಗೆ ಹೋಗಿಬಂದವರು ಹೇಳುತ್ತಾರೆ. ಒಂದನ್ನೊಂದಕ್ಕೆ ಹೋಲಿಸಿ ನೋಡುತ್ತ ಹೋದರೆ ಹಾಗೆ ತಾನೆ ! ಆದರೆ ಮೈಸೂರಿನವರಿಗೆ ಮಾತ್ರ ಮಾದರಿಯ ನಾಟಕವೆಂದರೆ "ವರದಾಚಾರೀ ನಾಟಕ" ವೆಂದು ಸಿದ್ಧವಾಗಿ ಹೋಗಿತ್ತು. ನಿಜವಾಗಿಯೂ ನೋಡಿದರೆ, ವರದಾಚಾರ್ಯರು ಅಪರಿಮಿತವಾದ ಧನಬಲದಿಂದ ಪಾಶ್ಚಾತ್ಯದೇಶಗಳಲ್ಲಿ ಒದಗಿಸಿಕೊಳ್ಳುತ್ತಿರಬಹುದಾದ ರಂಗಪರಿಕರಗಳನ್ನು ಹೊರತು ಮಿಕ್ಕ ಕಲಾಕೌಶಲ ಚಮತ್ಕಾರಗಳೆಲ್ಲದರಿಂದಲೂ ರಂಗವನ್ನು ವಿಭೂಷಿಸಿದ್ದರು. ನಾಟಕರಂಗವು ಇಷ್ಟು ಉತ್ತಮಸ್ಥಿತಿಗೆ ಬಂದದ್ದಕ್ಕೂ, ಅಭಿನಯದ ಮಟ್ಟವು ಇಷ್ಟು ಎತ್ತರವಾದದ್ದಕ್ಕೂ ನಾಟಕದ ಹಾಡುಗಳಲ್ಲಿ ಈ ವ್ಯಕ್ತಿತ್ವ ವಿಶೇಷವು ಬರು ವುದಕ್ಕೂ ಎಷ್ಟುಮಟ್ಟಿಗೆ ಅವರ ಅಭಿರುಚಿ ಸಾಮರ್ಥ್ಯಗಳು ಕಾರಣವೆಂಬುದನ್ನು

ಈಗ ಸುಮಾರು ಮುವ್ವತ್ತು ವರ್ಷಗಳಿಂದ ಮೈಸೂರಿನಲ್ಲಿ ನಾಟಕವನ್ನು ನೋಡು ತ್ತಿರುವವರು ಬಲ್ಲರು. ಇಂಗ್ಲೆಂಡ್ ಮುಂತಾದ ಪಾಶ್ಚಾತ್ಯದೇಶಗಳಲ್ಲಿ ಸೊಗಸಾದ ಹೊಸದೊಂದು ರೂಪಕವು ಪ್ರದರ್ಶನೆಗೆ ಬರುವುದು ಆರಂಭವಾಯಿತೆಂದರೆ ಅದು ಒಂದೇ ನೂರಾರು ಸಲ ನಡೆಯುವುದುಂಟು. ಹೀಗೆ ನೂರಾರು ಸಲವಲ್ಲದಿದ್ದರೆ ಹತ್ತಾರು ಸಲವಾದರೂ ಒಂದೇ ನಾಟಕವನ್ನು ಪ್ರದರ್ಶಿಸುವ ಆವಶ್ಯಕತೆಯೂ ವರದಾಚಾರ್ಯರ ಯಾಜಮಾನ್ಯದಲ್ಲಿಯೇ ಆರಂಭವಾದದ್ದು. ಅವರ ಪ್ರಹ್ಲಾದಚರಿ



ಸಾಹುಕಾರ್ ಕಬ್ಬಹಳ್ಳಿ ಚೆನ್ನಬಸಪ್ಪನವರು.



ಸಾಹುಕಾರ್ ಎಂ. ಎಲ್. ವರ್ಧಮಾನಯ್ಯನವರು.

ತ್ರೆಯು ಈ ಗೌರವವನ್ನು ಪಡೆದದ್ದು ಅನೇಕರಿಗೆ ಇನ್ನೂ ಜ್ಞಾಪಕವಿದೆ. ಜನಗಳಿಗೆ ಆಗ ಅದೊಂದು ಹುಚ್ಚು ಹಿಡಿದು ಹೋಗಿತ್ತು. ಆ ನಾಟಕವನ್ನು ನೋಡದವರೂ ಅದರ ಹಾಡುಗಳನ್ನು ಅರಿಯದವರೂ ಅಪ್ರಯೋಜಕರೆನ್ನಿಸಿಕೊಳ್ಳುತ್ತಿದ್ದರು.

ಶೇಷಣ್ಣನವರೂ ವರದಾಚಾರ್ಯರೂ ಅವರವರ ಭಾಗದಲ್ಲಿ ಕವನಮಾಡುವ ಸಾಮರ್ಥ್ಯವನ್ನು ಪಡೆದಿದ್ದರು. ಆದ್ದರಿಂದ ಅವರ ಸ್ವರ್ಗಗಮನದಿಂದ ಸಂಗೀತ ಪ್ರಪಂಚಕ್ಕೂ ನಾಟ್ಯಪ್ರಪಂಚಕ್ಕೂ ನಷ್ಟವಾದಂತೆ ಕನ್ನಡ ಸಾಹಿತ್ಯಪ್ರಪಂಚಕ್ಕೂ ನಷ್ಟಸಂಭವಿಸಿದೆ.

ಕಲ್ಪವೃಕ್ಷಗಳು ಇರುವವರೆಗೂ ಫಲಬಿಟ್ಟು ಬಿದ್ದುಹೋದುವು. ಆದರೆ ಅವುಗಳ ಬುಡದಲ್ಲಿ ಮೊಳಕೆಗಳು ಹುಟ್ಟಿಕೊಂಡಿವೆ. ಅವುಗಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತ ಅವು ಅಭಿವೃದ್ಧಿಗೆ ಬರುವಂತೆ ಪ್ರೋತ್ಸಾಹಕೊಟ್ಟು ಋಣಮುಕ್ತರಾಗುವುದು ಕನ್ನಡಿಗರ—ಮೈಸೂರಿನವರ—ಧರ್ಮ.

---

ಕಲಾಪ್ರಪಂಚದಲ್ಲಿ ಹೇಗೋ ಕಾರ್ಯಪ್ರಪಂಚದಲ್ಲಿ ಹಾಗೆಯೇ ಕನ್ನಡಿಗರಾದ ಮತ್ತಿಬ್ಬರ ಮರಣವನ್ನು ಬಹು ವಿಷಾದದಿಂದ ಬರೆದಿಡಬೇಕಾಗಿದೆ. ಸಾಹುಕಾರರುಗಳಾದ ಮ|| ಕಬ್ಬಹಳ್ಳಿ ಚೆನ್ನಬಸಪ್ಪನವರೂ, ಎಂ. ಎಲ್. ವರ್ಧಮಾನಯ್ಯನವರೂ ಇನ್ನೂ ಚಿಕ್ಕವಯಸ್ಸಿನಲ್ಲಿಯೇ ಅಕಾಲಮರಣಕ್ಕೆ ತುತ್ತಾದ ಸಂಗತಿಯು, ವೀರಶೈವ ಮತ್ತು ಜೈನ ಪಂಗಡಗಳಿಗೇ ಅಲ್ಲದೆ ಕನ್ನಡ ದೇಶಕ್ಕೇ ದುಃಖಕರವಾದ ಸಂಗತಿ. ನಮ್ಮಲ್ಲಿ ಇಂಥ ಜನವತ್ಸಲರೂ ದೇಶವತ್ಸಲರೂ ಪ್ರಜಾಪ್ರಮುಖರೂ ಧರ್ಮಿಷ್ಠರೂ ಉತ್ಸಾಹಿಗಳೂ ಉದಾರಿಗಳೂ ಎಷ್ಟು ಜನವಿದ್ದಾರೆ? ಉಪಾಧ್ಯಾಯಗಿರಿಗಿಂತಲೂ ಉದಾಹರಣೆ ಹೆಚ್ಚಾಗಿ ಬೇಕಾಗಿರುವ ಈ ಕಾಲದಲ್ಲಿ ಇರುವ ಒಂದೆರಡು ಇಂಥ ರತ್ನಗಳನ್ನೂ ದೈವವು ಕಿತ್ತುಕೊಂಡು ಹೋದರೆ ಅದು ಕನ್ನಡಿಗರ ದೌರ್ಭಾಗ್ಯವಲ್ಲದೇ ಇನ್ನೇನು?

---

ಈಸಲದ ವಸ್ತುಕೋಶದ ತುಂಬ ಬರಿಯ ಚರಮವಾಕ್ಯಗಳೇ ಆದುವು. ಚರಮವಾಕ್ಯಗಳಾದರೂ, ಮೇಲೆಕಂಡಂಥ ಮಹನೀಯರ ಸ್ಮರಣೆಯು ಶುಭಕರವೆಂದೇ ನಮ್ಮ ಭಾವನೆ. ಅವರ ಹಾಗೆ ಬಾಳಿ ಸತ್ತವರ ಸಾವು ಒಂದು ಸಾವೇ? ಅವರು ಸ್ವರ್ಗಸ್ಥರಾಗಿದ್ದರೂ ಕೀರ್ತಿಶೇಷರಾಗಿ ನಮ್ಮಲ್ಲಿ ಇದ್ದೇ ಇರುತ್ತಾರೆ. ಅಚ್ಚಕಸ್ತೂರಿಯೂ ಪಚ್ಚಕರ್ಪೂರವೂ ಕರಗಿಹೋದರೆ ಅದೃಶ್ಯವಾಗುವುವೇ ಹೊರತು ನಷ್ಟವಾಗಿ ಹೋದಂತಾಯಿತೇ?

---




# ಕರ್ಣಾಟಕ

ಅಕ್ಷಯ ಸಂವತ್ಸರ —೨೮— ದೀಪಾವಳಿಯ ಸಂಚಿಕೆ

ಸಂಪುಟ ೮] ವಿಷಯ ಸೂಚಿಕೆ [ಸಂಚಿಕೆ ೨


೧. ಪರತತ್ತ್ವ— ವಿ. ಸೀ.

೨. ವಿದ್ಯಾರಣ್ಯರ ಸಮಕಾಲೀನರು— ಮ|| ಡಿ. ವಿ. ಗುಂಡಪ್ಪನವರು.

೩. ಕೆಲವು ಕನ್ನಡಕವಿಗಳ ಜೀವನಕಾಲವಿಚಾರ—
ಡಾ|| ಎ. ವೆಂಕಟಸುಬ್ಬಯ್ಯ, ಎಂ.ಎ., ಪಿಎಚ್.ಡಿ., ಎಲ್‌ಎಲ್.ಬಿ.

೪. ಗದಾಯುದ್ಧನಾಟಕಂ—

೫. ಅದ್ಭುತರಾಮಾಯಣ ಮುಂತಾದ ಗ್ರಂಥಗಳ ಕರ್ತೃ ಯಾರು ?—
ಮ|| ಮಂ|| ಆ. ರಾಮಾನುಜಯ್ಯಂಗಾರ‍್ಯರು.

೬. ನಾಗರಪಂಚಮಿ (ಒಂದು ಸಣ್ಣಕಥೆ) —

೭. "ಕಾವ್ಯಾವಲೋಕನ"

೮. "ವಸ್ತುಕೋಶ"


ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಟಿಸಲ್ಪಟ್ಟಿದೆ.

೧೯೨೬



Printed at the Crown Electric Press, Mysore.

# ಪ್ರಬುದ್ಧ ಕರ್ಣಾಟಕ

(ವರ್ಷಕ್ಕೆ ನಾಲ್ಕು ಸಂಚಿಕೆಗಳು ಮಾತ್ರ).

| | | |
|---|---|---|
| ವಾರ್ಷಿಕಚಂದಾ (ಅಂಚೆವೆಚ್ಚ ಸೇರಿ) | ಆಶ್ರಯದಾತರಿಗೆ | ರೂ. ೧೦—೦—೦ |
| | ಪೋಷಕರಿಗೆ | ರೂ. ೩—೬—೦ |
| | ವಾಚನಾಲಯಗಳು ಮತ್ತು ಪುಸ್ತಕಭಂಡಾರಗಳಿಗೆ | ರೂ. ೨—೮—೦ |
| | ಚಂದಾದಾರರಿಗೆ | ರೂ. ೨—೦—೦ |

**ಕಾರ್ಯದರ್ಶಿ,**

**ಕರ್ಣಾಟಕ ಸಂಘ,**

ಸೆಂಟ್ರಲ್ ಕಾಲೇಜು, ಬೆಂಗಳೂರು.

## ಪ್ರಬುದ್ಧ ಕರ್ಣಾಟಕಕ್ಕೆ ವಿನಿಮಯರೂಪವಾಗಿ ಬರುತ್ತಿರುವ ಪತ್ರಿಕೆಗಳು.

**ಬೆಂಗಳೂರು** :—ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ದೇಶೀಯ ವಿದ್ಯಾಶಾಲಾ ಪತ್ರಿಕೆ, ಮೈಸೂರು ವ್ಯಾವಸಾಯಿಕ ಮತ್ತು ಪರೀಕ್ಷಕಸಂಘದ ಪತ್ರಿಕೆ, ಸ್ಕೂಲು ಮತ್ತು ಸ್ಕೌಟ್ ಪತ್ರಿಕೆ, ವಿಶ್ವಕರ್ಣಾಟಕ, ಒಕ್ಕಲಿಗರ ಪತ್ರಿಕೆ, ಸರಸ್ವತಿ, ಮಿಥಿಕ್ ಸೊಸೈಟಿ ಪತ್ರಿಕೆ, ರಂಗಭೂಮಿ.

**ಮೈಸೂರು** :—ಸಾಧ್ವಿ, ಮಧ್ವಸಿದ್ಧಾಂತ ಪ್ರಕಾಶಿನೀ, ವಿಶ್ವಬಂಧು.

**ತುಮಕೂರು** :—ಸ್ಕೂಲ್ ಫೋಕ್.

**ನಂಜನಗೂಡು** :—ಸನ್ಮಾರ್ಗದರ್ಶಿ.

**ಚಾಮರಾಜನಗರ** :—ಕಾದಂಬರೀ ಸಂಗ್ರಹ.

**ಧಾರವಾಡ** :—ಕರ್ಣಾಟಕ ವೃತ್ತ ಮತ್ತು ಧನಂಜಯ, ಕರ್ಮವೀರ, ವಾಗ್ಭೂಷಣ, ಕರ್ಣಾಟಕ ವಿದ್ಯಾಶಾಲಾ ಪತ್ರಿಕೆ.

**ಬೆಳಗಾಂ** :—ಸುಧಾರಕ, ಪ್ರಬೋಧ.

**ಬಿಜಾಪುರ** :—ಕಲ್ಪಲತಾ ಗ್ರಂಥಮಾಲಾ.

**ಅಗಡಿ** :—ಸದ್ಬೋಧಚಂದ್ರಿಕೆ.

**ಪುತ್ತೂರು** :—ಕನ್ನಡ ಸಹಕಾರ.

**ತುಂಗಭದ್ರ** :—ಪ್ರೇಮ.

**ಬಾಗಲಕೋಟೆ** :—ಕನ್ನಡಿಗ.

**ಮಂಗಳೂರು** :—ಸುವಾಸಿನೀ, ಸುಬೋಧಕ ಗ್ರಂಥಮಾಲಾ.

**ಉಡುಪಿ** :—ಸತ್ಯಾಗ್ರಹಿ.

**ಕುಂದಾಪುರ** :—ವಸಂತ.

**ಮಡಿಕೇರಿ** :—ಓಲ್ಡ್ ಸ್ಟೂಡೆಂಟ್ಸ್ ಮ್ಯಾಗಸೀನ್, ಲೋಕಪಾವನ, ಕೊಡಗು ವೃತ್ತಾಂತ.



**ಅರ್ಧನಾರೀಶ್ವರಮೂರ್ತಿ**

ಮ|| ಕೆ. ವೆಂಕಟಪ್ಪನವರಿಂದ ಚಿತ್ರಿತವಾದದ್ದು





# ಪರತತ್ವ.

ರಾಗ—ಪೂರ್ವಿಕಲ್ಯಾಣಿ.

ಅರಿಯುವರೊ ಪರವೆಂದು
ಪರಮತತ್ವದ ಸಾರವೆಂದು ||ಪ||

ಮಲಿನಮನವನು ತೊಳೆವ ಅಮಲಗಂಗಾಜಲವು
ಇಳೆಯ ಬೆನ್ನಲಿ ನಿಂತು ಕಾಯ್ವ ಬಲವು
ಬೆಳೆವ ಜೀವಿಗಳ್ಗೆಲ್ಲ ನಿಜಜೀವಕಳೆಯಿತ್ತು
ಕುಲವನೇಳ್ಗೆಗೆ ತರುವ ಧರ್ಮವೆಂದು ||೧||

ಕುಹಕಭಾವಗಳೆದ್ದು ತನುವ ತಲ್ಲಣಗೊಳಿಸೆ
ವಿಹಿತಮಾರ್ಗವ ತೋರಿ ಪೊರೆವ ದೈವವನು
ಅಹಿತಸಂತತಿಜಾಲ ಮೊನೆಗೊಂಡು ಮುಸುಕಿರಲು
ಮಹಿಯ ಮಂಗಳವೆಳಸಿ ಮರುಗುವಾತ್ಮವನು ||೨||

ಕಂಗಳಿಗೆ ಕಾಣದಂತೆಂದಿಗೂ ಮರೆಯಾಗಿ
ಮಂಗಳದ ಕಾರ್ಯಗಳಿಗಾಧಾರವಾಗಿ
ತುಂಗಬಲಯುತರಿಂಗೆ ಬಲದಾತೃವಾಗುತು
ತ್ತುಂಗಮಾನಸದರ್ಗೆ ನೆರವಾಗುತಿಹುದ ||೩||

ವಿ ಸೀ.

---

ಪೂರ್ವಪಕ್ಷ ೪.—“ಸರ್ವದರ್ಶನ ಸಂಗ್ರಹ”ಕಾರರಿಂದ ವಂದಿತನಾದ ಗುರುವು ಸರ್ವಜ್ಞವಿಷ್ಣುವಷ್ಟೆ. ಇಮ್ಮಡಿ ಹರಿಹರರಾಯನ ಕಾಲದಲ್ಲಿದ್ದ (ಕ್ರಿ. ಶ. ೧೩೭೬–೧೪೦೪). ಚೆನ್ನುಭಟ್ಟನೆಂಬ ಪಂಡಿತನು ತನ್ನ “ತರ್ಕ ಭಾಷಾ ವ್ಯಾಖ್ಯಾ” ಎಂಬ ಗ್ರಂಥದ ಅಂತ್ಯದಲ್ಲಿ

“ಇತಿ ಶ್ರೀಹರಿಹರರಾಯ ಪಾಲಿತೇನ ಸಹಜ ಸರ್ವಜ್ಞವಿಷ್ಣು ದೇವಾರಾಧ್ಯ ತನೂಜೇನ ಸರ್ವಜ್ಞಾನುಜೇನ ಚೆನ್ನುಭಟ್ಟೇನ ವಿರಚಿತಾಯಾಂ ತರ್ಕ ಭಾಷಾ ವ್ಯಾಖ್ಯಾಯಾಂ”

ಎಂದು ಬರೆದಿರುವನು. “ಸರ್ವದರ್ಶನ ಸಂಗ್ರಹ” ವನ್ನು ಬರೆದಾತನು ಈ ಚೆನ್ನುಭಟ್ಟನ ತಂದೆಯಾದ ಸರ್ವಜ್ಞ ವಿಷ್ಣುದೇವನ ಶಿಷ್ಯನೊಬ್ಬನು ಆಗಿರಕೂಡದೆ?

ಸಮಾಧಾನ ೪.—“ಸರ್ವದರ್ಶನ ಸಂಗ್ರಹ” ವು ಇಮ್ಮಡಿ ಹರಿಹರನ ಕಾಲದಿಂದ ಈಚೆಗೆ ಹುಟ್ಟಿದುದೆಂದು ಗೊತ್ತಾಗಿಲ್ಲ. ಅದಲ್ಲದೆ ಪೂರ್ವಕಾಲದಲ್ಲಿ “ಸರ್ವಜ್ಞವಿಷ್ಣು”ವೆಂಬ ಹೆಸರಿನ ಪಂಡಿತರು ಅನೇಕ ಮಂದಿ ಇದ್ದಿರಕೂಡದೇನು? ರಾಮ, ನಾರಾಯಣ, ಮಾಧವ ಎಂಬ ಹೆಸರಿನ ಪ್ರಸಿದ್ಧ ಪುರುಷರು ಬಹು ಮಂದಿ ನಮ್ಮ ಕಾಲದಲ್ಲಿಲ್ಲವೇನು? ಅಥವಾ ಚೆನ್ನುಭಟ್ಟನು ಸರ್ವಜ್ಞವಿಷ್ಣುಪಂಡಿತರೆನಿಸಿದ್ದ ವಿದ್ಯಾತೀರ್ಥ ಗುರುಗಳ ಪೂರ್ವಾಶ್ರಮದ ವಂಶದಲ್ಲಿ ಹುಟ್ಟಿದವನಾಗಿ. ಅಥವಾ ಆ ವಂಶಕ್ಕೇ ಸಂಬಂಧಪಟ್ಟವನಾಗಿ, ಇದ್ದಿರಕೂಡದೆ?

ಪೂರ್ವಪಕ್ಷ ೫.—ಕ್ರಿ. ಶ. ೧೩೪೦ರ ಚಾಮರಾಜನಗರದ ಶಾಸನವೊಂದರಲ್ಲಿ ಹೊಂಮವೆಂಬ ಗ್ರಾಮಕ್ಕೆ ಸರ್ವಜ್ಞವಿಷ್ಣುಪುರವೆಂದು ಹೆಸರಿದ್ದಂತೆ ತಿಳಿಯುತ್ತದೆ. ಈ ಗ್ರಾಮಕ್ಕೆ ನಾಮದಾತೃವಾದ ಸರ್ವಜ್ಞವಿಷ್ಣುವು “ಸರ್ವದರ್ಶನ ಸಂಗ್ರಹ”ಕಾರರ ಗುರುವೇಕೆ ಆಗಿರಬಾರದು?

ಸಮಾಧಾನ ೫.—ಹಿಂದಿನ ಉತ್ತರ. ಆ ಗ್ರಾಮಕ್ಕೆ ವಿದ್ಯಾತೀರ್ಥರ ಪೂರ್ವಾಶ್ರಮದ ಹೆಸರನ್ನೇ ಇಟ್ಟಿದ್ದಿರಬಾರದೇನು?

ಪೂರ್ವಪಕ್ಷ ೬.—“ಸರ್ವದರ್ಶನ ಸಂಗ್ರಹ”ದ ಶಾಂಕರದರ್ಶನದಲ್ಲಿ ಈ ರೀತಿ ಇದೆ:—

“ತದುಕ್ತಂ ವಿವರಣ ವಿವರಣೇ ಸಹಜ ಸರ್ವಜ್ಞವಿಷ್ಣುಭಟ್ಟೋಪಾಧ್ಯಾಯೈಃ”

ಈ “ವಿವರಣ ವಿವರಣ” ಲೇಖಕರು “ಸರ್ವದರ್ಶನ ಸಂಗ್ರಹ” ಲೇಖಕರ ಗುರುವಾಗಿದ್ದಿರಕೂಡದೆ?

ಸಮಾಧಾನ ೬.—ಮೇಲಿನ ನಾಲ್ಕನೆಯ ಉತ್ತರವೇ. ಅಹಲ್ಲದೆ "ವಿವರಣ ವಿವರಣ"ವನ್ನು ಬರೆದ ಸರ್ವಜ್ಞವಿಷ್ಣುಭಟ್ಟೋಪಾಧ್ಯಾಯರೇ ಮಾಧವಾಚಾರ್ಯ ಸಾಯಣಾಚಾರ್ಯರಿಗೆ ವಿದ್ಯಾಗುರುಗಳಾಗಿದ್ದು, ಆ ಬಳಿಕ ವಿದ್ಯಾತೀರ್ಥನಾಮದಿಂದ ಯತಿಗಳಾಗಿ, ಅನಂತರವೂ ಅವರಿಗೆ ವೇದಾಂತ ಗುರುಗಳಾಗಿ ಇದ್ದಿರಕೂಡದೇನು?

ಹೀಗೆ ಯಾವ ದೃಷ್ಟಿಯಿಂದ ಪರೀಕ್ಷಿಸಿ ನೋಡಿದರೂ, "ಸರ್ವದರ್ಶನ ಸಂಗ್ರಹ" ಕಾರರ ಗುರುವಾದ ಸರ್ವಜ್ಞವಿಷ್ಣುವೂ ಮೇಲೆ "ಪುಣ್ಯಶ್ಲೋಕ ಮಂಜರಿ"ಯಲ್ಲಿ ವಿದ್ಯಾತೀರ್ಥಾಪರ ನಾಮಕರೆಂದು ಹೇಳಲ್ಪಟ್ಟಿರುವ ಸರ್ವಜ್ಞವಿಷ್ಣುವೂ ಇಬ್ಬರೂ ಒಬ್ಬರೇ ಎಂಬ ಐತಿಹ್ಯವನ್ನು ನಿರಾಕರಣ ಮಾಡುವುದು ನ್ಯಾಯವಾಗಿ ತೋರುವುದಿಲ್ಲ. ಒಂದು ಪುರಾತನ ಗ್ರಂಥ ದಲ್ಲಿಯ ಗ್ರಂಥಕರ್ತೃ ವಿಷಯಕವಾದ ಒಂದೆರಡು ವಾಕ್ಯಗಳನ್ನು ಮಾತ್ರವೇ ಆಧಾರವೆಂದೆಣಿಸಿ ಅವರಿಂದ ಮತ್ತೊಂದು ಪುರಾತನೇತಿಹಾಸಕ್ಕೆ ಭಂಗ ತರಲಾಗದು. ಏಕೆಂದರೆ ಒಂದು ಪುರಾತನ ಗ್ರಂಥವಲ್ಲಿಯ ಗ್ರಂಥಕರ್ತೃ ವಿಷಯಕ ವಾಕ್ಯಗಳಲ್ಲಿಯೇ ಆ ಗ್ರಂಥಕರ್ತೃ ಸಂಬಂಧವಾದ ಚರಿತ್ರೆ ಯೆಲ್ಲವೂ ಸಂಪೂರ್ಣವಾಗಿ ಅಡಗಿರುವುದೆಂದು ನಂಬಲಾಗುವುದಿಲ್ಲ. "ಪುಣ್ಯಶ್ಲೋಕ ಮಂಜರಿ"ಯು ಈಚೀಚಿನ ಗ್ರಂಥವೇನೂ ಅಲ್ಲ. ಅದನ್ನು ಬರೆದ ಸದಾಶಿವ ಬೋಧೇಂದ್ರರು ಕಂಚಿಯ ಮಠದ ೫೬ನೆಯ ಗುರುಗಳು —ಎಂದರೆ ವಿದ್ಯಾತೀರ್ಥರಿಂದ ಐದು ತಲೆಯಷ್ಟು ಮಾತ್ರ ಈಚಿನವರು. ಇವರ ಕಾಲವು ಕ್ರಿ. ಶ. ೧೫೨೩–೧೫೩೯ ಎಂದು ಹೇಳುವರು. ಅಲ್ಲಿಯ ೫೮ನೆಯ ಸ್ವಾಮಿಗಳ ಪೀಠಾರೋಹಣ ವರ್ಷವು ಕ್ರಿ. ಶ. ೧೫೮೮ ಎಂದು ಗೊತ್ತಾಗಿದೆ. ಆದುದರಿಂದ "ಪುಣ್ಯಶ್ಲೋಕ ಮಂಜರಿ"ಯು ಈಗಿಗೆ ಕನಿಷ್ಠಪಕ್ಷ ನಾನೂರು ವರ್ಷಗಳಷ್ಟು ಹಳೆಯದೆಂದು ಹೇಳಬಹುದು. ಇಂತಹ ಪುರಾತನವಾದ ಗ್ರಂಥದ ಪ್ರಾಮಾಣ್ಯದ ವಿಷಯದಲ್ಲಿ ಪ್ರಬಲ ತರಗಳಾದ ಕಾರಣಗಳಿಲ್ಲದೆ ಶಂಕೆಪಡುವುದು ಋಜುವೆನಿಸದು.

ಕಂಚಿಯ ಗುರು ಪೀಠವಲ್ಲಿ ಪರಂಪರಾಗತವಾಗಿ ಬಂದಿದ್ದ ವಿದ್ಯಾ ತೀರ್ಥ ವಿಷಯಕ ಐತಿಹ್ಯವನ್ನೇ ಅಲ್ಲಿಯ "ಗುರುರಾಜ ರತ್ನಮಾಲೆ"ಯ ವ್ಯಾಖ್ಯಾನ ಕರ್ತರಾದ ಆತ್ಮಬೋಧೇಂದ್ರ ಸರಸ್ವತೀ ಸ್ವಾಮಿಗಳವರು ಅನು ಸರಿಸಿ ಹೀಗೆ ಹೇಳಿರುವರು:—

"ಗ್ರಂಥಾಂತರೇಷ್ವಪಿ ವಿದ್ಯೇಶ ವಿದ್ಯಾನಾಥ ವಿದ್ಯಾತೀರ್ಥ ಸರ್ವಜ್ಞವಿಷ್ಣು ವಿದ್ಯಾಶಂಕರಾದಿ ಪದಾನಿ ಪ್ರವೃತ್ತಿ ನಿಮಿತ್ತೈಕ್ಯಮಸ್ಮಿನ್ನೇವಾಶ್ನುತವತ"

ವಿದ್ಯಾತೀರ್ಥರ ನಾಮಧೇಯವು ಈ ರೀತಿ ರೂಪಾಂತರಗಳಲ್ಲಿ ಖ್ಯಾತಿಗೊಂಡಿತ್ತೆಂಬುದು ಇನ್ನೂ ಇತರ ಪ್ರಾಚೀನ ಪ್ರಯೋಗಗಳಿಂದ ಗೊತ್ತಾಗುತ್ತದೆ.

## ವಿದ್ಯಾತೀರ್ಥ ಮಾಹಾತ್ಮ್ಯ

ವಿದ್ಯಾತೀರ್ಥರು ಎಪ್ಪತ್ತುಮೂರು ವರ್ಷಗಳ ಕಾಲ ಕಂಚಿಯಲ್ಲಿ ಕಾಮಕೋಟಿ ಪೀಠಾಸೀನರಾಗಿದ್ದು, ತಮ್ಮ ಪೀಠ ಧರ್ಮ ಪರಿಪಾಲನೆಗೋಸ್ಕರ ಅಷ್ಟದಿಗ್ಗಜಗಳಂತಹ ಎಂಟು ಮಂದಿ ಶಿಷ್ಯರುಗಳನ್ನು ಮಠಾಧಿಕಾರಗಳಿಗೆ ನಿಯಮಿಸಿ, ಆಮೇಲೆ ಶಂಕರಾನಂದರೆಂಬ ಒಬ್ಬರೇ ಒಬ್ಬ ಶಿಷ್ಯರೊಡನೆ ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ಹದಿನೈದು ವರ್ಷಗಳ ಕಾಲ ಉಗ್ರವಾದ ತಪಸ್ಸನ್ನು ಮಾಡಿದರೆಂದು "ಪುಣ್ಯಶ್ಲೋಕ ಮಂಜರಿ"ಯು ಈ ಕೆಳಗಿನ ಶ್ಲೋಕದಿಂದ ತಿಳಿಯಬರುತ್ತದೆ:—

> ಕಾಂಚ್ಯಾಮೇವ ಸ ಸಪ್ತತಿಂ ತ್ರಿಸಹಿತಾಂ ವರ್ಷಾನ್ವಿಭೂಷ್ಯಾಸನಂ।
> ಶಿಷ್ಯಾನಷ್ಟ ದಿಶಾ ಗಜಾಯಿತ ಯತೀನಾದಿಶ್ಯ ಪೀಠಾಸನೇ॥
> ಯಾವತ್ಪಂಚ ದಶಾಬ್ದ ಪೂರ್ತಿ ಹಿಮವಚ್ಛೃಂಗಾಶ್ರಯ ಶ್ಶಂಕರಾ।
> ನಂದ್ಯೈಕಾನುಚರಶ್ಚಚಾರ ಪರಮಂ ಧೀರಸ್ತಪೋ ದುಶ್ಚರಂ॥

ಈ ಶ್ಲೋಕದಲ್ಲಿ ಪ್ರಸಕ್ತರಾಗಿರುವ ಶಂಕರಾನಂದರು "ಬೃಹದಾರಣ್ಯಕೋಪನಿಷದ್ದೀಪಿಕೆ"ಯೆಂಬ ತಮ್ಮ ಗ್ರಂಥದಲ್ಲಿ ತಮ್ಮ ಗುರುಗಳನ್ನು ಈ ರೀತಿ ಕೊಂಡಾಡಿರುವರು:—

> ಕಾಂಚೀಪೀಠಜುಷಃ ಕಠೋರ ಧಿಷಣಾನ್ನಿರ್ಧೂತದುರ್ಧರ್ಷಜಾ।
> ದ್ವೈತಿವ್ರಾತ ದುರಾಗ್ರಹ ಗ್ರಹಭಯಾನ್ ಮಾಯಾವಿದೂರ ಕ್ರಿಯಾನ್॥
> ಆಚಾರ್ಯಾನ್ ಮಮ ಚಂದ್ರಮೌಲಿ ಚರಣ ಧ್ಯಾನೈಕತಾನಾಶಯಾನ್।
> ವಿದ್ಯಾತೀರ್ಥ ಮಹೇಶ್ವರಾನ್ ಹೃದಿಸದಾ ವಿದ್ಯೋತಮಾನಾನ್ ಭಜೇ॥

"ಕಾಂಚೀಪೀಠವನ್ನು ಬೆಳಗಿರತಕ್ಕವರೂ, ಪ್ರಚಂಡ ಬುದ್ಧಿ ಸಂಪನ್ನರೂ, ದ್ವೈತಿ ಸಮೂಹದ ಭಯವನ್ನು ತೊಲಗಿಸಿದವರೂ, ಮಾಯೆಯಿಂದ ದೂರವಾದ ಆಚರಣೆಯುಳ್ಳವರೂ, ನನ್ನ ಆಚಾರ್ಯರೂ, ಚಂದ್ರಮೌಳಿ ಧ್ಯಾನವೊಂದರಲ್ಲಿಯೇ ಮನಸ್ಸುಳ್ಳವರೂ, ನನ್ನ ಹೃದಯ ಮಧ್ಯದಲ್ಲಿ ವಿರಾಜಿಸುತ್ತಿರುವವರೂ ಆದ ವಿದ್ಯಾತೀರ್ಥ ಮಹೇಶ್ವರರನ್ನು ಭಜಿಸುತ್ತೇನೆ."

ವಿದ್ಯಾತೀರ್ಥರನ್ನು ಹೊಗಳುವ ವಿದ್ಯಾರಣ್ಯರ ವಾಕ್ಯಗಳಾದರೋ ಭಕ್ತ್ಯುತ್ಸಾಹಗಳಲ್ಲಿ ಒಂದಕ್ಕಿಂತ ಒಂದು ಅತಿಶಯವಾಗಿವೆ. ವಿದ್ಯಾರಣ್ಯರ

ಗಿದ್ದ ಮೂವರು ನಾಲ್ವರು ಗುರುಗಳಲ್ಲಿ ವಿದ್ಯಾತೀರ್ಥರೇ ಮುಖ್ಯರೆಂದು ಅವರ "ಅನುಭೂತಿಪ್ರಕಾಶ"ದ

> ಅನ್ತಃ ಪ್ರವಿಷ್ಟಶ್ಶಾಸ್ತೇತಿ ಯೋನ್ತರ್ಯಾಮೀ ಶ್ರುತೀರಿತಃ ।
> ಸೋಽಸ್ಮಾಕಂ ಮುಖ್ಯಗುರುಃ ಪಾತು ವಿದ್ಯಾತೀರ್ಥ ಮಹೇಶ್ವರಃ ॥

"ಯಾರನ್ನು ಅಂತರಾತ್ಮನೆಂದೂ ವಿಧಾಯಕನೆಂದೂ ಸರ್ವಾಂತರ್ಯಾಮಿಯೆಂದೂ ವೇದಗಳು ಹೊಗಳುತ್ತಿವೆಯೋ ಆ ನಮ್ಮ ಮುಖ್ಯ ಗುರು ವಿದ್ಯಾತೀರ್ಥ ಮಹೇಶ್ವರನು ನಮ್ಮನ್ನು ಕಾಪಾಡಲಿ" ಎಂಬ ಶ್ಲೋಕದಿಂದ ಸ್ಪಷ್ಟವಾಗಿದೆ. ಈ ಶ್ಲೋಕದಿಂದಲೂ ಇತರ ಗುರು ಪ್ರಶಂಸಾ ಪದ್ಯಗಳಿಂದಲೂ ಅವರು ವಿದ್ಯಾತೀರ್ಥರನ್ನು ಸಾಕ್ಷಾತ್ಪರಮೇಶ್ವರಾವತಾರವೆಂದೇ ಭಾವಿಸಿದ್ದಂತೆ ತೋರುತ್ತದೆ. "ಅನುಭೂತಿಪ್ರಕಾಶ"ವು ಉಪನಿಷತ್ತಾತ್ಪರ್ಯ ಸಂಗ್ರಹರೂಪವಾದ ಗ್ರಂಥ. ಅದರ ಇಪ್ಪತ್ತು ಅಧ್ಯಾಯಗಳಲ್ಲಿ ಪ್ರತಿಯೊಂದರ ಕಡೆಯಲ್ಲಿಯೂ

> (೧) "ಏತದ್ವ್ಯಾಖ್ಯಾನತಸ್ತುಷ್ಯಾದ್ವಿದ್ಯಾತೀರ್ಥ ಮಹೇಶ್ವರಃ"

ಎಂದು, ಅಥವಾ

> (೨) "ಸಚ್ಛಿಷ್ಯಾನನುಗೃಹ್ಣಾತು ವಿದ್ಯಾತೀರ್ಥ ಮಹೇಶ್ವರಃ"

ಎಂದು, ಅಥವಾ

> (೩) ಶ್ರುತಿ ಸ್ಮೃತೀತಿಹಾಸಾನಾಮಭಿಪ್ರಾಯವಿದವ್ಯಯಃ ।
> ಶ್ರುತಿವ್ಯಾಖ್ಯಾನತಸ್ತುಷ್ಯಾದ್ವಿದ್ಯಾತೀರ್ಥ ಮಹೇಶ್ವರಃ ॥

(೧) "ವಿದ್ಯಾತೀರ್ಥ ಮಹೇಶ್ವರನು ಈ ವ್ಯಾಖ್ಯಾನದಿಂದ ಸಂತೋಷಗೊಳ್ಳಲಿ"

(೨) "ವಿದ್ಯಾತೀರ್ಥ ಮಹೇಶ್ವರನು ಸಚ್ಛಿಷ್ಯರಲ್ಲಿ ಅನುಗ್ರಹವನ್ನು ತೋರಲಿ"

(೩) "ವೇದ ಶಾಸ್ತ್ರ ಪುರಾಣಗಳ ಸಾರವನ್ನು ತಿಳಿದ ಅವ್ಯಯನಾದ ವಿದ್ಯಾತೀರ್ಥಮಹೇಶ್ವರನು ಈ ವೇದ ವ್ಯಾಖ್ಯಾನದಿಂದ ಸಂತೋಷಗೊಳ್ಳಲಿ"

ಎಂದು ಪ್ರಾರ್ಥನೆ ಮಾಡಿರುವರು.

"ಜೀವನ್ಮುಕ್ತಿ ವಿವೇಕ"ವೆಂಬ ಪರಮಹಂಸ ಲಕ್ಷಣ ನಿರೂಪಣೆಯ ಪ್ರಾರಂಭದಲ್ಲಿ

ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥ ಮಹೇಶ್ವರಂ ॥

"ಯಾರ ಉಸಿರೇ ವೇದವೋ, ಯಾರು ವೇದದಿಂದ ಅಖಿಲ ಜಗತ್ತನ್ನೂ ನಿರ್ಮಿಸಿದನೋ ಆ ವಿದ್ಯಾತೀರ್ಥ ಮಹೇಶ್ವರನಿಗೆ ನನ್ನ ವಂದನೆ" ಎಂದು ಸ್ತುತಿಸಿರುವರು.

ಇದೇ ಶ್ಲೋಕವನ್ನೇ ಮಾಧವಾಚಾರ್ಯಾನುಜರಾದ ಸಾಯಣಾಚಾರ್ಯರು ತಮ್ಮ ವೇದ ಭಾಷ್ಯದ ಪ್ರತಿಯೊಂದು ವಿಭಾಗದ ಉಪಕ್ರಮದಲ್ಲಿಯೂ ಉಪಯೋಗಿಸಿಕೊಂಡಿರುವರು.

ವಿದ್ಯಾರಣ್ಯರು "ಜೀವನ್ಮುಕ್ತಿವಿವೇಕ"ದ ಕಡೆಯಲ್ಲಿ

ಜೀವನ್ಮುಕ್ತಿ ವಿವೇಕೇನ ಬನ್ಧಂ ಹಾರ್ದಂ ನಿವಾರಯನ್ ।
ಪುಮರ್ಥಮಖಿಲಂ ದೇಯಾದ್ವಿದ್ಯಾತೀರ್ಥ ಮಹೇಶ್ವರಃ ॥

"ವಿದ್ಯಾತೀರ್ಥ ಮಹೇಶ್ವರನು ಜೀವನ್ಮುಕ್ತಿ ವಿವೇಕದ ಮೂಲಕ ಹೃದಯದ ಬಂಧನಗಳನ್ನು ಹೋಗಲಾಡಿಸಿ ಪುರುಷಾರ್ಥಗಳೆಲ್ಲವನ್ನೂ ಕೊಡಲಿ" ಎಂದು ಹೇಳಿರುವರು. ಇದನ್ನು ಬಹುಮಟ್ಟಿಗೆ ಹೋಲುವ—

ವೇದಾರ್ಥಸ್ಯ ಪ್ರಕಾಶೇನ ತಮೋಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋದೇಯಾದ್ವಿದ್ಯಾತೀರ್ಥ ಮಹೇಶ್ವರಃ ॥

"ವಿದ್ಯಾತೀರ್ಥ ಮಹೇಶ್ವರನು ವೇದಾರ್ಥಪ್ರಕಾಶ(ವೆಂಬ ಈ ವೇದ ಭಾಷ್ಯ)ದ ಮೂಲಕ ಹೃದಯದ ಅಂಧಕಾರವನ್ನು ಹೋಗಲಾಡಿಸಿ ಪುರುಷಾರ್ಥ ಚತುಷ್ಟಯವನ್ನೂ ದಯೆಗೆಯ್ಯಲಿ" ಎಂಬ ಶ್ಲೋಕವನ್ನು ಸಾಯಣಾಚಾರ್ಯರು ವೇದಭಾಷ್ಯದ ಪ್ರತಿಯೊಂದು ವಿಭಾಗದ ಉಪಸಂಹಾರದಲ್ಲಿಯೂ ಉಪಯೋಗಿಸಿರುವರು.

ಮಾಧವೀಯವಾದ "ಜೈಮಿನೀಯ ನ್ಯಾಯಮಾಲಾ ವಿಸ್ತರ"ವೆಂಬ ಪೂರ್ವಮೀಮಾಂಸಾ ಗ್ರಂಥದ ಆರಂಭದಲ್ಲಿ—

ವಿದ್ಯಾತೀರ್ಥ ಮುನೇಸ್ತದಾತ್ಮನೇ ಲಸನ್ಮೂರ್ತಿಸ್ತ್ವನುಗ್ರಾಹಿಕಾ ।
ತೇನಾಸ್ಯ ಸ್ವಗುಣೈರಖಂಡಿತ ಪದಂ ಸಾರ್ವಜ್ಞ್ಯಮುದ್ದ್ಯೋತತೇ ॥

"ಈ ಬುಕ್ಕರಾಯನ ಅಂತರಂಗದಲ್ಲಿ ವಿದ್ಯಾತೀರ್ಥರ ಮೂರ್ತಿಯು ಬೆಳಗುತ್ತಿರುವುದರಿಂದ ಈತನಿಗೆ ಸರ್ವಜ್ಞತ್ವವು ಸಿದ್ಧಿಸಿದೆ" ಎಂದು ಹೇಳಿ, ವಿದ್ಯಾರಣ್ಯರು ಸ್ವಗುರು ಮಾಹಾತ್ಮ್ಯವನ್ನು ಸೂಚಿಸಿರುತ್ತಾರೆ.

ಶ್ರೀ ಭಾರತೀ ತೀರ್ಥ ಪ್ರಣೀತವೆನಿಸಿರುವ "ವೈಯಾಸಿಕ ನ್ಯಾಯ ಮಾಲಾ" ಎಂಬ ಉತ್ತರಮೀಮಾಂಸಾ ಗ್ರಂಥದ ಆರಂಭದಲ್ಲಿ—

ಪ್ರಣಮ್ಯ ಪರಮಾತ್ಮಾನಂ ಶ್ರೀ ವಿದ್ಯಾತೀರ್ಥ ರೂಪಿಣಂ।
ವೈಯಾಸಿಕ ನ್ಯಾಯಮಾಲಾ ಶ್ಲೋಕೈ ಸ್ಸಂಗೃಹ್ಯತೇ ಸ್ಫುಟಂ॥

"ಕೇವಲ ಪರಮಾತ್ಮಸ್ವರೂಪರೇ ಆದ ಶ್ರೀವಿದ್ಯಾತೀರ್ಥರಿಗೆ ಪ್ರಣಾಮವು"—ಎಂದು ಉಕ್ತವಾಗಿದೆ.

ಇದರಂತೆಯೇ ಮಾಧವೀಯವೆನಿಸಿರುವ "ಶಂಕರ ವಿಜಯಃ"ವು—

ಪ್ರಣಮ್ಯ ಪರಮಾತ್ಮಾನಂ ಶ್ರೀ ವಿದ್ಯಾತೀರ್ಥ ರೂಪಿಣಂ।
ಪ್ರಾಚೀನ ಶಂಕರಜಯೇ ಸಾರಸ್ಸಂಗೃಹ್ಯತೇ ಸ್ಫುಟಂ॥

"ವಿದ್ಯಾತೀರ್ಥ ರೂಪಿಯಾದ ಪರಮಾತ್ಮನಿಗೆ ಪ್ರಣಾಮಮಾಡಿ, ಪುರಾತನ ಶಂಕರ ವಿಜಯದ ಸಾರಾಂಶವು ಈ ಗ್ರಂಥದಲ್ಲಿ ವಿಶದವಾಗಿ ಸಂಗ್ರಹಿಸಲ್ಪಡುತ್ತದೆ" ಎಂಬ ಶ್ಲೋಕದಿಂದ ಪ್ರಾರಂಭಿಸಿದೆ.

ಮಾಧವೀಯವೆನಿಸಿರುವ "ಪರಾಶರ ಸ್ಮೃತಿ ವ್ಯಾಖ್ಯಾನ"ವೆಂಬ ಧರ್ಮಶಾಸ್ತ್ರ ಗ್ರಂಥದ ಪೀಠಿಕೆಯಲ್ಲಿಯೂ, ಅದಕ್ಕೆ ಅನುಬಂಧವಾಗಿ ಸ್ವತಂತ್ರ ಗ್ರಂಥವಾಗಿರುವ "ವ್ಯವಹಾರ ಮಾಧವೀಯ"ದ ಪೀಠಿಕೆಯಲ್ಲಿಯೂ

"ವಿದ್ಯಾತೀರ್ಥಮುಪಾಶ್ರಯೇ ಹೃದಿಭಜೇ ಶ್ರೀಕಂಠಮವ್ಯಾಹತಂ" ಎಂಬ ವಾಕ್ಯದಿಂದಲೂ,

"ಕಾಲ ಮಾಧವೀಯ"ವೆಂಬ ಜ್ಯೋತಿಶ್ಶಾಸ್ತ್ರದ ಪೀಠಿಕೆಯಲ್ಲಿ ಈ ಶ್ಲೋಕದ ಜೊತೆಗೆ—

ವ್ಯಾಮೂಢಾನಾಮಿಹ ತನುಭೃತಾಂ ಜಾಹ್ನವೀ ತೀರ್ಥಮೇಕಂ।
ವಿದ್ಯಾತೀರ್ಥಂ ಪ್ರಕೃತಿವಿಮಲಂ ಸದ್ವಿವೇಕೋದಯಾನಾಂ॥

"ಗಂಗಾತೀರ್ಥವು ಮೂಢರಾದ ಮನುಷ್ಯರಿಗೆ; ಸ್ವಭಾವ ನಿರ್ಮಲವಾದ ವಿದ್ಯಾತೀರ್ಥವು ಜ್ಞಾನಾಪೇಕ್ಷಿಗಳಿಗೆ" ಎಂಬ ವಾಕ್ಯದಿಂದಲೂ, ವಿದ್ಯಾತೀರ್ಥರು ಧ್ಯಾನಿತರಾಗಿದ್ದಾರೆ.

"ವಿವರಣ ಪ್ರಮೇಯ ಸಂಗ್ರಹ"ವೆಂಬ ಅದ್ವೈತ ಸಿದ್ಧಾಂತ ಪ್ರತಿಪಾದಕ ಗ್ರಂಥದ ಪರಿಸಮಾಪ್ತಿಯಲ್ಲಿ

ಯದ್ವಿದ್ಯಾತೀರ್ಥ ಗುರೋಶ್ಶುಶ್ರೂಷಾನ್ಯಾನರೋಚತೇ ತಸ್ಮಾತ್ ।
ಅಸ್ತ್ವೇಷಾ ಭಕ್ತಿಯುತಾ ಶ್ರೀವಿದ್ಯಾತೀರ್ಥ ಪಾದಯೋಸ್ಸೇವಾ ॥

"ಯಾವ ವಿದ್ಯಾತೀರ್ಥ ಗುರುವಿನ ಶುಶ್ರೂಷೆಗಿಂತ ರುಚಿಯಾದುದು ಒಂದೂ ಇಲ್ಲವೋ, ಆ ವಿದ್ಯಾತೀರ್ಥ ಪಾದಸೇವೆಯು ಈ ಮೂಲಕ ಆಗಲಿ" ಎಂದು ಹೇಳಿ, ಮಾಧವಾಚಾರ್ಯರು ತಮ್ಮ ಗುರು ಭಕ್ತ್ಯತಿಶಯವನ್ನು ತೋರಿಸಿದ್ದಾರೆ.

## ವಿದ್ಯಾರಣ್ಯರ ಗುರುಭಕ್ತಿ

ಗುರುವನ್ನು ಪ್ರತ್ಯಕ್ಷ ಪರದೈವದಂತೆ ಕಾಣಬೇಕೆಂದು ವೇದ ವಚನವೇ ಇದೆ:—

ಯಸ್ಯದೇವೇ ಪರಾಭಕ್ತಿರ್ಯಥಾದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥

"ಯಾರಿಗೆ ದೇವರಲ್ಲಿ ಅತಿಶಯಭಕ್ತಿಯೋ, ಮತ್ತು ದೇವರಲ್ಲಿರುವಂತೆಯೇ ಗುರುವಿನಲ್ಲಿಯೂ ಭಕ್ತಿಯೋ, ಆ ಮಹಾತ್ಮನಿಗೆ ಎಲಾ ಅರ್ಥಗಳೂ ಲಭ್ಯವಾಗುವುವು."

ಇದನ್ನೇ ಅನುಸರಿಸಿ ಆಪಸ್ತಂಬರು—

ದೇವಮಿವಾಽಽಚಾರ್ಯಮುಪಾಸೀತ

"ಆಚಾರ್ಯರನ್ನು ದೇವರನ್ನು ಪೂಜಿಸುವಂತೆ ಪೂಜಿಸಬೇಕು" ಎಂದು ವಿಧಿಸಿರುವರು. ವ್ಯಾಸರು—

ಗುರುಮೂಲಾಃ ಕ್ರಿಯಾಸ್ಸರ್ವಾ ಭುಕ್ತಿ ಮುಕ್ತಿ ಫಲಪ್ರದಾಃ ।
ತಸ್ಮಾತ್ಸೇವ್ಯೋ ಗುರುರ್ನಿತ್ಯಂ ಮುಕ್ತ್ಯರ್ಥಂ ತು ಸಮಾಹಿತೈಃ ॥

"ಭೋಗಮೋಕ್ಷಗಳನ್ನು ಕೊಡಬಲ್ಲ ಎಲ್ಲ ಸತ್ಕ್ರಿಯೆಗಳಿಗೂ ಗುರುವೇ ಮೂಲವು. ಆದಕಾರಣ ಮುಮುಕ್ಷುಗಳು ಸರ್ವದಾ ಗುರುವನ್ನು ಸೇವಿಸಬೇಕು" ಎಂದು ಹೇಳಿರುವರು.

ಈ ಶ್ರುತಿ ಸ್ಮೃತಿ ಸತ್ಸಂಪ್ರದಾಯ ವಿಹಿತವಾದ ಗುರು ಭಕ್ತಿಯನ್ನು ವೇದ ಮತೋದ್ಧಾರಕರೂ ವೈದಿಕ ಧರ್ಮ ಪೀಠಾಸೀನರೂ ಆದ ವಿದ್ಯಾರಣ್ಯ ಸ್ವಾಮಿಗಳು ತಾವು ಮಾಡಿದ ಪ್ರತಿಯೊಂದು ಕೆಲಸದಲ್ಲಿಯೂ ತೋರಿಸಿರುವುದು ಸ್ವಾಭಾವಿಕವಾಗಿಯೇ ಇದೆ. ಮೇಲಿನ ವಾಕ್ಯಗಳಿಂದ ತೋರಿಬರುವ ರೀತಿಯಲ್ಲಿ, ಅವರು, ತಮ್ಮ ಸಾರಸ್ವತ ಸಿದ್ಧಿಗಳೆಲ್ಲಕ್ಕೂ ಗುರು ಪ್ರಸಾದವೇ ಮೂಲವೆಂದು ಸಾರಿದ ಹಾಗೆಯೇ,

ತಮ್ಮ ಲೌಕಿಕ ಸಿದ್ಧಿಗಳನ್ನೂ ಕೂಡ ಗುರುಪಾದಗಳಲ್ಲಿಯೇ ಆರೋಪಣೆ ಮಾಡುತ್ತಿದ್ದರೆಂಬುದು ಅತಿಶಯೋಕ್ತಿಯಾಗಲಾರದು. ಅವರು ಹಾಗೆ ಮಾಡುತ್ತಿದ್ದುದರಿಂದಲೇ. ಅವರ ಶಿಷ್ಯರಾದ ಹರಿಹರ ಬುಕ್ಕ ಮಹಾ ರಾಜರುಗಳು ಕೂಡ ತಮಗೆ ರಾಜ್ಯಲಾಭವೂ ಸಂಪತ್ಪ್ರಾಪ್ತಿಯೂ ಆದುದು ವಿದ್ಯಾತೀರ್ಥರ ಅನುಗ್ರಹದಿಂದಲೇ ಎನ್ನುವ ಮಟ್ಟಿಗೆ ತಮ್ಮ ಪರಮ ಗುರುಗಳಲ್ಲಿ ಭಕ್ತಿಯನ್ನಿಟ್ಟುಕೊಂಡಿದ್ದರು. ಮೊದಲನೆಯ ಹರಿಹರನ ದಾನ ಶಾಸನವು—

"ವಿದ್ಯಾತೀರ್ಥಾಯ ಗುರವೇ ಪರಸ್ಮೈ ತೇಜಸೇ ನಮಃ"

ಎಂದು ಪ್ರಾರಂಭಿಸಿದೆ. ವಿದ್ಯಾರಣ್ಯರ ಗುರು ಭಕ್ತಿಯನ್ನು ನೋಡಿದ ಮೇಲೆ ಅವರ ಶಿಷ್ಯನು "ಪರಸ್ಮೈ ತೇಜಸೇ ನಮಃ" ಎಂಬ ಪರಬ್ರಹ್ಮ ವಾಚಕವಾದ ಪದವನ್ನು ವಿದ್ಯಾತೀರ್ಥ ವಿಷಯದಲ್ಲಿ ಪ್ರಯೋಗಿಸಿರುವುದು ಆಶ್ಚರ್ಯವನ್ನುಂಟುಮಾಡಲಾರದು.

ಬುಕ್ಕರಾಜನ ಒಂದು ಶಾಸನದಲ್ಲಿರುವ—

ಕ್ಷೋಣೀಂ ಸಾಗರಮೇಖಲಾಂ ಸ ಕಲಯನ್
ಭ್ರೂಕ್ಷೇಪ ಮಾತ್ರೇ ಸ್ಥಿತಾಂ ।
ವಿದ್ಯಾತೀರ್ಥ ಮುನೇಃ ಕೃಪಾಂಬುಧಿ ಶಶೀ
ಭೋಗಾವತಾರೋಽಭವತ್ ।

ಎಂಬ ವಾಕ್ಯಗಳಿಂದ ತಾನು ವಿದ್ಯಾತೀರ್ಥರ ಕೃಪೆಯೆಂಬ ಸಮುದ್ರಕ್ಕೆ ಚಂದ್ರನಂತೆಯೂ ಮತ್ತು ಅವರ ಭೋಗಾನುಭವಕ್ಕೆ ಬೇಕಾದ ಸಾಧನ ದಂತೆಯೂ ಇದ್ದನೆಂದು,—ಎಂದರೆ ಅವನ ಸರ್ವಸ್ವಕ್ಕೂ ಅವರ ಅನುಗ್ರಹವೇ ಜನ್ಮಸ್ಥಾನವಾಗಿತ್ತೆಂದೂ ಮತ್ತು ಅವರಿಗೆ ಸಂತೋಷವನ್ನುಂಟು ಮಾಡುವುದೇ ಅವನ ಧರ್ಮವಾಗಿತ್ತೆಂದೂ, ಅವರ ಮನೋಗತವೆಂಬ ಪ್ರಾಣಕ್ಕೆ ತಾನು ಶರೀರವೆಂದು ಆತನು ಭಾವಿಸಿಕೊಂಡಿದ್ದನೆಂದೂ, ಅವರ ಸಂಕಲ್ಪಗಳಿಗೆ ಉಪಕರಣವಾಗಿ, ಎಂದರೆ ಅವರಿಗೆ ವಶವರ್ತಿಯಾಗಿ, ನಡೆಯುವುದೇ ಆತನಿಗೆ ಕರ್ತವ್ಯವಾಗಿತ್ತೆಂದೂ ಸೂಚನೆಯಾಗುತ್ತದೆ.

ಇಮ್ಮಡಿ ಹರಿಹರನ ಕಾಲದಲ್ಲಿ ವಿದ್ಯಾತೀರ್ಥರು ದೇಹಧಾರಣೆ ಮಾಡಿದ್ದರೆಂದು ಹೇಳಲಾಗುವುದಿಲ್ಲ. ಆದರೂ ಅವರ ಖ್ಯಾತಿಯನ್ನು ಆತನೂ ಒಂದು ಶಾಸನದಲ್ಲಿ ಪ್ರಕಟಗೊಳಿಸಿರುವನು :—

ಸೂಕ್ಷ್ಮಾ ವಾಗನಪಾಯಿನೀ ಪರಚಿದಾನಂದಾತ್ಮಿಕಾ ಯಾ ಪರಾ ।
ಯಾ ಪಶ್ಯಂತ್ಯಪಿ ಬರ್ಹಿಣೀಯ ರಸವದ್ವರ್ಣಾನ್ ಬಹೂನ್ ಬಿಭ್ರತೀ ॥

ಸಂಜಲ್ಪಾತ್ಮತಯಾ ವಿಕಲ್ಪಶಬಲಾ ಯಾ ಮಧ್ಯಮಾ ತಾ ಬಹಿ।
ರ್ವಿದ್ಯಾತೀರ್ಥಮುನೇರ್ನಿರೂಪಣ ವಿಧೌ ಕ್ವಾಸ್ತೇಪುನರ್ವೈಖರೀ ॥

[ಸೂಕ್ಷ್ಮವೂ, ಸರಸವೂ, ಧೋರಣೆಯುಳ್ಳವೂ ಆದ ಪರಾ, ಪಶ್ಯಂತೀ, ಮಧ್ಯಮಾ ಎಂಬ ದೇವ ವಾಕ್ಕುಗಳಿಗೇ ವಿದ್ಯಾತೀರ್ಥರ ಗುಣಗಳನ್ನು ಕಥನಮಾಡಲು ಅಶಕ್ಯ. ಇನ್ನು ಮನುಷ್ಯ ವಾಕ್ಕಾದ ವೈಖರಿಯ ಮಾತೇನು ?]

## ವಿದ್ಯಾತೀರ್ಥರ ಕಾರ್ಯ ವಿವರ

ಈ ಅನೇಕ ಸ್ತೋತ್ರಗಳ ರೀತಿಯನ್ನು ನೋಡಿದರೆ ವಿದ್ಯಾತೀರ್ಥರು ಅಸಾಧಾರಣ ವಿದ್ವಾಂಸರೂ ಶಾಸ್ತ್ರವೇತ್ತರೂ ಆಗಿದ್ದುದಲ್ಲದೆ ಮಹಾ ತಪಸ್ವಿಗಳೂ ಯೋಗಬಲ ಸಮನ್ವಿತರೂ ಆಗಿದ್ದಿರಬೇಕೆಂದು ತೋರುತ್ತದೆ. ಅವರು ಸ್ವತಃ ಯಾವ ಗ್ರಂಥವನ್ನೂ ರಚಿಸಿದಂತೆ ತೋರುವುದಿಲ್ಲ. ಅವರು ಯೋಗ ಸಮಾಧಿಯಲ್ಲಿ ಮಗ್ನರಾಗಿದ್ದುಕೊಂಡು ಲೇಖನ ಕಾರ್ಯವನ್ನು ಶಿಷ್ಯರುಗಳಿಗೆ ಒಪ್ಪಿಸಿದ್ದಂತೆ ಕಾಣುತ್ತದೆ.

ಅವರ ಕಾಲಕ್ಕೆ ಹಿಂದೆ ಶೃಂಗಗಿರಿಯ ಮಠವು ಕ್ಷೀಣದಶೆಯಲ್ಲಿತ್ತೆಂದೂ ಅದರ ಜೀರ್ಣೋದ್ಧಾರಕ್ಕಾಗಿ ವಿದ್ಯಾತೀರ್ಥರು ಕಂಚಿಯಿಂದ ಬಂದು ಅಲ್ಲಿ ನಿಂತರೆಂದೂ ಹೇಳುವ ಐತಿಹ್ಯವನ್ನು ಹಿಂದೆ ತಿಳಿಸಿದೆ. ಆ ಕಾಲಕ್ಕೆ ಕಂಚಿಯ ಗುರುವಂಶದಲ್ಲಿ ಐವತ್ತು ತಲೆಗಳು ಕಳೆದು ಹೋಗಿದ್ದು ಶೃಂಗಗಿರಿಯಲ್ಲಿ ಮಾತ್ರ ಇನ್ನೂ ಒಂಬತ್ತು ತಲೆಗಳು ಮಾತ್ರವೇ ಆಗಿದ್ದುವೆಂದು ಆ ಮಠಗಳ ಪಟ್ಟಿಕೆಗಳು ತಿಳಿಸುವುದರಿಂದ, ವಿದ್ಯಾತೀರ್ಥರ ಆಧಿಪತ್ಯಕ್ಕೆ ಹಿಂದೆ ಶೃಂಗಗಿರಿಯಲ್ಲಿ ಕೆಲವು ಕಾಲ ಗುರುಗಳಾರೂ ಇದ್ದಿರಲಾರರೆಂದು ಊಹಿಸುವುದು ಸಾಹಸವೆನಿಸಲಾರದು. ರಾವ್ ಬಹದ್ದೂರ್ ಪ್ರಾಕ್ತನ ವಿಮರ್ಶವಿಚಕ್ಷಣ ಶ್ರೀಮಾನ್ ನರಸಿಂಹಾಚಾರ್ಯರವರು* ೧೯೧೬ನೆಯ ವರ್ಷದ ಪ್ರಾಚೀನ ಲಿಪ್ಯನ್ವೇಷಣದ ವರದಿಯಲ್ಲಿ ಹೀಗೆ ಬರೆದಿರುವರು:—

"Vidyatirtha's is perhaps the greatest name in the list of the Swamis of the Sringeri Matha. We know scarcely anything about his predecessors on the spiritual throne at Sringeri."

* ಶ್ರೀಮಾನ್ ನರಸಿಂಹಾಚಾರ್ಯರವರ ಪ್ರಾಚೀನೇತಿಹಾಸ ತತ್ತ್ವಾನ್ವೇಷಣದಿಂದ ನಮ್ಮ ಪ್ರಕೃತ ವಿಚಾರಕ್ಕೆ ಆಗಿರುವ ಉಪಕಾರವು ಅಲ್ಪವಲ್ಲ.

(ಶೃಂಗೇರಿಯ ಗುರುವಂಶದಲ್ಲಿ ವಿದ್ಯಾತೀರ್ಥರ ಹೆಸರೇ ಬಹುಶಃ ಎಲ್ಲಕ್ಕಿಂತ ದೊಡ್ಡದು. ಅವರ ಹಿಂದೆ ಅಲ್ಲಿ ಪೀಠಾರೋಹಣ ಮಾಡಿದ್ದವರ ವಿಷಯವಾಗಿ ಏನೂ ತಿಳಿದುಬರುವುದಿಲ್ಲ.)

ವಿದ್ಯಾರಣ್ಯರ ಕಾಲದವರೆಗೂ ಶೃಂಗಗಿರಿಯಲ್ಲಿ ದೊಡ್ಡ ಮಠವಾಗಲಿ, ಶ್ರೀ ಶಾರದಾ ಲೋಹಪ್ರತಿಮೆಯಾಗಲಿ, ಅಂತಹ ಸಂಸ್ಥೆಗೆ ಇರಬೇಕಾದ ಭೂವ್ಯಾದಿ ಸ್ವತ್ತುಗಳಾಗಲಿ ಇರಲಿಲ್ಲವೆಂದು ಜನರ ಹೇಳಿಕೆಯುಂಟು; ಈ ಹೇಳಿಕೆಗೆ ಅನೇಕ ಪ್ರಮಾಣಗಳು ಕಾಣಬರುತ್ತವೆ.* ಬಹುಶಃ ವಿದ್ಯಾರಣ್ಯರ ಕಾಲದವರೆಗೆ ಶೃಂಗಗಿರಿಯು ಕೇವಲ ತಪೋವನವಾಗಿ, ಜನಸಂಘವಿಲ್ಲದುದಾಗಿ, ಯತಿಗಳಿಗೂ ವಿರಕ್ತರಿಗೂ ಮಾತ್ರ ಬೇಕಾದ ಕ್ಷೇತ್ರವಾಗಿತ್ತೆಂದು ತೋರುತ್ತದೆ. ಇಂತಹ ಸ್ಥಲದಲ್ಲಿ ಗುರು ಪರಂಪರೆಗೆ ಆಗಾಗ ವಿಚ್ಛಿತ್ತಿಬರುತ್ತಿತ್ತೆಂದರೂ ಎನ್ನಬಹುದು; ಅಥವಾ ಅಲ್ಲಿಯ ಗುರುಗಳು ತಮ್ಮ ತಪಶ್ಚರ್ಯೆಯಲ್ಲಿ ಮಗ್ನರಾಗಿ ತಮ್ಮ ಪೀಠದ ಬಾಹ್ಯ ಕರ್ತವ್ಯಗಳಲ್ಲಿ ಪ್ರವೃತ್ತರಾಗದೆ ಇದ್ದರೆಂದರೂ ಎನ್ನಬಹುದು. ಲಿಂಗಾಯತ ಮೊದಲಾದ ಮತಾಂತರಗಳವರ ಪ್ರಾಬಲ್ಯದಿಂದ ಶೃಂಗೇರಿಯ ಮಠವು ದುರ್ಬಲವಾಗಿತ್ತೆಂದೂ ಹೇಳುವರು. ಹೇಗಾದರಿರಲಿ, ವಿದ್ಯಾರಣ್ಯರು ಶೃಂಗಗಿರಿಗೆ ಮಾಡಿದ ಮಹೋಪಕಾರಗಳನ್ನು ನೋಡಿದರೆ ಅವರೇ ತಮ್ಮ ಗುರುಗಳಾದ ವಿದ್ಯಾತೀರ್ಥರನ್ನು ಪ್ರಾರ್ಥಿಸಿ ಶೃಂಗಗಿರಿಗೆ ಕರೆದುಕೊಂಡು ಬಂದಿರಬೇಕೆಂದು ಹೇಳಬಹುದಾಗಿದೆ.

ವಿದ್ಯಾತೀರ್ಥರು ಕಂಚಿಯಿಂದ ಹಿಮಾಲಯಕ್ಕೆ ಹೋಗಿ ಅಲ್ಲಿ ೧೫ ವರ್ಷಗಳ ಪರ್ಯಂತವಿದ್ದರೆಂದು ಮೇಲೆ ಸೂಚಿಸಿದೆಯಷ್ಟೆ. ಬಹುಶಃ ಆ ಬಳಿಕ ಅವರು ಶೃಂಗಗಿರಿಗೆ ಬಂದು ಅಲ್ಲಿಯ ಮಠಕಾರ್ಯಗಳಿಗೆ ಮುಖ್ಯ ಪ್ರೇರೇಪಕರಾಗಿ ನಿಂತು, ಕಡೆಗೆ ಅಲ್ಲಿ ಸಮಾಧಿಹೊಂದಿರಬೇಕು. ಅವರು ಶೃಂಗೇರಿಯಲ್ಲಿಯೇ ಸಿದ್ಧಿಹೊಂದಿದರೆಂಬುದಕ್ಕೆ, ಅವರ ಸಮಾಧಿ ರೂಪವಾದ ವಿದ್ಯಾಶಂಕರ ದೇವಾಲಯವನ್ನು ವಿದ್ಯಾರಣ್ಯರು ಶೃಂಗೇರಿಯಲ್ಲಿ ಕಟ್ಟಿಸಿರುವುದೇ ಸಾಕ್ಷಿಯಾಗಿದೆ.

ಮೇಲೆ ಹೇಳಿದಂತೆ ಎಲ್ಲ ಕಾರ್ಯಗಳಿಗೂ ಗುರುಗಳನ್ನು ಮುಂದಿಟ್ಟುಕೊಂಡು, ಅವರ ಹೆಸರಿನಲ್ಲಿ ಎಲ್ಲವನ್ನೂ ಪ್ರಾರಂಭಿಸುವುದು ಶಿಷ್ಟಾಚಾರವಾದುದರಿಂದಲೂ, ಅದರಿಂದ ತಾವು ಸ್ವಪ್ರತಿಷ್ಠಾಕಾಂಕ್ಷಿಯೆಂಬ ಆಕ್ಷೇಪಣೆಗೆ ಗುರಿಯಾಗದೆ, ದೊಡ್ಡ ಕೆಲಸವನ್ನು ಸಾಧಿಸುವುದು

---

* ಬ್ರಹ್ಮಶ್ರೀ ಶ್ರೀಕಂಠಶಾಸ್ತ್ರಿಗಳವರ "ಶ್ರೀ ಸಚ್ಚಿದಾನಂದ ಶಿವಾಭಿನವ ನರಸಿಂಹ ಭಾರತೀಸ್ವಾಮಿಗಳವರ ಚರಿತ್ರೆ"ಯನ್ನು ನೋಡಿರಿ.

ಸುಲಭವಾಗುತ್ತಿತ್ತಾದುದರಿಂದಲೂ, ವಿದ್ಯಾರಣ್ಯರೇ ವಿದ್ಯಾತೀರ್ಥರನ್ನು ಶೃಂಗೇರಿಗೆ ಬರಮಾಡಿರಬಹುದು. ಹೇಗಾದರಾಗಲಿ, ವಿದ್ಯಾತೀರ್ಥರು ಶೃಂಗಗಿರಿಯ ಜೀರ್ಣೋದ್ಧಾರಕ್ಕೆ ಕಾರಣರಾಗಿ, ಸ್ಮಾರ್ತ ಪ್ರಪಂಚಕ್ಕೆ ಅತ್ಯಂತೋಪಕಾರಮಾಡಿರುವರು.

## ನೂತನ ಮಠ ಸ್ಥಾಪನೆ

ವಿದ್ಯಾತೀರ್ಥರಿಗೆ ಅವರೊಡನೆ ಹಿಮಾಲಯಕ್ಕೆ ಹೋಗಿದ್ದ ಶಂಕರಾನಂದರೂ ಜಗದ್ವಿಖ್ಯಾತರಾದ ವಿದ್ಯಾರಣ್ಯರೂ ಅಲ್ಲದೆ ಬೇರೆ ಎಂಟು ಮಂದಿ * ಪ್ರಸಿದ್ಧರಾದ ಶಿಷ್ಯರಿದ್ದರೆಂಬುದು ಮೇಲಿನ ಒಂದು ಶ್ಲೋಕದಿಂದಲೇ ವ್ಯಕ್ತವಾಗಿದೆ. ಅವರ ಹೆಸರುಗಳು ಇವು:—

೧. ಸಚ್ಚಿದಾನಂದ
೨. ಅದ್ವೈತ ಬ್ರಹ್ಮಾನಂದ (ಭಾರತೀತೀರ್ಥ)
೩. ಸಾಂದ್ರಾನಂದ
೪. ಅದ್ವೈತಾನಂದ ಶೇವಧಿ
೫. ಮಹಾದೇವ ಶಿವ
೬. ಅದ್ವೈತ ಸುಖಾನಂದ
೭. ಶಿವಯೋಗಿ
೮. ಪ್ರತ್ಯಗ್ಜ್ಯೋತಿ

ಈ ಎಂಟು ಮಂದಿಯಲ್ಲಿ ೨ನೆಯವರ ಪ್ರಸ್ತಾವವು ಹಿಂದೆಯೇ ಬಂದಿದೆ. ಅವರ ವಿಷಯವನ್ನು ಮುಂದೆಯೂ ಪ್ರತ್ಯೇಕವಾಗಿ ಹೇಳಬೇಕಾಗಿದೆ. ಶಂಕರಾನಂದರ ವಿಷಯವೂ ಹಾಗೆಯೇ. ಈ ಮೇಲೆ ಹೇಳಿರುವ ಎಂಟು ಮಂದಿ ಶಿಷ್ಯರನ್ನು ವಿದ್ಯಾತೀರ್ಥರವರು ತಾವೇ ಹೊಸದಾಗಿ ಸ್ಥಾಪಿಸಿದ ಎಂಟು ಪೀಠಗಳಲ್ಲಿ ಕುಳ್ಳಿರಿಸಿದರೆಂದು ಪುರಾತನ ವಚನವಿದೆ. ಬಹುಶಃ ಪುಷ್ಪಗಿರಿ, ಶಿವಗಂಗೆ, ಆವನಿ,† ಸಾಂಕೇಶ್ವರ,

---

* (೧) ಸಚ್ಚಿದ್ಘನಃ (೨) ಪರಾದ್ವೈತ ಬ್ರಹ್ಮಾನಂದ ಯತೀಶ್ವರಃ .
(೩) ಸಾಂದ್ರಾನಂದ ಯತೀಂದ್ರಶ್ಚ (೪) ಪಶ್ಚಾದದ್ವೈತ ಶೇವಧಿಃ ॥
(೫) ಮಹಾದೇವ ಶಿವಾ (೬)ಽದ್ವೈತ ಸುಖಾನಂದ ಯತೀಶ್ವರೌ ।
(೭) ಶಿವಯೋಗೀ ತಥಾಪರೈಧಃ (೮) ಪ್ರತ್ಯಗ್ಜ್ಯೋತಿಃ ಪ್ರಕಾಶಕಃ
ಇಮೇಹ್ಯಷ್ಟೌ ಸ್ಮೃತಾಶ್ಶಿಷ್ಯಾ ಶ್ರೀವಿದ್ಯಾತೀರ್ಥಯೋಗಿನಃ ॥
—ಗುರು ಪರಂಪರಾ ನಾಮಮಾಲಾ.

† ಆವನಿಯ ಗುರು ಪೀಠಿಗೆಯ ಈ ಶ್ಲೋಕವು ವಿದಾರಣ್ಯ ಸಂಬಂಧವನ್ನು ಸೂಚಿಸುತ್ತದೆ:—

ವಿದ್ಯಾರಣ್ಯಗುರೋಃ ಶಿಷ್ಯಂ ವಿದ್ಯಾಶಂಕರ ದೇಶಿಕಂ ।
ಪ್ರದ್ಯೋತನ ನಿಭಾಕಾರ ವಿದ್ಯೋತಿತಮಹಂ ಭಜೇ ॥

"ವಿದ್ಯಾಶಂಕರ," "ವಿದ್ಯಾರಣ್ಯ" ಎಂಬ ಎರಡು ಹೆಸರುಗಳೂ ಆವನಿಯ ಪರಂಪರೆಯಲ್ಲಿ ಅನೇಕಾವರ್ತಿ ದೊರೆಯುತ್ತವೆ.

ಕೊಲ್ಲಾಪುರ, ವಿರೂಪಾಕ್ಷ ಮೊದಲಾದ ಗುರುಪೀಠಗಳು ಈ ಎಂಟು ಶಾಖಾ ಮಠಗಳೆಂದು ತೋರುತ್ತದೆ. ಈ ನೂತನ ಮಠ ನಿರ್ಮಾಣವನ್ನು ಅವರು ವಿದ್ಯಾರಣ್ಯರ ಪ್ರಾರ್ಥನೆಯ ಮೇರೆಗೆ ಕೈಕೊಂಡಿರಬೇಕು. ಏಕೆಂದರೆ, ವಿದ್ಯಾತೀರ್ಥರು ಸ್ವತಃ ಬಾಹ್ಯ ವ್ಯಾಪಾರಗಳಲ್ಲಿ ಪ್ರವೇಶಿಸಿ ದವರಂತೆ ತೋರುವುದಿಲ್ಲ. ಅವರು ಗ್ರಂಥಲೇಖಕರಲ್ಲ; ಲೌಕಿಕ ಕಾರ್ಯಾ ಸಕ್ತರಲ್ಲ. ಅವರು ಕೇವಲ ಯೋಗಾಸಕ್ತರು; ತತ್ತ್ವದರ್ಶಕರು. ಇತ ರರು ಪ್ರಾರಂಭಿಸಿದ ಧಾರ್ಮಿಕ ಸಮಾರಂಭಗಳಿಗೆ ಅವರು ಪೋಷಕರೂ ಆಶ್ರಯದಾಯಕರೂ ಆಗಿರುತ್ತಿದ್ದರು; ತಾವಾಗಿ ಪ್ರವೃತ್ತಿಮಾರ್ಗಕ್ಕೆ ಹೆಚ್ಚಾಗಿ ಬರುತ್ತಿರಲಿಲ್ಲ. ವಿದ್ಯಾರಣ್ಯರಾದರೋ, ಲೋಕದ ಯೋಗಕ್ಷೇಮ ದಲ್ಲಿ ವಿಶೇಷ ಪ್ರವೃತ್ತಿಯುಳ್ಳವರು; ಕಾರ್ಯನಿರತವಾದ ಸ್ವಭಾವವುಳ್ಳ ವರು. ಅವರು ಯಾವಾಗಲೂ ಧರ್ಮ ಸಂರಕ್ಷಣೆಗಾಗಿ ಪಂಡಿತರನ್ನೂ ಸಂನ್ಯಾಸಿಗಳನ್ನೂ ಜೊತೆಮಾಡಿಕೊಂಡು ಶ್ರಮಪಡುತ್ತಿದ್ದವರು. ಅದೇ ಉದ್ದೇಶಕ್ಕಾಗಿ ನೂತನ ಮಠ ಸ್ಥಾಪನೆಯನ್ನೂ ಅವರು ತಮ್ಮ ಗುರು ಗಳ ಕೈಯಿಂದ ಮಾಡಿಸಿರಬಹುದಲ್ಲವೆ? ಈ ವಿಚಾರವು ಮುಂದೆ ಮತ್ತಷ್ಟು ವಿಮರ್ಶೆಯಾದೀತು.

ದೇಶೋನ್ನತಿಗೂ ಧರ್ಮೋನ್ನತಿಗೂ ಬೇಕಾದ ಮಹಾ ಸಮಾ ರಂಭಕ್ಕೆ ಮಹಾಪುರುಷರಾದೊಬ್ಬರ ಉಪಾಶ್ರಯವು ಎಷ್ಟು ಆವಶ್ಯಕ ವೆಂಬುದನ್ನು ವಿದ್ಯಾರಣ್ಯರು ಚೆನ್ನಾಗಿ ಕಂಡುಕೊಂಡಿದ್ದಂತೆ ಕಾಣು ತ್ತದೆ. ಬಹುಜನೋಪಾದೇಯವಾಗಬೇಕಾದ ಯಾವ ಕಾರ್ಯವನ್ನು ಪ್ರಾರಂಭಿಸಬೇಕಾದರೂ ಅದಕ್ಕೆ ಮೂಲಸ್ತಂಭವಾಗಿರಲು ಸಕಲ ಸಂಮಾನ್ಯರಾದವರನ್ನಾರನ್ನಾದರೂ ಮೊದಲು ಕಂಡುಹಿಡಿದು, ಅವ ರನ್ನು ಮುಂದೆ ನಿಲ್ಲಿಸಬೇಕು. ಪ್ರಸಿದ್ಧವಾದ ಹೆಸರೊಂದು ಮಾತ್ರವೇ ಜಗತ್ತಿನಲ್ಲಿ ಎಷ್ಟೋ ಕೆಲಸಗಳನ್ನು ಮಾಡಬಲ್ಲುದು. ಸಾಮಾನ್ಯ ಜನರು ತಮ್ಮ ದೃಷ್ಟಿಗೆ ಗೋಚರವಾಗದಿರುವ ಒಂದು ಭಾವ ಅಥವಾ ತತ್ತ್ವವನ್ನು ಗ್ರಹಿಸುವುದಕ್ಕಿಂತ, ತಮ್ಮ ದೃಷ್ಟಿಗೆ ವಿಷಯನಾದ ಒಬ್ಬ ಮಹಾಪುರುಷನನ್ನು ಸುಲಭವಾಗಿ ನೋಡಿ ಆನಂದಿಸಿ, ಆತನಿಂದ ತಾವು ಕಲಿಯಬೇಕಾದ ಅಭಿಪ್ರಾಯವನ್ನು ಬೇಗ ಗ್ರಹಿಸಬಲ್ಲರು. ಪ್ರತಿ ಯೊಬ್ಬ ಮಹಾಪುರುಷನೂ ಯಾವುದಾದರೊಂದು ಮಹಾತತ್ತ್ವದ ಅಥವಾ ಮಹೋದ್ದೇಶದ ಮೂರ್ತರೂಪನಾಗಿರುತ್ತಾನೆ. ಆದಕಾರಣ ಇಂತಹ ಮಹಾಪುರುಷರೇ ಸಾಮಾನ್ಯ ಜನರ ವೃತ್ತಿಗೆ ಮಾರ್ಗದರ್ಶಕ ರಾಗಿರುತ್ತಾರೆ. ಪ್ರಪಂಚದ ಚರಿತ್ರೆಯೆಲ್ಲವೂ ಆದರ ಮಹಾಪುರುಷರ

ಚರಿತ್ರೆಯೇ ಎಂಬ ಸೂಕ್ಷ್ಮವನ್ನು ಇಂಗ್ಲಿಷಿನಲ್ಲಿ ಕಾರ್ಲೈಲ್ ಎಂಬ ತತ್ತ್ವದರ್ಶಿಯು ದೃಷ್ಟಾಂತ ಸಹಿತವಾಗಿ ವಿವರಿಸಿದ್ದಾನೆ. ನಮ್ಮ "ಭಗವದ್ಗೀತೆ"ಯಲ್ಲಿಯೂ ಹಾಗೆಯೇ—

ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ ।
ಸಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥

ಎಂದು ಹೇಳಿದೆ. ಇದಕ್ಕೆ ನಿದರ್ಶನಗಳನ್ನು ಈಗ ನಮ್ಮ ದೇಶದಲ್ಲಿಯ ನೂತನ ಸಂಘ ಸಂಸ್ಥೆಗಳಲ್ಲಿ ಕಾಣಬಹುದು. ಈ ಸಂಸ್ಥೆಗಳು ಬಹುಶಃ ಶ್ರೀರಾಮಕೃಷ್ಣಪರಮಹಂಸ, ರಾಮಮೋಹನರಾಯ, ರ್‍ಯಾನಡೆ, ನವರೋಜಿ, ತಿಲಕ್, ವಿವೇಕಾನಂದ, ಗೋಖಲೆ—ಮೊದಲಾದ ಪ್ರಸಿದ್ಧ ಪುರುಷರ ಹೆಸರುಗಳನ್ನಾಶ್ರಯಿಸಿಕೊಂಡು ಹುಟ್ಟಿವೆ. ಹೀಗೆ ದೊಡ್ಡವರೆಂದು ಬಹು ಜನರಿಂದ ಅಂಗೀಕೃತರಾದವರ ಅಂಕಿತದೊಡನೆ ಹುಟ್ಟುವ ಸಂಘ ಸಮಾರಂಭಗಳಿಗೆ ಮುಖ್ಯವಾಗಿ ಎರಡು ಬಗೆಯ ಪ್ರಯೋಜನಗಳುಂಟು :–(೧) ಅವುಗಳನ್ನು ನಡೆಯಿಸುವ ಜನರಿಗೆ ಸ್ವಪ್ರತಿಷ್ಠಾ ದೋಷವು ಆರೋಪಿತವಾಗುವ ಸಂಭವವು ಕಡಿಮೆ; (೨) ಅವುಗಳ ಸ್ವರೂಪ ಆಶಯಗಳನ್ನು ಜನರು ಸುಲಭವಾಗಿ ತಿಳಿದುಕೊಂಡು ಬೇಗನೆ ಅವುಗಳಿಗೆ ಸಹಾಯವಾಗಿ ಬರುವರು. ಈ ರಹಸ್ಯವನ್ನು ವಿದ್ಯಾರಣ್ಯರು ಕಂಡುಕೊಂಡಿದ್ದ ಕಾರಣದಿಂದಲೇ ಅವರು ಸರ್ವ ಸಮಾರಂಭಗಳಿಗೂ ವಿದ್ಯಾತೀರ್ಥರನ್ನು ಮೂಲ ಮೂರ್ತಿಯಾಗಿ ಭಾವಿಸಿಕೊಂಡು, ಅವರು ಇಹಲೋಕ ವ್ಯಾಪಾರವನ್ನು ಬಿಟ್ಟ ಬಳಿಕ ಕೂಡ ಅವರ ಹೆಸರಿನ ಮಹಿಮೆಯನ್ನು ಕಾಪಾಡಿ, ಅದರ ಆಸರೆಯಲ್ಲಿ ತಮ್ಮ ದೇಶ ಧರ್ಮೋದ್ಧಾರ ಕಾರ್ಯಗಳನ್ನು ನಡೆಯಿಸುತ್ತಿದ್ದರೆಂದು ತೋರುತ್ತದೆ.

## ಶೃಂಗೇರಿಯ ಜೀರ್ಣೋದ್ಧಾರ

ಶೃಂಗೇರಿಯ ಬಳಿ ತುಂಗಾನದಿಯು ಪಶ್ಚಿಮವಾಹಿನಿಯಾಗಿರುವ ಕಡೆ ಈಗ ವಿದ್ಯಾರಣ್ಯಪುರವೆಂದು ಹೆಸರು ಪಡೆದಿರುವ ಪ್ರದೇಶವು ಪೂರ್ವದಲ್ಲಿ ವಸಿಷ್ಠಾಶ್ರಮವಾಗಿತ್ತೆಂದೂ, ವಿದ್ಯಾತೀರ್ಥರು ತಪೋನಿರತರಾಗಿದ್ದುದು ಅಲ್ಲಿಯೇ ಎಂದೂ ಜನರು ಹೇಳುತ್ತಾರೆ. ವಿದ್ಯಾತೀರ್ಥರು "ಲಂಬಿಕಾಯೋಗ"ವೆಂಬ ಯೋಗಸಾಧನೆಯಲ್ಲಿ ತುಂಬಾ ಪ್ರೀತಿಯುಳ್ಳವರಾಗಿದ್ದರಂತೆ. ಅವರು ಕಡೆಗೆ ಇತರ ಮರ್ತ್ಯರಂತೆ ದೇಹತ್ಯಾಗ ಮಾಡದೆ, ಲಂಬಿಕಾಯೋಗ ಮಾರ್ಗದಿಂದ ಕಾಯಕ ಮಾನಸಿಕ ವ್ಯಾಪಾರ

ಗಳನ್ನು ತೊರೆದು ಪರಿಪೂರ್ಣ ಸಮಾಧಿ ಸ್ಥಿತಿಯನ್ನು ಹೊಂದಿ, ಅದ್ಯಾಪಿ ಆ ಯೋಗನಿದ್ರೆಯಲ್ಲಿಯೇ ಇರುವರೆಂದು ಪೂರ್ವಿಕರು ಹೇಳುವರು. ಇವರ ಸಮಾಧಿ ಸ್ಥಾನದ ಮೇಲೆ, ವಿದ್ಯಾರಣ್ಯರು ಶಿವಲಿಂಗವನ್ನು ಪ್ರತಿಷ್ಠೆಮಾಡಿಸಿ ತಮಗಿದ್ದ ಗುರು ಭಕ್ತಿಯನ್ನು ತೋರಿಸಿ, ಇತರರಲ್ಲಿ ಅಂತಹ ಭಕ್ತಿಯನ್ನುಂಟುಮಾಡುವುದಕ್ಕಾಗಿಯೂ, ಗುರುಗಳ ಖ್ಯಾತಿಯನ್ನು ಶಾಶ್ವತಗೊಳಿಸುವುದಕ್ಕಾಗಿಯೂ, ಅದ್ಭುತ ಚಿತ್ರ ಚಿತ್ರಿತವೂ ಸರ್ವಾಂಗ ಸುಂದರವೂ ಆದ ದೇವಾಲಯವನ್ನು ಕಟ್ಟಿಸಿದರು. ಅದಕ್ಕೆ ಅನೇಕ ಚತುರರಾದ ಶಿಲ್ಪಿಗಳ ಅನೇಕ ವರ್ಷಗಳ ಶ್ರಮವೂ ಅನೇಕ ಲಕ್ಷ ರೂಪಾಯಿಗಳ ವೆಚ್ಚವೂ ಮುಟ್ಟಿರಬೇಕು.

ವಿದ್ಯಾತೀರ್ಥರ ಖ್ಯಾತಿಯನ್ನೂ, ಆ ಮೂಲಕ ಸ್ಮಾರ್ತ ಧರ್ಮದ ಪ್ರಾಶಸ್ತ್ಯವನ್ನೂ ಹರಡಿ ಸ್ಥಿರಪಡಿಸುವುದಕ್ಕಾಗಿ ಶೃಂಗೇರಿಯಲ್ಲಿ ಮಾತ್ರವಲ್ಲದೆ ಇತರ ಕಡೆಗಳಲ್ಲಿಯೂ ಅವರು ವಿದ್ಯಾತೀರ್ಥ ದೇವಾಲಯಗಳನ್ನು ಕಟ್ಟಿಸುವ ಏರ್ಪಾಟು ಮಾಡಿದ್ದಂತೆ ಕಾಣುತ್ತದೆ. ಕೋಲಾರ ಪ್ರಾಂತದ ಮುಳಬಾಗಲು ಬಳಿಯ ಶಂಕರತೀರ್ಥವೆಂಬ ಕಡೆಯಿರುವ ಗುಡಿಯು ಇಂತಹ ಆಲಯಗಳಲ್ಲೊಂದಿರಬಹುದು.

ಶೃಂಗೇರಿಯ ಮಠದ ಕಾಗದ ಪತ್ರಗಳಿಗೆ ಸ್ವಗುರು ಸ್ಮರಣಾತ್ಮಕವೂ ಬಹ್ವರ್ಥಗರ್ಭಿತವೂ ಆದ "ವಿದ್ಯಾಶಂಕರ" ಎಂಬ ಮುದ್ರಿಕೆಯನ್ನು ಹಾಕಲು ಮೊದಲು ಮಾಡಿಸಿದವರು ವಿದ್ಯಾರಣ್ಯರೇ ಎಂದು ಬಹುಜನರ ನಂಬಿಕೆಯಿದೆ. ಈ "ವಿದ್ಯಾಶಂಕರ" ನಾಮಾಂಕಿತವು ಕೋಲಾರ ಪ್ರಾಂತದ ಮುಳಬಾಗಲು ಬಳಿಯ ಆವನಿಯ ಮಠದಲ್ಲಿಯೂ ಉಪಯುಕ್ತವಾಗಿರುವುದರಿಂದ ಆ ಅಂಕಿತವನ್ನು ಸರ್ವತ್ರ ಪ್ರಚಾರಗೊಳಿಸುವುದು ವಿದ್ಯಾರಣ್ಯರ ತಾತ್ಪರ್ಯವಿದ್ದಿರಬೇಕೆಂದು ನಾವು ಊಹಿಸಬಹುದು.

ವಿಜನವಾಗಿ ಏಕಾಂತವಾಸಾರ್ಹವಾಗಿದ್ದ ಶೃಂಗೇರಿಯು ಸತ್ರ ದೇವಮಂದಿರಗಳಿಂದ ತುಂಬಿ ಜಗದ್ವ್ಯಾಪಾರ ಪ್ರವಾಹದೊಳಕ್ಕೆ ಬಂದುದು ವಿದ್ಯಾತೀರ್ಥರ ಪ್ರಭುತ್ವದಲ್ಲಿ. ಅದಕ್ಕೆ ಮುಖ್ಯ ಸಾಧನವಾಗಿದ್ದವರು ವಿದ್ಯಾರಣ್ಯರು. ಈ ಸಂದರ್ಭದಲ್ಲಿ ವಿದ್ಯಾರಣ್ಯರ ಜನಾಕರ್ಷಣೋದ್ಯಮವನ್ನು ಪ್ರದರ್ಶಿಸುವ ಇನ್ನು ಕೆಲವಂಶಗಳನ್ನಿಲ್ಲಿ ಸೂಚಿಸಬಹುದು.

(೧) ಅವರು "ಶಂಕರವಿಜಯ" ಗ್ರಂಥವನ್ನು ಬರೆಯಿಸಿದರು. ಜನರಂಜಕವೂ ಸಂಕ್ಷಿಪ್ತವೂ ಆದ ಶ್ರೀ ಶಂಕರಾಚಾರ್ಯರ ಜೀವನ ವೃತ್ತಾಂತವಾವುದೂ ಆಗ ಇರಲಿಲ್ಲವೆಂದು ಮಾಧವೀಯ "ಶಂಕರ

ವಿಜಯ"ದ ಮಾತುಗಳಿಂದಲೇ ತೋರಿಬರುತ್ತದೆ. ವೇದಮತ ಪ್ರಚಾರಣೆಗೆ ಆಚಾರ್ಯರ ಕಥೆಯು ಅತ್ಯಂತಾವಶ್ಯಕವೆಂದು ತಿಳಿದು ವಿದ್ಯಾರಣ್ಯರು ಆ ಗ್ರಂಥವನ್ನು ಬರೆಯಿಸಿರಬೇಕು.

(೨) ಶ್ರೀ ಶಂಕರ ಭಗವತ್ಪಾದಾಚಾರ್ಯರ ಮೂರ್ತಿಯನ್ನೂ ವಿದ್ಯಾರಣ್ಯರೇ ಮೊದಲು ನಿರ್ಮಾಣಮಾಡಿಸಿದವರು.

(೩) ಶೃಂಗೇರಿಯಲ್ಲಿ ವಿದ್ಯಾರಣ್ಯರ ಕಾಲದವರೆಗೂ ಶ್ರೀ ಶಾರದಾ ದೇವಿಯ ಲೋಹ ಪ್ರತಿಮೆಯಿರಲಿಲ್ಲ. ಅದುವರೆಗೂ ಅಲ್ಲಿ ಪೂಜೆಯನ್ನು ಪಡೆಯುತ್ತಿದ್ದುದು ದಾರುಮಯ ಮೂರ್ತಿ. ಜನಸಾಮಾನ್ಯದ ಅಭಿಷೇಕ ಪೂಜೆಗಳನ್ನು ಪಡೆಯಲು ದೇವಿಯ ಲೋಹಮಯ ವಿಗ್ರಹವು ಅತ್ಯಾವಶ್ಯಕವೆಂದು ವಿದ್ಯಾರಣ್ಯರು ಬಗೆದು, ಸುವರ್ಣಾಂಶವನ್ನೇ ಹೆಚ್ಚಾಗಿ ಒಳಗೊಂಡಿರುವ ಪಂಚಲೋಹ ಪ್ರತಿಮೆಯನ್ನು ಮಾಡಿಸಿಟ್ಟರು.

(೪) ಶೃಂಗೇರಿಯ ಮಠಕ್ಕೆ ಅನನ್ಯವಾದ ಬಿರುದುಗಳನ್ನೂ ರಾಜ ಸನ್ಮಾನಗಳನ್ನೂ ಬಹುಬೆಲೆಬಾಳುವ ಭೂ ಕನಕ ವಸ್ತುಗಳನ್ನೂ ಸಂಪಾದಿಸಿಕೊಟ್ಟವರೂ ವಿದ್ಯಾರಣ್ಯರೇ. ಅವರು ಸಾಮಾನ್ಯ ಜನತೆಯ ರಂಜನೆಯನ್ನು ಬಹುವಾಗಿ ಲಕ್ಷ್ಯದಲ್ಲಿಟ್ಟಿದ್ದರೆಂಬುದಕ್ಕೆ ಇದೂ ದೃಷ್ಟಾಂತವಾಗಿದೆ. ಹೀಗ ಜನಸಂಘಕ್ಕೆ ದೂರವಾಗಿ, ಅರಣ್ಯ ಮಧ್ಯದ ಆಶ್ರಮವಾಗಿ, ಯತಿಯೋಗಿಗಳಿಗೆ ಮಾತ್ರ ಗಮ್ಯವಾಗಿದ್ದ ಶೃಂಗೇರಿಯು ಸಕಲ ಸ್ಮಾರ್ತ ಲೋಕವನ್ನೂ ಆಕರ್ಷಿಸಬಲ್ಲ ಪ್ರಸಿದ್ಧ ಕ್ಷೇತ್ರವಾಗಿ, ಪ್ರಪಂಚದ ಆಚಾರ ವ್ಯವಹಾರ ವಿಚಾರಗಳಿಗೆ ನಿರ್ಣಯಸ್ಥಾನವಾದುದು ವಿದ್ಯಾತೀರ್ಥರ ಕಾಲದಲ್ಲಿ.

ವಿದ್ಯಾತೀರ್ಥರ ಕೀರ್ತಿಯು ಈಗಲೂ ಪ್ರಕಾಶಮಾನವಾಗಿದೆ. ಶೃಂಗೇರಿಯ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರು ಅವರ ಮಾಹಾತ್ಮ್ಯವನ್ನು ಅನೇಕ ಸ್ತೋತ್ರಗಳಲ್ಲಿ ಬಣ್ಣಿಸಿರುವರು. ಅವುಗಳಲ್ಲಿ ಒಂದೆರಡು ಶ್ಲೋಕಗಳನ್ನು ಇಲ್ಲಿ ಪಠಿಸಿ ಬೇರೊಂದು ಕಥೆಗೆ ತಿರುಗೋಣ :—

ಲಂಬಿಕಾಯೋಗ ನಿರತಮಂಬಿಕಾಪತಿ ರೂಪಿಣಂ।
ವಿದ್ಯಾಪ್ರದಂ ನತೌಘಾಯ ವಿದ್ಯಾತೀರ್ಥಮುಪಾಸ್ಮಹೇ ॥

ವಿದ್ಯಾರಣ್ಯ ಪ್ರಮುಖೈರ್ವಿದ್ಯಾಪಾರಂಗತೈ ಸ್ಸೇವ್ಯಂ।
ಅದ್ಯಾಪಿ ಯೋಗನಿರತಂ ವಿದ್ಯಾತೀರ್ಥಂ ನಮಾಮಿ ಯೋಗೀಶಂ॥

ಯತ್ಪ್ರೀತಿ ಪ್ರತಿಪತ್ತಿಭಿರ್ಹರಿಹರಾಭಿಖ್ಯಾದ್ಯ ಭೂಪಾಲಕೈ।
ರ್ವಿಪ್ರೇಭ್ಯಃ ಶ್ರುತಿವಿದ್ಭ್ಯ ಏವ ಬಹವೋ ಗ್ರಾಮಾ ವಿಸೃಷ್ಟಾಃ ಪುರಾ ॥

ತದ್ರಾಜವ್ರಜ ವನ್ದ್ಯಮಾನಮನಿಶಂ ರಾಜಾಧಿರಾಜತ್ವದಂ।
ವಿದ್ಯಾತೀರ್ಥ ಪದಾರವಿಂದ ಯುಗಳಂ ವಂದೇ ಜಗತ್ಪಾವನಂ ॥

## ೯. ನೇಮಿಚಂದ್ರ

ಲೀಲಾವತಿ ನೇಮಿನಾಥಪುರಾಣಗಳ ಕರ್ತೃವಾದ ಈ ನೇಮಿಚಂದ್ರನು ಕ್ರಿ.ಶ. ಸುಮಾರು ೧೧೭೦ ರಲ್ಲಿ ಜೀವಿಸಿದ್ದು ತನ್ನ ಕೃತಿಗಳನ್ನು ವಿರಚಿಸಿದನೆಂದು ಕವಿಚರಿತಕಾರರ ಅಭಿಪ್ರಾಯ. ಈ ಕವಿಯ ವಿಷಯವಾಗಿ ಅವರು (ಕವಿಚರಿತೆ I, ಪುಟ ೧೯೮, ೧೯೯) ಹೀಗೆಂದು ಬರೆದಿರುವರು :—

" ಈತನು ಲೀಲಾವತಿ, ನೇಮಿನಾಥಪುರಾಣ ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ.

ಈತನು ಲೀಲಾವತೀ ಗ್ರಂಥದ ಕೊನೆಯಲ್ಲಿ—ಅಂಬುಧಿವೇಷ್ಟಿತಾವನಿಗೆ ಲಕ್ಷ್ಮಣದೇವನೆ ರಾಜನೆಂದು ಲೋ | ಕಾಂಬಿಕೆಯಪ್ಪ ಪುಣ್ಯಸತಿ ಚಂದಲದೇವಿಯೆ ದೇವಿಯೆಂದು ಸೇ | ವ್ಯಂ ಬುಧ ನೇಮಿಚಂದ್ರನೆ ಕವೀಶ್ವರನೆಂದು— ಎಂದೂ, ಧರೆಯುಂ ರಕ್ಷಿಸುತಿರ್ಕೆ ಲಕ್ಕಬರಿಸಂ ಲಕ್ಷ್ಮೀಧರೋರ್ವೀಶ್ವರಂ | ಸಿರಿಯಂತಾತನ ತೋಳೊಳಿರ್ಕೆ ಸತತಂ ಶ್ರೀಚಂದ್ರಿಕಾದೇವಿ— ಎಂದೂ ಹೇಳಿದ್ದಾನೆ. ಇದೇ ಲಕ್ಷ್ಮಣರಾಜನನ್ನು ಕರ್ಣಪಾರ್ಯನು (ಸು. 1140) ತನ್ನ ನೇಮಿನಾಥಪುರಾಣದಲ್ಲಿ ಹೇಳಿದ್ದಾನೆ. ಆದರೆ ಕರ್ಣಪಾರ್ಯನ ಕಾಲದಲ್ಲಿ ಲಕ್ಷ್ಮಣನು ರಾಜ್ಯಭಾರಮಾಡುತ್ತಿರಲಿಲ್ಲ, ಅವನ ತಂದೆಯೋ ಅಥವಾ ಅಣ್ಣನಾದ ವಿಜಯಾದಿತ್ಯನೋ ಆಳುತ್ತಿದ್ದಂತೆ ತಿಳಿಯಬರುತ್ತದೆ, ನೇಮಿಚಂದ್ರನ ಕಾಲದಲ್ಲಿ ಲಕ್ಷ್ಮಣನೇ ಆಳುತ್ತಿದ್ದಂತೆ ಮೇಲಣ ಪದ್ಯಭಾಗಗಳಿಂದ ವ್ಯಕ್ತವಾಗುತ್ತದೆ. ಇದರಿಂದ ನೇಮಿಚಂದ್ರನು 1140 ರಲ್ಲಿದ್ದ ಕರ್ಣಪಾರ್ಯನಿಗಿಂತ ಒಂದು ತಲೆ ಈಚೆಯವನೆಂದು ಹೇಳಬಹುದು. ಅಲ್ಲದೆ ಇವನು ತನ್ನ ನೇಮಿನಾಥಪುರಾಣವನ್ನು ವೀರಬಲ್ಲಾಳನ ಪ್ರಧಾನನಾದ ಸೆಜ್ಜೆವಳ್ಳ ಪದ್ಮನಾಭನಿಗಾಗಿ ಬರೆದಂತೆ ಹೇಳುತ್ತಾನೆ. ವೀರಬಲ್ಲಾಳನು 1172 ರಿಂದ 1219 ರ ವರೆಗೆ ಆಳಿದಂತೆ ತಿಳಿಯುತ್ತದೆ. ಆದುದರಿಂದ ಈ ಕವಿ ಸುಮಾರು 1170 ರಲ್ಲಿ ಇದ್ದಿರಬೇಕು."

ಇದು ತಪ್ಪು. ನೇಮಿಚಂದ್ರನಿಂದ ಕೀರ್ತಿತನಾಗಿರುವ ಲಕ್ಷ್ಮಣ ಅಥವಾ ಲಕ್ಷ್ಮೀಧರನು ನಾಮಮಾತ್ರದಿಂದ ರಾಜನಲ್ಲದೆ ಸಿಂಹಾಸನಾರೂಢನಾಗಿ ರಾಜ್ಯಭಾರ ಮಾಡುತ್ತಿದ್ದಂಥ ರಾಜನಾಗಿದ್ದನೆಂದು ಕವಿಚರಿತಕಾರರು ಮೇಲೆ ಉದಹರಿಸಿರುವ ಲೀಲಾವತಿಯ ಪದ್ಯಭಾಗಗಳಿಂದ ಸ್ಪಷ್ಟವಾಗುವುದು. ನೇಮಿನಾಥಪುರಾಣದಲ್ಲಿ ಕರ್ಣಪಾರ್ಯನಿಂದ ಸ್ತುತನಾದ ಲಕ್ಷ್ಮಣ ಅಥವಾ ಲಕ್ಷ್ಮೀಧರನಾದರೆ ರಾಜ್ಯಭಾರ ಮಾಡುತ್ತಿದ್ದಂಥ ರಾಜನಲ್ಲವೆಂದೂ ಅವನು ಕರಹಾಟಾಧಿಪನಾದ ಮಹಾಮಂಡಲೇಶ್ವರವಿಜಯಾದಿತ್ಯನ ಶ್ರೀಕರಣಾಧಿಪನೂ ಮಂತ್ರಿಯೂ ಆಗಿದ್ದನೆಂದೂ, ಈ ವಿಜಯಾದಿತ್ಯನ ನಂತರ ಇವನ ಮಗನಾದ (ಎರಡನೆಯ) ಭೋಜದೇವನು ರಾಜ್ಯಭಾರ ಮಾಡಿದನೆಂದೂ ನಾವು ಮೇಲೆಯೇ (ಪುಟ ೮೨-೮೩) ವ್ಯಕ್ತಪಡಿಸಿರುವೆವು. ಆದುದರಿಂದ ನೇಮಿಚಂದ್ರನಿಂದ ಸ್ತುತನಾದ ಲಕ್ಷ್ಮಣ (ಅಥವಾ ಲಕ್ಷ್ಮೀಧರ) ನೂ ನೇಮಿನಾಥಪುರಾಣದಲ್ಲಿ ಕರ್ಣಪಾರ್ಯನಿಂದ ಸ್ತುತನಾದ

ಲಕ್ಷ್ಮಣ (ಅಥವಾ ಲಕ್ಷ್ಮೀಧರ) ನೂ ಬೇರೆಬೇರೆ ಮನುಷ್ಯರೆಂದು ಸ್ಪಷ್ಟವಾಗುವುದು. ಹೀಗೆಯೇ ನೇಮಿಚಂದ್ರನು ಲೀಲಾವತಿಯ ಅಂತ್ಯದಲ್ಲಿ ಲಕ್ಷ್ಮಣ (ಅಥವಾ ಲಕ್ಷ್ಮೀಧರ) ರಾಜನನ್ನೂ, ನೇಮಿನಾಥಪುರಾಣದ ಆಶ್ವಾಸಾಂತ್ಯದಲ್ಲಿ 'ಶ್ರೀಮತ್ಪ್ರತಾಪಚಕ್ರವರ್ತಿ ಶ್ರೀ ವೀರಬಲ್ಲಾಳದೇವ' ನನ್ನೂ ಸ್ತುತಿಸಿರುವುದರಿಂದ, ಈ ಲಕ್ಷ್ಮಣ ಅಥವಾ ಲಕ್ಷ್ಮೀಧರರಾಜನು ವೀರಬಲ್ಲಾಳನು ರಾಜ್ಯವಾಳುತ್ತಿದ್ದ ಕಾಲದಲ್ಲಿಯೋ ಅಥವಾ ಅದಕ್ಕೆ ಸ್ವಲ್ಪ ಹಿಂದೆಯೋ ಮುಂದೆಯೋ ರಾಜ್ಯಭಾರ ಮಾಡುತ್ತಿದ್ದನೆಂದೂ ಸ್ಪಷ್ಟವಾಗುವುದು.

ಆದುದರಿಂದ ವೀರಬಲ್ಲಾಳನಿಗೆ ಸುಮಾರಾಗಿ ಸಮಕಾಲೀನನಾದ ಲಕ್ಷ್ಮಣ ಅಥವಾ ಲಕ್ಷ್ಮೀಧರರಾಜನು ಯಾರೆಂದು ನಾವು ಪ್ರಕೃತದಲ್ಲಿ ಕಂಡುಹಿಡಿಯಬೇಕಾಗಿರುವುದು. ಡಾ|| ಫ್ಲೀಟ್‌ರವರ ಪೂರ್ವನಿರ್ದಿಷ್ಟ ಗ್ರಂಥದ ಅಂತ್ಯದಲ್ಲಿರುವ ಅಕಾರಾದಿ ನಾಮಾನುಕ್ರಮಣಿಯನ್ನೂ (Index) ಎಪಿ. ಇಂಡಿಕ ೮ ನೆಯ ಸಂಪುಟದಲ್ಲಿ ೨ ನೆಯ ಅನುಬಂಧದಲ್ಲಿ ಡಾ|| ಕೀಲ್‌ಹೋರ್ನ್‌ರವರು ಕೊಟ್ಟಿರುವ ರಾಜಾವಳಿಗಳನ್ನೂ ನಾವು ಪರಿಕಿಸಿದರೆ, ಕರ್ಣಾಟಕದೇಶದಲ್ಲಿ ಸಿಂಹಾಸನಾರೂಢರಾಗಿ ರಾಜ್ಯಭಾರವನ್ನು ಮಾಡಿದಂಥ ಈ ಹೆಸರಿನ ರಾಜರು ಇಬ್ಬರು ಮಾತ್ರ ಇದ್ದರೆಂದು ತಿಳಿದುಬರುವುದು. ಇವರಿಬ್ಬರೂ ರಟ್ಟವಂಶದವರು ; ಸುಗಂಧವರ್ತಿ ಅಥವಾ ಸೌಂದತ್ತಿಯಲ್ಲಿ (ಈಗಿನ ಬೆಲ್ಗಾಮ್ ಜಿಲ್ಲಾ ಮತ್ತು ಸುತ್ತುಮುತ್ತಿನ ಭಾಗಗಳು) ರಾಜ್ಯಭಾರಮಾಡುತ್ತಿದ್ದರು. ಇವರಲ್ಲಿ ಒಂದನೆಯವನು ಒಂದನೆಯ ಲಕ್ಷ್ಮಣ, ಲಕ್ಷ್ಮೀಧರ ಅಥವಾ ಲಕ್ಷ್ಮಿದೇವನೆಂದೂ, ಎರಡನೆಯವನು ಎರಡನೆಯ ಲಕ್ಷ್ಮಣ ಲಕ್ಷ್ಮೀಧರ ಅಥವಾ ಲಕ್ಷ್ಮಿದೇವನೆಂದೂ ವ್ಯವಹರಿಸಲ್ಪಟ್ಟಿರುವರು. ಈ ಒಂದನೆಯ ಲಕ್ಷ್ಮಿದೇವನು ರಟ್ಟಮಹಾಮಂಡಲೇಶ್ವರನಾದ ಮೂರನೆಯ ಕಾರ್ತವೀರ್ಯನ ಮಗನೆಂದೂ, ಅವನ ಅನಂತರ ಸಿಂಹಾಸನಕ್ಕೆ ಬಂದು ರಾಜ್ಯವನ್ನಾಳಿದನೆಂದೂ, ಈ ಲಕ್ಷ್ಮಿದೇವನ ಅನಂತರ ಇವನ ಮಗ ನಾಲ್ಕನೆಯ ಕಾರ್ತವೀರ್ಯನೂ ಅವನನಂತರ ಅವನ ಮಗ ಎರಡನೆಯ ಲಕ್ಷ್ಮಿದೇವನೂ ರಾಜ್ಯವನ್ನಾಳಿದರೆಂದೂ ಮೇಲೆ ಹೇಳಿದ ಡಾ|| ಫ್ಲೀಟ್‌ರವರ ಗ್ರಂಥದಿಂದಲೂ, ಡಾ|| ಕೀಲ್‌ಹೋರ್ನ್‌ರವರ ರಾಜಾವಳಿಯಿಂದಲೂ ಕಂಡುಬರುವುದು. ಇವರಲ್ಲಿ ಮೂರನೆಯ ಕಾರ್ತವೀರ್ಯನು ಕ್ರಿ. ಶ. ೧೧೪೩ ರಲ್ಲಿಯೂ ೧೧೬೪ ರಲ್ಲಿಯೂ ರಾಜ್ಯವನ್ನಾಳುತ್ತಿದ್ದನೆಂದೂ, ನಾಲ್ಕನೆಯ ಮಲ್ಲಿಕಾರ್ಜುನನು ೧೧೯೯ ರಲ್ಲಿಯೂ ೧೨೧೮ ರಲ್ಲಿಯೂ ರಾಜ್ಯವನ್ನಾಳುತ್ತಿದ್ದನೆಂದೂ, ಎರಡನೆಯ ಲಕ್ಷ್ಮಿದೇವನು ೧೨೨೮ ರಲ್ಲಿ ರಾಜ್ಯವನ್ನಾಳುತ್ತಿದ್ದನೆಂದೂ ಹೇಳುವ ಶಾಸನಗಳು ದೊರೆತಿರುವುವು. ಈ ದೊರೆಗಳು ಮೇಲೆ

ಹೇಳಿದ ವರ್ಷಗಳಿಗಿಂತ ಎಷ್ಟು ಹಿಂದೆ ರಾಜ್ಯವಾಳುವುದಕ್ಕೆ ಪ್ರಾರಂಭಿಸಿ ಮೇಲೆ ಹೇಳಿದ ವರ್ಷಗಳನಂತರ ಎಷ್ಟುವರ್ಷಗಳವರೆಗೆ ರಾಜ್ಯವಾಳಿದರೆಂಬುದು ನಮಗೆ ತಿಳಿಯದು. ಒಂದನೆಯ ಲಕ್ಷ್ಮಿದೇವನಕಾಲದ ಶಾಸನವಂತೂ ಒಂದೂ ಈವರೆಗೆ ದೊರೆತಿಲ್ಲ. ಆದುದರಿಂದ ಪ್ರಕೃತದಲ್ಲಿ ಮೂರನೆಯ ಕಾರ್ತವೀರ್ಯನು ಕ್ರಿ. ಶ. ೧೧೬೫ ರ ವರೆಗೂ, ಅವನ ಮಗ ಒಂದನೆಯ ಲಕ್ಷ್ಮಿದೇವನು ಕ್ರಿ. ಶ. ೧೧೯೦ ರ ವರೆಗೂ, ಇವನ ಮಗ ನಾಲ್ಕನೆಯ ಕಾರ್ತವೀರ್ಯನು ಕ್ರಿ. ಶ. ೧೨೧೮ † ರ ವರೆಗೂ ಆಳುತ್ತಿದ್ದರೆಂದು ನಾವು ಊಹಿಸುವುದರಲ್ಲಿ ಪ್ರಾಯಶಃ ವಸ್ತುಸ್ಥಿತಿ ವಿರೋಧವೇನೂ ಇರಲಾರದು.

ವೀರಬಲ್ಲಾಳನು ಕ್ರಿ. ಶ. ೧೧೭೩ ರಿಂದ ೧೨೨೦ ರ ವರೆಗೆ ರಾಜ್ಯವನ್ನಾಳುತ್ತಿದ್ದುದರಿಂದ ಈ ಮೇಲೆ ಹೇಳಿದ ಒಂದನೆಯ ಮತ್ತು ಎರಡನೆಯ ಲಕ್ಷ್ಮಿದೇವರಿಬ್ಬರೂ ಪ್ರಾಯಶಃ ಅವನ ಕಾಲದಲ್ಲಿ ರಾಜ್ಯಭಾರವನ್ನು ಮಾಡುತ್ತಿದ್ದರೆಂದು ಆಯಿತು. ಇವರಿಬ್ಬರಲ್ಲಿ ವೀರಬಲ್ಲಾಳನ ಆಳಿಕೆಯ ಅಂತ್ಯವರ್ಷಗಳಲ್ಲಿ ರಾಜ್ಯವಾಳುತ್ತಿದ್ದ ಎರಡನೇ ಲಕ್ಷ್ಮಿದೇವನ ರಾಣಿಯ ಹೆಸರೇನೆಂಬುದು ನಮಗೆ ತಿಳಿಯದು. ಅವನ ಆಳಿಕೆಯ ಆದಿಭಾಗದಲ್ಲಿ ರಾಜ್ಯವನ್ನಾಳುತ್ತಿದ್ದ ಒಂದನೆಯ ಲಕ್ಷ್ಮಿದೇವನಿಗಾದರೆ ಚಂದಲದೇವಿ ಅಥವಾ ಚಂದ್ರಿಕಾದೇವಿ ಎಂಬ ರಾಣಿಯಿದ್ದಳೆಂದು ಅನೇಕ ಶಾಸನಗಳಲ್ಲಿ ಹೇಳಲ್ಪಟ್ಟಿರುವುದು. (ಎಪಿ. ಇಂಡಿಕ. ೧೩ ನೇ ಸಂಪುಟದಲ್ಲಿರುವ ಬೆಲ್ಗಾಮ್ ಶಾಸನಗಳನ್ನು ನೋಡಿ; ಡಾ|| ಫ್ಲೀಟ್‌ರವರ ಗ್ರಂಥದ ೫೫೧ ನೇ ಪುಟದಲ್ಲಿರುವ ವಂಶವೃಕ್ಷವನ್ನೂ ನೋಡಿ.) ನೇಮಿಚಂದ್ರನಿಂದ ಸ್ತುತನಾದ ಲಕ್ಷ್ಮೀಧರ ಅಥವಾ ಲಕ್ಷ್ಮಣರಾಜನಿಗೆ ಚಂದಲದೇವಿ ಅಥವಾ ಚಂದ್ರಿಕಾದೇವಿ ಎಂಬ ರಾಣಿಯಿದ್ದಳೆಂದು ಮೇಲೆ ಹೇಳಿದ ಪದ್ಯಭಾಗಗಳಿಂದ ತಿಳಿಯುವುದರಿಂದ ಅವನ ಲೀಲಾವತಿಯಲ್ಲಿ ಕೀರ್ತಿತರಾದ ಲಕ್ಷ್ಮೀಧರ ಚಂದ್ರಿಕಾದೇವಿಯರು ರಟ್ಟ

† ಪಾರ್ಶ್ವನಾಥಪುರಾಣವನ್ನು ಪಾರ್ಶ್ವನು 'ಶಕವರ್ಷಂ ಚತುರಬ್ಧಿಚಂದ್ರಶಶಿಸಂಖ್ಯಂ ಚಿತ್ರಭಾನು' ಸಂವತ್ಸರದಲ್ಲಿ ಬರೆದಂತೆಯೂ ಆಗ 'ಜಟ್ಟಾನ್ವಯಕಾರ್ತವೀರ್ಯನು' ಉರ್ವಿಯನ್ನು ಆಳುತ್ತಿದ್ದಂತೆಯೂ ತನ್ನ ಗ್ರಂಥದಲ್ಲಿ ಹೇಳಿರುವನು (ಕವಿಚರಿತೆ I, ೨೫೫ ನ್ನು ನೋಡಿ). ಇಲ್ಲಿ ಪ್ರೋಕ್ತವಾದ ಚಿತ್ರಭಾನುಸಂವತ್ಸರವು ದಾಕ್ಷಿಣಾತ್ಯ ಸಂಪ್ರದಾಯಕ್ಕನುಸಾರವಾಗಿ ವ್ಯವಹೃತವಾದ ಚಿತ್ರಭಾನುವಾಗಿದ್ದಲ್ಲಿ, ಈ ನಾಲ್ಕನೇ ಕಾರ್ತವೀರ್ಯನು ಕ್ರಿ. ಶ. ೧೨೨೨ ರಲ್ಲಿಯೂ ಆಳುತ್ತಿದ್ದನೆಂದು ಹೇಳಬೇಕಾಗುವುದು. ಅದು ಔತ್ತರಸಂಪ್ರದಾಯಕ್ಕನುಸಾರವಾಗಿ ವ್ಯವಹೃತವಾದ ಚಿತ್ರಭಾನುವಾಗಿದ್ದಲ್ಲಿ (ಈ ವಿಧವಾದ ವ್ಯವಹಾರವು ದಕ್ಷಿಣದಲ್ಲಿಯೂ ಇತ್ತೆಂದು ನಾನು ಪೂರ್ವನಿರ್ದಿಷ್ಟವಾದ ನನ್ನ ಪುಸ್ತಕದ ೫-೧೫ ನೇ ಪುಟಗಳಲ್ಲಿ ವ್ಯಕ್ತಪಡಿಸಿರುವನು) ಕ್ರಿ. ಶ. ೧೨೧೮ ರಲ್ಲಿ ಅವನು ಆಳುತ್ತಿದ್ದನೆಂದು ಹೇಳಿದಂತಾಗುವುದು.

ಮಹಾಮಂಡಲೇಶ್ವರನಾದ ಒಂದನೆಯ ಲಕ್ಷ್ಮೀಧರ ಮತ್ತು ಅವನ ರಾಣಿ ಚಂದ್ರಿಕಾದೇವಿಯರೇ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಬಾಲಚಂದ್ರ ಕವಿಕಂದರ್ಪನಿಂದ ವಿರಚಿತವಾದ ಬೆಲ್ಗಾಮದ ಒಂದು ಶಾಸನದಲ್ಲಿ (ಎಪಿ. ಇಂಡಿಕ ೧೩, ಪುಟ ೧೮-೧೯) ಈ ಲಕ್ಷ್ಮೀಧರ ಚಂದ್ರಿಕಾದೇವಿಯರು ಹೀಗೆಂದು ಸ್ತುತಿಸಲ್ಪಟ್ಟಿರುವರು :—

ಅವರಿರ್ವರ್ಗಂ ಪುಟ್ಟಿದ । ನವನೀಶ್ವರಮೌಳಿಮಂಡನಂ ಲಕ್ಷ್ಮನೃಪಂ ।
ಪ್ರವಿಮಳಮುಕ್ತಾಫಳವೊಸೆ । ವ ವಾರ್ಧಿಗಂ ತಾಮ್ರಪರ್ಣಿಗಂ ಪುಟ್ಟುವವೊಲ್ ॥
ಏನೆಂಬೆಂ ಲಕ್ಷ್ಮಿದೇವಕ್ಷಿತಿಭುಜನ ಭುಜಾಟೋಪಮಂ ವಿದ್ವಿಷದ್ಧಾ
ತ್ರೀನಾಥರ್ ಸಂಜೆಗೆಂಪಂ ಭಟಪದಹತಿಯಿಂದಾದ ಕೆಂದೂಳಿಯೆಂದಾ ।
ಲೀನಾಭ್ರಧ್ವಾನಮಂ ತಂನಯ ತುರಗಖುರೋದ್ಘೋಷಮೆಂದಂಜಿ ನಾನಾ
ಸ್ಥಾನಸ್ಥಾಯಿತ್ವಮಂ ಕೇಳ್ ಪಡೆಯದೆ ಬಿಡದೋಡುತ್ತಮಿರ್ದಪ್ಪರಿನ್ನುಂ ॥
ಅಪರಾಧಿಗಳನೆ ನೋಳ್ಪುದು । ನೃಪಾಳಕರ ದಂಡನೀತಿ ಬಾಪ್ಪು ಘನಾಜ್ಞಾ ।
ಧಿಪನಾಗೆ ಲಕ್ಷ್ಮಭೂವಿಭು । ವಪರಾಧಂ ದಂಡಮೆಂಬಿವಿಲ್ಲೇಂ ಕೃತಿಯೋ ॥
ಅಮೃತಾಂಭೋರಾಶಿಯೊಳ್ ಪುಟ್ಟಿದ ಸಿರಿಯನಣಂ ಬಯ್ತು ಧಾತ್ರಂ ಸ್ವಮಾಯಾ
ಕ್ರಮದಿಂ ಬೇಱೋರ್ವಳಂ ನಿರ್ಮಿಸಿ ಚಪಳೆಯನಾ ಕೃಷ್ಣನೊಳ್ಕೂಡಿ ಮತ್ತಾ ।
ವಿಮಳೋದ್ಯದ್ಭಾಗ್ಯೆಯಂ ಸುಸ್ಥಿರೆಯನೊಸೆದು ಕೊಟ್ಟಂ ಮಹೀಭೃನ್ನಿಕಾಯೋ
ತ್ತಮನಪ್ಪೀಲಕ್ಷ್ಮಿದೇವಂಗೆನೆ ಮಿಗೆ ತಳೆದಳ್ ಚಂದ್ರಿಕಾದೇವಿ ಚೆಲ್ವಂ ॥
ಪ್ರಣಿತಶ್ರೀನಿಧಿ ಚಂದ್ರಿಕಾಸತಿಯ ಶೀಲಬ್ರಾತಮಂ ಕೂಡೆ ಧಾ
ರಿಣಿಯೊಳ್ ಬಣ್ಣಿಸಲಾರುಮಾರ್ತಪರೆ ಲಕ್ಷ್ಮೋರ್ವೀಶನಂ ಕ್ಷತ್ರಿಯಾ ।
ಗ್ರಣಿಯಂ ಶೀಲದೆ ಮೆಚ್ಚಿಸಲ್ ಫಣಿಪನಂ ಪೂಣ್ದೆತ್ತ ತಾತನ್ನಕಯ್
ಗುಣಕಂ ಕಂಡುದಱಿಂದವಂ ಪೊಗಳಲಾಪ್ಪಂ ವಿಶ್ವಜಿಹ್ವಾಳಿಯಿಂ ॥
ನರಪತಿಲಕ್ಷ್ಮಿದೇವಸತಿ ಚಂದಲದೇವಿ ನಿಜೋದ್ಘಹಸ್ತದಿಂ
ಧರೆಗೆಸೆಯಲ್ಕೆ ಸಂಕ್ರಮಣದೊಳ್ಕುಡೆ ಕಾಂಚನಮಂ ಬೆರಲ್ಗಳೊಳ್ ।
ಬೆರೆಸೆದ ಹೇಮುಕಾಳಿಕೆಯ ಕಪ್ಪೆಸೆದಿಪ್ಪುದು ಬಾಹುಕಲ್ಪವ
ಲ್ಲರಿಯ ತಳಪ್ರವಾಳದ ನಖಪ್ರಸವಕ್ಕೆಳಸಿರ್ದ ತುಂಬಿವೊಲ್ ॥

ಅಂತು ಹೀಗೆ ಮೇಲೆ ಹೇಳಿರುವುದರಿಂದ ರಟ್ಟಮಹಾಮಂಡಲೇಶ್ವರನಾದ ಸೌಂದತ್ತಿಯ ಒಂದನೆಯ ಲಕ್ಷ್ಮಿದೇವನ ಕಾಲದಲ್ಲಿ ಎಂದರೆ ಸುಮಾರು ಕ್ರಿ. ಶ. ೧೧೬೫-೧೧೯೦ ರಲ್ಲಿ, ನೇಮಿಚಂದ್ರನು ತನ್ನ ಲೀಲಾವತಿಯನ್ನು ಬರೆದನೆಂಬುದು ಸ್ಪಷ್ಟವಾಗುವುದು. ಅವನ ನೇಮಿನಾಥಪುರಾಣದ ಆಶ್ವಾಸಾಂತ್ಯದಲ್ಲಂತೂ 'ಶ್ರೀಮತ್ಪ್ರತಾಪಚಕ್ರವರ್ತಿ ಶ್ರೀವೀರಬಲ್ಲಾಳದೇವಪ್ರಸಾದಾಸಾದಿತಮಹಾಪ್ರಧಾನಪದವೀವಿರಾಜಿತ ಸಜ್ಜೆವಳ್ಳಪದ್ಮನಾಭದೇವಕಾರಿತಮುಮಪ್ಪ ನೇಮಿನಾಥಪುರಾಣದೊಳ್' ಎಂದು ಇರುವುದರಿಂದ ವೀರಬಲ್ಲಾಳನು ಚಕ್ರವರ್ತಿ ಬಿರುದುಗಳನ್ನು

ವಹಿಸಿದನಂತರ, ಎಂದರೆ ಕ್ರಿ. ಶ. ೧೧೮೯* ರ ನಂತರ ಈ ಪುರಾಣವನ್ನು ಅವನು ಬರೆದನೆಂದು ವ್ಯಕ್ತವಾಗುವುದು. ಪ್ರಾಯಶಃ ಒಂದನೆಯ ಲಕ್ಷ್ಮೀದೇವನ ಆಳಿಕೆಯ ಅಂತ್ಯಭಾಗದಲ್ಲಿ ಲೀಲಾವತಿಯನ್ನೂ ವೀರಬಲ್ಲಾಳನು ಚಕ್ರವರ್ತಿ ಬಿರುದುಗಳನ್ನು ಧರಿಸಿ ಚಕ್ರವರ್ತಿಯಾಗಿ ಆಳುವುದಕ್ಕೆ ಪ್ರಾರಂಭಿಸಿದ ಸಮಯದಲ್ಲಿ ನೇಮಿನಾಥಪುರಾಣವನ್ನೂ ಈ ಕವಿಯು ಬರೆದಿರಬಹುದು. ಎಂದರೆ, ಕ್ರಿ. ಶ. ೧೧೮೫–೧೧೯೫ ರಲ್ಲಿ ಈ ಕವಿಯು ತನ್ನ ಕಾವ್ಯಗಳನ್ನು ಬರೆದನೆಂದು ನಾವು ಹೇಳಬಹುದು.

---

* ವೀರಬಲ್ಲಾಳನು ಸೇವುಣರಾಜನಾದ ಭಿಲ್ಲಮನೊಡನೆ ಸೊರಟೂರಿನ ಸಮೀಪದಲ್ಲಿ ಕ್ರಿ. ಶ. ೧೧೯೧ ರಲ್ಲಿ ಯುದ್ಧಮಾಡಿ ಅವನನ್ನು ಸೋಲಿಸಿ ತದನಂತರ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಪರಮಭಟ್ಟಾರಕ ಪ್ರತಾಪಚಕ್ರವರ್ತಿ ಎಂಬ ಬಿರುದುಗಳನ್ನು ವಹಿಸಿಕೊಂಡನೆಂದು ನಾವು ಮೇಲೆ ೧೪ ನೆಯ ಪುಟದಲ್ಲಿ ಡಾ|| ಫ್ಲೀಟರವರ ಪುಸ್ತಕದ ಆಧಾರದಮೇಲೆ ಹೇಳಿರುವೆವಷ್ಟೆ. ಜನ್ನನಿಂದ ರಚಿತವಾದ ಚನ್ನರಾಯಪಟ್ಟಣದ ೧೭೯ ನೇ ಶಾಸನವನ್ನು ನಾವು ಈಚೆಗೆ ಓದಿ ಅದು ಯಾವ ತಾರೀಖಿನಲ್ಲಿ ಹುಟ್ಟಿತೆಂಬುದನ್ನು ಲೆಕ್ಕಾಚಾರಮಾಡಿ ನೋಡಿದಲ್ಲಿ, ಮೇಲೆ ಹೇಳಿದ ಡಾ|| ಫ್ಲೀಟ್‌ರವರ ಅಭಿಪ್ರಾಯವು ತಪ್ಪಾದುದೆಂದು ಗೊತ್ತಾಯಿತು.

ಈ ಶಾಸನವು 'ಸಕವರ್ಷ ೧೧೧೩ ನೆಯ ಸೌಮ್ಯಸಂವತ್ಸರದ ಪುಷ್ಯ-ಬಹುಳ ೧೧ ಆದಿತ್ಯವಾರದುತ್ತರಾಯಣ ಸಂಕ್ರಮಣದಂದು' ಹುಟ್ಟಿತು. ಈ ಸೌಮ್ಯಸಂವತ್ಸರದಲ್ಲಿ ಪುಷ್ಯಬಹುಳ ೧೧ನೇ ತಿಥಿಯು ಕ್ರಿ. ಶ. ೧೧೯೦ ನೇ ಜನವರಿ ೩ ನೇ ತಾರೀಖು ಬುಧವಾರದಲ್ಲಿ ಪ್ರಾರಂಭವಾಗಿ ಅದರ ಮಾರನೇ ದಿನ (೪ ನೇ ಬೃಹಸ್ಪತಿವಾರದಂದು) ಸೂರ್ಯೋದಯಾನಂತರ ಸುಮಾರು ೧೨ ಘಳಿಗೆವರೆಗೆ ವ್ಯಾಪಿಸಿಕೊಂಡಿತ್ತು. ಅಲ್ಲದೆ, ಯಾವ ವಿಧವಾದ ಸಂಕ್ರಮಣವೂ ಈ ಬುಧವಾರ, ಬೃಹಸ್ಪತಿವಾರಗಳೊಡನೆ ಸಂಬದ್ಧವಾಗಿರಲಿಲ್ಲ. ಇದರ ಮುಂದಿನ ವರ್ಷದಲ್ಲಾದರೆ (ಮುಂದಿನ ವರ್ಷಗಳನ್ನು ಕುರಿತು ಪೂರ್ವನಿರ್ದಿಷ್ಟವಾದ ನನ್ನ ಪುಸ್ತಕದ ೨೭-೩೧ ನೇ ಪುಟಗಳನ್ನು ನೋಡಿ) ಸ್ಪಷ್ಟಕಾಲವನ್ನು ಬಿಟ್ಟು ಮಧ್ಯಮಕಾಲರೀತಿಯಿಂದಲೇ ಲೆಕ್ಕಾಚಾರಮಾಡಿದಲ್ಲಿ, ಪುಷ್ಯ ಬಹುಳ ಏಕಾದಶೀ ತಿಥಿಯು ಕ್ರಿ. ಶ. ೧೧೯೦ ನೇ ಡಿಸೆಂಬರ್ ೨೩ ನೇ ತಾರೀಖು ಆದಿತ್ಯವಾರದಂದು ಸೂರ್ಯೋದಯಾನಂತರ ೩೩ ಘಳಿಗೆ ೩೧ ವಿ. ಗೆ (ಸೂರ್ಯಸಿದ್ಧಾಂತ) ಅಥವಾ ೩೦ ಘಳಿಗೆ ೨೨ ವಿ. ಗೆ (ಆರ್ಯಸಿದ್ಧಾಂತ) ಪ್ರಾರಂಭವಾಯಿತು. (ಮಧ್ಯಮಕಾಲ) ಮಕರಸಂಕ್ರಾಂತಿಯೂ ಕೂಡ ಆ ದಿವಸ ಸೂರ್ಯೋದಯಾನಂತರ ೫೦ ಘಳಿಗೆ ೪೮ ವಿ. ಗೆ (ಸೂರ್ಯಸಿದ್ಧಾಂತ) ಅಥವಾ ೪೭ ಘಳಿಗೆ ೪೦ ವಿ. ಗೆ (ಆರ್ಯಸಿದ್ಧಾಂತ) ಆಯಿತು. ಆದುದರಿಂದ ಮೇಲಿನ ಶಾಸನದಲ್ಲಿ ಹೇಳಲ್ಪಟ್ಟಿರುವ 'ಪುಷ್ಯ ಬಹುಳ ೧೧ ಆದಿತ್ಯವಾರ ಉತ್ತರಾಯಣ ಸಂಕ್ರಮಣ' ದ ದಿನವು ಈ ಕ್ರಿ. ಶ. ೧೧೯೦ ನೇ ಡಿಸೆಂಬರ್ ೨೩ ನೇ ತಾರೀಖು ಆದಿತ್ಯವಾರವೇ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಈ ಶಾಸನದಲ್ಲಿ ವೀರಬಲ್ಲಾಳನಿಗೆ ಸಮಸ್ತಭುವನಾಶ್ರಯ, ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ನಿಶ್ಶಂಕಪ್ರತಾಪಚಕ್ರವರ್ತಿ ಎಂಬ ಬಿರುದುಗಳು ಹೇಳಲ್ಪಟ್ಟಿರುವುವಲ್ಲದೆ,

ಇನ್ನುಂ ಬೀರದ ತೋರಬಿತ್ತನಗೆವೊಯ್ದುಂ‌ಃಪೂರ್ವದಾರೂಢಸಂ- |
ಪನ್ನಂ ದಕ್ಷಿಣಚಕ್ರಿ ಗೆಲ್ದ ಸೋಱಟೂರಿಂ ಬೆಳ್ವೊಲಂ ಮುಟ್ಟೆ ಸಂ ||
ಛನ್ನೋದ್ಧೃತ್ಯಕೃಷೀವಳಾವಳಿಹಳಪ್ರಾಗ್ಭಾಗನಿಃಕೀಲಿತೋ |
ತ್ಪನ್ನಂ ಸೇವುಣಸೈನ ಸದ್ಭಟಕರೋಟೀಕೋಟಿಸಂಘಟ್ಟನಂ ||

ಎಂಬ ಪದ್ಯದಲ್ಲಿ ಸೇವುಣರಾಜನ ಪರಾಭವವೂ (ಮೇಲೆ ೧೩ ನೇ ಪುಟವನ್ನು ನೋಡಿ) ವರ್ಣಿಸಲ್ಪಟ್ಟಿರುವುದು. ಆದುದರಿಂದ ಮೇಲೆ ಹೇಳಿದ ಸೊರಟೂರು ಯುದ್ಧವೂ, ಶ್ರೀಪೃಥ್ವೀವಲ್ಲಭ ಮೊದಲಾದ ಚಕ್ರವರ್ತಿ ಬಿರುದುಗಳನ್ನು ವೀರಬಲ್ಲಾಳನು ವಹಿಸಿಕೊಂಡುದೂ ಕ್ರಿ. ಶ. ೧೧೯೦ ನೇ ಡಿಸೆಂಬರ್ ೨೩ ನೇ ತಾರೀಖಿಗಿಂತ ಹಿಂದೆಯೇ ಆಗಿರಬೇಕೆಂದು ಸ್ಪಷ್ಟವಾಗುವುದು. ಇದೆಲ್ಲವೂ ಪ್ರಾಯಶಃ ಈ ೧೧೯೦ ನೇ ವರ್ಷದಲ್ಲಿಯೇ ನಡೆಯಿತೆಂದು ತೋರುವುದು.

ಈ ಶಾಸನವು ಜನ್ನನಿಂದ ಬರೆಯಲ್ಪಟ್ಟುದು. ಇದು ಕ್ರಿ. ಶ. ೧೧೯೧ ರಲ್ಲಿ ಹುಟ್ಟಿತೆಂಬ ಕವಿಚರಿತಕಾರರ ಅಭಿಪ್ರಾಯವು (I, ೨೬೨) ತಪ್ಪೆಂಬುದು ನಾವು ಮೇಲೆ ಹೇಳಿರುವುದರಿಂದ ವ್ಯಕ್ತವಾಗುವುದು. ಕವಿಚರಿತಕಾರರು ತಮ್ಮ ಗ್ರಂಥದ ಅನೇಕ ಕಡೆಗಳಲ್ಲಿ ಕರ್ಣಾಟಕದೇಶದ ಶಾಸನಗಳಿಗೆ ಹೇಳಿರುವ ಕ್ರಿ. ಶ. ವರ್ಷಗಳೂ ಹೀಗೆಯೇ ತಪ್ಪಾಗಿರುವುವು. ಇಂಥವುಗಳಲ್ಲಿ ಕೆಲವನ್ನು ಇಲ್ಲಿ ನಾವು ಉದಾಹರಿಸುವೆವು. (ಇಲ್ಲಿ ಹೇಳಿರುವ ಪುಟಗಳು ಕವಿಚರಿತೆಯ ೧ ನೇ ಸಂಪುಟದ ೨ನೇ ಮುದ್ರಣದ ಪುಟಗಳೆಂದು ತಿಳಿಯಬೇಕು) :—

೧. ಸೊರಬದ ೧೮೪ ನೆಯ ಶಾಸನವು ಕ್ರಿ. ಶ. ೧೦೩೨ ರಲ್ಲಿ ಹುಟ್ಟಿತೆಂದೂ ಅದನ್ನು ಬರೆದ ಕಪ್ಪಣಭಟ್ಟನು ಆಗ ಇದ್ದನೆಂದೂ ೭೪ ನೇ ಪುಟದಲ್ಲಿ ಹೇಳಲ್ಪಟ್ಟಿರುವುದು. ಇದು ತಪ್ಪು. ಈ ಶಾಸನವು ವಸ್ತುತಃ ಕ್ರಿ. ಶ. ೧೦೩೭ ನೇ ಡಿಸೆಂಬರ್ ೨೪ ನೇ ತಾರೀಖು ಶನಿವಾರದಲ್ಲಿ ಹುಟ್ಟಿತು.

೨. ದೇವಭದ್ರಮುನಿಯು ರಚಿಸಿದ ಚಿಕ್ಕನಾಯಕನಹಳ್ಳಿ ೨೧ ನೇ ಶಾಸನವು ಕ್ರಿ. ಶ. ೧೧೬೧ ರಲ್ಲಿ ಹುಟ್ಟಿತೆಂದು ಕವಿಚರಿತಕಾರರು ಹೇಳಿರುವರು (ಪುಟ ೨೧೬). ಈ ಶಾಸನವು ಕ್ರಿ. ಶ. ೧೧೫೯ ನೇ ಮೇ ೨೫ ನೇ ತಾರೀಖು ಸೋಮವಾರದಲ್ಲಿ ಹುಟ್ಟಿತೆಂದು ತೋರುತ್ತದೆ.

೩. ದೇವಪಾರ್ಯನು "ಹೇಳಿದ" ಅರಶೀಕೆರೆಯ ೭೧ ನೇ ಶಾಸನವು ಕ್ರಿ. ಶ. ೧೧೭೪ ರಲ್ಲಿ ಹುಟ್ಟಿತೆಂದು ಕವಿಚರಿತಕಾರರ ಅಭಿಪ್ರಾಯ (ಪುಟ ೨೬೭). ಈ ಶಾಸನವು ವಸ್ತುತಃ ಕ್ರಿ. ಶ. ೧೧೭೩ ನೇ ಜೂಲೈ ೨೨ ನೇ ತಾರೀಖು ಆದಿತ್ಯವಾರದಲ್ಲಿ ಹುಟ್ಟಿತು. ಈ ಆದಿತ್ಯವಾರದಲ್ಲಿ ವೀರಬಲ್ಲಾಳನಿಗೆ ಪಟ್ಟಾಭಿಷೇಕವಾಯಿತೆಂದು ಈ ಶಾಸನದಲ್ಲಿಯೂ ಇನ್ನೂ ಇತರ ಶಾಸನಗಳಲ್ಲಿಯೂ ಹೇಳಲ್ಪಟ್ಟಿರುವುದು. (ಎಪಿ. ಕರ್ನಾಟಕ ೫ ನೇ ಸಂಪುಟದಲ್ಲಿನ ಉಪೋದ್ಘಾತದ ೧೯ ನೇ ಪುಟವನ್ನು ನೋಡಿ.)

೪. ಶಾರದಿನಾಥಪಂಡಿತನು ಹೇಳಿದ ಅರಶೀಕೆರೆಯ ೧೧೨ ನೇ ಶಾಸನವು ಕವಿಚರಿತಕಾರರು ಹೇಳಿರುವಂತೆ (ಪುಟ ೨೬೮) ಕ್ರಿ. ಶ. ೧೧೭೪ ರಲ್ಲಿ ಹುಟ್ಟಲಿಲ್ಲ; ಅದು ಕ್ರಿ. ಶ. ೧೧೭೩ ನೇ ಡಿಸೆಂಬರ್ ೨೫ ನೇ ತಾರೀಖಿನಲ್ಲಿ ಹುಟ್ಟಿತು.

೫. ತ್ರಿವಿಕ್ರಮಪಂಡಿತನು ಬರೆದ ಮತ್ತು ತಿದ್ದಿದ ಅರಶೀಕೆರೆಯ ೨೨, ೯೦, ಮತ್ತು ೧೧೮ ನೇ ಶಾಸನಗಳು ಕ್ರಮವಾಗಿ ಕ್ರಿ. ಶ. ೧೧೮೮, ೧೧೮೯ ಮತ್ತು ೧೧೯೪ ನೇ ವರ್ಷಗಳಲ್ಲಿ

## ೩ನೆಯ ರಂಗಂ

[ ಮರುಳ್ಗಳ್, ಸಂಜಯಂ, ದುರ್ಯೋಧನಂ ]

ಸಂಜಯಂ—ಭಯಂಕರಂ ರಣರಂಗಂ! ಅದೊ

ಪೆಣದಿನಿಗಳ ತಂಡಂ ಬ
ಲ್ವೆಣಗಳನೞಸುತ್ತುಮಲ್ಲಿ ಬರೆವರೆ ಸಾರ
ಲ್ಕಣವಿಾಯದೆ ತಮ್ಮಾಳ್ದನ
ಪೆಣನಂ ಕಾದಿರ್ಪರಲ್ಲಿ ಸುತ್ತ ಭಟರ್ಕಳ್ ೬೯

ಇತ್ತ ನೋಡು—

ಇನಿತಿನಿತು ಚಿಂತೆಯೊರ್ಮೆಯೆ
ತಿನೆ ತವುಗುಮಿದೆಂದು ತಾಮುಮಾನೆಯ ಪೆಣನಂ
ತಿನಲಾಱದೆ ಪೆಱರ್ಗಿಕ್ಕದೆ
ಮನಮಂ ಪಸುತಿರ್ಪುವಿಲ್ಲಿ ಲೋಭಿಮರುಳ್ಗಳ್ ೭೦

ದುರ್ಯೋಧನಂ—ಇದೇನ್ ಈ ಮರುಳ್ಗಳ್ ಎಮ್ಮಂ ಮುತ್ತುವುವು!

೧ ನೆಯ ಮರುಳ್—ಅಕ್ಕ, ದುರ್ಯೋಧನಂ!

೨ ನೆಯ ಮರುಳ್—ನಿಲ್, ನಿಲ್. ದ್ರೌಪದೀದ್ರೋಹ, ನಿಲ್!

೩ ನೆಯ ಮರುಳ್—ನಿನ್ನನೆ ಪಾರ್ದು ಪಸಿದಿರ್ಪೆವು!

೧ ನೆಯ ಮರುಳ್-ಗುರುವಿನ ನೆತ್ತರಂ ಕುಡಿವೆನಪ್ಪೊಡೆ ಅವಂ ಬ್ರಾಹ್ಮಣಂ.

೨ ನೆಯ ಮರುಳ್—ನಿನ್ನ ತಮ್ಮನ ನೆತ್ತರಂ ಕುಡಿವೆನಪ್ಪೊಡೆ ಭೀಮನೆ ಪೀರ್ದಂ.

೩ ನೆಯ ಮರುಳ್-ಭೀಷ್ಮನ ಬಿಸುನೆತ್ತರಂ ಕುಡಿವೆನಪ್ಪೊಡೆ ಇನ್ನುಮೊಳಂ.

೧ ನೆಯ ಮರುಳ್—ಕುರುರಾಜ, ನಿನ್ನ ನೆತ್ತರ ಸವಿಯಂ ಬಯಸಿ ಬಾಯ್ವಾಯ್ವಿಡುವೆಂ.

೨ ನೆಯ ಮರುಳ್—ಊರುಭಂಗಮಪ್ಪುದು, ಇರು.

ಸಂಜಯಂ—ಕರ್ಣಕಠೋರಂ ಪಿಶಾಚದ ನುಡಿ.

ದುರ್ಯೋಧನಂ—ಚಿಃ ! ಮರುಳ ಮಾತಿನೊಳ್ ಪುರುಳಿಲ್ಲ.

೨ ನೆಯ ಮರುಳ್—

ಅರಗಿನ ಮಾಡದೊಳ್ ವಿಷದ ಲಡ್ಡುಗೆಯೊಳ್ ಕೊಲಲೊಡ್ಡಿ ಬದ್ಧಮ
ತ್ಸರದೊಳೆ ವೈರಮಂ ಪದೆದು ಭೀಮನನಿಂತಿನಿತರ್ಕೆ ತಂದ ನೀಂ
ಮರುಳನೊ, ಭೂತಕೋಟಿವೆರಸಾಹವರಂಗದೊಳಾಡುತಿರ್ಪ ತಾಂ
ಮರುಳೆಯೊ ? ನೋೞ್ಪೆವಿರ್ವರ ಮರುಳ್ತನಮಂ ಫಣಿರಾಜಕೇತನಾ ! ೭೧

ದುರ್ಯೋಧನಂ—ಸಂಜಯ, ಮುಂದೆ, ಮುಂದೆ.

೨ ನೆಯ ಮರುಳ್—ನುಡಿಯದೆ ಪೋಗಲೀಯೆಂ !

೧ ನೆಯ ಮರುಳ್—ಪೋದೊಡೆ ದ್ರೌಪದಿಯಾಣೆ !

೩ ನೆಯ ಮರುಳ್—ವಿಾಱಿ ಪೋದೊಡೆ ಕಲಿಭೀಮನಾಣೆ !

[ ದುರ್ಯೋಧನಂ ಗದೆಯಿಂ ಕುಟ್ಟುವಂ ]

ಮರುಳ್ಗಳ್—ಸಂಜೆವರಂ ನಿನ್ನಾಟಂ. [ ಓಡುವುವು ]

ಸಂಜಯಂ—ಮಹಾಸತ್ವ, ಈ ಮರುಳ್ಗಳೊಳೇನ್ ? ಬಿಜಯಂಗೆಯ್ಯಿಂ.
ಅಕ್ಕಟ !

ವಿನುತವಿರೋಧಿಮಂಡಳಿಕಮೌಳಿವಿಘಟ್ಟಿತಪಾದಪೀಠಕಾಂ
ಚನಕಮಳಾಯಮಾನಮಿವು ನಿಮ್ಮಯ ಮೆಲ್ಲಡಿ ಭಿಂಡಿವಾಳದಂ
ಬಿನ ಕರವಾಳ ಕಕ್ಕಡೆಯ ಕೊಂತದ ಧಾರೆಗಳುರ್ಚೆ ಸಂಗರಾ
ವನಿತಳದೊಳ್ ವಿಧಾತ್ರವಶದಿಂ ನಿಮಗಂ ನಡೆವಂತುಟಾದುದೇ ೭೨

ದುರ್ಯೋಧನಂ—ಕಣ್ಣೀರನೊರಸು, ಸಂಜಯ !

ತನುಜಾನುಜರ ವಿಯೋಗದ
ಮನಃಕ್ಷತಂ ನೋಯಿಸಲ್ಕೆ ನೆಱೆಯದು ಸಮರಾ
ವನಿಯೊಳುಡಿದಿರ್ದ ಕಯ್ದುಗ
ಳಿನಿಸುಂ ನೋಯಿಕುಮೆ ವಜ್ರಮನನಪ್ಪೆನ್ನಂ ೭೩

ನಡೆ, ನನ್ನ ಧೈರ್ಯಮಂ ಕಲಂಕದಿರು.

ಸಂಜಯ—ಇದಾರಿದು, ಆಚಾರ್ಯರಲ್ತೆ ?

ದುರ್ಯೋಧನಂ—ಆಚಾರ್ಯ, ಕೋಪದೊಳ್ ದೂಷಿಸಿದೆಂ.

ಅಱಿಯೆಮೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ
ನೆಱೆಯನಿದಿರ್ಚೆ ನಿಮ್ಮೊಡನೆ ಕಾದಿ ಗೆಲಲ್ಕಿದು ನಿಮ್ಮುಪೇಕ್ಷೆಯೆಂ
ದಱಿಯೆನಿದೆನ್ನ ಕರ್ಮವಶಮೆಂದಱಿಯೆಂ ನಿಮಗಿಂತು ಸಾವದೇ
ತೆಱದಿನಕಾರಣಂ ನೆಱೆಯೆ ಸಂಭವಿಸಿರ್ದುದೊ ಕುಂಭಸಂಭವಾ ೭೪

ಸಂಜಯಂ—ಇವನ್ ಅಭಿಮನ್ಯು.

ದುರ್ಯೋಧನಂ—ಅಸಮಬಲ ನಿನ್ನ ವಿಕ್ರಮ
ಮಸಂಭವಂ ಪೆಱರ್ಗೆ ನಿನ್ನನಾನಿನಿತಂ ಪ್ರಾ
ರ್ಥಿಸುವೆನಭಿಮನ್ಯು ನಿಜಸಾ
ಹಸೈಕದೇಶಾನುಮರಣಮೆಮಗಕ್ಕೆ ಗಡಾ ೭೫

[ಕೈಮುಗಿವಂ]

ಸಂಜಯಂ—ಮಹಾರಾಜ, ಇತ್ತ ಬಾರದಿರ್ ಬಾರದಿರ್.

ದುರ್ಯೋಧನಂ—ಕಂಡೆಂ, ಲಕ್ಷ್ಮಣಕುಮಾರನಲ್ತೆ ? ವತ್ಸ,

ಜನಕಂಗೆ ಜಲಾಂಜಲಿಯಂ
ತನೂಭವಂ ಕುಡುವುದುಚಿತಮದುಗೆಟ್ಟೀಗಳ್
ನಿನಗಾಂ ಕುಡುವಂತಾದುದೆ
ತನೂಜ ನೀಂ ಕ್ರಮವಿಪರ್ಯಯಂಮಾಡುವುದೇ ? ೭೬

ಸಂಜಯ, ದುಃಖದೊಳೆ ದುಃಖಂ ; ತೋಱು ದುಶ್ಯಾಸನನೆಲ್ಲಿ ?
ಕರ್ಣನೆಲ್ಲಿ ?

ಸಂಜಯಂ—ಇದೆ ಅಣುಗದಮ್ಮಂ !

ದುರ್ಯೋಧನಂ—

ನಿಜಜೀವಂ ಪರಲೋಕದೊಳ್ ನಿಜಮಹಾಮಾಂಸಂ ಪಿಶಾಚಾಸ್ಯದೊಳ್
ನಿಜರಕ್ತಂ ರಿಪುಕುಕ್ಷಿಯೊಳ್ ನಿಜಶಿರಂ ನಕ್ತಂಚರೀಹಸ್ತದೊಳ್
ನಿಜಕಾಯಂ ಕುರುಭೂಮಿಯೊಳ್ ನೆಲಸೆ ಗಾಂಧಾರೀಜ ದುರ್ಯೋಧನಾ
ನುಜ ದುಶ್ಶಾಸನ ಭೀಮಭೀಮಗದೆಯಿಂ ಪಂಚತ್ವಮಂ ಪೊರ್ದಿದಯ್ ೭೭

ಜನನೀಸ್ತನ್ಯಮನುಂಡೆನಾಂ ಬೞಿಕೆ ನೀಂ ಸೋಮಾಮೃತಂ ದಿವ್ಯಭೋ
ಜನಮೆಂಬಿಂತಿವನುಂಡೆನಾಂ ಬೞಿಕೆ ನೀಂ ಬಾಲತ್ವದಿಂದೆಲ್ಲಿಯುಂ
ವಿನಯೋಲ್ಲಂಘನಮಾದುದಿಲ್ಲ ಮರಣಕ್ಕೆನ್ನಿಂದೆ ನೀಂ ಮುಂಚಿದಯ್
ಮೊನೆಯೊಳ್ ಸೂೞ್ ತಡಮಾಯ್ತಿದೊಂದೆಡೆಯೊಳಾಹಾ ವತ್ಸ
ದುಶ್ಶಾಸನಾ ೭೮

ಅನುಜನ ನೆತ್ತರನೀಂಟಿದ
ನ ನೆತ್ತರಂ ಜೀವಸಹಿತಮೀಂಟದೆ ದುರ್ಯೋ
ಧನನೆಂಬ ಪೆಸರ್ಗೆ ಮುಯ್ಯಾಂ
ಪೆನೆ ದುಶ್ಶಾಸನನ ಬನ್ನಮಂ ನೀಗುವೆನೇ ೭೯

ಈ ಮುಱಿದ ಕಳೇಬರಮಂ ನೋಡಲಾಱೆಂ ನಡೆ.

ಸಂಜಯಂ—(ಆತ್ಮಗತಂ) ಪ್ರಿಯಸಖಂ, ಕರ್ಣಂ. ದುಃಖಮೆಲ್ಲಂ ಮಱು
ಕೊಳಿಸುಗುಂ ರಾಜಂಗೆ.

ದುರ್ಯೋಧನಂ—ಹಾ, ಕರ್ಣಾ!

ಆನುಂ ದುಶ್ಶಾಸನನುಂ
ನೀನುಂ ಮೂವರೆ ದಲಾತನುಂ ಕೞಿದ ಬೞಿ
ಕ್ಕಾನುಂ ನೀನೆ ದಲೀಗಳ್
ನೀನುಂ ಮಗುೞ್ದೆತ್ತವೋದೆ ಅಂಗಾಧಿಪತೀ ೮೦

ನಿನ್ನ ಮಗಂ ವೃಷಸೇನಂ
ತನ್ನ ಮಗಂ ಸತ್ತನಣ್ಮೆ ಲಕ್ಷಣನುಂ ನೀ

ನೆನ್ನಂ ಸಂತೈಸುವುದಾಂ
ನಿನ್ನಂ ಸಂತೈಸೆ ಬಂದೆನಂಗಾಧಿಪತೀ ೮೧

ಅಱಿಯೆನಿದಂ ನಿನ್ನಿಂದಿನ
ತೆಱನಂ ನೀನೆನಗದೇಕೆ ಮುಳಿದಿರ್ಪೆಯೊ ಮೇಣ್
ಮಱುವಾತುಗುಡದೆ ರವಿಸುತ
ಮಱವಿಂದಿರ್ದಪೆಯೊ ಮೇಣ್ ಬೞಲ್ದಿರ್ದಪೆಯೋ ೮೨

ನಿನ್ನ ಕೆಳೆಯಂ ಸುಯೋಧನ
ನನ್ನೋಡದೆ ನುಡಿಯುದಪ್ಪಿಕೊಳ್ಳದೆ ಬೆಸನೇ
ನೆನ್ನದೆ ಜೀಯೆನ್ನದೆ ದೇ
ವೆನ್ನದೆ ಏಕುಸಿರದಿರ್ಪೆ? ಅಂಗಾಧಿಪತೀ ೮೩

ಅನೃತಂ ಲೋಭಂ ಭಯಮೆಂ
ಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂ
ದನ ನನ್ನಿ ಚಾಗಮಣ್ಮೆಂ
ಬಿನಿತರ್ಕಂ ನೀನೆ ಮೊತ್ತಮೊದಲಿಗನಾದಯ್ ೮೪

ಆನಱಿವೆಂ ಪೃಥೆಯುಱಿವಳ್
ದಾನವರಿಪುವಱಿವನರ್ಕನಱಿವಂ ದಿವ್ಯ
ಜ್ಞಾನಿ ಸಹದೇವನಱಿವಂ
ನೀನಾರ್ಗೆಂದಾರುಮಱಿಯರಂಗಾಧಿಪತೀ ೮೫

ಒಡವುಟ್ಟಿದನೆಂದಱಿದೊಡೆ
ಕುಡುಗುಂ ರಾಜ್ಯಮನೆ ಧರ್ಮತನಯಂ, ನಿನಗಾಂ
ಕುಡಲಾರ್ತೆನಿಲ್ಲ ರಾಜ್ಯ
ಕ್ಕೊಡೆಯನನಱಿಯುತ್ತುಮಿರ್ದೆನಂಗಾಧಿಪತೀ ೮೬

ನೀನುಳ್ಳೊಡುಂಟು ರಾಜ್ಯಂ
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟಯ್
ನೀನುಳ್ಳೊಡುಂಟು ಪೀಱಿಗೆ
ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ ೮೭

ನಯನದೊಳಮೆರ್ದೆಯೊಳಂ ನಿ
ನ್ನಯ ರೂಪಿರ್ದಪುದು ನಿನ್ನ ಮಾತಿರ್ದಪುದೆ
ನ್ನಯ ಕಿವಿಯೊಳಗಿನನಂದನ
ವಿಯೋಗಮೆಂತಾದುದಯ್ಯ ಎನಗಂ ನಿನಗಂ ೮೮

ನಿನ್ನಂ ಕೊಂದ ಕಿರೀಟಿಯು
ಮೆನ್ನನುಜನನಿಕ್ಕಿ ಕೊಂದ ಭೀಮನುಮೊಳನಾ
ನಿನ್ನುಮೊಳೆಂ ಗಡ ! ಸಾಲದೆ
ನಿನ್ನಯ ಕೂರ್ಮೆಗಮದೆನ್ನ ಸೌಧರ್ಮಿಕೆಗಂ ೮೯

ಇನಸುತನಿರವಂ ದುಶ್ಶಾ
ಸನನಿರವಂ ಕಂಡುಮಿನ್ನುಮೆನ್ನಸುವಿದು ನೆ
ಟ್ಟನೆ ಪೋದುದಿಲ್ಲ ಕಲ್ಲೆರ್ದೆ
ತನದಿಂದೆನ್ನಂತು ಬಲ್ದಿನಾವನುಮೊಳನೇ ೯೦

ಸೂನುಗಳೞಿವಂ ಪ್ರಿಯಮಿ
ತ್ರಾನುಜರೞಿವಂ ವಿಧಾತ್ರ ! ನೀಂ ಕಾಣಿಸಿ ಇ
ನ್ನೇನಂ ಕಾಣಿಸಲಿರ್ದಪೆ
ನೀನೆನ್ನಂ ಪಾಪಕರ್ಮನಂ ನಿರ್ಗುಣನಂ ೯೧

ಅಪ್ಪ, ಸಂಜಯ !
ಆರೊಡನೆ ನುಡಿವೆನೞ್ತಿಯೊ
ಳಾರೊಡನೋಲಗದೊಳಿರ್ಪೆನಾರೊಡನೆ ಸಮಂ

ತಾರೋಗಿಪೆನೇೞುವೆನಾ
ನಾರೊಡನೆನ್ನಣುಗರಿಲ್ಲದಿಭವಾಜಿಗಳಂ ೯೨

ಕೆಳೆಯಂಗಾಯ್ತುಸುಮೋಕ್ಷಮಾಗದೆನಗಂ ಬಾಷ್ಪಾಂಬುಮೋಕ್ಷಂ ಧರಾ
ತಳಮಂ ಕೊಟ್ಟನಿವಂ ಜಲಾಂಜಲಿಯುಮಂ ನಾಂ ಕೊಟ್ಟೆನಿಲ್ಲನ್ಯಮಂ
ಡಳಮಂ ಸುಟ್ಟನಿವಂ ಪ್ರತಾಪಶಿಖಿಯಿಂದಾನೀತನಂ ಸತ್ಕ್ರಿಯಾ
ನಳನಿಂ ಸುಟ್ಟೆನುಮಿಲ್ಲ ಮತ್ಪ್ರಿಯತಮಂ ಕರ್ಣಂಗಿದೇಂ ಕೂರ್ತೆನೋ ೯೩

ಸಂಜಯಂ—ದೇವಾ, ಕರ್ಣನನಿನ್ ಮಱೆವುದು.

ಪೆಂಡಿರ್ ಪಳಯಿಸುವಂದದೆ
ಗಂಡರ್ ಪಳಯಿಸುವುದಾಯವೋ ಛಲವೋ ! ಕೈ
ಕೊಂಡೆಸಪರಾರೊ ಕುರುಕುಲ
ಮಂಡನ ನೀನೆತ್ತಿಕೊಂಡ ಛಲಮನೆ ಮೆಱೆಯಾ ೯೪

ದುರ್ಯೋಧನಂ—ದರಹಸಿತಮುಖನ ಸುರಕುಂ
ಜರಗಮನನ ಕನಕಪರ್ವತಪ್ರತಿಮುದಿನೇ
ಶ್ವರಸುತನ ರೂಪು ಚಿತ್ರಂ
ಬರೆದಂತಿರ್ದಪುದು ಚಿತ್ತಭಿತ್ತಿಯೊಳೆನ್ನಾ ೯೫

ಗುರು ದೀಕ್ಷಾವಿಧಿಗಳ್ಗೆ ಮಂತ್ರಿ ಹಿತಕಾರ್ಯಾಳೋಚನಕ್ಕಾಳ್ದನು
ರ್ವರೆಯಂ ಕಾವ ಗುಣಕ್ಕೆ ನರ್ಮಸಚಿವಂ ಕ್ರೀಡಾರಸಕ್ಕಾನೆಯಾಳ್
ಗುರುಭಾರಕ್ಕಿಱಿವಾಳ್ ರಣಕ್ಕೆ ತುೞಿಲಾಳ್ ಕಟ್ಟಾಯದೊಳ್ ಮೇಳ
ದಾಳ್
ಪರಿಹಾಸಕ್ಕೆನಿಸಿರ್ದನೆಂತು ಮಱೆವಂ ದುರ್ಯೋಧನಂ ಕರ್ಣನಂ ೯೬

ಸಂಜಯಂ—ದೇವಾ, ಶರಶಯನದೊಳ್ ಭೀಷ್ಮರಿತ್ತಲಿರ್ದಪರ್, ಬಿಜಯಂ
ಗೆಯ್ಯಿಂ.

ದುರ್ಯೋಧನಂ—ಕುರುಪಿತಾಮಹ, ಬಾಲಕಂ ವಂದಿಸುವೆಂ.

ಸಂಜಯಂ—(ಕಿವಿಯೊಳ್) ಅಜ್ಜಾ, ನಿಮ್ಮ ನೊಮ್ಮಂ ಕುರುಕುಲಾಂಬರ
ದ್ಯುಮಣಿ ದುರ್ಯೋಧನಂ ಬಂದಂ.

ಭೀಷ್ಮಂ—

ಧವಳಗಜೇಂದ್ರಮುಂ ಧವಳಚಾಮರಮುಂ ಧವಳಾತಪತ್ರಮುಂ
ಧವಳವಿಲೋಚನೋತ್ಪಲವಧೂಜನಮುಂ ಬೆರಸಷ್ಟದಿಕ್ತಟಂ
ಧವಳಿಸೆ ಕೀರ್ತಿಯಿಂ ಧವಳಮಂಗಳಗೇಯದಿನೊಪ್ಪಿ ಬರ್ಪ ಕೌ
ರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ ೯೭

ಏಕಾಕಿಯಾಗಿ ನಿನ್ನ ಬಂದ ಬರವಿನೊಳೆ ಸಮರವೃತ್ತಾಂತಂ ತಿಳಿದುದು.

ದುರ್ಯೋಧನಂ—ಅಜ್ಜ, ನನಗೆ ಮಱುಗದಿರಿಂ.

ವಿನಯಮನೊಕ್ಕು ನಿಮ್ಮ ಗುರುವೃದ್ಧರ ಪೇಳ್ದ ಹಿತೋಪದೇಶಮಂ
ಮನದೊಳಿಱಿಂಕೆಗೊಂಡನಿಲನಂದನನ್ವೈರದೆ ನಿಮ್ಮನಿಂದ್ರನಂ
ದನನೊಡನಾನೆ ಕಾದಿಸಿದೆನಾನೆ ಕಡಂಗಿದೆನೆನ್ನ ಪಾಪಕ
ರ್ಮನ ಕತದಿಂದಮೀನಿಮಗವೀಯಿರವಾದುದೆ ಸಿಂಧುನಂದನಾ ೯೮

ಭೀಷ್ಮಂ—ಮಗನೆ, ಆದುದಾಯ್ತು; ವೃಥಾಸಂತಾಪಂ ಬೇಡ. ಇನ್ನಾ
ನುಂ ಪೇಳ್ದಿಮಾತಂ ಕೇಳ್ವೆಯಪ್ಪೊಡೆ, ಪಾಂಡವರನೊಡಂಬಡಿಸಿ
ಸಂಧಿಯಂ ಮಾಡಿ ಪೂರ್ವಕ್ರಮದೊಳ್ ನಡೆವಂತು ಮಾಳ್ಪೆಂ.
ಇನ್ನುಮವರ್ ಎನ್ನೆಂದುದಂ ಇಂಬುಕಯ್ವರಲ್ಲದೆ ಮೀಱುವ
ರಲ್ಲ. ನೀನುಮೆಮ್ಮ ಪೇಳ್ದುದಂ ಮೀಱದೆ ನೆಗಳಿಲ್ವೇಳ್ಕುಂ.

ದುರ್ಯೋಧನಂ—ನಿಮಗೆ ಪೊಡೆಮಟ್ಟು ಪೋಪೆ
ಸಮಕಟ್ಟಿಂ ಬಂದೆನಹಿತರೊಳ್ ಸಂಧಿಯನೇಂ
ಸಮಕೊಳಿಸಲೆಂದು ಬಂದೆನೆ
ಸಮರದೊಳೆನಗಜ್ಜ ಪೇೞಿಮಾವುದು ಕಜ್ಜಂ ೯೯

ನೆಲಕಿಱುವೆನೆಂದು ಬಗೆದಿರೆ ?
ಚಲಕಿಱುವೆಂ ಪಾಂಡುಸುತರೊಳೀನೆಲನಿದು ಪಾ
ೞ್ನೆಲನೆನಗೆ ದಿನಪಸುತನಂ
ಕೊಲಿಸಿದ ನೆಲನೊಡನೆ ಮತ್ತೆ ಪುದುವಾೞ್ವಿಪೆನೇ ? ೧೦೦

ಬಾಡಮನೈದನವರ್ ಮುಂ
ಬೇಡಿದೊಡಾನಿತ್ತೆನಿಲ್ಲ ರಾಜ್ಯಾರ್ಧಮನಾಂ
ಬೇಡಿಯುವರಲ್ಲಿಗಟ್ಟಿದೊ
ಡೇಡಿಸಿ ಋೋಡಿಸನೆ ಪವನನಂದನನೆನ್ನಂ ೧೦೧

ಪುದುವಾೞಿಲ್ಕಣಮಾಗದೆಂತುಮವರೊಳ್ ಸಂಧಾನಮಂ ಮಾಡಲಾ
ಗದು ನೀಮಿಲ್ಲದೆ, ಅಜ್ಜ, ಬಿಲ್ಲ ಗುರುಗಳ್ ತಾಮಿಲ್ಲದಾಕರ್ಣನಿ
ಲ್ಲದೆ ದುಶ್ಶಾಸನನಿಲ್ಲದಾರೊಡನೆ ರಾಜ್ಯಂಗೆಯ್ವೆನಾರ್ಗೆನ್ನ ಸಂ
ಪದಮಂ ತೋಱುವೆನಾರ್ಗೆ ತೋಱಿ ಮೆಱೆವೆಂ ನಾನಾವಿನೋದಂಗಳಂ?

ಕ್ಷಮಿಸಿಂ ; ಎನ್ನಳಿಲಾಱದು. ಅಭಿಮಾನಮೊಂದುೞಿದುದು.
ಅದನೆ ಬಲ್ವಿಡಿವಿಡಿವೆಂ.

ಭೀಷ್ಮಂ--ಸಂಜಯ, ಪೋಗು. ಗಾಂಧಾರಿಗಂ ಧೃತರಾಷ್ಟ್ರಂಗಂ ಪೇೞ್
"ಮೊಮ್ಮಂ ನುಡಿದ ನುಡಿಯನೆಂತುಂ ಒಡಂಬಡುವನಲ್ಲ. ಆಶ್ಚ
ರ್ಯಂ ಆತನ ಸತ್ವಮುಂ ಏಕಾಂಗಸಾಹಸಮುಂ. ಮಾನಧನ
ನಪ್ಪಾತನಂ ನಾವು ಕಾಡುವುದಲ್ತು" ಎಂದು.

[ ಸಂಜಯಂ ಪೋಪಂ ]

ಮಗನೆ, ಧೈರ್ಯಂಗೊಳ್, ನಾಳೆ ತೀರ್ಥಯಾತ್ರೆಗೆ ಪೋದ ಬಲ
ದೇವಂ ಬರ್ಪಂ. ಇದೊಂದು ದಿವಸಂ ಮೈತ್ರೇಯರ ಶಾಪದಿಂ
ನಿನಗೆ ಗಂಡಂ ; ಇದರ್ಕೆ ಕಾಲವಂಚನೆಯೆ ಮಂತ್ರಂ. ವೈಶಂಪಾ
ಯನ ಸರೋವರಮಂ ಪೊಕ್ಕಿರ್ದು ಇಂದಿನೊಂದಿರುಳಂ ಕಳಿಪಿ
ನಾಳೆ ಜಯಶೀಲನಾಗು.

ದುರ್ಯೋಧನಂ—ಮಹಾತ್ಮರಾಶೀರ್ವಾದಂ !

[ ಪೋಗುತ್ತೆ ]

ಅರಿಯರ್ ಪಾಂಡವರವರೊಳ್
ವಿರೋಧಮಂ ಬಿಸುಟು ಸಂಧಿಯಂ ಮಾಡುವುದೆಂ
ಬರ ನುಡಿಯಂ ಕೇಳಲ್ಕೆಂ
ದೆರಡುಂ ಕಿವಿಗಳುಮನೆನಗೆ ಬಿದಿ ಮಾಡಿದನೇ ೧೦೩

ಕೊಳದೊಳ್ ಕಾಲವಂಚನಂ !
ದಿನಕರತನಯನ ದುಶ್ಶಾ
ಸನನ ವಿಯೋಗದೊಳಮಿನಿತುವರೆಗಂ ನೋವಿ
ಲ್ಲೆನಗೆ ತಲೆಗರೆದು ನೀರೊಳ್
ಕುನಿಯೆನೆ ನೊಂದೆಂ ನದೀಜನಭ್ಯರ್ಥನೆಯಿಂ ! ೧೦೪

ಅಕ್ಕೆ ! ಭೀಮನೊಳ್ ಸಂಧಿಯ ಮಾತು ಮಾಣ್ದುದು.

## ೪ನೆಯ ರಂಗಂ

[ ಕಿರಾತರ್ ಅಱಿಸುತ್ತುಂ ಪೋಗುವರ್—ಭೀಮಂ ಧರ್ಮರಾಜಂ ಕೃಷ್ಣಂ.]

ಭೀಮಂ—ಎತ್ತಲಡಂಗಿದಂ ಆ ದ್ರೌಪದೀದ್ರೋಹನ್ !

ತೊದಳಾಯ್ತೆನ್ನಯ ಪೂಣ್ದ ಪೂಣ್ಕೆ ಸಭೆಯೊಳ್ ಪಾಂಚಾಲರಾಜಾತ್ಮಜಾ
ವದನಮ್ಲಾನತೆ ಮಾಣ್ದುದಿಲ್ಲೊಗೆದ ಮದ್ದೋರ್ದಂಡಕಂಡೂತಿ ತೀ
ರ್ದುದುಮಿಲ್ಲಿನ್ನುಮಣಂ ಸುಯೋಧನವಧಕ್ಕೇಗೆಯ್ವೆನೆಂತಕ್ಕುಮೆಂ
ಬುದೆ ಸಿಂದುತ್ಸುಕಚಿತ್ತಮುಮ್ಮಳಿಸುಗುಂ ಪಾಪಾತ್ಮನೇನಾದನೋ! ೧೦೫

ರಸೆಗಿೞಿದನೊ ಮೇಣ್ ನಾಲ್ಕುಂ
ದೆಸೆಗಳ ಕೋಣೆಗಳೊಳುಱಿದನೋ ಖಳನಿಲ್ಲೀ
ವಸುಮತಿಯೊಳ್ ಗಾಂಧಾರಿಯ
ಬಸಿಱಿಂ ಮೇಣ್ ಮಗುೞೆ ಪೋಗಿ ಪೊಕ್ಕಿರ್ದಪನೋ ! ೧೦೬

ಚರಮಚರಮೆಂಬ ಜಗದಂ
ತರದೊಳ್ ಖಳನೆಲ್ಲಿ ಪೊಕ್ಕೊಡಂ ತದ್ಭುಜಪಂ
ಜರದೊಳಗಿರ್ದೊಡೆ ಹರಿಹರ
ಹಿರಣ್ಯಗರ್ಭರ್ಕಳಲ್ಲಿಯುಂ ಕೊಲ್ಲದಿರೆಂ ೧೦೭

ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ ತಾತ ಮಾ
ರುತ ಕೇಳ್ ಮಾರುತಮಾರ್ಗ ಕೇಳ್ ಪಗೆವನಂ ಕೊಂದೆನ್ನ ಕೋಪಾಗ್ನಿಗಾ
ಹುತಿಮಾಳ್ಪೆಂ ಕೊಲಲಾಱದಂದು ತಱಿಸಂದಾನೆನ್ನನಿಂದಗ್ನಿಗಾ
ಹುತಿಮಾಳ್ಪೆಂ ಗಡಮೆಂದು ಪೂಣ್ದುದಱಿದೆಂ ಕೌರವ್ಯಕೋಳಾಹಳಂ

ಧರ್ಮರಾಜಂ—ಭೀಮ, ಈ ಮಸಕಂ ಮಸಗಲ್ ತಗದು.

ಭೀಮಂ—ಓಹೊ ! ಧರ್ಮಶ್ರವಣಂ !

ಎನಿತುಂ ದ್ರೌಪದಿ ಮುಕ್ತಕೇಶಿ ನಮೆವಳ್ ತದ್ದುಃಖಮಂ ಕಂಡು ಕಂ
ಡನಿತುಂ ಸೈರಿಪೆವಾನುಮೆನ್ನನುಜರುಂ ಪಾಂಚಾಲಿಯಂ ನೋಡಿ ನೀಂ

ಮನದೊಳ್ ನೋವುದುಮಿಲ್ಲ ನಿಷ್ಕರುಣೆಯಯ್ ನೀನಿಂತಿರಾನನ್ನೆಗಂ
ಮುನಿಸಂ ತೀರ್ಚಲೊಡರ್ಚಿ ವೈರಿತರುವಂ ನಿರ್ಮೂಲನಂಮಾಡುವೆಂ

ಆನುಂ ವಿಧೇಯನಲ್ಲಂ
ನೀನುಂ ಗುರುವಲ್ಲಮಿಂದಿನೊಂದೆವಸದೊಳು
ಉರ್ವೀನಾಥ ಪರಿಯ ಬಿಡ ಕುರು
ಸೂನುವನಿರದಿಕ್ಕಿ ಮೆಟ್ಟಿ ಡೊಕ್ಕರಿಸಿದಪೆಂ ೧೧೦

ಮುಂದಲೆಯಂ ಪಿಡಿದೆನ್ನಯ
ಮುಂದೆೞೆದನಲಜೆಯನುಯ್ದು ಪರಿಭವಿಸಿಯೆ ದ
ಳ್ಕೆಂದುರಿದು ಸೂರ್ಕಿದವನಂ
ಕೊಂದೆಂ ಕುರುಪತಿಯುಮಂ ಕೊಲಲ್ ತಡೆದಪೆನೇ ೧೧೧

ಕೃಷ್ಣಂ—ಭೀಮ, ಮಾತಿನೊಳ್ ಕಾರ್ಯಮಾಗದು. ನೇಸಱುೞಿಯುತಿರ್ಕುಂ. ಮುಂದೞಿಸುವಂ, ಬಾ.

ಭೀಮಂ—ಎಲೆ ಎಲೆ ಸೈನಿಕರಿರಾ !

ಧೃತರಾಷ್ಟ್ರಾಪತ್ಯನಬ್ಜಪ್ರಿಯಸುತಸಖನೇಕಾದಶಾಕ್ಷೋಹಿಣೀಶಂ
ಕೃತಕದ್ಯೂತಸ್ವನಾಥೀಕೃತಯಮಸುತಭೀಮಾರ್ಜುನಂ ದ್ರೋಣಭೀಷ್ಮೋ
ಚಿತವಾಕ್ಯದ್ವೇಷಿ ಕೃಷ್ಣಾಂಬರಕಬರಿಹರಂ ಶೋಕತೀವ್ರಾಗ್ನಿದಗ್ಧಂ
ಸುತಶೋಕಾಕ್ರಾಂತನೆಲ್ಲಿರ್ದನೊ ನೃಪತಿಲಕಂ ನಿಮ್ಮ ರಾಜಾಧಿರಾಜಂ ?

ಭರತಕುಲೇಂದುಕಳಂಕಂ
ಭರತಾನ್ವಯರಾಜಭವನರಾಜಕಪೋತಂ
ಕುರುಕೇತುವೆಲ್ಲಿದಂ ತ
ತ್ಕುರುಕುಲಲಯಕೇತು ಭೀಮಸೇನಂ ಬಂದಂ ೧೧೨

[ ತೆರೆಯೊಳ್ ]

ಕಿರಾತರ್—ಪಜ್ಜೆ ! ಪಜ್ಜೆ !

ಭೀಮಂ—ಎಲ್ಲಿ ? ಎಲ್ಲಿ ಪಜ್ಜೆ ? [ ಪೋಗುವರ್ ]

# ೫ನೆಯ ರಂಗಂ

ಭೀಮಂ—ಎಲ್ಲಿ ? ಎಲ್ಲಿ ಪಜ್ಜೆ ?

ಕಿರಾತಂ—ಈ ಕೊಳದ ತಡಿಯೊಳ್.

ಭೀಮಂ—ಅವನದೆ ! ಆಹಾ, ಪೊಱಮಟ್ಟ ಪಜ್ಜೆ !

ಕೃಷ್ಣಂ—ಇದು ಕಪಟಿಯ ತಂತ್ರಂ; ಭೀಷ್ಮನ ಕಾಲಹರಣಮಂತ್ರಂ.
ಒಳಗಿರ್ಪಂ; ಕೊಳನಂ ಮುತ್ತಿ ಪೊಱಮಡಿಸಿಂ.

[ ಕಿರಾತರ್ ಪಱೆಯಂ ಪೊಯ್ವರ್ ]

ಧರ್ಮರಾಜಂ—ಇದೊಂದು ಲಜ್ಜೆಯಾಯ್ತು ಭರತಕುಲಕ್ಕೆ.

ಕೃಷ್ಣಂ—ಧರ್ಮಪ್ರಿಯ, ರಾಜ್ಯಲಕ್ಷ್ಮಿ ಪೇಸಿ ಬಿಸುಟ್ಟವಂ
ತುಱುವಂ ಕಳಿಸುವ ಕೃಷ್ಣೆಯ
ನಿಱಿಯಂ ಪಿಡಿದುರ್ಚವೇೞ್ವ ಕೊಳನಂ ಪಿಂದುಂ
ಪೆಱಗಾಗಿ ಪುಗುವ ದುರ್ನಯ
ಮಱಿಪವೆ ಕೌರವನ ರಾಜ್ಯದಾಯುವ ಕೇಡಂ ೧೧೪

ಧರ್ಮರಾಜಂ—ಅಂಕದ ಕಲಿ ಕುರುವಂಶಶ
ಶಾಂಕನೆ ದುರ್ಯೋಧನಾಂಕನನೆ ನೆಗೞ್ದಯಶಃ
ಪಂಕದೊಳಮೀ ಸರೋವರ
ಪಂಕದೊಳಂ ನೀನೆ ನಿನ್ನನಿಂತೞ್ದುವರೇ ೧೧೫

ಕೃಷ್ಣಂ—ಮಾನಧನನೆನಿಸಿ ನಿನ್ನಭಿ
ಮಾನಕ್ಷತಿಮಾಡಿದಯ್ ಸುಯೋಧನ ನೀಂ ಮ
ತ್ತೀ ನೀರೊಳಗೆಸಡಿರ್ಕುಂ
ಮೀಸಿರ್ಕುಂ ಕಪ್ಪೆಯಿರ್ಕುಮಿರ್ಪರೆ ಗಂಡರ್ ೧೧೬

ಭೀಮಂ— ಈ ಬೂತೆನ್ನ ಸರಂಗೇಳ್ದಲ್ಲದೆ ಪೊಱಮಡುವನಲ್ಲಂ.
ಭವದನುಜನರುಣಜಲಮಂ
ಸವಿನೋಡಿದೆನಿಂತು ನಿನ್ನ ಬಲಜಲನಿಧಿಯಂ

ಸವಿನೋಡಿದೆನೀ ಕೊಳನಂ
ತವೆ ಪೀರ್ದು ಬಳಿಕ್ಕೆ ನಿನ್ನ ಸವಿಯಂ ನೋೞ್ಪೆಂ ೧೧೭

ಸ್ವರಮಂ ಕೇಳಲ್ಕೆನ್ನು
ಗ್ರರೂಪಮಂ ನಿಂದು ನೋಡಲಣ್ಮದೆ ಸಮರಾ
ಕರಮಂ ಬಿಸುಟ್ಟು ಕಮಲಾ
ಕರಮಂ ಪೊಕ್ಕೆಲವೊ ಮರುಳೆ ಬರ್ದುಕಲ್ ಬಗೆವಾ ೧೧೮

ಜಲದೊಳ್ ಮೀನಿರ್ಪವೊಲ್ ನೀಂ ಕೊಳದೊಳೆ ಮುೞುಗಿರ್ದಕ್ಕಟಾ ಕೋಡ ಸೇಡಿಂ
ಗೊಳಗಾದಯ್ ನಿನ್ನ ದುರ್ಯೋಧನವೆಸರ್ಗಿದು ಲಜ್ಜಾಕರಂ ತೋಱಿ ದಯ್ ನಿ
ನ್ನಳವಂ ಚೀ ಸತ್ತರೇಂ ಪುಟ್ಟರೆ ಪೊಱಮಡು ನೀಂ ಕೈದುಗೊಳ್ ಕೌರವೇಂದ್ರಾ
ಜಳವಜ್ರಂ ಬಂದನೀಗಳ್ ಕುರುಕುಲಮಥನೋದ್ಭೀಕರಂ ಭೀಮಸೇನಂ ೧೧೯

ಹರಿ ಸಂಧಾನಕ್ಕೆ ವಂದಂದವಗಡಿಸಿದಹಂಕಾರಮೆಲ್ಲಿತ್ತೊ ಕೃಷ್ಣಾಂ
ಬರಕೇಶಾಕೃಷ್ಟಿಯಂ ಮಾಡಿಸಿದ ಮದಮದೆಲ್ಲಿತ್ತೊ ಕೌಂತೇಯರಂ ಮ
ಚ್ಚರದಿಂ ಕಾಂತಾರದೊಳ್ ತಿಱ್ರನೆ ತಿರಿಪಿದ ಸೊರ್ಕೀಗಳೇನಾದುದೋ ಪೇೞ್
ಕುರುವಂಶಾಧೀಶ, ನಾಂ ಮೂದಲಿಸುವೆನದಟಂ ಭೀಮನುದ್ದಾಮಭೀಮಂ ೧೨೦

ದುರ್ಯೋಧನಂ—[ಎೞ್ದು] ಎಲ್ಲಿ ಭೀಮಂ ?

ಭೀಮಂ—ನಿನ್ನನುಜನರುಣಜಲಮಂ
ಮುನ್ನಂ ತವೆ ಪೀರ್ದೊಡಂಜಿ ನೀಂ ಪುಗ ಕೊಳನಂ

ಬೆನ್ನನೆ ಬಂದಾತಂ ಶೌ
ಯೋ೯ನ್ನತನೀಯಿರ್ದನಲ್ತೆ ಕೌರವಮಲ್ಲಂ ೧೨೧

ದುರ್ಯೋಧನಂ—ಎಲ್ಲಿರ್ದುದೊ ಈ ಗಂಡಗರ್ವಂ ಕೃಷ್ಣೆಯನೆಳೆದಾಡಿದಂದು, ಷಂಡ!

ನಾಲ್ಕಿಡಿಗಳೆದುಱಿ ಬೇರಂ
ಬಿಕ್ಕೆಯುಮಂ ತಿಂದು ವನದೊಳಡಗಿರೆ ಸೀವುಂ
ನೀಕ್ಕಿರಿಸಿ ನಿಂದುವಿಾಗಳ್
ಪೇೞ್ ಕಮ್ಮೈಸುವರೆ ಬಿರುದುಮಂ ಬೀರಮುಮಂ ೧೨೨

ಪುಟ್ಟಂ ಸಟ್ಟುಗಮಂ ಬಿಸುಟ್ಟು ಗದೆಗೊಂಡೊಟ್ಟೈಸುವಂತುಟಾದುದೆ?

ಎಸರನಿಡುವಕ್ಕಿಗರ್ಚುವ
ಬೆಸನುಂ ಕಯ್ಗೆಱೆವ ಕಂಚುಗರ್ಚುವ ಬೆಸನುಂ
ಬೆಸನಲ್ಲದೆ ಮತ್ಸ್ಯನ ಬಾ
ಣಸಿಗಂಗಾರಿತ್ತರೆಲವೊ ನಿನಗೀ ಬೆಸನಂ ೧೨೩

ಭೀಮಂ—ಪಿರಿಯಣ್ಣನ ನನ್ನಿಯನಾ
ದರದಿಂ ಕಾಯಲ್ಕೆ ಪೆಱರ್ಗೆ ಬಾಣಸುಗೆಯ್ದೆಂ
ಕುರುವಂಶಜ ಕೇಳ್ ನಿನ್ನೀ
ಶರೀರಮಾಂಸದೊಳೆ ಮರುಳ್ಗೆ ಬಾಣಸುಗೆಯ್ವೆಂ ೧೨೪

ಧರ್ಮರಾಜಂ—ಭೀಮಾ, ದಾಯಿಗತನದೆ ಮುನ್ನೆ ಗೆಯ್ದಧರ್ಮಮಂ ನೆನೆಯದೆ ನಿರ್ಮಲಕ್ಷತ್ರಧರ್ಮಮಂ ನೆನೆ. ಸುಯೋಧನ,

ಆಗದು ಸಮರಂ ಗುಣಯುತ
ನಾಗು ಮಹಾಭೋಗಿಯಾಗು, ನಿನ್ನಾಳ್ವ ಮಹೀ

ಭಾಗಮುಮಂ ಸಕಲಮಹೀ
ಭಾಗಮುಮಂ ನೀನೆ ಕೊಂಡು ಸುಖಮಿರಲಾಗಾ ೧೨೫

ಧರಣೀಚಕ್ರಮನೊಪ್ಪುಗೊಳ್ ಬಗೆಯದಿರ್ ವಿದ್ವೇಷಮಂ ನಮ್ಮನೈ
ವರನಿನ್ನಾಳ್ವೆಸಕ್ಕೈಸಿಕೊಳ್ ನೆನೆಯದಿರ್ ಕೀಳ್ಪೊಕ್ಕಿನೊಳ್ ತೊಟ್ಟುಕೊಂ
ಡಿರದೆಮ್ಮೆಂದುದನಿಂಬುಕಯ್ ಮನದೊಳೊಳ್ಪಿಂ ಶಾಂತಿವಿಶ್ರಾಂತಿಸೋ
ದರನೆಂಬಂತುಪಶಾಂತಿಯಂ ಕುರುಕುಲಕ್ಷ್ಮಾಪಾಲಚೂಡಾಮಣೀ ೧೨೬

ಕೃಷ್ಣಂ—ದುರ್ಯೋಧನ, ಧರ್ಮಜಂ ಕೃಪೆಯಿಂದೊಳ್ಳಿತಂ ಪೇಳ್ದಿಪಂ;
ಈಗಳುಂ ಕೇಳ್ದು ಬರ್ದುಕು.

ದುರ್ಯೋಧನಂ—ನೀಂ ಗಡ! ಮಧ್ಯಸ್ಥಂ ನುಡಿ
ವಂ ಗಡ! ಪುದುವಾಳ್ಕೆಯೆನಗಮವರ್ಗಂ! ಸಂಧಾ
ನಂ ಗಡ! ಸಂಧಿಯ ಮಾತಂ
ಲಂಘಿಸಿದೆಂ ಮುನ್ನಮಿನ್ನೆರಟ್ಟಿ ನುಡಿದಪೆನೇ ೧೨೭

ಭೀಮ, ಇದೇಂ ಮಾತುಗಾಱಿಕೆ! ಬಾ, ಪೊಣರ್! ನಿಡುಬಯ
ಕೆಯ ಗದಾಯುದ್ಧಂ ಸಾರ್ದುದು. ಕಯ್ವೊಯ್!

[ದ್ವಂದ್ವಯುದ್ಧಂ]

ದುರ್ಯೋಧನಂ—ಇದು ಕಳಿಂಗನಂ ನುಂಗಿದ ದರ್ಪಕ್ಕೆ.
ಭೀಮಂ—ಇದು ಲಾಕ್ಷಾಗೇಹದಾಹಕ್ಕೆ.
ದುರ್ಯೋಧನಂ—ಕುರುಬಾಲರಂ ತಿಂದ ರಕ್ಕಸತನಕ್ಕೆ.
ಭೀಮಂ—ಕೃತ್ರಿಮವಿಷಾನ್ನಕ್ಕೆ; ಜೂದಿಂಗೆ.
ದುರ್ಯೋಧನಂ—ದುಶ್ಶಾಸನರಕ್ತಮಂ ಪೀರ್ದ ಪಿಶಾಚಕ್ಕೆ.
ಭೀಮಂ—ಪಾಂಚಾಲೀಪ್ರಪಂಚಕ್ಕೆ.
ದುರ್ಯೋಧನಂ—ಕರ್ಣಂಗೆ! (ಭೀಮಂ ಬೀಳ್ವಂ)
ಕೃಷ್ಣಂ—ಬಿಟ್ಟಿಂ ಭೀಮಂ.



ಕಾವ್ಯಕಲಾನಿಧಿಯ ಮತ್ತು ಕಾವ್ಯಮಂಜರಿಯ ಸಂಪಾದಕರಾದ

**ಮ॥ ಮಂ. ಆ. ರಾಮಾನುಜಯ್ಯಂಗಾರ್ಯರು**

# ಅದ್ಭುತರಾಮಾಯಣ, ಶ್ರೀರಾಮಪಟ್ಟಾಭಿಷೇಕ ಶ್ರೀರಾಮಾಶ್ವಮೇಧ ಈ ಗ್ರಂಥಗಳ ಕರ್ತೃ ಯಾರು ?

(ಕಾವ್ಯಮಂಜರಿಯ ಮತ್ತು ಕಾವ್ಯಕಲಾನಿಧಿಯ ಸಂಪಾದಕರಾದ
ಮ|| ಮಂ. ಆ. ರಾಮಾನುಜಯ್ಯಂಗಾರ್ಯರಿಂದ.)

ಶ್ರೀರಾಮಾಶ್ವಮೇಧ, ರಾಮಪಟ್ಟಾಭಿಷೇಕ, ಅದ್ಭುತರಾಮಾಯಣವೆಂಬ ಮೂರು ಸುಪ್ರಸಿದ್ಧವಾದ ಗ್ರಂಥಗಳನ್ನು ನಾನು ಕರ್ಣಾಟಕ ಕಾವ್ಯಮಂಜರಿಯೆಂಬ ಮಾಸಪತ್ರಿಕೆಯಲ್ಲಿ ಮುದ್ರಿಸಿ ಪ್ರಚಾರಗೊಳಿಸಿದವನಾದ್ದರಿಂದ ಇವನ್ನು ರಚಿಸಿದ ಕವಿಯ ವಿಚಾರದಲ್ಲಿ ನನಗಿರುವ ಅಭಿಪ್ರಾಯವನ್ನು ಹಲವರು ಕೇಳುತ್ತಿರುವರು. ನಂದಳಿಕೆ ಲಕ್ಷ್ಮೀನಾರಣಪ್ಪನವರೆಂಬವರು ಈ ಗ್ರಂಥಗಳನ್ನು ಬರೆದು, ತಮ್ಮ ಹೆಸರನ್ನು ಮರೆಸಿ, ಅನ್ಯಕರ್ತೃಗಳೆಂಬ ಭ್ರಾಂತಿಯನ್ನು ನಮ್ಮಲ್ಲಿ ಹುಟ್ಟಿಸಿ ಕಾವ್ಯ ಮಂಜರಿಯಲ್ಲಿ ಮುದ್ರಿತವಾಗುವಂತೆ ಮಾಡಿದರೆಂದು ಕೆಲವು ಪಂಡಿತರು ಅಭಿಪ್ರಾಯ ಪಟ್ಟು ಉಲ್ಲೇಖಗಳನ್ನು ಬರೆದಿರುವರು. ಆ ಉಲ್ಲೇಖಗಳು "ಪ್ರಬುದ್ಧಕರ್ಣಾಟಕ" ದ ಮುದ್ದಣನ ಸಂಚಿಕೆಯಲ್ಲಿಯೂ ಅದರ ಮುಂದಣ ಕೆಲವು ಸಂಚಿಕೆಗಳಲ್ಲಿಯೂ ಮುದ್ರಿತವಾಗಿರುವುವು. ಈ ವಿಚಾರದಲ್ಲಿ ಆ ಮಾಸಪತ್ರಿಕೆಯ ಸಂಪಾದಕನಾದ ನನಗೂ ಅವರಿಗೂ ಆ ಗ್ರಂಥಗಳು ಮುದ್ರಣವಾಗುವುದಕ್ಕೆ ಪೂರ್ವಭಾವಿಯಾಗಿ ನಡೆದ ಪತ್ರವ್ಯವಹಾರಗಳನ್ನೂ, ಅವು ಮುದ್ರಿತವಾದ ಮೇಲೆ ಪೀಠಿಕೆಗಳನ್ನು ಬರೆಯುವಾಗ ತತ್ತತ್ಕರ್ತೃ ವಿಷಯವಾಗಿ ನನಗೆ ಹುಟ್ಟಿದ್ದ ಅಭಿಪ್ರಾಯವನ್ನೂ, "ಪ್ರಬುದ್ಧ ಕರ್ಣಾಟಕ" ದಲ್ಲಿ ಆ ವಿಚಾರವಾಗಿ ಬಂದ ಉಲ್ಲೇಖಗಳನ್ನು ಓದಿದ ಮೇಲೆ ನನಗೆ ಈಗ ಉಂಟಾಗಿರುವ ಅಭಿಪ್ರಾಯಗಳನ್ನೂ ಕ್ರಮವಾಗಿ ಈ ಕೆಳಗೆ ವಿವರಿಸುತ್ತೇನೆ.

ಸುಮಾರು ೩೫-೪೦ ವರ್ಷಗಳ ಹಿಂದೆ ಕನ್ನಡ ಭಾಷಾಮಾತೆಗೆ ಪ್ರಾಪ್ತವಾದ ದುರವಸ್ಥೆಯನ್ನು ನೆನಸಿಕೊಂಡರೆ ಈಗಲೂ ಎದೆ ಜುಮ್ಮೆನ್ನುತ್ತದೆ. ಷಟ್ಪದಿಗಳಲ್ಲಿ ಭಾರತ ರಾಮಾಯಣ ಜೈಮಿನಿ, ಚಂಪೂಕಾವ್ಯಗಳಲ್ಲಿ ಶಬರಶಂಕರವಿಲಾಸ ರಾಜಶೇಖರ ಇನ್ನು ಒಂದೆರಡು ಗ್ರಂಥಗಳು ವಿನಾ ಬೇರೆ ಯಾವ ಉದ್ಗ್ರಂಥಗಳ ಹೆಸರನ್ನೂ ಯಾರೂ ಕೇಳಿರಲಿಲ್ಲ. ಇವೇ ಕನ್ನಡದಲ್ಲಿರುವ ಉದ್ಗ್ರಂಥಗಳೆಂದು ತಿಳಿದಿದ್ದರು. ಆ ಕಾಲದಲ್ಲಿ ಕನ್ನಡ ಭಾಷೆಯ ಔತ್ಕೃಷ್ಟ್ಯವನ್ನೂ ವಾಙ್ಮಯದ ಸಮೃದ್ಧಿಯನ್ನೂ ತಿಳಿಸಲು ಯಾವ ಸೂಚನೆಯೂ ಇರುತ್ತಿರಲಿಲ್ಲ. ಆಗಿನ ಪಂಡಿತರು

ಅಸಂಸ್ಕೃತವಾದ ಗ್ರಾಮ್ಯಭಾಷೆಗಳಲ್ಲಿ ಕನ್ನಡವು ಒಂದೆಂದು ಯೋಚಿಸುತ್ತಿದ್ದರು. ತೇಜಸ್ವಿಗಳಾದ ನಕ್ಷತ್ರಗಳು ಪ್ರಕಾಶಿಸದೆ ಇರುವ ಅಂಧಕಾರದಲ್ಲಿ ಎಲ್ಲವೂ ಅಂಧ ಕಾರವೇ ಎಂದು ತಿಳಿಯುವುದು ಸಹಜ. ಕನ್ನಡಮಾತೆಯ ಮೈಸ್ಸಿರಿಯೂ ಆಭರಣ ಕಾಂತಿಯೂ ಜನಗಳ ವಿಸ್ಮೃತಿಯೆಂಬ ಆವರಣದಲ್ಲಿ ಮುಚ್ಚಲ್ಪಟ್ಟಿರಲು, ಹೇಗೆ ತಾನೇ ಅವಳು ಪ್ರಾಜ್ಞರ ಕಣ್ಣನ್ನು ತೆರೆಯಿಸಿ, ತನ್ನ ಕಡೆ ಅವರನ್ನು ತಿರುಗಿಸಿ ತನ್ನನ್ನು ಆಶ್ರಯಿಸುವಂತೆ ಮಾಡಾಳು? ಆ ಕಾಲದ ಪ್ರಾಜ್ಞರು ಯಾವ ಕಾಂತಿಯೂ ಸಂಸ್ಕಾರವೂ ಅಲಂಕಾರವೂ ಇಲ್ಲದೆ ತುಚ್ಛವಾದ ಹರಕುಬಟ್ಟೆಗಳನ್ನುಟ್ಟು ಮೂಳೆಯ ನಗಗಳನ್ನು ತೊಟ್ಟು, ಅಲ್ಲಲ್ಲ ಕೋಣೆಗಳಲ್ಲಿ ಅವಿತುಕೊಂಡು, ಕಂಡೂ ಕಾಣದಂತೆ ಅಲೆದಾಡುತ್ತಿರುವ ಬಡ ಹೆಂಗಸಿನಂತಿರುವ ಕನ್ನಡ ಮಾತೆಯನ್ನು ನೋಡಿ ಅವಳ ಸಹವಾಸದಲ್ಲಿ ತಮಗೆ ಹೇಸಿಗೆಯುಂಟಾಗುವುದೆಂದು ನಂಬಿ, ಅವಳು ಹತ್ತಿರ ಬಂದರೆ ಛೀಯೊಳಿಸಿ ಜುಗುಪ್ಸೆಯನ್ನು ತೋರಿಸುತ್ತಾ ದೂರಕ್ಕೆ ಅಟ್ಟುತ್ತಾ ಬಂದರು. ಕುರೂಪಿಯನ್ನು ಕುರೂಪಿಯೆಂದರೆ, ಅವಳೂ ದುಃಖಿಸುವುದಿಲ್ಲ, ಕೇಳಿದವರೂ ದುಃಖಿಸುವುದಿಲ್ಲ. ಸುರೂಪಿಯನ್ನೂ ಸಂಪತ್ಸಮೃದ್ಧಳನ್ನೂ ಕುರೂಪಿಯೆಂದೂ ಸಹ ವಾಸಕ್ಕೆ ಅನರ್ಹಳೆಂದೂ ಜರೆದರೆ, ಅವಳೂ ದುಃಖಿಸುವಳು, ಅವಳ ನೈಜಸ್ಥಿತಿಯನ್ನು ಕಂಡವರಂತೂ ಹೆಚ್ಚಾಗಿ ಶೋಕಿಸುವರು. ಆಗಿನ ಪ್ರಾಜ್ಞರೆಂಬವರು ಅವಳನ್ನು ಗ್ರಾಮ್ಯಬಡಹೆಂಗಸೆಂದು ಜರೆದುದಲ್ಲದೆ, ಮದ್ರಾಸ್ ಬೊಂಬಾಯ್ ಆಧಿಪತ್ಯಗಳ ಸರ್ವವಿದ್ಯಾಶಾಲೆಗಳ ವ್ಯಾಸಂಗಶಾಖೆಗಳಲ್ಲಿ ಅವಳ ಸಹೋದರಿಗಳ ಹತ್ತಿರವೂ ನಿಲಗೊಳಿಸದೆ ಓಡಿಸಲು ಯತ್ನಿಸಿದರು. ಅಯ್ಯೋ! ಸುಂದರಳಾಗಿಯೂ, ಸಂಸ್ಕೃತ ಳಾಗಿಯೂ, ಸಂಪತ್ಸಮೃದ್ಧಳಾಗಿ ಅನೇಕ ರತ್ನಹಾರಗಳಿಂದ ಜಾಜ್ವಲ್ಯಮಾನಳಾ ಗಿಯೂ ತನ್ನ ಅಕ್ಕತಂಗಿಯರಾದ ತಮಿಳು ತೆಲಗು ಸಹೋದರಿಗಳಿಗೆ ಸರ್ವವಿಧದ ಲ್ಲಿಯೂ ಸಮಾನಳು ಇಲ್ಲವೆ ಮೇಲು ಎಂದು ಹೇಳಿಸಿಕೊಳ್ಳುವಷ್ಟು ಯೋಗ್ಯತೆ ಯುಳ್ಳವಳಾಗಿಯೂ ಇದ್ದರೂ ಕನ್ನಡಮಾತೆಗೆ ಉಂಟಾದ ಈ ದುರವಸ್ಥೆಯನ್ನು ನೋಡಿದರೆ ಅವಳಿಗೂ, ಅವಳ ಹಾಲನ್ನು ಕುಡಿದ ಅವಳ ಮಕ್ಕಳಿಗೂ ಹೇಗೆ ತಾನೇ ಸಹಿಸಲಾದೀತು. ಛೀಗಿರಲು ಅವಳ ನೈಜಸ್ಥಿತಿಯನ್ನು ಹೊರಪಡಿಸಿ ಅವಳ ದುರವಸ್ಥೆ ಯನ್ನು ಮಾಣಿಸುವುದು ಅವಳ ಮಕ್ಕಳಿಗೆ ಕರ್ತವ್ಯವಲ್ಲವೇ?

ಆ ಕಾಲದಲ್ಲಿ ಎಂದರೆ ಸರ್ ೧೮೯೦ ನೆಯ ಇಸವಿಯಲ್ಲಿ ಕನ್ನಡಕವಿಶ್ರೇಷ್ಠ ರಾದ ಮ|| ರಾ|| ಎಸ್. ಜಿ. ನರಸಿಂಹಾಚಾರ್ಯರೂ ನಾನೂ ಕನ್ನಡ ಭಾಷಾಮಾ ತೆಯ ಈ ಅಪಯಶಸ್ಸನ್ನೂ ದುಃಸ್ಥಿತಿಯನ್ನೂ ಹೇಗಾದರೂ ಪರಿಹರಿಸಬೇಕೆಂದು

ಯೋಚಿಸಿ ಕನ್ನಡಮಾತೆಯು ಸಂಚರಿಸುತ್ತಿದ್ದ ನಾಡುಗಳಲ್ಲೆಲ್ಲಾ ಸಂಚರಿಸಿ ಅಲ್ಲಲ್ಲಿ ಕೋಣೆಕೋಣೆಗಳಲ್ಲಿ ಅಡಗಿಕೊಂಡು ಮಾಸಿಹೋಗಿದ್ದ ಅವಳ ರತ್ನಗಳನ್ನು ಶೇಖರಿಸಿ ಅವಳ ಸಂಪತ್ತನ್ನು ಪ್ರಕಾಶಗೊಳಿಸಬೇಕೆಂಬ ಯತ್ನವನ್ನು ಮಾಡಿದೆವು. ಅನೇಕ ರತ್ನಗಳನ್ನೂ ಶೇಖರಿಸಿದೆವು. ಅನೇಕ ಭಾಷಾಭಿಮಾನಿಗಳು ನಮ್ಮ ಉದ್ಯಮದಲ್ಲಿ ಸಂತೋಷಿಸಿ ನಮಗೆ ಸಹಾಯಕರಾಗಿಯೂ ಬಂದರು ; ತಮ್ಮಲ್ಲಿದ್ದ ಹಲವು ರತ್ನ ಗಳನ್ನೂ ಕೊಟ್ಟರು ; ಶ್ಲಾಘ್ಯರತ್ನಗಳು ಸಿಕ್ಕುವ ಸ್ಥಳಗಳನ್ನೂ ಹೇಳಿದರು. ಅಲ್ಲಿದ್ದ ರತ್ನಗಳನ್ನು ಉಚಿತವಾಗಿ ಕೊಡಲು ಇಷ್ಟಪಡದವರಿಂದ ಕೆಲವನ್ನು ಕ್ರಯ ಕೊಟ್ಟು ತೆಗೆದುಕೊಂಡೆವು. ಹೀಗೆ ಮೂರುವರ್ಷಕಾಲ ದೇಹಶ್ರಮವನ್ನು ಲಕ್ಷ್ಯಮಾಡದೆ, ಧನವ್ಯಯಕ್ಕೆ ಹಿಂದೆಗೆಯದೆ ಪ್ರಾಚೀನಗ್ರಂಥಗಳ ಭಂಡಾರವೊಂದನ್ನು ಸಿದ್ಧಪಡಿಸಿ ಕೊಂಡೆವು. ಕನ್ನಡ ಭಾಷಾಭಿಮಾನಿಗಳ ಇಲ್ಲವೆ ಭಾಷಾಮಾತೆಯ ದುರದೃಷ್ಟವು ಹೋಗಿ ಅದೃಷ್ಟವು ಉದಯವಾಗುವ ಕಾಲವು ಪ್ರಾಪ್ತವಾಯಿತು. ಸರ್ ೧೮೯೨ ನೆಯ ಇಸವಿ ಏಪ್ರಿಲ್ ತಿಂಗಳಲ್ಲಿ "ಕರ್ಣಾಟಕ ಕಾವ್ಯಮಂಜರಿ" ಯೆಂಬ ಅಭಿ ಧಾನದಿಂದ ಒಂದು ಮಾಸಪತ್ರಿಕೆಯನ್ನು ಹೊರಡಿಸಿದೆವು. ಅದರಲ್ಲಿ ನಾನಾವಿಧ ಪ್ರಾಚೀನಕಾವ್ಯ ನಾಟಕಚ್ಛಂದೋಲಂಕಾರ ವ್ಯಾಕರಣ ನಿಘಂಟು ಕೀರ್ತನ ಮತ ಸಿದ್ಧಾಂತೇತ್ಯಾದಿ ಗ್ರಂಥಗಳನ್ನು ಕ್ರಮವಾಗಿ ಪ್ರಚಾರಿಸುತ್ತಾ ಬಂದೆವು. ಈ ಮಾಸಪತ್ರಿಕೆಯೆಂಬ ಸೂರ್ಯನ ಉದಯವು ಕನ್ನಡ ನಾಡಿನಲ್ಲಿ ಸರ್ವತ್ರ ವ್ಯಾಪಿಸಿದ್ದ ಕತ್ತಲೆಯನ್ನು ತೊಲಗಿಸುತ್ತಾ ಬಂದಿತು. ಆ ಸೂರ್ಯತೇಜಸ್ಸಿನಲ್ಲಿ ಕನ್ನಡಮಾತೆಯ ಮುಖವು ಪ್ರಕಾಶಗೊಂಡಿತು ; ಅವಳ ತೇಜಸ್ಸು ಅನೇಕರ ಹೃದಯದಲ್ಲಿ ಪ್ರತಿಬಿಂಬಿ ಸಿತು. ಅವಳ ಆಭರಣಕಾಂತಿಯು ಅವರ ಕಣ್ಣನ್ನು ಕೊಕ್ಕರಿಸಿತು. ಅವಳು ಆ ಎಳ ಬಿಸಿಲಿನಲ್ಲಿ ಒಯ್ಯಾರದಿಂದ ಸಂಚರಿಸಲು ಹೊರಟಳು ; ತನ್ನ ಹಿರಿಯಕ್ಕನ ಮುಂದೆ ತನ್ನ ಸೊಬಗನ್ನು ತೋರಿಸಲು ತೊಡಗಿದಳು. ಆಗ ಹಿಂದೆ ಕನ್ನಡಮಾತೆಯನ್ನು ಕಣ್ಣೆತ್ತಿಯೂ ನೋಡದವರಲ್ಲಿ ಅನೇಕರು ತಮ್ಮ ಹಿರಿಯರು ಕುಡಿದು ಬೆಳೆದ ಕನ್ನಡ ಮಾತೆಯ ಹಾಲನ್ನು ಶ್ಲಾಘಿಸಿ, ತಾವು ಸಹ ಅದನ್ನು ಸವಿನೋಡಲು ಆರಂಭಿಸಿದರು. ಅನೇಕರು ನಮ್ಮ ಮಾಸಪತ್ರಿಕೆಯನ್ನು ಪ್ರಶಂಸೆ ಮಾಡಿ ನಮ್ಮ ಪತ್ರಿಕೆಗೆ ಚಂದಾ ದಾರರಾದರು. ಮೈಸೂರು ಪ್ರಾಂತದವರೂ ಅಲ್ಲದೆ ಮದ್ರಾಸು ಬೊಂಬಾಯಿ ಕನ್ನಡ ಸೀಮೆಯವರೂ ಚಂದಾದಾರರಾದರು. ಮೈಸೂರು ಸರ್ಕಾರದವರು ಸಂತೋಷ ಪಟ್ಟು ನಮಗೆ ಬೆಂಬಲವಾಗಿ ನಿಂತರು. ಹಲವು ಮಹನೀಯರು ನಮ್ಮ ಸಂಚಿಕೆ ಗಳಲ್ಲಿ ಬರುತ್ತಿದ್ದ ಗ್ರಂಥಗಳನ್ನು ನೋಡಿ ತಮ್ಮ ಸಂತೋಷವನ್ನು ಪತ್ರಮೂಲಕ

ತಿಳಿಸಿದುದಲ್ಲದೆ ತಮ್ಮ ಮಿತ್ರಮಂಡಲಿಗಳಲ್ಲಿ ತಮ್ಮ ಕನ್ನಡಭಾಷೆಯ ಮಹತ್ವವನ್ನು ಹೊಗಳುತ್ತ ಬಂದರು. ಇದಲ್ಲದೆ ತಮ್ಮಲ್ಲಿದ್ದ ಇಲ್ಲವೆ ಸ್ವಪ್ರಯತ್ನದಿಂದ ಸಂಪಾದಿಸಿ ಇಟ್ಟಿದ್ದ ಉದ್ದಾಮಗ್ರಂಥಗಳನ್ನು, ಅವು ಬೆಳಕಿಗೆ ಬಂದು ಕನ್ನಡಮಾತೆಯ ಮಹಿಮೆಯನ್ನು ಬೆಳಗಿದರೆ ಸಾಕೆಂಬ ಅಭಿಮಾನದಿಂದ ಪ್ರತಿಫಲಾಪೇಕ್ಷೆಯಿಲ್ಲದೆ, ನಾವು ಕೇಳದಿದ್ದರೂ ತಾವಾಗಿಯೇ ಕಳುಹಿಸಿಕೊಟ್ಟು ತಮ್ಮ ಉದಾರಾಭಿಮಾನವನ್ನು ತೋರ್ಪಡಿಸಿಕೊಂಡುದಲ್ಲದೆ ನಾವು ಕಾಣಿಕೆಯಾಗಿ ಕಳುಹಿಸಿಕೊಟ್ಟ ಹತ್ತಾರು ಅಚ್ಚಾದ ಪ್ರತಿಗಳಲ್ಲಿ ತೃಪ್ತಿಯನ್ನು ತೋರ್ಪಡಿಸಿದರು. ಹೀಗೆ ಮೂರು ನಾಲ್ಕು ವರ್ಷಗಳಲ್ಲಿ ಹತ್ತು ಹನ್ನೆರಡು ಉತ್ತಮಗ್ರಂಥಗಳು ಪ್ರಚಾರಕ್ಕೆ ಬರುವುದರೊಳಗೆ ಕನ್ನಡಮಾತೆಯ ಮಹತ್ವವು ಸರ್ವತ್ರ ಬೇರೂರುತ್ತ ಬಂದಿತು.

ಉಡುಪಿಯಲ್ಲಿದ್ದ ಮ|| ರಾ|| ಮ. ಸುಬ್ಬರಾಯರೆಂಬವರು ನಮ್ಮ ಪತ್ರಿಕೆಗೆ ಮೊದಲಿಂದಲೂ ಚಂದಾದಾರರಾಗಿದ್ದರು. ಅವರೇ ನಮ್ಮ ಲಕ್ಷ್ಮೀನಾರಣಪ್ಪನವರ ಪ್ರಥಮ ಗುರುಗಳಾದ ಮಳಲಿ ಸುಬ್ಬರಾಯರೆಂದು ಈಗ ನನಗೆ ಗೊತ್ತಾಯಿತು. ಅವರಿಂದ ನಂದಳಿಕೆಯವರು ನಮ್ಮ ಮಾಸಪತ್ರಿಕೆಯ ಸಂಚಿಕೆಗಳನ್ನೆಲ್ಲಾ ಒಂದೊಂದಾಗಿ ತೆಗೆದುಕೊಂಡು ಅವುಗಳಲ್ಲಿ ಬಂದ ಉದ್ಗ್ರಂಥಗಳನ್ನು ಹೃದ್ಗತಮಾಡುತ್ತಿರಬಹುದೆಂದು ನಾನು ಈಗ ಯೋಚಿಸುತ್ತೇನೆ.

ಹೀಗಿರಲು ನಂದಳಿಕೆ ಲಕ್ಷ್ಮೀನಾರಣಪ್ಪನವರು ೧೮೯೫ ನೆಯ ಇಸವಿ ಜನವರಿ ತಾ|| ೧ ರಲ್ಲಿ ಕುಂದಾಪುರದಿಂದ ನಮಗೆ ಒಂದು ಕಾಗದವನ್ನು ಬರೆದರು. ಅದರಲ್ಲಿ * "ಕನ್ನಡ ಗದ್ಯರೂಪದಲ್ಲಿ ಅದ್ಭುತರಾಮಾಯಣವೆಂಬ ಪುಸ್ತಕವು ಇಲ್ಲಿ ಸಿಕ್ಕಿರುತ್ತದೆ. ಅದು ಸರಸವಾಗಿದೆ. ಅವಶ್ಯಕವಾದರೆ ಕಳುಹಿಸುತ್ತೇನೆ" ಎಂಬದಾಗಿ ಬರೆದಿತ್ತು. ಅದಕ್ಕೆ "ಕಳುಹಿಸಿಕೊಡಿ, ಯೋಗ್ಯವಾಗಿ ಕಂಡುಬಂದರೆ ಅದನ್ನು ನಮ್ಮ ಮಾಸಪತ್ರಿಕೆಯಲ್ಲಿ ಮುದ್ರಿಸುತ್ತೇವೆ" ಎಂದು ಬರೆದುದಕ್ಕೆ, ೨-೩-೯೫ ರಲ್ಲಿ ದಯವಿಟ್ಟು ಕಳುಹಿಸಿಕೊಟ್ಟರು. ಆ ಮಾತೃಕೆಯನ್ನು ನೋಡಿದುದರಲ್ಲಿ ಅದು ಹಳಗನ್ನಡದ ಗದ್ಯಶೈಲಿಯಲ್ಲಿ ಬರೆಯಲ್ಪಟ್ಟಿದ್ದರೂ ಆಧುನಿಕ ಗ್ರಂಥದಂತೆ ತೋರಿತು. ಆದರೂ ಹಳಗನ್ನಡದಲ್ಲಿ ಒಂದೆರಡು ಗ್ರಂಥಗಳ ವಿನಾ ಗದ್ಯ ಗ್ರಂಥಗಳು ಆ ಕಾಲದಲ್ಲಿ ಮೃಗ್ಯವಾಗಿರಲಾಗಿ, ಅದನ್ನು ಅಚ್ಚು ಹಾಕುವುದೊಳ್ಳೆಯದೆಂದು ನಿಶ್ಚಯ ಮಾಡಿಕೊಂಡು, ೧೨-೪-೯೫ ರಲ್ಲಿ "ಮೂಲಪ್ರತಿಯನ್ನು ಕೂಡಲೆ ಕಳುಹಿಸಿ

---

* ಮೇಲಿರುವ ಕಾಗದದ ಅನುವಾದಗಳು ನಮ್ಮ ಆಫೀಸಿನ—ಇಂದ—ಗೆ ರಿಜಿಸ್ಟರ್ ಪುಸ್ತಕಗಳಿಂದ ತೆಗೆಯಲ್ಪಟ್ಟುವು.

ಕೊಡುವುದು. ಮತ್ತು ಗ್ರಂಥಕರ್ತನ ವಿಷಯದಲ್ಲಿ ಕಾಲ ಮುಂತಾದ ವಿಷಯಗಳು ನಿಮಗೆ ತಿಳಿದಿದ್ದ ಪಕ್ಷದಲ್ಲಿ ವಿಚಾರಿಸಿ ಬರೆಯುವುದು'' ಎಂದು ಅವರಿಗೆ ಒಂದು ಪತ್ರವನ್ನು ಬರೆದೆವು. ೧೮೯೫ ನೆಯ ಇಸವಿ ಜುಲೈ ತಿಂಗಳ ೪೦ ನೆಯ ಸಂಚಿಕೆಯಲ್ಲಿ ಅದನ್ನು ಮುದ್ರಿಸಲು ಆರಂಭಮಾಡಿದೆವು. ಆಮೇಲೆ ಪುನಃ "ನೀವು ಕಳುಹಿಸಿದ ಮಾತೃಕೆಯಲ್ಲಿ ಬಳಕೆಯಲ್ಲಿಲ್ಲದೆ ಶಬ್ದಮಣಿದರ್ಪಣದ ಸೂತ್ರಬಲದಿಂದ ಕಲ್ಪಿಸಲ್ಪಟ್ಟ ತದ್ಭವಗಳೂ, ಹೊಸಗನ್ನಡ ಪ್ರಯೋಗಗಳೂ ವಿಶೇಷವಾಗಿ ಉಪಯೋಗಿಸಲ್ಪಟ್ಟಿವೆ. 'ಗರವಟ' ಮುಂತಾದ ಹಲವು ಅರ್ಥವಾಗದ ಪದಗಳೂ ಇವೆ. ಮೂಲಪ್ರತಿಯನ್ನು ಅಗತ್ಯವಾಗಿ ಕಳುಹಿಸಿಕೊಡುವುದು. ನಿಮ್ಮ ಕಡೆ ಆ ಶಬ್ದಗಳು ರೂಢಿಯಲ್ಲಿರಬಹುದು. ಅವುಗಳಿಗೆ ಅರ್ಥವು ತಿಳಿದಿದ್ದರೆ ಬರೆಸುವುದು'' ಎಂಬದಾಗಿ ಒಂದು ಕಾಗದವನ್ನು ಬರೆದೆವು. ಅದಕ್ಕೆ ಅವರು "ಮೂಲಪ್ರತಿಯಲ್ಲಿದ್ದಂತೆ ಪ್ರತಿ ಮಾಡಿ ಕಳುಹಿಸಿದ್ದೇನೆ. ಆ ಪದಗಳಿಗೆ ನನಗೂ ಅರ್ಥ ತಿಳಿಯದು. ಕವಿಯ ಕಾಲ ಮುಂತಾದುವು ಗೊತ್ತಾಗುವಂತಿಲ್ಲ. ಆ ಮೂಲಪ್ರತಿ ಕೊಟ್ಟವರು ಈಗ ಊರಲ್ಲಿಲ್ಲ'' ಎಂದು ಬರೆದರು. ಆ ಗ್ರಂಥವನ್ನು ೧೮೯೫ ನೆಯ ಅಕ್ಟೋಬರ್ ತಿಂಗಳಿನ ೪೩ ನೆಯ ಸಂಚಿಕೆಯಲ್ಲಿ ಪೂರ್ತಿಮಾಡಿದೆವು.

ಅದ್ಭುತರಾಮಾಯಣವನ್ನು ಮುದ್ರಿಸಿದಂದಿನಿಂದ ಎಂದರೆ ೪೦ ನೆಯ ಸಂಚಿಕೆಯಿಂದ ನಮ್ಮ ನಂದಳಿಕೆಯವರನ್ನು ನಮ್ಮ ವರ್ಗಣಿದಾರರಲ್ಲಿ ಸೇರಿಸಿಕೊಂಡು ಅವರಿಗೆ ಉಚಿತವಾಗಿ ಮಾಸಪತ್ರಿಕೆಯ ಒಂದೊಂದು ಪ್ರತಿಯನ್ನು ಕಳುಹುತ್ತ ಬಂದೆವು. ಅದ್ಭುತರಾಮಾಯಣವು ಪೂರ್ತಿಯಾಗುವುದಕ್ಕೆ ಮುಂಚಿತವಾಗಿಯೇ ಎಂದರೆ ೨೫-೯-೯೫ ರಲ್ಲಿ ಕುಂದಾಪುರದಿಂದ "ಮಹಾಲಕ್ಷ್ಮಿಯೆಂಬಾಕೆಯಿಂದ ರಚಿತವಾದ ರಾಮಪಟ್ಟಾಭಿಷೇಕವೆಂಬ ಷಟ್ಪದೀ ಗ್ರಂಥವು ಸಿಕ್ಕಿದೆ. ಅದರಲ್ಲಿ ಪದ್ಯಗಳು ೨೫೦ ರೊಳಗಿವೆ. ಗ್ರಂಥವು ಬಹಳ ಚೆನ್ನಾಗಿದೆ. ಮುದ್ರಿಸಲು ಯೋಗ್ಯವೆಂದು ಭಾವಿಸುತ್ತೇನೆ......ಅವಶ್ಯವಾಗಿದ್ದರೆ ಅಪ್ಪಣೆ ಕೊಡಿಸಿ'' ಎಂದು ನಂದಳಿಕೆಯವರು ಮತ್ತೊಂದು ಪತ್ರವನ್ನು ಬರೆದರು. ಕಳುಹಿಸಿಕೊಡುವಂತೆ ನಾವು ಬರೆದಮೇಲೆ ಅದರ ಮೂಲಮಾತೃಕೆಯನ್ನು ಕಳುಹಿಸದೆ ತಮ್ಮ ಕೈಬರಹದ ಒಂದು ಪ್ರತಿಯನ್ನು ೧೮೯೫ ನೆಯ ಸೆಪ್ಟಂಬರಿನಲ್ಲಿ ಅದ್ಭುತರಾಮಾಯಣವು ಮುಗಿಯುವುದಕ್ಕೆ ಮುಂಚೆಯೇ ಕಳುಹಿಸಿಕೊಟ್ಟರು, ಮತ್ತು ಕೆಲವು ಹೊಸ ಸಂಗತಿಗಳನ್ನು ಸಹ ಒಂದು ಕಾರ್ಡಿನಲ್ಲಿ ಬರೆದರು. ಆ ಕಾರ್ಡನ್ನು ನೋಡಿ, ನಾವು ೨೬-೧೦-೯೫ ರಲ್ಲಿ "...ಮಹಾಲಕ್ಷ್ಮಿಯೆಂಬಾಕೆಯ ರಾಮಪಟ್ಟಾಭಿಷೇಕವು ತಲುಪಿತು...ಮಹಾಲಕ್ಷ್ಮಿ

ಯೆಂಬಾಕೆಯ ವಿಷಯದಲ್ಲಿ ಅವಳ ಚರಿತ್ರವೇನಾದರೂ ತಿಳಿದಿದ್ದರೆ ವಿಚಾರಿಸಿ ಬರೆಯುವುದು. ನಿಮ್ಮ ಕಾರ್ಡಿನಲ್ಲಿ ನೀವು ತಿಳಿಸುವ ವೆಂಕಟಸುಬ್ಬಮ್ಮನೆಂಬಾಕೆಯು ಯಾರು ? ಅವಳು ಬರೆದಿರುವ ಗ್ರಂಥಗಳೇನಾದರೂ ಉಂಟೆ ? ಅವುಗಳೇನಾದರೂ ದೊರೆಯುತ್ತವೆಯೆ ? ಮತ್ತ್ಯಾರಾದರೂ ಸ್ತ್ರೀಯರು ನಿಮ್ಮ ಕಡೆ ಗ್ರಂಥಗಳನ್ನು ಬರೆದಿರುತ್ತಾರೆಯೆ ?......'' ಎಂದು ಕೇಳಿ ಒಂದು ಪತ್ರವನ್ನು ಬರೆದೆವು. ಅವರು ಕಳುಹಿಸಿಕೊಟ್ಟ ತಮ್ಮ ಕೈಬರಹದ ರಾಮಪಟ್ಟಾಭಿಷೇಕದ ಮಾತೃಕೆಯಲ್ಲಿ ಹಲವು ಕಡೆಗಳಲ್ಲಿ ಪದಗಳೂ ಎರಡನೆಯ ಸಂಧಿಯ ಮೊದಲ ಮೂರುಪದ್ಯಗಳು ಸಂಪೂರ್ಣವಾಗಿಯೂ ಪಾತವಾಗಿದ್ದುವು ; ಮತ್ತು ಪಾತವಾಗಿಹೋಗಿದ್ದ ಹಲವು ಕಡೆಗಳಲ್ಲಿ ಮಾತ್ರ ಅಲ್ಲಿರಬಹುದಾದ ಭಾಗಗಳನ್ನು ತಾವೇ ಊಹಿಸಿ ಕೆಂಪುಶಾಯಿಯಲ್ಲಿ ಮೇಲೆ ಬರೆದು ಪಕ್ಕದಲ್ಲಿ ಪ್ರಶ್ನೆಯ ಗುರುತನ್ನು (?) ಹಾಕಿದ್ದರು. ಇನ್ನು ಕೆಲವು ಕಡೆಗಳಲ್ಲಿ ಹಾಗೆಯೇ ಬಿಟ್ಟಿದ್ದರು. ನಮ್ಮ ಹಿಂದಿನ ೨೯-೧೦-೯೫ ರ ಪತ್ರಕ್ಕೆ ಬದಲು ಬರುವುದಕ್ಕೆ ಮುಂಚಿತವಾಗಿಯೇ "ಗ್ರಂಥದ ಮೂಲಮಾತೃಕೆಯನ್ನು ಒಂದು ವಾರದ ಮಟ್ಟಿಗಾದರೂ ಕಳುಹಿಸಿಕೊಡಿ ; ಬೇಗನೆ ಸಂಪ್ರತಿಸಿ ಕಳುಹಿಸಿಕೊಡುತ್ತೇನೆ'' ಎಂದು ಭರವಸೆಗೊಟ್ಟು ಮತ್ತೊಂದು ಪತ್ರವನ್ನು ಬರೆದೆವು. ಅದಕ್ಕವರು "ಮೂಲಮಾತೃಕೆಯನ್ನು ಹಿಂದಕ್ಕೆ ಕೊಟ್ಟುಬಿಟ್ಟೆನು, ಯಥಾವತ್ತಾಗಿ ಪ್ರತಿಮಾಡಿದ್ದೇನೆ'' ಎಂದು ಎರಡನೆಯ ಕಾಗದಕ್ಕೆ ಮಾತ್ರ ಬದಲು ಬರೆದರು. ರಾಮಪಟ್ಟಾಭಿಷೇಕವು ಶ್ಲಾಘ್ಯವಾದ ಷಟ್ಪದಿಗ್ರಂಥವಾಗಿ ಕಂಡಬಂದುದರಿಂದ, ಅದ್ಭುತರಾಮಾಯಣವು ಮುಗಿದ ಮರುಸಂಚಿಕೆಯಲ್ಲಿಯೇ ಎಂದರೆ ೯೫ ನೆಯ ನವಂಬರ ೪೪ ನೆಯ ಸಂಚಿಕೆಯಲ್ಲಿ ಆರಂಭಮಾಡಿ, ೯೬ ನೆಯ ಜನವರಿ ೪೬ ನೆಯ ಸಂಚಿಕೆಯಲ್ಲಿ ಮುಗಿಸಿದೆವು. ಅದೇ ಜನವರಿ ೪೬ ನೆಯ ಸಂಚಿಕೆಯಲ್ಲಿ ಅದ್ಭುತರಾಮಾಯಣಕ್ಕೆ ಟಿಪ್ಪಣವನ್ನೂ ಮುಖಪತ್ರವನ್ನೂ ಪೀಠಿಕೆಯನ್ನೂ ಮುದ್ರಿಸಿದೆವು. ಆ ಪೀಠಿಕೆಯಲ್ಲಿ—ಕವಿಯು ಕನ್ನಡದೇಶದ ಬ್ರಾಹ್ಮಣನಾಗಿರಬಹುದು ; ಪ್ರಾಯಶಃ ಈ ಗ್ರಂಥವು ಹಳಗನ್ನಡ ಶೈಲಿಯಲ್ಲಿಯೇ ಬರೆಯಲ್ಪಟ್ಟಿದ್ದರೂ 'ಹೊರಡು' 'ತಬ್ಬಲಿ' ಮೊದಲಾದ ಹೊಸಗನ್ನಡ ಪದಗಳೂ ಮತ್ತು ಪ್ರಯೋಗಗಳೂ ಸಿಕ್ಕುವುದರಿಂದ ಈ ಕವಿಯು ಸುಮಾರು ೧೫೦ ವರ್ಷಗಳಿಗೆ ಈಚೆ ಇದ್ದವನೆಂದು ತೋರುತ್ತದೆ ಎಂದೂ, ಪ್ರಕೃತದಲ್ಲಿ ಕನ್ನಡದಲ್ಲಿ ದೊರೆಯುವ ಉತ್ಕೃಷ್ಟ ಗದ್ಯಗ್ರಂಥಗಳಲ್ಲಿ ಇದೂ ಒಂದಾಗಿದೆಯೆಂದೂ ; ಈ ಗ್ರಂಥಗಳನ್ನು ಕಳುಹಿಸಿಕೊಟ್ಟ ಕುಂದಾಪುರದ ಗವರ್ನಮೆಂಟು ಬೋರ್ಡು ಹೈಸ್ಕೂಲ್ ಮಾಸ್ಟರ್ ಮ|| ರಾ|| ನಂದಳಿಕೆ ಲಕ್ಷ್ಮೀನಾರಣಪ್ಪನವರಿಗೆ

ನಾವು ಬಹಳ ಕೃತಜ್ಞರಾಗಿರುತ್ತೇವೆ ಎಂದೂ ಬರೆದು ಮುದ್ರಿಸಿದೆವು. ೧೬-೬-೯೬ ರಲ್ಲಿ ನಂದಳಿಕೆಯವರಿಗೆ ಅದ್ಭುತರಾಮಾಯಣದ ಹತ್ತು ಮುದ್ರಿತಪುಸ್ತಕಗಳನ್ನು ಬಹುಮಾನವಾಗಿ ಕಳುಹಿಸಿಕೊಟ್ಟೆವು. ತಲಪಿದ ಕೂಡಲೆ ಅದಕ್ಕೆ ಅಭಿನಂದನವನ್ನು ಬರೆದರು.

ನಾನು ಶ್ರೀರಾಮಪಟ್ಟಾಭಿಷೇಕಕ್ಕೆ ಟೀಕೆಯನ್ನು ಬರೆಯಲು ತೊಡಗಿ ೨೭-೧೧-೯೬ ರಲ್ಲಿ ಅವರಿಗೆ " ನನಗೆ ನಾಂದೀಸಂಧಿಯ ೮, ೯ ಪದ್ಯಗಳು, ಪೀಠಿಕಾ ಸಂಧಿಯ ೧೦ ನೆಯ ಪದ್ಯ, ಸಂಧಿ ೫,೬೨ ನೆಯ ಪದ್ಯ ಈ ಪದ್ಯಗಳಿಗೆ ಸಮಂಜಸವಾಗಿ ಅರ್ಥವಾಗಲಿಲ್ಲ. ಮೂಲಪ್ರತಿಯನ್ನು ಹೇಗಾದರೂ ಮಾಡಿ ಕಳುಹಿಸಿ ಕೊಡಿ. ಮೇಲೆ ಕಂಡ ಪದ್ಯಗಳಿಗೆ ಅರ್ಥವಾಗಿದ್ದರೆ ಬರೆಯುವುದು. ಆ ಕವಿಯ ವಿಚಾರವಾಗಿ ಆ ಕಡೆ ಜನರು ಹೇಳುತ್ತಿರುವ ಸಮಾಚಾರವನ್ನು ತಿಳಿಸುವುದು" ಎಂದು ಪತ್ರವನ್ನು ಬರೆದೆನು. ಅದಕ್ಕವರು, ತಮಗೂ ಆ ಪದ್ಯಗಳಿಗೆ ಸಮಂಜಸವಾಗಿ ಅರ್ಥವಾಗುವುದಿಲ್ಲ ; ಮೂಲಪ್ರತಿಯೂ ಸಿಕ್ಕುವುದಿಲ್ಲ ; ಕವಿಯ ವಿಚಾರವಾಗಿ ಈಕಡೆ ಹೇಳುವರು ಯಾರೂ ಇಲ್ಲ, ಎಂದು ಬದಲು ಬರೆದರು. ಈ ಗ್ರಂಥವನ್ನು ೯೬ ನೆಯ ಜನವರಿ ಸಂಚಿಕೆಯಲ್ಲಿ ಅಚ್ಚುಮಾಡಿ ಮುಗಿಸಿದ್ದರೂ ಇದರ ಪ್ರಶಸ್ತಿ ಕವಿಚರಿತ್ರೆ ಮೊದಲಾದುವುಗಳಿಗೆ ಸೂಚನೆ ಸಿಕ್ಕುವುದೋ ಎಂಬ ಕಾಂಕ್ಷೆಯಿಂದ ಅವನ್ನು ಬರೆದು ಮುದ್ರಿಸದೆ ಒಂದು ವರ್ಷಕಾಲ ಸಾವಕಾಶ ಮಾಡಿದೆವು. ನಂದಳಿಕೆ ಲಕ್ಷ್ಮೀನಾರಣಪ್ಪನವರ ಬದಲಿಂದ ನಿರಾಶರಾಗಿ ಈ ಗ್ರಂಥದಿಂದಲೇ ಊಹಿಸುವಷ್ಟು ಸಂಗತಿಗಳನ್ನು ಬರೆದು ಗ್ರಂಥಪೀಠಿಕೆಯನ್ನು ೧೮೯೭ ನೆಯ ಜನವರಿ ೫೮ ನೆಯ ಸಂಚಿಕೆಯಲ್ಲಿ ಮುದ್ರಿಸಿದೆವು. ಆ ಪೀಠಿಕೆಯಲ್ಲಿ

"ಈ ಗ್ರಂಥವನ್ನು ರಚಿಸಿದವಳು ಮಹಾಲಕ್ಷ್ಮಿ. ಈಕೆಯು ಉಡುಪಿ ಕ್ಷೇತ್ರದ ಚಾವಡಿ ರಂಗಭಟ್ಟನ ಮಗಳೆಂದೂ, ಕನ್ನಡಿತಿ ಚಂಗಳದೇವಿಯ ಇಷ್ಟಾನುಸಾರ ಈ ಗ್ರಂಥವನ್ನು ಬರೆದಂತೆಯೂ ತಿಳಿಯಬರುತ್ತದೆ. ಒಂದುವೇಳೆ ಬ್ರಾಹ್ಮಣಿತಿಯಾಗಿರಬಹುದು........ಷಡಕ್ಷರಿದೇವನನ್ನು ಸ್ಮರಿಸಿರುವುದರಿಂದ ಕ್ರಿ. ಶ. ೧೬೨೭ ಕ್ಕೆ ಈಚಿನವಳಾಗಿರಬೇಕು........ಈಕೆಗೆ ಸಂಸ್ಕೃತದಲ್ಲಿಯೂ ಪೂರ್ಣ ಪಾಂಡಿತ್ಯವಿದ್ದಂತೆ ಗ್ರಂಥದಿಂದಲೇ ವ್ಯಕ್ತವಾಗುತ್ತದೆ. ಈ ಗ್ರಂಥವು ಪ್ರೌಢವಾಗಿಯೂ, ಮನೋಹರವಾಗಿಯೂ ನೀತಿಬೋಧಕವಾಗಿಯೂ ಇದೆ........ಇದನ್ನು ಕಳುಹಿಸಿಕೊಟ್ಟ ನಂದಳಿಕೆ ಲಕ್ಷ್ಮೀನಾರಣಪ್ಪನವರಿಗೆ ಕೃತಜ್ಞರಾಗಿರುತ್ತೇವೆ"

ಎಂದು ಬರೆದು ಮುದ್ರಿಸಿದೆವು.

ನಂದಳಿಕೆಯವರು ಆಗಾಗ ನಮ್ಮ ಪ್ರಾರ್ಥನೆಯ ಮೇರೆ ಅವರ ಪ್ರಾಂತದಲ್ಲಿ ಸಿಕ್ಕುವ ಅನೇಕ ಗ್ರಂಥಗಳಿಗೆ ಅಲ್ಲಿ ಸಿಕ್ಕುವ ಪುಸ್ತಕಗಳ ಪ್ರತಿ ಬರೆದು ಕಳುಹಿಸಿ

ಕೊಡುತ್ತಿದ್ದರು. ಮಲ್ಲಿಕಾರ್ಜುನನ ಕಾಮಶಾಸ್ತ್ರ, ಹರಿಶ್ಚಂದ್ರಕಾವ್ಯ, ಉತ್ತರ ರಾಮಾಯಣ ಇವುಗಳನ್ನು ಸಂಪ್ರತಿಮಾಡಿ ಕಳುಹಿಸಿದುದಲ್ಲದೆ, ಅಲ್ಲಿ ಸಿಕ್ಕುವ ಇತರ ಗ್ರಂಥಗಳ ವಿಷಯವಾಗಿ ತಮಗೆ ತಿಳಿದುಬರುವ ಸಂಗತಿಗಳನ್ನು ಸಹ ಬರೆಯುತ್ತಿದ್ದರು. ಈ ರೀತಿಯಲ್ಲಿಯೂ ಪತ್ರಮುಖೇನ ಅವರಿಗೂ ನಮಗೂ ಸ್ನೇಹ ವುಂಟಾದುದಕ್ಕೆ ಸಂತೋಷಪಡುತ್ತೇವೆ. ಹಾಗೆಯೇ ಪ್ರಕೃತವಿಚಾರದ ಗ್ರಂಥ ಗಳಿಗೂ ಮಾತೃಕೆಗಳನ್ನು ಕಳುಹಿಸಿದರೆಂದು ನಾವು ತಿಳಿದಿದ್ದೇವೇ ಹೊರತು, ಈ ಎರಡು ಗ್ರಂಥಗಳು ಇವರೇ ಬರೆದವೆಂದು ಸ್ವಲ್ಪವೂ ನಮಗೆ ಸಂಶಯವುಂಟಾಗಿರಲಿಲ್ಲ. ಮದ್ರಾಸ್ ಯೂನಿವರ್ಸಿಟಿಯಲ್ಲಿ ೧೮೯೫ ನೆಯ ಎಫ್. ಎ. ಪರೀಕ್ಷೆಗೆ ಈ ಎರಡು ಗ್ರಂಥಗಳೂ ಪಾಠ್ಯಗ್ರಂಥಗಳಾಗಿ ನಿಯಮಿಸಲ್ಪಟ್ಟುವು. ಆಗಲೂ ನಾವು ಆ ಆ ಗ್ರಂಥವಿಚಾರದಲ್ಲಿ ಆ ಆ ಪೀಠಿಕೆಗಳಲ್ಲಿ ಬರೆದಿದ್ದ ವಿಷಯಗಳೆಲ್ಲವೂ ನಿಜವಾದು ವೆಂದು ಸರ್ವತ್ರ ನಂಬಿಕೆಯಿತ್ತೆಂದು ತೋರುತ್ತದೆ. ಹಾಗಿಲ್ಲದಿದ್ದಪಕ್ಷದಲ್ಲಿ ಅವರೇ ಆಗಲಿ, ಅವರ ಮಿತ್ರರೇ ಆಗಲಿ, ಈ ವಿಷಯವಾಗಿ ವಿಪ್ರತಿಪತ್ತಿಯನ್ನು ನಮಗೆ ಬರೆಯುತ್ತಿದ್ದರು.*

ಇದು ಹಾಗಿರಲಿ. ಬಳಿಕ ಸುಮಾರು ೧೮೯೭ ನೆಯ ಸೆಪ್ಟಂಬರ್ ತಿಂಗಳಲ್ಲಿ ನಮ್ಮ ನಂದಳಿಕೆಯವರು ನಮಗೆ " ಮುದ್ದಣಕೃತವಾದ ರಾಮಾಶ್ವಮೇಧವೆಂಬ ಗದ್ಯಗ್ರಂಥವು ಸಿಕ್ಕಿದೆ. ಅದು ನಿಮ್ಮ ಸಂಚಿಕೆಯಲ್ಲಿ ಮುದ್ರಿತವಾಗಲು ಯೋಗ್ಯ ವಾಗಿದೆಯೆಂದು ತೋರುತ್ತದೆ. ಅಪ್ಪಣೆಯಾದರೆ ಕಳುಹಿಸಿಕೊಡುತ್ತೇನೆ " ಎಂದು ಪತ್ರವನ್ನು ಬರೆದರು. ನಮ್ಮ ಪ್ರಾರ್ಥನೆಯ ಮೇರೆ ಸ್ವಹಸ್ತಾಕ್ಷರದಲ್ಲಿಯೇ ಬರೆದ ಅದರ ಪ್ರತಿಯನ್ನು ಅಕ್ಟೋಬರ್ ತಿಂಗಳಲ್ಲಿ ಕಳುಹಿಸಿಕೊಟ್ಟರು. ನಮ್ಮ ಮಾಸ ಪತ್ರಿಕೆಗೆ ಪ್ರೊಪ್ರೈಟರುಗಳಲ್ಲಿ ಒಬ್ಬರಾಗಿದ್ದ ಕುಮಾರಸ್ವಾಮಿ ತಿರುಮಲಾಚಾರ್ಯರು ಗತಿಸಿದ್ದರಿಂದ ನಮ್ಮ ಪತ್ರಿಕೆಯನ್ನು ನಿಲ್ಲಿಸಿಬಿಡಬೇಕಾಯಿತು. ಸರ್ ೧೮೯೯ ನೆಯ ಇಸವಿ ಜುಲೈ ತಿಂಗಳಲ್ಲಿ ನಾನೂ ಎಸ್. ಜಿ. ನರಸಿಂಹಾಚಾರ್ಯರೂ ಇಬ್ಬರೇ ಅದೇ ಮಾದರಿಯ " ಕರ್ಣಾಟಕ ಕಾವ್ಯಕಲಾನಿಧಿ " ಯೆಂಬ ಹೊಸಮಾಸಪತ್ರಿಕೆಯನ್ನು ಹೊರಡಿಸಿದೆವು. ಕಾವ್ಯಮಂಜರಿಯು ನಿಂತು, ಈ ಹೊಸಪತ್ರಿಕೆಯು ಹೊರಡುವು

* ರಾಮಾಶ್ವಮೇಧ ಗ್ರಂಥವನ್ನು ಮುದ್ರಿಸಲು ಆರಂಭಮಾಡಿ ಅದರ ೧೧೨ ಪುಟಗಳು ಅಚ್ಚಾಗುವವರೆಗೂ ಎಲ್ಲ ಮುದ್ದಣನೇ ಗ್ರಂಥಕರ್ತೃವೆಂದು ನಂಬುತ್ತಿದ್ದು, ಆ ಗ್ರಂಥವನ್ನು ಸ್ವಹಸ್ತದಿಂದಲೇ ಬರೆದು ಕಳುಹಿಸಿಕೊಟ್ಟ ನಂ. ಲಕ್ಷ್ಮೀನಾರಣಪ್ಪನವರು ಕಾಲವಾದಮೇಲೆ ಇವರೇ ಅದ್ಭುತರಾಮಾಯಣ, ರಾಮಪಟ್ಟಾಭಿಷೇಕ, ರಾಮಾಶ್ವಮೇಧಗಳಿಗೆ ಕರ್ತೃವೆಂದು ಕನ್ನಡಜಿಲ್ಲೆ ಯವರು ಮಾತ್ರ ಹೇಳಲು ತೊಡಗಿದರು.

ದಕ್ಕೆ ಸುಮಾರು ಒಂದುವರ್ಷ ಮೂರುತಿಂಗಳ ಕಾಲವಾಯಿತು. ಈ ಮಧ್ಯೇ ಲಕ್ಷ್ಮೀನಾರಣಪ್ಪನವರು, "ನಿಮ್ಮ ಮಾಸಪತ್ರಿಕೆಯು ನಿಂತಹಾಗಿದೆ. ರಾಮಾಶ್ವ ಮೇಧಕ್ಕೆ ಅಚ್ಚಾಗುವ ಸಂದರ್ಭವು ದೊರಕದಿದ್ದರೆ ನನ್ನ ಪ್ರತಿಯನ್ನು ವಾಪಸ್ಸು ಕಳುಹಿಸಿಕೊಡಿ" ಎಂದು ಪತ್ರಬರೆದರು. ನಾವು "ಬೇರೆ ಹೆಸರಿನಲ್ಲಿ ಶೀಘ್ರದಲ್ಲಿಯೇ ಒಂದು ಹೊಸ ಮಾಸಪತ್ರಿಕೆಯನ್ನು ಹೊರಡಿಸುತ್ತೇವೆ. ಅದರಲ್ಲಿ ಅದನ್ನು ಅಚ್ಚು ಹಾಕಬೇಕೆಂದಿದ್ದೇವೆ" ಎಂದು ಬರೆದೆವು. ಕಲಾನಿಧಿ ಸಂಚಿಕೆಯಲ್ಲಿ ೧ನೆಯ ಸಂಚಿಕೆಯಿಂದ ೮ ರ ವರಿಗೆ ರಾಮಾಶ್ವಮೇಧವನ್ನು ಮುದ್ರಿಸಿ ಕ್ರಮವಾಗಿ ಕೊಡುತ್ತಾಬಂದೆವು. ಆ ವೇಳೆಗೆ ಅದರಲ್ಲಿ ೧೧೨ ಪುಟಗಳು ಅಚ್ಚಾಗಿಬಂದುವು. ಕಾರಣಾಂತರದಿಂದ ೯ ನೆಯ ಸಂಚಿಕೆಯಿಂದ ೧೪ ರ ವರೆಗೆ ರಾಮಾಶ್ವಮೇಧವನ್ನು ಮುದ್ರಿಸಲು ಅನುಕೂಲಿಸಲಿಲ್ಲ. ೧೯೦೧ ನೆಯ ಜೂನ್ ೨೭ ರಲ್ಲಿ ಪ್ರಚಾರಿಸಿದ ೧೪, ೧೫, ೧೬ ನೆಯ ಸಂಚಿಕೆಯಲ್ಲಿ ಪುನಃ ಅದನ್ನು ತೊಡಗಿ ೧೫-೮-೧೯೦೧ರಲ್ಲಿ ಹೊರಟ ೧೭-೧೮ ನೆಯ ಸಂಚಿಕೆಯಲ್ಲಿ ಮುಗಿಸಿ, ಅದರ ಮುಖಪತ್ರವನ್ನು ಸಹ ಕೊಟ್ಟೆವು. ಈ ಗ್ರಂಥಕ್ಕೆ ಪೀಠಿಕೆಯನ್ನು ಬರೆಯಲು ಅಪೇಕ್ಷಿಸಿ, ೧೯೦೦ ನೆಯ ಜೂನ್ ೨೫ ರಲ್ಲಿ ನಂದಳಿಕೆಯವರಿಗೆ ಒಂದು ಕಾಗದವನ್ನು ಬರೆದೆವು. ಅದರಲ್ಲಿ "ನೀವು ಕಳುಹಿಸಿಕೊಟ್ಟ ರಾಮಾಶ್ವಮೇಧದ ಶೈಲಿಯು ಅದ್ಭುತರಾಮಾಯಣದ ಶೈಲಿಯನ್ನು ಬಲುಮಟ್ಟಿಗೆ ಹೋಲುತ್ತದೆ. ಅದ್ಭುತರಾಮಾಯಣದ ಬರೆವಣಿಗೆಯು ಬಾಲ್ಯಾವಸ್ಥೆಯದು, ಇದು ಅದರ ಪ್ರೌಢಾವಸ್ಥೆಯದು ಎಂಬದಾಗಿ ತೋರುತ್ತದೆ. ಕಾವ್ಯಮಂಜರಿಯಲ್ಲಿ ಬಂದ ಮಲ್ಲಿನಾಥಪುರಾಣ ವಂಶಾವಳಿ ಮೊದಲಾದ ಕಾವ್ಯ ಮಂಜರಿಯಲ್ಲಿ ಬಂದ ಮಲ್ಲಿನಾಥಪುರಾಣ ವಂಶಾವಳಿ ಮೊದಲಾದ ಕಾವ್ಯಗಳ ಭಾಗಾನುವಾದಗಳೂ ಪರಿಪಾಟಿಯೂ ಅದ್ಭುತರಾಮಾಯಣದಲ್ಲಿಲ್ಲ. ಇದರಲ್ಲಿ ಇವೆ. ಬಹುಶಃ ಯಾರೋ ಆಧುನಿಕರು ಇದನ್ನು ಬರೆದಿರಬೇಕು. ಅವರು ನಿಮ್ಮ ಸ್ನೇಹಿತ ರಾಗಿರಬೇಕು ಇಲ್ಲವೇ ನೀವೇ ಆಗಿರಬೇಕೆಂದು ಊಹಿಸುತ್ತೇವೆ. ಗ್ರಂಥವು ಪ್ರೌಢ ವಾಗಿದೆ; ಆಧುನಿಕರಾಗಿದ್ದರೂ ಬಾಧಕವಿಲ್ಲ, ಅವರ ಹೆಸರನ್ನು ಪ್ರಚಾರಗೊಳಿಸಲು ಸಿದ್ಧರಾಗಿದ್ದೇವೆ. ಖಂಡಿತವಾಗಿ ತಿಳಿಸುವುದು" ಎಂದು ಬರೆದೆವು. ಅದಕ್ಕವರು ತಾವಲ್ಲವೆಂದೂ ಹಿಂದೆ ಬರೆದಿದ್ದಹಾಗೆಯೇ ಸಿಕ್ಕಿದ ಮಾತೃಕೆಯಂತೆಯೇ ಇದನ್ನು ಬರೆದಹಾಗೆಯೂ ಬದಲು ಬರೆದರು.

ಸರ್ ೧೯೦೦ ನೆಯ ಡಿಸೆಂಬರ್ ತಿಂಗಳಲ್ಲಿ ಮ|| ರಾ|| ಬೆನಗಲ್ ರಾಮ ರಾಯರು ಮೈಸೂರಿನ ನಾರ್ಮಲ್ ಸ್ಕೂಲಿಗೆ ಉಪಾಧ್ಯಾಯರಾಗಿ ಬಂದಹಾಗೆ

ಜ್ಞಾಪಕವಿದೆ. ಅವರಿಗೂ ನಮ್ಮ ಮಿತ್ರರು ಎಸ್. ಜಿ. ನರಸಿಂಹಾಚಾರ್ಯರಿಗೂ ಪ್ರಕೃತ ಗ್ರಂಥಗಳ ಕರ್ತೃವಿನ ವಿಚಾರವಾಗಿ ಸಂಭಾಷಣೆಯು ನಡೆಯಿತು. ಆಗ ನಮ್ಮ ನಂದಳಿಕೆಯವರೇ ಈ ಗ್ರಂಥಗಳಿಗೆ ಕರ್ತೃವಾಗಿರಬಹುದೆಂಬ ಸಂಶಯವು ನಮ್ಮಲ್ಲಿ ಅಂಕುರಿತವಾಯಿತು. ಆಮೇಲೆ ಈ ಸಂಶಯವನ್ನು ಪರಿಹರಿಸಿಕೊಳ್ಳಲು ಕೂಡಲೆ ನಂದಳಿಕೆಯವರಿಗೇ ಒಂದು ಪತ್ರವನ್ನು ಬರೆದೆವು. ಅದಕ್ಕೆ ಪ್ರತ್ಯುತ್ತರವೇ ಬರಲಿಲ್ಲ. ಇದಕ್ಕೆ ಕಾರಣವು ಪ್ರಬುದ್ಧ ಕರ್ಣಾಟಕದ ಮರ್ದ್ದಣನ ಸಂಚಿಕೆಯನ್ನು ನೋಡಿದ ಮೇಲೆ ನನಗೆ ಗೊತ್ತಾಯಿತು. ನಂದಳಿಕೆ ಲಕ್ಷ್ಮೀನಾರಣಪ್ಪನವರು ರಾಮಾಶ್ವಮೇಧವು ಪೂರ್ತಿಯಾಗಿ ಮುದ್ರಿತವಾದುದನ್ನು ನೋಡಲಿಲ್ಲವಲ್ಲಾ ಎಂಬ ಕೊರತೆಯು ಈಗ ನನ್ನನ್ನು ಬಾಧಿಸುತ್ತಿದೆ. ಮಂಗಳೂರ ಸೇಯಿಂಟ್ ಎಲೊಸಿಯೆಸ್ ಕಾಲೇಜು ಪ್ರಿನ್ಸಿಪಾಲ್‌ರವರು " ನಂದಳಿಕೆ ಲಕ್ಷ್ಮೀನಾರಣಪ್ಪನವರೇ ಈ ಮೂರು ಗ್ರಂಥಗಳನ್ನು ರಚಿಸಿದವರು, ನಾವು ಖಂಡಿತವಾಗಿ ಬಲ್ಲೆವು. ಅವರ ಹೆಸರನ್ನು ಗ್ರಂಥಕರ್ತರನ್ನಾಗಿ ರಾಮಾಶ್ವಮೇಧದ ಮುಖಪತ್ರದಲ್ಲಿ ಪ್ರಚಾರಪಡಿಸಿರಿ " ಎಂದು ನಮಗೆ ಒಂದು ಕಾಗದವನ್ನು ಬರೆದರು. ಹೀಗಾಗಲು ಈ ಗ್ರಂಥಗಳ ಕರ್ತೃವಿನ ವಿಚಾರವು ನಿಸ್ಸಂದೇಹವಾಗಿ ಇತ್ಯರ್ಥವಾದ ಮೇಲೆಯೇ ಇದಕ್ಕೆ ಪೀಠಿಕೆಯನ್ನು ಬರೆಯೋಣವೆಂದು ಒಂದುವರ್ಷಕಾಲ ತಾತ್ಸಾರಮಾಡಿ ೧೯೦೨ ನೆಯ ನವಂಬರ್ ೨೯ ನೆಯ ಸಂಚಿಕೆಯಲ್ಲಿ ನಿರ್ವಾಹವಿಲ್ಲದೆ ಇದರ ಪೀಠಿಕೆಯನ್ನು ಕೊಡಬೇಕಾಯಿತು. ಆ ಪೀಠಿಕೆಯಲ್ಲಿ,

" ನಂದಳಿಕೆ ಲಕ್ಷ್ಮೀನಾರಣಪ್ಪನವರೇ ಅದ್ಭುತರಾಮಾಣವನ್ನೂ ರಾಮಪಟ್ಟಾಭಿಷೇಕವನ್ನೂ ರಾಮಾಶ್ವಮೇಧವನ್ನೂ ಬೇರೆಬೇರೆ ಹೆಸರಿನಿಂದ ಬರೆದುದಾಗಿ ಕೆಲವರು ಅಭಿಪ್ರಾಯ ಪಡುತ್ತಾರೆ. ಇದು ಎಷ್ಟುಮಟ್ಟಿಗೆ ನಿಜವೋ ನನಗೆ ತಿಳಿಯದು........ಈ ಲೇಖನಗಳಿಂದ ಇವರೇ ಗ್ರಂಥಕರ್ತರೆಂಬ ತಾತ್ಪರ್ಯವು ಹೊರಪಡುವುದಿಲ್ಲ. ಆದ ಪ್ರಯುಕ್ತ ಇದರ ಕೂಲಂಕಷವಾದ ವಿಚಾರವನ್ನು ಲಕ್ಷ್ಮೀನಾರಣಪ್ಪನವರ ಮಿತ್ರಮಂಡಲಿಗೆ ಬಿಟ್ಟಿರುತ್ತೇವೆ "

ಎಂದು ಬರೆದೆವು.

ಇನ್ನು ಪ್ರಕೃತಗ್ರಂಥಗಳ ಕರ್ತೃವಿನ ವಿಚಾರವಾಗಿ ನನ್ನ ನಿಶ್ಚಿತಾಭಿಪ್ರಾಯವನ್ನು ಬರೆಯುತ್ತೇನೆ.

**ಅದ್ಭುತರಾಮಾಯಣ:—**

ಈ ಗ್ರಂಥವನ್ನು ಬರೆದವರು ಯಾವನೋ ಎಂಬ ಅನುಮಾನವು ಈಗ ಸ್ವಲ್ಪ ಮಟ್ಟಿಗೆ ಪರಿಚ್ಛೇದವಾಯಿತೆಂದು ಹೇಳಬಹುದು. ಮ|| ರಾ|| ಚೆನ್ನಕೇಶವಯ್ಯಂಗಾರ್ಯರಲ್ಲಿರುವ ಪ್ರತಿಯೂ ನಮ್ಮಲ್ಲಿರುವ ನಂದಳಿಕೆ ಲಕ್ಷ್ಮೀನಾರಣಪ್ಪನವರ ಕೈಬರಹದ

ಪುಸ್ತಕಗಳೂ ಒಂದೇ ಜಾತಿಯಾದ ಅಕ್ಷರದಲ್ಲಿರುವುದರಿಂದಲೂ, ಅದರ ಮುಖಪತ್ರದಲ್ಲಿ " ನಂದಳಿಕೆ ಲಕ್ಷ್ಮೀನಾರಾಯಣನಿಂ ರಚಿಸಲ್ಪಟ್ಟುದು. ೧೮೯೪ " ಎಂದಿರುವುದರಿಂದಲೂ, ಈ ಗ್ರಂಥಕ್ಕೆ ನಂದಳಿಕೆ ಲಕ್ಷ್ಮೀನಾರಣಪ್ಪನವರೇ ಕರ್ತೃವೆಂದು ಹೇಳಬೇಕಾಗುತ್ತದೆ. ಚೆನ್ನಕೇಶವಯ್ಯಂಗಾರ್ಯರ ಪುಸ್ತಕವು ಸಂಸ್ಕೃತ ಪುರಾಣ ಕಥಾನುವಾದವಾಗಿ ಮೊದಲು ಬರೆದ ಪ್ರತಿಯೆಂದು ಊಹಿಸುತ್ತೇನೆ. ಅದನ್ನು ಗ್ರಂಥಕರ್ತರು ೧೮೯೪ ರಲ್ಲಿ ಬರೆದು ಮುಗಿಸಿರಬೇಕು. ಲಕ್ಷ್ಮೀನಾರಣಪ್ಪನವರು ಅದನ್ನು ಕರ್ಣಾಟಕಕಾವ್ಯಮಂಜರಿಯಲ್ಲಿ ಮುದ್ರಿಸಲ್ಪಡುವಂತೆ ಮಾಡಬೇಕೆಂಬ ಉದ್ದೇಶದಿಂದ ಪುನಃ ಪರಿಶೀಲನೆಮಾಡಿ, ಗ್ರಂಥಕರ್ತರ ಹೆಸರನ್ನಡಗಿಸಿ, ಅವರಲ್ಲಿ ಕೆಲವು ಭಾಗಗಳನ್ನು ತೆಗೆದುಹಾಕಿ, ಕೆಲವುಕಡೆ ಪರಿಷ್ಕರಿಸಿ ತಿದ್ದಿ ಅದಕ್ಕೆ ಬೇರೆ ಪ್ರತಿಯನ್ನು ಬರೆದು ನಮಗೆ ಕಳುಹಿಸಿ ಕೊಟ್ಟರೆಂದು ಯೋಚಿಸುತ್ತೇನೆ. ಈ ಪ್ರತಿಯನ್ನು ೧೮೯೫ ರಲ್ಲಿ ನಮಗೆ ಕಳುಹಿಸಿಕೊಟ್ಟರು. ಚೆನ್ನಕೇಶವಯ್ಯಂಗಾರ್ಯರು ತಮ್ಮ ಪ್ರತಿಯಲ್ಲಿ ಹಲವು ಅಧ್ಯಾಯಗಳು ನಮ್ಮ ಪ್ರತಿಯಲ್ಲಿರುವುದಕ್ಕಿಂತ ಅಧಿಕವಾಗಿವೆ ಎಂದು ಹಿಂದೆ ನನ್ನೊಡನೆ ಹೇಳಿದ್ದರು.

ಗ್ರಂಥಕರ್ತರಿಗೆ ತಮ್ಮ ಹೆಸರನ್ನು ಗ್ರಂಥದಲ್ಲಿ ಕೊಟ್ಟರೆ ಹಳೆಯ ಕವಿಗಳದ್ದಲ್ಲವೆಂದು ಎಲ್ಲಿ ಹಿಂದಟ್ಟುವರೋ ಎಂಬ ಭೀತಿಯೊಂದುಕಡೆ, ಬುದ್ಧಿಬಲದಿಂದ ರಚಿತವಾದುದಾಗಿರಲಾಗಿ ಅನೇಕವಾಗಿ ಅಪಭ್ರಂಶಗಳು ಬಿದ್ದಿವೆಯೋ ಎಂಬ ಶಂಕೆಯೊಂದುಕಡೆ, " ಆಪರಿತೋಷಾದ್ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಂ " ಎಂಬ ರೀತಿಯಲ್ಲಿ ಈ ಗ್ರಂಥದ ಮೂಲಕ ತಮ್ಮ ಕವಿತಾಶಕ್ತಿಯನ್ನು ನಿಕಷದಲ್ಲಿಟ್ಟು ತಿಳಿದುಕೊಳ್ಳೋಣವೆಂಬ ಆಶಯವೊಂದುಕಡೆ—ಈ ಕಾರಣಗಳಿಂದ ಅವರು ತಮ್ಮ ಹೆಸರನ್ನು ಕೊಡಲಿಲ್ಲವೆಂದು ಊಹಿಸುತ್ತೇನೆ. ಮತ್ತು ನಾನು ಅವರನ್ನು ಗರವಟದ ಸನ್ನೆಯ, ಕಸಿಕಿಸಿ ಮೊದಲಾದ ಪದಗಳ ಅರ್ಥವನ್ನು ಕೇಳಿದಾಗಲೂ, ಹೊರಡು ತಬ್ಬಲಿ ಮೊದಲಾದ ಹಲವು ಆಧುನಿಕಪ್ರಯೋಗಗಳನ್ನು ಅವರಿಗೆ ಕಾಗದದ ಮೂಲಕ ತೋರಿಸಿದಾಗಲೂ ತಮ್ಮ ತಪ್ಪು ತಮಗೆ ತಿಳಿದುಬಂದುದರಿಂದ, ಆ ವಿಷಯವಾದ ನಮ್ಮ ಕಾಗದಕ್ಕೆ ಅವರು ಸರಿಯಾಗಿ ಜವಾಬು ಬರೆಯಲಿಲ್ಲವೆಂದು ತೋರುತ್ತದೆ. ಜೈಮಿನಿಯಲ್ಲಿ ಇಂಥ ಹಲವು ಪ್ರಯೋಗಗಳನ್ನು ಕಂಡು ಅವು ಹಳೆಯ ಪ್ರಯೋಗಸರಣಿಯೆಂದು ಅವರು ಭಾವಿಸಿಕೊಂಡು ಉಪಯೋಗಿಸಿರಬಹುದು. ಚೆನ್ನಕೇಶವಯ್ಯಂಗಾರ್ಯರ ಪುಸ್ತಕದ ಮುಖಪತ್ರವು ಬಹಿರಂಗವಾಗುವುದಕ್ಕೆ ಮುಂಚೆ ಗ್ರಂಥಕರ್ತನ ವಿಚಾರವಾದ ಅನುಮಾನವು ನನಗೆ ಪರಿಹಾರವಾಗಿರಲಿಲ್ಲವಾಗಿ ಸರ್

೧೯೧೮ ರಲ್ಲಿ ನಾನು ಕೈಕೊಂಡ ಅದ್ಭುತರಾಮಾಯಣದ ದ್ವಿತೀಯಮುದ್ರಣದ ಪೀಠಿಕೆಯಲ್ಲಿ—"ಇವರೇ (ಲಕ್ಷ್ಮೀನಾರಣಪ್ಪನವರೇ) ಗ್ರಂಥಕರ್ತರಾಗಿದ್ದರೂ ಇರಬಹುದು......ಇವರಷ್ಟು ಸಮರ್ಥರಾದ ಕವಿಗಳು ಇಲ್ಲವೇ ಇಲ್ಲವೆಂದು ಹೇಳಬಹುದು. ಇವರ ಪದಶಕ್ತಿಯು ಅದ್ಭುತವಾದುದು. ಗದ್ಯಗ್ರಂಥಗಳು ವಿರಳವಾಗಿದ್ದ ಕಾಲದಲ್ಲಿ ಇಂತಹ ಉತ್ಕೃಷ್ಟಗ್ರಂಥಗಳನ್ನು ಬರೆದು ಮಾಡಿದ ಇವರ ಉಪಕಾರವು ಕನ್ನಡದೇಶದಲ್ಲಿ ಮರೆಯತಕ್ಕದಾಗಿಲ್ಲ" ಎಂದು ಬರೆದೆನು. ಇವರೇ ಗ್ರಂಥಕರ್ತರಾಗಿದ್ದು ತಮ್ಮ ಹೆಸರನ್ನು ಹೇಳಿಕೊಳ್ಳದೆ ಗ್ರಂಥಾಂತದಲ್ಲಿ ತಾನೊಬ್ಬ ಮಹಾಕವಿಗಳ ಮನೆಯೊಳಿಗದವನೆಂದು ಬರೆದು ತಮ್ಮ ನೈಜ್ಯವನ್ನು ಹೇಳಿಕೊಂಡದ್ದು ಅತಿ ಶ್ಲಾಘ್ಯತರವಾಗಿದೆ.

**ಶ್ರೀರಾಮಾಶ್ವಮೇಧ:—**

ಅದ್ಭುತರಾಮಾಯಣಕ್ಕೆ ನಮ್ಮ ನಂದಳಿಕೆಯವರೇ ಕರ್ತರಾಗಿದ್ದಲ್ಲಿ ಈ ಗ್ರಂಥಕ್ಕೂ ಅವರೇ ಕರ್ತರಾಗಿರಬಹುದು. ಈ ಎರಡು ಗ್ರಂಥಗಳೂ ಏಕಕರ್ತೃಕವೆಂಬುದಕ್ಕೆ ಕೆಲವು ಕಾರಣಗಳನ್ನು ಹಿಂದೆಯೇ ಸೂಚಿಸಿರುವೆನು. ಪತಿಪತ್ನಿಯರ ಸಂಭಾಷಣ ರೂಪವಾಗಿ ಗ್ರಂಥವನ್ನು ರಚಿಸುವುದೂ, ಪಾಠಕರಿಗೆ ಉಂಟಾಗುವ ಮನೋಭಾವಗಳನ್ನು ಪತ್ನಿಯ ಮೂಲಕ ಸೂಚಿಸಿ ಅದಕ್ಕೆ ಪರಿಹಾರವನ್ನು ಮಾಡುವುದೂ, ಗ್ರಂಥಾರಂಭದಲ್ಲಿ ಯಾವುದೋ ಒಂದು ವಿಜಾತೀಯವಾದ ವರ್ಣನೆಯಲ್ಲಿ ಉದ್ಯೋಗಿಸಿ ಗ್ರಂಥವಿಷಯಕ್ಕೆ ಇಳಿಯುವುದೂ, ಬೇಸರಿಕೆಯನ್ನು ಪರಿಹರಿಸುವುದಕ್ಕಾಗಿ ಪಾಠಕರಲ್ಲಿ ಹಾಸ್ಯರಸವನ್ನು ಉದ್ರೇಕಿಸುವುದೂ—ನವೀನಕಾದಂಬರೀ ರಚನಾಪದ್ಧತಿಯಾಗಿರುವುದು. ಮುದ್ದಣ, ಮನೋರಮೆ ಇತ್ಯಾದಿ ನಾಮಗಳು ಹಳಬರಲ್ಲಿ ವಾಡಿಕೆಯಲ್ಲಿಲ್ಲ. ಸೀತೆಯು ಋಷ್ಯಾಶ್ರಮಕ್ಕೆಂದು ಹೊರಡುವ ಅವಸರದಲ್ಲಿ "ಏರದಾಳಿಯ ಬಿಜ್ಜೋಲೆಯ ಚಂದನದ ಕುಂಕುಮದ ಕರ್ಮಣಿಯ ಕಸ್ತೂರಿಯ ಕರ್ಪುರದ ಕಮ್ಮೆಣ್ಣೆಯ ಕಾವಿಗಪ್ಪಡದ ಕರಂಡಮಂ ಕೈಕೊಂಡಳ್" ಎಂಬದಾಗಿಯೂ, ಇನ್ನೂ ಕೆಲವು ಸಮಯಗಳಲ್ಲಿ ಕನ್ನಡಜಿಲ್ಲೆಯವರಲ್ಲಿ ವಾಡಿಕೆಯಾಗಿರುವ ಹಲವು ಸಂಪ್ರದಾಯಗಳನ್ನು ಹೇಳಿರುವುದೂ ಕವಿಯು ಆಧುನಿಕನೂ ಕನ್ನಡ ಜಿಲ್ಲೆಯವನೂ ಎಂಬುದನ್ನು ತಿಳಿಸುತ್ತದೆ. ಈ ಗ್ರಂಥದ ಬರೆವಣಿಗೆಯು ಹಳಗನ್ನಡವಾಗಿದ್ದರೂ ಶೈಲಿಯು ಮಾತ್ರ ಪ್ರಾಚೀನವಲ್ಲ. ಮಧ್ಯಕಾಲದ ವಚನ ಶೈಲಿಯಂತೆಯೂ ದೀರ್ಘವಾಕ್ಯಸರಣಿಯೂಗಿಲ್ಲ; ಸಾಧಾರಣವಾಗಿ ಆಂಗ್ಲೇಯ ಭಾಷಾಸರಣಿಯನ್ನೂ ಹೆಚ್ಚಾಗಿ ಬಂಗಾಳಿ ಭಾಷಾಸರಣಿಯನ್ನೂ ಹೋಲುತ್ತದೆ;

ಖಂಡಖಂಡವಾದ ಸಣ್ಣ ವಾಕ್ಯಗಳಾಗಿದೆ. ಇದರಲ್ಲಿ ರಸೋದ್ರೇಕವಾಗಲು, ಮನೋಭಾವಗಳು ಒಂದರಮೇಲೊಂದು ಕ್ರಮವಾಗಿ ಆಧುನಿಕ ರೀತಿಯಲ್ಲಿ ವರ್ಣಿಸಲ್ಪಟ್ಟಿವೆ. ಪ್ರಾಚೀನರಂತೆ ಶ್ಲೇಷೆ, ಉತ್ಪ್ರೇಕ್ಷೆ, ವಿರೋಧಾಭಾಸ ಇತ್ಯಾದ್ಯಲಂಕಾರಗಳ ಗೋಜಿಗೆ ಹೋಗಿಲ್ಲ. ಆಧುನಿಕರಿಗೆ ರುಚಿಸುವ ರೀತಿಯಲ್ಲಿ ಕಥೆಯು ಹೇಳಲ್ಪಟ್ಟಿದೆ. ಈ ಕಾರಣಗಳಿಂದಲೂ ಕವಿಯು ಆಧುನಿಕನೆಂದು ಸ್ಥಿರಪಡುತ್ತದೆ. ಕವಿಯು ಆಧುನಿಕನಾದಮೇಲೆ, ನಂದಳಿಕೆಯವರೇ ಈ ಗ್ರಂಥವನ್ನು ಬರೆದುಕಳುಹಿಸಿದವರಾದ್ದರಿಂದ ಅವರೇ ಈ ಗ್ರಂಥಕ್ಕೂ ಕರ್ತೃವಾಗಿರಬಹುದು. ಈ ಗ್ರಂಥವು ಮುದ್ದಣನ ಕರ್ತೃತ್ವದಲ್ಲಿ ಪ್ರಚಾರಿಸಲ್ಪಡುತ್ತಿರುವುದು ಇವರಿಗೆ ಗೊತ್ತಿದ್ದಿತು. ಅವರಿಗೆ ಇಷ್ಟವಾಗಿಯೂ, ಅವರ ಪರಿಚಿತಸ್ಥರಿಗೆಲ್ಲಾ ಗೊತ್ತಾಗಿಯೂ ಇರುವ ಮುದ್ದಣನೆಂಬ ಹೆಸರನ್ನು ಲಕ್ಷ್ಮೀನಾರಣಪ್ಪನೆಂಬ ಹೆಸರಿಗೆ ಬದಲಾಯಿಸಲು ಅವರು ಇಷ್ಟಪಡಲಿಲ್ಲವೆಂದು ತೋರುತ್ತದೆ. ಯಾವ ಹೆಸರಾದರೇನು ? ಎಂದು ತಿಳಿದರು. ಮುದ್ದಣನು ಬೇರೆ ತಾನು ಬೇರೆ ಎಂದು ತಮ್ಮ ಜಿಲ್ಲೆಯವರು ಭ್ರಮಿಸುವರೆಂದು ಯೋಚಿಸಲಿಲ್ಲ. ಈ ಗ್ರಂಥಕ್ಕೆ ತಾವೇ ಕರ್ತೃವೆಂಬ ಸಂಗತಿಯು ಕ್ರಮೇಣ ತಿಳಿದುಬರುವುದೆಂದು ನಂಬಿದ್ದರು. ಆದುದರಿಂದ ನಾವು ಅವರಿಗೆ "ನೀವು ತಿಳಿಸಿದರೆ ನಿಮ್ಮ ಹೆಸರಿನಲ್ಲಿ ಇದನ್ನು ಮುದ್ರಿಸುತ್ತೇವೆ" ಎಂದು ಬರೆದ ಕಾಗದಕ್ಕೆ ಅವರು ತಾವು ಕರ್ತೃವಲ್ಲವೆಂದು ಬದಲು ಬರೆದಿರಬಹುದೆಂದು ತಿಳಿಯುತ್ತೇನೆ.

**ಶ್ರೀರಾಮಪಟ್ಟಾಭಿಷೇಕ :—**

ಈ ಗ್ರಂಥಕ್ಕೂ ನಮ್ಮ ನಂದಳಿಕೆಯವರೇ ಕರ್ತೃವೆಂದು ಯಾರು ಎಷ್ಟು ವಿಚಾರಮಾಡಿ ಹೇಳಿದರೂ, ನಾನು ಒಪ್ಪಲಾರೆನು. ಅನೇಕ ಸಂಶಯಗಳುಂಟಾಗಿರಲಾಗಿ, ನನ್ನ ಮನಸ್ಸು ಹಾಗೆ ಒಪ್ಪಿಕೊಳ್ಳಲು ಒಡಂಬಡದು. ಅವು ಯಾವುವು ? ಎಂದರೆ ಒಂದೊಂದಾಗಿ ಹೇಳುತ್ತೇನೆ :—

(೧) ನಮ್ಮ ನಂದಳಿಕೆಯವರ ಗುರುಗಳಾದ ಮಳಲಿ ಸುಬ್ಬರಾಯರು "ಈ ಗ್ರಂಥತ್ರಯವು ನನ್ನ ಸಮಕ್ಷವೇ ಬರೆಯಲ್ಪಟ್ಟುವು." ಎಂದು ತಮ್ಮ ಲೇಖನದಲ್ಲಿ ತಿಳಿಸಿರುವರು. ಬೆನಗಲ್ ರಾಮರಾಯರೂ ಈ ಮೂರು ಗ್ರಂಥಗಳಿಗೂ ಅವರೇ ಕರ್ತರೆಂದು ತಮ್ಮ ಸಮಕ್ಷದಲ್ಲಿ ಒಪ್ಪಿಕೊಂಡಿರುವಂತೆ ತಿಳಿಸಿದ್ದಾರೆ. (ಅವರ ಲೇಖನದಲ್ಲಿರುವ ಸಂಭಾಷಣವನ್ನು ನೋಡಿ.) ಆದರೂ ಸಂದೇಹಪಡಬೇಕಾಗುತ್ತದೆ. ಪ್ರಕೃತವಿಚಾರವು ನಡೆದದ್ದು ಸುಮಾರು ಮೂವತ್ತುವರ್ಷಗಳಿಗೆ ಹಿಂದೆ ಆದುದರಿಂದ ಅದರ ಸ್ಮೃತಿಯು ಮಾಲಿನ್ಯಹೊಂದುವುದು ಸಹಜ ; ಈಗ ಮಾಡಿ

ಕೊಳ್ಳುವ ಅಭಿಪ್ರಾಯಕ್ಕೆ ತಕ್ಕಂತೆ ಅದರ ಆಕಾರವು ಮಾರ್ಪಡುವುದುಂಟು. ಹುರಳಿ ಭೀಮರಾಯರು "ನಿತ್ಯವೂ ಪ್ರಾತಃಕಾಲ ಮೈಸೂರಿಂದ ಬರುತ್ತಿರುವ ತನ್ನ ಗ್ರಂಥಗಳ ಪ್ರೂಫನ್ನು ತಿದ್ದುತ್ತಿದ್ದರು" ಎಂದು ಬರೆಯುತ್ತಾರೆ. ನಾವು ಒಂದಾವೃತ್ತಿಯಾದರೂ ಒಂದು ಫಾರಂಮಿಗೂ ಕೂಡ ಪ್ರೂಫನ್ನು ಅವರಿಗೆ ಕಳುಹಿಸಿಲ್ಲ. ನನಗೆ ಚೆನ್ನಾಗಿ ಗೊತ್ತುಂಟು; ನಮ್ಮ ರೆಕಾರ್ಡುಗಳಲ್ಲಿಯೂ ದಾಖಲೆಯಿಲ್ಲ. ಬೆನಗಲ್ ರಾಮರಾಯರ ಲೇಖನದಲ್ಲಿಯೂ ಇಂಥ ದೃಷ್ಟಾಂತಗಳು ಸಿಕ್ಕುತ್ತವೆ. ಹೀಗಿರುವುದರಿಂದ ಇವರ ಈ ವಿಧವಾದ ಬರವಣಿಗೆಯಿಂದಲೇ ಅವರ ಕರ್ತೃತ್ವವನ್ನು ಸಿದ್ಧಾಂತಿಸುವುದು ಹೇಗೆ?

(೨) "ಸಂಸ್ಕೃತಜ್ಞಾನವು ಬಹಳ ಕೊಂಚವಾದುದರಿಂದ ನಾಂದೀಶ್ಲೋಕವನ್ನು ಒಂದೆರಡುಬಾರಿ ಬರೆದರೂ ಸರಿಯಾಗದುದರಿಂದ ನಾನೇ ಮಾಡಿಕೊಟ್ಟೆನು" ಎಂದೂ "ಇವೆರಡು (ಅದ್ಭುತರಾಮಾಯಣ, ರಾಮಾಶ್ವಮೇಧ) ಮೂಲಗ್ರಂಥಗಳನ್ನು ಟೀಕಿಸಿ ಬರೆದುಕೊಳ್ಳುತ್ತಿರುವಷ್ಟಕ್ಕೆ ಸಂಸ್ಕೃತಭಾಷಾಜ್ಞಾನವು ಕೊಂಚ ಮಟ್ಟಿಗಾಯಿತು" ಎಂದೂ ನಂದಳಿಕೆಯವರ ಗುರುಗಳೇ ಬರೆಯುವಾಗ, ನಂದಳಿಕೆಯವರಿಗೆ ಸಂಸ್ಕೃತದಲ್ಲಿ ಅಷ್ಟಾಗಿ ಪಾಂಡಿತ್ಯವಿಲ್ಲವೆಂದು ಹೇಳಬೇಕು. ಆದರೆ ರಾಮಪಟ್ಟಾಭಿಷೇಕದ ನಾಂದೀಸಂಧಿಯೂ, ಪಂಚಮಸಂಧಿಯಲ್ಲಿರುವ ರಾಮಸ್ತುತಿಯ ಪದ್ಯಗಳೂ (೫-೬೧, ೬೨, ೬೪-೭೦) ಯಮಕೋದಾಹರಣಪದ್ಯಗಳೂ (೫-೮೧, ಪೀಠಿಕಾಸಂಧಿ ೧) ಗ್ರಂಥಕರ್ತನಿಗೆ ಸಂಸ್ಕೃತದಲ್ಲಿ ವಿಶೇಷ ಪಾಂಡಿತ್ಯವೂ, ಅದ್ವೈತವೇದಾಂತದಲ್ಲಿ ಪರಿಶ್ರಮವೂ ಉಂಟೆಂಬುದನ್ನು ದೃಢಪಡಿಸುತ್ತವೆ. ಆ ಭಾಗಗಳನ್ನು ಪಠಿಸಿದವನು ಯಾವನು ತಾನೆ ಆ ಕವಿಗೆ ಸಂಸ್ಕೃತಪಾಂಡಿತ್ಯವಷ್ಟಾಗಿಲ್ಲವೆಂದು ಹೇಳಲಾದೀತು? ಇದರಲ್ಲಿ ಪ್ರದರ್ಶಿತವಾಗಿರುವ ಪಾಂಡಿತ್ಯವು ಹಿಂದೆ ರಚಿಸಿದ ಅದ್ಭುತರಾಮಾಯಣದಲ್ಲಾಗಲಿ, ಪ್ರಯೋಗವಿಜ್ಞಾನವನ್ನು ಸಂಪಾದಿಸಿದಮೇಲೆ ಬರೆದ ರಾಮಾಶ್ವಮೇಧದಲ್ಲಿಯಾಗಲಿ ಪ್ರದರ್ಶಿತವಾಗಿದೆಯೇ ಹೇಳಲಿ! ಇದೂ ಇರಲಿ. ನಾರಣಪ್ಪನವರು ವ್ಯಾಸಂಗಮಾಡಿದರೆಂದು ಮಳಲಿ ಸುಬ್ಬರಾಯರು ತಿಳಿಸುವ ಸಾಮಾನ್ಯಗ್ರಂಥಗಳ ಪರಿಚಯದಿಂದಲೇ, ನಾರಣಪ್ಪನವರು ಈ ಗ್ರಂಥದಲ್ಲಿ ತೋರ್ಪಡಿಸಿಕೊಂಡಿರುವ ವ್ಯುತ್ಪತ್ತಿಯೂ, ಭಾಷಾಪರಿಚಯವೂ, ಅಭಿಪ್ರಾಯಗಳೂ, ವೇದಾಂತವಿಷಯಕವಾದ ಸೂಕ್ಷ್ಮತತ್ವಜ್ಞಾನವೂ ಉಂಟಾಯಿತೆಂದು ಹೇಳುವುದಕ್ಕೆ ಶಕ್ಯವಲ್ಲ.

(೩) ನೆಲದಲ್ಲಿ ಅಡಗಿಕೊಂಡಿದ್ದ ಬೀಜದಲ್ಲಿ ಮಳೆ ಬಿದ್ದ ಹೊರತು ಮೊಳಕೆ ಹೊರಡದು. ಸಹಜವಾದ ಬುದ್ಧಿಯು ಸಂಸ್ಕಾರಹೊಂದಿದಮೇಲೆಯೆ ಪ್ರಕಾಶವಾಗ

ಬೇಕು. ಭಗವತ್ಕೃಪೆಯಿಂದ ಕವಿಯಾಗಿ ಹುಟ್ಟಿದವನಲ್ಲಿಯೂ ಸಹಜಕವಿತ್ವ ಸಾಮರ್ಥ್ಯವು ಪ್ರದರ್ಶನಕ್ಕೆ ಬರಲು ಸಂಸ್ಕಾರದ ಸಹಾಯವು ಬೇಕು. ಆ ಸಾಮರ್ಥ್ಯವು ತಾನಾಗಿಯೇ ಪ್ರಕಾಶವಾಗಲಾರದು. ಸಂಸ್ಕಾರವು ಹೆಚ್ಚಿದಹಾಗೆಲ್ಲಾ ಕವಿತ್ವದಲ್ಲಿ ಸಾಮರ್ಥ್ಯವು ಪುಷ್ಟಿಯನ್ನು ಹೊಂದುವುದು. ಹೀಗಿರುವಾಗ ಮಳಲಿ ಸುಬ್ಬರಾಯರಿಂದಲೂ, (High School) ಶಾಲಾಪುಸ್ತಕಗಳಿಂದಲೂ ಪಡೆದ "ಕೊಂಚ" ಸಂಸ್ಕಾರದಿಂದ ಇಂಥ ಭಾವಗರ್ಭಿತವಾದ ಶ್ಲಾಘ್ಯಗ್ರಂಥಗಳನ್ನು ಬರೆಯುವಷ್ಟು ಶಕ್ತಿಯುತ್ಪನ್ನವಾಯಿತೆಂದು ಒಪ್ಪಿಕೊಳ್ಳಬೇಕಾದರೆ ಎಳೆಯಕೂಸು ಬೆಟ್ಟಕ್ಕೆ ಹಾರಿತೆಂದು ಒಪ್ಪಿಕೊಳ್ಳಬೇಕು. ಹೇಗೆಂದರೆ—

ಐದಾರು ಕನ್ನಡ ಸಣ್ಣಪುಸ್ತಕಗಳನ್ನೂ ಹಲವು ಯಕ್ಷಗಾನಗಳನ್ನೂ ಪ್ರಸಂಗಗಳನ್ನೂ ತಾನಾಗಿ ಓದಿಕೊಂಡವನು * ಕುಮಾರವಿಜಯವನ್ನು ಬರೆಯಬಲ್ಲನೆ? (ಮ|| ಸುಬ್ಬರಾಯರ ಲೇಖನ, ಪುಟ ೬೫, ೬೬) ಕಾವ್ಯಮಂಜರಿಯಲ್ಲಿ ಮೊದಲುಮೊದಲು ಅಚ್ಚಾದ ಉದ್ಗ್ರಂಥಗಳನ್ನು ಅನ್ವಯಿಸಿಕೊಳ್ಳುವಷ್ಟು ಶಕ್ತಿಯನ್ನು ಸಂಪಾದಿಸಬಲ್ಲನೆ? ತನ್ನ ಗುರುವಿನಲ್ಲಿ ಸಂಸ್ಕೃತದ ಅದ್ಭುತರಾಮಾಯಣದ ೨೧ ಅಧ್ಯಾಯಗಳು, ರಾಮಾಶ್ವಮೇಧದ ೪ ಸರ್ಗಗಳು ಒಟ್ಟು ಸುಮಾರು ೨೫ ಅಧ್ಯಾಯಗಳಿಗೆ ಕನ್ನಡ ಟೀಕೆಯನ್ನು ಬರೆದುಕೊಂಡು ಚಿಂತನೆಮಾಡಿದವರಿಗೆ ಎಷ್ಟರಮಟ್ಟಿನ ಸಂಸ್ಕೃತಭಾಷಾಪರಿಚಯವೂ ವ್ಯುತ್ಪತ್ತಿಯೂ ಉಂಟಾದೀತು? ಯಾವನಾದರೂ ಸಂಸ್ಕೃತ ರಾಮಾಶ್ವಮೇಧದಲ್ಲಿ ಪ್ರಥಮದಿಂದ ಮೂರು ನಾಲ್ಕು ಅಧ್ಯಾಯಗಳನ್ನು ಓದಲಿ, ಇವರು ಬರೆದ ರಾಮಪಟ್ಟಾಭಿಷೇಕವನ್ನು ಓದಲಿ; ಅವನು ಹತ್ತಾರುವರ್ಷಗಳು ವ್ಯಾಸಂಗಮಾಡಿ ವ್ಯುತ್ಪತ್ತಿಯನ್ನು ಸಂಪಾದಿಸಿ, ಆಮೇಲೆ ಅನೇಕ ಉದ್ದಾಮಕವಿಗಳ (ಸಂಸ್ಕೃತ, ಕನ್ನಡ) ಗ್ರಂಥಗಳನ್ನು ಪರಿಶೀಲನೆ ಮಾಡಿದವನೇ ಈ ಗ್ರಂಥವನ್ನು ಬರೆದಿರುವನೆಂದು ಹೇಳುವನೇ ವಿನಾ ನಮ್ಮ ಮಳಲಿಯವರು ಹೇಳುವಷ್ಟು ಕಾವ್ಯವ್ಯಾಸಂಗಮಾಡಿದವನು ಖಂಡಿತವಾಗಿ ಬರೆದಿಲ್ಲವೆಂದು ಹೇಳುವನು.

(೪) ನಂದಳಿಕೆಯವರು ಬರೆದುಕಳುಹಿಸಿಕೊಟ್ಟ ಗ್ರಂಥತ್ರಯಗಳಿಗೂ ಅವರೇ ಕರ್ತೃವಾಗಿದ್ದಲ್ಲಿ, ಗದ್ಯಗ್ರಂಥಗಳಲ್ಲಿ ಯಾವ ಕಡೆಯಲ್ಲಿಯೂ ಯಾವವಿಧವಾದ ಗ್ರಂಥಪಾತವನ್ನೂ ಪಾಠಭೇದವನ್ನೂ ತೋರಿಸದೆ, ಪದ್ಯಗ್ರಂಥವಾದ ರಾಮಪಟ್ಟಾ

* ಈ ಗ್ರಂಥದ ಯೋಗ್ಯತೆಯನ್ನು ಮ|| ರಾ|| ಪಿ. ಮಂಗೇಶರಾವ್ ಅವರ ಲೇಖನದಲ್ಲಿ (ಪುಟ ೯, ೧೦, ೧೧) ನೋಡಿ.

ಭಿಷೇಕದಲ್ಲಿ ಮಾತ್ರ ಹಲವು ಪಾಠಭೇದಗಳನ್ನೂ ಪಾತಗಳನ್ನೂ ತೋರಿಸಲು ಕಾರಣ ವೇನು? ಅದೂ ಹೋಗಲಿ. ಆ ಪಾತಗಳಲ್ಲಿ ಕೆಲವಕ್ಕೆ ಮಾತ್ರ ಅಲ್ಲಿರಬಹುದಾದ ಪಾತಗಳನ್ನು ಮೇಲುಗಡೆಯ ಕುಂಟುಪಜ್ಞೆಯಲ್ಲಿ ಕೆಂಪುಶಾಯಿಯಲ್ಲಿ ಇಲ್ಲವೆ ಸೀಸದಕಡ್ಡಿಯಲ್ಲಿ ಬರೆದುತೋರಿಸಿ, ಕೆಲವಕ್ಕೆ ಏಕೆ ಬಿಡುವರು? ಅವರು ಕರ್ತೃವಾಗಿದ್ದಲ್ಲಿ ಎಲ್ಲವನ್ನೂ ಸಂಪೂರ್ಣವಾಗಿ ಬರೆಯುವರು, ಇಲ್ಲವೆ ಸಂಪೂರ್ಣವಾಗಿ ಬಿಡುವರು. ಎಲ್ಲಾಕಡೆಯಲ್ಲಿಯೂ ಬರೆದಿದ್ದರೆ, ಮಹಾಲಕ್ಷ್ಮಿಯು ಕವಿಯಲ್ಲವೆಂಬ ಸಂಶಯಕ್ಕೆ ಅವಕಾಶಹುಟ್ಟುವುದೆ? ಎರಡು ಪಕ್ಷದಲ್ಲಿಯೂ ಮಹಾಲಕ್ಷ್ಮಿಯ ಕರ್ತೃತ್ವವಿಚಾರದಲ್ಲಿ ಯಾವ ವಿಘಾತವೂ ಉಂಟಾಗಲಾರದು.

(೫) ರಾಮಪಟ್ಟಾಭಿಷೇಕದ ಮಾತೃಕೆಯಲ್ಲಿ ನಮ್ಮ ನಂದಳಿಕೆಯವರು ಮಾಡಿರುವ ವಿಚಿತ್ರಸಂಗತಿಯನ್ನು ಕೇಳಿ. ಕೆಲವುಕಡೆಗಳಲ್ಲಿ ಮೂಲದಲ್ಲಿ ಬಿಟ್ಟು ಹೋಗಿರುವ ಭಾಗಗಳನ್ನು (ಬರೆವಣಿಗೆಯಲ್ಲಿ ಅಜಾಗರೂಕತೆಯಿಂದ ಉಂಟಾಯಿತೆಂಬ ಭ್ರಮಹುಟ್ಟುವಂತೆ) ಕೆಳಗೆ ಹಂಸಪಾದವನ್ನು (∧) ಹಾಕಿ ಮೇಲೆ ಕೆಂಪು ಶಾಯಿಯಲ್ಲಿ ಬರೆದಿರುವರು; ಒಂದೆರಡು ಕಡೆಗಳಲ್ಲಿ ಮಾತೃಕೆಯ ಮೂಲಪಾಠವನ್ನು ಕಾಣದಂತೆ ಚೆನ್ನಾಗಿ ಅಳಿಸಿ, ಬೇರೆ ಪಾಠವನ್ನು ಮೇಲೆ ಬರೆದಿರುವರು; ಕೆಲವುಕಡೆಗಳಲ್ಲಿ ಮೂಲಪಾಠಗಳನ್ನು ಹಾಗೆಯೇ ಇಟ್ಟು ಪಾಠಭೇದಗಳನ್ನು ಮೇಲೆ ಬರೆದಿರುವರು; ಕೆಲವುಕಡೆಗಳಲ್ಲಿ ಮೂಲಮಾತೃಕೆಯಲ್ಲಿರುವ ಉಚಿತವಾದ ಪಾಠಗಳನ್ನು ತಿದ್ದಿರುವರು; ಕೆಲವುಕಡೆಗಳಲ್ಲಿ ಹಳಗನ್ನಡರೂಪವನ್ನು ಹೊಸಗನ್ನಡರೂಪಕ್ಕೆ ತಿದ್ದಿರುವರು; ಇಷ್ಟುಮಾತ್ರವೇ ಅಲ್ಲ. ಹರಿಪುತ್ರರುಂ ಎಂಬ ಪದದಲ್ಲಿರುವ 'ರುಂ' ನ್ನು 'ಖು?' ಎಂದು ಮಾಡಿದ್ದಾರೆ (ಸಂಧಿ ೪-೫೨); 'ಚೈತ್ರರಥ' ಎಂಬುದರ ಕೆಳಗೆ——? ಹೀಗೆ ಬರೆದಿರುತ್ತಾರೆ; ಕ್ಲಿಷ್ಟವಾದ ಗ್ರಂಥಪಾಠಗಳನ್ನು ಬರೆದು, ಅತ್ಯಂತಸುಲಭವಾದ ಪಾಠಗಳನ್ನು ಬಿಟ್ಟಿರುವರು. ಈ ವಿಧವಾದ ಬರವಣಿಗೆಯಲ್ಲಿ ಕೆಲವು ಇವರು ಈ ಗ್ರಂಥಕ್ಕೆ ಕರ್ತರು ಎಂದು ಹೇಳುವುದಕ್ಕೂ, ಕೆಲವು ಇವರು ಕರ್ತರಲ್ಲವೆಂದು ಹೇಳುವುದಕ್ಕೂ ಅವಕಾಶವನ್ನು ಕೊಡುತ್ತವೆ.*

(೬) ನಂದಳಿಕೆಯವರ ಮಿತ್ರರೂ, ಹತ್ತಿರ ಬಂಧುಗಳೂ ಹೇಳಿರುವಂತೆ ರಾಮಪಟ್ಟಾಭಿಷೇಕಕ್ಕೆ ಕರ್ತೃವೆಂದು ತಿಳಿಸಲ್ಪಟ್ಟಿರುವ ಮಹಾಲಕ್ಷ್ಮಿಯು ನಂದಳಿಕೆಯವರ ತಾಯಿಯೇ ಆಗಿದ್ದಲ್ಲಿ, ಅವರು ತಮ್ಮ ತಾಯಿಗೂ ಉಡುಪಿಯಲ್ಲಿ ಒಂದು ಹೊಟೇಲನ್ನು ಇಟ್ಟುಕೊಂಡಿದ್ದ "ಶಿವಳ್ಳಿಯಭಟ್ಟನ" ಮಗಳಾದ ಲಕ್ಷ್ಮಿಯೆಂಬ

* ಓರಿಯಂಟಲ್ ಲೈಬ್ರರಿಯಲ್ಲಿರುವ ನಮ್ಮ ಹಸ್ತಪ್ರತಿಯನ್ನು ನೋಡಿ.

ವಳಿಗೂ ಅಭೇದಪ್ರಸಂಗವನ್ನು ಕಲ್ಪಿಸುತ್ತಿದ್ದರೆ? ಎಂಥವನೂ ತಮ್ಮ ತಾಯಿಯು ಒಬ್ಬ ತುಚ್ಛಜೀವನಮಾಡುವ "ಚಾವಡಿರಂಗಭಟ್ಟನ ಮಗಳು" ಎಂದು ತಿಳಿಸನು. (ರಾಮಪಟ್ಟಾಭಿಷೇಕದ ಅಂತ್ಯಪದ್ಯವನ್ನೂ ಹುರಳಿ ಭೀಮರಾಯರ ಲೇಖನದಲ್ಲಿ ಪುಟ ೩೧ರ ಕೊನೆಯಭಾಗವನ್ನೂ ಓದಿನೋಡಿರಿ) ಇದೂ ಹಾಗಿರಲಿ. "ಕನ್ನಡಿತಿ (ತನ್ನೊಡತಿ ಎಂದು ಪಾಠಾಂತರ) ಚೆಂಗಳದೇವಿಯ ಇಷ್ಟಪ್ರಕಾರ ಈ ಗ್ರಂಥವನ್ನು ರಚಿಸಿದ್ದಾಗಿ ಮಹಾಲಕ್ಷ್ಮಿಯೇ ಹೇಳಿಕೊಂಡಿದ್ದಾಳೆ. ಹೀಗಿದ್ದಾಗ ಅವಳು ಯಾರೆಂಬುದು ನಮ್ಮ ನಂದಳಿಕೆಯವರಿಗೂ, ಅವರ ನೆರೆಹೊರೆಯವರಿಗೂ, ಕೇವಲ ಪರಿಚಿತಸ್ಥರಿಗೂ ತಿಳಿಯದೆ ಇರುತ್ತದೆಯೆ? ಅವಳ ವಿಷಯವನ್ನು ಯಾರೂ ತಿಳಿಸದೆ ಇರುವುದು ಆಶ್ಚರ್ಯಕರವಾಗಿದೆ. ಅವಳ ಅಪ್ಪಣೆಯಂತೆ ಈ ಗ್ರಂಥವು ರಚಿಸಲ್ಪಟ್ಟಿರುವಾಗ ಚೆಂಗಳದೇವಿಯು ಆ ಕನ್ನಡನಾಡಿನಲ್ಲಿ ಒಬ್ಬ ದೊಡ್ಡ ಕನ್ನಡ ಪಂಡಿತೆಯಾಗಿರಬೇಕು; ಇಲ್ಲವೆ ಅವಳಿಗೆ ಸಹಾಯಕಳಾದ ಧನಿಕೆಯಾಗಿರಬೇಕು. ಈ ವಿಷಯದಲ್ಲಿ ಆ ಕಡೆಯವರ ತಾಟಸ್ಥ್ಯವನ್ನು ನೋಡಿದರೆ, ಕರ್ತೃತ್ವವಿಚಾರವಾದ ಸಂಶಯವು ಮತ್ತಷ್ಟು ಪ್ರಬಲಿಸುತ್ತದೆ.

(೭) ಇದೂ ಇರಲಿ. ಈ ಗ್ರಂಥದ ಮಾತೃಕೆಯನ್ನು ಕಳುಹಿಸಿದಾಗ, ಅದರ ಜತೆಯಲ್ಲಿ ನಮ್ಮ ನಂದಳಿಕೆಯವರು ಬರೆದು ಕಳುಹಿಸಿದ ಕಾರ್ಡಿನಲ್ಲಿ ವೆಂಕಟಸುಬ್ಬಮ್ಮನೆಂಬ ಮತ್ತೊಬ್ಬ ಕವಿಯು ಮಹಾಲಕ್ಷ್ಮಿಯಂತೆ ಹಲವು ಗ್ರಂಥಗಳನ್ನು ರಚಿಸಿದ್ದಾಳೆಂದು ಬರೆಯಲು ಕಾರಣವೇನು? ಅವರೇ ಈ ಗ್ರಂಥವನ್ನು ತಮ್ಮ ತಾಯಿಯ ಹೆಸರಿನಲ್ಲಿ ಬರೆದಿದ್ದದ್ದೇ ಆದರೆ ಹೀಗೆಂದು ಎಂದೂ ಬರೆಯಲಾರರು. ತಾವು ಈ ಗ್ರಂಥಕ್ಕೆ ಕರ್ತರಲ್ಲ, ಒಬ್ಬ ಹೆಂಗಸೇ ಕರ್ತಳು, ಸ್ತ್ರೀಕರ್ತೃತ್ವದಲ್ಲಿ ಪ್ರಸಿದ್ಧವಾದರೆ ಈ ಗ್ರಂಥಕ್ಕೆ ಪ್ರಾಶಸ್ತ್ಯವೂ ಅಭಿಮಾನವೂ ಹೆಚ್ಚುವುದೆಂಬ ನಂಬಿಕೆಯಿಂದ ಏಕೆ ಹಾಗೆ ಬರೆದಿರಬಾರದು? ಎಂದು ಆಕ್ಷೇಪಿಸಬಹುದು. ಮೊದಲಿಂದಲೂ ನಮಗೆ ಮೋಸಮಾಡಬೇಕೆಂಬ ಅಭಿಪ್ರಾಯವನ್ನು ಮಾಡಿಕೊಂಡು, ಗ್ರಂಥಪಾತಗಳನ್ನು ಬೇಕುಬೇಕೆಂದು ಅಲ್ಲಲ್ಲಿ ತೋರಿಸಿ, ನಾವು ಕೇಳಿದ್ದಕ್ಕೆ ಪುನಃಪುನಃ ತಾವು ಗ್ರಂಥಕರ್ತರಲ್ಲವೆಂದೂ, ತಾವು ಬರೆದ ಗ್ರಂಥದಲ್ಲಿಯೇ ಅನೇಕಕಡೆ ತಮಗೆ ಅರ್ಥವಾಗಲಿಲ್ಲವೆಂದೂ ಸುಳ್ಳನ್ನು ಬರೆದು, 'ನೀವೆ ಗ್ರಂಥಕರ್ತರಾಗಿದ್ದಲ್ಲಿ ಧೈರ್ಯವಾಗಿ ತಿಳಿಸಿ, ನಿಮ್ಮ ಹೆಸರನ್ನು ಮುದ್ರಿಸುತ್ತೇವೆ' ಎಂದು ಕಾಗದವನ್ನು ನಾವು ಬರೆದು ಕೇಳಿದಾಗ ಅಪಲಾಪಮಾಡಿ, ಮಿತ್ರರು ಕೇಳಿದಾಗ ಮಾತ್ರ ತಮ್ಮ ಕರ್ತೃತ್ವವನ್ನು ಒಪ್ಪಿಕೊಂಡು, ಅವರು ಅದನ್ನು ಸುವಾಸಿನಿಯ ಪತ್ರಿಕೆಯಲ್ಲಿ ಮುದ್ರಿ

ಸಲೇ ಎಂದು ಕೇಳಿದಾಗ " ದಯವಿಟ್ಟು ಹಾಗೆ ಮಾಡಬೇಡಿರಿ. ಏನೋ ಆದದ್ದು ಆಗಿಹೋಯಿತು " ಎಂದು ಕೇಳಿಕೊಂಡು ಈ ರೀತಿಯಲ್ಲಿ ಇಷ್ಟೊಂದು ಭಯವನ್ನೂ ಸುಳ್ಳನ್ನೂ ನಟಿಸಿದರೆಂದು ನಮ್ಮ ನಂದಳಿಕೆಯವರಲ್ಲಿ ಅಸತ್ಯತ್ವವನ್ನು ಆರೋಪಿಸುವುದಕ್ಕೆ ನನ್ನ ಮನಸ್ಸು ಹಿಂಜರಿಯುವುದು. ರಾಮಾಶ್ವಮೇಧದಂಥ ಗ್ರಂಥವನ್ನು ರಚಿಸಿದ ಕವಿಯು ಈ ಒಂದು ಅಲ್ಪವಾದ ಕೆಲಸಕ್ಕಾಗಿ ಇಷ್ಟು ಹೀನಸ್ಥಿತಿಗೆ ಇಳಿದನೆಂದು ನಾನು ಯೋಚಿಸಲಾರೆನು.

(೮) ಈ ಗ್ರಂಥತ್ರಯಕ್ಕೂ ಅವರೇ ಕರ್ತರಾಗಿದ್ದಲ್ಲಿ ಇಷ್ಟೊಂದು ತಟವಟಕ್ಕೆ ಹೋಗದೆ ಸುಮ್ಮನಿದ್ದರೂ ಸಾಕಾಗಿದ್ದಿತು. ಹಾಗೆ ತಟವಟವನ್ನು ಮಾಡಿದ್ದರಿಂದ ಹೆಚ್ಚು ಪ್ರಯೋಜನವುಂಟಾದಂತೆ ಕಂಡುಬರುವುದಿಲ್ಲ. ಬೆನಗಲ್ ರಾಮರಾಯರೊಡನೆ ನಡೆಸಿದ ಸಂಭಾಷಣೆಯಲ್ಲಿ ಅವರೇ ತಿಳಿಸುವಂತೆ ತಮ್ಮ ಕರ್ತೃತ್ವವು ತಾನಾಗಿಯೇ ಲೋಕಕ್ಕೆ ವ್ಯಕ್ತವಾಗುತ್ತಿದ್ದಿತು.

(೯) " ಕನ್ನಡಿತಿಯೊರೆದ ನುಡಿಯೆಂದಿದಂ ಭಾವಿಸದೆ| ಕನ್ನಡಿಗನೊರೆದ ನುಡಿಯೆಂದು ಸಂಭಾವಿಪುದು " ಎಂಬ ವಾಕ್ಯದಿಂದಲೇ ನಂದಳಿಕೆಯವರು ತಮ್ಮ ಕರ್ತೃತ್ವವನ್ನು ಸೂಕ್ಷ್ಮವಾಗಿ ಸೂಚಿಸಿದ್ದಾರೆಂದು ಹೇಳಲಾಗುವುದಿಲ್ಲ. ಅವರೇ ಕರ್ತೃವೆಂಬ ಅಭಿಪ್ರಾಯವನ್ನಿಟ್ಟುಕೊಂಡಮೇಲೆಯೇ ಆ ಅರ್ಥಕ್ಕೆ ಅದು ಅವಕಾಶವನ್ನು ಕೊಡುತ್ತದೆ. ಈ ಗ್ರಂಥಕ್ಕೆ ನಿಜವಾಗಿಯೇ ಸ್ತ್ರೀಯು ಕರ್ತೃವಾಗಿದ್ದಲ್ಲಿ ಅದು ಸಹಜವಾದ ಲೋಕೋಕ್ತಿಯಾಗಿ ತೋರುವುದು.

ಏವಂಚ ಈ ಗ್ರಂಥತ್ರಯದಲ್ಲ ಅದ್ಭುತರಾಮಾಯಣಕ್ಕೆ " ನಂದಳಿಕೆ ಲಕ್ಷ್ಮೀನಾರಾಯಣನಿಂ ರಚಿಸಲ್ಪಟ್ಟುದು " ಎಂಬ ಒಂದು ಬರವಣಿಗೆಯ ಆಧಾರದ ಮೇಲೆಯೇ ಲಕ್ಷ್ಮೀನಾರಣಪ್ಪನವರು ಕರ್ತೃವೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಇದನ್ನು ಒಪ್ಪಿಕೊಂಡರೆ ರಾಮಾಶ್ವಮೇಧಕ್ಕೂ ಅವರೇ ಕರ್ತೃವೆಂದು ಒಪ್ಪಿಕೊಳ್ಳಬಹುದು. ಈ ಎರಡು ಗ್ರಂಥಗಳಿಗೂ ಅವರೇ ಕರ್ತೃವೆಂದು ಒಪ್ಪಿಕೊಂಡರೂ ರಾಮಪಟ್ಟಾಭಿಷೇಕಕ್ಕೂ ಅವರೇ ಕರ್ತೃವೆಂದು ಒಪ್ಪಿಕೊಳ್ಳುವಷ್ಟು ಸಾಧನಗಳು ಇಲ್ಲವೆಂದು ನನ್ನ ಅಭಿಪ್ರಾಯ. ಗ್ರಂಥತ್ರಯಕ್ಕೂ ಅವರೇ ಕರ್ತೃವಾಗಿದ್ದಪಕ್ಷದಲ್ಲಿ ಅವರು ಬಲು ಸುಳ್ಳುತಟವಟಗಳನ್ನು ಹೇಳಿ ನಮಗೆ ಮೋಸಮಾಡಿದರೆಂದು ಹೇಳಬೇಕಾಗುತ್ತದೆ. ಅವರು ಕರ್ತೃವಾಗದಪಕ್ಷದಲ್ಲಿ ಅನ್ಯಕೃತವಾದ ಇವುಗಳನ್ನು ಸಂಪಾದಿಸಿ, ಸ್ವಕರ್ತೃಕನೆಂಬ ಭ್ರಾಂತಿಯನ್ನು ಹುಟ್ಟಿಸಲು ಆಡಬೇಕಾದ ನಾಟಕವನ್ನು ಆಡಿ, ತಮ್ಮ ಗುರುಗಳನ್ನೂ ತಮ್ಮ ಮಿತ್ರರನ್ನೂ ಮೋಸಗೊಳಿಸಿದರೆಂದು

ಹೇಳಬೇಕಾಗುತ್ತದೆ. ಹೇಗಾದರೂ ಆಗಲಿ ಅನೇಕ ಗ್ರಂಥಗಳನ್ನು ಬರೆದು ಕಳುಹಿಸಿ ಕೊಟ್ಟಂತೆ, ಈ ಗ್ರಂಥಗಳನ್ನೂ ಸ್ವಹಸ್ತಾಕ್ಷರದಲ್ಲಿ ಪ್ರತಿಮಾಡಿ, ಅವುಗಳಲ್ಲಿ ತಮಗಿದ್ದ ಸರ್ವಸ್ವಾತಂತ್ರ್ಯವನ್ನೂ ನಮಗೆ ವಹಿಸಿ ಕಳುಹಿಸಿಕೊಟ್ಟದ್ದಕ್ಕಾಗಿ, ಅವರ ಉಪಕಾರವು ನಮ್ಮಿಂದ ಚಿರಸ್ಮರಣೀಯವಾಗಿದೆ.

ಈ ಗ್ರಂಥಗಳಿಂದ ಪಾಠಕರಿಗೆ ಉಂಟಾಗುವ ಭಾಷಾಸಹಾಯವನ್ನು ನೆನೆದು, ಅದ್ಭುತರಾಮಾಯಣಕ್ಕೂ, ಶ್ರೀರಾಮಪಟ್ಟಾಭಿಷೇಕಕ್ಕೂ ವಿಶದವಾದ ಟಿಪ್ಪಣಿಯನ್ನೂ ಬರೆದು ಮುದ್ರಿಸಿದ್ದೇನೆ ; ರಾಮಾಶ್ವಮೇಧಕ್ಕೆ ಬರೆಯುತ್ತಿದ್ದೇನೆ.

---

# ನಾಗರ ಪಂಚಮಿ.

ನಾಗರಪಂಚಮಿಯೊದ ಬೆಳಗ್ಗೆ ಅಗ್ರಹಾರದ ಕಡೆಗೆ ಹೋಗಬೇಕಾಗಿತ್ತು. ಅಗ್ರಹಾರದಲ್ಲಿಯೇ ನನ್ನ ತಂಗಿಯ ಮನೆ. ಆದ್ದರಿಂದ ಹಾಗೇ ಅವಳನ್ನೂ ನೋಡಿ ಕೊಂಡು ಬರೋಣವೆಂದು ಹೋದೆ. ನನ್ನನ್ನು ಕಂಡದ್ದೇ ತಡ, ಅವಳು ಕಣ್ಣೀರು ತಂದುಕೊಂಡಳು. ಹೆಂಗಸರ ಜನ್ಮವೇ ಹೀಗೆಂದು ತೋರುತ್ತದೆ. ಇದ್ದರೆ ದೇವಿಯ ರಂತೆ ಸ್ವರ್ಗಸುಖದಲ್ಲಿರುತ್ತಾರೆ. ಇಲ್ಲದಿದ್ದರೆ ಅವರ ಬಾಳು ನಾಯಿಯ ಬಾಳು ; ಅದೂ ಅಲ್ಲದಿದ್ದರೆ ಅನುಕೂಲವಿದ್ದರೂ ಅನುಭವಿಸುವುದಕ್ಕೆ ಪ್ರಾಪ್ತಿಯಿಲ್ಲದೆ ಅಶಿಕ್ಷೆ ಯಿಂದಲೂ ಅವಿವೇಕದಿಂದಲೂ ಮುಳ್ಳುಪೊದೆಯಂತೆ ಇರುತ್ತಾರೆ. ತಮಗೆ ಹಿತವಿಲ್ಲ ಮತ್ತೊಬ್ಬರಿಗೆ ಸುಖವಿಲ್ಲ ; ಅಂತೂ ಯಾವಾಗಲೂ ಗೋಳಾಡುತ್ತಿರುವವರೇ ಹೆಚ್ಚು ಜನ.

ನನ್ನ ತಂಗಿಯು ಅದೃಷ್ಟವಂತೆಯಲ್ಲ. ಅವಳ ಜೀವನದಲ್ಲಿ ಅರುಣೋದಯ ವಾಗಿ ಸೂರ್ಯನು ಹುಟ್ಟುವ ಸೂಚನೆಗಳು ಕಂಡು ಅಕಸ್ಮಾತ್ತಾಗಿ ಮಧ್ಯರಾತ್ರಿ ಬಂದುಬಿಟ್ಟಿತು. ಅವಳನ್ನು ಒಳ್ಳೆಯ ಕಡೆಗೇ ಕೊಟ್ಟಿತ್ತು. ಗಂಡನು ಬಿ. ಎ. ಆನರ್ಸ್ ಪ್ಯಾಸುಮಾಡಿ ಕೆಲಸ ಸಿಕ್ಕದೆ ಲಾ ಪರೀಕ್ಷೆಯನ್ನು ಪ್ಯಾಸುಮಾಡಿ ಬಂದು ಲಾಯರಾಗಬೇಕೆಂದು ಬೊಂಬಾಯಿಗೆ ಹೋಗಿ ಕ್ಷಯರೋಗಕ್ಕೆ ತುತ್ತಾದನು. ಮನೆಯಲ್ಲಿ ಅತ್ತೆಮಾವಂದಿರು ಯಾರೂ ಇಲ್ಲ. ಒಂದು ಮನೆ, ಸ್ವಲ್ಪ ಜಮೀನು, ಅಲ್ಪಸ್ವಲ್ಪ ಒಡವೆ, ಇಷ್ಟುಮಾತ್ರ ಇತ್ತು. ಅರಿಸಿನ ಕುಂಕುಮವೂ ಅದೃಷ್ಟವೂ ಮಾತ್ರ ಇರಲಿಲ್ಲ. ಇನ್ನೇನು ಅಣ್ಣನ ಮನೆಯನ್ನು ಸೇರಿಕೋತಾಳೆ ಎಂದರು. ನಮ್ಮ ದೇಶದ ವಿಧವೆಯರ ಹಣೆಯಬರಹವೇ ಹೀಗಾಗಿದೆ. ಗಂಡನೆಂಬ ವಸ್ತು ಇರುವ ವರೆಗೂ ಅವನು ಹೇಗೋ ದುಡಿದು ತಂದುಹಾಕುತ್ತಾನೆ. ಆಗ ಅವರ ಹೆಮ್ಮೆ ಹಿಡಿಯುವಂತಿರುವುದಿಲ್ಲ. ಅವನು ಕಣ್ಣುಮುಚ್ಚಿಕೊಂಡನೆಂದರೆ ಅವರ ಪಾಡು ಅಡಿಗೆಯ ಪರಿಚಾರಿಕೆ. ಹೀಗೆಯೇ ಇದ್ದರೆ ಎಲ್ಲರೂ ಬದುಕಿಯಾರೇ ? ಯಜಮಾ ನಿಕೆಯೋ ಅಂತಃಕರಣವೋ ಏನೋ ಒಂದು ಹತ್ತಿಕೊಂಡು ಅವರಿಗೆ ಈ ಭಾವವು ಯಾವಾಗಲೂ ಇರುವುದಿಲ್ಲ. ನನ್ನ ತಂಗಿಯೂ ನಮ್ಮ ಮನೆ ಸೇರುತ್ತಾಳೆಂದು ಎಲ್ಲರೂ ಅಂದುಕೊಂಡಿದ್ದರು. ಆದರೆ ಅವಳು ಅಣ್ಣನ ಮನೆ ಸೇರಿ ಅತ್ತಿಗೆ ಕೈಲಿ ಅನುಭವಿಸುವದಕ್ಕಿಂತ ದೂರ ಇದ್ದು ದುರ್ಜನವಾಗುವುದು ಒಳ್ಳೇದೆಂತ ಕಂಡು ಕೊಂಡು ತನ್ನ ಮನೆಯಲ್ಲಿಯೇ ಇದ್ದುಬಿಟ್ಟಳು. ಈಗ ಮನೆಯನ್ನು ಬಾಡಿಗೆಗೆ

ಕೊಟ್ಟು ಒಂದು ಕೊಟಡಿಯಲ್ಲಿ ತಾನು ಇದ್ದುಕೊಂಡಿದ್ದಾಳೆ. ಮನೆಯಲ್ಲಿರುವವರು, ಪುಣ್ಯಕ್ಕೆ, ಯೋಗ್ಯರು. ಹೆಂಗಸರೂ ಹುಡುಗರೂ ಹಿತವಾಗಿದ್ದಾರೆ. ನಾನು ಆಗಾಗ್ಯೆ ಆಕಡೆ ಹೋಗಿ ನೋಡಿಕೊಂಡು ಇಲ್ಲದ್ದು ಉಂಟಾದ್ದು ವಿಚಾರಿಸಿಕೊಂಡು ಬರುವುದುಂಟು.

ಎಂದಿನಂತೆ ಇವೊತ್ತೂ ಹೋಗಲು ನನ್ನನ್ನು ಕಂಡಕೂಡಲೆ ಅವಳಿಗೆ ಹಿಡಿಸಲಾರದಷ್ಟು ದುಃಖ ಬಂದುಬಿಟ್ಟಿತು. ದುಃಖವನ್ನು ತಡೆದುಕೊಂಡಳು. ಆದರಿಂದ ಕಣ್ಣೀರು ಸುರಿಯದೆ ಕಣ್ಣು ಕೆಂಪಾಯಿತು. ಮಾತೇ ಹೊರಡದು. "ಯಾಕಮ್ಮಾ ಅಳುತ್ತೀಯೆ ? ಏನಾಯಿತು ?" ಎಂದು ಕೇಳಿದೆ. ಹುಡುಗಿ ಚಿಕ್ಕವಳಾದರೂ ಬಹು ತಿಳಿವಳಿಕೆಯ ಹುಡಿಗಿ; ನನ್ನ ತಂಗಿಯೆಂಬ ಅಭಿಮಾನದಿಂದ ಹೇಳುವ ಮಾತಲ್ಲ ;— 'ನನ್ನ ಪ್ರಾಪ್ತಿ ಇಷ್ಟು, ದೇವರ ಇಚ್ಛೆ ಹೀಗಿತ್ತು' ಎಂದು ಹೇಗೋ ಹಾಗೆ ಸೈರಿಸಿಕೊಂಡಿರುವುದೇ ಹೊರತು ಬಾಯಿಬಿಟ್ಟು ಒಬ್ಬರ ಕೈಲಿ ತನ್ನ ಅವಸ್ಥೆ ಹೀಗಾಯಿತೆಂದಾಗಲಿ ಮತ್ತೊಬ್ಬರು ತನಗೆ ಸಹಾಯಮಾಡಲಿಲ್ಲವೆಂದಾಗಲಿ, ಆಕ್ಷೇಪಿಸಿದರೆಂದಾಗಲಿ ಅವಳು ಹೇಳಿಕೊಂಡವಳಲ್ಲ ; ಮತ್ತೊಬ್ಬರೆದುರಿಗೆ ಅತ್ತವಳೂ ಅಲ್ಲ. ಆದರೆ ಅಷ್ಟೊ ಅಷ್ಟು ಅವಳಿಗೆ ದುಃಖವಿತ್ತೆಂದೂ ಆದರಿಂದ ಅವಳು ದಿನೇ ದಿನೇ ಕಂದಿಹೋಗುತ್ತಿದ್ದಳೆಂದೂ ಗೊತ್ತು. ಅಳುವನ್ನಾದರೂ ಕೇಳಬಹುದು, ಈ ಸೊರಗಾಟವನ್ನು ನೋಡುವುದು ಕಷ್ಟ. ಹೂವನ್ನು ಹರಿದಾದರೂ ಹಾಕಬಹುದು ಅದು ಕಂದಿಹೋಗುವದನ್ನು ನೋಡುವುದು ಕಷ್ಟ.

"ಯಾಕಮ್ಮಾ ?" ಎಂದು ಕೇಳಿದೆ.

"ಏನೂ ಇಲ್ಲಪ್ಪ ; ಬಾ ಕೂತುಕೋ" ಎಂದು ಕಣ್ಣೀರನ್ನು ಒರಸಿಕೊಂಡು ಒಳಕ್ಕೆ ಕರೆದಳು. ಅಡಿಗೆಮನೆ ಉಗ್ರಾಣ ನಡುಮನೆ ಮಲಗುವ ಮನೆ ಎಲ್ಲಾ ಅದು ಒಂದು ಕೋಣೆಯೇ. ಹೋಗಿ ಕುಳಿತುಕೊಂಡೆ ; ಆದರೆ ಅವಳ ದುಃಖಕ್ಕೆ ಏನುಕಾರಣವಿರಬಹುದೆಂದು ಯೋಚಿಸಲಾರದೆ ಹೋದೆ ; ಆ ವಯಸ್ಸಿನ ಹೆಂಗಸಿಗೆ ಎಷ್ಟು ಕಷ್ಟಬರಬಹುದೋ ಅದೆಲ್ಲವೂ ಅವಳಿಗೆ ಒಟ್ಟಿಗೆ ಬಂದುಬಿಟ್ಟಿತ್ತು. ಆಗಲೂ ಅವಳು ಹೀಗೆ ಅತ್ತದ್ದನ್ನು ನೋಡಿರಲಿಲ್ಲ. ಮುಖವನ್ನು ಸ್ವಲ್ಪ ಮುಚ್ಚಿಕೊಂಡು ಉಗುಳುನುಂಗುತ್ತ ನಿಂತುಕೊಂಡಿದ್ದಳು. ನಾನು ಎದ್ದು ಹೋಗಿ ಕಣ್ಣೀರನ್ನು ಒರಸಿ ಹತ್ತಿರ ಕೂರಿಸಿಕೊಳ್ಳೋಣವೆನ್ನಿಸಿತು. ಆದರೆ ಆಕಾಲ ಹೋಯಿತು. ಅದೆಲ್ಲಾ ಹುಡುಗತನದಲ್ಲಿ ಕಚ್ಚಾಡುತ್ತ ಸಮಾಧಾನಮಾಡುತ್ತ ಇದ್ದ ಕಾಲಕ್ಕೇ ಆಗಿಹೋಯಿತು. ವಯಸ್ಸಾದಮೇಲೆ ನಮ್ಮಲ್ಲಿ ಅಣ್ಣತಂಗಿಯರು ಬೇರೆ ; ಬೆನ್ನಲ್ಲಿ

ಬಿದ್ದವರೂ ಇಲ್ಲ ಒಡಹುಟ್ಟಿದವರೂ ಇಲ್ಲ. ಒಬ್ಬರನ್ನೊಬ್ಬರು ಮುಟ್ಟುವುದಕ್ಕುಂಟೇ? ಧಾರಾಳವಾಗಿ ಮಾತು ಕಥೆಗಳಾಡುವುದಕ್ಕುಂಟೇ ?

" ಇದ್ಯಾಕಮ್ಮ, ಎಂದೂ ಇಲ್ಲದ್ದು ಇವತ್ತು ಇಷ್ಟು ದುಃಖ ? '' ಎಂದು ಪುನಃ ಕೇಳಿದೆ.

" ಏನೂ ಇಲ್ಲ ಅಣ್ಣಯ್ಯ; ಸುಮ್ಮನೆ. '' ಎಂದಳು.

ಇಂಥ ಸಂದರ್ಭಗಳಲ್ಲಿ ಕಾರಣವನ್ನು ಹೇಳದಿರುವುದು, ಕಾರಣವಿಲ್ಲದಿರುವುದರಿಂದಲ್ಲ, ಕಾರಣವು ಬಲವತ್ತರವಾಗಿ, ಸಹಿಸಲಸಾಧ್ಯವಾಗಿ, ಹೇಳಲಾರದಂತಿರುವುದರಿಂದ.

" ಸುಮ್ಮನೆ ಅಳುತೀಯಾ, ಏನೋ ಇರಬೇಕು ; ಏನು ಸಮಾಚಾರ, ಹೇಳು.''

" ಏನೂ ಇಲ್ಲಪ್ಪ, ನಿನ್ನ ನೋಡಬೇಕೆಂದಿದ್ದೆ ; ಬಂದೆಯಲ್ಲ ಅಷ್ಟೇ.''

" ನಾನು ಬಂದರೆ ಯಾಕೆ ಅಳಬೇಕು ? ನೀನು ಹೇಳುವದೇನೋ ನನಗೆ ಗೊತ್ತಾಗುವದಿಲ್ಲ.''

" ಹೌದಣ್ಣಯ್ಯ, ನಿನ್ನೆದಿನ ನೋಡಬೇಕೂಂತಿದ್ದೆ ; ಇವತ್ತಾದರೂ ನೋಡಿದ್ದಾಯಿತು ; ನಾಗರಪಂಚಮಿಯಲ್ಲದಿದ್ದರೆ ಶ್ರೀಯಾಳಷಷ್ಠಿಯಾಯಿತು ; ಇದೂ ಗಂಡಸರ ಹಬ್ಬವೇ ! ''

" ಯಾಕಮ್ಮ, ನಿನ್ನೆ ನನ್ನಿಂದ ಏನು ಕೆಲಸವಾಗಬೇಕಾಗಿತ್ತು ? ''

" ಏನೂ ಇಲ್ಲಪ್ಪ, ನನಗೆ ಏನು ಕೆಲಸವಾಗಬೇಕು ! ನಿನ್ನೆದಿನ ನಾಗರ ಪಂಚಮಿಯಾಯಿತಲ್ಲಾ, ಹಿಂದಿನದೆಲ್ಲಾ ಜ್ಞಾಪಕಕ್ಕೆ ಬಂತು. ಹೋದವರ್ಷ ಅಪ್ಪ ಇದ್ದ. ನಾನೂ ಹೀಗಿರಲಿಲ್ಲ. ಎಲ್ಲರೂ ಒಂದುಕಡೆ ಸೇರಿ ಹಬ್ಬಮಾಡಿದೆವು. ಈ ವರ್ಷ ಹೀಗಾಯಿತು. ಇದನ್ನು ನೆನೆಸಿಕೊಂಡು ಒಲೆಯಮೇಲೆ ಎಸರು ಇಟ್ಟಿದ್ದವಳು ಏನೂ ತೋರದೆ ಹಾಗೇ ತಲೇಮೇಲೆ ಕೈ ಹೊತ್ತುಕೊಂಡು ಕೂತುಬಿಟ್ಟೆ ' ಇದು ಒಡಹುಟ್ಟಿದವರ ಹಬ್ಬ ; ಅಣ್ಣಯ್ಯನ ಮನೆಗಾದರೂ ಹೋಗಿ ನೋಡಿಕೊಂಡು ಬರಲೇ ; ನನಗೆ ನೀನೇ ಎನ್ನುವವರು ಮತ್ತೊಬ್ಬರು ಇಲ್ಲ ಎನ್ನಿಸಿತು. . .''

" ಹಾಗಾದರೆ ನಮ್ಮ ಮನೆಗೆ ನೆಟ್ಟಗೆ ಬಂದುಬಿಡಬೇಕಾಗಿತ್ತು ! ನನಗೂ ತೋರಿತು ಶಾರದಾ, ನಿನ್ನನ್ನ ಕರೆದುಬರಬೇಕು ಅಂತ ; ಹೇಳಿಕಳುಹಿಸೂಕೆ ಯಾರೂ ಸಿಕ್ಕಲಿಲ್ಲ ; ಸಾಲದ್ದಕ್ಕೆ ಅವಳೂ ಒಳಗಿರಲಿಲ್ಲ. ಬೆಳಗ್ಗೆ ಬೇರೆ ಆಫೀಸು ; ಹ್ಯಾಗೋ ಅವಕಾಶಮಾಡಿಕೊಂಡು ಬರಬಹುದಾಗಿತ್ತು. . . . . ಆಮೇಲೆ ಇನ್ನೂ ಏನೇನೋ ಯೋಚನೆ ಬಂದು ಬಿಟ್ಟುಬಿಟ್ಟೆ.''

" ನನಗೆ ಗೊತ್ತಿಲ್ಲವೇನಪ್ಪ ; ನನ್ನ ಹಣೆಯಬರಹವಂತೂ ಇಲ್ಲದೆ ಹೀಗಾಯಿತು ; ನಿನ್ನ ಅದೃಷ್ಟವು ಇದ್ದೂ ಹೀಗಾಗಿದೆ ; ಯಾರಿಗೂ ಸುಖವಿಲ್ಲ ; (ಸ್ವಲ್ಪ ಹೊತ್ತು ಸುಮ್ಮನಿದ್ದು) ಆ ಬೀದಿಯಿಂದ ಸುಬ್ಬಮ್ಮನವರು ಬಂದು ಹೇಳಿದರು, ಅತ್ತಿಗೆ ಒಳಗಿಲ್ಲ ಅಂತ. . ."

" ಯಾವ ಸುಬ್ಬಮ್ಮನವರು ? "

" ಅಲ್ಲಿ ನಿಮ್ಮ ಮನೆ ಹಿಂದಿನ ಸಾಲಿನಲ್ಲಿದ್ದಾರೆ ಒಬ್ಬರು ಸುಬ್ಬಮ್ಮನವರು ಅಂತ ; ತಾಯಿಮಕ್ಕಳು ಇಬ್ಬರು ಇದ್ದಾರೆ ; ಹುಡುಗ ಓದುತಾನಂತೆ."

" ಯಾರೋ ನಾಕಾಣೆ."

" ಅವರು ಹೇಳಿದರು—ಅತ್ತಿಗೆಮ್ಮ ಒಳಗಿಲ್ಲ. ಅಂತ; ಆಮೇಲೆ ತೋರಿತು ಇಲ್ಲಿ ಅಡಿಗೆ ಮಾಡುವುದು ಅಲ್ಲಿಗೇ ಬಂದು ಮಾಡೋಣ ; ನೀನು ಆಫೀಸಿನಿಂದ ಬಂದು ಹನ್ನೆರಡು ಗಂಟೆಯಮೇಲೆ ಸಾಮಾನುಗಳನ್ನು ಸಂವರಿಸಿಕೊಂಡು ನಾಗಪ್ಪನ ಪೂಜೆಮಾಡಿ ಕೈಸುಟ್ಟುಕೊಂಡು ಅನ್ನ ತಿನ್ನಬೇಕಲ್ಲಾ ; ಪಾಪ ಹುಡುಗರು ತಾನೇ ಅಷ್ಟು ಹೊತ್ತು ಉಣ್ಣದೆ ತಿನ್ನದೆ ಹ್ಯಾಗೆ ಇರುತ್ತವೆ—ಅಂತ. ಮಕ್ಕಳನ್ನ ನೋಡಬೇಕು ಅಂತ ಬಹು ಆಶೆಯಾಯಿತು ಅಣ್ಣಯ್ಯ ! ಎದುರುಮನೆ ಶೇಷಪ್ಪನವರ ಮನೆಗೆ ಅವರ ಭಾವ ಬಂದಿದಾರೆ ; ಅವರಿಗೆ ಅಸಿಸ್ಟೆಂಟರ ಕೆಲಸವಂತೆ, ಐನೂರು ರೂಪಾಯಿ ಸಂಬಳವಂತೆ ; ಇನ್ನೊಬ್ಬ ತಂಗೀನೂ ಈ ಊರಿಗೇ ಕೊಟ್ಟಿದೆ. ಅವಳನ್ನೂ ಕರೆಸಿಕೊಂಡಿದ್ದಾರೆ. ನಿನ್ನೆ ಒಂದು ದಿನ ರಜಾತೆಗೆದುಕೊಂಡು ಬೆಂಗಳೂರಿನಿಂದ ಇದೇ ಕೆಲಸಕ್ಕಾಗಿ ಬಂದಿದ್ದು ಮಧ್ಯಾಹ್ನವೇ ಹೊರಟುಹೋದರು. ನಾನೂ ಅಣ್ಣಯ್ಯನ್ನ ನೋಡಿಕೊಂಡೇ ಬರ್ತೇನೆ ಎಂದು ಬಿಟ್ಟದ್ದು ಬಿಟ್ಟು ಹೊರಟೆ. "

" ಬಂದುಬಿಡಬೇಕಾಗಿತ್ತು ಮತ್ತೆ."

" ಬಂದಿದ್ದೆ. "

" ನಾನೆಲ್ಲಿ ಹೋಗಿದ್ದೆ ಮತ್ತೆ ? ಒಳಗೆ ದೇವರ ಪೂಜೆಮಾಡುತ್ತಲೋ ಅಡಿಗೆ ಮಾಡುತ್ತಲೋ ಇದ್ದೆ; ಬಾಗಿಲು ಹಾಕಿದ್ದರೆ ಕೂಗಿ ತೆಗೆಸಬಾರದಾಗಿತ್ತೇ ? ಹೊರಗಿನ ಕೋಣೆಯಲ್ಲಿ ನಿಮ್ಮ ಅತ್ತಿಗೆಯೇ ಇದ್ದಳಲ್ಲಾ ! "

" ಏನೋ ಹೋಗಲಿ ಬಿಡು ; ನಿನ್ನೆ ನೋಡುವ ಋಣಾನುಬಂಧವಿರಲಿಲ್ಲ ; ಇವತ್ತಾದರೂ ಬಂದೆಯಲ್ಲ ; ಪ್ರಾಪ್ತಿಯಿಲ್ಲದ್ದು ಹ್ಯಾಗೆ ಬರುತ್ತಪ್ಪ ; ನಾನು ನಿನ್ನೆ ಬಂದು ಏನು ಮಾಡುವಹಾಗಿದ್ದೆ, ನಾನೇನು ತನಿ ಎರೆಯುವಹಾಗಿದ್ದೇನೆಯೇ, ಅಣ್ಣ ಅಂತ ನಮಸ್ಕಾರ ಮಾಡುವಹಾಗಿದ್ದೇನೆಯೇ ? "

" ಇದನ್ನು ಮುಚ್ಚಿಕೊಂಡರೇನಮ್ಮ! ನಮ್ಮ ಅದೃಷ್ಟವೇ ಹೀಗಾಯಿತು! ನನ್ನ ಪಾಡು ಹೋಗಲಿ; ಮುಂದೆ ಗಂಡನ ಮನೆಗೆ ಹೋಗಿ ಸಂಸಾರ ಮಾಡಬೇಕಾದ ಹೆಣ್ಣುಹುಡುಗರಿವೆಯಲ್ಲ, ಅವೂ ನೋಡಿ ನೋಡಿ ಹೀಗಾದರೆ ಏನುಗತಿ ಎನ್ನಿಸುತ್ತದೆ!"

" ನೀನು ನಿನ್ನ ಮಕ್ಕಳ ಯೋಚನೆಮಾಡುತ್ತಿರುವ ಹಾಗೇ ಅಪ್ಪನಿಗೂ ಯೋಚನೆಯಿತ್ತು, ಬಲ್ಲೆಯಾ? ಅವನಿಗೆ ಸಾಯುವಾಗ ಕೊನೆಗೂ ಅದು ಒಂದು ಕೊರಗು ನಿಂತುಹೋಗಿತ್ತು."

" ಯಾವುದು, ನಿನ್ನಸ್ಥಿತಿ? ಹೌದು, ನಾನೂ ಅಪ್ಪನೂ ಒಂದು ದಿನ ಪೇಟೆ ಕಡೆಗೆ ಹೋಗುತ್ತಿದ್ದಾಗ, ಮನೆಯಲ್ಲಿ ಮಾತನಾಡಿದರೆ ರಂಪವಾಗುತ್ತೆಂದು ಕಾಲು ರಸ್ತೆಯ ಮೇಲೆ ನಿಂತು ' ಮಗು ' ಎಂದನು."

" ಏನು ? " ಎಂದೆ.

" ನನಗೆ ಜಂಘಾಬಲವೇ ತಪ್ಪುತ್ತಿದೆ ನೋಡು ; ಜಂಘಾಬಲವು ಹೋದ ಮೇಲೆ ಮನುಷ್ಯನ ಆಶೆ ತೀರಿತು. ಶಾರದೆಯ ಅವಸ್ಥೆ ಹೀಗಾಯಿತಲ್ಲೋ—ಎಂದು ಕಣ್ಣೀರು ತುಂಬಿಕೊಂಡನು. ನಾನು ಅವನ ಮನಸ್ಸನ್ನು ತಿಳಿದುಕೊಂಡು, ನಾನಿರುವ ವರೆಗೂ ಆ ಜವಾಬುದಾರಿ ನನಗಿರಲಪ್ಪ ಎಂದು ಧೈರ್ಯ ಹೇಳಿದೆ."

" ಅದಲ್ಲ. "

" ಮತ್ತೇನು—ನಮ್ಮ ಮಗು ಹೋದದ್ದೇ ? "

" ಮಗು ಹೋದದ್ದಕ್ಕೇನೋ ಅಪ್ಪ ತುಂಬ ದುಃಖಪಟ್ಟ ; ಅಮ್ಮ ಹೋದಾಗಲೂ ಅಷ್ಟು ದುಃಖ ಬರಲಿಲ್ಲವಂತೆ ; ಅದನ್ನು ಒಂದುದಿನ ಅವನೇ ಹೇಳಿದ ; ತಾತ ತಾತ ಎಂತ ಮುದ್ದು ಮಾತನಾಡುತ್ತಾ ಅದು ಅಷ್ಟು ಮಮತೆ ಹತ್ತಿಸಿಬಿಟ್ಟಿತ್ತು. ಮಗನ್ನ ಕಾಣದ್ದು ಮಮ್ಮಗನ್ನ ಕಂಡರು ; ಮುದುಕರು ಪುಣ್ಯವಂತರು ಅಂತ ಎಲ್ಲರೂ ಅನ್ನುತ್ತಿದ್ದರು. ಅದಕ್ಕೂ ಅವನು ಅಷ್ಟು ಕೊರಗಲಿಲ್ಲ."

" ಮತ್ತೆ ಇನ್ಯಾತಕ್ಕೆ ?"

" ಇನ್ಯಾತಕ್ಕೆ ಅಣ್ಣಯ್ಯ, ನಿನ್ನ ಸಂಸಾರ ಹೀಗಾಯಿತಲ್ಲಾ ಅಂತ. "

" ಅದಕ್ಕೆ ಯಾರ ಯತ್ನ ಅಮ್ಮ ! "

" ಅದೇನೋ ನಿಜ ; ಆದರೂ ಈಗಿನಕಾಲದವರ ಹಾಗೆ ನಿನ್ನನ್ನೇ ಮದುವೆ ಮಾಡಿಕೊ ಅಂತ ಬಿಟ್ಟಿದ್ದರೆ ಏನಾಗುತ್ತಿತ್ತೋ ಏನೋ."

" ಬರಿಯ ಭ್ರಾಂತು ಶಾರದಾ. ಈಗಿನ ಕಾಲದಲ್ಲಿ ಓದಿ ಪ್ಯಾಸುಮಾಡಿದ ಹುಡುಗಿಯರು ಸಿಕ್ಕುತ್ತಾರೆ. ಹಾರ್ಮೋನಿಯಂ ಕಲಿತವರು, ವೀಣೆಕಲಿತವರು ಸಿಕ್ಕು

ತ್ತಾರೆ ; ಅಂತಃಕರಣ ಪಡುವ ಹುಡುಗಿಯರು ಸಿಕ್ಕುವುದು ಕಷ್ಟ, ಶಾರದಾ ! ಬರುತ್ತಿದ್ದ ಹಾಗೇ ಅಣ್ಣತಮ್ಮಂದಿರನ್ನು ಅಕ್ಕತಂಗಿಯರನ್ನೂ ತಾಯಿತಂದೆಗಳನ್ನೂ ತೊರೆಸಿಬಿಡುವವರೇ ಬಹಳ ಜನ. ಅಂಥವರನ್ನು ಮದುವೆಮಾಡಿಕೊಳ್ಳುವದು ದೇಹಕ್ಕೆ ಕೆಟ್ಟ ರೋಗ ತಂದುಕೊಳ್ಳುವ ಹಾಗೆ; ಔಷಧಿಕೊಟ್ಟರೆ ವಾಸಿಯಾಗು ವುದಿಲ್ಲ ; ಬಿಡುವದಕ್ಕಿಲ್ಲ ಅನುಭವಿಸುವದಕ್ಕಿಲ್ಲ. ಗುಣವಂತೆಯರನ್ನು ಕೈಹಿಡಿದವರು ಬಾಳುವದಕ್ಕೆ ಆಯಸ್ಸನ್ನು ಪಡೆದು ಬಂದಿರುವದಿಲ್ಲ.—ಇಲ್ಲ ಗಂಡನೋ, ಇಲ್ಲ ಹೆಂಡತಿಯೋ ಎಡವಟ್ಟು ."

" ಅಂತೂ ಅದೇನೋ ತುಂಬ ಕೊರಗು ಹತ್ತಿಬಿಟ್ಟಿತ್ತು ಅಪ್ಪನಿಗೆ. ಅದನ್ನು ನಿನ್ನ ಕೈಲಿ ಹೇಳುವುದಕ್ಕೆ ಅವನಿಗೆ ಮನಸ್ಸಿಲ್ಲ. ಒಂದು ದಿನ, ಅಯ್ಯೋ ಹಾವು ತಂದು ಮನೆಗೆ ಸೇರಿಸಿಕೊಂಡ ಹಾಗಾಯಿತೇ ! ಎಂದ."

" ಆಗಲಿ, ಆಗಲಿ ; ನಾಗರಪಂಚಮಿಯ ಪೂಜೆಗೆ ಅನುಕೂಲವಾಯಿತು, ಜೀವದ ಹಾವೇ ಸಿಕ್ಕಿದಹಾಗಾಯಿತು."

" ನಿನ್ನ ಹಾಸ್ಯಕ್ಕೆ ಕಲ್ಲುಬಡಿದರು ! ಯಾವಾಗಲೂ ಒಂದೇ. "

" ಏನುಮಾಡುವದಮ್ಮ ; ನೀನೂ ನೋಡುತ್ತಿದ್ದೆಯಲ್ಲಾ, ನನ್ನ ಬುದ್ಧಿ ವಂತಿಕೆಯನ್ನೆಲ್ಲಾ ಉಪಯೋಗಿಸಿದ್ದಾಯಿತು ; ಏನೋ ಹೇಳುತಾರಲ್ಲ ಹಾಗೆ, ಅವರವರ ಹುಟ್ಟು ಗುಣ ಅವರು ಬಿಡುವದಕ್ಕಾಗುತ್ತೆಯೇನಮ್ಮ ? ಅದೂ ಅಲ್ಲದೆ ನಾವು ಹುತ್ತ ಮಾಡಿಟ್ಟುಕೊಂಡು ಹಾವು ಬಂದು ಸೇರಿಕೊಂಡಿತು ಎಂದರೆ, ಅದು ಹಾವಿನ ತಪ್ಪೇ ? "

" ಅಲ್ಲ ಅಣ್ಣಯ್ಯ, ಅವಳು ಮಾಡದಿದ್ದ ನೌಮಿಯಿಲ್ಲ ವ್ರತವಿಲ್ಲ—ಪೌರ್ಣೋಮಿ ಬಾಗಿನವಂತೆ, ದ್ವಾದಶೀ ಎಲೆ ಅಡಿಕೆಯಂತೆ, ದಂಪತಿವೀಳ್ಯವಂತೆ, ಫಲದಾನ ವಂತೆ. ಊರೆಲ್ಲಾ ಅವಳ ಸಮಾನ ಪುಣ್ಯವಂತೆ ಇಲ್ಲ ಧಾರಾಳವಂತೆ ಇಲ್ಲ ಅಂತ ಹೊಗುಳುತ್ತಾರೆ; ಮೊನ್ನೆ ತಾನೆ ಅವರ ತಾಯಿಯನ್ನು ಕರೆಸಿ ತಾಯಿ ಬಾಗಿನ ಅಂತ ಕಲಾಪತ್ತಿನ ಸೀರೆ ಉಡಿಸಿ ಕಳುಹಿಸಿದಳು. ಅವಳಿಗೆ ಅಂತಃಕರಣಕ್ಕೆ ಕಮ್ಮಿಯೇ ಆಸ್ತೆಗೆ ಕಮ್ಮಿಯೇ ; ಆದರೂ ಯಾಕೆ ಹೀಗೆ ಆಡುತಾಳೆ ? ನನ್ನ ಕಂಡ ರಂತೂ ಹೋಗಲಿ ; ಅತ್ತಿಗೆ ನಾದಿನಿಯ ದ್ವೇಷ; ತನ್ನ ಗಂಡ ತನ್ನ ಮಕ್ಕಳು ಇವ ರೊಡನೆಯಾದರೂ ಹಿತವಾಗಿರಬಾರದೇ ? "

" ಅದೆಲ್ಲಾ ನೌಮಿ ವ್ರತ ಮಾಡಿದರೆ ಬರುತ್ತೆಯೇಮ್ಮ !—ಹೋಗಲಿ ಬಿಡು. ನಿನ್ನೇದಿನ, ಹಾಗಾದರೆ, ಅಲ್ಲಿಂದ ಬಂದು ಅಡಿಗೆಯೋ ನಿನಗೆ ? "

" ಅಡಿಗೆಯೂ ಇಲ್ಲ......ಹೂಂ ಹೂಂ, "

ನನಗೆ ಆಗ ಒಲೆಯಮೇಲೆ ದೃಷ್ಟಿಹೋಯಿತು. ನೆನ್ನೆಯದಿನ ಒಲೆಯಮೇಲೆ ಎಸರಿಟ್ಟ ತಪ್ಪಲೆ ಹಾಗೇ ಇದೆ; ಉರಿಯನ್ನು ಹೊರಕ್ಕೆ ಎಳೆದಿದ್ದಿದ್ದರಿಂದ ಸೌದೆ ಹೊರಗೆ ಉರಿದು ಬೂದಿಯಾಗಿದೆ. " ಅಯ್ಯೋ ತಾಯಿ, ಈ ನಿರ್ಭಾಗ್ಯನ್ನ ನೋಡ ಬೇಕು ಅಂತು ಹೋಗಿ ಎರಡು ದಿನ ಉಪವಾಸಮಾಡಿದೆಯಾ ! " ಎಂದು ಕಣ್ಣಿನಲ್ಲಿ ನೀರು ತಂದುಕೊಂಡೆ.

" ನೀನು ನಿರ್ಭಾಗ್ಯ ಗಿರ್ಭಾಗ್ಯ ಎಂದು ಬೈದುಕೊಳ್ಳಬೇಡ ಅಣ್ಣಯ್ಯ ; ದೇವರು ನಿನಗೇನು ಕಡಿಮೆಮಾಡಿದ್ದಾನೆ ! ನಾನು ಉಪವಾಸಮಾಡಿದರೆ ಯಾವ ಮಕ್ಕಳಿಗೆ ಹಾಲಿಲ್ಲದೆ ಹೋಗುತ್ತದೆ ; ಊಟ ಎಲ್ಲಿ ತಪ್ಪುತ್ತೆ ? ಇವೊತ್ತು ಅಡಿಗೆ ಮಾಡುತ್ತೇನೆ ; ಊಟಮಾಡುವದು ಇದ್ದೇ ಇದೆ ; ನೀನು ಎಲ್ಲಾದರೂ ಚೆನ್ನಾಗಿದ್ದರೆ ಸಾಕು ; ಅದನ್ನು ನಾನು ಕೇಳಿದರೆ ಸಾಕು. "

" ನನಗೆ ಏನೂ ಕಮ್ಮಿ ಇಲ್ಲಮ್ಮ : ದೇವರು ಹೊಟ್ಟೆತುಂಬ ಅನ್ನಕೊಟ್ಟಿದ್ದಾನೆ ; ಆದರೆ ತುಪ್ಪ ಮಜ್ಜಿಗೆಯಿಲ್ಲದೆ ಬರಿಯ ಅನ್ನವನ್ನು ಮುಕ್ಕುವುದು ನನ್ನ ಅದೃಷ್ಟವಾಗಿದೆ."

ಅವಳು ಇನ್ನೂ ಮಡಿಯನ್ನೇ ಉಟ್ಟಿರಲಿಲ್ಲ. ಇನ್ನು ಇವೊತ್ತೂ ಉಪವಾಸ ಮಾಡಿಯಾಳೆಂದು ಬಲವಂತವಾಗಿ ಅವಳನ್ನು ಎಬ್ಬಿಸಿದೆ. ನಾನೂ ಅಲ್ಲಿಯೇ ಊಟ ಮಾಡುತ್ತೇನೆಂದು ಹೇಳಿದೆ. " ಮಕ್ಕಳಿಗೆ ಅಡಿಗೆ ಮಾಡಿ ಹಾಕುವವರು ಯಾರು ? " ಎಂದಳು. " ಇವೊತ್ತು ಅವಳು ಒಳಗೆ ಬಂದಿದ್ದಾಳೆ ; ಮಾಡುತ್ತಾಳೆ " ಎಂದೆ. ಇವೊತ್ತು ' ಶ್ರೀಯಾಳಷಷ್ಠಿಯಲ್ಲವೇ ? ' ಎಂದಳು. ' ಹೌದು; ಅದನ್ನು ಮುಂದಿನ ಷಷ್ಠಿ ಮಾಡುತ್ತೇವೆ" ಎಂದೆ. " ಇದಕ್ಕೂ ಜಗಳವಾದರೆ ಏನುಮಾಡುವದಪ್ಪಾ ?" ಎಂದು ಕೇಳಿದಳು. " ಅದು ನನ್ನ ಪಾಡು " ಎಂದು ಉತ್ತರಕೊಟ್ಟು ಊಟ ಮಾಡುತ್ತ ಮುಂದಿನ ಕ್ರಮವನ್ನು ಯೋಚಿಸಿದೆ. ಒಂದು ತುತ್ತು ಕಡಿಮೆಯಾಗಿಯೇ ಊಟಮಾಡಿ ದಾರಿಯಲ್ಲಿ ಹೋಗುತ್ತಾ ಅಕ್ಷತೆಯನ್ನು ಕೆರೆದು ಹಾಕಿಕೊಂಡು ಆಫೀಸಿನಲ್ಲಿ ಒಂದು ಗಂಟೆ ಹೊತ್ತು ಕುಳಿತಿದ್ದು, ಮ್ಯಾನೇಜರಿಗೆ ತಿಳಿಸಿ ಮನೆಗೆ ಬಂದು ಮತ್ತೆ ಊಟ ಮಾಡಿಕೊಂಡು ಹೋದೆ. " ಸಾಹೇಬರು ಹೇಳಿ ಕಳುಹಿಸಿದ್ದರು " ಎಂದು ಸುಳ್ಳುಹೇಳಿ ವ್ಯಾಜ್ಯವನ್ನು ತಪ್ಪಿಸಿಕೊಂಡದ್ದಾಯಿತು.

---

# ಕಾವ್ಯಾವಲೋಕನ

**ಶಿವಾನುಭವ**—ತ್ರೈಮಾಸಿಕ ಪತ್ರಿಕೆ. ವಾರ್ಷಿಕಚಂದಾ ೩ ರೂಪಾಯಿಗಳು. (ಸಂಪಾದಕರು ಮ|| ರಾ|| ಫ. ಗು. ಹಳಕಟ್ಟಿ ಬಿ.ಎ.,ಎಲ್‌ಎಲ್.ಬಿ.)

ಕನ್ನಡ ಸಾಹಿತ್ಯವು ಮುಂದೆ ಹೇಗಾದರೂ ಬೆಳೆಯಲಿ; ಹಿಂದೆ ಬೆಳೆದು ಬಂದದ್ದು ಮುಖ್ಯವಾಗಿ ಮತಗಳ ಬೆಂಬಲದಿಂದ. ಎಲ್ಲಾ ಮತದವರೂ ಸೇರಿ ಗ್ರಂಥನಿರ್ಮಾಣ ಮಾಡಿದ್ದರಿಂದ ನಮ್ಮ ಭಂಡಾರವು ತುಂಬಿತು, ಅದರಲ್ಲಿ ವೈವಿಧ್ಯವೂ ತಲೆದೋರಿತು. ಈ ಸಾಹಿತ್ಯದ ಪರಿಚಯವನ್ನು ಕನ್ನಡಿಗರಿಗೆಲ್ಲ ಮಾಡಿಸಿಕೊಡಬೇಕೆಂದು ಕಾವ್ಯಮಂಜರಿ ಕಾವ್ಯಕಲಾನಿಧಿಗಳ ಸಂಪಾದಕರು ಕೆಲವುಕಾಲ ಶ್ರಮಿಸಿದರು. ಅವರ ಧ್ಯೇಯವು ಮತಸೇವೆಯಾಗಿರಲಿಲ್ಲ; ಕೇವಲ ಸಾಹಿತ್ಯಸೇವೆಯೇ ಆಗಿದ್ದಿತು. ಮೈಸೂರುಸರ್ಕಾರದ ಓರಿಯಂಟಲ್ ಲೈಬ್ರರಿಯವರು ಕೂಡ ಪ್ರಾಚೀನ ಗ್ರಂಥಗಳ ಪ್ರಕಟನೆಯಲ್ಲಿ ನಿರತರಾಗಿರುತ್ತಾರೆ. ಆದರೂ ತಮತಮಗೆ ಸಂಬಂಧಪಟ್ಟ ಗ್ರಂಥಗಳನ್ನು ತಾವೇ ಎಲ್ಲರ ಮುಂದಿಡಬಾರದೇಕೆ? ಕರ್ಣಾಟಕದ ಇತಿಹಾಸದಲ್ಲಿ ತಮ್ಮವರು ಎಷ್ಟರಮಟ್ಟಿಗೆ ಭಾಗಿಗಳಾಗಿರುವರು ಎಂಬುದನ್ನು ಕನ್ನಡಿಗರ ಅವಗಾಹನೆಗೆ ತರಬಾರದೇಕೆ, ಎಂದು ವಿದ್ಯಾವಂತರು ಆಲೋಚಿಸುವುದು ಸಹಜ. ಈ ಶ್ರಮವಿಭಾಗದಿಂದ ಕಾರ್ಯಭಾಗವು ಜಾಗ್ರತೆಯಾಗಿಯೂ ಯಶಸ್ವಿಯಾಗಿಯೂ ನಡೆಯುವುದು.

'ಶಿವಾನುಭವ' ದ ಮೂಲಕ ವೀರಶೈವ ಗ್ರಂಥಗಳು ಹೊರಬೀಳುವುದು ಒಂದು ಮಹತ್ತರವಾದ ಉಪಕಾರ; ವೀರಶೈವ ಕವಿಗಳ ಮತ್ತು ಮಹಾಪುರುಷರ ಜೀವನಚರಿತ್ರೆಗಳು ಕನ್ನಡಿಗರಿಗೆಲ್ಲ ತಿಳಿದುಬರುವುದು ಒಂದು ಹೆಚ್ಚಿನ ಪ್ರಯೋಜನ. ವೀರಶೈವ ಮತತತ್ವಗಳನ್ನು ತಿಳಿಯಬೇಕೆನ್ನುವವರಿಗೆ ಶಿವಾನುಭವವು ಬಹಳ ಸಹಕಾರಿಯೆಂಬುದನ್ನು ಹೇಳಬೇಕಾಗಿಲ್ಲ. ಆದರೆ ಆಧುನಿಕ ಕಾಲದಲ್ಲಿಯೂ ಕೇವಲ ಮತದೃಷ್ಟಿಯಿಂದಲೇ ಸಾಹಿತ್ಯಸೇವೆಯನ್ನು ಮಾಡಬೇಕೆ? ಎಂದು ಕೆಲವರು ಪ್ರಶ್ನೆಮಾಡಬಹುದು. ಇದಕ್ಕೆ ಒಂದು ರೀತಿಯಲ್ಲಿ ಉತ್ತರವನ್ನು ಕೊಡಬಹುದಾಗಿದೆ. ಜ್ಞಾನ ಭಕ್ತಿ ವೈರಾಗ್ಯಗಳು ಯಾವುದೊಂದು ಪಂಗಡದ ಹಕ್ಕುದಾರಿಯಲ್ಲ, ಹಾಗೆಯೇ ಶೌರ್ಯಧೈರ್ಯಸಾಹಸಗಳೂ ಯಾವುದೊಂದು ಜಾತಿಯ ಆಸ್ತಿಯಲ್ಲ. ಪ್ರತಿಯೊಂದು

ಪಂಗಡದವರೂ ತಮ್ಮಲ್ಲಿರುವ ಉತ್ತಮಾದರ್ಶಗಳನ್ನು ಅನುಸರಿಸುವುದು ಒಳ್ಳೆಯದು. ಎಲ್ಲಾ ಪಂಗಡದವರೂ ತಮ್ಮ ಉತ್ತಮಸಾಮಗ್ರಿಗಳನ್ನು ಪ್ರದರ್ಶಿಸಲಿ. ಬೇಕಾದವರು ಉತ್ತಮವಾದುದನ್ನು ಎತ್ತಕಡೆಯಿಂದಲಾದರೂ ಆರಿಸಿಕೊಳ್ಳಲಿ. ಈ ಉತ್ತರವನ್ನು ಕೊಡುವಾಗ ಧರ್ಮಾಂಧತೆಗೆ ಅವಕಾಶವಿಲ್ಲವೆಂದೂ, ವ್ಯಕ್ತಿಗೆ ಸಂಪೂರ್ಣ ಸ್ವಾತಂತ್ರ್ಯವಿರುವುದೆಂದೂ ನಾವೆಲ್ಲರೂ ತಿಳಿದೇ ಇದ್ದೇವೆ.

ಇಂತಹ ಪತ್ರಿಕೆಗಳ ಸಂಪಾದಕರಿಗೆ ವಿಶೇಷವಾದ ಜವಾಬ್ದಾರಿಯು ಬಂದು ಬೀಳುತ್ತದೆ. ಈ ಪತ್ರಿಕೆಗಳಿಂದ ಫಲಿಸುವ ಗುಣದೋಷಗಳು ಮುಖ್ಯವಾಗಿ ಸಂಪಾದಕರನ್ನು ಸೇರಿರುವುವು. ಅವರು ಆಧುನಿಕಕಾಲದ ವಿಮರ್ಶಪದ್ಧತಿಯನ್ನು, ಇತಿಹಾಸದಲ್ಲಿ ಶಾಸ್ತ್ರೀಯಮಾರ್ಗವನ್ನು ತಿಳಿದವರಾಗಬೇಕು ; ಮತಾಭಿಮಾನವೊಂದಲ್ಲದೆ ಸಾಹಿತ್ಯಾಭಿಮಾನವನ್ನೂ, ಇದಕ್ಕಿಂತ ಹೆಚ್ಚಾಗಿ ರಾಷ್ಟ್ರಾಭಿಮಾನವನ್ನೂ ಪಡೆದವರಾಗಬೇಕು ; ನಂದೀಶ್ವರ, ಗಣಹರುಷ, ನಿರಂಜನ ಗಣೇಶ್ವರಾದಿಗಳನ್ನು ಕರೆತಂದು ಪವಾಡಗಳಿಂದ ಕಣ್ಣುಕಟ್ಟಿಸಿದರೆ ಮಾನವಜೀವನೋತ್ತಾರಣಕ್ಕೆ ಸಹಾಯವಲ್ಲವೆಂದು ಮನಗಟ್ಟು ಮಾಡಿಕೊಂಡಿರಬೇಕು. ಈ ಸಂಪಾದಕರಿಗೆ ಮತಾಭಿಮಾನಿಗಳಿಂದ ಆಕ್ಷೇಪಣೆಗಳು ಬಲವಾಗಿ ಬರುತ್ತವೆ. ಧಾರ್ಮಿಕಪುರುಷರ ದೇವತ್ವವನ್ನು ಕಿತ್ತುಹಾಕಿ ಅವರನ್ನು ಇತಿಹಾಸ ಪುರುಷರನ್ನಾಗಿ ಮಾಡುವುದು ಸಾಧುವೇ ಎಂದು ವಿರಕ್ತರು ಕೇಳುವರು ; ಬಸವೇಶ್ವರನ ಮಾತೆತ್ತಿದರೆ ಪಂಚಾಚಾರದವರು ಸಿಡುಕು ತೋರಿಸುವರು ; ಎತ್ತದಿದ್ದರೆ ಶೂನ್ಯಸಿಂಹಾಸನದವರು ಮೇಲೆ ಬೀಳುವರು. ಆಕ್ಷೇಪಣೆಗಳು ಇನ್ನೂ ಇತರ ಕಡೆಗಳಿಂದಲೂ ಬರುತ್ತವೆ. ಸಂಪಾದಕರು ಧೈರ್ಯಶಾಲಿಗಳಾಗಿ ತಮ್ಮ ಧ್ಯೇಯವನ್ನು ಸಾಧಿಸಿಕೊಳ್ಳುವವರಾಗಬೇಕು. ಹಾಗಿದ್ದರೆ ಈ ಪತ್ರಿಕೆಗಳಿಂದ ಪ್ರಯೋಜನವುಂಟು.

ಮ|| ರಾ|| ಹಳಕಟ್ಟಿಯವರು ಇಂತಹ ಸಂಪಾದಕರು. ಆದುದರಿಂದ ಶಿವಾನುಭವವನ್ನು ಬಹಳ ಆದರದಿಂದ ನಾವು ಬರಮಾಡಿಕೊಳ್ಳುವೆವು. ಈಗಾಗಲೇ ಅವರು ಆಕ್ಷೇಪಣೆಗಳಿಗೆ ಗುರಿಯಾಗಿ ಹೋಗಿದ್ದಾರೆ; ಅವಕ್ಕೆ ತಕ್ಕ ಸಮಾಧಾನಗಳನ್ನೂ ಕೊಟ್ಟಿರುತ್ತಾರೆ.

"ನಾನು ಶಿವಶರಣರ ವೃತ್ತಾಂತಗಳಲ್ಲಿ ಐತಿಹಾಸಿಕ ಭಾಗಕ್ಕೆ ಬಹಳ ಮಹತ್ವ ಕೊಟ್ಟಿರುತ್ತೇನೆ. ಆದ್ದರಿಂದ ಅವರು ದೊಡ್ಡಮನುಷ್ಯರು ಎಂಬ ದೃಷ್ಟಿಯನ್ನಿಟ್ಟು ಲೇಖಗಳನ್ನು ಬರೆಯಬೇಕಾಗುತ್ತದೆ...............ಈಗಿನ ಕಾಲಕ್ಕೆ ಈ ದೃಷ್ಟಿಯಿಂದಲೇ ನಾವು ಮತತತ್ವಗಳ ವಿವರಣೆಗಳನ್ನು ಮತ್ತು ಧರ್ಮಸ್ಥಾಪಕರ ಚರಿತ್ರೆಗಳನ್ನು ಬರೆಯುವುದು ಅವಶ್ಯವಿರುತ್ತದೆ"

ಎಂದು ಹೇಳಿರುವ ಮ|| ರಾ|| ಹಳಕಟ್ಟಿಯವರು ಸರಿಯಾದ ಪಂಥವನ್ನು ಹಿಡಿದಿದ್ದಾರೆ ಎಂಬುದರಲ್ಲಿ ಸಂದೇಹವೇ ಇಲ್ಲ.

ವೀರಶೈವ ಗ್ರಂಥಗಳಲ್ಲಿ ಹೇಳಿರುವ ವಿಷಯಗಳಿಗೂ, ವಿಚಾರಮಾಡಿ ತಿಳಿಯುವ ವಿಷಯಗಳಿಗೂ ಆಗಾಗ್ಯೆ ತಾಳೆಬೀಳದೆ ಹೋಗುವುದುಂಟು. ಇಂಥ ಸಂದರ್ಭಗಳಲ್ಲಿ ವಿಷಯವಿವೇಚನೆಯನ್ನು ಚೆನ್ನಾಗಿ ಮಾಡಬೇಕಾಗುತ್ತದೆ. ಇಲ್ಲಿ ಒಂದು ಉದಾಹರಣೆಯನ್ನು ಕೊಡುವೆವು. "ಹರಿಹರ, ರಾಘವಾಂಕ, ಭೀಮಕವಿ ಇವರೆಲ್ಲರೂ ಈ ಹುಕ್ಕಬುಕ್ಕರ ಕಾಲದಲ್ಲಿರಬೇಕು" (1336–1379) ಎಂದು (ಸಂ. ೧ ಪುಟ ೯) ತೀರ್ಮಾನಿಸುವ ಮೊದಲು ಕವಿಚರಿತೆಯ ಮೊದಲನೆಯ ಸಂಪುಟದಲ್ಲಿ ಹರಿಹರ ರಾಘವಾಂಕರ ಕಾಲನಿರ್ಣಯವು ಹೇಗೆ ಆಗಿರುವುದೆಂಬುದನ್ನು ನೋಡಬಹುದಾಗಿತ್ತು. ಆದರೆ ಕಾಲಕ್ರಮದಲ್ಲಿ ಲೇಖನಗಳೂ ಚರ್ಚೆಗಳೂ ಬಂದು ವಿಷಯಗಳು ಬಹುಮಟ್ಟಿಗೆ ತೀರ್ಮಾನವಾಗುವುದೆಂದು ನಮಗೆ ಭರವಸೆಯಿರುತ್ತದೆ. ಇವೆಲ್ಲಕ್ಕೂ ಅವಕಾಶವನ್ನು ಕಲ್ಪಿಸಿಕೊಟ್ಟಿರುವ ಶಿವಾನುಭವವು ಚಿರಕಾಲ ಕನ್ನಡಿಗರ ಸೇವೆಯನ್ನು ಮಾಡುತ್ತಿರಲೆಂದು ಹಾರೈಸುತ್ತೇವೆ.

ಎಂ. ಆರ್. ಶ್ರೀ.

---

**ಭಾವಗೀತೆ**—ಆಯ್ಕೆಗಾರ, ಮ|| ಕೃ. ಶ್ರೀ. ಬೆಟಗೇರಿ "ಕವಿಭೂಷಣ" ಕ್ರೌ೯ ಪುಟಗಳು ೧೪ + ೧೯೨, ಬೆಲೆ ೧ ರೂಪಾಯಿ.

ಭಾವಗೀತೆಯೆಂಬ ಈ ಪುಸ್ತಕವನ್ನು ಧಾರವಾಡದ ಕರ್ಣಾಟಕ ರಾಷ್ಟ್ರೀಯಶಿಕ್ಷಣಸಮಿತಿಯವರು ಪ್ರಕಟಿಸಿದ್ದಾರೆ. ಇಲ್ಲಿನ ಗೀತೆಗಳು ದಾಸಕೂಟದವರಿಂಲೂ, ವೀರಶೈವ ಕವಿಶರಣರಿಂದಲೂ, ಈಚಿನ ಮತ್ತು ಈಗಿನ ಕೆಲವು ಕವಿಗಳಿಂದಲೂ ಬರೆದುವಾಗಿವೆ. ಆಯಾ ಕರ್ತೃಗಳು ಇವುಗಳನ್ನು ತಮ್ಮಷ್ಟಕ್ಕೆ ತಾವೋ, ಇತರರಿಗಾಗಿಯೋ ಹಾಡಿಕೊಂಡವುಗಳು. ಎಲ್ಲದರಲ್ಲಿಯೂ ಒಂದು ವಿಧವಾದ ನೈಸರ್ಗಿಕತೆಯೂ, ಆತ್ಮನಿವೇದನವೂ ನೀತಿಯೂ ಇವೆ. ಇವುಗಳಲ್ಲಿ ಹಲವು, ಬಹುಜನರ ಬಳಕೆಯಲ್ಲಿ ಇರುವುದರಿಂದ ಅವನ್ನು ಒಂದುಕಡೆ ಸೇರಿಸಿ ಮುದ್ರಿಸಿರುವುದು ಉಪಕಾರವೆನ್ನುವುದರಲ್ಲಿ ಸಂಶಯವೇನಿದೆ ?

ಇಲ್ಲಿರುವ ಸುಮಾರು ೧೮೦ ಗೀತೆಗಳನ್ನು ಬೆಟಗೇರಿಯವರು (೧) ಸಂಕೀರ್ತನಪದ್ಧತಿ, (೨) ಕಾರುಣ್ಯ ಪ್ರಾರ್ಥನಾ ಅಥವಾ ಆರ್ತಭಕ್ತಪದ್ಧತಿ, (೩) ಸಾಧಕಪದ್ಧತಿ, (೪) ಸಿದ್ಧ ಅಥವಾ ಉಪದೇಶಪದ್ಧತಿ ಎಂದು ನಾಲ್ಕುವಿಧವಾಗಿ ವಿಂಗಡಿಸಿದ್ದಾರೆ. ಹೀಗೆ ವಿಂಗಡಿಸುವುದು ನ್ಯಾಯವಾದರೂ ಅನೇಕ ಕಡೆ ಸ್ಪಷ್ಟ ವ್ಯತ್ಯಾಸಗಳು ಕಾಣದಿರುವುದರಿಂದ, ಭಕ್ತಿರಸಪ್ರಧಾನವಾದ ಕೀರ್ತನೆಗಳನ್ನು ಹೀಗೆ ವಿಂಗಡಿಸುವುದು ಕೆಲವು ವೇಳೆ ಅಸಮರ್ಪಕವಾಗುವುದು.

ಮೊದಲಲ್ಲಿ ಪ್ರಕಾಶಕರು "ಎರಡು ಮಾತುಗಳನ್ನು" ಹೇಳಿದ್ದಾರೆ. ಆ ಮೇಲೆ ಆಯ್ಕೆಗಾರರ "ಮೊದಲು ಹೇಳುವ ಮಾತು"ಗಳಿವೆ. "ಈ ಪುಸ್ತಕದ ಉದ್ದೇಶ, ಹೇತು, ಧ್ಯೇಯ, ಗುರಿ, ಗೊತ್ತು, ಇನ್ನೂ ಮತ್ತೇನು ಹೆಚ್ಚುಕಡಿಮೆ ಹೆಸರುಗಳಿದ್ದರೂ" ಏನೆಂಬುದನ್ನೂ, ಬಹುಜನ ನಾಡಾಡಿಗಳ ದಿನದಿನದ ಬಳಕೆಯಲ್ಲಿರುವ ಈ ಕೀರ್ತನೆಗಳ ಹೊರರೂಪವನ್ನು ಅವರು ಶುದ್ಧಗೊಳಿಸಿರುವ ರೀತಿಯನ್ನೂ ಹೇಳಿರುವರು. ತಿದ್ದುವ ಕೆಲಸವು ಸುಲಭವಲ್ಲ.

ಮುಂದಿನ ಮುದ್ರಣದಲ್ಲಿ "ವಿಸ್ತೃತವಾದ ಮುನ್ನುಡಿಯನ್ನು ಬರೆದು, ಈ ಗೀತೆಗಳ ಒಳದಿರುಳಿನ ಸವಿಯನ್ನು, ಸಾಮಾನ್ಯಜನರಿಗೂ ಕೂಡ ಕಾಣಿಸಿಕೊಡಬೇಕೆಂದೂ" "ನಿಶ್ಚಯವನ್ನು ಈಗಲೇ ಹೇಳುವುದು ಹೇಗೆ? ನೀವೆ ನೋಡಿ" ಎಂದೂ ಹೇಳಿರುವುದರಿಂದ ಇದರ ಹೊಸ ಮುದ್ರಣವನ್ನು ನಿರೀಕ್ಷಿಸುತ್ತಿದ್ದೇವೆ. ಸ್ವತಃ ಕವಿಗಳೂ, ಕರ್ಣಾಟಕ ಮಹಾವಿದ್ಯಾಲಯದ ಅಧ್ಯಾಪಕರೂ ಆದ ಬೆಟಗೇರಿಯಂಥವರು ಮಾಡುವ ಆ ಕೆಲಸವು ಉಪಯುಕ್ತವಾಗಬಹುದೆಂಬುದನ್ನು ಹೇಳಬೇಕಾಗಿಲ್ಲ.

ಅಭ್ಯಾಸದಿಂದಲೋ ಸಂಸ್ಕಾರದಿಂದಲೋ ಕನ್ನಡನುಡಿಯ ಪರಿಚಯವು ಅಷ್ಟು ಹೆಚ್ಚಾಗಿ ಇಲ್ಲದಿರುವುದರಿಂದಲೋ ಬಹುವಾಗಿ ಸಂಸ್ಕೃತ ಶಬ್ದಗಳನ್ನು ಉಪಯೋಗಿಸುವವರು, ವೀರಕನ್ನಡಿಗರ ಇಂಥ ನುಣುಪಾದ ಹೊಳಪಾದ ಪೊಚ್ಚಪೊಸ ತಿರುಳ್ಗನ್ನಡವನ್ನು ಓದಿ ಬಹು ವಿಸ್ಮಯಪಡುತ್ತಿರುವರು. ಬೆಟಗೇರಿಯವರು ಗೀತೆಗಳ ಸಂಗ್ರಹಮಾಡಬೇಕೆಂಬ ಬಯಕೆಯ, 'ಬೆಳಿಗೆಗೆ ಬೇಕಾದ ಸಾಧನ ಸಂಪತ್ತಿಯ ಅಭಾವದ ಮೂಲಕ ಆ ಮೊಳೆಯು ಅಲ್ಲಿಯೇ ಕೊಳೆಯುತ್ತ ನಡೆದಿತ್ತು. ಪ್ರತಿಕೂಲ ಕಾಲವಿದ್ದಾಗ, ತಳಿತು ನಳನಳಿಸುವ ಮರವು ಮಾಗಿಹೋಗಬಹುದು. ಅನುಕೂಲ ಕಾಲವಿದ್ದಾಗ ಒನಿಕೆಗೆ ಕೊನರೊಡೆಯಬಹುದು. ಈ ಕಾಲಗಳು ನಾವು ಕರೆದಾಗ ಬರುವಂಥವುಗಳಲ್ಲ. ಕಾಲಪುರುಷನು ನಮ್ಮ ಊಳಿಗದಾಳಲ್ಲ. ಇಳೆಯನ್ನು ಹೊಳೆಯಿಸಿ, ಉಳಿಯಿಸಿ, ಅಳಿಯಿಸುವ ಇಳೆಯೊಣ್ಮನ ಊಳಿಗದ ಬಂಟನಾ ಕಾಲ!" ಈ ವಿಧವಾದ ವಾಕ್ಯವೈಭವವನ್ನು ನೋಡಿ, ಹೊಸಕನ್ನಡಕ್ಕೆ ಹೊಸಕಳೆ ಕೊಡುತ್ತಿರುವ ಮಹನೀಯರುಗಳನ್ನು ಬಹುವಾಗಿ ಅಭಿನಂದಿಸುತ್ತೇವೆ.

ಪುಸ್ತಕದಲ್ಲಿ 'ಗೀತೆಗಳ ವರ್ಣಾನುಕ್ರಮಣಿಕೆ'ಯೂ, 'ಗೀತೆಗಳ ಕರ್ತೃಗಳು ಮತ್ತು ಅವರ ಅಂಕಿತಗಳ' ಪಟ್ಟಿಯೂ ಕೊನೆಯಲ್ಲಿ 'ತಿಳಿಯದ ನುಡಿಗಳ ಹುರುಳೆಂ'ಬ ಕಷ್ಟವಾದ ಪದಗಳ ಅರ್ಥಗಳೂ ಇವೆ.

ವಿ. ಸೀ.

---

# ವಸ್ತುಕೋಶ

ಪ್ರಬುದ್ಧ ಕರ್ಣಾಟಕದ ಚಿತ್ರಕಲಾಶಾಖೆಯ ಸಂಪಾದಕರಾಗಿರುವ ಮ|| ಬಿ. ವೆಂಕೋಬರಾವ್ ಬಿ. ಎ. ಯವರು ಮಾಡುತ್ತಿರುವ ಶ್ಲಾಘ್ಯವಾದ ಕೆಲಸವನ್ನು ಸರ್ಕಾರದವರು ಪರಾಮರ್ಶಿಸಿ ಅವರನ್ನು ಮೈಸೂರ ಶಾಸನದ ಇಲಾಖೆಯಿಂದ ಬೆಂಗಳೂರ ಇಂಜನಿಯರ್ ಇಲಾಖೆಗೆ ವರ್ಗಮಾಡಿರುತ್ತಾರೆ. ಇದರಿಂದ ಕಸದ ಕೋಣೆಯಲ್ಲಿದ್ದ ರತ್ನದೀಪವನ್ನು ಸಭಾಮಂಟಪಕ್ಕೆ ತೆಗೆದುಕೊಂಡುಹೋಗಿಟ್ಟಂತಾಯಿತು. ಈ ಹೊಸಕೆಲಸವು ಹೆಚ್ಚು ಶ್ರಮದಾಯಕವಾದರೂ ಮ|| ರಾಯರ ಸಾಮರ್ಥ್ಯವು ಈ ಹೊಸಸ್ಥಳದಲ್ಲಿ ಹೆಚ್ಚು ಪ್ರಕಾಶಕ್ಕೆ ಬಂದು ಅವರ ಸಾಮರ್ಥ್ಯದಿಂದ ದೇಶಕ್ಕೆ ಹೆಚ್ಚು ಉಪಕಾರವಾಗುವುದಕ್ಕೆ ಅವಕಾಶವಿದೆ. ಅಂತು, ಸಭಾಮಂಟಪದಲ್ಲಿರುವವರು ಸಂತೋಷಪಡಬಹುದಾದರೂ ಕಸದ ಕೋಣೆಯಲ್ಲಿರುವ ಸಂಪಾದಕನಿಗೆ ಮಾತ್ರ ಒಂದು ಕಣ್ಣು ಮುಖವನ್ನು ಬಿಟ್ಟು ಬೆನ್ನಿಗೆ ಹೋದಂತಾಗಿದೆ ಮ|| ರಾಯರು ಮೈಸೂರು ಪಟ್ಟಣದಲ್ಲಿರುವವರೆಗೂ ನೇಪಥ್ಯಗೃಹದಲ್ಲಿದ್ದಂತೆ ಇದ್ದು ಪ್ರಬುದ್ಧ ಕರ್ಣಾಟಕವನ್ನು ಸಿಂಗರಿಸಿ ಕಳುಹಿಸುತ್ತಿದ್ದರು. ಈಗ ಆ ಕೆಲಸವನ್ನು ಕಸಗುಡಿಸುವವನು ಮಾಡುವುದು ಹೇಗೆ ? ಮೈಸೂರಿನಲ್ಲಿ ಒಂದು ಭುಜವೂ ಎಂಬತ್ತಾರು ಮೈಲಿಯ ಆಚೆ ಇರುವ ಬೆಂಗಳೂರಿನಲ್ಲಿ ಮತ್ತೊಂದು ಭುಜವೂ ಇದ್ದರೆ ಅವೆರಡೂ ಸೇರಿ ಕೆಲಸಮಾಡುವುದು ಹೇಗೆ ? ಆದರೂ ಅವೆರಡೂ ಒಟ್ಟಿಗೆ ಸೇರಿ ಕೆಲಸಮಾಡಬೇಕೆಂಬ ಪ್ರಬಲವಾದ ಅಂತಃಪ್ರವೃತ್ತಿ ಇದ್ದರೆ ಅಸಂಭಾವಿತವಾದದ್ದೂ ಆಗಬಹುದು ; ಬೆಂಗಳೂರು ಮೈಸೂರುಗಳು ಒಟ್ಟಿಗೆ ಸೇರಬಹುದು. ಇಲ್ಲದೆ ಇದ್ದರೆ ನಮ್ಮ ಮೋಟುಭುಜಗಳೇ ನಲವತ್ತು ನಲವತ್ತೈದು ಮೈಲಿ ಬೆಳೆದರೂ ಬೆಳೆಯಬಹುದು ! ರತ್ನಾವಳೀ ಲೇಖಕನು ಹೇಳಿರುವಂತೆ

ಅಭಿನಂದನ.

> " ದ್ವೀಪಾದನ್ಯಸ್ಮಾದಪಿ ಮಧ್ಯಾದಪಿ ಜಲನಿಧೇಃ ದಿಶೋಽಪ್ಯಂತಾತ್ |
> ಆನೀಯ ಝಟಿತಿ ಘಟಯತಿ ವಿಧಿರಭಿಮತಮಭಿಮುಖೀಭೂತಃ || "

ಎಂದು ನಾವೂ ಹೇಳಬಹುದಲ್ಲವೇ ?

ನಮ್ಮ ಮಾತಿರಲಿ; ಮ|| ವೆಂಕೋಬರಾಯರ ಯೋಗ್ಯತಾಸಾಮರ್ಥ್ಯಗಳು ಅವರ ಹೊಸಸ್ಥಾನದಲ್ಲಿ ಇನ್ನೂ ಹೆಚ್ಚು ಪ್ರಕಾಶಕ್ಕೆ ಬರಲಿ! ಅವುಗಳನ್ನು ಸರ್ಕಾರದವರೂ ಮಹಾಜನರೂ ಗಮನಕ್ಕೆ ತಂದುಕೊಂಡು ಅವಕ್ಕೆ ಹೆಚ್ಚು ಬೆಲೆಯನ್ನು ಕೊಡಲಿ! ಅವರಿಂದ—(ಮೊದಲು ಪ್ರಬುದ್ಧ ಕರ್ಣಾಟಕಕ್ಕೆ, ಆಮೇಲೆ ಇತರರಿಗೆ, ಅದು ಮಾತ್ರ ಎಲ್ಲರಿಗೂ ಜ್ಞಾಪಕವಿರಲಿ.)—ಇನ್ನೂ ಹೆಚ್ಚು ಉಪಕಾರವಾಗಲಿ !!

---

**ಕನ್ನಡಭಾಷಾ ಚರಿತ್ರೆಯ ಮೇಲಣ ಉಪನ್ಯಾಸಗಳು.**

ಮೈಸೂರು ವಿಶ್ವವಿದ್ಯಾಲಯದ ಏರ್ಪಾಡಿನ ಮೇಲೆ, ಕಳೆದ ನವೆಂಬರ್ ತಿಂಗಳಿನ ಕೊನೆಯಲ್ಲಿ ಆರಂಭವಾಗಿ ಪ್ರಾ. ವಿ. ಪಿ. ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರಿಂದ ಕನ್ನಡಭಾಷೆಯ ಚರಿತ್ರೆಯ ವಿಷಯವಾಗಿ ಮೈಸೂರಿನಲ್ಲಿ ಐದು ಉಪನ್ಯಾಸಗಳು ನಡೆದುವು. ಮ|| ಆಚಾರ್ಯರ ವಿದ್ವತ್ತು ಪ್ರಸಿದ್ಧವಾದದ್ದು; ಅದರ ಮೇಲೆ ನಮ್ಮಂತಹವರು ಹೇಳುವುದೇನಿದೆ? ಈ ಉಪನ್ಯಾಸಗಳು ಜಾಗ್ರತೆಯಲ್ಲಿಯೇ ಅಚ್ಚಾದಾವು; ಆಗ ಅವುಗಳ ಮೇಲೆ ಬರುವ ಖಂಡನಮಂಡನಗಳು ಬರಲಿ. ಈ ಮಧ್ಯೆ ಅವುಗಳನ್ನು ಉಪನ್ಯಾಸಕರ ಮುಖದಿಂದಲೇ ಕೇಳುವುದಕ್ಕೆ ಅವಕಾಶ ಸಿಕ್ಕಿದಾಗ ಹೆಚ್ಚು ಜನ ಕನ್ನಡಿಗರು ಆ ಅವಕಾಶವನ್ನು ಉಪಯೋಗ ಮಾಡಿಕೊಳ್ಳದೆ ಬಿಟ್ಟದ್ದು ಅನ್ಯಾಯ. ಇನ್ನೂ ಹೆಚ್ಚು ಜನ ಈ ಉಪನ್ಯಾಸಗಳನ್ನು ಕೇಳಲು ಬರದೇ ಇರುವುದಕ್ಕೆ ಈ ಉಪನ್ಯಾಸಗಳು ಇಂಗ್ಲಿಷಿನಲ್ಲಿ ನಡೆದದ್ದೇ ಒಂದು ಕಾರಣವೆಂದು ತೋರುತ್ತದೆ. ಕನ್ನಡವನ್ನರಿಯದವರಿಗೂ ಅದರ ವಿಷಯ ತಿಳಿಯಲಿ ಎಂದೋ, ಭಾಷಾಶಾಸ್ತ್ರವಿಚಾರಗಳನ್ನು ಕನ್ನಡದಲ್ಲಿ ತಿಳಿಸುವುದು ಕಷ್ಟ ಎಂದೋ, ಗ್ರಂಥಕ್ಕೆ ಕೀರ್ತಿಪ್ರತಿಷ್ಠೆಗಳು ಬರಬೇಕಾದರೆ ಅದನ್ನು ಇಂಗ್ಲಿಷ್ ತಿಳಿದವರು ಇಂಗ್ಲಿಷಿನಲ್ಲಿ ಓದಿ ಮೆಚ್ಚಬೇಕೆಂದೋ, ವಿಶ್ವವಿದ್ಯಾಲಯದವರೂ ಮ|| ಆಚಾರ್ಯರೂ ಈ ಕನ್ನಡದ ಮೇಲಣ ಉಪನ್ಯಾಸಗಳನ್ನು ಇಂಗ್ಲಿಷಿನಲ್ಲಿ ನಡೆಸಿದರು.—ಇದು ಒಂದು ತರದ ದ್ರಾವಿಡ ಪ್ರಾಣಾಯಾಮ. ಆದರೂ ಇದೂ ಒಂದು ವಿಧದಲ್ಲಿ ಸೂಕ್ತವೆಂದೇ ತೋರುವುದು. ಏಕೆಂದರೆ ಇವು ಬರಿಯ ಕನ್ನಡಭಾಷೆಯ ಚರಿತ್ರೆಯನ್ನೇ ವಿವರಿಸಿಲ್ಲ. ಮೊದಲಿಂದ ಕೊನೆಯವರೆಗೂ ಪ್ರಾಯಿಕವಾಗಿ ತೆಲುಗು ತಮಿಳು ಕನ್ನಡ ಈ ಮೂರರ ಚರಿತ್ರೆಯೂ ಆಗಿವೆ. ಮ|| ಆಚಾರ್ಯರು ದೂರದರ್ಶಿಗಳು. ಒಂದು ಕಲ್ಲನ್ನೆಸೆದು ಮೂರು ಹಕ್ಕಿಗಳನ್ನು ಹಿಡಿದಿದ್ದಾರೆ. ಇವು ಕನ್ನಡಭಾಷೆಯ ಚರಿತ್ರೆಯನ್ನು ವಿವರಿಸುವುದರಿಂದ ಮೈಸೂರಿನ ವಿಶ್ವವಿದ್ಯಾಲಯಕ್ಕೆ ಹೇಗೆ ಆದರಣೀಯವಾಗಬೇಕೋ ಹಾಗೆಯೇ ತೆಲುಗು ತಮಿಳುಗಳ ಚರಿತ್ರೆಗಳನ್ನೂ ವಿವರಿಸುವು

ದರಿಂದ ಮದರಾಸು, ಆಂಧ್ರ ಮುಂತಾದ ದಕ್ಷಿಣಹಿಂದೂಸ್ಥಾನದ—ಈಗ ಇರುವ ಮತ್ತು ಮುಂದೆ ಹುಟ್ಟುವ—ವಿಶ್ವವಿದ್ಯಾಲಯಗಳಿಗೆಲ್ಲಾ ಆದರಣೀಯವಾಗ ಬೇಕೆಂದೂ, ಎಷ್ಟು ಹೆಚ್ಚು ಜನಕ್ಕೆ ಸಾಧ್ಯವಾದರೆ ಅಷ್ಟು ಹೆಚ್ಚು ಜನಕ್ಕೆ ಉಪಯು ಕ್ತವಾಗಬೇಕೆಂದೂ ಮ|| ಆಚಾರ್ಯರು ಸಂಕಲ್ಪಿಸಿದಂತೆ ತೋರುತ್ತದೆ.—ಲೋಕೋ ಪಕಾರಿಗಳ ಕ್ರಮವೇ ಹೀಗೆ. ಈಗಿನ ಸ್ಥಿತಿಯಲ್ಲಿ ನಾನಾ ಭಾಷೆಯವರಿಗೆ ಯಾವು ದಾದರೂ ತಿಳಿಯಬೇಕಾದರೆ ಇಂಗ್ಲಿಷಿನ ಮೂಲಕವೇ. ಆದರೂ ಎಲ್ಲರಿಗೂ ಉಪ ಯೋಗವಾಗಲಿ ಎಂದು ಬ್ರೆಡ್ಡು ಬಿಸ್ಕತ್ತು ಜ್ಯಾಮು ಇವುಗಳನ್ನು ಮಾಡಿಡುವುದ ಕ್ಕಿಂತ, ಮೊದಲು ಮನೆಯ ಮಕ್ಕಳಿಗೆ ಒಂದು ತುತ್ತು ಅನ್ನ ಹಾಲು ತುಪ್ಪ ಮಜ್ಜಿಗೆ ಹಾಕಿ ಊಟಮಾಡಿಸಿದ್ದರೆ ಚೆನ್ನಾಗಿತ್ತು. ಈಗಲಾದರೂ ಮನೆಯ ಮಕ್ಕಳನ್ನು ಮರೆಯದೆ ಅವುಗಳ ಹಸಿವು ನೀಗುವ ಹಾಗೆ ಈ ಉಪನ್ಯಾಸಗಳನ್ನು ಕನ್ನಡದ ಲ್ಲಿಯೂ ಪ್ರಕಟಮಾಡಿಸುವರೆಂದು ನಂಬುತ್ತೇವೆ. ಮ|| ಆಚಾರ್ಯರು ಕನ್ನಡಪಂಡಿ ತರು. ಇವುಗಳನ್ನು ಕನ್ನಡಿಸುವುದು ಅವರಿಗೆ ಕಷ್ಟವಲ್ಲ.

ಮ|| ಆಚಾರ್ಯರು ತಮ್ಮ ಉಪನ್ಯಾಸಗಳ ಪೀಠಿಕೆಯಲ್ಲಿ, ಇದುವರೆಗೂ ದ್ರಾವಿಡ ಭಾಷಾಶಾಸ್ತ್ರವನ್ನು ಬರೆದಿರುವವರೊಳಗೆ ಕಾಲ್ಡ್ವೆಲ್ ಸಾಹೇಬನಿಗಿಂತಲೂ ಹೆಚ್ಚಾಗಿ ಹೊಸ ವಿಷಯಗಳನ್ನು ಹೇಳಿರುವವರಿಲ್ಲ ಎಂದು ಅಪ್ಪಣೆಕೊಡಿಸಿದರು. ಇದಕ್ಕೆ ಅವರೇ ಅಪವಾದವಾಗಿದ್ದಾರೆ. ಅವರ ಉಪನ್ಯಾಸಗಳು ಕಾಲ್ಡ್ವೆಲ್ ಸಾಹೇಬನ ಗ್ರಂಥದ ಸಾರಾಂಶ ಮಾತ್ರವೇ ಆಗಿಲ್ಲ. ಅವುಗಳಲ್ಲಿ ಮ|| ಆಚಾರ್ಯ ರಿಗೆ ಸುಪರಿಚಿತವಾಗಿರುವ ತಮಿಳು ವ್ಯಾಕರಣದ ಅನೇಕಾಂಶಗಳೂ ಈಚೆಗೆ ಸಿಕ್ಕಿ ಪ್ರಕಟಿತವಾಗಿರುವ ಶಾಸನಗಳಲ್ಲಿ ಕನ್ನಡ ಭಾಷೆಗೆ ಸಂಬಂಧಪಡುವ ಅಂಶಗಳೂ ಎಷ್ಟೋ ಇದ್ದುವು.

ಸದ್ಯದಲ್ಲಿಯೇ ಇವುಗಳನ್ನು ಬೆಂಗಳೂರಿನಲ್ಲಿಯೂ ನಡೆಸುತ್ತಾರೆಂದು ಕೇಳು ತ್ತೇವೆ. ಈಗೀಗ ಮೈಸೂರು ಪಟ್ಟಣಕ್ಕಿಂತ ಬೆಂಗಳೂರಿನಲ್ಲಿ ಕನ್ನಡದ ಲವಲವಿಕೆ ಹೆಚ್ಚಾಗುತ್ತಿದೆ. ಅಲ್ಲಿ ಕನ್ನಡದ ಅಭಿಮಾನಿಗಳು ಹೆಚ್ಚಾಗುತ್ತಿದ್ದಾರೆ. ಅಲ್ಲಿಯಾ ದರೂ ಈ ಉಪನ್ಯಾಸಗಳ ಉಪಯುಕ್ತತೆಗೂ ಉಪನ್ಯಾಸಕರ ಗೌರವಕ್ಕೂ ತಕ್ಕಂತೆ ಜನಗಳು ನೆರೆದು ಉಪಕೃತರಾಗುತ್ತಾರೆಂದು ನಂಬುತ್ತೇವೆ ಬೆಂಗಳೂರಿಗೆ ಕರ್ಣಾಟಕದ ಇತರ ಭಾಗಗಳೂ ಹತ್ತಿರದಲ್ಲಿರುವುದರಿಂದ ಅಲ್ಲಿಯ ನಮ್ಮ ಕನ್ನಡ ಭ್ರಾತೃಗಳೂ ಅವಕಾಶ ಮಾಡಿಕೊಂಡು ಬಂದು ಉಪನ್ಯಾಸಗಳಿಂದ ಪ್ರಯೋಜನ ವನ್ನು ಪಡೆಯಬೇಕೆಂದು ಸೂಚಿಸುತ್ತೇವೆ.

---

ಮೈಸೂರು ದೇಶದಲ್ಲಿ—ದಕ್ಷಿಣ ಹಿಂದೂಸ್ಥಾನದಲ್ಲಿ—ಸಂಸ್ಕೃತವಿದ್ಯೆಯ ಸುಸ್ಥಿತಿಗೂ ಪ್ರಚಾರಕ್ಕೂ ಮೂಲಕಾರಣವಾಗಿರುವ ಮೈಸೂರಿನ ಶ್ರೀಮನ್ಮಹಾರಾಜ ಸಂಸ್ಕೃತಮಹಾಪಾಠಶಾಲೆಯ ಪಂಚಾಶತ್ಸಂವತ್ಸರ ಮಹೋತ್ಸವವು ಕಳೆದ ಆಕ್ಟೋಬರು ತಿಂಗಳು ಇಪ್ಪತ್ತನೆಯ ತಾರೀಖಿನ ದಿವಸ ನೆರವೇರಿತು. ಶ್ರೀಮನ್ಮಹಾರಾಜ ಕೃಷ್ಣರಾಜ ಸಾರ್ವಭೌಮರವರು ಅಧ್ಯಕ್ಷತೆಯನ್ನು ವಹಿಸಿದ್ದರು. ಆಗ ಪಾಠಶಾಲೆಯ ಅಧ್ಯಕ್ಷರಾದ ಮ|| ಚಕ್ರವರ್ತಿ ರಾಮಾನುಜಯ್ಯಂಗಾರ್, ಎಂ.ಎ., ಎಲ್.ಟಿ., ಯವರು ತಮ್ಮ ಆವೇದನಾಪತ್ರಿಕೆಯಲ್ಲಿ ಪಾಠಶಾಲೆಯ ಪ್ರಾರಂಭವಾದ ಸಂದರ್ಭವನ್ನು ಹೀಗೆಂದು ವಿವರಿಸಿದರು :—

“ಶ್ರೀಮನ್ಮಹಾರಾಜಾಧಿರಾಜ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರ ಗುರುದೇವತಾಭಕ್ತಿಯೂ, ಔದಾರ್ಯಾತಿಶಯವೂ ಈ ಮಹಾಪಾಠಶಾಲೆಯ ಸ್ಥಾಪನೆಗೆ ಮೂಲಕಾರಣಗಳಾಗಿರುತ್ತವೆ. ಅಂಥಾ ಮಹಾಸ್ವಾಮಿಯವರ ಕೃಪಾವಿಶೇಷದಿಂದ ಸಂಸ್ಕೃತವಿದ್ಯೆಯು ಸುಲಲಿತವಾಗಿ ಅಭಿವೃದ್ಧಿಯನ್ನು ಪಡೆಯುತ್ತಿದ್ದರೂ, ಮಹಾಪ್ರಭುಗಳವರು ಈ ವಿದ್ಯೆಗೆ ಅನುಬಂಧಿಸುವ ಪಾಠಪ್ರವಚನಗಳು ನಿರಾತಂಕವಾಗಿ ನಡೆಯಲೋಸುಗ, ಮಹಾಪಾಠಶಾಲೆಯೊಂದನ್ನು ಸ್ಥಾಪಿಸಲುದ್ದೇಶಿಸಿ ಒಂದು ಸಹಸ್ರ ರೂಪಾಯಿಗಳ ಮೂಲಧನವನ್ನು ಅಪ್ಪಣೆಕೊಡಿಸಿದರು. ತತ್ಕ್ಷಣವೇ ಈ ಪಾಠಶಾಲೆಯು ಸ್ಥಾಪಿಸಲ್ಪಡದಿದ್ದರೂ ಆ ಮಹಾಪ್ರಭುಗಳವರ ಉದಾರಾಶಯವು ಮಾತ್ರ ಮರೆಯಲ್ಪಡದೆ, ೧೮೬೮ ನೆಯ ವರ್ಷದಲ್ಲಿ ಪ್ರಜೆಗಳ ದೌರ್ಭಾಗ್ಯದಶೆಯಿಂದ ಆ ಮಹಾಪ್ರಭುಗಳವರು ದಿವಂಗತರಾಗಲು, ಆಗಿನ ಅರಮನೆಯ ಮುಖ್ಯಾಧಿಕಾರಿಗಳಾಗಿದ್ದ ಶ್ರೀಯುತ ರಂಗಾಚಾರ್ಯ ಸಚಿವವರ್ಯರವರು ನಿರರ್ಥಕವಾಗಿ ವ್ಯಯಮಾಡಲ್ಪಡುತಿದ್ದ ಸ್ವಲ್ಪಮಟ್ಟಿನ ಅನ್ನಸತ್ರದ ಹಣವನ್ನು ವಿನಿಯೋಗಿಸಿ, ಅದರಿಂದಲೇ ಈ ಮಹಾಪಾಠಶಾಲೆಯನ್ನು “ಸರಸ್ವತೀ ಪ್ರಾಸಾದ” ವೆಂಬ ಅಭಿಧಾನದಿಂದ ಪ್ರತಿಷ್ಠಿಸಿದರು.”

ಅನಂತರ ಪಾಠಪ್ರವಚನಕ್ರಮ, ಪರೀಕ್ಷಾಕ್ರಮ ವಿದ್ಯಾರ್ಥಿಗಳ ಸಂಖ್ಯೆ, ಉಪಾಧ್ಯಾಯರು, ವಿದ್ಯಾರ್ಥಿಗಳ ವಸತಿ ಭೋಜನ ಮುಂತಾದವುಗಳ ಸೌಕರ್ಯ, ಪಾಠಶಾಲೆಯ ಧನ, ಮೇಲ್ವಿಚಾರಣೆ ಮುಂತಾದ ಸಂಗತಿಗಳನ್ನೆಲ್ಲಾ ತಿಳಿಸಿ ಕೊನೆಗೆ ತಮ್ಮ ಆವೇದನವನ್ನು ಈ ವಾಕ್ಯಗಳಿಂದ ಮುಗಿಸಿದರು :—

“ಮೈಸೂರು ಸಂಸ್ಥಾನವು ಬಹುದೀರ್ಘಕಾಲದಿಂದ ಸಂಸ್ಕೃತವಿದ್ಯೆಗೂ ಮತ್ತು ತದ್ಭಾಷಾಜ್ಞಾನಕ್ಕೂ ತೌರುಮನೆಯಾಗಿದೆ. ಇಂಡಿಯ ದೇಶದ ಎಲ್ಲಾ ಭಾಗಗಳಿಂದ ಬಂದ ಸುಪ್ರಸಿದ್ಧ ವಿದ್ವಾಂಸರು ಮೈಸೂರು ರಾಜಾಸ್ಥಾನದಲ್ಲಿ ತಮ್ಮ ಯೋಗ್ಯತೆಗೆ ಅನುಸಾರವಾಗಿ ಗಣ್ಯತೆಯನ್ನೂ ಸನ್ಮಾನವನ್ನೂ ಹೊಂದಿರುತ್ತಾರೆ. ವಿದ್ವಾಂಸರ ವಿಷಯದಲ್ಲಿದ್ದ ಶ್ರೀ ಮುಮ್ಮಡಿಕೃಷ್ಣರಾಜ ಒಡೆಯರವರ ರಾಜಾರ್ಹವಾದ ಔದಾರ್ಯಾತಿಶಯಕ್ಕೆ ಸಂಸ್ಥಾನದ ಎಲ್ಲಾಕಡೆಯಲ್ಲೂ ನಿರವಧಿಯಾದ ನಿದರ್ಶನಗಳಿವೆ. ಈ ನಮ್ಮ ಸಂಸ್ಕೃತಮಹಾಪಾಠಶಾಲೆ ಅಂಥಾ ನಿದರ್ಶನಗಳಲ್ಲಿ ಒಂದು ಮುಖ್ಯನಿದರ್ಶನವಾಗಿದೆ. ಯಾರ ಸ್ಮರಣೆಯು ಶುಭಪ್ರದವಾದುದೋ ಅಂಥಾ ಶ್ರೀ ಚಾಮರಾಜೇಂದ್ರ

ಒಡೆಯರ್ ಬಹದ್ದೂರ್‌ರವರು ಸಂಭಾವಿತರಾದ ತಮ್ಮ ಪೂರ್ವಿಕರ ಪಥವನ್ನನುಸರಿಸಿ ರಾಜಯೋಗ್ಯವಾದ ಪ್ರೋತ್ಸಾಹವನ್ನು ಈ ಮಹಾಪಾಠಶಾಲಾ ಪರವಾಗಿ ನೈರಂತರ್ಯದಿಂದ ಕೊಡುತ್ತಲೇ ಬಂದು ಆದಕ್ಕೆ ಒಳ್ಳೇ ಅಸ್ತಿಭಾರವನ್ನು ಹಾಕಿದರು. ಮತ್ತು ಅವರ ಉದಾರಭಾವವು ನಮ್ಮ ಮಹಾಮಾತೃಶ್ರೀ ವಾಣೀವಿಲಾಸ ಮಹಾಸನ್ನಿಧಾನ, ಸಿ.ಐ. ರವರಿಂದ ಅನುಸರಿಸಲ್ಪಟ್ಟಿತು. ಪ್ರಜಾದೃಷ್ಟಿಯಲ್ಲಿ ಈ ಮಹಾಪಾಠಶಾಲೆಯ ಗೌರವವನ್ನು ಹೆಚ್ಚಿಸಲು ಕಾರಣಗಳಾದ ನವೀನಾಭಿವೃದ್ಧಿಗಳಿಗೆಲ್ಲಕ್ಕೂ ನಮ್ಮ ಮಹಾಸ್ವಾಮಿಯವರಿಗೆ ಮಹಾಪಾಠಶಾಲೆಯ ವಿಷಯದಲ್ಲಿರುವ ಅಸದೃಶವಾದ ಪ್ರೀತಿಯೂ ಅನ್ಯಾದೃಶಾಸಕ್ತಿಯೂ, ಕಾರಣಗಳಾಗಿವೆ. ‘ ರಾಜಾ ಮಾತಾ ಪಿತಾ ಚೈವ ರಾಜಾ ಹಿತಕರೋ ನೃಣಾಂ ’ ಎಂಬ ಆರ್ಷೇಯ ವಚನಾನುಸಾರ ಮಹಾಸ್ವಾಮಿಯವರು ನಮ್ಮ ಮಹಾಪಾಠಶಾಲೆಯ ವಿದ್ವದ್ಬೃಂದಕ್ಕೂ, ವಿದ್ಯಾರ್ಥಿವರ್ಗಕ್ಕೂ ಮುಖ್ಯಾವಲಂಬನವು. ಸರ್ವೇಶ್ವರನೂ, ಸರ್ವಶಕ್ತನೂ ಆದ ಪರಮಾತ್ಮನು ಅಮೋಘವಾದ ಆಶೀರ್ವಾದಗಳನ್ನು ಸಂತತವಾಗಿ ವರ್ಷಿಸಿ ಮಹಾಸ್ವಾಮಿಯವರಿಗೂ ಮಹಾಸ್ವಾಮಿಯವರ ಬಂಧುವರ್ಗಕ್ಕೂ ಆಯುರಾರೋಗ್ಯೈಶ್ವರ್ಯಸತ್ಸಂತಾನಾದಿ ಸಕಲ ಸೌಭಾಗ್ಯಗಳನ್ನೂ ದಯಪಾಲಿಸಲೆಂದು ಈ ಮಹಾಪಾಠಶಾಲೆಯ ಹಿಂದಣ ಮತ್ತು ಈಗಿನ ಎಲ್ಲಾ ವಿದ್ವಾಂಸರ ಮತ್ತು ವಿದ್ಯಾರ್ಥಿಗಳ ಭಕ್ತಿಪೂರ್ಣವಾದ ಪ್ರಾರ್ಥನೆಯಾಗಿದೆ. ”

ಶ್ರೀಮನ್ಮಹಾರಾಜರವರು ಸಂಸ್ಕೃತ ವಿದ್ಯೆಯ ಪ್ರಾಶಸ್ತ್ಯ ಸಂಸ್ಕೃತ ಪಂಡಿತರ ಧರ್ಮ ಇವುಗಳನ್ನು ಕುರಿತು ಹೀಗೆಂದು ಅಪ್ಪಣೆಕೊಡಿಸಿದರು :—

ಸಂಸ್ಕೃತದಲ್ಲಿ ಉಪದಿಷ್ಟವಾಗಿರುವ ಜ್ಞಾನ, ಶಿಕ್ಷಣ, ಮಾನವಧರ್ಮ, ಇವುಗಳನ್ನು ಮತ್ತೆ ಯಾವ ನವೀನ ಅಥವಾ ಪ್ರಾಚೀನವಿದ್ಯೆಯೂ ಅಷ್ಟು ಚನ್ನಾಗಿ ತಿಳಿಸಲಾರದು. ಬಾಹ್ಯವಸ್ತುಪರಿಜ್ಞಾನದಿಂದಲೇ ಸಂಸ್ಕೃತವಿದ್ಯೆಯ ಬೆಲೆಯನ್ನು ಗೊತ್ತುಮಾಡತಕ್ಕದ್ದಲ್ಲ. ಏಕೆಂದರೆ, ಅದು ಆತ್ಮವಿದ್ಯೆಯಿಂದ ಈ ಜ್ಞಾನಕ್ಕೆ ಅಧಿಷ್ಠಾನವಾದ ಜ್ಞಾತೃವನ್ನು ಸಾಕ್ಷಾತ್ಕಾರಮಾಡಿಕೊಳ್ಳುವುದಕ್ಕೆ ದಾರಿತೋರಿಸಿ ಕೊಡುತ್ತದೆ. ಇಂಥ ಕಾರ್ಯವು ಮತ್ತೆ ಯಾವ ಸಾಹಿತ್ಯದಿಂದಲೂ ಇಷ್ಟರಮಟ್ಟಿಗೆ ನಡೆಯಲಾರದು. ಈ ಸಂಸ್ಕೃತವಿದ್ಯೆಯನ್ನು ಶುಷ್ಕವಿದ್ಯೆಯೆಂದು ತಿರಸ್ಕರಿಸುವಹಾಗಿಲ್ಲ. ಇದರ ಶ್ರೇಷ್ಠತೆಯು ಇದರ ಫಲಗಳಿಂದ ತಿಳಿಯಲ್ಪಡುತ್ತದೆ. ಇದರಿಂದ ಭರತಖಂಡದಲ್ಲಿ ಕಲೆಗಳು ಉತ್ಪನ್ನವಾಗಿರುವುವಲ್ಲದೆ, ಒಂದು ಸ್ವತಂತ್ರವಾದ ನಾಗರಿಕತೆಯೇ ಹುಟ್ಟಿದೆ.

ಈಗ ಪ್ರಾಚ್ಯಕಲೆಯೆಂಬುದು ಒಂದು ಸ್ವತಂತ್ರವಾದ ನೂತನ ಪ್ರಪಂಚ. ಇದರ ಪರಿಚಯದಿಂದ ಒಂದು ನವೀನಜ್ಞಾನವು ಹುಟ್ಟುವಂತಿದೆ. ಈ ಪ್ರಾಚ್ಯಕಲೆಯಲ್ಲಿರುವ ಅಪೂರ್ವ ವೈಲಕ್ಷಣ್ಯಗಳು ಬಹುಮಟ್ಟಿಗೆ ಇಂಡಿಯಾದೇಶದಲ್ಲಿಯೇ ಹುಟ್ಟಿದವುಗಳಾಗಿವೆ. ಗುಡಿಗೋಪುರ ಮುಂತಾದ ವಾಸ್ತುರೀತಿ ವಿಶೇಷ, ನಟರಾಜ ಅಥವಾ ಬುದ್ಧ ಮುಂತಾದ ಶಿಲ್ಪವಿದ್ಯಾವಿಷಯ, ಅಜಂಟಾ ಚಿತ್ರಗಳ ರಮ್ಯರೇಖಾವಿನ್ಯಾಸ, ರಾಗ ರಾಗಿಣಿಗಳಲ್ಲಿರುವ ನಾದಮಾಧುರ್ಯ—ಈ ಕಲಾಸೌಭಾಗ್ಯದಲ್ಲಿರುವ ಗೂಢಾರ್ಥವನ್ನು ತಿಳಿಯಪಡಿಸಬೇಕಾದರೆ ಸಂಸ್ಕೃತಸಾಹಿತ್ಯತತ್ತ್ವವೊಂದರಿಂದಲೇ ಸಾಧ್ಯ. ಸಂಸ್ಕೃತ ವಿದ್ಯೆಯ ತೇಜಸ್ಸೇ ಪ್ರಾಚ್ಯಕಲಾಶಾಖೆಗಳೆಲ್ಲವನ್ನೂ ಬೆಳಗಿ, ವಿವರಿಸಿ, ಪುನರುಜ್ಜೀವನಗೊಳಿಸಿರುವದು.

ಇದೆಲ್ಲಕ್ಕಿಂತಲೂ ಅತಿಶಯವಾಗಿ, ಇಂದಿನ ಪ್ರಪಂಚಕ್ಕೆ ಬೇಕಾಗಿರುವದು ಸಂಸ್ಕೃತದಲ್ಲಿ ಉಕ್ತವಾಗಿರುವ ಪಾರಮಾರ್ಥಿಕ ತತ್ತ್ವವಿಚಾರ. ಇದನ್ನು ಮತ್ತೆ ಯಾವ ವಿದ್ಯೆಯಾಗಲಿ, ಸಾಹಿತ್ಯ

ವಾಗಲಿ, ಇಷ್ಟು ವಿಶದವಾಗಿ ಹೇಳಿಲ್ಲ. ಇಂಥಾ ತತ್ತ್ವದ ಸಾಕ್ಷಾತ್ಕಾರವೇ, ಜಗತ್ತಿನಲ್ಲಿ ಈಗ ಹೆಚ್ಚುತ್ತಲೇ ಬರುತಲಿರುವ ಕ್ಲೇಶಗಳನ್ನು ನಿವಾರಣೆಮಾಡಬಲ್ಲದು. ಮನುಷ್ಯನು ಈ ಪಾಶದಿಂದ ಬಿಡುಗಡೆಹೊಂದುವುದು ಹೇಗೆ ? ಎಂಬುದೇ ಈ ಕಾಲದ ಜಿಜ್ಞಾಸೆ. ಈ ಬಂಧನವು ನಿವೃತ್ತಿಯಾಗಿ ಮೋಕ್ಷವು ದೊರೆತರೆ, ಬಹುಕಾಲದಿಂದ ಮನುಷ್ಯನು ಪಡೆಯಬೇಕೆಂದಿರುವ ನಿಜವಾದ ಸ್ವಾತಂತ್ರ್ಯ ಸುಖವನ್ನು ಪಡೆದಂತಾಗುವುದು. ಇಂಥಾ ಮುಕ್ತಿಗೆ ಸಂಸ್ಕೃತವೇ ಸಾಧಕವು.

ಹೀಗಿರುವುದರಿಂದ, ಸಂಸ್ಕೃತವನ್ನು ಓದುವವರ ಮುಖ್ಯ ಕರ್ತವ್ಯವೇನೆಂದರೆ, ಕೇವಲ ಬಾಹ್ಯಾಂಶಗಳನ್ನೂ, ಶಬ್ದಭಾಗವನ್ನೂ ದೊಡ್ಡದಾಗಿ ಭಾವಿಸದೆ, ಆತ್ಮಶಿಕ್ಷಣಕ್ಕೂ ಪರಮ ವಿದ್ಯೆಗೂ ಗೌರವವನ್ನು ಕೊಡಬೇಕು. ಈ ಮಹಾಪಾಠಶಾಲೆಯಂಥ ವಿದ್ಯಾಸ್ಥಾನದಲ್ಲಿ ಶಿಕ್ಷಿತರಾಗುವವರು ತಮ್ಮ ಗಮನವೆಲ್ಲವನ್ನೂ ಅಂತಸ್ಸಾರದ ಮೇಲಿಟ್ಟು ಜೀವನವನ್ನು ಪರಮಜ್ಞಾನಕ್ಕೆ ಅನುಕೂಲ ವಾಗುವಂತೆ ಹೊಂದಿಸಿಕೊಂಡು ಹೋದಹೊರತು ವಿದ್ವಾಂಸರೆನಿಸಿಕೊಳ್ಳಲಾರರು. ಏಕೆಂದರೆ, ಇಂಥಾ ಜ್ಞಾನವೇ ಸಂಸ್ಕೃತಜ್ಞಾನದ ಸಾರ.

ಹೀಗೆ ವಿದ್ವಾಂಸರಾದವರು ಜ್ಞಾನಜ್ಯೋತಿಯನ್ನು ತೋರಿಸುತ್ತಾ, ಪರಮವಿದ್ಯೆ, ಸತ್ಯಧರ್ಮ, ಇವುಗಳಿಗೆ ಅವತಾರಸ್ವರೂಪರಾಗಬೇಕು. ಬ್ರಾಹ್ಮಣ್ಯಸಾರವಾದ ಆತ್ಮಾನಾತ್ಮ ವಿವೇಕ, ಚಿತ್ತಸ್ಥೈರ್ಯ, ಚಾರಿತ್ರಶುದ್ಧಿ, ಭಯರಹಿತವಾದ ಆಚಾರ ಇವುಗಳಿಗೆ ಆದರ್ಶಪ್ರಾಯರಾಗಬೇಕು. ಆತ್ಮವಿದ್ಯಾ ಸಾಧನೆಗೆ ಬೇಕಾಗುವ ಸಹಾಯಸಂಪತ್ತಿಯನ್ನು ಇತರರಿಗೂ ಒದಗಿಸಿಕೊಡಲು ತಕ್ಕ ಸಾಮರ್ಥ್ಯ ವನ್ನೂ, ಅಧಿಕಾರವನ್ನೂ ಪಡೆದರೆ, ಅಂಥವನನ್ನು " ಯೋಗಕ್ಷೇಮಂ ವಹಾಮ್ಯಹಂ " ಎಂದು ಭರವಸೆಕೊಟ್ಟಿರುವ ಜಗನ್ನಿಯಾಮಕನು ಎಂದಿಗೂ ಕೈಬಿಡುವುದಿಲ್ಲ. ಇಂಥ ಮಹನೀಯರು ತಮ್ಮ ಜೀವಮಾನದಲ್ಲಿ ಸಂಪಾದಿಸತಕ್ಕ ಜ್ಞಾನ ಭಂಡಾರವು ಅವರಿಗೆ ಸರಸ್ವತೀಪ್ರಸಾದರೂಪವಾದ ಒಂದು ದೊಡ್ಡನಿಧಿ. ಈ ನಿಧಿಯು ಯಾರಿಗೆ ಲಭ್ಯವಾಗುವುದೋ ಅವರೇ ಧನ್ಯರು........

---

**ಅರ್ಧನಾರೀಶ್ವರ ಚಿತ್ರಪರಿಚಯ**

ಚಿತ್ರಗಳಲ್ಲಿ ಸುಂದರವಾದ ದೇವತಾಮೂರ್ತಿಗಳನ್ನೂ ಮಹಾಪುರುಷರನ್ನೂ ನೋಡಿ ಆನಂದಿಸುವ ಕಾಲವು ನಮಗೆ ಬರುತ್ತಿರುವುದು ಒಂದು ಸುಯೋಗವೆಂದು ಹೇಳಬೇಕು. ಇಂಥ ಸುಯೋಗವನ್ನು ಒದಗಿಸಿಕೊಟ್ಟು ಮೇಲ್ತರನಾದ ನಮ್ಮ ಕಲೆಯ ವ್ಯಕ್ತಿತ್ವವನ್ನೂ ಸೌಂದರ್ಯವನ್ನೂ ಪ್ರಪಂಚಕ್ಕೆಲ್ಲ ತೋರಿಸಿಕೊಟ್ಟಿರುವವರಲ್ಲಿ ಮ|| ವೆಂಕಟಪ್ಪನವರು ಅಗ್ರಗಣ್ಯರು. ಅವರ ಕೀರ್ತಿಯು ಈಗ ಈಗ ನಮ್ಮ ದೇಶದಲ್ಲಿ ಹರಡುತ್ತಿದೆ. ಆದರೆ ಅದಕ್ಕಾಗಿ ಕನ್ನಡಿಗರು ಯಾವ ವಿಧವಾದ ಪ್ರಯತ್ನವನ್ನೂ ಮಾಡಿಲ್ಲ. ನಮ್ಮವರ ಸ್ವಭಾವವೇ ಹೀಗೆ. ನಮ್ಮ ವಸ್ತುಗಳ ಬೆಲೆ ಗೌರವಗಳನ್ನು ಇತರರು ಕೊಂಡಾಡಿದ ಹೊರತು ನಮಗೆ ಅವುಗಳ ವಿಷಯವಾಗಿ ಸಹನೆ, ಮನ್ನಣೆ, ಆದರ ಯಾವುದೂ ಬಾರದು. ಆಮೇಲೆ ಅವುಗಳ ವಿಷಯವಾಗಿ ತಲೆಸಿಡಿದು ಹೋಗುವಷ್ಟು ಹುಚ್ಚು ಹೆಮ್ಮೆ; ಇಲ್ಲ ವಾದರೆ ವಿವೇಕವಿಲ್ಲದೆ ಅಲ್ಪವಸ್ತುಗಳನ್ನು ಮಹದ್ವಸ್ತುಗಳೆಂದು ಕೂಗಿ ಬಾಯಿ

ಮಾಡುವ ಡೊಳ್ಳಬ್ಬರ. ಈ ಸ್ಥಿತಿಯು ನಮ್ಮಿಂದ ಹೋಗಬೇಕಾದರೆ ಇನ್ನೂ ಎಷ್ಟು ಶತಮಾನಗಳು ಕಳೆಯಬೇಕಾಗುವುದೊ ಏನೊ !

ವೆಂಕಟಪ್ಪನವರ ಕಲಾಚಾತುರಿಯು ಹತ್ತು ಹದಿನೈದು ವರುಷಗಳ ಹಿಂದೆಯೆ ವಿದೇಶಗಳಲ್ಲಿ ಪ್ರಶಂಸಿತವಾಗಿ ೧೯೧೦-೧೯೧೧ ರಲ್ಲಿ ಲಂಡನ್ ಮತ್ತು ಪ್ಯಾರಿಸ್ ನಗರಗಳಲ್ಲಿ ನಡೆದ ಅಖಿಲರಾಷ್ಟ್ರೀಯ ಮಹಾಕಲಾ ಪ್ರದರ್ಶನಗಳಲ್ಲಿ ಉಚ್ಚಸ್ಥಾನವನ್ನು ಪಡೆಯಿತು. ಅವರ ಕೀರ್ತಿಯು ಜನರಲ್ಲಿ ಹರಡುವಂತಾದುದು ಪಾಶ್ಚಾತ್ಯರಿಂದ; ಇಲ್ಲಿ ಹರಡಿರುವುದು ಮುಖ್ಯವಾಗಿ ಜೇಮ್ಸ್ ಎಚ್. ಕಸಿನ್ಸ್‌ರವರ ಉತ್ಸಾಹದಿಂದ. ಯೂರೋಪಿನ ಪ್ರಸಿದ್ಧ ಕಲೆಗಾರರಾಗಿಯೂ ಕಲಾವಿಮರ್ಶಕರಾಗಿಯೂ ಇರುವ ರಾಥೆನ್‌ಸ್ಟೀನ್‌ರವರು ಆಗಲೆ ವೆಂಕಟಪ್ಪನವರ ಕಲೆಗೆ ಅಗ್ರಸ್ಥಾನವನ್ನು ಕೊಟ್ಟು ಬರೆದಿದ್ದರು. ಆಮೇಲೆ ಆನಂದಕುಮಾರಸ್ವಾಮಿಯವರು ಅಮೇರಿಕಾದಲ್ಲಿ ಇವರ ಪರಿಚಯಮಾಡಿಕೊಟ್ಟರು. ನಮ್ಮವರು ನಮ್ಮ ದೇಶದಲ್ಲಿ ಇವರಿಗೆ ಯಾವವಿಧವಾಗಿ ಮರ್ಯಾದೆ ಮಾಡಿದ್ದಾರೆ? ಹಿತ್ತಲ ಮರ ಮದ್ದಲ್ಲ. ಆ ವಿಚಾರ ಹೋಗಲಿ ಬಿಡಿ. ಈ ಚಿತ್ರವನ್ನು ನೋಡಿ: ಎಷ್ಟು ಸರ್ವಾಂಗಸುಂದರವಾಗಿದೆ ಕೈಲಿ ಕಪಾಲ ಹಿಡಿದು ಕೃಷ್ಣಾಜಿನ ಹೊದೆದು, ಮೈಗೆ ವಿಭೂತಿಯನ್ನು ಬಳಿದುಕೊಂಡು ತ್ರಿಶೂಲ, ಉರಿಗಣ್ಣು, ಸರ್ಪಾಲಂಕಾರ ಇವುಗಳಿಂದ ಭಯಂಕರನಾಗಿ ಶ್ಮಶಾನವಾಸಿಯಾದ ಶಿವನು, ಎಂಥ ಮಂಗಳಮೂರ್ತಿಯಾಗಿ, ಶಂಕರನಾಗಿ ಇಲ್ಲಿ ಕಾಣುತ್ತಿದ್ದಾನೆ! ಒಟ್ಟಿನ ಆಕೃತಿಯಲ್ಲಿ ಎಷ್ಟು ಕುಸುಮಕೋಮಲತೆ! ನೋಡಿದಷ್ಟೂ ಇನ್ನೂ ನೋಡಬೇಕೆನ್ನಿಸುತ್ತದೆ; ಅದರಲ್ಲಿ ಹೊಸ ಶೃಂಗಾರ ಕಾಣುತ್ತದೆ; ಚಿತ್ರವು ಕಳೆಗೊಳ್ಳುತ್ತದೆ; ಅದು ನಮ್ಮ ಮನಸ್ಸಿನಲ್ಲಿ ಪ್ರತಿರೂಪಗೊಂಡು ನಮಗೆ ಅನಂತ ಸಂತೋಷವನ್ನು ಕೊಡುತ್ತದೆ ಒಂದುಸಲ ನೋಡಿದರೆ ಅದನ್ನು ಮರೆಯೆವು; ಚಿತ್ರವು ಮನಸ್ಸಿನಿಂದ ಅಳಿಸಿಹೋಗದು. ಇದು ಉತ್ತಮಚಿತ್ರದ ಒಂದು ಮುಖ್ಯಗುಣ.

ಚಿತ್ರಗಳಲ್ಲಿ ಸುಂದರವಾದ ಮೂರ್ತಿಗಳನ್ನು ಅನೇಕವೇಳೆ ನೋಡಿದ್ದೇವೆ. ಆದರೆ ಅವುಗಳಲ್ಲಿ ಭವ್ಯತೇಜಸ್ಸಿಲ್ಲ; ಭಾವಾಭಿವ್ಯಕ್ತಿಯಿಲ್ಲ; ರೂಪಿಲ್ಲ; ಮನಸ್ಸು ಹೃದಯಗಳನ್ನು ಒಂದೇ ಕಾಲದಲ್ಲಿ ಆಕರ್ಷಿಸಿ ನಮ್ಮ ಆತ್ಮವನ್ನೇ ಬಂದಿಹಿಡಿಯಬಲ್ಲ ಜೀವಶಕ್ತಿಯಿಲ್ಲ; ಬಣ್ಣಬಳಿದ ಮಣ್ಣುಬೊಂಬೆಗಳಂತೆ ಕಾಣುವುವು ಕೆಲವು; ಅಚ್ಚಿನಲ್ಲಿ ಮಾಡಿ ಒಂದೇತೆರನಾಗಿ ಗುಂಡುಗುಂಡಾಗಿ ಮೈತುಂಬಿಕೊಂಡು ಕಣ್ಣುಗಳನ್ನು ಎಳೆವುವು ಕೆಲವು; ಇಲ್ಲವೆ ವಿಧವಿಧವಾದ ಅಂಕಿತ ಸಂಕೇತಗಳಿಂದ ಚೆಲುವು ತೋರಿಸುವೆವೆಂದು ವಕ್ರಾಕೃತಿಗಳಿಂದ ಮನಸ್ಸಿಗೆ ಅಸಹ್ಯ ತೋರಿಸುವುವು ಕೆಲವು.

ಆದರೆ ಈ ಚಿತ್ರವನ್ನು ನೋಡಿ ; ಇಲ್ಲಿ ಯಾವ ಆಡಂಬರವೂ ಇಲ್ಲ. ನೈಜವಾದ, ಪ್ರಶಾಂತವಾದ ಶುಭ್ರತೇಜಸ್ಸಿದೆ ; ಸ್ವಚ್ಛಂದವಾದ ಮುಖಕಾಂತಿ ; ತೇಜಃಪುಂಜವಾದ ಕಣ್ಣುಗಳು ; ಅಗಲವಾದ ಹಣೆ ; ಮುದ್ದಾದ ಬಾಯಿ ; ಸುಂದರವಾದ ಗಲ್ಲ ; ಶಂಖದಂತೆ ಕಂಠ ; ಪುಷ್ಟವಾದ ಚೆಲುವಾದ ಮೈಗಟ್ಟು ; ಹೆಚ್ಚು ಶೃಂಗಾರಗಳಿಲ್ಲದಿದ್ದರೂ ಆಯಾ ಅಂಗಗಳಿಗೆ ಒಪ್ಪುವ ಒಡವೆ, ಉಡುಪು ; ಅಡಿಯಲ್ಲಿನ ಸಹಸ್ರದಳ ಪದ್ಮದ ಮೃದುತೆಯು ಕೂಡ ಎಷ್ಟು ಒರಟು, ಎಷ್ಟು ಕಠಿಣ ಎಂಬುವಂತೆ ತೋರಿಸುತ್ತಿರುವ ಆ ಪಾದಗಳು. ಇಂಥ ಮೂರ್ತಿಗಲ್ಲವೆ ದೇವತಾಮೂರ್ತಿಯೆಂಬ ಹೆಸರು ಒಪ್ಪುವುದು ! ಇದಲ್ಲವೆ ಪೂಜಾಯೋಗ್ಯವಾದುದು ! ಇಂಥ ಚಿತ್ರಮೂರ್ತಿಯನ್ನಲ್ಲವೆ ಹಿಂದಿನ ಬ್ರಹ್ಮಋಷಿಗಳು ಧ್ಯಾನಿಸುತ್ತಿದ್ದಿರಬೇಕು !

ಚಿತ್ರವನ್ನು ನೋಡುವವರು ಉದ್ದುದ್ದಕ್ಕೆ ಅರ್ಧ ಪೂರ್ತಿ ಮುಚ್ಚುವಂತೆ ಒಟ್ಟೆಯನ್ನೊ ಕಾಗದವನ್ನೊ ಮರೆಹಿಡಿದು ನೋಡಿ ; ಬಲಗಡೆ ಈಶ್ವರನ ಪುರುಷಾಕಾರ ; ಎಡಗಡೆ ಪೂರ್ತ ನಾರೀಮೂರ್ತಿಯ ಆಕಾರ. ಅದಕ್ಕನುಗುಣವಾದ ಅಂಗವಿನ್ಯಾಸ, ರಚನೆ, ಉಡುಗೆ, ತೊಡುಗೆ, ಆಯುಧಗಳು. ನಿಮ್ಮ ಕಣ್ಣೆದುರಿಗೆ ಸುಮಾರು ಐದು ಅಡಿ ಎತ್ತರದಲ್ಲಿ ಅದನ್ನಿಟ್ಟು ನಿಂತುಕೊಂಡು ಚಿತ್ರವನ್ನು ಒಂದೇ ಸಮನಾಗಿ ನೋಡುತ್ತ ಬನ್ನಿ–ಪಾದದಿಂದ ಹಿಡಿದು ಕಿರೀಟದ ಅಗ್ರದವರೆಗೆ :—ಬಲಗಾಲು ಗಂಡಸಿನಕಾಲು, ಅಮೃತಶಿಲೆಯಲ್ಲಿ ಕಡೆದು ಮಾಡಿದಂತಿದೆ. ನಡುವಿನವರೆಗಿನ ಆಕೃತಿಯನ್ನು ನೋಡಿದರೆ ತಕ್ಕ ವ್ಯಾಯಾಮಗಳಿಂದ ಉಕ್ಕಿನಂತಾಗಿ ಬಲಿಷ್ಠವಾಗಿರುವ ತೊಡೆ ; ಅಂಚು ತೀಡಿ ಗಂಡುಗಚ್ಚೆ ಹಾಕಿ ಉಟ್ಟಿರುವ ಧೋತ್ರ ; ಎಡಭುಜದಿಂದ ನಡುವಿನವರೆಗೂ ಇನ್ನೂ ಕೆಳಕ್ಕೂ ಇಳಿದುಬಂದಿರುವ ಯಜ್ಞೋಪವೀತ, ಹಾಗೇ ಉತ್ತರೀಯ ; ನಡುವಿನಲ್ಲಿ ಧೋತ್ರದ ಸೆಕ್ಕಿನ ಕೊನೆ ಕೂಡ ಹೊರಗೆ ಕಾಣುತ್ತದೆ. ನಡುವಿನಿಂದ ಕಂಕಳವರೆಗೂ ನೋಡಿ ; ಸಾಧನೆಮಾಡಿ ವಜ್ರಕಾಯನಾಗಿರುವ ಪುರುಷನ ಆಕಾರ. ಆ ಭಾಗಕ್ಕೂ ಕೈ ತೋಳುಗಳಿಗೂ ನಡುವೆ ಯಾವ ತೆರನಾದ ಮೂಲೆಯಿರುವುದೋ ಅದನ್ನೂ, ಮೊಳಕೈಯೂ ಕೈ ಕೀಲೂ ಬಗ್ಗಿರುವ ರೀತಿಯನ್ನೂ, ತೋಳು ಮುಂಗೈ ಅಂಗೈ ಇವುಗಳ ಆಕಾರವನ್ನೂ, ಸರ್ಪದ ಬಾಲವು ತೋಳ ಬಂದಿಯಂತಿರುವುದನ್ನೂ, ಅದರ ಹೆಡೆಯು ಭುಜಭಾಪುರಿಯಂತಿರುವುದನ್ನೂ, ಭುಜವು ಹೇಗೆ ಗಂಡಸಿನ ಭುಜವೆಂಬುದನ್ನೂ ಚೆನ್ನಾಗಿ ನೋಡಿ. ಕಪೋಲ ಗಲ್ಲ ಇವುಗಳ ಮಾಟವು ಸ್ಥೈರ್ಯ ನಿರ್ಧಾರಗಳನ್ನು ತೋರಿಸುವಂತಿವೆ. ಕಿವಿ ಗಂಡುಗಿವಿ, ಕಣ್ಣಿನಲ್ಲಿ ವೀರಪ್ರಕಾಶ, ಅದರ ಆಕೃತಿಯೂ ದುಂಡು

ರೆಪ್ಪೆಯೂ ಗಂಡಸಿನವು, ವಿಶಾಲವಾದ ಹಣೆಯಲ್ಲಿ ಪಾಪವಿಧ್ವಂಸಿಯಾದ—ಕಾಮ ವನ್ನು ಸುಟ್ಟ—ಕಣ್ಣು, ಮೂರೆಳೆ ಗಂಧ, ಕಿರೀಟಕ್ಕೆ ತಗುಲಿಹಾಕಿದ ರತ್ನಾಭರಣ ದಂತಿರುವ ಎಳೆಯ ಚಂದ್ರ. ಈಗ ಈ ಕಡೆ ನೋಡಿ: ಸೀರೆಯ ನಿರಿಯ ಹಿಂದೆ ಅವಿತು ವಿನಯದಿಂದ ಮರೆಯಾಗಿ ತಾವರೆದಳಗಳ ಮಧ್ಯದಲ್ಲೆಲ್ಲೋ ಸೇರಿ ಲತೆ ಯಂತಿರುವ ಸುಂದರಿಯ ಮೆಲ್ಲಡಿಯು ಸೇರಿಕೊಂಡಿದೆ; ಸುಕ್ಕುಸುಕ್ಕಾಗಿ ತೆಳ್ಳನೆಯ ರೇಷ್ಮೆಯ ಉಡುಗೆ, ಸೆಳೆನಡು, ಮೇಲೆ ಬಳ್ಕು, ನುಣುಪಾದ ಮೃದುವಾದ ಕೈಗಳು, ಕೈಬಳೆಗಳು, ತೋಳಬಂದಿಗೆ ಬದಲು ಕಲಾಬತ್ತಿನ ಕುಪ್ಪಸ, ಹಿಂದಿನ ಭುಜದಿಂದ ಸೀರೆಯ ಸೆರಗು; ಭುಜವ್ರೊ, ನಯವಾಗಿ ಗುಂಡಾಗಿ ಇಳಿದಿಳಿದು ಬಂದಿದೆ. ತುಂಬು ಕುತ್ತಿಗೆ; ತುಂಬು ಕಪೋಲ; ಕಿವಿಗೆ ಒಡವೆ ಪ್ರೇಮದಿಂದ ಕರುಣೆಯಿಂದ ತುಂಬಿ ದಂತಿರುವ ಅರಳ್ಗಣ್ಣು, ಅಂಬಿನಂತೆ ಹುಬ್ಬು, ಚಂದ್ರಕುಂಕುಮಗಳನ್ನಿಟ್ಟ ಹಣೆ, ಕಿರೀಟದ ಒಳಗಡೆಯಿಂದ ಹೊರಕ್ಕೆ ಕಾಣುತ್ತಿರುವ ಮುಂದಲೆ ಕೂದಲು; ಎಲ್ಲಿಯೂ ಒಂದು ಚೂರು ಆಭಾಸವಿಲ್ಲ, ಅಸಾಮಂಜಸ್ಯವಿಲ್ಲ, ಅಸ್ವಾಭಾವಿಕತೆಯಿಲ್ಲ, ಸಮತೆ ಪ್ರಮಾಣಗಳಲ್ಲಿ ದೋಷವಿಲ್ಲ.

ಈ ಚಿತ್ರದಲ್ಲಿ ಕಾಣದೆ ಮೂಲಚಿತ್ರದಲ್ಲಿ ಕಾಣುವುದು ಇನ್ನೂ ಒಂದೆರಡು ಅಂಶಗಳುಂಟು. ಈಶ್ವರ ಭಾಗದಲ್ಲಿ, ತುಟಿಯ ಮೇಲ್ಗಡೆ ಸಣ್ಣದಾಗಿ ಮೀಸೆ ಕಾಣು ವುದು. ಮೈ ಅಂಚಿನಲ್ಲಿ ತಿಳಿಯಾಗಿ ಒಂದೆರಡುಕಡೆ ಸ್ವಲ್ಪ ಬಣ್ಣವಿದೆ. ತಾವರೆಯ ಎಸಳ ಕಾವಿನ ಕೆಳಗೆ ನೀರು ಚಕ್ರಚಕ್ರವಾಗಿ ಸುತ್ತಿ ಚಲಿಸುತ್ತಿದೆ ಈ ಸೂಕ್ಷ್ಮ ರೇಖೆಗಳನ್ನು ಕುಂಚಿ (Painters' Brush) ಯಲ್ಲಿ ಬರೆದಿರುವರು; ಚಿತ್ರವನ್ನು ಭೂತಗನ್ನಡಿಯಿಂದ ನೋಡಿದರೆ, ತಾವರೆಯ ಪ್ರತಿಯೊಂದು ದಳವೂ, ಸೀರೆ ಧೋತ್ರಗಳ ಪ್ರತಿಯೊಂದು ಅಂಚು, ನಿರಿ, ಸುಕ್ಕೂ; ಮೀಸೆ ಮುಂದಲೆ ಹುಬ್ಬು ಗಳ ಪ್ರತಿಯೊಂದು ಕೂದಲೆಳೆಯೂ, ಕಿರೀಟ, ಹಾರ, ಬಳೆ ಇವುಗಳ ಪ್ರತಿಯೊಂದು ಸೂಕ್ಷ್ಮಾಂಶವೂ ಸ್ಪಷ್ಟವಾಗಿ ಕಾಣಿಸುವುದು.

ಹೀಗೆ ಒಟ್ಟಿನಲ್ಲಿಯೂ, ಪ್ರತಿ ಅಂಶದಲ್ಲಿಯೂ ಸುಂದರವಾಗಿರುವ ಮೂರ್ತಿ ಯ ಚಿತ್ರವು ನಮ್ಮ ದೇಶದಲ್ಲೆ ಎಷ್ಟು ಅಪೂರ್ವವೆಂಬುದನ್ನು ನಮ್ಮ ಚಿತ್ರಕಲೆಯ ಚರಿತ್ರೆಯನ್ನು ಅರಿತಿರುವವರೂ, ಸಾಂಪ್ರದಾಯಿಕವಾಗಿ ಬಂದಿರುವ ಚಿತ್ರಪದ್ಧತಿ ಪಠಗಳನ್ನು ನೋಡಿರುವವರೂ ಬಲ್ಲರು. ಈ ರೀತಿಯ ಚಿತ್ರರಚನೆಯಲ್ಲಿ ಮ|| ವೆಂಕಟ ಪ್ಪನವರು ಮೊದಲಿಗರೆಂದೇ ಹೇಳಬೇಕು. ಇಲ್ಲಿನ ಮುಖಭಾವ, ತನುಭಂಗಿ, ಅಂಗಾಂ ಗಗಳ ನಿಲುಗಟ್ಟು ಇವನ್ನೂ ಇವುಗಳಲ್ಲಿನ ಭಾವವನ್ನೂ ನೋಡಿ. ರೂಪು ಸೌಂದರ್ಯ

ಗಳ ಜೊತೆಗೆ ದೈವಿಕವಾದ ತೇಜಸ್ಸಿದೆ, ತುಂಬು ಶಾಂತಿಯಿದೆ, ಭಾವನಾಶಕ್ತಿಗೆ ಮೀರಿದ ಒಂದು ಆನಂದವಿದೆ, ಪೂರ್ಣವಾದ ಚಿಂತಾಲೇಶವಿಲ್ಲದ ಮುಖಮುದ್ರೆಯಿದೆ, ತಿಳಿಯಾದ ವಿಲಾಸಯುಕ್ತವಾದ ಎಳೆನಗುವಿದೆ, ಏತರಿಂದಲೂ ಅಳೆಯಲಾಗದಷ್ಟು ಆಳವಾದ, ಆದರೆ ನಿರ್ಮಲವಾದ, ಹೃದ್ಭಾವವಿದೆ. ಈ ಸ್ಥಿತಿಯು ಪರಮಾತ್ಮನೊಬ್ಬನಿಗಲ್ಲದೆ ಮತ್ತಾರಿಗೆ ಸಾಧ್ಯ ?

ಇದನ್ನು ನೋಡುವ ಹತ್ತಾರು ಜನರು ಹತ್ತಾರು ವಿಧವಾಗಿ ತಮತಮಗೆ ತೋರಿದಂತೆ ಭಾವಕಲ್ಪನೆ ಮಾಡಿಕೊಳ್ಳಬಹುದು. "ಏಕಂ ಸದ್ವಿಪ್ರಾ ಬಹುಧಾ ವದನ್ತಿ" ಎಂದು ವೈದಿಕರು ಹೇಳಿಯೇ ಇರುವರಲ್ಲವೆ. ಮೊಟ್ಟಮೊದಲು ಹೊರ ರೂಪದಲ್ಲಿ ನಮಗೆ ಹೊಳೆಯುವ ಭಾವವು ಈಶ್ವರನಲ್ಲಿ ಮೃದುತೆಯೂ, ಕಾಠಿನ್ಯವೂ ಒಂದರಪಕ್ಕದಲ್ಲೊಂದು ಒಂದೇ ಸ್ಥಳದಲ್ಲಿ ಹೇಗಿದೆ ಎಂಬುದು; ಆಮೇಲೆ ಒಂದೇ ಪರಬ್ರಹ್ಮವಸ್ತುವು ಅತುಳದಯಾಮಯಿಯಾದ ತಾಯಿ ಜಗದ್ಧಾತ್ರಿಯಂತೆಯೂ, ಇನ್ನೊಂದುಕಡೆ ತಂದೆ ಜಗದೀಶ್ವರನಂತೆಯೂ ಹೇಗಿದೆ ಎಂಬುದು ; ಮೇಲಾಗಿ ಸೃಷ್ಟಿಗೆ ಆದಿಕಾರಣವಾಗಿ ಅದನ್ನು ಪೋಷಿಸುತ್ತಿರುವ ಸ್ತ್ರೀಪುರುಷಗುಣಕರ್ಮಗಳು ದೇವನ ಏಕಾಂಗದಲ್ಲಿ ಹೇಗೆ ಕಾಣುವುವು ಎಂಬುದು.—ಹೊರಗೆ ಎರಡರಂತೆ ಪ್ರತ್ಯೇಕ ವಸ್ತುಗಳಂತೆ ಕಂಡರೂ, ಅರ್ಧನಾರಿ ಅರ್ಧ ಈಶ್ವರನಾಗಿ—ಅಷ್ಟೇ ಏಕೆ ಸೃಷ್ಟಿಕಾರ್ಯಕ್ಕೆ ಹಾಗೇ ಆಗಿ ಲೀಲೆ ತೋರಿಸುತ್ತಿರುವ—ಆ ಮಹಾಶಕ್ತಿವಿಲಾಸವು ಹೇಗೆ ಅದ್ವೈತಾನಂದದಿಂದ ರಾಜಿಸುತ್ತಿದೆ ಎಂಬುದು ಈ ಚಿತ್ರದಲ್ಲಿ ಕಂಡು ಬರುತ್ತದೆ.

ಉಳಿವುದು ಪ್ರಶಂಸೆ—ಮಾತುಗಳಿಂದ ಎಷ್ಟು ಉತ್ತಮೋತ್ತಮವಾಗಿ ಹೊಗಳಿದರೂ ಚಿತ್ರವನ್ನು ಒಂದುಸಲ ಕಣ್ಣುತುಂಬ ನೋಡಿದಷ್ಟರ ಸಂತೋಷ ನಮಗೆ ಬಾರದು. ಹಿಂದೆ ಲಾರ್ಡ್ ಮಾರ್ಲಿಯವರು ಒಂದು ಸಂದರ್ಭದಲ್ಲಿ ಹೇಳಿದ್ದಾರೆ—ಮುದುಕಿಯೊಬ್ಬಳು ತನ್ನ ದೇವಸ್ಥಾನದೊಳಕ್ಕೆ ಹೋಗುತ್ತ ದ್ವಾರದಲ್ಲಿ ಮೇಲ್ಗಡೆ ಏಸುಕ್ರಿಸ್ತನನ್ನು ಎತ್ತಿಕೊಂಡು ತಾಯಿ ಮೇರಿ ನಿಂತಿರುವ ಸುಂದರವಿಗ್ರಹಗಳನ್ನು ನೋಡಿದವಳು, ಕಣ್ಣೀರ್ಗರೆಯುತ್ತ ಹಾಗೇ ನಿಂತುಕೊಂಡು "ಅಂಥದನ್ನು ನೋಡಿದ ಮೇಲೆ ಜನರು ಸಜ್ಜನರಾಗದಿರುವುದು ಹೇಗೆ ?" ಎಂದಳಂತೆ. ಹೀಗಿರುವಲ್ಲಿ ಈ ಚಿತ್ರವನ್ನು ನೋಡಿದಮೇಲೆ ಇಂಥ ದೇವನ ವಿಷಯವಾಗಿ ನಮ್ಮಲ್ಲಿ ಭಕ್ತಿಪ್ರೀತಿಗಳು ಹುಟ್ಟದಿರುವುದು ಹೇಗೆ ?—ಎಂದು ಹೇಳಿದರೆ ಅದು ಹೆಚ್ಚೇ? ವೆಂಕಟಪ್ಪನವರು ಸುಕೃತಿಗಳು. ಅವರಿಗೆ ಮಹಾದೇವನು ಆಯುರಾರೋಗ್ಯ ಭಾಗ್ಯಗಳನ್ನು ಕೊಟ್ಟು,

ಕನ್ನಡಕಲೆಗೆ—ಭಾರತ ಚಿತ್ರಕಲೆಗೇ—ಇಂಥ ಕಿರೀಟಮಣಿಗಳನ್ನು ಕಡೆದು ಕಟ್ಟಿ ಅವನ್ನು ಹೀಗೆಯೆ ಅನರ್ಘವಾಗಿ ಮಾಡುತ್ತಿರಲೆಂದು ಪ್ರಾರ್ಥಿಸುತ್ತೇವೆ.

ವಿ. ಸೀ.

---

ಚಿತ್ರಕಲಾಭಿಜ್ಞರ ವಿಸ್ತಾರವಾದ ಸೀಕರಣೆಯ ಮಾತಾಯಿತಷ್ಟೆ. ಇನ್ನು ಸಂಸ್ಕೃತ ಪಂಡಿತನ ಒಂದೆರಡು ಮಾತುಗಳನ್ನು ಪಾಠಕರು ಲಾಲಿಸಬೇಕು. ಈ ಚಿತ್ರವನ್ನು ನೋಡಿದ ಕೂಡಲೇ ಕಾಳಿದಾಸನ ಒಂದೆರಡು ಶ್ಲೋಕಗಳು ಜ್ಞಾಪಕಕ್ಕೆ ಬಂದುವು. ಇವು ಪರಶಿವನ ಸ್ವಭಾವವರ್ಣನೆಯೂ ಹೌದು ಕಾಳಿದಾಸನ ಗುಣ ವರ್ಣನೆಯೂ ಹೌದು. ಸಾಹಿತ್ಯದಲ್ಲಿ—ಸಂಸ್ಕೃತ ಸಾಹಿತ್ಯದಲ್ಲಿಯೂ—ಇಂಥ ಮನೋಹರವಾದ ವಚನಗಳು ಅಪೂರ್ವ. ಆದ್ದರಿಂದ ಅವುಗಳನ್ನು ಇಲ್ಲಿ ಪ್ರಸ್ತಾಪಿಸುವೆವು.

ಕಾಳಿದಾಸನ ನಾಟಕಗಳ ಆದಿಯಲ್ಲಿ ಬರುವ ಮಂಗಳಶ್ಲೋಕಗಳೆಲ್ಲ ಈಶ್ವರ ಸ್ತುತಿರೂಪವಾಗಿವೆ. ಅವುಗಳಲ್ಲಿ

> ಐಕೈಶ್ವರ್ಯೇ ಸ್ಥಿತೋಪಿ ಪ್ರಣತಬಹುಫಲೇ ಯಃ ಸ್ವಯಂ ಕೃತ್ತಿವಾಸಾಃ
> ಕಾಂತಾಸಂಮಿಶ್ರದೇಹೋಪ್ಯವಿಷಯಮನಸಾಂ ಯಃ ಪರಸ್ತಾತ್ ಯತೀನಾಂ....
> ಸನ್ಮಾರ್ಗಾಲೋಕನಾಯ ವ್ಯಪನಯತು ಸ ವಸ್ತಾಮಸೀಂ ವೃತ್ತಿಮೀಶಃ

ಎಂಬುದು ಒಂದು. ಇದರಲ್ಲಿ ಎರಡನೆಯ ಪಾದವು ಅರ್ಧನಾರೀಶ್ವರನ ವರ್ಣನೆಯಾಗಿದೆ. ಕಾಂತೆಯನ್ನು ತನ್ನ ದೇಹದಲ್ಲಿಯೇ ಸೇರಿಸಿಕೊಂಡಿದ್ದರೂ ಶಿವನು ವಿಷಯಗಳಿಗೆ ಮನಸ್ಸು ಕೊಡದೆ ತಪಸ್ಸು ಮಾಡುವ ಸಂಯಮಿಗಳಲ್ಲಿ ಅಗ್ರಗಣ್ಯನಾಗಿ ಆರ್ಯಧರ್ಮಾನುಯಾಯಿಗಳಿಗೆ ಉಚ್ಚಾದರ್ಶನಾಗಿದ್ದಾನೆ. ಈ ವಿಧವಾದ ಸಂಯಮವನ್ನೇ ಶ್ರೀಕೃಷ್ಣನು ಸಂಗರಾಹಿತ್ಯ ನಿಷ್ಕಾಮಕರ್ಮ ಎಂದು ಭಗವದ್ಗೀತೆಯಲ್ಲಿ ಬೋಧಿಸಿರುವುದು. ತಾಮಸೀವೃತ್ತಿಯು ಹೋಗಿ ಜ್ಞಾನದಾಯಕವಾದ ಸತ್ವಗುಣವು ಅಭಿವೃದ್ಧಿಯಾಗಬೇಕಾದರೆ ವಿಷಯದಾಸತ್ವವು ಹೋಗಬೇಕು, ವಿಷಯಸನ್ನಿಧಿಯಲ್ಲಿಯೂ ಔದಾಸೀನ್ಯದಿಂದಿರಬಲ್ಲ ಸಂಯಮವಿರಬೇಕು. ಇದು

> ಶಬ್ದಾದೀನ್ ವಿಷಯಾನ್ ಭೋಕ್ತುಂ ಚರಿತುಂ ದುಶ್ಚರಂ ತಪಃ
> ಪರ್ಯಾಪ್ತೋಸಿ ಪ್ರಜಾಃ ಪಾತುಂ ಔದಾಸೀನ್ಯೇನ ವರ್ತಿತುಂ

ಎಂದು ರಘುವಂಶದಲ್ಲಿ ವಿಷ್ಣುವನ್ನು ವರ್ಣಿಸಿರುವಂತೆ ದೇವಾಧಿದೇವತೆಗಳಿಗೆ ಮಾತ್ರ ಸಾಧ್ಯ. ಆದರೂ ಮನುಷ್ಯನು ಪಶುಸ್ವಭಾವವನ್ನು ಬಿಟ್ಟು ಮನುಷ್ಯನಾಗಿ, ನರಶ್ರೇಷ್ಠನಾಗಿ, ದಿವ್ಯಗುಣಕ್ಕೆ ಅಧಿಕಾರಿಯಾಗಬೇಕಾದರೆ ಸಂಯಮದಿಂದಲೇ.

ಎಷ್ಟೆಷ್ಟುಮಟ್ಟಿಗೆ ಸಂಯಮವನ್ನು ಸಂಪಾದಿಸಿದರೆ ಅಷ್ಟಷ್ಟುಮಟ್ಟಿಗೆ ಮನುಷ್ಯನು ದೇವರಾಗುವನು.

ಅರ್ಧನಾರೀಶ್ವರ ಚಿತ್ರದಲ್ಲಿ ಬಲಗಡೆ ಕಂಠಾಭರಣವಾಗಿಯೂ ನಾಗಮುರಿಗೆಯಾಗಿಯೂ ಸರ್ಪಗಳು ಇವೆಯಷ್ಟೆ. ಇವು ಹೆಡೆಬಿಟ್ಟುಕೊಂಡು ಸ್ತ್ರೀಭಾಗದಿಂದ ವಿಮುಖವಾಗಿರುವುದನ್ನೂ ಕಂಕಣಸ್ಥಾನಗಳಲ್ಲಿ ನಾಗಾಭರಣಗಳು ಇಲ್ಲದಿರುವುದನ್ನು ನೋಡಿದರೆ

ಹಿತ್ವಾ ತಸ್ಮಿನ್ ಭುಜಗವಲಯಂ ಶಂಭುನಾ ದತ್ತಹಸ್ತಾ
ಕ್ರೀಡಾಶೈಲೇ ಯದಿ ಚ ವಿಚರೇತ್ ಪಾದಚಾರೇಣ ಗೌರೀ
ಭಂಗೀಭಕ್ತ್ಯಾ ವಿರಚಿತವಪುಃ ಸ್ತಂಭಿತಾಂತರ್ಜಲೌಘಃ
ಸೋಪಾನತ್ವಂ ಕುರು ಮಣಿತಟಾರೋಹಣಾಯಾಗ್ರಯಾಯೀ

ಎಂಬ ಮೇಘಸಂದೇಶದ ಶ್ಲೋಕವು ಜ್ಞಾಪಕ್ಕೆ ಬರುತ್ತದೆ ಶ್ಮಶಾನವಾಸಿಯಾದ ಶಿವನೂ ಪಂಚಾಗ್ನಿಮಧ್ಯದಲ್ಲಿ ತಪಸ್ಸುಮಾಡಿದ ಪಾರ್ವತಿಯೂ ಈಗ ಪೂರ್ವಸ್ಥಿತಿಯನ್ನು ಬಿಟ್ಟು ಹಿಮಾಲಯದಲ್ಲಿ ಬೆಳ್ಳಿಯ ಬೆಟ್ಟದ ಮೇಲೆ ತಂಪಾಗಿದ್ದುಕೊಂಡಿದ್ದಾರೆ. ಶಿವನು ಶಂಕರನ ಸೌಮ್ಯರೂಪವನ್ನು ಧಾರಣೆಮಾಡಿ ಕುಸುಮಕೋಮಲವಾದ '' ಗೌರಿ ''ಯ ಕೈಹಿಡಿದು ಆಯಾಸವಾಗದಂತೆ ಅವಳನ್ನು ಹೆಜ್ಜೆ ಇಡಿಸುತ್ತಾ ಕ್ರೀಡಾಶೈಲದಲ್ಲಿ ಸಂಚಾರಮಾಡುತ್ತಿದ್ದಾನೆ. ಗೌರಿಯು ಬಹು ಭೀರು. ಅವಳು ಅಂಜಿಕೊಂಡಾಳೆಂದು ಶಿವನು ಎಷ್ಟೋ ಪ್ರೇಮದಿಂದ ತನ್ನ ನಾಗಕಂಕಣಗಳನ್ನು ತೆಗೆದುಹಾಕಿ ಅವಳಿಗೆ ಕರಾವಲಂಬನವನ್ನು ಕೊಟ್ಟು ಸಂತೋಷದಿಂದ ತಿರುಗಾಡುತ್ತಿದ್ದಾನೆ. ಈ ಮೃದುವಾದ ಆಕಾರ ರೂಪ ಭಾವಾದಿಗಳಿಗೆ ತಕ್ಕ ಸನ್ನಿವೇಶ. ಗೌರಿಯು ಸುಲಭವಾಗಿ ಹತ್ತುವುದಕ್ಕೆ ಅನುಕೂಲವಾಗುವಂತೆ ಮೇಘವು ಅವರ ಮುಂದೆ ಘನೀಭೂತವಾಗಿ ಮೆಟ್ಟಲುಮೆಟ್ಟಲಾಗಿ ನಿಂತು ಜಗತ್ಪಿತೃಗಳ ಪಾದಧೂಳಿಯಿಂದ ಪುನೀತವಾಗಬೇಕೆಂದು ಯಕ್ಷನು ಸೂಚಿಸುತ್ತಾನೆ! ಶುಭ್ರವಾದ ಹಿಮಾಲಯದ ಮೇಲೆ ರಜತಾದ್ರಿಶಿಖರದಲ್ಲಿ ' ಗೌರಿ 'ಯನ್ನು ನಡೆಸುತ್ತಾ ಮಂಜಿನ ಮೆಟ್ಟಲುಗಳನ್ನು ಹತ್ತುತ್ತಿರುವ ಜ್ಯೋತಿರ್ಮಯನಾದ ಶಂಕರನನ್ನು ನೋಡಿ! ರಸಿಕನಾದ ಕಾಳಿದಾಸನು ವಿರಹಿಯಾದ ಯಕ್ಷನೊಡನೆ ನಮಗೆ ಸ್ನೇಹವನ್ನು ಉಂಟುಮಾಡಿ ಅವನ ಜೊತೆಯಲ್ಲಿ ಗೌರೀಶಂಕರರ ನಿರಾತಂಕವಾದ ಪ್ರೇಮಸಂಸಾರದಲ್ಲಿ ನಮ್ಮನ್ನು ಅತಿಥಿಗಳನ್ನಾಗಿ ಮಾಡಿರುವನು ಆ ಸನ್ನಿವೇಶವು ಮನಸ್ಸಿನಲ್ಲಿ ಚಿತ್ರಿತವಾದಕೂಡಲೆ ಆತ್ಮವು ಸ್ನಿಗ್ಧವೂ ಶೀತಲವೂ ಶಾಂತವೂ ಆಗುವುದು.

---

ಕನ್ನಡಕ್ಕೆ ಸಲ್ಲಬೇಕಾದ ಪ್ರಾಶಸ್ತ್ಯವನ್ನೂ ಪೂಜ್ಯತೆಯನ್ನೂ ಸಲ್ಲಿಸಬೇಕೆಂದು ಕನ್ನಡಿಗರಲ್ಲಿ ಈಚೆಗೆ ಕರ್ತವ್ಯಪರಿಜ್ಞಾನವುಂಟಾಗುತ್ತಿದೆಯಷ್ಟೆ. ಇದು ನಾನಾ ರೂಪದಲ್ಲಿ ಕಂಡುಬರುತ್ತಿದೆ. ಈಗ ಕೆಲವು ದಿನಗಳ ಕೆಳಗೆ ಮೈಸೂರಿನ ಪ್ರಮುಖರು ವೇ|| ಬ್ರ|| ನಂಜನಗೂಡು ಶ್ರೀಕಂಠಶಾಸ್ತ್ರಿಗಳವರಿಗೆ ಸನ್ಮಾನ ನಡೆಸಿದ್ದನ್ನೂ, ಮೈಸೂರು ಮಹಾರಾಣಿಯವರ ಕಾಲೇಜಿನ ವಿದ್ಯಾರ್ಥಿನಿಯರು ವೇ|| ಬ್ರ|| ರಾಮಶೇಷಶಾಸ್ತ್ರಿಗಳವರಿಗೆ ಸತ್ಕಾರ ನಡೆಸಿದ್ದನ್ನೂ, ಮಹಾರಾಜರವರ ಕಾಲೇಜಿನ ವಿದ್ಯಾರ್ಥಿಗಳು ವೇ|| ಬ್ರ|| ಕಾನಕಾನಹಳ್ಳಿಯ ವರದಾಚಾರ್ಯರವರಿಗೆ ಸತ್ಕಾರ ನಡೆಸಿದ್ದನ್ನೂ ನೋಡಿದವರು ಅಥವಾ ಕೇಳಿದವರು ನಮ್ಮ ಮಾತನ್ನು ಒಪ್ಪದಿರಲಾರರು. "ಕನ್ನಡವೂ ಒಂದೇ, ಬಡಗವೂ ಒಂದೇ! ಅದೂ ಒಂದು ಭಾಷೆಯೇ?" ಎಂದು— ಬಡವಳಾದ ತಮ್ಮ ತಾಯಿಯನ್ನು ಕುರಿತು 'ಅಮ್ಮಾ, ನೀನೂ ಒಬ್ಬ ಹೆಂಗಸೇ?' ಎಂದು ಕೇಳುವ ಹಾಗೆ—ಕೇಳುವವರು ಈಗಲೂ ಇದ್ದಾರೆ;—ಯಾವಾಗಲೂ ಇದ್ದೇ ಇರುತ್ತಾರೆ. ಊರು ಎಂದರೆ ಹೊಲಗೇರಿ ಎಲ್ಲಿ ಇರುವುದಿಲ್ಲ? ಅವರ ಮಾತಿರಲಿ; ಈ ಯುಗದಲ್ಲಿ ದೇವತೆಗಳ ಮಾತಾಗಿರುವ ಇಂಗ್ಲಿಷಿನ ಗಂಧವೂ ಇಲ್ಲದಂಥ ಕನ್ನಡಪಂಡಿತರನ್ನು ಗೌರವಿಸುವುದೆಂದರೆ ತಾಯಿಯನ್ನು ಮಮತೆಯಿಂದ "ಅಮ್ಮ!" ಎಂದು ಬಾಯಿತುಂಬ ಕೂಗುವುದು ಜ್ಞಾಪಕಕ್ಕೆ ಬರುತ್ತದೆ. ಎಷ್ಟು ಇಂಗ್ಲಿಷು ಕಲಿತರೂ ಬರೆದರೂ ಮಾತನಾಡಿದರೂ ತಮ್ಮ ಜೀವವು ಕನ್ನಡ ನಾಡಿನ ಅನ್ನರಸದಿಂದ ಬೆಳೆದದ್ದೆಂದೂ, ತಮ್ಮ ದೇಹದಲ್ಲಿ ಹರಿಯುವ ರಕ್ತವು ಕನ್ನಡ ಮಾತನ್ನು ಆಡುವ ತಾಯಿಯ ಹಾಲು ಕುಡಿದು ವೃದ್ಧಿಹೊಂದಿದ್ದೆಂದೂ ದೊಡ್ಡದೊಡ್ಡ ಅಧಿಕಾರಿಗಳೂ ಸಹ ಭಾವಿಸಲು ಮೊದಲು ಮಾಡುತ್ತಿದ್ದಾರೆ. ವಿಶ್ವವಿದ್ಯಾಲಯದಲ್ಲಿ ಕನ್ನಡಕ್ಕೆ ತಕ್ಕ ಗೌರವವನ್ನೂ ಪ್ರಾಮುಖ್ಯತೆಯನ್ನೂ ಪ್ರಾಶಸ್ತ್ಯವನ್ನೂ ಕೊಡಿಸಬೇಕೆಂದು ಸರ್ವಪ್ರಯತ್ನವನ್ನೂ ಮಾಡುತ್ತಿದ್ದಾರೆ. ಇವರ ಪ್ರಯತ್ನಗಳು ಸಂತತವಾಗಿ ನಡೆದು ಸಫಲವಾಗಲಿ!

**ಕನ್ನಡ ಪಂಡಿತರಿಗೆ ಸತ್ಕಾರ.**

---

"ಕಾನಡಾ ಧುರೀಣ"ರು ಮೈಸೂರಿನ ಕನ್ನಡಿಗರಿಗೆ ಒಂದು ಪ್ರಶಸ್ತಿಪತ್ರವನ್ನು ಕೊಟ್ಟಿರುವಂತೆ 'ಸುಬೋಧ' ದಿಂದ (II, ೧) ತಿಳಿಯಬರುತ್ತದೆ. ಅವರು ಹೇಳಿರುವುದೇನೆಂದರೆ:—

"ಮೈಸೂರಿನವರು ಸ್ವಲ್ಪ ಸುಧಾರಿಸಿರುವರು. ಆದರೆ ಅವರು ಕನ್ನಡದಲ್ಲಿ ಅತೀವವಾಗಿ ಆಂಗ್ಲಭಾಷೆಯನ್ನು ಸೇರಿಸುವುದರಿಂದ ಕನ್ನಡಭಾಷೆಯು ಮತ್ತಷ್ಟು ಹೀನಾವಸ್ಥೆಯನ್ನು ಹೊಂದ

ಹತ್ತಿರುವದು. ಆ ಕಾರಣ ಮೈಸೂರಿನವರು ಈ ದುಷ್ಟಪದ್ಧತಿಯನ್ನು ಹೊರದೂಡಿ ಸಾಹಿತ್ಯಸೇವೆಯನ್ನು ಮಾಡಬೇಕು........"

ಮೈಸೂರಿನವರ ಒಂದು "ದುಷ್ಟಪದ್ಧತಿ" ಯಿಂದ "ಕನ್ನಡಭಾಷೆಯು ಮತ್ತಷ್ಟು ಹೀನಾವಸ್ಥೆಯನ್ನು ಹೊಂದ ಹತ್ತಿರುವುದು" ನಿಜವಾದ ಸಂಗತಿಯಾದಲ್ಲಿ ಅದು ಬಹು ಶೋಚನೀಯವಾದ ಸಂಗತಿ. ನಮ್ಮಲ್ಲಿ ಎಷ್ಟೋ ದೋಷಗಳಿವೆ. ಆದರೆ ಈ ದುಷ್ಟಪದ್ಧತಿ ಮಾತ್ರ ನಮ್ಮ ಕಣ್ಣಿಗೆ ಬಿದ್ದಿಲ್ಲ. ಪ್ರಬುದ್ಧ ಕರ್ಣಾಟಕವು ಈಗ ಎಂಟು ವರ್ಷಗಳಿಂದ ಕನ್ನಡನಾಡಿನಲ್ಲಿ ಓಡಾಡುತ್ತ ಕನ್ನಡದಲ್ಲಿ ಮಾತನಾಡುತ್ತ ಇದೆ. ಅದರ ಕಣ್ಣಿಗೆ ಈ ದೋಷವು ಬಿದ್ದಿಲ್ಲ. ನಮ್ಮ ದೋಷಗಳು ತುಂಬಿರುವ ಹಸುಬೆಯ ಚೀಲವು ನಮ್ಮ ನಮ್ಮ ಬೆನ್ನಿನಮೇಲೆ ಇರುತ್ತದೆಯಂತೆ; ನಮ್ಮ ಗುಣಗಳೂ ಗುಣಾಭಾಸಗಳೂ ಇತರರ ದೋಷಗಳೂ ದೋಷಾಭಾಸಗಳೂ ಕಣ್ಣಿನ ಎದುರಿಗೆ ಇರುವ ಮುಂಭಾಗದ ಚೀಲದಲ್ಲಿರುತ್ತವೆಯಂತೆ. ಆದ್ದರಿಂದ ನಮ್ಮ ದೋಷಗಳು ನಮಗೆ ಕಾಣದೆ ಹೋಗಿರಬಹುದು. ಕಾನಡಾ ಧುರೀಣರೇ, ದಯವಿಟ್ಟು ನಮ್ಮ ಲೋಪದೋಷಗಳನ್ನು ತೋರಿಸಿ ಈ 'ದುಷ್ಟಪದ್ಧತಿ' ಯನ್ನು ತಿದ್ದಿ ಕನ್ನಡದ 'ಹೀನಾವಸ್ಥೆಯನ್ನು' ತಪ್ಪಿಸಿ. ತಮಗೆ ಕನ್ನಡಿಗರು ಕೃತಜ್ಞರಾಗುವರು!

ಮೈಸೂರಿನವರ ಭಾಷಾಶುದ್ಧಿ

ಇತರ ಭಾಷೆಗಳಿಂದ ಶಬ್ದಗಳನ್ನು ತೆಗೆದುಕೊಳ್ಳಬಹುದೇ? ತೆಗೆದುಕೊಳ್ಳಬಹುದಾದರೆ ಎಂಥವುಗಳನ್ನು ಮತ್ತು ಯಾವಾಗ ತೆಗೆದುಕೊಳ್ಳಬೇಕು? ಇವುಗಳ ಸಾಧಕಬಾಧಕಗಳೇನು?—ಎಂಬುದು ಭಾಷಾಶಾಸ್ತ್ರದಲ್ಲಿ ಬಹುಮುಖ್ಯವಾದ ವಿಷಯ. ಇಂಥ ವಿಷಯಗಳು ನಿಷ್ಪಕ್ಷಪಾತವಾಗಿಯೂ ಶಾಸ್ತ್ರಸಮ್ಮತವಾಗಿಯೂ ಯುಕ್ತಿಯುಕ್ತವಾಗಿಯೂ ವಿಚಾರಕ್ಕೆ ಬಂದರೆ ಭಾಷಾಭಿವೃದ್ಧಿಗೆ ಬಹುವಾಗಿ ಸಹಾಯವಾಗುವುದು. ಆದ್ದರಿಂದ ಕಾನಡಾ ಧುರೀಣರ ವಾಕ್ಯಾರ್ಥ ಸಮಾರಂಭಣವನ್ನು ಎದುರುನೋಡುತ್ತಿದ್ದೇವೆ.

---




ಅಕ್ಷಯ ಸಂವತ್ಸರ ---೩೦--- ಶ್ರಾವಣ ಸಂಚಿಕೆ

ಸಂಪುಟ ೮] [ಸಂಚಿಕೆ ೪

## ವಿಷಯ ಸೂಚಿಕೆ

೧. ಪ್ರಾರ್ಥನೆ— ಗೋಪಾಲಕೃಷ್ಣ.

೨. ಕ್ಷೇಮಕಾರಿ— ವಿ. ಸೀ.

೩. ಭಕ್ತಿಭಂಡಾರಿ ಬಸವೇಶ್ವರರು— ಮ|| ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.

೪. ಉಷಾ— ಮ|| ಎಂ. ವೆಂಕಟೇಶಯ್ಯಂಗಾರ್, ಎಂ.ಎ.

೫. ಕೆಲವು ಕನ್ನಡಕವಿಗಳ ಜೀವನಕಾಲವಿಚಾರ—
ಡಾ|| ಎ. ವೆಂಕಟಸುಬ್ಬಯ್ಯ, ಎಂ.ಎ., ಪಿಎಚ್.ಡಿ., ಎಲ್ಎಲ್.ಬಿ.

೬. ದೂರದ ಆಸೆ (ಒಂದು ಸಣ್ಣಕಥೆ)— "ಆನಂದ."

೭. "ಕಾವ್ಯಾವಲೋಕನ"

೮. "ವಸ್ತುಕೋಶ"

ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಟಿಸಲ್ಪಟ್ಟಿದೆ.

೧೯೨೭

# ಪ್ರಬುದ್ಧ ಕರ್ಣಾಟಕ

(ವರ್ಷಕ್ಕೆ ನಾಲ್ಕು ಸಂಚಿಕೆಗಳು ಮಾತ್ರ).

| | | |
|---|---|---|
| ವಾರ್ಷಿಕಚಂದಾ (ಅಂಚೆವೆಚ್ಚ ಸೇರಿ) | ಆಶ್ರಯದಾತರಿಗೆ | ರೂ. ೧೦—೦—೦ |
| | ಪೋಷಕರಿಗೆ | ರೂ. ೩—೬—೦ |
| | ವಾಚನಾಲಯಗಳು ಮತ್ತು ಪುಸ್ತಕಭಂಡಾರಗಳಿಗೆ | ರೂ. ೨—೮—೦ |
| | ಚಂದಾದಾರರಿಗೆ | ರೂ. ೨—೦—೦ |

**ಕಾರ್ಯದರ್ಶಿ,**
**ಕರ್ಣಾಟಕ ಸಂಘ,**
ಸೆಂಟ್ರಲ್ ಕಾಲೇಜು, ಬೆಂಗಳೂರು.

## ಪ್ರಬುದ್ಧ ಕರ್ಣಾಟಕಕ್ಕೆ ವಿನಿಮಯರೂಪವಾಗಿ ಬರುತ್ತಿರುವ ಪತ್ರಿಕೆಗಳು

**ಬೆಂಗಳೂರು** :—ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ದೇಶೀಯ ವಿದ್ಯಾಶಾಲಾ ಪತ್ರಿಕೆ, ಮೈಸೂರು ವ್ಯಾವಸಾಯಿಕ ಮತ್ತು ಪರೀಕ್ಷಕಸಂಘದ ಪತ್ರಿಕೆ, ಸ್ಕೂಲು ಮತ್ತು ಸ್ಕೌಟ್ ಪತ್ರಿಕೆ, ವಿಶ್ವಕರ್ಣಾಟಕ, ಒಕ್ಕಲಿಗರ ಪತ್ರಿಕೆ, ಸರಸ್ವತಿ, ಮಿಥಿಕ್ ಸೊಸೈಟಿ ಪತ್ರಿಕೆ, ರಂಗಭೂಮಿ.

**ಮೈಸೂರು** :—ಸಾಧ್ವಿ, ಮಧ್ವಸಿದ್ಧಾಂತ ಪ್ರಕಾಶಿನೀ, ವಿಶ್ವಬಂಧು.

**ತುಮಕೂರು** :—ಸ್ಕೂಲ್ ಫೋಕ್.

**ನಂಜನಗೂಡು** :—ಸನ್ಮಾರ್ಗದರ್ಶಿ.

**ಚಾಮರಾಜನಗರ** :—ಕಾದಂಬರೀ ಸಂಗ್ರಹ.

**ಧಾರವಾಡ** :—ಕರ್ಣಾಟಕ ವೃತ್ತ ಮತ್ತು ಧನಂಜಯ, ಕರ್ಮವೀರ, ವಾಗ್ಭೂಷಣ, ಕರ್ಣಾಟಕ ವಿದ್ಯಾಶಾಲಾ ಪತ್ರಿಕೆ.

**ಬೆಳಗಾಂ** :—ಸುಧಾರಕ, ಪ್ರಬೋಧ.

**ಬಿಜಾಪುರ** :—ಕಲ್ಪಲತಾ ಗ್ರಂಥಮಾಲಾ.

**ಅಗಡಿ** :—ಸದ್ಬೋಧಚಂದ್ರಿಕೆ.

**ಪುತ್ತೂರು** :—ಕನ್ನಡ ಸಹಕಾರ.

**ತುಂಗಭದ್ರ** :—ಪ್ರೇಮ.

**ಬಾಗಲಕೋಟೆ** :—ಕನ್ನಡಿಗ.

**ಮಂಗಳೂರು** :—ಸುವಾಸಿನೀ, ಸುಬೋಧಕ ಗ್ರಂಥಮಾಲಾ.

**ಉಡುಪಿ** :—ಸತ್ಯಾಗ್ರಹಿ.

**ಕುಂದಾಪುರ** :—ವಸಂತ.

**ಮಡಿಕೇರಿ** :—ಓಲ್ಡ್ ಸ್ಟೂಡೆಂಟ್ಸ್ ಮ್ಯಾಗಸೀನ್, ಲೋಕಪಾವನಿ, ಕೊಡಗು ವೃತ್ತಾಂತ.



ಕೋಲಾರದ ಡಿಸ್ಟ್ರಿಕ್ಟು ನಂದಿಯಲ್ಲಿರುವ
**ಭೋಗನಂದೀಶ್ವರ ದೇವಾಲಯದ ಒಂದು ಕಂಬ**





## ಪ್ರಾರ್ಥನೆ.

ಪೊರೆಯುವುದು ಪಾಮರರ ಪರಮಪುರುಷ |
ಸರುವಾಪರಾಧಗಳ ಮನ್ನಿಸುತ ನಿರುತ ||ಪ||

ಎಳೆ ಹಕ್ಕಿಗಳ ರೆಕ್ಕೆ ಬಲಿವುದಕೆ ತೊಡಗಲವು
ಬಲವು ಬಂದಿತು ಮೇಲಕಿನ್ನು ಹಾರಿ
ಇಳೆಯೊಳೆಲ್ಲೆಲ್ಲಿಯೂ ಸಂಚರಿಸ ತೊಡಗುವೆವು
ಫಲಗಳನು ತರುವೆವು ತಿಂದು ತೇಗುವೆವು
ಎಂದು ತಮ್ಮಯ ಗೂಡನುಳಿದು ತಾಯಿಯನಗಲಿ
ಮುಂದುಮುಂದಕೆ ಪಾರಿ ಪೋಗಿ ಬಳಲಿ
ಅಂದಿನಾಹಾರವಿರದಿರೆ ಕುಂದಿದಾನನದಿ
ಬಂದ ಕಂದರ ತಾಯಿ ಸಂತೈಸುವಂತೆ ||೧||

ಎರಡು ಮಾತನು ಕಲಿತು ಪಂಡಿತರು ನಾವೆಂದು
ಎರಡು ರಾಗವನರಿತು ಗಾಯಕರು ಎಂದು
ಎರಡು ಕೆಲಸವ ಮಾಡಿ ಲೋಕತಾರಕರೆಂದು
ಎರಡಕ್ಷರವ ಬರೆದು ಕವಿವರ್ಯರೆಂದು
ಇನ್ನ ತಮಗೆದುರಾರು ಎಂದೆನುತ ಹಿಗ್ಗುತಲಿ
ಸನ್ನುತ ಪ್ರೇಮಮಯ ನಿನ್ನ ಮರೆತು
ಮುನ್ನ ಮೆರೆದುದಕವರು ನೊಂದು ಚಿಂತಿಸುತಿರಲು
ಮನ್ನಿಸುತಲವರ ಮುಂದಿನ ದಾರಿತೋರಿ ||೨||

ಗೋಪಾಲಕೃಷ್ಣ.



---

# ಕ್ಷೇಮಕಾರಿ.

ಕೊನೆಗೆ ದರುಶನವಿತ್ತೆಯ್ಯ ಕ್ಷೇಮಕಾರಿ |
ಇನಿತುದಿನ ಕೊರಗಿ ನಾಂ ತಪಿಸುತಿರ್ದುದಕೆ ||ಪ||



ಜೀವನದ ಕ್ಲೇಶಂಗಳೊಡಲ ದಹಿಸುತಲಿರಲು |
ದೇವ ನೀಂ ಕರೆದೆಯ್ಯ ಅಮೃತಧಾರೆಗಳ ||
ಪಾವಕನ ಪಾವನನಗ್ಯೆವ ಚರಿತನು ನೀನು |
ಕಾವ ಪಳನುಡಿಯೊಡೆಯನ ವಾಹನನು ನೀನು ||೧||

ಎನ್ನವೋಲಿರ್ಪವರು ಇನ್ನೆಸಿಬರೊ ನಿನಗೆ |
ಇನ್ನುಮಾರ್ತರು ಕಾತರರು ನಿರ್ಗತಿಕರು ||
ನಿನ್ನವರು ಸಂಗಡಿಗರಾರಾರು ಕರೆಯುವರೊ |
ಎನ್ನ ಬೇಗೆಯ ಹರಿಸೆ ಬಂದು ಕಾಯ್ದಯ್ಯ ||೨||

ಶಾಂತಿಗೋಸುಗ ನೆಲನ ಮೆಟ್ಟಿ ಪಾರ್ದವನಲ್ಲ ಏ |
ಶ್ರಾಂತಿಯಾಶೆಗೆ ರಂಗದಿಂ ಸರಿದನಲ್ಲ ||
ಕಾಂತಿಮಯಕಡುತೀಕ್ಷ್ಣಕಂಗಳಿಂದೆಲ್ಲವನು ಏ |
ಭ್ರಾಂತನಾಗದೆ ನೋಡಿ ತಿಳಿವೆಯಯ್ಯ ||೩||

ನಿನ್ನ ಒಡವುಟ್ಟಿದರು ನಾವೆಂದು ಭಾವಿಸುತ |
ಲೆಮ್ಮಹಿತವನೆ ಬಯಸಿ ಶ್ರಮಿಸುತಿಹೆಯಯ್ಯ ||
ಎಮ್ಮ ಹೀನತೆಯರಿವನೆಮಗೀಯಲುಜ್ಜುಗಿಸಿ |
ನಿನ್ನ ಪ್ರಿಯಕಾರ್ಯಗಳ ದೂರ ತಳ್ಳಿದಯ್ಯ ||೪||

೨.

ಸಿಲ್ಲದೊಂದೆಡೆಯೊಳೆಲ್ಲೆಲ್ಲು ಪಾರುತ್ತೆ |
ಸಲ್ಲಲಿತಮೃದುರವದೆ ಹಿತವನುಸಿರುತ್ತೆ ||
ಬಲ್ಲವರನೊಲ್ಲವರ ಸಿಲ್ಲುವರ ಸಿಲ್ಲದರ |
ಎಲ್ಲರಾಲೋಕವನ್ನೆಳೆಯುತಿಹೆಯಯ್ಯ ||೫||

ಒಂದುಸಲ ಸುಮಧುರಗೀತೆವೊಲು ಕೇಳುವುದು |
ತಂದೆ, ನಿನ್ನಿಂಚರವು ಜಗವ ಮುಳುಗಿಸುತೆ ||
ದುಂದುಭಿವೊಲೊಂದುಸಲ ದೂರದಿಂ ಮೊಳಗುತ್ತೆ |
ಮಂದರನು ಮಾಂದ್ಯದಿಂದೆಚ್ಚರಿಸುತೆ ||೬||

ಪಲಬಾರಿ ಕೇಳಿಹೆನು ಮೋಡಗಳ ಮಧ್ಯದಿಂ |
ಮೊಳಗಿ ಮಾರ್ದನಿಗೊಡುವ ನಿನ್ನ ದನಿಯ ||
ಬಳಲಿ ನಿದ್ರಿಸುತಿರುವ ನೆನವುಗಳ ಮೀಂಟುತ್ತೆ |
ಕಳವಳದ ಕನಸುಗಳ ಹರಿಸುತಿಹುದ ||೭||

ಎಳೆವಗಲ ತಿಳಿಯಾಳದಾಗಸವ ಪುಗಲೆಳಸಿ |
ಸುಳಿಸುಳಿದು ಮೇಲೇರುತೇರುತೇರುತ್ತೆ ಪಾಡಿ ||
ತಿಳಿಗಾಳಿಗಳ ಚಿಮ್ಮಿ ಪಾಡಿಪಾಡುತಲೇರಿ |
ಸಲೆಸೂಸಿ ಚೆಲ್ಲುವ ಸಂತಸವು ನಿನದಯ್ಯ ||೮||

೩.

ಧರೆಯವರ ಜೀವನವು ಕಿರಿದೆಂಬ ಬೇಸರದ |
ಭರದೆ ಪಾರುತೆ ಬೇರೆ ಲೋಕಗಳ ಸೇರಿ ||
ಪರಿಪರಿಯ ಮೇಲ್ತರದ ಮಾರ್ಗಗಳನರಿತು ಸೀಂ |
ಮರಳಿಳಿದು ಬಂದೆಮಗೆ ಬಿತ್ತರಿಸುತಿಹೆಯಯ್ಯ ||೯||

೪.

ಬಂದು ದರುಶನವಿತ್ತು ನಂಬುಗೆಯನುಳುಹಿದೈ |
ಕಂಬನಿಗಳಿಡುವವರ ಶೋಕವಾರಿಸುತೆ ||
ನಂಬಿದರ ನಂಬದರನೆಲ್ಲರನು ಮಮತೆಯಿಂ |
ತುಂಬಿದತಿಪ್ರೀತಿಯಿಂ ಪರಸುವಯ್ಯ ||೧೦||

ಬೇರೆ ಭಿಕ್ಷೆಯ ನಾವು ಕೇಳಿ ಕಾಡುವರಲ್ಲ |
ಬಾರಿಬಾರಿಗು ಕರುಣೆ ಬೇಡುವವರಲ್ಲ ||
ಏರುತಿವೆ ಬೇಗೆಗಳು ಊರುತಿದೆ ಸಂಶಯವು |
ದೂರಗೈಯಲು ಅವನು ಮೇಲ್ಮೇಲೆ ಬಾರಾ ||೧೧||

ಅಂತಾಗೆ ನಂಬಿಕೆಯು ದೃಢಮೊಂದಿ ನಿಲುವುದು |
ನಂಬದಿರುವವರೆಲ್ಲರೆಮ್ಮ ಕೂಡುವರು ||
ನಂಬಿರುವ ಸುಚರಿತರ ತೊರೆಯೆಯೆಂಬುವ ಕೀರ್ತಿ |
ಎಂದಿನಂತೆಯೆ ನೆರೆದು ಪೂಜ್ಯವಾಗುವುದು ||೧೨||

ವಿ. ಸೀ.

---

From here

# ಭಕ್ತಿಭಾಂಡಾರಿ ಬಸವೇಶ್ವರರು

## (೩)

ಭಕ್ತಿಭಾಂಡಾರಿ ಬಸವೇಶ್ವರರು ಎಲ್ಲಿಯೋ ಏಕಾಂತವಾಸವನ್ನು ಮಾಡುತ್ತ ತಮ್ಮ ಮೋಕ್ಷವನ್ನು ಸಾಧಿಸಿಕೊಳ್ಳುವುದೊಂದರಲ್ಲಿಯೇ ನಿರತರಾಗಿದ್ದಿದ್ದರೆ ಅವರ ಜೀವನಚರಿತ್ರೆಯು ಬೇರೆ ರೀತಿಯಲ್ಲಿರುತ್ತಿತ್ತು. ಮಹಾ ಜ್ಞಾನಿಗಳ ಮತ್ತು ಮಹಾ ಪುಣ್ಯಶಾಲಿಗಳ ಆತ್ಮವೃತ್ತವು ಮಾನವಕೋಟಿಗೆ ಲಾಭಕರವೇ ಆದರೂ ಯಾರು ಪಾಪಿಷ್ಠರ ಗುಂಪಿನಲ್ಲಿ ಸೇರಿಕೊಂಡು ಅವರೆಲ್ಲರನ್ನೂ ಉದ್ಧಾರಮಾಡುವ ಪವಿತ್ರ ಕಾರ್ಯದಲ್ಲಿ ಪ್ರಾಣಾರ್ಪಣ ಮಾಡುವರೋ ಆ ಮಹಾಪುರುಷರ ಚರಿತ್ರೆಯಿಂದ ಪ್ರಪಂಚಕ್ಕೆ ಹೆಚ್ಚು ಉಪಯೋಗವೆಂದು ನಾವು ಭಾವಿಸುತ್ತೇವೆ.

೧. "ಎಲವೋ, ಎಲವೋ, ಪಾಪಕರ್ಮವ ಮಾಡಿದವನೇ, ಎಲವೋ, ಎಲವೋ, ಬ್ರಹ್ಮ ಹತ್ಯವ ಮಾಡಿದವನೇ, ಒಮ್ಮೆ ಶರಣೆನ್ನೆಲವೋ. ಒಮ್ಮೆ ಶರಣೆಂದರೆ, ಪಾಪಕರ್ಮ ಕೆಟ್ಟೋಡುವುವು. ಸರ್ವಪ್ರಾಯಶ್ಚಿತ್ತಕ್ಕೆ ಹೊನ್ನಪರ್ವತಂಗಳೇ ಇದ್ದಾವು. ಓರ್ವಂಗೆ ಶರಣೆನ್ನಿ ನಮ್ಮ ಕೂಡಲಸಂಗಮ ದೇವಂಗೆ"

ಎಂದು ಕರುಣಾರಸವನ್ನು ಸೂಸುತ್ತ ಕೈಹಿಡಿದು ಧರ್ಮೋಪದೇಶ ಮಾಡಿದ ಬಸವೇಶ್ವರರ ಲೋಕಕಾರುಣ್ಯವು ಎಂತಹದೆಂಬುದನ್ನು ನಾವು ಹೇಳಬೇಕಾಗಿಲ್ಲ. ಬಸವೇಶ್ವರರು ಮತೋದ್ಧಾರಕರಾಗಿಯೂ ನಿಂತರು. ಹೀಗೆ ಮತೋದ್ಧಾರಕರಾಗಿ ನಿಂತು ಗುರುತರವಾದ ಕಾರ್ಯಭಾರವನ್ನು ನಿರ್ವಹಿಸಿದರು. ಈ ಕಾರ್ಯಭಾರ ನಿರ್ವಹಣದಲ್ಲಿ ಅವರ ಮೂರ್ತಿಸ್ವರೂಪವು ಮತ್ತಷ್ಟು ಸ್ಪಷ್ಟವಾಗಿ ವ್ಯಕ್ತಪಟ್ಟಿದೆ.

ಬಸವೇಶ್ವರರ ಮುಂದಿದ್ದ ಕಷ್ಟರಾಶಿಯನ್ನು ನಾವು ಸರಿಯಾಗಿ ಬೆಲೆ ಕಟ್ಟಬೇಕಾದರೆ ಅವರ ಉದ್ದೇಶಗಳನ್ನು ಮೊದಲು ನಾವು ಗ್ರಹಿಸಬೇಕು. ಜನಸಾಮಾನ್ಯದ ಆಚಾರವ್ಯವಹಾರಗಳ ತಿದ್ದುಪಡಿಯೂ ಸಮಾಜಸುಧಾರಣೆಯೂ ಆಗಬೇಕೆಂದು ಬಸವೇಶ್ವರರು ನಿಶ್ಚಯಿಸಿದ್ದರು ; ಆತ್ಮಪರಿಶುದ್ಧರೂ ನಡೆನುಡಿಗಳಲ್ಲಿ ಒಂದಾದವರೂ ಸದಾಚಾರಿಗಳೂ ಆದ ಜಂಗಮರ ಕೂಟವು ಏರ್ಪಡಬೇಕೆಂದು ಅವರು ನಿಷ್ಕರ್ಷಿಸಿದ್ದರು ; ಜಂಗಮರ ಸ್ಥಾನಗೌರವವನ್ನು ಹೆಚ್ಚಿಸಿ ಅವರ ಮೂಲಕ ಮತಪ್ರಾಚುರ್ಯ ಕಾರ್ಯವನ್ನೂ ರಾಷ್ಟ್ರೀಯ ಏಕೀಕರಣವನ್ನೂ ನೆರವೇರಿಸಬೇಕೆಂದು ಸಂಕಲ್ಪಿಸಿದ್ದರು. ಇವುಗಳೆಲ್ಲಕ್ಕೂ ಜಂಗಮಪ್ರಾಧಾನ್ಯವೇ ತಳಹದಿಯಾಗಬೇಕಾಯಿತು. ಜಂಗಮವೇ ಈಶ್ವರನೆಂದು ಹೊಸದಾಗಿ ಬಸವೇಶ್ವರರು ಕಲ್ಪಿಸಬೇಕಾಗಿರಲಿಲ್ಲ. ವೇದಾಗಮಗಳಲ್ಲಿ ಇರುವ ವಿಷಯವನ್ನು ಆಚರಣೆಯಲ್ಲಿ ತರುವುದಕ್ಕೆ

೧. ಬಸವೇಶ್ವರನ ವಚನಗಳು ಪುಟ ೯೦, ಸಂ. ೮೫.

ಪ್ರಯತ್ನಪಡಬೇಕಾಗಿತ್ತು. ಭಕ್ತರಾದ ಬಸವೇಶ್ವರರು ಜಂಗಮಸ್ವೀಕಾರದಲ್ಲಿ ತಾವೇ ಮೊದಲು ಮೇಲ್ಪಂಕ್ತಿಯನ್ನು ಹಾಕಿದರು. ಆಗಿನ ಸಂದರ್ಭದಲ್ಲಿ ಅನೇಕ ಮಹಿಮಾ ಪುರುಷರು ಬಸವೇಶ್ವರರಲ್ಲಿಗೆ ಒಂದು ಸೇರಿದ್ದು ನಿಜ. ಈ ಮಹಿಮಾಪುರುಷರೊಂದಿಗೆ ಕೆಲವರು ಸಾಮಾನ್ಯರೂ ಕೆಲವರು ಪುಂಡರೂ ಸೇರಿಕೊಂಡಿದ್ದರೆಂಬುದನ್ನು ಜನ ಸ್ವಭಾವಜ್ಞಾನದಿಂದ ಹೇಳಬಹುದಾಗಿದೆ. ಇವರೆಲ್ಲರೂ ಒಟ್ಟಿನಲ್ಲಿ ಜಂಗಮರೆಂದೇ ಗಣನೆಗೆ ಬಂದಿದ್ದರು. ಜಂಗಮರಾದ ಕಾರಣದಿಂದಲೇ ಈಶ್ವರಾವತಾರವೆಂದು ಮರ್ಯಾದೆಯನ್ನು ಪಡೆಯಬೇಕಾಗಿತ್ತು. ಇವರಲ್ಲಿ ಕೆಲವರ ಕುಂದುಕೊರತೆಗಳು ಬಸ ವೇಶ್ವರರಿಗೆ ತಿಳಿಯದೆ ಹೋಗಿರಲಿಲ್ಲ. ಜಂಗಮಲಾಂಛನಧಾರಿಗಳಾದ ಮಾತ್ರಕ್ಕೆ ಗುಣರಹಿತರಾದವರನ್ನು ಈಶ್ವರಾವತಾರವೆಂದು ಬಸವೇಶ್ವರರು ಹೇಗೆ ಅಂಗೀಕರಿಸು ವುದು ? ಆದರೆ ಜಂಗಮವು ಚರಲಿಂಗವೆಂದು ಆಗಮಾದಿಗಳು ಸಾರುತ್ತವೆ. ಪ್ರತ್ಯಕ್ಷ ಪ್ರಮಾಣಗಳಿಗೆ ಯುದ್ಧಪ್ರತಿಯುದ್ಧಗಳಾಗುತ್ತಿದ್ದಾಗ ನಿಷ್ಕಪಟಿಗಳಾದ ಭಕ್ತಬಸ ವೇಶ್ವರರು ಏನನ್ನು ಮಾಡಬೇಕು ? ಒಂದುಕಡೆ ಮನಸ್ಸನ್ನು ಸಮಾಧಾನಪಡಿಸಿ ಕೊಂಡು ಉತ್ತಮ ಮಧ್ಯಮಾಧಮಗಳ ತಾರತಮ್ಯವನ್ನು ಎಣಿಸದಂತೆ ಶಿಕ್ಷಿಸಬೇಕಾ ಗಿತ್ತು ; ಮತ್ತೊಂದುಕಡೆ ಆ ಜಂಗಮರನ್ನು ತಿದ್ದಿ, ಅವರ ಯೋಗಕ್ಷೇಮವನ್ನು ನೋಡಿಕೊಳ್ಳುವುದಲ್ಲದೆ ತಮ್ಮ ಸಂಘವನ್ನೂ ಬಲಪಡಿಸಬೇಕಾಗಿತ್ತು. ಆಗಿನ ಕಾಲ ದಲ್ಲಾದರೋ ಅನೇಕರು ಲಿಂಗಧಾರಣೆಯನ್ನು ಮಾಡಿಕೊಂಡರು. ಲಿಂಗಧಾರಣೆ ಮಾಡಿಕೊಂಡಿರುವರೆಲ್ಲರೂ ಶಿವಪಥವನ್ನು ಹಿಡಿದವರಾಗಲಿಲ್ಲ.

“ಕುಂಬಳದ ಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲುದೆ ? ಅಳಿಮನದಂಗೆ ಶಿವದೀಕ್ಷೆ ಕೊಟ್ಟರೆ ಕೂಡಲಸಂಗಯ್ಯ ಮಾನಹೀನನ ಮಾಸಲ ಕಾಯ್ದಿರಿಸಿದಂತೆ” *

೧. “ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ, ರಂಜನೆಯಹುದಲ್ಲದೆ, ಅದರ ಗಂಜಳ ಬಿಡದಣ್ಣ. ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ, ನಿಚ್ಚ ನಿಚ್ಚ ಕೆಸರಹುದಲ್ಲದೆ, ಅದರಚ್ಚುಗ ಬಿಡದಣ್ಣ. ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ, ಕೆಟ್ಟವನೇಕೆ ಸದ್ಭಕ್ತ ನಹನು ಕೂಡಲಸಂಗಮದೇವಾ ?”

೨. “ಒಳಗೆ ಕುಟಿಲ, ಹೊರಗೆ ವಿನಯವಾಗಿ, ಭಕ್ತರೆನಿಸಿಕೊಂಬವರ ಬಲ್ಲನೊಲ್ಲನಯ್ಯ ಲಿಂಗವು. ಅವರು ಶಿವಪಥಕ್ಕೆಸಲ್ಲರು, ಸಲ್ಲರಯ್ಯ. ಒಳಹೊರಗೊಂದಾಗದವರಿಗೆ ಅಳಿಯಾಸೆದೋರಿ ಬೀಸಾಡುವನವರ, ಜಗದೀಶ ಕೂಡಲಸಂಗಮದೇವ.”

೩. “ಹುತ್ತಬಡಿದಡೆ, ಹಾವು ಸಾಯಬಲ್ಲುದೇನಯ್ಯ ? ಅಘೋರತಪವ ಮಾಡಿದಡೇನು ? ಅಂತರಂಗದ ಆತ್ಮಶುದ್ಧವಿಲ್ಲದವರನೆಂತು ನಂಬುವನಯ್ಯ ಕೂಡಲಸಂಗಮದೇವಾ ?”

* ಪುಟ ೧೪, ಸಂ. ೪.

೧. ಪುಟ ೧೪ ಸಂ, ೫ ; ೨. ಪುಟ ೧೪ ಸಂ, ೮; ೩. ಪುಟ ೧೮ ಸಂ, ೪.

ಎಂದು ಬಸವೇಶ್ವರರು ವ್ಯಸನಪಡುತ್ತಿದ್ದರು. ಬಿಟ್ಟಿಯಾಗಿ ಊಟವನ್ನು ಹಾಕಿ ಕೇಳಿದ್ದನ್ನು ಕೊಡುವ ಧಣಿಯು ಇರುವಾಗ ಸುಖಪಡಬಾರದೇಕೆಂದು ಸ್ವಲ್ಪ ಜನಗಳಿಗಾದರೂ ಮನಸ್ಸು ಇದ್ದಿರಬೇಕು.

೪. "ಒಡೆಯರು ತನ್ನ ಮನೆಗೆ ಒಡಗೊಂಡುಹೋದರೆ, ತುಡುಗುಣಿತನದಲ್ಲಿ ಪರವಧುವ ನೋಡುವ ಸರಸ ಬೇಡವೋ, ಕಾಣಿರಣ್ಣಾ. ಒಡೆಯನರಸಿಯು ಸರಸ ಬೇಡವೋ. ಕೂಳ ಸೊಕ್ಕು ತಲೆಗೇರಿ, ರಾಣಿವಾಸದೊಡನೆ ಸರಸ ಬೇಡವೋ. ಕೂಡಲಸಂಗಮದೇವನು ಕರೆಯಿಸಿ ತಗನಯ್ಯ."

೫. "ನೋಡಲಾಗದು, ನುಡಿಯಲಾಗದು ಪರಸ್ತ್ರೀಯರ. ಬೇಡ, ಕಾಣಿರೋ. ತಗರ ಬೆನ್ನಿನಲ್ಲಿ ಹರಿವ ಸೊಣಗನಂತೆ ಬೇಡಕಾಣಿರೋ. ಒಂದಾಸೆಗೆ ಸಾಸಿರವರುಷ ನರಕದಲ್ಲಿಕ್ಕುವ ಕೂಡಲಸಂಗನು ದೇವಯ್ಯ."

ಎಂಬುದಾಗಿ ಜಂಗಮರನ್ನು ಕೈಹಿಡಿದು ಬೇಡಿಕೊಳ್ಳುತ್ತಲಿದ್ದರು.

ಕೆಲಕೆಲವರು ಬಸವೇಶ್ವರರ ಸ್ಥಾನಮಹತ್ವದಿಂದ ಮುಗ್ಧರಾಗಿಹೋಗಿ, ಅವರ ಆಶ್ರಯದಲ್ಲಿದ್ದ ತಾನೇ ದಂಡಾಧೀಶರಂತೆ ಗರ್ವವುಳ್ಳವರಾಗಿದ್ದರೆಂದು ತೋರುತ್ತದೆ. ಈ ಜಂಗಮರಿಗೆ ಬಸವೇಶ್ವರರ ದೆಸೆಯಿಂದ ಪ್ರತಿಷ್ಠೆ ಬಂದುದು ಸ್ವಲ್ಪ ಹೆಚ್ಚಾಯಿತು. ಬಸವೇಶ್ವರರು ತಾವು ದಂಡಾಧೀಶರಾಗಿದ್ದರೂ ಕಿನ್ನರ ಬ್ರಹ್ಮಯ್ಯ ಮಡಿವಳ ಮಾಚಯ್ಯ ಶಿವನಾಗಮಯ್ಯಾದಿಗಳನ್ನು ಹೇಗೆ ವಿನಯದಿಂದ ಗೌರವಿಸುತ್ತಿದ್ದರೆಂಬುದನ್ನು ನಾವು ನೋಡಬಹುದು. ಈ ಜಂಗಮರಾದರೋ ರಾಜಪುರೋಹಿತರಂತೆ ಹೆಚ್ಚಿಹೋಗಿದ್ದರು. ಇಂಥವರನ್ನೆಲ್ಲ ಒಳ್ಳೆಯ ಮಾತುಗಳಿಂದ ಬೋಧಿಸಿ ಸನ್ಮಾರ್ಗದಲ್ಲಿರುವಂತೆ ಪ್ರೇರೇಪಿಸುತ್ತಿದ್ದರು. ತಮ್ಮ ಅನುಯಾಯಿಗಳು ದುರ್ವ್ಯವಹಾರಿಗಳಾದರೆ, ತಮ್ಮ ಜಂಗಮರು ಅಹಂಕಾರ ಗರ್ವವುಳ್ಳವರಾದರೆ, ಜನಗಳ ಆದರಣೆಯೂ ಗೌರವವೂ ಹೇಗೆ ದೊರೆಯುವುದೆಂದು ಬಸವೇಶ್ವರರಿಗೆ ಸಹಜವಾದ ಹೆದರಿಕೆ. ತಮ್ಮ ಅನುಯಾಯಿಗಳ ಸದ್ಗತಿ ಪ್ರಾಪ್ತಿಗೂ, ನೂತನ ಸಂಪ್ರದಾಯದ ಶ್ರೇಯಸ್ಸಿಗೂ, ಶೂನ್ಯಸಿಂಹಾಸನದ ಚಿರಸ್ಥಾಯಿತ್ವಕ್ಕೂ ಸದಾಚಾರಸದ್ವರ್ತನೆಗಳೇ ಮೂಲಮಂತ್ರಗಳೆಂದು ಬಸವೇಶ್ವರರು ತಿಳಿದಿದ್ದರು.

ಈರೀತಿ ಬುದ್ಧಿಗಲಿಸುವುದು ಬಸವೇಶ್ವರರ ಪಾಲಿಗೆ ಬಂತು. ಜಂಗಮರು ಇದನ್ನು ಸೈರಿಸಿದಂತೆ ಕಾಣಲಿಲ್ಲ. ತಾವು ಜಂಗಮರಾಗಿ ಬಸವದಂಡಾಧೀಶನಿಂದ ಮರ್ಯಾದೆ ಮಾಡಿಸಿಕೊಳ್ಳಬೇಕಾದ ಸಂದರ್ಭದಲ್ಲಿ ಅವರಿಂದ ಬುದ್ಧಿಹೇಳಿಸಿಕೊಳ್ಳುವುದೇ—ಎಂದು ಈ ಅಜ್ಞಾನಿಗಳು ಕೋಪಗೊಳ್ಳುತ್ತಿದ್ದರೋ ಏನೋ! ಬಸವೇಶ್ವರರ ದುರವಸ್ಥೆಯನ್ನು ವರ್ಣಿಸಲು ಸಾಧ್ಯವಿಲ್ಲ.

---

೪. ಪುಟ ೯೩ ಸಂ ೧೦೫; ೫. ಪುಟ ೯೪ ಸಂ ೧೦೬.

* ೧. “ ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ. ಲಿಂಗವಂತನು ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ, ಅವಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ ಮುನಿಯ. ಲಿಂಗಭಕ್ತನು ಲಿಂಗವಂತರಿಗೆ ಬುದ್ಧಿಯ ಹೇಳಿದರೆ, ಮಚ್ಚರಿಸುವರ ಮೆಚ್ಚ ಕೂಡಲಸಂಗಮದೇವಾ. ”

ಎಂಬುದಾಗಿ ಆ ಜಂಗಮರನ್ನು ಸಮಾಧಾನಪಡಿಸುತ್ತಲಿದ್ದರು. ಹೀಗೆ ಸಮಾಧಾನ ಪಡಿಸುತ್ತ ಕ್ರಮಕ್ರಮವಾಗಿ ತಮ್ಮ ಮನಸ್ಸನ್ನೂ ಜಯಿಸಿಕೊಂಡರು. ಜಂಗಮರು ಹೇಗಿದ್ದರೇನು ? ಬಹಿರಾಚಾರವೇಷಭಾಷೆಗಳಿಂದ ಅವರನ್ನು ಪರೀಕ್ಷಿಸಲೇಕೆ ? ಈಶ್ವರೇಚ್ಛೆಯು ಎಂತಿರುವುದೋ ? ಜಗದೀಶ್ವರನ ಲೀಲೆಯನ್ನು ತಿಳಿಯುವರಾರು ? ಭಕ್ತನಾದವನು ಮರುಮಾತಿಲ್ಲದೆ ಜಂಗಮನೇ ಈಶ್ವರನೆಂದು ದೃಢವಾಗಿ ನಂಬ ಬೇಕು. ವಿಚಾರಾದಿಗಳು ಭಕ್ತನಿಗಲ್ಲ. ಕಪಟ ಜಂಗಮರನ್ನು ತಿದ್ದುವುದು ಈಶ್ವರನ ಕೆಲಸ. ಇದ್ದಹಾಗೆ ಒಪ್ಪಿಕೊಳ್ಳುವುದು ಭಕ್ತನ ಕರ್ತವ್ಯ—ಎಂದು ಮುಂತಾಗಿ ಬಸವೇಶ್ವರರ ಚಿತ್ತವೃತ್ತಿಯು ಮಾರ್ಪಟ್ಟು ಜಂಗಮಸ್ವೀಕಾರಮಾಡಿತು.

೧. “ ಉತ್ತಮ, ಮಧ್ಯಮ, ಕನಿಷ್ಠವೆಂದು. ಬಂದ ಜಂಗಮವನೆಂದೆನಾದರೆ ನೊಂದೆನಯ್ಯ ನಾನು ಬೆಂದೆನಯ್ಯ. ಎನ್ನಕಿಚ್ಚು ಎನ್ನ ಸುಟ್ಟಿತ್ತು. ಸುಖಿ ಜಂಗಮ, ಸಾಮಾನ್ಯಜಂಗಮವೆಂದುಂಟೆ ಕೂಡಲಸಂಗಮದೇವಾ ? ”

೨. ಲಾಂಛನವ ಕಂಡು ನಂಬುವೆ ಅವರಂತರಂಗವ ನೀನೆ ಬಲ್ಲೆ. ತೊತ್ತಿಗೆ ತೊತ್ತುಗೆಲಸ ವಲ್ಲದೆ ಅರಸಿನ ಸುದ್ದಿ ನಮಗೇತಕಯ್ಯ. ರತ್ನಮೌಳಿಕದಚ್ಚು ಕೂಡಲಸಂಗಮದೇವಾ ನಿಮ್ಮ ಶರಣರು. ”

೩. “ ಆರಾರ ಮನಸ್ಸಿನಲ್ಲಿ ಏನೇನಿಹುದೆಂದರಿಯೆ. ಒಳ್ಳಿಹರೆಂದೆನಲಮ್ಮೆ ಹೊಲ್ಲಹರೆಂದೆನಲಮ್ಮೆ. ಶಿವಭಕ್ತರಾದಕಾರಣ ಜಂಗಮವೇ ಲಿಂಗ ಕೂಡಲಸಂಗಮದೇವ. ”

ಎಂದು ಬಸವೇಶ್ವರರು ಹೇಳಿಕೊಂಡರು. ಕಡೆಗೆ ಕಳ್ಳನೊಬ್ಬನು ಬಂದು ಹೆಂಡತಿಯ ಮೇಲಣ ಒಡವೆಗಳನ್ನು ಅಪಹರಿಸುತ್ತಿದ್ದರೂ ಜಂಗಮಲಾಂಛನಧಾರಿಯಾಗಿದ್ದರೆ ಬಸವೇಶ್ವರರು ಸುಮ್ಮನಿರುತ್ತಿದ್ದರು. ಸುಮ್ಮನಿರುತ್ತಿದ್ದುದಷ್ಟೇ ಏಕೆ? ತಾವೇ ಆ ಆಭರಣಗಳನ್ನು ತೆಗೆದು ಕಳ್ಳನಕೈಗೆ ಕೊಡುತ್ತಲಿದ್ದರು. ಸಿಂಗಿರಾಜಪುರಾಣದ ಹತ್ತನೆಯ ಸಂಧಿಯಲ್ಲಿ ಇಂತಹ ಸಂದರ್ಭವೊಂದು ವರ್ಣಿತವಾಗಿದೆ. ಕಳ್ಳನೊಬ್ಬನು ಕಪಟ ಜಂಗಮನಾಗಿ ಬಂದು ಬಸವೇಶ್ವರರ ಮಗ್ಗುಲಲ್ಲಿ ಮಲಗಿದ್ದ ನೀಲಾಂಬಿಕೆಯ ಆಭರಣ ಗಳನ್ನು ತೆಗೆದುಕೊಳ್ಳುತ್ತಿದ್ದಾಗ ಆಕೆಗೆ ಎಚ್ಚರಿಕೆಯಾಗಿ ಕೈಬೀಸಿ ಪತಿಯನ್ನೆಬ್ಬಿಸಲು

* ೧. ಪುಟ ೯೫ ಸಂ ೧೧೬ ;

೧. ಪುಟ ೫೬, ಸಂ ೧೪೬. ೨. ೩. ಬಸವಣ್ಣನ ವಚನಗಳು (ಬಳ್ಳಾರಿ ಪುಸ್ತಕ) ಪುಟ ೫೪ ಸಂ, ೪೦೧, ೪೦೨.

೪. " ಒಡನಿರ್ದ ಸತಿಯೆಂದು ನೆಚ್ಚಿರ್ದೆನಯ್ಯಾ, ಕೈವಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯಾ ಅಯ್ಯೋ ನಮ್ಮಯ್ಯನ ಕೈನೊಂದಿತು. ತೆಗೆದುಕೊಡಾ ಎಲೆ ಚಂಡಾಲಗಿತ್ತಿ. ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದೊಡೆ ಕೂಡಲಸಂಗಮದೇವನಲ್ಲದೆ ಮತ್ತಾರೂ ಅಲ್ಲ."

ಎಂದು ಹೇಳಿ ತಾವಾಗಿ ಸಕಲಾಭರಣಗಳನ್ನೂ ತೆಗೆಸಿಕೊಟ್ಟರು. ಯಾರು

" ೫. ಸದಾಚಾರ ಸದ್ಭಕ್ತಿ ಇಲ್ಲದವರ ನಾನೊಲ್ಲೆನಯ್ಯ. ಅವರಾರಾಧನೆ ದಂಡ. ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲನಯ್ಯ ಕೂಡಲಸಂಗಮದೇವ, ಭೂಮಿಭಾರ ಕಣ "

ಎಂದು ತಿರಸ್ಕಾರ ಮಾಡಿದ್ದರೋ ಆ ಬಸವೇಶ್ವರರೇ ಕಟ್ಟಕಡೆಯಲ್ಲಿ

೧. " ಆವಾವ ಭಾವದಲ್ಲಿ ಶಿವನ ನಂಬಿದ ಶರಣರು ಎಂತಿದ್ದರೇನಯ್ಯ ? ಆವಾವ ಭಾವದಲ್ಲಿ ಶಿವನ ನಂಬಿದ ಮಹಿಮರು ಎಂತಿರ್ದರೇನಯ್ಯ ? ಸುಚರಿತ್ರರೆಂತಿರ್ದರೇನಯ್ಯ ? ಅವಲೋಹವ ಕಳೆವ ಪರುಷವೆಂತಿರ್ದರೇನಯ್ಯ ? ಕೂಡಲಸಂಗನ ಶರಣರು ರಸದ ವಾರಿಧಿಗಳು ಎಂತಿರ್ದರೇನಯ್ಯ ? "

ಎಂದು ಜಂಗಮಲಿಂಗ ಸಾಮರಸ್ಯವನ್ನು ತಾಳಿದರು. ಬಸವೇಶ್ವರರು ಚೋರಜಂಗಮರನ್ನೂ ವಿಟಜಂಗಮರನ್ನೂ ಮಿಂಡಜಂಗಮರನ್ನೂ ಸಭ್ಯರೊಡನೆ ಒಂದಾಗಿ ಭಾವನೆ ಮಾಡಿ ಅದ್ವೈತವನ್ನು ಅಂಗೀಕರಿಸಿದುದು ಲೌಕಿಕ ಸ್ಥಿತಿಗೆ ಹಾನಿಕರವೇ ವೃದ್ಧಿಕರವೇ ಎಂಬುದನ್ನು ನಾವು ಚರ್ಚಿಸುವುದು ಯುಕ್ತವಲ್ಲ. ಮನುಷ್ಯಸ್ವಭಾವದಲ್ಲಿ ಭೇದಗಳಿರುವುವೆಂದು ನಾವು ಒಪ್ಪುವುದಾದರೂ ಆ ಭೇದಗಳನ್ನು ಬಸವೇಶ್ವರರು ತಿಳಿದುಕೊಂಡು ನಿರಾಕರಿಸಿದರೆಂದು ಹೇಳುವುದಾದರೂ ಅದನ್ನು ಬಸವೇಶ್ವರರಲ್ಲಿ ಒಂದು ದೋಷವನ್ನಾಗಿ ನಾವು ಗಣಿಸುವುದಿಲ್ಲ. ಏಕೆಂದರೆ ಮನಸ್ಸಿನಲ್ಲಿ ಬಂದು ಹೊಕ್ಕಿರುವ ತಿರಸ್ಕಾರ ಬುದ್ಧಿಯನ್ನೂ ಜುಗುಪ್ಸೆಯ ಭಾವವನ್ನೂ ಜಯಿಸಿಕೊಂಡು ಸರ್ವಸಮತಾಭಾವವನ್ನು ಪಡೆಯುವುದು ಎಷ್ಟು ಜನರಿಗೆ ಸಾಧ್ಯ ? ಇದು ಮಹಾತ್ಮರಿಗಲ್ಲದೆ ಸಾಮಾನ್ಯರಿಗೆ ಸಾಧ್ಯವಿಲ್ಲವೆಂದೇ ನಮ್ಮ ನಂಬಿಕೆ. ಇದು ಆತ್ಮಶುದ್ಧಿಗಾಗಿಯೂ ಆತ್ಮೋನ್ನತಿಗಾಗಿಯೂ ಎದುರುಬಿದ್ದ ಸಂದಿಗ್ಧವಿಚಾರ. ಇದರಲ್ಲಿ ಬಸವೇಶ್ವರರು ಹೇಗೆ ತೇರ್ಗಡೆಯಾದರು ಎಂಬುದು ನಮ್ಮ ಮುಂದಿರುವ ಪ್ರಶ್ನೆ. ಲೋಕದ ಸ್ಥಿತಿಯಲ್ಲಿ ಮನುಷ್ಯ ಸ್ವಭಾವವು ವಿಚಿತ್ರವಾಗಿರುವುದು. ಆ ಸ್ವಭಾವದ ಗಮನಮಾರ್ಗವೂ ವಿಚಿತ್ರವಾಗಿರುವುದು. ಹಿಂದಿನ ಸಂಸ್ಕಾರದಿಂದ ಒಂದು ರೀತಿಯಲ್ಲಿ ಹೋಗುತ್ತಿರುವ ಮನಸ್ಸು ಅದೇ ಮಾರ್ಗದಲ್ಲಿ ಹೋಗಬೇಕೆಂದು ನಾವು ಹೇಳುವುದಾದರೂ ಮಹಾತ್ಮರ ಸಂದರ್ಶನ ಸಂಪರ್ಕ ಸಂಭಾಷಣಾದಿಗಳಿಂದ ಯಾರ ಯಾರ ಚಿತ್ತವೃತ್ತಿಯು ಹೇಗೆ ಹೇಗೆ ತಟ್ಟನೆ ಬದಲಾಯಿಸಬಹುದೋ ನಾವು ಹೇಳು

೪. ಸಿಂಗಿರಾಜಪುರಾಣ ೫. ಬಸವೇಶ್ವರನ ವಚನಗಳು ಪುಟ ೯೫ ಸಂ ೧೧೪.

೧. ಪುಟ ೧೧೭ ಸಂ ೨.

ವುದು ಸಾಧ್ಯವಿಲ್ಲ. ಹೀಗೆ ಬದಲಾಯಿಸುವುದು ಉಂಟೆಂಬುದು ಮನಶ್ಶಾಸ್ತ್ರದಲ್ಲಿಯೂ ಅಂಗೀಕೃತವಾಗಿದೆ. ಬಸವೇಶ್ವರರು ಚೋರರನ್ನು ಸಭ್ಯರನ್ನಾಗಿ ಮಾಡಿದರೆಂದು ನಾವು ಓದುವಾಗ ಆಶ್ಚರ್ಯಪಡಬೇಕಾದ ಆವಶ್ಯಕತೆಯಿಲ್ಲ. ಬಸವೇಶ್ವರರು ಮಹಾತ್ಮರಾಗಿದ್ದುದರಿಂದ ಇಂತಹ ಮಾರ್ಪಾಟು ಆಗಿದ್ದಿರಬಹುದು. ವಾಲ್ಮೀಕಿ ಮಹರ್ಷಿಗಳ ಪೂರ್ವಾಶ್ರಮವ್ಯಾಪಾರವನ್ನು ನಾವು ಕಂಡಿರುವೆವು. ನಾರದರು ಅವರಲ್ಲಿ ಮಾಡಿದ ಮಾರ್ಪಾಟನ್ನು ನೋಡಿರುವೆವು. ಇನ್ನು ಹೆಚ್ಚು ಹೇಳಬೇಕಾದು ದಿಲ್ಲ. ಲೋಕೋದ್ಧಾರಕ್ಕಾಗಿ ಒಬ್ಬರು ಮಹಾತ್ಮರು ಅವತರಿಸಿದರೂ ಅವರ ಪ್ರಭಾವವು ಸೂರ್ಯತೇಜಸ್ಸಿನಂತೆ ದಶದಿಕ್ಕುಗಳನ್ನೂ ತುಂಬಿ ಅಂಧಕಾರವನ್ನು ನಾಶಮಾಡುತ್ತದೆ. ಒಬ್ಬರು ಮಹಾತ್ಮರ ದೆಸೆಯಿಂದಲೇ ಲಕ್ಷೋಪಲಕ್ಷ ಜನರು ಉದ್ಧಾರವಾಗುತ್ತಾರೆ. ದುಷ್ಟರು ಸಭ್ಯರಾಗುತ್ತಾರೆ. ಆದುದರಿಂದ ಭಕ್ತರಾದ ಬಸವೇಶ್ವರರು ಜಂಗಮನೇ ಲಿಂಗವೆಂದು ದೃಢಮನಸ್ಸುಮಾಡಿಕೊಂಡು ಸಾರಿದ್ದು ಅವರ ಕರ್ತವ್ಯವೆನ್ನುತ್ತೇವೆ. ಅದರ ಫಲಾಫಲಗಳು ಈಶ್ವರಾಧೀನ. " ತೊತ್ತಿಗೆ ತೊತ್ತುಗೆಲಸವಲ್ಲದೆ ಅರಸಿನ ಸುದ್ದಿ ನಮಗೇತಕಯ್ಯ " ಎಂದು ಬಸವೇಶ್ವರರು ಚೆನ್ನಾಗಿ ಹೇಳಿದ್ದಾರೆ.

(೪)

ವೀರಶೈವೋದ್ಧರಣದ ಮಹೋತ್ಸವದಲ್ಲಿ ಸಹಸ್ರಸಹಸ್ರವಾಗಿ ಜನರು ಲಿಂಗವಂತರಾದರು. ನೂತನವಾಗಿ ಲಿಂಗಧಾರಿಗಳಾದ ಈ ಜನರು ನಾನಾ ಕುಲಗೋತ್ರಗಳಿಂದ ಬಂದವರಾಗಿದ್ದರು. ಇವರೆಲ್ಲರ ವ್ಯವಸ್ಥೆಯನ್ನು ಮಾಡಿ, ಅವರು ಜಾತಿಯನ್ನು ಪುನಃ ಬಿಟ್ಟುಹೋಗದಂತೆಯೂ, ಹಿಂದಿನಿಂದ ಬಂದ ದುರಾಚಾರಗಳನ್ನು ತ್ಯಜಿಸಿ ಶಿವಪಥವನ್ನು ಹಿಡಿಯುವಂತೆಯೂ ಲಿಂಗವಂತರಲ್ಲೆಲ್ಲ ಒಂದು ಐಕಮತ್ಯವು ತಲೆದೋರಿ ಕಟ್ಟುವಡೆಯುವಂತೆಯೂ ಏರ್ಪಡಿಸಬೇಕಾಗಿತ್ತು. ಇವುಗಳು ಸುಲಭಸಾಧ್ಯವಾಗಿರಲಿಲ್ಲ. ಪವಿತ್ರವಾದ ವೀರಶೈವವನ್ನು ಕೈಹಿಡಿದು ಪುನಃ ಭವಿಯಾಗುವುದು ಪಾಪವೆಂದು ಬಸವೇಶ್ವರರು ತಿಳಿಯ ಹೇಳಿದರು. ಕೆಲವರು ಸಾಕ್ಷಾತ್ತಾಗಿ ಭವಿಗಳಾಗದೇ ಹೋದರೂ ಹಿಂದಿನ ಸಂಬಂಧಗಳನ್ನು ತೀರ ಬಿಟ್ಟು ಬಿಡಲಾಗದೆ ಪರಿತಪಿಸುತ್ತಿದ್ದರು ; ಮತ್ತೆ ಕೆಲವರು ಕೈಹಿಡಿದಿದ್ದ ವೀರಶೈವವನ್ನೂ ಬಿಟ್ಟು ಹಿಂದಿನ ಜಾತಿಮತಗಳಿಗೆ ಮಾರ್ಪಾಟು ಹೊಂದುತ್ತಿದ್ದರು. ರಾಜನು ಸ್ವತಃ ಜೈನನಾಗಿದ್ದುದರಿಂದಲೂ, ಚಿರಕಾಲದಿಂದ ಬ್ರಾಹ್ಮಣರು ಬಲಿಷ್ಠರಾಗಿದ್ದುದರಿಂದಲೂ, ಜನಗಳಿಗೆ ಅಂತರಂಗದಲ್ಲಿ ವೀರಶೈವದ ಮೇಲೆ ಪ್ರೇಮವಂಕುರಿಸಿದ್ದರೂ ಬಹಿರಂಗವಾಗಿ ಅದನ್ನು ತೋರಿಸುವಷ್ಟು ಧೈರ್ಯವಿರುತ್ತಿರಲಿಲ್ಲ. ಮನೋನಿಶ್ಚಯವನ್ನೇ ನಂಬಿಕೊಂಡು ಇತ

ರರ ಪ್ರೇರೇಪಣೆ ಬೆದರಿಕೆಗಳಿಗೆ ಒಳಗಾಗದಿರುವುದು ಪಾಮರರಿಗೆ ಕಷ್ಟ. ಈ ಜನಗಳ ಅನಿಶ್ಚಯವನ್ನೂ ಅಧೈರ್ಯವನ್ನೂ ನೋಡಿ ಬಸವೇಶ್ವರರಿಗೆ ಸಂಕಟವಾಗುತ್ತಿದ್ದಿತು.

*** "ಭಕ್ತರ ಕಂಡರೆ ಬೋಳರಪ್ಪರಯ್ಯ! ಶ್ರವಣರ ಕಂಡರೆ ಬತ್ತಲೆಯಪ್ಪರಯ್ಯ! ಹಾರುವರ ಕಂಡರೆ, ಹರಿನಾಮವೆಂಬುವರಯ್ಯ! ಅವರವರ ಕಂಡರೆ, ಅವರವರಂತೆ. ಅವರ ಸೂಳಿಗೆ ಹುಟ್ಟಿದವರ ತೋರದಿರಯ್ಯ! ಕೂಡಲಸಂಗಯ್ಯನ ಪೂಜಿಸಿ ಅನ್ಯದೈವಂಗಳಿಗೆರಗಿ ಭಕ್ತರೆನಿಸಿಕೊಂಬ ಅಜ್ಞಾನಿಗಳ ನಾನೇನೆಂಬೆನಯ್ಯ?"**

ಭವಿಯನ್ನು ಸೇರಬೇಡಿ, ಪುನಃ ಭವಿಯಾಗಬೇಡಿ; ಇತರರಿಗೆ ಹೆದರಿ ಮುಕ್ತಿದಾಯಕವಾದ ವೀರಶೈವವನ್ನು ಬಿಟ್ಟರೆ, ನರಕಕ್ಕೆ ಭಾಜನರಾಗುವಿರಲ್ಲಾ—ಇದು ಸರಿಯಲ್ಲ ಎಂದು ಉಪದೇಶಿಸಿದರು.

**೧. "ಶರಣಸಂಬಂಧವನರಿತಬಳಿಕ ಮರಳಿ ಭವಿಯ ಬೆರಸಲಾಗದು. ಬ್ರಹ್ಮಹತ್ಯ, ಭ್ರೂಣಹತ್ಯ, ವೈತರಣಿ, ದುರ್ಗತಿ ಪಂಚಮಹಾಪಾತಕದಿಂದಧಿಕ ನೋಡಾ ಅಳುಪಿ ಭವಿಯೊಡನುಂಡರೆ, ಭಕ್ತನಲ್ಲ ಕೂಡಲಸಂಗಮದೇವಾ"**

ಎಂದು ತಿಳಿಯಹೇಳಿದಾಗ ಜನರನ್ನು ಸುಮ್ಮನೆ ಹೆದರಿಸಬೇಕೆಂಬುದು ಬಸವೇಶ್ವರರ ತಾತ್ಪರ್ಯವಲ್ಲ. ವೀರಶೈವದ ಮಹತ್ವವು ಬಸವೇಶ್ವರರಿಗೆ ಸ್ವತಃ ಅನುಭವಕ್ಕೆ ಬಂದಿದ್ದಿತು. ಷಟ್ಸ್ಥಲ ಮಾರ್ಗದಿಂದ ಜನರು ತಮ್ಮ ಮುಕ್ತಿಯನ್ನು ಸುಲಭವಾಗಿ ಸಂಪಾದಿಸಿಕೊಳ್ಳಬಹುದೆಂದು ಅವರಿಗೆ ದೃಢನಿಶ್ಚಯವಿದ್ದಿತು. ಇಂತಹ ಸುಮಾರ್ಗವನ್ನು ಬಿಟ್ಟುಹೋದರೆ ಅವರಿಗೆ ಸುಗತಿ ಎಲ್ಲಿಂದ ದೊರೆಯುವುದು—ಎಂಬುದಾಗಿ ಪಶ್ಚಾತ್ತಾಪದಿಂದ, ವ್ಯಸನದಿಂದ, ಹೇಳಿದ ಮಾತುಗಳಿವು.

ಈ ಜನಗಳನ್ನು ತಿದ್ದಿಕೊಳ್ಳುವುದರ ಜೊತೆಗೆ ಮತ್ತೊಂದು ತೊಡಕಾದ ಗಂಟನ್ನು ಬಿಡಿಸಬೇಕಾಯಿತು. ಉತ್ಸಾಹದಿಂದ ಜನಗಳು ವೀರಶೈವೋಪದೇಶವನ್ನು ಕೈಕೊಂಡಾಗ ಒಂದೇ ಸಂಸಾರದಲ್ಲಿ ಗಂಡಸೊಂದುರೀತಿ ಹೆಂಗಸಿನ್ನೊಂದುರೀತಿ ವರ್ತಿಸುತ್ತಿದ್ದರು. ಸಾಮಾನ್ಯವಾಗಿ ಹೆಂಗಸರು ಪೂರ್ವಸಂಪ್ರದಾಯವನ್ನು ಒಮ್ಮೆಯೇ ಬಿಟ್ಟುಬಿಡುವುದಿಲ್ಲ. ಅವರು ಯಾವಾಗಲೂ ಮಂದಗಮನೆಯರೇ. ಸಂಸಾರದಲ್ಲಿ ಸಿಕ್ಕಿಕೊಂಡಮೇಲೆ ಗಂಡಸು ಹೆಂಡತಿಮಕ್ಕಳನ್ನು ತಟ್ಟನೆ ಬಿಟ್ಟುಬಿಡುವುದು ಹೇಗೆ? ಗಂಡಸು ವೀರಶೈವ ದೀಕ್ಷೆಯನ್ನು ಪಡೆದು ಲಿಂಗಪೂಜಾ ನಿರತನಾಗಿರುವುದು, ಹೆಂಗಸು ಅನ್ಯಕರ್ಮಾಚರಣೆಯನ್ನು ಮಾಡುತ್ತಿರುವುದು ಈ ಅವ್ಯವಸ್ಥೆಗೆ ಏನು ಮಾಡಲಾದೀತು?

---

*** ಪುಟ ೧೫ ಸಂ. ೧೫;**

**೧. ಪುಟ ೯೭ ಸಂ. ೧೩೩;**

*“ಗಂಡ ಶಿವಲಿಂಗದೇವರ ಭಕ್ತ. ಹೆಂಡಿತಿ ಮಾರಿಮಸಣಿಯ ಭಕ್ತೆ. ಗಂಡ ಕೊಂಬುದು ಪಾದೋದಕಪ್ರಸಾದ. ಹೆಂಡಿತಿ ಕೊಂಬುದು ಸುರೆಮಾಂಸ. ಈ ಭಾಂಡಭಾಜನ ಶುದ್ಧಿ ಇಲ್ಲದವರ ಭಕ್ತಿ, ಹೆಂಡದ ಮಡಿಕೆಯ ಹೊರಗೆ ತೊಳೆದಂತೆ, ಕೂಡಲ ಸಂಗಮದೇವಾ”

ಎಂದು ಬಸವೇಶ್ವರರು ನೋಡಿ ಹೇಳಿದ್ದಾರೆ. ಮನೆಯ ಹೆಂಗಸರ ಪ್ರಭಾವದಿಂದ ಗಂಡಸರು ಕೂಡ ಒಮ್ಮೊಮ್ಮೆ ಕೀಳು ದೈವಗಳಿಗೆ ಎರಗುತ್ತಿದ್ದರು. ಕೆಲವರಿಗೆಲ್ಲ ಹಿಂದಿನಿಂದ ಬಂದಿದ್ದ ಮಾರಿಮಸಣಿಗಳೇ ಹೆಚ್ಚು ಪೂಜಾರ್ಹವಾಗಿದ್ದುವು. ಆ ದೈವಗಳನ್ನು ಬಿಡಲು ಮನಸ್ಸು ಒಪ್ಪುತ್ತಿರಲಿಲ್ಲ. ಸುಲಭವಾಗಿ ರೋಗಗ್ರಸ್ತರಾಗುವ ಜನರು ಭೀತಿಪರವಶರಾಗಿ ಮಾರಿಗಲ್ಲಿ ಕೋಪ ಬಂತೋ ಅದಕ್ಕೆ ಆಹುತಿಯನ್ನು ತಪ್ಪಿಸಿ ಹೀಗಾಯಿತು, ಅದನ್ನು ತೃಪ್ತಿಪಡಿಸಬೇಕು, ಎಂದು ಅಜ್ಞಾನದಿಂದ ಮೂಢಭಕ್ತಿಯನ್ನು ತೋರುವುದು ಹೆಚ್ಚಲ್ಲ. ಕೆಲ ಕೆಲವರು ಬಾಯಲ್ಲಿ ಈಶ್ವರನಾಮವನ್ನು ಹೇಳುತ್ತಿದ್ದರೂ ಮನದಲ್ಲಿ ಮಾರಿಸ್ಮರಣೆಯನ್ನು ಮಾಡುತ್ತ ಮರೆಯಲ್ಲಿ ಪ್ರಾಣಿಬಲಿಯನ್ನು ಕೊಡುತ್ತಿದ್ದರು. ಮಾತೆತ್ತಿದರೆ ಕೋಳಿ ಕುರಿಗಳನ್ನು ಕೊಯ್ದು ಹಿಂಸಾರೂಪವಾದ ಪೂಜೆಯನ್ನು ಮಾಡುತ್ತಿದ್ದವರು, ನೂತನ ಮತ ಬೋಧೆಯಿಂದ ಬೇರೊಂದು ದೈವವನ್ನು ಪುಷ್ಪಪತ್ರಾವಳಿಗಳಿಂದ ಮಾತ್ರ ಪೂಜಿಸುತ್ತಿದ್ದಾಗ, ನೂತನ ದೈವಕ್ಕೆ ತೃಪ್ತಿಯೂ ಆಗದೆ, ಹಿಂದಿನ ದೈವಕ್ಕೆ ಕೋಪವೂ ಬಂದರೇನುಗತಿ— ಎಂದು ಹೆದರುತ್ತಿದ್ದರೋ ಏನೋ! ಈ ಜನಗಳಿಗೆ ಪ್ರಪತ್ತಿಮಾರ್ಗವನ್ನು ಉಪದೇಶಿಸಲು ತೊಡಗಿದ ಬಸವೇಶ್ವರರು ಹಿಂಸಾರೂಪವಾದ ಪೂಜೆಯನ್ನು ತಪ್ಪಿಸಿ, ಇರುವ ಭಗವಂತನೊಬ್ಬನೇ, ಪರದೈವವಾದ ಪರಮೇಶ್ವರನು ಕರುಣಾಮಯನು, ಆತನೇ ನಮ್ಮನ್ನು ಸಲಹತಕ್ಕವನು ಎಂದು ತಿಳಿಯಪಡಿಸಿದರು.

೧. “ಹಾಳು ಮೊರಡಿಗಳಲ್ಲಿ, ಊರದಾರಿಗಳಲ್ಲಿ, ಕೆರೆಬಾವಿ ಹೂ ಗಿಡು ಮರಂಗಳಲ್ಲಿ, ಗ್ರಾಮದ ಮಧ್ಯದಲ್ಲಿ, ಚೌಪಥಪಟ್ಟಣಪ್ರವೇಶದಲ್ಲಿ, ಹಿರಿಯಾಲದ ಮರದಲ್ಲಿ, ಮನೆಮಾಡಿ ಕರೆವೆಮ್ಮೆಯ ಹಸುಗೂಸು, ಬಸಿರೆ, ಬಾಣತಿ, ಕುಮಾರಿತಿ, ಕೊಡಗೂಸೆಂಬುವರ ಹಿಡಿದುಂಬ, ತಿರಿದುಂಬ ಮಾರಯ್ಯ ಬೀರಯ್ಯ ಖೇಚರಗಾವಿಲ ಅಂತರಬೆಂತರ, ಕಾಳಯ್ಯ ಮಾಳಯ್ಯ, ಕೇತಯ್ಯಗಳೆಂಬ ನೂರುಮಡಿಕೆಗೆ ನಮ್ಮ ಕೂಡಲಸಂಗಮದೇವರಿಗೆ ಶರಣೆಂಬುದೊಂದು ದೊಣ್ಣೆ ಸಾಲದೇ?”

೨. “ಉಣಲುಡಲು ಮಾರಿಯಲ್ಲದೆ ಕೊಲಲು ಕಾಯಲು ಮಾರಿಯೆ? ತನ್ನ ಮಗನ ಜವನೊಯ್ಯುವಲ್ಲಿ, ಅಂದೆತ್ತ ಹೋದಳೋ ಮಾರಿಕವ್ವೆ? ಇವರು ಕಾವರೆ, ಕೊಲುವರೆ? ನಮ್ಮ ಕೂಡಲಸಂಗಯ್ಯನಲ್ಲದೆ ಮತ್ತೊಂದು ದೈವವಿಲ್ಲ, ದೈವವಿಲ್ಲ.”

೩. “ಮರಗೊಟ್ಟನಲ್ಲಿ ಬಪ್ಪ ಕಿರುಕುಳದೈವಕ್ಕೆ ಕುರಿಯನಿಕ್ಕಿಹೆನೆಂದು ನಲಿನಲಿದಾಡುವರು. ಕುರಿ ಸತ್ತು ಕಾವುದೆ ಹರ ಮುಳಿದವರ? ಕುರಿಬೇಡ ಮರಿಬೇಡ, ಬರಿಯ ಪತ್ರೆಯತಂದು,

---

* ಪುಟ ೧೫ ಸಂ ೧೬;

೧. ಪುಟ ೮೦ ಸಂ. ೨೯; ೨. ಪುಟ ೮೧ ಸಂ. ೩೨; ೩. ಪುಟ ೮೧ ಸಂ. ೩೩.

ವರದ ಜಲವನೆ ನೀಡಿ, ಹರುಷದಿಂದಲೆ ಬಂದು, ಶರಣಭಾವದಿ ನಿಂದು, ಮರೆಯದೆ ಮನಮುಟ್ಟಿ ಪೂಜಿಸ್ಕೈ, ನಮ್ಮ ಕೂಡಲಸಂಗಮದೇವನ"

ಎಂದು ಹಿತೋಪದೇಶಮಾಡಿದರು.

ಇವುಗಳಿಂದ ಜನಸಾಮಾನ್ಯದಲ್ಲಿದ್ದ ದುರಾಚಾರಗಳು ಮಾಯವಾಗಿ, ಮದ್ಯ ಮಾಂಸಾದಿ ನಿಷಿದ್ಧಪದಾರ್ಥಗಳ ಸೇವನೆಯು ಕಡಿಮೆಯಾಯಿತು; ಸಮಾಜದ ಉದ್ಧಾರವು ಮತನಿಯಮಗಳಿಂದಲೂ ಮತಾಚರಣೆಯಿಂದಲೂ ಕೈಗೂಡುವಂತಾಯಿತು.

ಈರೀತಿ ಸಮಾಜೋದ್ಧಾರವನ್ನು ಮಾಡುತ್ತಿದ್ದಾಗ ಆ ಸಮಾಜದಲ್ಲಿ ಐಕಮತ್ಯವೂ ಉಂಟಾಗುವಂತೆ ಬಸವೇಶ್ವರರು ಪ್ರಯತ್ನಪಟ್ಟರು. ಅವರ ಧೈರ್ಯವೂ ಅವರ ಸ್ಥೈರ್ಯವೂ ಈ ಒಂದು ಕಾರ್ಯದಲ್ಲಿ ಸಂಪೂರ್ಣವಾಗಿ ವಿನಿಯೋಗವಾಗಬೇಕಾಯಿತು. ಬಸವೇಶ್ವರರಲ್ಲದೆ ನಮ್ಮ ಈ ಭರತಭೂಮಿಯಲ್ಲಿ ಎಷ್ಟೋಜನ ಮತೋದ್ಧಾರಕರೂ ನೂತನ ಮತಸ್ಥಾಪಕರೂ ಅವತಾರಮಾಡಿರುತ್ತಾರೆ. ಆದರೆ ಬಸವೇಶ್ವರರು ಕೈಗೊಂಡ ಕಾರ್ಯವನ್ನು, ಬುದ್ಧದೇವನ ಹೊರತು ಮತ್ತಾವ ಅವತಾರಪುರುಷರೂ* ಮಾಡಲಿಲ್ಲ. ಯಾವ ಕೀಳುಜಾತಿಯವನಾದರೂ ಅವನನ್ನು ಕೈಹಿಡಿದು ಸಮಾಜದಲ್ಲಿ ಅವನಿಗೊಂದು ಸ್ಥಾನವನ್ನು, ಸಮಾಜದಲ್ಲಿ ಸಮಾನವಾದ ಹಕ್ಕುಬಾಧ್ಯತೆಗಳನ್ನು, ಕಲ್ಪಿಸಿಕೊಡಲಿಲ್ಲ. ಬಸವೇಶ್ವರರು ಜಾತಿಭೇದಗಳನ್ನು ಗಣಿಸದೆ ಲಿಂಗವಂತರೆಲ್ಲ ಕುಲಜರು ಎಂದು ಭಾವಿಸಿದರು. 'ಸರ್ವಂ ಶಿವಮಯಂ ಜಗತ್,' ಪರಮಾತ್ಮನು ಪ್ರತಿಯೊಬ್ಬನ ಅಂತರಂಗದಲ್ಲಿಯೂ ಇದ್ದಾನೆ, ಭಗವಂತನ ದೃಷ್ಟಿಯಲ್ಲಿ ಎಲ್ಲರೂ ಒಂದೇ, ಮುಕ್ತಿಮಾರ್ಗವು ಎಲ್ಲರಿಗೂ ಸುಗಮ—ಎಂದು ಮುಂತಾಗಿ ಹೇಳುವ ಬಾಯಲ್ಲಿಯೇ ವರ್ಣವ್ಯತ್ಯಾಸಗಳನ್ನೂ ಅಸ್ಪೃಶ್ಯತೆಯನ್ನೂ ಪ್ರತಿಪಾದಿಸುವುದು ಪರಸ್ಪರ ವಿರೋಧವಲ್ಲವೇ ? ಸಮಾಜನಿಯಮಗಳೆಂದು ಅಂಧಶ್ರದ್ಧೆಯಿಂದ ಅನುಸರಿಸಿಕೊಂಡುಬಂದು ಅತ್ಯಾಚಾರಗಳನ್ನು ನಡೆಸುವುದು ಯಾವ ಧರ್ಮ? ದೇವರಲ್ಲಿ ಭಕ್ತಿಯುಕ್ತನಾಗಿ ಸದಾಚಾರ ಸದ್ವರ್ತನೆಗಳಿಂದ ಜೀವಿಸುತ್ತಿರುವ ಮಾನವನಿಗೆ ಜಾತಿಯೆಂಬ ಬಂಧನ ವೇನು ? ಯಾವ ಜೀವನು ಯಾವ ಜಾತಿ ? ಬ್ರಾಹ್ಮಣರ ಭಗವಂತನೊಬ್ಬನು ಶ್ವಪಚರ ಭಗವಂತನೊಬ್ಬನು ಬೇರೆಬೇರೆ ಉಂಟೇ ? ಭಗವಂತನು ಒಬ್ಬನೆ ಎಂದು ಹೇಳುತ್ತ ಹೇಳುತ್ತ ಇಲ್ಲದ ಭೇದಗಳನ್ನು ಏಕೆ ಮಾಡುವಿರಿ ? ಭಗವಂತನು ಅಂತಹ ಭೇದವನ್ನು ಮಾಡಿರುವನೇ ? ಜಾತಿಭೇದವಿಲ್ಲದೆ ಭಕ್ತರಿಗೆಲ್ಲ ಭಗವಂತನು ಪ್ರಸನ್ನನಾಗಿಲ್ಲವೇ ? ಭಗವಂತನೇ ಮಾರ್ಗದರ್ಶಕನಾಗಿರುವಾಗ ಹಿಂದೆಗೆಯಲೇಕೆ ? ನೀವು ನಿಜವಾಗಿಯೂ

* ರಾಮಾನುಜರು ಕೀಳುಮತದವರಿಗೆ ವೈಷ್ಣವದೀಕ್ಷೆಯನ್ನು ಕೊಟ್ಟರೂ ಅವರಿಗೆ ಸಮಾಜದಲ್ಲಿ ಸಮಾನವಾದ ಹಕ್ಕುಬಾಧ್ಯತೆಗಳನ್ನು ಕಲ್ಪಿಸಿಕೊಡಲಿಲ್ಲ.

ಜ್ಞಾನಿಗಳಾದರೆ ಭಗವಂತನ ಸಾಕ್ಷಾತ್ಕಾರವನ್ನು ಎಲ್ಲರಲ್ಲಿಯೂ ಮಾಡಿ—ಎಂಬ ಪಂಥವನ್ನು ಬಸವೇಶ್ವರರು ಹಿಡಿದರು. ನಾನಾವೃತ್ತಿಗಳು ನಾನಾಜಾತಿಗಳೆಂದು ಗಣನೀಯವಾಗಿದ್ದಾಗ, ನಾನಾಜಾತಿಗಳಿಂದಲೂ ಜನರು ವೀರಶೈವದೊಳಕ್ಕೆ ಬಂದು ಸೇರಿಕೊಂಡಾಗ, ಲಿಂಗಪೂಜಾನಿರತರಾದವರೆಲ್ಲ ಒಂದೇ ಜಾತಿ, ಸಹಭೋಜನವೂ ಕೊಳುಕೊಡೆಯಿಂದ ಬಾಂಧವ್ಯವೂ ಬೆಳೆಯಬಹುದು ಎಂದು ಬೋಧಿಸಿ ಐಕಮತ್ಯಕ್ಕೆ ಪ್ರೋತ್ಸಾಹವಿತ್ತರು. ಒಂದೇ ಜಾತಿಯಲ್ಲಿ ಒಂದೇ ಮತದಲ್ಲಿ ಒಳಪಂಗಡಗಳು ಸಾವಿರಾರು ಸೃಷ್ಟಿಯಾಗಿ ಒಂದೊಂದು ಪಂಗಡವೂ ಒಂದೊಂದು ದಿಕ್ಕಿನಲ್ಲಿ ಕಣ್ಣುಮುಚ್ಚಿಕೊಂಡು ಬಹುಮುಖವಾಗಿ ಹೊರಡುತ್ತಿರುವುದನ್ನು ಬಸವೇಶ್ವರರು ನೋಡಿ, ಇವುಗಳೆಲ್ಲವೂ ಏಕಕೇಂದ್ರಾಭಿಮುಖವಾಗಿ ಗಮಿಸುವಂತೆ ಮಾಡಿದರು. ಒಂದುಜಾತಿ ಒಂದು ಮತ ಎಂದು ಸೇರಿಸಿಕೊಂಡಮೇಲೆ ಸಮಾನವಾದ ಹಕ್ಕುಬಾಧ್ಯತೆಗಳು ಎಲ್ಲರಿಗೂ ಇವೆ ಎಂದು ತಿಳಿಯಹೇಳಿದರು. ಈ ಸಮಾನವಾದ ಹಕ್ಕುಬಾಧ್ಯತೆಗಳು ಐಕಮತ್ಯಕ್ಕೆ ಒರೆಗಲ್ಲಾದ ಸಹಭೋಜನ ಕೊಳುಕೊಡೆಯಿಲ್ಲದೆ ಮತ್ತೆಲ್ಲಿ ವ್ಯಕ್ತವಾಗಬೇಕು ? ಆದರೆ ನಮ್ಮಲ್ಲಿನ ಸಮಾಜವ್ಯವಸ್ಥೆಯು, ಶಾಸ್ತ್ರಗಳು ಟೀಕುಗಳು ಕರ್ಮಗಳು ಎಂದು ಮುಂತಾದ ನೂರುಸುತ್ತಿನ ಕೋಟೆಯನ್ನು ಬಲವಾಗಿ ಕಟ್ಟಿಕೊಂಡು ಮಧ್ಯೆ ಕುಳಿತುಬಿಟ್ಟಿದೆ. ಲಿಂಗಧಾರಿಗಳಾದ ಮಾತ್ರಕ್ಕೆ ಪೂರ್ವಾಚಾರದಿಂದ ಸಂಕುಚಿತವಾಗಿರುವ ಮನಸ್ಸು ಒಮ್ಮೆಗೆ ಧಾರಾಳವಾಗಿ ಸಮಾಜದ ಬಂಧುಗಳನ್ನು ನಿರಾಕರಿಸುವುದೇ ? ಅದು ಬಸವೇಶ್ವರರಂಥ ಮಹಾತ್ಮರಿಗೆ ಸುಲಭಸಾಧ್ಯವಾದರೂ ಜನಸಾಮಾನ್ಯಕ್ಕೆ ಪ್ರಯಾಸವೆಂದೇ ಹೇಳಬೇಕು. ಶರಣಜನರೂ ಭಕ್ತರೂ ಜಾತಿಬಂಧನಗಳಿಂದ ಮುಕ್ತರೆಂಬುದನ್ನು ಸಾಮಾನ್ಯವಾಗಿ ಗ್ರಹಿಸಲಾಗುವುದಿಲ್ಲ. ದಿವ್ಯಕ್ಷೇತ್ರಗಳಲ್ಲಿ ಭಗವಂತನು ಬುದ್ಧಿಗಲಿಸಿರುವನೆಂದು ಕಥೆಗಳನ್ನು ಹೇಳಬಹುದು. ಆದರೆ ಅವುಗಳಿಂದ ಜನರೇನನ್ನೂ ಕಲಿತಿಲ್ಲ. ಪೂರ್ವಾಚಾರದ ಅಭಿಮಾನದಿಂದ ಹಿಂದೆಗೆಯುತ್ತಿದ್ದ ಜನರನ್ನು ತಿದ್ದಿಕೊಳ್ಳುವ ಭಾರವು ಬಸವೇಶ್ವರರ ಪಾಲಿಗೆ ಬಂತು. ಕುಲಾಚಾರಗಳು ಮತಾಚಾರಗಳಿಂದ ಭಿನ್ನವಾಗಿ ಆಗಾಗ್ಗೆ ನಿಂತರೂ ಸಾಮಾನ್ಯವಾಗಿ ಕುಲಾಚಾರಗಳೇ ಅಂಗೀಕೃತವಾಗುವುವು. ಈ ಆಚಾರಗಳ ಮಾತು ಬಂದಾಗ

೧. "ಎಂತವನಾದೊಡೇನು ? ಲಿಂಗಮುಟ್ಟದವನೇ ಕೀಳುಜಾತಿ. ಕುಲವಹುದು ತಪ್ಪದು, ಲಿಂಗವ ಮುಟ್ಟಲೊಡನೆ ಹೊನ್ನಹುದು ತಪ್ಪದು, ಪರುಷ ಮುಟ್ಟಲೊಡನೆ. ಕೂಡಲಸಂಗಮದೇವ ನೊಲ್ಲನಾಸರ್ವಸಂದೇಹಿಗಳನು."

೨. "ಉಂಬಲ್ಲಿ ಉಡುವಲ್ಲಿ ಕುಲವಳಿಯಿತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ ಮಾದಿಗರನೇನೆಂಬೆನಯ್ಯ. ಇವರೆಂತು ಭಕ್ತರೆಂಬೆನಯ್ಯ ! ಇವರೆಂತು ಯುಕ್ತರೆಂಬೆನಯ್ಯ ? ಇವರು

೧. ಪುಟ ೨೨ ಸಂ. ೨೯ ; ೨. ಪುಟ ೯೧ ಸಂ. ೯೩ ;

ವಚ್ಯೋಚ್ಚಿ ಭಕ್ತರು. ಇವರು ವಚ್ಯೋಚ್ಚಿ ಭವಿಗಳು. ಅದೆಂತೆಂದೊಡೆ ಲೈಂಗ್ಯೆ .—' ಸ್ತ್ರೀ ವಾ ಪುರುಷ ಷ್ಷಂಡಚಾಂಡಾಲದ್ವಿಜವಂಶಜಾಃ ನ ಜಾತಿಭೇದೋ ಲಿಂಗಾರ್ಚನೆ ಸರ್ವೇ ರುದ್ರಗಣಾಃ ಸ್ಮೃತಾಃ' ಎಂದುದಾಗಿ, ಇಂತೆಂಬ ಪುರಾಣವಾಕ್ಯವ ತಿಳಿದು ನೋಡಿರೇ. ಸರ್ವರೂ ರುದ್ರಗಣಂಗಳೆಂಬೆ. ಸರ್ವರೂ ಸದ್ಭಕ್ತರೆಂಬೆ. ಆವರಲ್ಲಿ ಕುಲವ ನೋಡದೆ, ಆಚಾರವ ನೋಡಿ. ಅವರಿಗೆ ಬೇಕಾದ ಹೆಣ್ಣು ಕೊಟ್ಟು, ತನಗೆ ಬೇಕಾದುದ ತೆಗೆದುಕೊಂಬುವುದು. ಈ ಕ್ರಮವನರಿಯದವನ ಭಕ್ತಿ ಹೊಲತಿ ಶುದ್ಧನೀರಮಿಂದಂತಾಯಿತ್ತು ಕೂಡಲಸಂಗಮದೇವಾ."

ಎಂಬುದಾಗಿ ಖಂಡಿತ ತಿಳಿಯೆಹೇಳಿದರು. 'ನುಡಿದಂತೆ ನಡೆಯದಿದ್ದರೆ ಕೂಡಲ ಸಂಗನು ಮೆಚ್ಚನು ಕಾಣಿರಯ್ಯ' ಮನೋವಾಕ್ಕಾಯಗಳಿಂದ ಹಿಡಿದ ನೇಮವನ್ನು ಸಾಂಗಗೊಳಿಸಿ, ಎಂದು ಬಸವೇಶ್ವರರು ಹೇಳಿದರು. ಆ ಮಹಾನುಭಾವರು ಜಾತ್ಯ ಹಂಕಾರವನ್ನು ಸ್ವತಃ ತ್ಯಜಿಸಿದ್ದರು. ಕಾರ್ಯತಃ ಶ್ವಪಚರನ್ನು ಉತ್ತಮರನ್ನಾಗಿ ಮಾಡಿದರು. ಆಚಾರದಿಂದ ಜಾತಿನಿರ್ಣಯವಾಗಬೇಕೆಂದು ತೀರ್ಮಾನಿಸಿದರು. ಜಾತಿಯೊಂದೇ ಆಗಿರುವಾಗ ಸಮಾನವಾದ ಹಕ್ಕುಗಳಿರಬೇಕೆಂದು ಪ್ರಕಟಿಸಿದರು. ಇದು ಐಕಮತ್ಯದ ಜೀವಾಳ. ಆದರೆ ಈ ಆಚರಣೆಗಳು ಬಹು ಜನರಿಗೆ ಸರಿಯಾಗಿ ತೋರಲಿಲ್ಲ. ಪೂರ್ವಸಂಪ್ರದಾಯದವರಿಂದ ಬಸವೇಶ್ವರರಿಗೆ ಬಹಿಷ್ಕಾರವೇ ಆಯಿತು. ಸನಾತನವಾದ ವೇದೋಕ್ತವಾದ ವೀರಶೈವವನ್ನು ಸಂಕರದಿಂದ ಹೊಲಸುಮಾಡಿದ ರೆಂದು ಪಂಚಾಚಾರ್ಯರ ದೋಷಾರೋಪಣೆಯು ಅಂದಿಗೂ ಆಯಿತು; ಇಂದಿಗೂ ಇದೆ. ಆದರೆ ಆತ್ಮಸಾಕ್ಷಿಗೆ ವಿರೋಧವಾಗಿಯೂ ಸತ್ಯಮಾರ್ಗಕ್ಕೆ ತಪ್ಪಿಯೂ ಬಸವೇಶ್ವರರು ನಡೆಯುವರಾಗಲಿಲ್ಲ. ಪ್ರಭುವಾದ ಬಿಜ್ಜಳನು ಪ್ರತಿಭಟಿಸಿ ನಿಂತನು. ಹರಳಯ್ಯ ಮಧುವಯ್ಯಗಳು ಶೂಲಕ್ಕೇರಿಸಲ್ಪಟ್ಟರು. ಶರಣರು ಮುಳಿದರು. ಬಿಜ್ಜಳನ ಪ್ರಾಣವೂ ಹೋಯಿತು. ಬಸವೇಶ್ವರರು ಈ ಜಾತಿಭೇದನಿರಾಕರಣವನ್ನು ಮಾಡದೇ ಹೋಗಲಿಲ್ಲ. ಸಮಾಜವೆಲ್ಲ ಅಲ್ಲಕಲ್ಲೋಲವಾಯಿತು. ಧರ್ಮವು ಲುಪ್ತವಾಯಿತೆಂದು ಪ್ರಳಯಕಾರಕವಾತಾವರಣವೆದ್ದಿತು. ಜನಗಳು ಗುಡಿಕಟ್ಟಿದರು. ಆದರೇನು!

೧. "ಆರು ಮುನಿದು ಎಮ್ಮನೇನುಮಾಡುವರು? ಊರನುಬಿದು ಎಮ್ಮನೆಂತುಮಾಡುವರು? ನಮ್ಮ ಕುನ್ನಿಗೆ ಕೂಸ ಕೊಡಬೇಡ. ನಮ್ಮ ಸೊಣಗಂಗೆ ತಳಿಗೆಯಲ್ಲಿಕ್ಕಬೇಕ. ಆನೆಯ ಮೇಲೆ ಹೋಹವನಶ್ವಾನ ಮುಟ್ಟಬಲ್ಲುದೆ? ಕೂಡಲಸಂಗಮದೇವರುಳ್ಳನ್ನಕ್ಕರ ನಮಗೇನಯ್ಯ?"

ಲಿಂಗವಂತರಾಗಿ ವೀರಶೈವದೀಕ್ಷೆಯನ್ನು ತಳೆದು ಸದಾಚಾರ ನಿರತರಾದವ ರೆಲ್ಲರೂ ಈಶ್ವರದೃಷ್ಟಿಯಲ್ಲಿ ಒಂದೇ ಎಂಬ ಪಂಥವನ್ನು ಬಸವೇಶ್ವರರು ಸಾಧಿಸದೇ ಹೋಗಲಿಲ್ಲ. ಜನ್ಮವನ್ನು ನಂಬಿಕೊಂಡು ಇಲ್ಲದ ಭೇದಭಾವಗಳನ್ನು ಹೂಡಿ ನರಕಕ್ಕೆ ಇಳಿಯುವವರು ಇಳಿಯಲಿ. ನಮ್ಮ ಪ್ರಶ್ನೆಯೊಂದೇ—ಕೂಡಲಸಂಗನು ಯಾವ

೧. ಪುಟ ೧೧೦ ಸಂ, ೧೫;

ಜಾತಿ? ಅವನನ್ನು ನಂಬಿದ ಶರಣರು ಯಾವ ಜಾತಿ? ಎಂದು ಬಸವೇಶ್ವರರು ಹೇಳುವುದನ್ನು ಬಿಡಲಿಲ್ಲ. ಸಮಾಜನಿಯಮಗಳು ಈಗಿನ ಕಾಲಕ್ಕಿಂತ ನೂರುಮಡಿ ಬಿಗಿಯಾಗಿದ್ದಾಗ, ಸಮಾಜನಿಯಮಗಳು ಮತಕಟ್ಟಳೆಗಳ ಬಲೆಯಲ್ಲಿ ಸಿಕ್ಕಿಬಿದ್ದಿದ್ದಾಗ, ಜಾತಿಭ್ರಷ್ಟರೂ ಮತಭ್ರಷ್ಟರೂ ಆಗುವುದಕ್ಕೆ ಜನಗಳು ಸಾವಿರಪಾಲು ಹೆಚ್ಚು ಹೆದರಿ ಸಾಯುತ್ತಿದ್ದಾಗ ಬಸವೇಶ್ವರರು ಮುಂದೆಬಂದು ಪತಿತೋದ್ಧಾರವನ್ನು ಮಾಡಿ ಸಮಾನವಾದ ಹಕ್ಕುಬಾಧ್ಯತೆಗಳನ್ನು ಕಲ್ಪಿಸಿಕೊಟ್ಟರು.

೧. "ನಾಳೆ ಬಪ್ಪುದು ನಮಗಿಂದೇ ಬರಲಿ. ಇಂದು ಬಪ್ಪುದು ನಮಗೀಗಲೇ ಬರಲಿ. ಇದಕಾರಂಜುವರು? ಇದಕಾರಳುಕುವರು? 'ಜಾತಸ್ಯ ಮರಣಂ ಧ್ರುವಂ' ಎಂಬುದಾಗಿ ನಮ್ಮ ಕೂಡಲಸಂಗಮದೇವ ಬರೆದ ಬರೆಹವ ತಪ್ಪಿಸುವಡೆ ಹರಿ ಬ್ರಹ್ಮಾದಿಗಳವಲ್ಲ"

೨. "ಆಯುಷ್ಯ ತೀರಿದಲ್ಲದೆ ಮರಣವಿಲ್ಲ. ಭಾಗ್ಯ ತೀರಿದಲ್ಲದೆ ದಾರಿದ್ರ್ಯವಿಲ್ಲ. ಅಂಜಲೇತಕೋ ಲೋಕವಿಗರ್ಭಣೆಗೆ? ಅಳುಕಲೇತಕೋ ಕೂಡಲಸಂಗಮದೇವ"

ಎಂದು ಹೇಳಿದ ಬಸವೇಶ್ವರರ ಧೈರ್ಯಸ್ಥೈರ್ಯಗಳೂ, ಅವರ ಮನೋಭಾವವೂ ಎಂತಹುದೆಂಬುದು ಎಲ್ಲರಿಗೂ ವ್ಯಕ್ತವೇ ಆಗುತ್ತದೆ. ಈ ಮನೋಧರ್ಮದ ಬಸವೇಶ್ವರರು ಮತೋದ್ಧಾರಕರಾಗಿ ಮುಂದೆ ನಿಂತು ಕೆಲಸ ಕಾರ್ಯಗಳನ್ನು ಕೈಗೊಂಡಾಗ ಅದರ ಫಲವನ್ನು ನಾವು ಹೇಳಬೇಕೇ? ಬಸವೇಶ್ವರರು ಮಾಡಿದ ಏರ್ಪಾಡಿನಿಂದ ಪೂರ್ವ ಸಂಪ್ರದಾಯದವರು ಹೆಸರು ಹೇಳಿಸಿಕೊಳ್ಳುವುದೇ ಕಷ್ಟವಾಯಿತು. ಇಷ್ಟಾದರೂ ಸಮಾಜ ಸ್ಥಿತಿಯನ್ನು ಈಗ ನೋಡಿದರೆ ಹರಿಹರ ಬ್ರಹ್ಮಾದಿಗಳಿಗಿಂತ ಸಮಾಜವೇ ಪ್ರಬಲವೆಂದು ನಮಗೆ ಕಾಣುತ್ತದೆ. ಭಗವಂತನು ಬುದ್ಧದೇವನಾಗಿ ಅವತರಿಸಬಹುದು, ಆದಿಶೇಷನು ರಾಮಾನುಜರಾಗಿ ಹುಟ್ಟಬಹುದು, ನಂದೀಶ್ವರನು ಬಸವೇಶ್ವರರಾಗಿ ಜನ್ಮವೆತ್ತಬಹುದು; ನಮ್ಮ ಸಮಾಜವು ಹಿಮಾಚಲದಂತೆ ಸ್ವಲ್ಪ ಕರಗಬಹುದಾದರೂ ಚಲಿಸುವುದಿಲ್ಲ. ಬಸವೇಶ್ವರರ ಅನುಯಾಯಿಗಳೆಂದು ಹೇಳಿಕೊಳ್ಳುತ್ತಿರುವ ವೀರಶೈವರೇ ಭೋಜನಾದಿಗಳಲ್ಲಿಯೂ ಕೊಳುಕೊಡೆಯಲ್ಲಿಯೂ ವಿಮರ್ಶಬುದ್ಧಿಯನ್ನು ಪ್ರಬಲವಾಗಿಯೇ ತೋರಿಸುತ್ತಿದಾರೆ. ಮಾಡುವುದೇನು? ಸಮಾಜ ಬಲವೇ ಬಲವಲ್ಲದೆ ಧರ್ಮಬಲವೆಲ್ಲಿಯದು!

## (೫)

ಬಸವೇಶ್ವರರು ಜಂಗಮರ ವಿಚಾರದಲ್ಲಿಯೂ ತಮ್ಮ ಮತಕ್ಕೆ ಸೇರಿಕೊಂಡವರ ವಿಚಾರದಲ್ಲಿಯೂ ಯಾವರೀತಿ ವ್ಯವಸ್ಥೆಮಾಡಬೇಕಾಯಿತೆಂಬುದನ್ನು ನಾವು ನೋಡಿದ್ದೇವೆ. ಪಂಗಡದಲ್ಲಿ ಅಡಗಿದ್ದ ಕುಂದುಕೊರತೆಗಳನ್ನು ನಿವಾರಣೆಮಾಡಿ ಜನಗಳಿಗೆ

೧. ಪುಟ ೧೦೧ ಸಂ. ೬; ೨. ಪುಟ ೧೦೦ ಸಂ. ೧೫೧.

ಹೊಸದಾದ ಭಕ್ತಿಶ್ರದ್ಧೆಗಳನ್ನು ತೋರಿಸಿಕೊಡುತ್ತ ವೀರಶೈವಮತವನ್ನು ಬಲಪಡಿಸುತ್ತಿದ್ದರೆ ಹೊರಗಿಂದ ಮತಾಂತರಗಳ ಆಕ್ಷೇಪಣೆಗಳೂ ಅಪಹಾಸ್ಯಗಳೂ ಈ ಕಟ್ಟಡವನ್ನು ಸಡಿಲಿಸುವುದಕ್ಕೆ ಹವಣಿಸುತ್ತಿದ್ದವು. ಬಸವೇಶ್ವರರು ಜಾತಿಸೂತಕ ಪ್ರೇತಸೂತಕಗಳನ್ನು ತೆಗೆದುಹಾಕಿದ್ದರು. ಭವಿಯ ಸಂಪರ್ಕ ಸಂಭಾಷಣೆಗಳನ್ನು ನಿಷೇಧಿಸಿದ್ದರು. ಆಚಾರವ್ಯವಹಾರಗಳಲ್ಲಿ ಶ್ರದ್ಧೆಯನ್ನು ತುಂಬಿಸಿದ್ದರು. ಆದುದರಿಂದ ಲಿಂಗವಂತಜನಗಳು ಹೊಸಹುರುಡಿನಿಂದ ಕೆಲಸಕಾರ್ಯಗಳನ್ನು ಮಾಡತೊಡಗಿದರು. ಒಂದುಕಡೆ ಇವರ ಆಚಾರಮಡಿಗಳನ್ನೂ ಇನ್ನೊಂದುಕಡೆ ಇವರ ಜಾತಿಸಂಕರವನ್ನೂ ನೋಡುತ್ತಿದ್ದ ಪರಕೀಯರು " ಎಲ್ಲ ಅನಾಚಾರ ಸೇರಿ ಒಂದು ಶಿವಾಚಾರ " ಎಂದು ಹಾಸ್ಯಮಾಡುತ್ತ ಕೋಲಾಹಲವನ್ನೆಬ್ಬಿಸಿರಬಹುದು.

" ಬಡವರ ತಿರುಕರ ನೀಚಕುಲದವರ | ತಡೆಯದೆ ಯಾಕ್ಷಣ ಕರಸಿ |
ಒಡವೆಗಳನು ಕೊಟ್ಟು ಕೊರಳಿಗೆ ಲಿಂಗವ | ಜಡಜನಗೆಲ್ಲಾ ಕಟ್ಟಿಸಿದ ||
" ಕುಂಟರು ಕುರುಡರು ಗಂಟೆಯ ಚೋರರು | ಕೊಂಟರು ಕೊನ್ನರು ತುಡುಗರು |
ಗಂಟುಕಳ್ಳರು ಕೂಡಿ ಹಣವಿನಾಸಗೆ ತಮ್ಮ | ಕಂಠದಿ ಲಿಂಗವ ಕಟ್ಟಿದರು ||
" ಸತ್ತಹೆಣನ ಮುಟ್ಟಿ ಮನೆಗಳೊಳಗೆ ಹೂಳಿ | ಮತ್ತದರ ಹಡಕೆಯನ್ನು |
ನಿತ್ಯದಿ ಕುಡಿದು ಹೇಸದೆ ಕೂಳಿ ತಿಂಬುದು | ಎತ್ತಲಿಪ್ಪೋದು ಹೊಲಗೇರಿ ||

ಎಂದು * ಧರಣೇಂದ್ರನು ಹೇಳಿರುವಂತೆ ಜನಗಳು ಆಡಿಕೊಂಡಿರಬಹುದು. ಇವುಗಳನ್ನು ತಪ್ಪಿಸುವುದು ಬಸವೇಶ್ವರರಿಗೆ ಕಷ್ಟವಾಗಿದ್ದಿತು. ಮೊದಲೇ ಪೂರ್ವಸಂಪ್ರದಾಯದವರು ಬಸವೇಶ್ವರರಿಗೆ ವಿರೋಧಿಗಳಾಗಿ ನಿಂತಿದ್ದಾಗ, ಮೊದಲೇ ಜನಸಾಮಾನ್ಯದಲ್ಲಿ ಅನಿಶ್ಚಯವೂ ಅಧೈರ್ಯವೂ ತಲೆದೋರಿದ್ದಾಗ, ಬ್ರಾಹ್ಮಣಾದಿಗಳ ಕುಹಕವಾಕ್ಯಗಳೂ ಬಂದು ತಾಗಿದರೆ ಅವುಗಳ ಪರಿಣಾಮವು ಬಸವೇಶ್ವರರ ಸಂಕಲ್ಪಕ್ಕೆ ಹಾನಿಯನ್ನೇ ತರುವಂತಾಯಿತು ; ಅವರ ಮತಪ್ರಾಚುರ್ಯಕಾರ್ಯಕ್ಕೆ ಭಂಗವೇ ಬರುವಂತಾಯಿತು. ಈ ಸಂದರ್ಭದಲ್ಲಿ ಬಸವೇಶ್ವರರ ಕಷ್ಟವು ಇನ್ನೂ ಇತರ ಕಾರಣಗಳಿಂದ ಶತಾಧಿಕವಾಯಿತು. ಬಿಜ್ಜಳನ ಬಳಿಯಲ್ಲಿ ಮುಖ್ಯ ಮಂತ್ರಿಗಳಾಗಿದ್ದುದರಿಂದಲೂ, ಬಿಜ್ಜಳನು ಜೈನನಾಗಿದ್ದುದರಿಂದಲೂ, ಬಿಜ್ಜಳನ ಸುತ್ತುಮುತ್ತಲೂ ಬ್ರಾಹ್ಮಣ ಮತ್ತು ಜೈನ ಸಾಮಾಜಿಕರು ಪ್ರಬಲರಾಗಿದ್ದುದರಿಂದಲೂ ರಾಜಕೀಯ ಶೃಂಖಲದಿಂದ ಬಂಧಿತರಾಗಿ ಬಸವೇಶ್ವರರಿಗೆ ಸ್ವಾತಂತ್ರ್ಯವು ಕಡಿಮೆಯಾಗಿದ್ದಿತು. ಆದರೆ ಧರ್ಮವಿಚಾರದಲ್ಲಿಯೂ ಸತ್ಯದ ವಿಚಾರದಲ್ಲಿಯೂ ಮನಸ್ಸಾಕ್ಷಿಗೆ ವಿರೋಧವಾಗಿ ನಡೆಯುವುದಕ್ಕಾದೀತೇ? ಈ ಧರ್ಮಸಂಕಟದಲ್ಲಿ ಸಿಕ್ಕಿದ್ದವರಾದರೂ ಬಸವೇಶ್ವರರು ಧೃತಿಗೆಡ

* ಬಿಜ್ಜಳರಾಯ ಚರಿತ್ರೆ.

ಲಿಲ್ಲ. ಧರ್ಮಸಾಮ್ರಾಜ್ಯಕ್ಕೆ ಕೂಡಲಸಂಗಮದೇವನೇ ಪ್ರಭು. ಆ ಪ್ರಭುವಿನ ಮುಖ್ಯ ಮಂತ್ರಿಯಾಗಿ ಧರ್ಮಸ್ಥಾಪನೆಯನ್ನು ಮಾಡುವ ಕಾರ್ಯಭಾರವು ತಮ್ಮದೆಂದು ತೀರ್ಮಾನಿಸಿದರು. ಬಸವೇಶ್ವರರು ಬೌದ್ಧಚಾರ್ವಾಕಾದಿಮತಗಳನ್ನು ವಾದದಿಂದ ಖಂಡನೆಮಾಡಿ ಭರತಖಂಡವನ್ನೆಲ್ಲ ಸುತ್ತಿ ಕೀರ್ತಿಯನ್ನು ಸಂಪಾದಿಸದಿದ್ದರೂ ಚಿಂತೆಯಿಲ್ಲ. ವೇದಗಳು ಪ್ರಮಾಣವೆಂದೂ ಅಪೌರುಷೇಯಗಳೆಂದೂ ಹೊಡೆದಾಡಿ ಅವುಗಳಿಗೆ ಆದಿಯಲ್ಲಿದ್ದ ಪ್ರಾಶಸ್ತ್ಯವನ್ನು ತರಲು ಯತ್ನಿಸದಿದ್ದರೂ ಚಿಂತೆಯಿಲ್ಲ. ಬದರಿಕಾಶ್ರಮಕ್ಕೆ ಹೋಗದೆ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆಯದೆ ಆಚಾರ್ಯವರ್ಗಕ್ಕೆ ಸೇರದಿದ್ದರೂ ಚಿಂತೆಯಿಲ್ಲ. ಬಸವೇಶ್ವರರ ಸ್ಥಾನಮಹತ್ವವು ಅವರ ಗುಣಗೌರವದಿಂದಲೇ ಕಂಡುಬರುತ್ತದೆ. ತಮ್ಮಲ್ಲಿಯೇ ಸಾವಿರ ದೋಷಗಳನ್ನಿಟ್ಟುಕೊಂಡು ಬ್ರಾಹ್ಮಣಾದಿಗಳು ವೃಥಾ ವೀರಶೈವವನ್ನು ಜರೆಯುವರಲ್ಲಾ ಎಂದು ಬಸವೇಶ್ವರರಿಗೆ ಒಂದುಕಡೆ ಪಶ್ಚಾತ್ತಾಪ; ನಿಜವಾದ ಭಕ್ತಿಯನ್ನು ತಳೆಯದೆ ಬರಿಯ ವೇಷಭಾಷಣೆಗಳಿಂದ ಆಚಾರವನ್ನು ನಟಿಸಿ ಮುಕ್ತಿಬಾಹಿರರಾಗುವರಲ್ಲಾ--ಎಂದು ಕನಿಕರ.

೧. "ಮಿಾಂಬುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿರ್ದು, ಮೂಗಹಿಡಿದು ಧ್ಯಾನವ ಮಾಡುವರಯ್ಯ. ಬಿಟ್ಟಮುಡಿವೆರಸಿ, ಬಾಯ ಮಿಡುಕಿಸುತ್ತ ಕಣ್ಣಮುಚ್ಚಿ ಬೆರಳನೆಣಿಸುವರಯ್ಯ. ನಿಮ್ಮ (ತಮ್ಮ ?) ಕೈಯಲ್ಲಿ ಕಟ್ಟಿರ್ದ ದರ್ಭೆಯಹುಲ್ಲು ಕೂಡಲಸಂಗಯ್ಯನರಿಯದೆ, ಮೊರೆ ಇಡುವಂತೆ"

೨. ನೀರ ಕಂಡಲ್ಲಿ ಮುಳುಗುವರಯ್ಯ. ಮರನ ಕಂಡಲ್ಲಿ ಸುತ್ತುವರಯ್ಯ. ಬತ್ತುವ ಜಲವ ಒಣಗುವ ಮರನ ನೆಚ್ಚಿದವರು ನಿಮ್ಮನೆತ್ತಬಲ್ಲರು ಕೂಡಲಸಂಗಮದೇವ ?"

೩. ವೇದವನೋದಿದ ವಿಪ್ರರು ಹೊನಲಲ್ಲಿ ಹೋದ ಕೇಡ ನೋಡಿರೇ 'ಭರ್ಗೋ ದೇವಸ್ಯ ಧೀಮಹಿ' ಎಂಬರು. ಒಬ್ಬರಿಗಾದರೂ ವಿಚಾರವಿಲ್ಲ--ನೋಡಿರೇ, ಕೂಡಲಸಂಗಮದೇವಾ"

ಎಂದು ಬ್ರಾಹ್ಮಣಕರ್ಮವನ್ನು ಕೂಡಲಸಂಗನಲ್ಲಿ ಬಿನ್ನೈಸುತ್ತಿದ್ದರು. ಭಗವಂತನ ಮಹಿಮೆಯು ಗೋಚರವಾಗದೆ ಕೃತ್ರಿಮಾಚಾರಗಳಲ್ಲಿ ಕಾಲವನ್ನು ಕಳೆಯುವುದು ಬಸವೇಶ್ವರರಿಗೆ ಸರಿಬೀಳುತ್ತಿರಲಿಲ್ಲ. ಒಂದೊಂದುವೇಳೆ ವಿಡಂಬನೆಮಾಡಿ ಇವುಗಳ ಪೊಳ್ಳುತನವನ್ನು ತೋರಿಸಿಕೊಡುತ್ತಿದ್ದರು.

೪. "ನಿಮ್ಮನರಿಯದ ಕಾರಣ ಕೈಯಲ್ಲಿ ಹುಲ್ಲು, ನಿಮಗೆರಗದ ಕಾರಣ ಕೊರಳಲ್ಲಿ ನೇಣು, ಹಿಂಡಲೇತಕೋ, ತೊಳೆಯಲೇತಕೋ ಮುಳುಗಿ ಮುಳುಗಿ ಮೂಗಹಿಡಿಯಲೇಕೋ ? ಕೂಡಲಸಂಗನ ಶರಣರಲ್ಲಿ ಡೋಹರಕಕ್ಕಯ್ಯನಾವ ತೊರೆಯಲ್ಲಿ ಮಿಂದ ?"

---

೧. ಪುಟ ೮೩ ಸಂ. ೪೭; ೨. ಪುಟ ೮೪ ಸಂ. ೪೯; ೩. ಪುಟ ೮೪ ಸಂ. ೫೪, ೪. ಪುಟ ೮೪ ಸಂ. ೫೬;

೫. ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲ್ಲಿ ಕಿಚ್ಚೆದ್ದು ಸುಡುವಾಗ, ಬಚ್ಚಲ ನೀರ ಬೀದಿಯ ಧೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯ. ಕೂಡಲಸಂಗಮದೇವ ವಂದನೆಯ ಮರೆದು ನಿಂದಿಸುತಲಿರ್ದರಯ್ಯಾ."

ಬ್ರಾಹ್ಮಣಧರ್ಮವನ್ನೂ, ಇವರು ನಡೆಯಿಸುತ್ತಿದ್ದ ಯಜ್ಞಯಾಗಾದಿಗಳನ್ನೂ ನೋಡಿ ವೀರಶೈವವು ಉತ್ಕೃಷ್ಟವಾದುದೆಂದು ತಿಳಿಯಹೇಳಿದರು.

೧. "ದಯವಿಲ್ಲದ ಧರ್ಮವಾವುದಯ್ಯ? ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ. ದಯವೇ ಧರ್ಮದ ಮೂಲವಯ್ಯ! ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ.

೨. ಕೊಲ್ಲುವನೇ ಮಾದಿಗನು, ಹೊಲಸು ತಿಂಬುವನೇ ಹೊಲೆಯ. ಕುಲವೇನೋ, ಆವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೆಲ್ಲ ಕುಲಜರು"

ಇನ್ನು ಇದಕ್ಕಿಂತಲೂ ದೃಷ್ಟಾಂತವೇನು ಬೇಕು ಎಂದು ಬಸವೇಶ್ವರರು ಕೇಳಿದರು. ಬಾಯಲ್ಲಿ ಅಹಿಂಸಾವ್ರತದ ಬೋಧನೆಯನ್ನು ಮಾಡಿ ಕಾರ್ಯತಃ ಹೋತವನ್ನು ಕೊಂದು ಪ್ರಾಣಿಹಿಂಸೆಮಾಡುತ್ತಿದ್ದರೆ, ಇದೆಲ್ಲಿಯ ದಯೆ? ಇದೆಲ್ಲಿಯ ಧರ್ಮ? ನಿಮಗೂ ಹೊಲೆಮಾದಿಗರಿಗೂ ಏನು ವ್ಯತ್ಯಾಸ? ನಮ್ಮನ್ನು ಜಾತಿಹೀನರೆಂದು ಕರೆಯುವಿರಿ. "ಹೊಲೆಯೊಳಗೆ ಹುಟ್ಟಿ ಕುಲವನರಸುವೆ" ಇದೇನು ವಿರೋಧ! ಮಾತಂಗಿಯ ಮಗನಲ್ಲವೇ ನೀನು? "ಸತ್ತುದನೆಳೆವನೆತ್ತಣ ಹೊಲೆಯ? ಹೋತ ತಂದು ನೀವು ಕೊಲ್ಲುವಿರಿ" ಅದೇನು ನಿಮ್ಮ ಶಾಸ್ತ್ರ! "ಶಾಸ್ತ್ರವೆಂಬುದು ಹೋತಿಂಗೆ ಮಾರಿ, ವೇದವೆಂಬುದು ನಿಮಗೆ ತಿಳಿಯದು" ಸುಮ್ಮನೆ ಏಕೆ ವಿತಂಡ ವಾದಮಾಡುವಿರಿ? ಆ ಹೋತನೊಂದು ಸಾಲದೆ ನಿಮ್ಮ ಧರ್ಮದ ಮೂಲವನ್ನು ಬಹಿರಂಗಪಡಿಸುವುದಕ್ಕೆ? ಯಾಗದ ನೆಪದಲ್ಲಿ ಅಡಗು ತಿನ್ನುವುದು ಸಾಲದೆ ನಿಮ್ಮ ಜಾತಿನಿರ್ಣಯಮಾಡುವುದಕ್ಕೆ?—ಎಂದು ಹೇಳುತ್ತಿದ್ದಹಾಗೆಯೇ ಕಣ್ಣೀರುತುಂಬಿದ ಹೋತವು ಬಸವೇಶ್ವರರ ದೃಷ್ಟಿಪಥದಲ್ಲಿ ಬಂದಿದ್ದಿರಬೇಕು.

೧*. "ಮೂತಿನ ಮಾತಿಂಗೆ ನಿನ್ನ ಕೊಂದಿಹರೆಂದು, ಎಲೆಹೋತೇ ಅಳು ಕಂಡೆಯಾ. ವೇದವ ನೋದಿದವರ ಮುಂದೆ, ಅಳು ಕಂಡೆಯಾ, ಹೋತೇ. ಶಾಸ್ತ್ರವ ಕೇಳಿದವರ ಮುಂದೆ, ಅಳು ಕಂಡೆಯಾ, ಹೋತೇ. ನೀನತ್ತುದಕ್ಕೆ ತಕ್ಕದ್ದುಮಾಡುವ ಕೂಡಲಸಂಗಮದೇವರನವರ"

ಎಂದು ಹೋತನ ನಿಸ್ಸಹಾಯ ಸ್ಥಿತಿಯನ್ನು ವಿಲಪಿಸಿದ ಬಸವೇಶ್ವರರ ಮಾತುಗಳು ಬ್ರಾಹ್ಮಣರ ಕುಹಕವಾಕ್ಯಗಳಿಗೆಲ್ಲ ಸರಿಯಾದ ಉತ್ತರವಾದುವು.

---

೫. ಪುಟ ೮೪ ಸಂ. ೫೩;

೧. ಪುಟ ೩೬ ಸಂ. ೧೨೬.

೧*. ಪುಟ ೮೩, ಸಂ ೪೩.

ಕಡೆಗೆ ಜಾತಿಯ ಮಾತನ್ನು ಬ್ರಾಹ್ಮಣರು ಎತ್ತದಿರುವಂತೆ ಋಷಿಮೂಲಗಳನ್ನು ಕೆದಕಿ ನೀವೆಲ್ಲರೂ ಶೂದ್ರ ಮಾದಿಗವಂಶಜರಲ್ಲವೇ, ನಮ್ಮನ್ನೇಕೆ ಅನ್ನುವಿರಿ? ಎಂದು ಕೇಳಿದರು. ಗುಣಹೀನನಾದ ಜಾತಿಬ್ರಾಹ್ಮಣನಿಗಿಂತ ಗುಣವಂತನಾದ ಜಾತಿ ಮಾದಿಗನು ಮೇಲೆಂದು ಹೇಳಿಬಿಟ್ಟರು. ಎಲ್ಲರಿಗೆ ಹುಟ್ಟು ಹೊಲೆಯಲ್ಲಿ ; ಆಚಾರದಿಂದಲೇ ಜಾತಿನಿರ್ಣಯವೆಂದು ತೀರ್ಮಾನಿಸಿದರು. ಇವುಗಳೆಲ್ಲರಿಂದ ಬ್ರಾಹ್ಮಣರು ಸೋತು ಓಡಿಹೋಗದಿದ್ದರೂ, ಬಸವೇಶ್ವರರು ಜಯಲಾಭವನ್ನು ಪಡೆದರು. ಬಸವೇಶ್ವರರ ಕಡೆಯವರು ಬ್ರಾಹ್ಮಣಾದಿಮತದವರನ್ನು ಶೂದ್ರಮಾದಿಗ ಗುಂಪೆಂದು ನೋಡಲಾರಂಭಿಸಿದರು. ಒಂದುವೇಳೆ ತಾವೆಲ್ಲರೂ ಜಾತಿಸಂಕರದಿಂದ ಕೀಳಾಗಿದ್ದರೆ ಬ್ರಾಹ್ಮಣಾದಿಗಳು ತಮ್ಮಂತೆಯೇ ಕೀಳೆಂದು ಭಾವಿಸತೊಡಗಿದರು. ಆಚಾರದ ದೆಸೆಯಿಂದ ವೀರಶೈವವು ಬ್ರಾಹ್ಮಣ ಮತಕ್ಕಿಂತ ಉತ್ಕೃಷ್ಟವೆಂದು ತಿಳಿದರು. ನೂತನವಾಗಿ ಸೇರಿಕೊಂಡವರಿಗೆ ವೀರಶೈವರಲ್ಲಿ ಅತೃಪ್ತಿಯುಂಟಾಗಲು ಎಳ್ಳಷ್ಟೂ ಅವಕಾಶವಾಗಲಿಲ್ಲ. ಈರೀತಿಯಲ್ಲಿ ತನ್ನ ಅನುಯಾಯಿಗಳಿಗೆ ಸ್ವಮತಾಧಿಕ್ಯದಲ್ಲಿ ನಂಬಿಕೆಯೂ, ಪರಮತಹೀನತೆಯಲ್ಲಿ ನಿಶ್ಚಯವೂ ಬಂದಾಗ "ವರ್ಣಾನಾಂ ಬ್ರಾಹ್ಮಣೋ ಗುರುಃ ಎಂಬುದು ಹುಸಿ, ವರ್ಣಾನಾಂ ಗುರು ನಮ್ಮ ಕೂಡಲಸಂಗನ ಶರಣಮಹಾಜನರು" ಎಂದು ಸಾರಿ, ವೀರಶೈವರ ಜಯಭೇರಿಯನ್ನು ಧ್ವನಿಗೈಸಿದರು.

---

ಉಷಾ.—ಚಿತ್ರಾ, ನೀನು ಕನಸು ಕನಸು ಎಂದು ಹಾಡಿದೆಯಲ್ಲಾ ನಿನ್ನ ಕನಸು ಇನ್ನೆಂತಹ ಕನಸು.

ಚಿತ್ರ.—ಎಲ್ಲರ ಕನಸಿನಂತೆಯೇ ನನ್ನದೂ ಒಂದು ಕನಸು.

ಉಷಾ.—ಆ ಕನಸಿನಲ್ಲಿ ಏನು ಕಂಡೆ?

ಚಿತ್ರ.—ಕನಸಿನಲ್ಲಿ ಕಾಣುವುದು ಕನಸನ್ನೇ.

ಉಷಾ.—ಅಂತ ಕನಸನ್ನು ಕಂಡವರಿಗೆ ಇನ್ನು ನಿಜ ಹೇಗೆ ಬೇಕಾದೀತು.

ಲೀಲಾ.—ನನಗೊಂದು ತಮಾಷೆ ಸಿಕ್ಕಿದೆ. ಯಾರಿಗೆ ಬೇಕು?

ಉಷಾ.—ಏನು ತಮಾಷೆ?

ಲೀಲಾ.—ಅದನ್ನು ನನಗೆ ನನಗೇ ಕೊಡುವುದಾದರೆ ತೋರಿಸುತ್ತೇನೆ.

ಚಿತ್ರ.—(ತನ್ನ ಮಡಲನ್ನು ಮುಟ್ಟಿನೋಡಿಕೊಂಡು) ಅಯ್ಯೋ, ಇನ್ನೇನು ಗತಿ! (ಎಂದು) ಕಳ್ಳ ಹುಡುಗಿ, ಸಿಕ್ಕಿದ್ದನ್ನೆಲ್ಲಾ ಕದಿಯುತ್ತೀಯಾ? ಅದನ್ನು ಇಲ್ಲಿ ಕೊಡು.

ಲೀಲಾ.—ಅದು ಯಾರ ಚಿತ್ರ ಹೇಳಿದರೆ ಕೊಡುತ್ತೇನೆ.

ಚಿತ್ರ.—ನಿನ್ನ ಗಂಡನದು.

ಲೀಲಾ.—ನನ್ನ ಗಂಡನ ಚಿತ್ರವನ್ನು ನೀನೇಕೆ ಬರೆಯುತ್ತೀಯೆ? ನಿನ್ನ ಗಂಡನದಿರಬೇಕು.

ಚಿತ್ರ.—ಹಾಗೆಯೇ ಆಗಲಿ, ಕೊಡು.

ಉಷಾ.—ಎಲ್ಲಿ ಅದೆಂತ ಚಿತ್ರ ನೋಡೋಣ.

ಲೀಲಾ.—ಇಕೊ (ಎಂದು ತೋರುವಳು.)

ಉಷಾ.—ಅಯ್ಯೋ (ಎಂದು ಮೂರ್ಛೆಹೋಗುವಳು.)

ಚಿತ್ರ.—ಅಯ್ಯೋ, ಏನು ಮಾಡಿದೆ! ಲೀಲಾ ಹೋಗು, ಮಾಲಿನಿಯನ್ನು ಕರೆತಾ, ಓಡು. (ಲೀಲಾವತಿ ಹೋಗುವಳು. ಚಿತ್ರೆಯು ಉಷೆಗೆ ಗಾಳಿ ಹಾಕುವಳು.) ಇದೇನು, ಇವಳಲ್ಲಿ ಗರ್ಭದ ಚಿಹ್ನೆಗಳಿವೆ?

ಉಷಾ.—(ಎಚ್ಚೆತ್ತು) ಚಿತ್ರಾ, ಅದು ಯಾರು?

ಚಿತ್ರ.—ಯಾರ ಚಿತ್ರವಾದರೂ ನಿನಗೇಕೆ ಅಷ್ಟು ಕಷ್ಟವಾಗಬೇಕು.

ಉಷಾ.—ಹೇಳುತ್ತೇನೆ. ಮೊದಲು ಅದು ಯಾರ ಚಿತ್ರ ಎಂದು ಹೇಳು.

ಚಿತ್ರ.—ಕನಸಿನಲ್ಲಿ ಕಂಡ ಒಬ್ಬನ ಚಿತ್ರ.

ಉಷಾ.—ಕನಸಿನಲ್ಲಿ ಕಂಡನೆ, ಈಗಲೂ ಕಾಣುತ್ತಿರುವನೇನು?

ಚಿತ್ರ.—ಕಾಣುತ್ತಿದ್ದರೆ ಈ ಚಿತ್ರವನ್ನು ಬರೆಯಬೇಕೆ? ಒಮ್ಮೆ ಕಂಡು ಮರೆಯಾದನು. ಚಿತ್ರವನ್ನು ಬರೆದು ಅವನನ್ನು ನೆನೆಯುತ್ತಿದೇನೆ.

ಉಷಾ.—ಕನಸಿನಲ್ಲಿ ಕಂಡವನು ನಿಜವಾದ ಮನುಷ್ಯನೆ?

ಚಿತ್ರ.—ಕಾಣುವುದೆಲ್ಲ ನಿಜ. ಅಂದು ನಿಜವಾಗಿದ್ದ. ಈಗ ನಿಜವಾಗಿ ಮಾಡಿಕೊಳ್ಳಲು ನೋಡುತ್ತಿದೇನೆ.

ಉಷಾ.—ಅವನು ಯಾರು?

ಚಿತ್ರ.—ನನ್ನ ಕನಸಿನಲ್ಲಿ ಒಮ್ಮೆ ಕಂಡು ನನ್ನ ಕೈಬಿಟ್ಟ ನನ್ನ ಪ್ರಿಯನು. ಅವನು ಇನ್ನು ಯಾರೆಂಬುದು ನನಗೆ ತಿಳಿಯದು. ನೀನೇಕೆ ಭಯಪಟ್ಟೆ?

ಉಷಾ.—ನೀನು ನನ್ನ ಗುಟ್ಟನ್ನು ತಿಳಿದೆಯೋ ಎಂದು ಭಯಪಟ್ಟೆ. ತಿಳಿದರೆ ತಾನೆ ಏನು? ನಿನಗಲ್ಲದೆ ಯಾರಿಗೆ ಹೇಳುವುದು. ಆದರೆ ಒಬ್ಬರ ಕನಸಿನಲ್ಲಿ ಕಂಡ ಮನುಷ್ಯನೇ ಇನ್ನೊಬ್ಬರ ಕನಸಿನಲ್ಲಿ ಕಾಣುವುದುಂಟೆ?

ಚಿತ್ರ.—ಇವನು ನಿನ್ನ ಕನಸಿನಲ್ಲಿ ಬಂದನೆ?

ಉಷಾ.—ಚಿತ್ರಾ, ಈಗ ನಾಲ್ಕು ತಿಂಗಳ ಹಿಂದೆ ಒಂದು ರಾತ್ರಿ ನನ್ನ ಕನಸಿನಲ್ಲಿ ಬಂದನು. ನಾನು ಅವನಿಗೆ ಮನಸ್ಸನ್ನು ಕೊಟ್ಟೆ. ನಿದ್ರೆಯಿಂದ ಎಚ್ಚೆತ್ತು ಅಯ್ಯೋ ಎಚ್ಚೆತ್ತೆನೇ ಎಂದು ದುಃಖಪಟ್ಟೆ. ಯಾವ ಪುಣ್ಯಮಾಡಿ ಆ ಕನಸನ್ನು ಕಂಡೆನೋ ಎಂದುಕೊಂಡೆ. ಮಾರನೆಯ ರಾತ್ರಿ ಬಂದನು. ನೀನು ಒಂದು ದಿನ ಇದೇನು ಇಷ್ಟು ಸಂತೋಷವಾಗಿದೀಯೆ ಎಂದು ನಾಲ್ಕಾರು ಸಲ ಕೇಳಿದೆಯಲ್ಲಾ, ಜ್ಞಾಪಕವಿದೆಯೆ? ಅದು ಮಾರನೆಯ ದಿನ. ಎರಡು ದಿನ ಬಂದವನು ಮಾರನೆಯದಿನವೂ ಬರುವನೋ ಎಂದು ಮುಂದಾಗಿ ಮಲಗಿದೆ. ಬಂದನು. ಚಿತ್ರಾ, ನನ್ನನ್ನು ಕನಸಿನಲ್ಲೇ ಗಾಂಧರ್ವವಿವಾಹದಿಂದ ಸ್ವೀಕರಿಸಿದನು. ಒಂದೊಂದು ಸಲ ನೆನೆದುಕೊಂಡರೆ ಅದು ಬರಿಯ ಕನಸೇ ಎನ್ನುವಂತಿದೆ. ಆದರೆ ಅದು ಬರಿಯ ಕನಸಲ್ಲ. ಆಡಿದ ಮಾತು ನಡೆ ನುಡಿ ಎಲ್ಲ ಅಷ್ಟುಸ್ಪಷ್ಟವಾಗಿ ಕಾಣುವುದನ್ನು ಕನಸು ಎನ್ನುವುದು ಹೇಗೆ?

ಚಿತ್ರ.—ಕನಸಿನಲ್ಲಿ ಆಡಿದ ಮಾತು ಸ್ಪಷ್ಟವಾಗಿಯೇ ಕಾಣುವುದು. ಮನಸ್ಸಿನ ರೀತಿ ಹಾಗೆ.

ಉಷಾ.—ಪದ್ಯವನ್ನು ಹೇಳಿದರೆ? ನಾನು ಪದ್ಯವನ್ನು ಬರೆಯುವವಳಲ್ಲ.

ಚಿತ್ರ.—ಯಾವ ಪದ್ಯವನ್ನು ಹೇಳಿದನು.

ಉಷಾ.—ನನಗೆ ನಾಚಿಕೆಯಾಗುತ್ತದೆ; ಆದರೆ ನಿನಗೆ ಹೇಳಬಹುದು. ಅವನು ನನ್ನನ್ನು ಕುರಿತು,

ಶಶಿಗಾಶಿಪ ಪಸುಳೆಯುವೋಲ್
ಪ್ರಸನ್ನಮುಖಿ ನಿನ್ನನೆಳಸಿ ಚೇತನಗಳ್ ಬಾ!
ಧಿಸೆ ದೂರದಿಂದೆ ಬಂದೆಂ
ರಸಾಲಮಂಜರಿಯ ನರಸಿ ಬಹ ತುಂಬಿಯವೋಲ್ ॥

ಎಂದು ಹೇಳಿದನು. ನನಗೆ ನಾನೇ ಪದ್ಯವನ್ನು ಬರೆದುಕೊಂಡು ಹೇಳುವುದನ್ನು ನಾನು ಎಣಿಸಿಯೇ ಇರಲಿಲ್ಲ.

ಚಿತ್ರ.—ಅವನು ಎಲ್ಲಿಯ ರಾಜಕುಮಾರನಂತೆ?

ಉಷಾ.—ಅದೆಲ್ಲವನ್ನೂ ನನಗೆ ಹೇಳಿಲ್ಲ. ಅವನು ಈಗ ಹದಿನೈದು ದಿನದಿಂದ ಬಂದಿಲ್ಲ. ನೆನೆದು ಬೇಡಿದರೆ ಬರುವನು. ಆದರೆ ಬದುಕಿನಲ್ಲಿ ಮೂರುಸಲ ಮಾತ್ರ ಹಾಗೆ ಬರಮಾಡಬಹುದಂತೆ. ಆದ್ದರಿಂದ ವೃಥಾ ಬರಮಾಡುವುದು ಸರಿಯಲ್ಲ. ನನಗೆ ತಂದೆಯವರು ಮಯೂರನನ್ನು ಮದುವೆಯಾಗೆಂದರೆ ನಾನೇನು ಮಾಡಲಿ? ಏನು ಹೇಳುವುದು? ಮದುವೆಯಾಗಿದೆ ಎಂದರೆ ಕೋಪಗೊಳ್ಳುವರು.

ಚಿತ್ರ.—ಉಷಾ, ನಾನು ಕೇಳುವುದಕ್ಕೆ ಹಿಂದೆಗೆದಿದ್ದೆ. ಆದರೆ ನೀನೇ ಹೇಳುತ್ತಿದೀಯೆ. ಮದುವೆಯಾಗಿದೆ ಎಂದರೆ ಕೋಪಗೊಳ್ಳುವುದು ಹಾಗಿರಲಿ—ನಂಬುವುದಿಲ್ಲ. ನಿನ್ನ ಈಗಣ ಸ್ಥಿತಿ ಏನೆಂದು ಬಲ್ಲೆಯಾ? ಮನೆಯ ಹೆಸರು ಕೆಡುವಂತಿದೆ.

ಉಷಾ.—ನನ್ನ ಪ್ರಿಯನನ್ನು ಜನರಿಗೆ ತೋರಿಸುವೆನು. ಬೇಕೆಂದರೆ ಇತರರಿಗೆ ತಾನು ಕಾಣುವೆನೆಂದು ಒಪ್ಪಿದಾನೆ. ಆದರೆ ಆತನನ್ನು ಹಾಗೆ ಕರೆಯಿಸಿದರೆ ನನ್ನ ಇಷ್ಟರಿಗೆ ಬಹಳ ಕಷ್ಟ ಸಂಭವಿಸುವುದಲ್ಲದೆ ಆತನಿಗೆ ಇರುವ ಸ್ವಪ್ನ ಪ್ರಪಂಚದಲ್ಲಿ ತಿರುಗಾಡುವ ಶಕ್ತಿ ನಷ್ಟವಾಗುವುದಂತೆ. ಅಂಥ ದಿವ್ಯಶಕ್ತಿಯಿರುವುದನ್ನು ನಾನು ಏಕೆ ಕೆಡಿಸಬೇಕು? ಅವನು ನನ್ನ ಕೈ ಹಿಡಿದದ್ದೇ ಸಾಕು!

ಚಿತ್ರ.—ಆತನ ಪರಿಚಯವನ್ನು ಹೇಳಿರುವನೇ?

ಉಷಾ.—ಅದನ್ನು ಕೇಳಿದೆ; ಹೇಳಲಿಲ್ಲ. ತಂದೆಗೆ ಆಗದವರ ಸಂಬಂಧ ವೆಂದೂ ಸಮಯದಲ್ಲಿ ಎಲ್ಲಾ ತಿಳಿಯುವುದೆಂದೂ ಹೇಳಿದನು.

ಚಿತ್ರ.—ಉಷಾ, ನೀನು ಧನ್ಯಳು. ನೋಡು, ನಾನು ಅವನನ್ನು ಒಂದು ರಾತ್ರಿ ಮಾತ್ರ ನೋಡಿದೆ. ನನ್ನ ಬಾಳು ಸಾರ್ಥಕವಾಯಿತೆಂದು ಕೊಂಡೆ. ಅವನ ಆಕಾರವನ್ನು ಚಿತ್ರದಲ್ಲಿ ಬರೆಯಬಲ್ಲೆ. ಬರೆದು ನನ್ನ ಪುಣ್ಯಕ್ಕೆ ಎಣೆಯಿಲ್ಲವೆಂದುಕೊಳ್ಳುತ್ತೇನೆ. ಅದು ನಿಜವೂ ಹೌದು. ಅಂಥದರಲ್ಲಿ ನೀನು ಅವನ ಪತ್ನಿಯೇ ಆಗಿದೀಯೆ-ನೀನು ಕರೆದೊಡನೆ ಅವನು ಬರುವನು. ರೂಪು ಧರಿಸೆಂದರೆ ರೂಪನ್ನು ಧರಿಸುವನು. ನಿನ್ನ ಶಕ್ತಿ ಎಷ್ಟು? ನೀನು ಧನ್ಯಳೇ ಸರಿ. ಅವ ನನ್ನು ಕನಸಿನಲ್ಲಿ ಒಮ್ಮೆ ನೋಡಿದ ನಾನು ಇನ್ನು ಒಂದೂ ಬೇಡ ವೆಂದಿದೇನೆ-ಇನ್ನು ನೀನು ಮಯೂರನನ್ನು ಮದುವೆಯಾಗುವು ದೆಂದರೇನು!

ಲೀಲಾ.—(ಪ್ರವೇಶಿಸಿ) ರಾಜರು ಬರುತ್ತಿದಾರೆ.

ಚಿತ್ರ.—ರಾಜರನ್ನು ಏಕೆ ಕರೆದೆ?

ಲೀಲಾ.—ಮಾಲಿನಿಯನ್ನು ಕರೆದು ಹಿಂದಕ್ಕೆ ಬರುತ್ತಿದ್ದೆ. ದಾರಿಯಲ್ಲಿ ಸಿಕ್ಕಿ ಎಲ್ಲಿ ಹೋಗಿದ್ದೆ ಎಂದರು. ಹೇಳಿದೆ. ಮಯೂರನೂ ಇದ್ದ. ಇಬ್ಬರೂ ಬರುತ್ತಿದಾರೆ.

(ಬಾಣಾಸುರ ಮಯೂರ ಇಬ್ಬರೂ ಪ್ರವೇಶಿಸುವರು. ಹಿಂದೆ ಮಾಲಿನಿ ಬರುವಳು. ಉಷಾ, ಚಿತ್ರಲೇಖಾ ಇಬ್ಬರೂ ಎದ್ದು ನಿಲ್ಲುವರು. ಸಂಭ್ರಮದಲ್ಲಿ ವೀಣೆ, ಚಿತ್ರ, ಮುಂತಾದುವು ಕೆಳಗೇ ಇರುವುವು.)

ಬಾಣ.—ಏನು ಅದು ಗಲಭೆ? ಚಿತ್ರ ಯಾವದು? ಮೂರ್ಛೆ ಏನು?

ಮಯೂರ.—(ಬಗ್ಗಿ ಚಿತ್ರವನ್ನು ಮೇಲಕ್ಕೆ ಹಿಡಿದು) ಚಿತ್ರವಿದೇ ಇರಬಹುದು.

ಬಾಣ.—(ಅದನ್ನು ನೋಡಿ) ಇದೇಯೆ? ಯಾಕೆ ಮಾತನಾಡುವುದಿಲ್ಲ? ಲೇ ಹುಡುಗೀ, ಬಾ ಇಲ್ಲಿ. ಇದೇಯೆ ಚಿತ್ರ?

(ಲೀಲಾವತಿ ಉಷೆಯ ಕಡೆ ನೋಡುವಳು.)

ಉಷಾ.—ಹೌದು.

ಬಾಣ.—ಇದು ಯಾರ ಚಿತ್ರ? ಮಾತಾಡಿ. ಬರೆದ ನೀನು ಹೇಳು, ಇದು ಯಾರ ಚಿತ್ರ.

ಚಿತ್ರ.—ನನಗೆ ಆತನು ಯಾರೆಂದು ತಿಳಿಯದು.

ಬಾಣ.—(ಉಷೆಯನ್ನು ಕುರಿತು) ಇವನು ಯಾರು?

ಉಷಾ.—ಅವನು ನನ್ನ ಪ್ರಿಯನು. ಯಾರೆಂದು ತಿಳಿಯದು.

ಬಾಣ.—ಆಹ. ಮಾತುಗಳೆ. ನನ್ನ ಮನೆಯ ಸ್ಥಿತಿ ಒಳ್ಳೆಯ ದಿಟ್ಟಕ್ಕೆ ಬಂತು. (ಚಿತ್ರಲೇಖೆಯನ್ನು) ಯಾರೆಂದು ತಿಳಿಯದೆ ಚಿತ್ರವನ್ನು ಬರೆಯುವ ನೀನು ಯಾರೆಂದು ತಿಳಿಯದೆ ಇವನನ್ನು ಪ್ರಿಯ ನೆನ್ನುವ ಈ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಈ ಕುಲಭ್ರಷ್ಟಳಿಗೆ ತಕ್ಕ ಸಖಿ. ಉಷಾ, ನಾನು ಕೊನೆಯ ಮಾತನ್ನು ಹೇಳುತ್ತೇನೆ. ನೀನು ಮಯೂರನನ್ನು ಮದುವೆಯಾಗುವುದಕ್ಕೆ ಒಪ್ಪು. ಬದುಕುವೆ. ಇಲ್ಲವಾದರೆ ನಿನಗೆ ಕ್ರೂರ ಶಿಕ್ಷೆಯಾಗುವುದು.

ಉಷಾ.—ನಾನು ಇವನ ಪತ್ನಿಯಾಗಿದ್ದೇನೆ. ನಿಮ್ಮ ಅಪ್ಪಣೆಯಂತೆ ನಡೆಯಲು ಸಾಧ್ಯವಿಲ್ಲ.

ಬಾಣ.—ನನ್ನ ಅಪ್ಪಣೆಯಿಲ್ಲದೆ ಮದುವೆಯಾದದ್ದು ಹೇಗೆ? ಇವನು ಯಾರು ಹೇಳು.

ಉಷಾ.—ಇವನು ಇಷ್ಟರಲ್ಲಿಯೇ ಬರುವನು. ಆಗ ಪರಿಚಯವನ್ನು ತಿಳಿದುಹೇಳುವೆನು.

ಬಾಣ.—ನನ್ನ ಅಪ್ಪಣೆಯಿಲ್ಲದೆ ಇಲ್ಲಿಗೆ ಬರುವುದು ಹೇಗೆ?

ಉಷಾ.—ಕನಸಿನಲ್ಲಿ ಬರುವನು.

ಬಾಣ.—ಪಾಪಿ! ಏನು ಮಾತು. ನೀನು ನನ್ನ ಮಗಳೋ—ವೇಶ್ಯೆಯರ ಹುಡುಗಿಯೋ—ನಿನ್ನ ಸ್ವೈರವೃತ್ತಿಗೆ ನಿನ್ನನ್ನು ಕಡಿದು ಹಾಕುವೆನು. (ಎಂದು ಕತ್ತಿಯನ್ನು ಹಿರಿಯುವನು.)

ಮಾಲಿನಿ.—ಅಯ್ಯೋ ಗರ್ಭಿಣಿಯನ್ನು ಕಡಿಯುವುದುಂಟೆ? (ಎಂದು ಅಡ್ಡ ಬರುವಳು. ಮಯೂರನು ಬಾಣಾಸುರನ ಕೈಯನ್ನು ಹಿಡಿದುಕೊಳ್ಳುವನು.)

ಬಾಣ.—ಗರ್ಭಿಣಿಯೆ? ಅಯ್ಯೋ ಕುಲಪಾತಕಿ. ನಾನು ಇಂಥ ನೀಚಳನ್ನು ಪಡೆದೆನೇ. ಪಾಪಿ, ಕುಲಹೀನೆ.

ಉಷಾ.—ನಾನು ಕುಲಸ್ತ್ರೀಯರ ಪದ್ಧತಿಗೆ ವಿರೋಧವಾಗಿ ಯಾವ ಕಾರ್ಯವನ್ನೂ ನಡೆಯಿಸಿಲ್ಲ.

ಬಾಣ.—ಹಾಗಾದರೆ ಈ ನಿನ್ನ ಪತಿ ಯಾರು ತೋರಿಸು.

ಉಷಾ.—ನಾನು ಅವನನ್ನು ತೋರಿಸಬಲ್ಲೆ. ಅವನನ್ನು ಏನೂ ಮಾಡುವುದಿಲ್ಲವೆಂದು ಭಾಷೆಯನ್ನು ಕೊಡು.

ಬಾಣ.—ಅವನನ್ನು ಏನೂ ಮಾಡುವುದಿಲ್ಲ-ಕೊಲ್ಲುವೆನು‥‥‥

ಉಷಾ.—ಕೊಲ್ಲುವುದಾದರೆ ನನ್ನನ್ನು ಕೊಲ್ಲು. ಅವನನ್ನು ಅದಕ್ಕಾಗಿ ಬರಮಾಡುವುದಿಲ್ಲ.

ಬಾಣ.—ಅವನನ್ನು ಇಲ್ಲಿ ಬಚ್ಚಿಟ್ಟಿರುವೆಯಾ?

ಉಷಾ.—ಇಲ್ಲ. ಬೇಕಾದರೆ ಬರುವನು.

ಬಾಣ.—ನೀನು ಸುಳ್ಳು ಹೇಳುತ್ತಿರುವೆ. ಒಡನೆ ಬರಮಾಡಿದರೆ ಸರಿ. ಇಲ್ಲದಿದ್ದರೆ ನಿನ್ನನ್ನು ಕೊಲ್ಲುವೆನು.

ಚಿತ್ರ.—ಉಷಾ! ಇದಕ್ಕಿಂತ ಸಮಯವೇನು? ಬರಮಾಡು.

ಬಾಣ.—ನಿನಗೂ ಈ ಸಂಚು ಎಲ್ಲಾ ತಿಳಿದಿದೆ. ನೀನೇ ಇವಳನ್ನು ಕೆಡಿಸಿದೆ. ತಡೆ. ನಿನ್ನನ್ನು ಕೊಲ್ಲುವೆನು. (ಎಂದು ಚಿತ್ರಲೇಖೆಯನ್ನು ಹೊಡೆಯಹೋಗುವನು.)

ಉಷಾ.—ಅಯ್ಯೋ, ಏನು ಗತಿ! (ಎಂದು ಅಡ್ಡಬಂದು) ನಾಥಾ, ಬೇಗಬಾ. ನಿನ್ನ ರೂಪನ್ನು ತೋರು. ನಮಗೆ ಏನಾದರೂ ಆಗಲಿ. ನನ್ನ ಸಖಿಯನ್ನು ಹಿಂಸಿಸಿದರೆ ನೋಡಲಾರೆ.

(ಬಾಣನಿಗೂ ಉಷೆಗೂ ನಡುವೆ ಅನಿರುದ್ಧನು ಕಾಣುವನು. ಉಷೆಯು ಮೂರ್ಛೆ ಹೋಗಿ ಬೀಳುವುದರಲ್ಲಿರುವಳು. ಅನಿರುದ್ಧನು ಅವಳನ್ನು ಹಿಡಿದುಕೊಂಡು)

ಅನಿ.—ಅಸುರೇಂದ್ರ, ಹೆಂಗಸರನ್ನು ಕೊಲ್ಲುವುದು ಶೌರ್ಯವೆ?

ಬಾಣ.—ಎಲಾ ನೀನು ಯಾರು?

ಅನಿ.—ನನ್ನನ್ನು ಅನಿರುದ್ಧನೆನ್ನುವರು. ನಾನು ಶ್ರೀಕೃಷ್ಣನ ಮೊಮ್ಮಗನು.

ಬಾಣ.—ಕಳ್ಳನ ಮೊಮ್ಮಗನು ಕಳ್ಳನೇ ಆದೆ. ಆದರೆ ಈ ಸಿಂಹದ ಗುಹೆಗೆ ಏಕೆ ಬಂದು ಸಿಕ್ಕಿಕೊಂಡೆ. ನಿನ್ನನ್ನು ಈಗ ಕೊಲ್ಲದೆ ಬಿಡುವೆನೆ?

ಅನಿ.—ಆಗಲಿ. ಇವಳನ್ನು ಮೊದಲು ಸ್ವಲ್ಪ ಎಚ್ಚರಗೊಳಿಸುವ. ಎಲ್ಲಿ ಸ್ವಲ್ಪ ತಣ್ಣೀರು ತನ್ನಿ. (ಎಂದು ಉಷೆಯನ್ನು ಪೀಠದಲ್ಲಿ ಕೂರಿಸಿ ಬೀಸಿ ಉಪಚರಿಸುವನು.)

ಬಾಣ.—ಚೆನ್ನಾಯಿತು. ಚೆನ್ನಾಯಿತು. ಮಯೂರ, ಈ ಖೂಳನನ್ನು ಬಿಡದೆ ಇಲ್ಲೆ ಇರಿಸಿಕೊಂಡಿರು. ಸೇವಕರನ್ನು ಕಳುಹಿಸುತ್ತೇನೆ. ಕೈಗೆ ಸಂಕೋಲೆಗಳನ್ನು ಹಾಕಿಸಿ ಬಂದಿಯನ್ನಾಗಿ ಮಾಡು.

ಮಯೂರ.—ಆದರೆ ಇವನನ್ನು ನೀವು ಕೊಲ್ಲಬಾರದು. ನಾನು ಅವನೊಂದಿಗೆ ಕಾದಿ ಅವನನ್ನು ಕೊಲ್ಲುವೆನು. (ತನಗೆ ತಾನೇ) ಇವನೇನು ನನಗಿಂತ ಅಷ್ಟು ಚೆನ್ನಾಗಿದಾನೆಯೇ? (ಎಂದು ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುವನು.)

ಉಷಾ.—ನನ್ನ ದೊರೆಯೆ. ಇಲ್ಲಿಯೇ ಇದೀರಾ? ನೀವು ಬಂದದ್ದು ನಿಜ! ಇದು ಎಂದಿನಂತೆ ಸ್ವಪ್ನವೋ ಎಂದು ಭಯಪಟ್ಟೆ.

ಅನಿ.—ಸ್ವಪ್ನವೂ ನಿಜವೂ ನಿನಗೆ ಈಗ ಒಂದಾಗಿನೆ. ಏನೂ ಆಯಾಸವಿಲ್ಲವಷ್ಟೆ.

ಉಷಾ.—ಇಲ್ಲ. ತಂದೆಯವರೆಲ್ಲಿ? ಅವರು ನಿಮ್ಮನ್ನು ಏನೂಮಾಡಲಿಲ್ಲವಲ್ಲ.

ಅನಿ.—ಮಾಡಲೂ ಇಲ್ಲ. ಮಾಡುವುದೂ ಇಲ್ಲ.

(ಕಾವಲವರು ಬಂದು ಬಾಗಿಲಲ್ಲಿ ನಿಲ್ಲುವರು.)

ಉಷಾ.—ಇದೇನು?

ಕಾವಲವರು.—ಇಲ್ಲಿಂದ ಯಾರನ್ನೂ ಹೊರಗೆ ಬಿಡಬಾರದೆಂದು ರಾಜರು ಆಜ್ಞೆಮಾಡಿದಾರೆ.

ಉಷಾ.—ಈಗೇನು ಮಾಡುವುದು?

ಅನಿ.—ಏನೂ ಮಾಡಬೇಕಾಗಿಲ್ಲ. ನಾವು ಒಬ್ಬರನ್ನೊಬ್ಬರು ಅಗಲಿರಬಾರದೆಂದು ಏರ್ಪಾಡು ಮಾಡಿದ ಹಾಗಾಯಿತು.

ಉಷಾ.—ಇನ್ನು ನನ್ನವರಿಗೆ ಏನು ತೊಂದರೆ ಬರುವುದೋ.

ಅನಿ.—ನಿನಗೆ ಹೆಚ್ಚು ಸಂಕಟ ಉಂಟಾಗಕೂಡದೆಂದು ನಾನು ತಾತನವರನ್ನು ಕೇಳಿಕೊಂಡಿದೇನೆ.

ಉಷಾ.—ಅಷ್ಟಾಗಲಿ. ದೊರೆಯೇ, ಇವಳೇ ಚಿತ್ರಲೇಖೆ. (ಚಿತ್ರಲೇಖೆ ನಾಚಿ ಒಂದು ಕಡೆ ನಿಲ್ಲುವಳು.) ಏಕೆ! ನೀವು ಇವಳನ್ನು ಮೊದಲೇ ಬಲ್ಲಿರಿ.

ಅನಿ.—ಅದನ್ನು ನೀನು ಹೇಗೆ ಬಲ್ಲೆ?

ಉಷಾ.—ಇವಳು ಬರೆದ ಚಿತ್ರವನ್ನು ನೋಡಿಯೇ ನಾನು ಸ್ವಲ್ಪ ಮೈಮರೆತದ್ದು. ಲೀಲಾ, ನೀನು ಎಂಥ ಹಸುಮಗು. ಚಿತ್ರದ ಮಾತನ್ನು ತಂದೆಯವರಿಗೆ ಏಕೆ ಹೇಳಿದೆ?

ಲೀಲಾ.—ಏಕೆ ಮೂರ್ಛೆ ಹೋದಳು ಎಂದರು. ಭಾವನವರ ಚಿತ್ರ ಎಂತ ನಾನೇನು ಬಲ್ಲೆ. ಬಾಯಲ್ಲಿ ಚಿತ್ರ ಎಂತ ಬಂತು. ತಡೆದುಕೊಂಡೆ. ಅವರು ಬಿಡಲಿಲ್ಲ. ಆದರೇನು ಎಂತ ಹೇಳಿಬಿಟ್ಟೆ.

ಅನಿ.—ಚಿತ್ರಾ ನನ್ನ ಚಿತ್ರವನ್ನು ಬರೆದಿದ್ದಳೆ.

ಚಿತ್ರ.—(ಒಂದು ಕಡೆಗೆ) ಇವರಿದನ್ನೆಲ್ಲ ಏಕೆ ಹೇಳುವರು. ಇದೇನು ? ಇವನು ಅಂದು ಕನಸಿನಲ್ಲಿ ಕಂಡಷ್ಟು ಸುಂದರನಾಗಿಲ್ಲ. (ಎಂದು ದೂರ ಹೋಗಿ ಎಲ್ಲೋ ನೋಡುತ್ತಾ ನಿಲ್ಲುವಳು.)

ಉಷಾ.—ಹೌದು. ಆದುದರಿಂದಲೇ ನೀವು ಅವಳನ್ನು ನೋಡಿದ್ದೀರೆಂದು ನನಗೆ ತಿಳಿದದ್ದು. ಇವರು ಹಾಡಿದ ಹಾಡುಗಳು, ಆ ಚಿತ್ರ, ಇವೆಲ್ಲಾ ನೋಡಿದರೆ ನನಗೆ ಇವರು ಬೇಕು ಎಂತ ನನ್ನನ್ನು ಪರೀಕ್ಷಿಸುವುದಕ್ಕೆ ಮಾಡಿದರೋ ಎನ್ನುವ ಹಾಗೆ ಕಂಡಿತು. ಅಂತು ಲೀಲಾ ಈ ಹೊತ್ತು ಬಹಳ ಗಲಭೆ ಮಾಡಿಬಿಟ್ಟಳು.

ಲೀಲಾ.—ಹೌದು. ಮದುವೆಯಾದವಳು ನಾನು. ಚಿತ್ರ ಬರೆದವಳು ನಾನು. ಮೂರ್ಛೆ ಹೋದವಳು ನಾನು. ಎಲ್ಲಾ ನಾನೇ. ಅಷ್ಟು ತಿಳಿದವಳು ನೀನು ಭಾವನವರ ಚಿತ್ರ ಎಂತ ಹೇಳಿ ಮೂರ್ಛೆ ಹೋಗಬೇಕಾಗಿತ್ತು. ಭಾವನವರನ್ನು ಕರೆಯಿಸಿದೆ ನಲ್ಲಾ. ಒಳ್ಳೇಮಾತು ಬೇಡ ? ಗಲಭೆ ಮಾಡಿದೆನಂತೆ. ಆಯಿತು ಇನ್ನು ಮೇಲೆ ಇಂತ ತಪ್ಪು ಮಾಡುತ್ತೇನೆಯೆ ? ಇನ್ನೊಂದು ಸಲ ನೋಡುವ ಚಿತ್ರ ಚಿತ್ರಲೇಖೆಯ ಗಂಡನದು ಅಂದುಕೊಂಡರೆ ಸರಿ.

ಅನಿ.—ಆಮೇಲೆ ನೋಡುವ ಚಿತ್ರ ನಿನ್ನ ಗಂಡನದು.

ಲೀಲಾ.—ಕವಿತೆ, ಚಿತ್ರ ಬರೆಯುವರಿಗೆ ಚಿತ್ರದ ಗಂಡಂದಿರು ಸಾಕು. ನಮ್ಮಂಥವರಿಗೆ ನಿಜವಾದ ಗಂಡನೇ ಬೇಕು.

ಚಿತ್ರ.—ಎಷ್ಟು ಮಾತು, ಲೀಲಾ. ಹೊಸದು ಎನ್ನುವುದೇ ಬೇಡವೆ.

ಲೀಲಾ.—ನಾನು ಏನು ಮಾಡಿದೆ ಅಕ್ಕ. ನಾದಿನಿ ವರಸೆ ನೀನು ಮಾಡಬೇಕು. ಮಾತನಾಡದೆ ಗೊಂಬೆಯ ಹಾಗೆ ನಿಂತಿದೀಯೆ. ನಾನಾದರೂ ವರಸೆಯಂತೆ ನಡೆಯಬೇಕೋ ಇಲ್ಲವೊ ? ಬನ್ನಿ ಭಾವ, ಒಳಗೆ ಬಂದು ಕುಳಿತುಕೊಳ್ಳಿ.

ಅನಿ.—ಬಂದೆ. ನಮ್ಮ ತಾತನವರಿಗೆ ಈ ವಿಷಯ ತಿಳಿಯಬೇಕು. ನಾನು ಪ್ರಾರ್ಥನೆ ಮಾಡಿ ಬರುತ್ತೇನೆ. ನೀವು ಒಳಗೆ ಹೋಗಿ.

(ಚಿತ್ರಲೇಖಾ, ಉಷಾ, ಲೀಲಾವತಿ ಒಳಗೆ ಹೋಗುವರು. ಅನಿರುದ್ಧನು ಪ್ರಾರ್ಥಿಸುವನು.)

ತಾತ, ನನ್ನ ಪ್ರಾರ್ಥನೆಯನ್ನು ಕೇಳು—

(ರಾಗ ಮಧ್ಯಮಾವತಿ.)

ನಿನ್ನವರ ಪೊರೆಯುವುದೇ ನಿನಗೊಂದು ವ್ರತವೆಂದು
ಪನ್ನಗಶಾಯಿಈ ನಿನ್ನ ಜಗವೆಲ್ಲ ಪೊಗಳುವುದು.
ನಿನ್ನವನಾ ಎನ್ನವಳೀ ಅರಿಯದ ಬಾಲೆಯು ದೇವ
ಎನ್ನೊಳೂ ಎನ್ನರನ್ನೆಯೊಳು ಕೃಪೆದೋರಿ ಪೊರೆಯೈಯ.

ಎಲ್ಲೆಡೆಯೊಳ್ ನೀನಿರುವೆ ಎಲ್ಲರ ಭಾವವನರಿವೆ
ಕಲ್ಲೆದೆಯ ಕರಗಿಸುವೆ ಬಲ್ಲವರ ಬಾಗಿಸುವೆ
ಪುಲ್ಲನಯನ ಈ ಸಲ್ಲಲಿತಾಂಗಿಯ ಪಿತನಿವಳನು ಮನ್ನಿಪ
ವೊಲು ಮಾಡು
ಪ್ರಹ್ಲಾದನ ಭಕ್ತಿಯ ನೆನೆದಾತನಬಳಿಗೆ ಶುಭವನು ನೀಡು

ಅರಿಯದ ಬಾಲನು ನಾನು ಅರಿಯದೆ ಮಾಡಿದ ಒಂದು
ಚರಿತವ ನೀಮನ್ನಿಸುತೆ ಪಾಲಿಸು ದೀನರ ಬಂಧು
ಕರೆಯುವ ಭಕ್ತರ ಬಳಿಗೆ ಕರು ಕೂಗೆ ಬಹ ಗೋವ
ತೆರದಲಿ ಬೇಗನೆ ಬಂದು ವರದಾ ನೀ ಪೊರೆಯೈಯ ॥

(ಎಂದು ಒಳಗೆ ಹೋಗುವನು.)

(ತೆರೆ ಬೀಳುವುದು.)

(ಎರಡು ಕಡೆಯಿಂದ ಸೇವಕರಿಬ್ಬರು ಪ್ರವೇಶಿಸುವರು.)

ಮೊದಲನೇ ಸೇವಕ.—ಏನಯ್ಯಾ. ಎಲ್ಲಾ ಕಾವಲು ಸರಿಯಾಗಿದೀರ. ರಾಜರು ವಿಚಾರಿಸಿಕೊಂಡು ಬರಹೇಳಿದರು.

ಎರಡನೆಯವನು.—ಕಾವಲು ಬದಲಾಯಿಸುವುದಕ್ಕೆ ಯಾರೂ ಬರಲೇ ಬೇಡವೆ? ರಾಜರು ನಾಲ್ಕುದಿನದಿಂದ ಇತ್ತ ತಿರುಗಿ ನೋಡಲಿಲ್ಲ.

ಮೊದಲನೆಯವನು.—ರಾಜರು ಅಂದು ಹಾಗೆ ಹೋದರೊ ಇಲ್ಲವೊ ಊರ ಬಾಗಿಲ ಕಾವಲವರು ಬಂದು ಶ್ರೀಕೃಷ್ಣನ ಚಕ್ರವು ಊರ ಮುಂದಕ್ಕೆ ಬಂದಿದೆ ಎಂದೂ, ಅದನ್ನು ತಡೆಯುವುದು ಕಷ್ಟ ವಾಗಿದೆ ಎಂದೂ ಹೇಳಿದರು. ನಮ್ಮ ರಾಜರ ಚಕ್ರವನ್ನು ತೆಗೆದು ಕೊಂಡು ಹೋಗಿ ಅಲ್ಲಿಡಬೇಕಾಯಿತು. ಕೃಷ್ಣನೂ ಒಡನೆಯೇ ಬರುತ್ತಿರುವನೆಂದು ತಿಳಿದದ್ದರಿಂದ ಎಲ್ಲರೂ ಯುದ್ಧಕ್ಕೆ ಸನ್ನದ್ಧ ರಾದೆವು. ಈ ಗಲಭೆಯಲ್ಲಿ ನಿಮ್ಮ ಕಡೆಯ ಯೋಚನೆಯೇ ಮರೆತುಹೋಯಿತು.

ಎರಡನೆಯವನು.—ಈಗ ಶ್ರೀಕೃಷ್ಣನು ಬಂದನೆ?

ಮೊದಲನೆಯವನು.—ಈ ದಿಸ ಬೆಳಗಾಗ ಅವನು ಸ್ವಲ್ಪ ಸೈನ್ಯದೊಂದಿಗೆ ಬಂದನಂತೆ. ನಮ್ಮವರು ಕಾದಿ ಸೋತರು. ಬಾಣೇಶ್ವರನೂ ಶ್ರೀಕೃಷ್ಣನೂ ಯುದ್ಧಕ್ಕೆ ನಿಂತರು.

ಎರಡನೆಯವನು.—ಯಾರು ಗೆಲ್ಲುವಂತಿದೆ?

ಮೊದಲನೆಯವನು.—ಬಾಣೇಶ್ವರನು ತನ್ನ ಸಾವಿರ ತೋಳ ಆಕಾರವನ್ನು ಧರಿಸಿರುವನು. ಆಗ ಅವನೆದುರಿಗೆ ನಿಲ್ಲುವವರ್ಯಾರು? ಆದರೆ ಶ್ರೀಕೃಷ್ಣನಿಗೆ ಇದೆಲ್ಲಾ ಲೆಕ್ಕವಲ್ಲ. ಅವನ ಚಕ್ರವೊಂದೇ ಮೂರು ಲೋಕಗಳನ್ನೂ ಗೆಲ್ಲುವುದು. ಏನಾಗುವುದೋ ನೋಡಬೇಕು.

ಎರಡನೆಯವನು.—ಇಲ್ಲಿ ಯಾರಾದರೂ ಬಂದರೆ ನಾನು ಯುದ್ಧವನ್ನು ನೋಡಿಯೇನು.

ಮೊದಲನೆಯವನು.—ಆಗಲಿ ಯಾರನ್ನಾದರೂ ಕಳುಹಿಸುತ್ತೇನೆ.

(ಇಬ್ಬರೂ ಬೇರೆ ಬೇರೆ ಕಡೆ ಹೋಗುವರು.)

(ತೆರೆ ತೆಗೆಯುವುದು. ಉಷೆಯ ವಾಸಗೃಹದ ಮುಂಭಾಗ. ಉಷೆಯೂ ಚಿತ್ರಲೇಖೆಯೂ ಇರುವರು.)

ಉಷಾ.—ಚಿತ್ರಾ, ಏನು ಸಮಾಚಾರ?

ಚಿತ್ರ.—ಶ್ರೀಕೃಷ್ಣನೂ ನಿಮ್ಮ ತಂದೆಯೂ ಕಾದಾಡುತ್ತಿರುವರಂತೆ. ಏನಾಗುವುದೋ ನೋಡಬೇಕು.

ಉಷಾ.—ಯಾವ ಪಕ್ಷಕ್ಕೂ ನಾನು ತೀರಾ ಜಯವನ್ನು ಬಯಸುವಂತಿಲ್ಲ. ಭಗವಂತನು ತಂದೆಯವರ ತಪ್ಪನ್ನು ಮನ್ನಿಸಿ ರಕ್ಷಿಸಬೇಕು. ತಂದೆಯು ಶಾಂತಿಯನ್ನು ತಂದುಕೊಂಡರೆ ಚೆನ್ನಾಗಿದ್ದೀತು.

ಚಿತ್ರ.—ಇಬ್ಬರಿಗೂ ಒಳ್ಳೆಯದಾಗಲಿ.

(ಸೇವಕನು ಪ್ರವೇಶಿಸುವನು.)

ಸೇವಕ.—ಅಮ್ಮಾ. ರಾಜರು ಸೋತರು. ಅವರ ಚಕ್ರವು ಮುರಿದು ಹೋಯಿತಂತೆ. ಶ್ರೀಕೃಷ್ಣನು ಅವರ ಕೈಗಳನ್ನೆಲ್ಲಾ ಕಡಿದು ಬಿಟ್ಟನಂತೆ. ಯಾದವರು ಊರೊಳಕ್ಕೆ ಬರುತ್ತಿದಾರೆ.

ಉಷಾ.—ಇನ್ನೇನು ಗತಿ. ತಂದೆಯವರ ಪ್ರಾಣ ತೆಗೆಯದಂತೆ ಶ್ರೀಕೃಷ್ಣನನ್ನು ಬೇಡುವುದಕ್ಕೆ ನನ್ನ ಪ್ರಾಣನಾಥನನ್ನು ಕಳುಹಿಸುತ್ತೇನೆ.

(ಎಂದು ಒಳಗೆ ಹೋಗುವಳು. ಹೊರಗೆ ಗಲಭೆಯಾಗುವುದು. ಶ್ರೀಕೃಷ್ಣ, ಬಾಣಾಸುರ, ನಾರದ ಮುಂತಾಗಿ ಕೆಲವರು ಬರುವರು.)

ಶ್ರೀಕೃಷ್ಣ.—ಬಾಣೇಶ್ವರ, ನೀನು ನಮ್ಮ ವಿಷಯದಲ್ಲಿ ಹಗೆತನವನ್ನು ತೋರಿದೆಯೇ ಹೊರತು ನಾನು ನಿನ್ನ ವಿಷಯದಲ್ಲಿ ಯಾವಾಗಲೂ ಪ್ರೀತಿಯನ್ನೇ ತೋರಿಸಿದ್ದೇನೆ. ನೀನು ನಮಗೆ ಬೇಕಾದವನು. ಪ್ರಹ್ಲಾದನ ಮರಿಮಗನು ನನಗೆ ಹಗೆ ಹೇಗೆ? ನಿನ್ನ ಹೃದಯ ದಲ್ಲಿಯೂ ನನ್ನ ವಿಷಯದಲ್ಲಿ ಪ್ರೀತಿಯೇ ಇರಬೇಕು. ನಿನ್ನ ಕುಲದ ಅಭಿಮಾನದಿಂದ ನೀನು ಅದನ್ನು ಮರೆತು ನನ್ನನ್ನು ಅನ್ಯಥಾ ಕಾಣಬೇಕಾಯಿತು. ನನ್ನ ಮೊಮ್ಮಗನು ನಿನ್ನ ಮಗ ಳನ್ನು ನೋಡಿ ಮೆಚ್ಚಿದ್ದು ನಮ್ಮ ಮೈತ್ರಿಗೆ ಕಾರಣವಾಗಿದೆ. ಅವಳ ವಿಷಯವನ್ನು ಅವನಿಗೆ ಮೊದಲು ಹೇಳಿದವರು ನಾರದ ರೆಂತ ಕಾಣುತ್ತದೆ. ಮೊದಲ ರಾತ್ರಿ ಇನ್ನಾರನ್ನೋ ನೋಡಿ ಸುಮ್ಮನೆ ಬಂದುಬಿಟ್ಟನು. ಮೂರನೆಯ ದಿನ ಉಷೆಯನ್ನೇ ನೋಡಿದನು. ಅವನು ಅವಳನ್ನು ಮದುವೆಯಾಗುವೆನೆಂದು ಹೇಳಿದಾಗ ನಾನು ಸಂತೋಷದಿಂದ ಆಗಲೆಂದೆನು. ಈಗ ನೀನು ಒಪ್ಪುವುದಾದರೆ ಹುಡುಗರು ತಾವೇ ಮಾಡಿಕೊಂಡಿರುವ ಈ ವಿವಾಹವನ್ನು ಶಾಸ್ತ್ರೋಕ್ತವಾಗಿ ಪೂರಯಿಸಬಹುದು.

ಬಾಣ.—ತಮ್ಮ ಇಷ್ಟದಂತೆ ಆಗಬಹುದು.

ಶ್ರೀಕೃಷ್ಣ.—ನೀನು ಹೇಳುವುದು ಬರಿಯ ಉಪಚಾರದ ಮಾತಲ್ಲ, ಒಳ್ಳೆ. ಬಾ ಹೋಗೋಣ. ನಮ್ಮ ಇಬ್ಬರ ಮೈತ್ರಿಗೆ ಕಾರಣರಾದ ನಾರದ ಋಷಿಗಳಿಗೆ ನಾವು ಬಹಳ ಕೃತಜ್ಞರಾಗಿರಬೇಕು.

ನಾರದ.—ಬೀಗನಿಗೆ ಮದುವೆಯ ದಿನ ಕೈಯ್ಯನ್ನೆಲ್ಲಾ ಕಡಿದ ನೀನು ನನಗೆ ಕೃತಜ್ಞತೆಯನ್ನು ಹೇಗೆ ಸೂಚಿಸುವೆಯೋ ಎಂದು ಹೆದರಿಕೆಯಾಗುತ್ತಿದೆ.

ಶ್ರೀಕೃಷ್ಣ.—ಹೇಗೆ ಎಂಬುದನ್ನು ನೀವು ಅರಿಯಿರಾ. (ಚಿತ್ರೆಯನ್ನು ನೋಡಿ) ಅದು ಯಾರು?

ಬಾಣ.—ಚಿತ್ರಲೇಖಾ. ನನ್ನ ಮಗಳ ಸಖಿ.

ನಾರದ.—ನಿನ್ನ ದಾಸಿ. ಚಿತ್ರ, ಬಂದು ಪರಮಾತ್ಮನಿಗೆ ನಮಸ್ಕಾರ ಮಾಡು.

ಚಿತ್ರ.—ಪೂಜ್ಯರಿಗೆ ನಮಸ್ಕರಿಸುವೆನು (ಎಂದು ನಮಸ್ಕರಿಸುವಳು.)

ಶ್ರೀಕೃಷ್ಣ.—ನಿನಗೆ ಶುಭವಾಗಲಿ, ಉಷೆಯೂ ಅನಿರುದ್ಧನೂ ಎಲ್ಲಿ?

(ಅವರಿಬ್ಬರೂ ಬರುವರು.)

ಉಷಾ.—(ತಂದೆಯನ್ನು ನೋಡಿ) ಅಪ್ಪಾ—ನೀವು ಸನಾದಿರೋ ಎಂದು ನಾನು ಭಯಪಟ್ಟೆ.

ಬಾಣ.—ಏನೂ ಭಯಪಡಬೇಡ, ಮಗು. ನಿಮ್ಮ ತಾತನವರಿಗೆ ನಮಸ್ಕಾರ ಮಾಡು. ನಾರದ ಋಷಿಗಳಿಗೆ ನಮಸ್ಕಾರಮಾಡು.

ಉಷಾ.—ಅಪ್ಪಣೆ (ಎಂದು ಪತಿಯ ಬಳಿ ನಿಲ್ಲುವಳು.)

ಶ್ರೀಕೃಷ್ಣ.—ಅನಿರುದ್ಧ, ನೀನು ಹುಡುಗತನದಿಂದ ಮಾಡಿದ ಕೆಲಸ ಇಷ್ಟು ರಗಳೆಗೆ ಇಟ್ಟುಕೊಂಡಿತು. ನಿಮ್ಮ ಮಾವನಿಗೂ ಮಹರ್ಷಿಗಳಿಗೂ ನಮಸ್ಕಾರ ಮಾಡು.

ಅನಿರುದ್ಧ.—ಅಪ್ಪಣೆ. (ಅನಿರುದ್ಧನೂ ಉಷೆಯೂ ಹಿರಿಯರಿಗೆ ನಮಸ್ಕಾರ ಮಾಡುವರು.)

ಬಾಣ.—ವಿವಾಹಕ್ಕೆ ಎಲ್ಲವನ್ನೂ ಸಿದ್ಧಪಡಿಸುವಂತೆ ಜೋಯಿಸರಿಗೆ ಹೇಳಿದೆ. ಎಲ್ಲರೂ ಅಲ್ಲಿಗೆ ಹೋಗೋಣ.

ಶ್ರೀಕೃಷ್ಣ.—ಆಗಲಿ. ಮದುವೆ ನಡೆಯುವುದೆಂದು ರುಕ್ಮಿಣಿ ಸತ್ಯಭಾಮೆ ಎಲ್ಲ ಬಂದಿರುವರು. ಪಾಳೆಯಕ್ಕೆ ಹೇಳಿಕಳುಹಿಸಿ ಎಲ್ಲರನ್ನೂ ಕರೆಯಿಸಿ.

ಬಾಣ.—ಅಪ್ಪಣೆ.

ಉಷಾ.—(ಅನಿರುದ್ಧನಿಗೆ) ನೀವು ನಡೆಯಿರಿ. ನಾನು ಒಂದು ಕ್ಷಣದಲ್ಲಿ ಬರುತ್ತೇನೆ. (ಎಲ್ಲರೂ ಹೊರಡುವರು. ಉಷಾ ಚಿತ್ರಲೇಖೆಯನ್ನು ಹಿಡಿದು) ನಿನ್ನನ್ನು ಒಂದು ಮಾತು ಬೇಡುತ್ತೇನೆ.

ಚಿತ್ರ.—ಏನು ಬಹಳ ಮರ್ಯಾದೆಯಾಗಿದೆ?

ಉಷಾ.—ನನ್ನ ಪ್ರಿಯನನ್ನು ಮದುವೆಯಾಗಲು ಒಪ್ಪು. ನಾನು ಅವನನ್ನು ಒಪ್ಪಿಸುವೆನು.

ಚಿತ್ರ.—ಉಷಾ, ನನ್ನ ಪತಿಯು ಕನಸಿನಲ್ಲಿ ಕಂಡು ಮರೆಯಾದನು. ನನಗೆ ಅಷ್ಟೆ ಮದುವೆ. ನೀನು ಸುಖವಾಗಿದ್ದರೆ ನನಗೆ ಸಾಕು. ಈ ಮಾತನ್ನು ಬಿಡು.

ಉಷಾ.—ಖಂಡಿತವೆ?

ಚಿತ್ರ.—ಸತ್ಯವಾಗಿ.

ಉಷಾ.—ಹಾಗಾದರೆ ನಿನ್ನ ಇಷ್ಟ.

ಚಿತ್ರ.—(ತನಗೆ ತಾನೇ) ಉಷಾ ನನಗೆ ಉಪಚಾರದ ಮಾತನ್ನು ಹೇಳುವಳೆ? (ಎಂದುಕೊಂಡು ಹತ್ತಿರ ನಾರದರನ್ನು ನೋಡಿ ನಾಚುವಳು)

ನಾರದ.—ನಿನಗೆ ಅತೃಪ್ತಿಯೆ ಚಿತ್ರಲೇಖ?

ಚಿತ್ರ.—ಇಲ್ಲ ಆಚಾರ್ಯರೆ.

ನಾರದ.—ಇದ್ದರೂ ಅದನ್ನು ಜಡಬೇಕು. ಪರಮಾತ್ಮನು ಒಬ್ಬೊಬ್ಬರನ್ನು ಒಂದೊಂದು ರೀತಿಯಲ್ಲಿ ಸೇವೆಗೆ ಕರೆಯುವನು. ನಿನಗೆ ಔತಣ ಬೇರೆ ರೀತಿಯಲ್ಲಿ ಬರಬಹುದು.

ಚಿತ್ರ.—ನಾನು ಕಾದಿದ್ದೇನೆ. ಬಂದ ಔತಣ ಸರಿಯಾದದ್ದೆಂದು ತಿಳಿಯುವುದೋ ಇಲ್ಲವೋ? ಈಗ ಬಂದದ್ದೂ ಔತಣವಲ್ಲವೆ?

ನಾರದ.—ಶ್ರುತಿ ಸರಿಯಾಗಿರುವುದು ಕಿವಿಗೆ ತಿಳಿಯುವಂತೆ ಔತಣ ಸರಿಯಾದುದೆನ್ನುವುದು ಮನಸ್ಸಿಗೆ ತಾನಾಗಿ ತಿಳಿಯುವುದು. ಈ ಔತಣ ನಿಜವಲ್ಲ. ಆದ್ದರಿಂದಲೇ ಬೇಡವೆಂದು ನೀನೇ ಹೇಳಿದೆ. ಹೃದಯವು ಶುಚಿಯಾಗಿರಲಿ. ಔತಣ ತಕ್ಕ ಸಮಯದಲ್ಲಿ ಬರುವುದು. ಬಂದಾಗ ತಿಳಿಯುವುದು.

ಚಿತ್ರ.—ಅಪ್ಪಣೆ (ಹೊರಡುವರು.)

(ತೆರೆಯ ಮುಂದುಗಡೆ ಶ್ರೀಕೃಷ್ಣ, ನಾರದ, ಬಾಣಾಸುರ ಇವರುಗಳು ಪ್ರವೇಶಿಸುವರು.)

ಶ್ರೀಕೃಷ್ಣ.—ಇಂದಿನ ಮಧ್ಯಾಹ್ನ ಆದ ಸಂಬಂಧದಿಂದ ನಮ್ಮ ನಿಮ್ಮ ಬಾಂಧವ್ಯವು ಸ್ಥಿರಪಟ್ಟಿತು. ಮತ್ತೇನು?

ಬಾಣ.—ನಮ್ಮ ತಾತನವರು ತಮ್ಮ ಭಕ್ತರಾಗಿದ್ದಾಗ್ಯೂ ನಾನು ಇಷ್ಟುದಿನ ತಮ್ಮನ್ನು ಶತ್ರುವೆಂದು ಕಂಡ ತಪ್ಪನ್ನು ತಾವು ಮರೆತಿರುವುದರಿಂದ ನಾನು ಧನ್ಯನು. ಇದು ನನ್ನ ಸೋಲಿಂದ ಬಂದಿರುವ ಬುದ್ಧಿಮಾತ್ರವೇ ಅಲ್ಲ. ನನ್ನ ಮಗು ನಿಮ್ಮ ಮನೆಯಲ್ಲಿ ಸುಖವಾಗಿರಬೇಕೆಂದು ಆಸೆ ಮಾತ್ರವೂ ಅಲ್ಲ. ನಾನು ನಿಮ್ಮವನಾಗಬೇಕೆಂದು ನನ್ನ ಪ್ರಾರ್ಥನೆ.

ಶ್ರೀಕೃಷ್ಣ.—ಅಯ್ಯಾ, ನನ್ನ ಸ್ನೇಹವನ್ನು ಅಪೇಕ್ಷಿಸುವವನಿಗೆ ನಾನು ಎಂದೂ ದೂರ ನಿಂತದ್ದಿಲ್ಲ. ನಿನಗೆ ನನ್ನಮೇಲೆ ಪ್ರೇಮವಿರಲಿ. ನನ್ನ ಪ್ರೇಮದ ವಿಷಯದಲ್ಲಿ ಸಂದೇಹಬೇಡ.

ಬಾಣ.—ನಾನು ಧನ್ಯನಾದೆನು. (ಹೋಗುವನು.)

(ಸತ್ಯಭಾಮೆ ಬರುವಳು.)

ಸತ್ಯಭಾಮೆ.—ಉರಟಣೆ ನಡೆಯುತ್ತಿದೆ. ಎಲ್ಲರೂ ಇಲ್ಲಿ ಕಾಲಕಳೆಯುದೇ ಇದ್ದರೆ ಅಲ್ಲಿ ಬಂದು ನೋಡಬಾರದೆ.

ಶ್ರೀಕೃಷ್ಣ.—ಯಾರೂ ಬಂದು ಹೇಳಲಿಲ್ಲವಲ್ಲ.

ಸತ್ಯ.—ಈಗ ನಾನು ಬಂದು ಹೇಳಲಿಲ್ಲವೆ?

ಶ್ರೀಕೃಷ್ಣ.—ಋಷಿಗಳೇ, ನೋಡಿದಿರಾ? ಈಗ ಇವರು ಹೇಳಿದ್ದರಿಂದ ನಾವು ಆಗಲೇ ಹೋಗಬೇಕಾಗಿತ್ತಂತೆ. ಇದು ಸಂಸಾರಿಗಳ ಅವಸ್ಥೆ.

ಸತ್ಯ.—ಆಗಲಿ ಬನ್ನಿ ಹೊತ್ತಾಯಿತು. (ಎಲ್ಲರೂ ಹೊರಡುವರು. ಸತ್ಯ ಭಾಮೆ ಕೃಷ್ಣನಿಗೆ ಬೇರೆಯಾಗಿ) ಬಂದು ತಮಾಷೆ ನೋಡಿ. ಇನ್ನು ಹತ್ತು ದಿನ ತಡೆದಿದ್ದರೆ ಉರಟಣೆಯೊಂದಿಗೆ ಹೂ ಮುಡಿಸುವ ಪ್ರಸ್ತ ಮಾಡಬಹುದಾಗಿತ್ತು.

ಶ್ರೀಕೃಷ್ಣ.—ನಿನ್ನಂಥ ನಾಜೋಕಿನ ಹೆಣ್ಣಾದರೆ ಅದೆಲ್ಲಾ ನೋಡಬೇಕು. ರಾಕ್ಷಸರ ಹುಡುಗಿ ಅಲ್ಲವೆ. ಅದಕ್ಕೇನು.

ಸತ್ಯ.—ಅದೇನು ಹೇಳುತೀರಿ. ನಾವು ಇವರನ್ನು ರಾಕ್ಷಸರು ಎನ್ನುತೇವಲ್ಲ. ಇವರು ನಮ್ಮನ್ನ ರಾಕ್ಷಸರು ಎನ್ನುತಾರಂತೆ. ಆ ಮಾಲಿನಿ ಅನ್ನೋಳು ನನಗೆ ಕೇಳುವ ಹಾಗೆಯೇ ಇದೇನು ಇವರು ರಾಕ್ಷಸರ ಹೆಂಗಸರಾಗಿದಾರೆ ಎಂದಳು.

ಶ್ರೀಕೃಷ್ಣ.—ನಿನ್ನನ್ನು ಎಂದಳೋ? ಎಲ್ಲರನ್ನೂ ಎಂದಳೋ?

ಸತ್ಯ.—ಸಾಕು ಬನ್ನಿ. ನಾನು ರಾಕ್ಷಸರ ಹೆಂಗಸಾದರೆ ನೀವು ರಾಕ್ಷಸ ರಲ್ಲವೆ?

ಶ್ರೀಕೃಷ್ಣ.—ಅಂತೂ ನಮಗೆ ಅಸುರರ ಸಂಬಂಧವೂ ಆಗುತಾ ಬಂತು.

ಸತ್ಯ.—ನೀವು ನೂರಾರು ಜನರನ್ನು ಕಟ್ಟಿಕೊಂಡರೆ ನಿಮ್ಮ ಪೀಳಿಗ ಡವರು ಸುರರು ಅಸುರರು ಎಂತ ನೋಡುವುದಕ್ಕಾಗುತ್ತದೆಯೆ? ಎಲ್ಲಿಯಾದರೂ ಹೋಗಿ ಹುಡುಗಿಯರನ್ನು ನೋಡಬೇಕು. ಇಷ್ಟಕ್ಕೂ ನಿಮಗೇನು ಒಳ್ಳೆಯವರು ಕೆಟ್ಟವರು ಎಂತ ಇಲ್ಲವಲ್ಲ. ಹತ್ತಿರ ಬಂದವರೆಲ್ಲರೂ ಬೇಕಾದವರೇ.

ಶ್ರೀಕೃಷ್ಣ.—ನಿಜ (ಒಳಗೆ ಹೋಗುವರು.)

(ತೆರೆ ತೆಗೆಯುವುದು. ವಿವಾಹ ಮಂಟಪಕ್ಕೆ ಶ್ರೀಕೃಷ್ಣ, ನಾರದ, ಬಾಣಾಸುರ ಮುಂತಾದವರೆಲ್ಲರೂ ಬಂದು ಕುಳಿತುಕೊಳ್ಳುವರು. ಉಷೆಯೂ ಅನಿರುದ್ಧನೂ ಹಿರಿಯರಿಗೆ ನಮಸ್ಕಾರ ಮಾಡುವರು.)

ಬಾಣ.—ಉರಟಣೆಯೆಲ್ಲ ಮುಗಿಯಿತೆ? (ಉಷೆಯು ಬಾಗಿ ನಮಸ್ಕಾರಮಾಡಲು) ದೀರ್ಘ ಸುಮಂಗಲಿಯಾಗಿರು. ಈ ವೈಭವವನ್ನು ನೋಡುವುದಕ್ಕೆ ನಿನ್ನ ತಾಯಿ ಕೇಳಿಬರಲಿಲ್ಲ. ಗಾಯಕರು ಬಂದಿದ್ದರೆ ಕೃಷ್ಣ ದೇವರ ಮುಂದೆ ಅವರ ಕುಶಲತೆಯನ್ನು ಸ್ವಲ್ಪ ತೋರಿಸಲಿ.

ಲೀಲಾ.—ನಾರದ ಋಷಿಗಳು ಇದಾರೆ ಎಂತ ಗಾಯಕರೆಲ್ಲ ಮರೆಯಾದರು.

ಬಾಣ.—ನೀನೇ ಒಂದು ಹಾಡನ್ನು ಹೇಳು. (ಶ್ರೀಕೃಷ್ಣನಿಗೆ) ಇವಳು ಹಾಡುವುದನ್ನು ಕೇಳಿದರೆ ತಾವು ಇವಳಿಗೂ ಮದುವೆಯ ಏರ್ಪಾಡನ್ನು ಮಾಡುವಿರಿ.

ಶ್ರೀಕೃಷ್ಣ.—ಅದಕ್ಕೇನೂ ಕಷ್ಟವಿಲ್ಲ. ನಮ್ಮಲ್ಲಿ ಹುಡುಗರು ಬಹಳ ಇದಾರೆ.

ಲೀಲಾ.—(ಹಾಡುವಳು.)

(ರಾಗ ಜಂಜೂಟಿ.)

ಮಲ್ಲಿಗೆ ಸಂಪಿಗೆ ಕುರವಕ ಕೇಸರಿ
    ಪಾರಿಜಾತ ಜಾಜಿ ಇರುವಂತಿ ಅರಳಿವೆ
ಮೆಲ್ಲನೆ ಮಾರುತ ಹರಿಯುತಲಿರುವನು
    ಬಾರೇ ಸಖಿ ಬಾರೇ

ತಿಳಿಬೆಳುತಿಂಗಳು ಯಮುನೆಯ ಪುಳಿನವ
    ಸಾರಿ ಕ್ರೀಡಿಸುತಿರುವುದು ಸಖಿಯರು
ನಳಿನಾಕ್ಷನನರಸುವರೀಗ ವನದೊಳು
    ಬಾರೇ ಸಖಿ ಬಾರೇ

ಇಂದಿರೆಯುರಸನು ಮರೆಯಿಂದೆ ಮನಗಳ
    ಸೂರೆಗೊಳ್ಳುತ ಕೊಳಲನು ನುಡಿಸಲು
ಸುಂದರಿಯರು ಕೇಳಿ ಮೆಯ್ಮರೆದಿರುವರು
    ಬಾರೇ ಸಖಿ ಬಾರೇ

ಬಾರೇ ಸಖಿ ಬಾ ಯಮುನೆಯ ಪುಳಿನವ
ಸಾರುವ ಮುಸವಾರೆ ಕೊಳಲಿನ ಗಾನವ
ಹೀರುವ ತಿಂಗಳ ಜತೆಗೆ ಮೆಯ್ಮರೆಯುವ
ಬಾರೇ ಸಖಿ ಬಾರೇ

ಶ್ರೀಕೃಷ್ಣ.—ಇದೇನು ನಮ್ಮ ಸೀಮೆಯ ಹಾಡಿನಂತಿದೆ. ಇದು ಇಲ್ಲಿ ಬಂದದ್ದು ಹೇಗೆ?

ಬಾಣ.—ನೀವು ನಮ್ಮ ರಾಜ್ಯವನ್ನು ಇಂದು ಗೆದ್ದಿರಿ—ನಮ್ಮವರ ಮನಸ್ಸನ್ನು ಮೊದಲೇ ಗೆದ್ದಿರಿ. ಹಿಂದೆ ಒಂದು ಸಮಯದಲ್ಲಿ ಇದನ್ನು ಕೇಳಿ ನಾನು ಕೋಪಿಸಿದೆ. ಈಗ ಅದನ್ನು ಕೇಳಿ ಆನಂದವಾಗುತ್ತಿದೆ.

(ಚಿತ್ರಲೇಖೆ ನಾರದರ ಕಡೆ ನೋಡುತ್ತಿರುವಳು.)

ನಾರದ.—ಔತಣ ಬಂತೇ ಚಿತ್ರಲೇಖಿ.

ಚಿತ್ರ.—ನಾನು ಧನ್ಯಳು.

ಉಷಾ.—ಏನು ಚಿತ್ರಾ ಅದು.

ನಾರದ.—ಅವಳೂ ದ್ವಾರಕೆಗೆ ಬರುವಳು.

ಶ್ರೀಕೃಷ್ಣ.—ಚಿತ್ರಲೇಖೆ ಲೀಲಾವತಿ ಇಬ್ಬರೂ ಬರಬೇಕು. ಉಷೆಗೆ ಜತೆಯವರು ಆವಶ್ಯಕ.

ಬಾಣ.—ಆಗಬಹುದು. ಇನ್ನು ಆರತಿಯಾಗಲಿ.

(ಸುಮಂಗಲಿಯರು ಬಂದು ಆರತಿ ಎತ್ತುವರು.)

(ರಾಗ ಆರಭಿ.)

ಮತ್ಸ್ಯ ಕೂರ್ಮಾದ್ಯವತಾರನಿಗೆ ಶ್ರೀ
ವತ್ಸಲಾಂಛನ ಲೋಕನಾಥನಿಗೆ
ಸಚ್ಚಿದಾನಂದ ಸ್ವರೂಪನಿಗೆ
ಅಚ್ಯುತಾನಂತ ಗೋವಿಂದನಿಗೆ
ಮಂಗಳಂ ಮಂಗಳಂ ||

(ತೆರೆ ಬೀಳುವುದು.)



315—27. ಬೆಂಗಳೂರು ಪ್ರೆಸ್.

ಹುಟ್ಟಿದವೆಂದು ಕವಿಚರಿತಕಾರರು ೨೮೩ ನೇ ಪುಟದಲ್ಲಿ ಹೇಳಿರುವರು. ಇವುಗಳಲ್ಲಿ ೨೨ ನೇ ಮತ್ತು ೯೦ ನೇ ಶಾಸನಗಳೆರಡೂ ಕ್ರಿ. ಶ. ೧೧೮೩ ನೇ ಜನವರಿ ೨೪ ನೇ ತಾರೀಖು ಸೋಮವಾರ ದಲ್ಲಿ ಹುಟ್ಟಿದವುಗಳೆಂದು ನಾನು ಹಿಂದೆಯೇ ಸ್ಪಷ್ಟಮಾಡಿರುವೆನು; ಪೂರ್ವನಿರ್ದಿಷ್ಟವಾದ ನನ್ನ ಪುಸ್ತಕದ ೧೦೦ ನೇ ಪುಟದಲ್ಲಿ ೧೨೮, ೧೨೬ ನೇ ನಂಬರುಗಳನ್ನು ನೋಡಿ.

೬. ಸಿಂಗದೇವನನ್ನು ಕೀರ್ತಿಸುವ ಸೊರಬದ ೧೪೦ ನೇ ಶಾಸನವು ಕವಿಚರಿತಕಾರರು ಹೇಳುವಂತೆ (ಪುಟ ೩೦೫) ಕ್ರಿ. ಶ. ೧೧೯೭ ರಲ್ಲಿ ಹುಟ್ಟಲಿಲ್ಲ; ಅದು ಕ್ರಿ. ಶ. ೧೧೯೮ ನೇ ಜನವರಿ ೨೨ ನೇ ತಾರೀಖು ಶನಿವಾರದಂದು ಹುಟ್ಟಿತು.

೭. ಕವಿನಾಗದೇವನಿಂದ ಬರೆಯಲ್ಪಟ್ಟ ಕಡೂರು ೯೫ ನೇ ಶಾಸನವೂ ಹೀಗೆಯೇ ಕವಿಚರಿತಕಾರರು ಹೇಳಿರುವಂತೆ (ಪುಟ ೩೪೫) ಕ್ರಿ. ಶ. ೧೨೨೪ ರಲ್ಲಿ ಹುಟ್ಟಲಿಲ್ಲ; ಅದು ಕ್ರಿ. ಶ. ೧೨೨೨ ನೇ ಡಿಸೆಂಬರ್ ೨೬ ನೇ ತಾರೀಖು ಸೋಮವಾರದಲ್ಲಿ ಹುಟ್ಟಿತು.

೮. ಶ್ರೀವಿಜಯರ್ ದಶಕೀರ್ತಿದೇವರು ಹೇಳಿದ ಚೆನ್ನಗಿರಿ ೫೨ ನೇ ಶಾಸನವೂ ಕ್ರಿ. ಶ. ೧೨೩೪ ರಲ್ಲಿ (ಪುಟ ೩೫೩ ನ್ನು ನೋಡಿ) ಹುಟ್ಟಲಿಲ್ಲ; ಅದು ಕ್ರಿ. ಶ. ೧೨೩೨ ರ ನವೆಂಬರ್ ೨೪ ನೇ ತಾರೀಖಿನಲ್ಲಿ ಹುಟ್ಟಿತೆಂದು ತೋರುವುದು.

೯. ಜೇರೆಯ ಅಲ್ಲಾಳಬುಧ ಮತ್ತು ದಾಮೋದರರು ಹೇಳಿದ ಚಿಕ್ಕಮಗಳೂರು ೨೦ ನೇ ಶಾಸನವೂ ಹೀಗೆಯೇ ಕ್ರಿ. ಶ. ೧೨೪೯ ರಲ್ಲಿ ಹುಟ್ಟಲಿಲ್ಲ. (ಪುಟ ೩೮೦ ನ್ನು ನೋಡಿ); ಅದು ಕ್ರಿ. ಶ. ೧೨೪೮ ನೇ ಫೆಬ್ರುವರಿ ೧೯ ನೇ ತಾರೀಖು ಶುಕ್ರವಾರದಂದು ಹುಟ್ಟಿತು.

ಹೀಗೆಯೇ ಗುಣಗಳ್ಳ ನಾಗವರ್ಮನನ್ನು ಹೊಗಳುವ (೮೭ ನೇ ಪುಟವನ್ನು ನೋಡಿ) ಶಿಕಾರಿಪುರದ ೧೨೯ ನೇ ಶಾಸನವೂ, ಮಹಾಪ್ರಭು ಕೇಶಿರಾಜನನ್ನು ಹೊಗಳುವ (೧೨೯ ನೇ ಪುಟವನ್ನು ನೋಡಿ) ಚೆನ್ನಗಿರಿಯ ೭೧ ನೇ ಶಾಸನವೂ, ಚಿದಾನಂದನಿಂದ ಬರೆಯಲ್ಪಟ್ಟ (ಪುಟ ೩೫೪ ನ್ನು ನೋಡಿ) ಮಂಡ್ಯದ ೧೨೧ ನೇ ಶಾಸನವೂ, ವಿಷ್ಣುದಂಡಾಧಿಪನನ್ನು ಸ್ತುತಿಸುವ ಚಿಕ್ಕಮಗಳೂರ ೧೩೭ ನೇ ಶಾಸನವೂ (ಪುಟ ೧೩೭ ನ್ನು ನೋಡಿ) ಮತ್ತು ಜನ್ನನು ಹೇಳಿದ ತರೀಕೆರೆ ೪೫ ನೇ ಶಾಸನವೂ (ಪುಟ ೩೩೭ ನ್ನು ನೋಡಿ) ಕವಿಚರಿತಕಾರರು ಹೇಳಿರುವಂತೆ ಕ್ರಿ.ಶ. ೧೦೭೧, ೧೧೨೪, ೧೨೩೪, ೧೧೩೦ ಮತ್ತು ೧೧೯೭ ರಲ್ಲಿ ಹುಟ್ಟಲಿಲ್ಲ. ಇವು ಕ್ರಮವಾಗಿ ಕ್ರಿ. ಶ. ೧೦೭೨ ನೇ ಜನವರಿ ೨೩ ನೇ ತಾರೀಖು ಸೋಮವಾರದಲ್ಲಿಯೂ, ೧೧೨೧ನೇ ಡಿಸೆಂಬರ್ ೨೬ ನೇ ತಾರೀಖು ಸೋಮವಾರದಲ್ಲಿಯೂ, ೧೨೩೦ ನೆಯ ಏಪ್ರಿಲ್ ೧೫ ನೇ ತಾರೀಖು ಸೋಮವಾರದಲ್ಲಿಯೂ, ೧೧೨೯ ನೇ ಮಾರ್ಚಿ ೧ ನೇ ತಾರೀಖು ಬುಧವಾರದಲ್ಲಿಯೂ ಮತ್ತು ೧೧೯೫ ನೇ ಡಿಸೆಂಬರ್ ೨೫ ನೇ ತಾರೀಖು ಸೋಮವಾರದಲ್ಲಿಯೂ ಹುಟ್ಟಿದವು.

---

# ೧೦. ರುದ್ರಭಟ್ಟ

ಜಗನ್ನಾಥವಿಜಯದ ಕರ್ತೃವಾದ ಈ ರುದ್ರಭಟ್ಟನು ಕ್ರಿ. ಶ. ೧೭ ನೆಯ ಶತಮಾನದ ಅಂತ್ಯಭಾಗದಲ್ಲಿ ತನ್ನ ಗ್ರಂಥವನ್ನು ಬರೆದನೆಂದೂ ರಾಜಶೇಖರವಿಳಾಸದ ಕರ್ತೃವಾದ ಷಡಕ್ಷರಿಯೂ ಮತ್ತು ಜೈಮಿನಿಭಾರತದ ಕರ್ತೃವಾದ ಲಕ್ಷ್ಮೀಶ ಕವಿಯೂ ಅದೇ ಕಾಲದಲ್ಲಿಯೇ ಜೀವಿಸಿದ್ದರೆಂದೂ ಒಂದು ಪ್ರತೀತಿ ಉಂಟು. ಈ ಪ್ರತೀತಿಯು ಸುತರಾಂ ಅಶ್ರದ್ಧೇಯವೆಂಬುದನ್ನು ಕವಿಚರಿತಕಾರರು (ಕವಿಚರಿತೆ I, ೨೧೦) ವ್ಯಕ್ತಗೊಳಿಸಿ, ಈ ಕವಿಯು ಸುಮಾರು ೧೧೮೦ ರಲ್ಲಿ ಇದ್ದಿರಬೇಕೆಂದು ಹೇಳಿ ಇದಕ್ಕೆ ಆಧಾರಭೂತಗಳಾದ ಕಾರಣಗಳನ್ನು ಹೀಗೆಂದು ಬರೆದಿರುವರು :—

“ ಈ ಕವಿ ಸುಮಾರು 1180 ರಲ್ಲಿದ್ದಿರಬೇಕೆಂದು ಊಹಿಸುವುದಕ್ಕೆ ಪ್ರಬಲವಾದ ಕಾರಣಗಳು ದೊರೆತಿವೆ.

ಮಲ್ಲಿಕಾರ್ಜುನನು (ಸು. 1245) ತನ್ನ ಸೂಕ್ತಿಸುಧಾರ್ಣವದಲ್ಲಿ ಜಗನ್ನಾಥವಿಜಯದಿಂದ ಅನೇಕ ಪದ್ಯಗಳನ್ನು ಉದ್ಧರಿಸಿ ಬರೆದಿರುವುದರಿಂದ ಈ ಕವಿ 1245 ಕ್ಕೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ. * ಅಲ್ಲದೆ ಮಲ್ಲಿಕಾರ್ಜುನನು ಅನುವಾದ ಮಾಡುವ ದೇವಕವಿಯ (ಸು. 1200) ಕುಸುಮಾವಳೀ ಗ್ರಂಥದಲ್ಲಿ ರುದ್ರಭಟ್ಟನ ಹೆಸರು ಪೂರ್ವಕವಿಗಳ ಗೋಷ್ಠಿಯಲ್ಲಿ ಉಕ್ತವಾಗಿರುವುದರಿಂದ ಈತನು 1345 ಕ್ಕಿಂತ ಬಹಳ ಹಿಂದೆಯೇ ಇದ್ದಿರಬೇಕು. ಮತ್ತು ಇವನು ಕರ್ಣಪಾರ್ಯನನ್ನು (ಸು. 1140) ಸ್ತುತಿಸುವುದರಿಂದ 1140 ಕ್ಕೆ ಈಚೆ ಇದ್ದಿರಬೇಕು. ಈತನು 1140 ರಿಂದ 1245 ರೊಳಗಾಗಿ ವೀರಬಲ್ಲಾಳನ ಆಳಿಕೆಯಲ್ಲಿ ಈ ಗ್ರಂಥವನ್ನು ಬರೆದನೆಂದು ಅವನ ಗ್ರಂಥದಿಂದಲೇ ತಿಳಿಯುತ್ತದೆ. *

(1) ‘ ಚಂದ್ರಮೌಳಿಪ್ರಮುಖನಿಖಿಲವಿದ್ವಜ್ಜನಂ ಮೆಚ್ಚೆ ಪೇಳ್ದೆಂ ’

ಎಂಬುದರಿಂದ ಈ ಗ್ರಂಥರಚನಾಕಾಲದಲ್ಲಿ ಪ್ರಸಿದ್ಧನಾದ ಚಂದ್ರಮೌಳಿಯೆಂಬೊಬ್ಬ ವಿದ್ವಾಂಸನು ಇದ್ದಂತೆ ತಿಳಿಯುತ್ತದೆ. ಚಂದ್ರಮೌಳಿಯೆಂಬ ಹೆಸರುಳ್ಳ ವಿದ್ವಾಂಸನಾದ ಒಬ್ಬ ಬ್ರಾಹ್ಮಣನು

---

* * ಎರಡನೆಯ ಮುದ್ರಣದಲ್ಲಿ ಈ ವಾಕ್ಯಗಳ ಬದಲು ‘ ಅಲ್ಲದೆ ದೇವಕವಿ (ಸು. 1200) ತನ್ನ ಕುಸುಮಾವಳಿಯಲ್ಲಿ ರುದ್ರಭಟ್ಟನನ್ನೂ ಪೂರ್ವಕವಿಗಳ ಗೋಷ್ಠಿಯಲ್ಲಿ ಸೇರಿಸಿ ಸ್ತುತಿಸುವುದರಿಂದ ಈತನು 1200 ಕ್ಕೆ ಹಿಂದೆ ಇದ್ದಿರಬೇಕು. ಇವನು ಕರ್ಣಪಾರ್ಯನನ್ನು (ಸು. 1140) ಸ್ತುತಿಸುವುದರಿಂದ 1140 ಕ್ಕೆ ಈಚೆ ಇದ್ದಿರಬೇಕು. ಆದುದರಿಂದ ಈ ಕವಿ 1140 ಕ್ಕೆ ಈಚೆಯೂ 1200 ಕ್ಕೆ ಹಿಂದೆಯೂ ಇದ್ದಿರಬೇಕೆಂಬುದು ಸ್ಪಷ್ಟವಾಗುತ್ತದೆ. ಇವನು 1173 ರಿಂದ 1220 ರ ವರಿಗೆ ರಾಜ್ಯಭಾರಮಾಡಿದ ವೀರಬಲ್ಲಾಳನ ಕಾಲದಲ್ಲಿ ಈ ಗ್ರಂಥವನ್ನು ಬರೆದನೆಂದು ಅವನ ಗ್ರಂಥದಿಂದಲೇ ತಿಳಿಯುತ್ತದೆ ’ ಎಂದು ಇದೆ.

ವೀರಬಿಲ್ಲಾಳನಲ್ಲಿ (1172-1219)‡ ಮಂತ್ರಿಯಾಗಿದ್ದಂತೆ 1182† ರಲ್ಲಿ ಬರೆದ ಶ್ರ. ಬೆ. 124 ನೆಯ ಶಾಸನದಲ್ಲಿಯ........ಪದ್ಯಗಳಿಂದ ತಿಳಿಯುತ್ತದೆ.

(2) ಈತನು ಬ್ರಹ್ಮ ರುದ್ರ ಸೂರ್ಯರನ್ನು ಸ್ತುತಿಸುವ ಆದಿಪದ್ಯಗಳಲ್ಲಿ ಆದಿಪಂಪ ರನ್ನರಂತೆಯೇ ಶ್ಲೇಷೆಯಿಂದ ತನ್ನ ಸ್ವಾಮಿಯನ್ನೂ ಕೂಡ ಸ್ತುತಿಸುವಂತೆ ತೋರುತ್ತದೆ. ಮೂರನೆಯ ಪದ್ಯದಲ್ಲಿ ರುದ್ರನಿಗೂ ತನ್ನ ರಾಜನಿಗೂ ಹೊಂದುವಂತೆ 'ಅರಿಕಾಮಧ್ವಂಸಿ' 'ರಾಜರಾಜಪ್ರತಿಷ್ಠಾನಿರತಂ' 'ಉಮಾಕಾಮಿನೀಜೀವಿತೇಶಂ' ಎಂಬ ವಿಶೇಷಣಗಳನ್ನು ಪ್ರಯೋಗಿಸಿದ್ದಾನೆ. ವೀರಬಲ್ಲಾಳನು ಉಚ್ಚಂಗಿ ಕೋಟೆಯನ್ನು ಸ್ವಾಧೀನಪಡಿಸಿಕೊಂಡು ಅಲ್ಲಿಯ ರಾಜನಾದ ಕಾಮನನ್ನು ಸೆರೆ ಹಿಡಿದಂತೆ ಮೇಲೆ ಹೇಳಿದ ಶಾಸನದ—

ಚಿರಕಾಲಂ ರಿಪುಗಳ್ಗಸಾಧ್ಯಮೆನಿಸಿರ್ದುಚ್ಚಂಗಿಯಂ ಮುತ್ತಿ ದು |
ರ್ಧರತೇಜೋನಿಧಿ ದೂಳಿಗೋಂಟೆಯನೆ ಕೊಂಡಾ ಕಾಮದೇವಾವನೀ ||
ಶ್ವರನಂ ಸಂದೊಡೆಯಕ್ಷಿತೀಶ್ವರನಸಾ ಭಂಡಾರಮಂ ಸ್ತ್ರೀಯರಂ
ತುರಗವ್ರಾತಮುಮಂ ಸಮಂತು ಪಿಡಿದಂ ಬಲ್ಲಾಳಭೂಪಾಳಕಂ ||

ಎಂಬ ಪದ್ಯದಿಂದ ಗೊತ್ತಾಗುತ್ತದೆ.

ಬಲ್ಲಾಳರಾಜರಿಗೆ § 'ಚೋಳರಾಜಪ್ರತಿಷ್ಠಾಚಾರ್ಯ' ಎಂಬ ಬಿರುದು ಅನೇಕ ಶಾಸನಗಳಲ್ಲಿ ದೊರೆಯುತ್ತದೆ. * ರಾಜರಾಜ ಎಂಬ ಹೆಸರು ಚೋಳರಲ್ಲಿಯೇ ವಿಶೇಷವಾಗಿದೆ. *

ವೀರಬಲ್ಲಾಳನಿಗೆ ಉಮಾದೇವಿಯೆಂಬವಳು ಮಹಿಷಿಯಾಗಿದ್ದಂತೆ ಅನೇಕ ಶಾಸನಗಳಿಂದ (ಅರಸಿಕೆರೆ—40, 77, 86, 90, 93 ; ಚನ್ನರಾಯಪಟ್ಟಣ—172) ತಿಳಿಯಬರುತ್ತದೆ.

ಆದುದರಿಂದ ಈ ವಿಶೇಷಣಗಳು ವೀರಬಲ್ಲಾಳನಿಗೆಯೇ ಅನ್ವಯಿಸುತ್ತವೆ. ಈ ಕಾರಣದಿಂದ ಕವಿ ಹೇಳುವ ಚಂದ್ರಮೌಳಿ ಈ ದೊರೆಯ ಮಂತ್ರಿಯಾದ ಚಂದ್ರಮೌಳಿಯೇ ಎಂಬುದರಲ್ಲಿ ಸಂಶಯವಿಲ್ಲ.

ಈ ಕಾರಣಗಳಿಂದ ರುದ್ರಭಟ್ಟನು ವೀರಬಲ್ಲಾಳನ ಕಾಲದಲ್ಲಿ ಸುಮಾರು 1180 ರಲ್ಲಿದ್ದಿರಬೇಕು." (ಕವಿಚರಿತೆ 1, ೨೧೧, ೨೧೨)

ಮಲ್ಲಿಕಾರ್ಜುನನು ತನ್ನ ಸೂಕ್ತಿಸುಧಾರ್ಣವದಲ್ಲಿ ಜಗನ್ನಾಥವಿಜಯದಿಂದ ಅನೇಕ ಪದ್ಯಗಳನ್ನು ಉದ್ಧರಿಸಿರುವುದರಿಂದ ಅದರ ಕರ್ತೃವಾದ ರುದ್ರಭಟ್ಟನು ಆ ಸೂಕ್ತಿಸುಧಾರ್ಣವವು ಬರೆಯಲ್ಪಟ್ಟ ಕಾಲಕ್ಕಿಂತ ಎಂದರೆ ಸುಮಾರು ಕ್ರಿ.ಶ. ೧೨೬೩ ಕ್ಕಿಂತ ಹಿಂದೆಯೇ ಇದ್ದಿರಬೇಕೆಂಬ ಕವಿಚರಿತಕಾರರ ಅಭಿಪ್ರಾಯವು ಸರ್ವರಿಂದಲೂ ಗ್ರಾಹ್ಯವಾಗಿಯೇ ಇರುವುದು. ಅವನು ೧೧೮೦ ಕ್ಕಿಂತ

‡ '(1172-1219)' ಎಂಬುದು ಎರಡನೆಯ ಮುದ್ರಣದಲ್ಲಿ ಇಲ್ಲ.

† ಎರಡನೆಯ ಮುದ್ರಣದಲ್ಲಿ '1182' ಎಂಬುದರ ಸ್ಥಾನದಲ್ಲಿ '1181' ಎಂದು ಇದೆ.

§ ಈ ಪದದ ಬದಲು ಎರಡನೇ ಮುದ್ರಣದಲ್ಲಿ 'ಹೊಯ್ಸಳರಾಜರಿಗೆ' ಎಂದು ಇದೆ.

* * ಈ ವಾಕ್ಯದ ಬದಲು ಎರಡನೆಯ ಮುದ್ರಣದಲ್ಲಿ 'ರಾಜರಾಜ ಎಂಬ ಹೆಸರುಳ್ಳ ಮೂವರು ಚೋಳರಾಜರಿದ್ದರು. ಇವರಲ್ಲಿ 3 ನೆಯವನು ಹೊಯ್ಸಳರಾಜರ ಸಹಾಯದಿಂದ ಕಳೆದುಕೊಂಡಿದ್ದ ಸಿಂಹಾಸನವನ್ನು ಪುನಃ ಪಡೆದನು' ಎಂದು ಇದೆ.

ಈಚೆ ಇದ್ದಿರಬೇಕೆಂಬುದನ್ನೂ, ಅವನು ೧೨೦೦ ಕ್ಕಿಂತ ಹಿಂದೆ ಇದ್ದಿರಬೇಕೆಂಬುದನ್ನೂ ಸ್ಥಾಪಿಸುವುದಕ್ಕಾಗಿ ಕವಿಚರಿತಕಾರರು ಹೇಳಿರುವ ಕಾರಣಗಳಾದರೆ ಇಷ್ಟು ಸಮರ್ಪಕವಾಗಿಲ್ಲ. ಕಣ್ಣಪ ಅಥವಾ ಕರ್ಣಪಾರ್ಯ ಎಂಬ ಹೆಸರಿನ ಕವಿಗಳು ಇಬ್ಬರಿದ್ದರೆಂದೂ ಇವರಲ್ಲಿ ಒಬ್ಬನು ಕ್ರಿ ಶ. ೧೦೪೨ ಕ್ಕಿಂತ ಹಿಂದೆಯೂ ಇನ್ನೊಬ್ಬನು ಸುಮಾರು ಕ್ರಿ.ಶ. ೧೧೫೩-೧೧೭೪ ರಲ್ಲಿಯೂ ತನ್ನ ಕೃತಿಯನ್ನು ಬರೆದನೆಂದೂ ನಾವು ಮೇಲೆ ವ್ಯಕ್ತಮಾಡಿರುವೆವಷ್ಟೆ. ರುದ್ರಭಟ್ಟನು ಹೊಗಳಿರುವ ಕಣ್ಣಪನು ಇವರಿಬ್ಬರಲ್ಲಿ ಇಂಥವನೇ ಎಂದು ನಮಗೆ ಕಂಡುಹಿಡಿಯುವುದಕ್ಕೆ ಆಗುವುದಿಲ್ಲವಾದ್ದರಿಂದ ರುದ್ರಭಟ್ಟನು ೧೧೪೦ ಕ್ಕಿಂತ ಈಚೆಯೇ ಇದ್ದಿರಬೇಕೆಂದೂ ಅದರಿಂದ ಹಿಂದೆ ಇದ್ದಿರಲಾರನೆಂದೂ ನಮಗೆ ಹೇಳುವುದಕ್ಕಾಗುವುದಿಲ್ಲ. ಹೀಗೆಯೇ ದೇವಕವಿಯೂ ಕೂಡ ೧೨೦೦ರಲ್ಲಿ ಇರಲಿಲ್ಲವೆಂದೂ ಸುಮಾರು ೧೨೫೦ ರಲ್ಲಿ ಇದ್ದನೆಂದೂ ನಾವು ಮುಂದೆ ವ್ಯಕ್ತಪಡಿಸುವೆವಾಗಿ, ಅವನಿಂದ ಸ್ತುತನಾದ ರುದ್ರಭಟ್ಟನು ೧೨೫೦ ಕ್ಕಿಂತ ಹಿಂದೆ ಇದ್ದನೆಂದು ಸಿದ್ಧವಾಗುವುದೇ ಹೊರತು ೧೨೦೦ ಕ್ಕಿಂತ ಹಿಂದೆ ಇದ್ದನೆಂದು ಸಿದ್ಧವಾಗುವುದಿಲ್ಲ. ಆದುದರಿಂದ ರುದ್ರಭಟ್ಟನು ೧೨೫೫ ಕ್ಕಿಂತ ಹಿಂದೆ ಯಾವ ಕಾಲದಲ್ಲಿ ಜೀವಿಸಿದ್ದನೆಂಬುದನ್ನು ಕಂಡುಹಿಡಿಯುವುದಕ್ಕಾಗಿ ನಾವು ಹೊಸದಾಗಿ ಪ್ರಯತ್ನವನ್ನು ಮಾಡಬೇಕಾಗಿರುವುದು.

ಇದಕ್ಕಾಗಿ ಕವಿಚರಿತಕಾರರು ಅನುಸರಿಸಿರುವ ಮಾರ್ಗವನ್ನೇ ನಾವೂ ಅನುಸರಿಸೋಣ. ಆದಿಸಂಪರನ್ನರಂತೆಯೇ ರುದ್ರಭಟ್ಟನೂ ಬ್ರಹ್ಮರುದ್ರಸೂರ್ಯರನ್ನು ಸ್ತುತಿಸುವ ತನ್ನ ಆದಿಪದ್ಯಗಳಲ್ಲಿ ಶ್ಲೇಷೆಯಿಂದ ತನ್ನ ಸ್ವಾಮಿಯನ್ನೂ ಸ್ತುತಿಸಿರುವನೆಂದೂ ರುದ್ರಭಟ್ಟನಿಂದ ಕೀರ್ತಿತನಾದ ಚಂದ್ರಮೌಳಿಯೆಂಬವನು ಹೊಯ್ಸಳ ವೀರಬಲ್ಲಾಳನ ಮಂತ್ರಿಯಾಗಿದ್ದ ಚಂದ್ರಮೌಳಿಯೇ† ಎಂದೂ ರುದ್ರಭಟ್ಟನಿಂದ

---

† ಈ ಚಂದ್ರಮೌಳಿಯು ವೀರಬಲ್ಲಾಳನ ಬಳಿಯಲ್ಲಿ ಮಹಾಪ್ರಧಾನನೂ ಮನೆವೆಗ್ಗಡೆಯೂ ಆಗಿದ್ದನೆಂದು ಕ್ರಿ. ಶ. ೧೧೮೬ ನೇ ಮೇ ೨೬ ನೇ ತಾರೀಖು ಸೋಮವಾರದಂದು ಹುಟ್ಟಿದ ಅರಶೀಕೆರೆ ೧೨೭ ನೆಯ ಶಾಸನದಿಂದ ತಿಳಿದುಬರುವುದು.

ಈ ಶಾಸನವು ಪಶುಪತಿಯೆಂಬವನಿಂದ ಹೇಳಲ್ಪಟ್ಟದ್ದು. ಇದರಲ್ಲಿ ಪ್ರೌಢವಾದ ಶೈಲಿಯಲ್ಲಿ ಬರೆಯಲ್ಪಟ್ಟಿರುವ ಹಲವು ಪದ್ಯಗಳು ಇರುವುವು. ಕವಿಚರಿತಕಾರರು ಇವನ ಚರಿತವನ್ನು ತಮ್ಮ ಗ್ರಂಥದಲ್ಲಿ ಸೇರಿಸದೆ ಇರುವುದಕ್ಕೆ ಕಾರಣವೇನೆಂಬುದು ನಮಗೆ ತಿಳಿಯದು.

ಹೀಗೆಯೇ ಕ್ರಿ. ಶ. ೧೧೮೪ ನೇ ಡಿಸೆಂಬರ್ ೨೫ ನೇ ತಾರೀಖು ಮಂಗಳವಾರದಲ್ಲಿ ಹುಟ್ಟಿದ ತರೀಕೆರೆ ೨೦ ನೇ ಶಾಸನದ ಅಂತ್ಯದಲ್ಲಿ 'ಜೊಂಬಣಪಂಡಿತರ ಕವಿತೆ' ಎಂದು ಇರುವುದು. ಈ ಶಾಸನದಲ್ಲಾದರೆ ಯಾವ ಪದ್ಯವೂ ಇಲ್ಲವಾದುದರಿಂದ ಈ ಪಂಡಿತನ ಕೃತಿಯು ಯಾವುದೆಂಬುದನ್ನು ನಿರ್ಧರಿಸುವುದೇ ಕಷ್ಟವಾಗಿರುವುದು.

ಪ್ರಯುಕ್ತವಾದ ‘ ಅರಿಕಾಮಧ್ವಂಸಿ,’ ‘ ರಾಜರಾಜಪ್ರತಿಷ್ಠಾನಿರತಂ ’ ‘ ಉಮಾಕಾಮಿನೀಜೀವಿತೇಶಂ ’ ಎಂಬ ವಿಶೇಷಣಗಳು ರುದ್ರನಿಗೂ ರುದ್ರಭಟ್ಟನ ಸ್ವಾಮಿಯಾದ ವೀರಬಲ್ಲಾಳನಿಗೂ ಇಬ್ಬರಿಗೂ ಹೊಂದುವುವೆಂದೂ * ಕವಿಚರಿತಕಾರರೇ ಹೇಳಿರುವರಷ್ಟೆ. ಇಷ್ಟು ಮಾತ್ರವೇ ಅಲ್ಲ ; ಎರಡನೆಯ ಪದ್ಯದಲ್ಲಿರುವ ‘ ಪರಮೈಶ್ವರ್ಯಾಸ್ಪದಂ ’ ಎಂಬ ವಿಶೇಷಣವೂ, ಮೂರನೆಯ ಪದ್ಯದಲ್ಲಿರುವ ‘ ಅರಿಕುಮುದಾಭೋಗವಿಧ್ವಂಸಿ ’ ಎಂಬ ವಿಶೇಷಣವೂ, ಗಣಪತಿಯನ್ನು ಸ್ತುತಿಸುವ ನಾಲ್ಕನೆಯ† ಪದ್ಯದಲ್ಲಿರುವ ‘ ಪದ್ಮಾನುಷಂಗಿತ್ವಂ ’ ಎಂಬ ಪದವೂ ಕೂಡ ಶ್ಲೇಷೆಯಿಂದ ರುದ್ರಭಟ್ಟನ ಸ್ವಾಮಿಯಾದ ವೀರಬಲ್ಲಾಳನನ್ನೇ ನಿರ್ದೇಶಿಸುವುವೆಂದು ನಮಗೆ ತೋರುವುದು.

---

* ಈರೀತಿಯಾಗಿ ರುದ್ರನನ್ನೂ ವೀರಬಲ್ಲಾಳನನ್ನೂ ಶ್ಲೇಷೆಯ ಮೂಲಕ ಹೋಲಿಸುವ ಪದ್ಯಗಳು ಮೈಸೂರು ದೇಶದ ಶಾಸನಗಳಲ್ಲಿಯೂ (ಎ.ಪಿ. ಕರ್ಣಾಟಿಕ) ಕೆಲವು ದೊರೆಯುವುವು. ಅರಶೀಕೆರೆಯ ೭೭ ನೇ ಶಾಸನದಲ್ಲಿರುವ—

ಬುಧನಂತಿಳಾವರಂ ವಾ | ರಿಧಿಯಂತೆ ವಿಶಾಲವಿಲಸದಷಡಕ್ಷೀಣಂ ||
ಮಧುಸಖನಂತಸಮಾಸ್ತ್ರಂ | ಸುಧಾಂಶುಧರನಂತುಮಾಧವಂ ಬಲ್ಲಾಳಂ ||

ಎಂಬ ಪದ್ಯವನ್ನೂ, ನಾಗಮಂಗಲದ ೨೯ ನೆಯ ಶಾಸನದ (ಈ ಶಾಸನವು ವೀರಬಲ್ಲಾಳನ ಕಾಲದಲ್ಲಿ ಕ್ರಿ.ಶ. ೧೨೧೮ ರಲ್ಲಿ ಹುಟ್ಟಿದ್ದು) ಉಪಕ್ರಮದಲ್ಲಿರುವ—

ಶ್ರೀಮನ್ಮಹೇಶ್ವರಮಹೀಶ್ವರಚಾರುಹಸ್ತಂ
ಸೋಮಾರ್ಧಶೇಖರಮನೇಕಮುನೀಂದ್ರವಂದ್ಯಂ |
ಕಾಮಪ್ರಭಂಜನಮನಂಜನನಿತ್ಯರೂಪಂ
ಶ್ರೀಮಲ್ಲಿಕಾರ್ಜುನಮುಮಾರಮಣಂ ನಮಾಮಿ ||

ಎಂಬ ಪದ್ಯವನ್ನೂ ನೋಡಿ. ಈ ಶ್ಲೋಕದಲ್ಲಿರುವ ಮಹೇಶ್ವರಂ, ಅಹೀಶ್ವರಚಾರುಹಸ್ತಂ, ಕಾಮಪ್ರಭಂಜನಂ, ಉಮಾರಮಣಂ ಎಂಬ ವಿಶೇಷಣಗಳು ಜಗನ್ನಾಥವಿಜಯದ ಆದ್ಯಪದ್ಯಗಳಲ್ಲಿರುವ ಪರಮೈಶ್ವರ್ಯಾಸ್ಪದಂ, ಉಲ್ಲಸದಹೀನಾಲಂಕೃತಂ, ನಾಗವ್ರಜಮಯಕಟಕಂ, ಅರಿಕಾಮಧ್ವಂಸಿ, ಉಮಾಕಾಮಿನೀಜೀವಿತೇಶಂ ಎಂಬ ಪದಗಳಂತೆ ಶಿವನಿಗೂ ಬಲ್ಲಾಳನಿಗೂ ಇಬ್ಬರಿಗೂ ಅನ್ವಯಿಸುವುವು.

† ಬ್ರಹ್ಮರುದ್ರಸೂರ್ಯರನ್ನು ಸ್ತುತಿಸುವ ಮೊದಲು ಮೂರು ಪದ್ಯಗಳಲ್ಲಿ ರುದ್ರಭಟ್ಟನು ಶ್ಲೇಷೆಯಿಂದ ತನ್ನ ಸ್ವಾಮಿಯಾದ ವೀರಬಲ್ಲಾಳನನ್ನು ಸ್ತುತಿಸಿರುವನೆಂದು ಕವಿಚರಿತಕಾರರು ಹೇಳಿರುವರಷ್ಟೆ. ಗಣಪತಿಸ್ತೋತ್ರರೂಪವಾದ ನಾಲ್ಕನೆಯ ಪದ್ಯದಲ್ಲಿಯೂ ಅವನು ಹೀಗೆಯೇ ಮಾಡಿರುವನೆಂದು ನಮಗೆ ತೋರುವುದು.

ಈ ೨, ೩, ೪ ನೆಯ ಪದ್ಯಗಳು ಈ ರೀತಿಯಾಗಿರುವುವು:

ಅರಿಕಾಮಧ್ವಂಸಿ ನಾಗವ್ರಜಮಯಕಟಕಂ ರಾಜರಾಜಪ್ರತಿಷ್ಠಾ |
ನಿರತಂ ಲೀಲಾಕ್ರಮೋದಂಚಿತನಿರವಧಿಗಾಂಗೇಯಕಂ ದ್ವಿಟ್ಪುರಧ್ವಂ ||

'ಅರಿಕಾಮಧ್ವಂಸಿ' ಎಂಬ ಪದವು ವೀರಬಲ್ಲಾಳನು ಉಚ್ಚಂಗಿಯ ಕೋಟೆಗೆ ಅಧೀಶ್ವರನಾದ ಕಾಮದೇವನೊಡನೆ ಕಾದಿ ಅವನನ್ನು ಸೆರೆಹಿಡಿದನೆಂಬ ವಿಷಯವನ್ನು ಸೂಚಿಸುವುದೆಂದು ಕವಿಚರಿತಕಾರರು ಮೇಲೆ ಹೇಳಿರುವರಷ್ಟೆ. ಈ ಉಚ್ಚಂಗಿಕೋಟೆಯ ಗ್ರಹಣವೂ ಅದರ ಒಡೆಯನಾದ ಕಾಮದೇವನ ಪರಾಭವವೂ ಕ್ರಿ. ಶ. ೧೧೯೬ ನೆಯ ವರ್ಷದಿಂದ ಈಚೆಗೆ ಆದುವೆಂದು ಡಾಕ್ಟರ್ ಫ್ಲೀಟ್‌ರವರು ಮೇಲೆ ಹೇಳಿದ ಗ್ರಂಥದ ೫೦೫ ನೆಯ ಪುಟದಲ್ಲಿ ಬರೆದಿರುವರು. ಈ ಕಾಲಕ್ಕೆ ಹಿಂದೆ ಹುಟ್ಟಿದ ಅನೇಕ ಶಾಸನಗಳಲ್ಲಿ ವೀರಬಲ್ಲಾಳನಿಗೆ ಅಥವಾ ಅವನ ತಂದೆಯಾದ ನರಸಿಂಹನಿಗೆ ಕೊಡಲ್ಪಟ್ಟಿರುವ 'ತಲಕಾಡು–ಕೊಂಗು–ನಂಗಲಿ–ನೊಳಂಬವಾಡಿ–ಬನವಾಸೆ–ಹಾನುಂಗಲ್ಲು–ಗೊಂಡ' 'ಉಚ್ಚಂಗಿಗೊಂಡ' ಎಂಬ ಇವೇ ಮೊದಲಾದ ಬಿರುದುಗಳು ವಸ್ತುತಃ ಅವರ ಪೂರ್ವಿಕನಾದ ವಿಷ್ಣುವರ್ಧನ–ಬಿಟ್ಟಿದೇವನಿಂದ ಉಪಾರ್ಜಿಸಲ್ಪಟ್ಟವಾದುದರಿಂದ ಅವು ಅವನನಂತರ ಅವನ ಮಗನಾದ ನರಸಿಂಹನಿಗೂ, ಮೊಮ್ಮಗನಾದ ವೀರಬಲ್ಲಾಳನಿಗೂ ಸಂಪ್ರದಾಯಾನುಸಾರವಾಗಿ ಹೇಳಲ್ಪಟ್ಟಿರುವುವೇ ಹೊರತು ನರಸಿಂಹನಾಗಲಿ, ವೀರಬಲ್ಲಾಳನಾಗಲಿ ಆ ಆ ಬಿರುದುಗಳನ್ನು ಹೇಳುವ ಶಾಸನಗಳು*

---

ಸರತಕ್ರೋಧಂ ವೃಷಾಂಕಂ ವಿಬುಧನುತನುಮಾಕಾಮಿನೀಜೀವಿತೇಶಂ |
ಪರಮೈಶ್ವರ್ಯಾಸ್ಪದಂ ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿನೇತ್ರಂ ||೨||
ಜನಚಿತ್ತಾಹ್ಲಾದಪಾದಂ ಸಕಲಧರಣಿಭೃನ್ಮಸ್ತಕನ್ಯಸ್ತಮಾಗಿ |
ಪಿನಮುಚ್ಚಂಡಪ್ರತಾಪೋದಯುಮರಿಕುಮುದಾಭೋಗವಿಧ್ವಂಸಿಯಾಗಿ ||
ಪಿನಮುದ್ಯನ್ಮಂಡಲಾಗ್ರಂ ಸಲೆ ಘನಪದವೀಶೋಭೆಯಂ ಪೆರ್ಚಿಸುತ್ತಿ |
ಪಿನವೊಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಶ್ರೀಜಗನ್ನಾಥಸೂರ್ಯಂ ||೩||
ಅರಿರೌದ್ರಂ ಕರದೈರ್ಘ್ಯಮುಲ್ಲಸದಹೀನಾಲಂಕೃತಂ ಮೂರ್ತಿ ಸಾ |
ಕ್ಷರಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ ಸದಾಳಿಪ್ರಿಯಂ ||
ವರದಾನಂ ನತಭದ್ರಲಕ್ಷಣಪದಂ ಪದ್ಮಾನುಷಂಗಿತ್ವಮಾ |
ಗಿರೆ ಪೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ || ||೪||

* 'ಇಂಥ ಶಾಸನಗಳಲ್ಲಿ ಕೆಲವನ್ನು ನಿದರ್ಶನಕ್ಕಾಗಿ ಇಲ್ಲಿ ನಾವು ಉದಾಹರಿಸುವೆವು. ಹೊಯ್ಸಳ ರಾಜನಾದ ಒಂದನೆಯ ನರಸಿಂಹನಿಗೆ ಶ್ರೀರಂಗಪಟ್ಟಣದ ೬೦ ಮತ್ತು ೬೨ ನೆಯ ಶಾಸನಗಳಲ್ಲಿ 'ತಲಕಾಡು--ಕೊಂಗು--ನಂಗಲಿ-ಗಂಗವಾಡಿ--ನೊಳಂಬವಾಡಿ--ಉಚ್ಚಂಗಿ--ಬನವಾಸಿ--ಹಾನುಂಗಲ್ಲು--ಗೊಂಡ' ಎಂಬ ಬಿರುದೂ, ತಿಪ್ಟೂರು ೬೧ ನೆಯ ಶಾಸನದಲ್ಲಿ 'ತಲಕಾಡು-ಕೊಂಗು-ನಂಗಲಿ-ಗಂಗವಾಡಿ-ನೊಳಂಬವಾಡಿ-ಬನವಸೆ-ಹಾನುಂಗಲ್ಲು-ಗೊಂಡ' ಎಂಬ ಬಿರುದೂ, ಗುಬ್ಬಿ ೧೨ ನೆಯ ಶಾಸನದಲ್ಲಿ 'ತಲಕಾಡು-ಗಂಗವಾಡಿ-ಕೊಂಗು-ನಂಗಲಿ-ಬನವಸೆ--ಹಾನುಂಗಲ್ಲು--ಹಲಸಿಗೆ--ಗೊಂಡ' ಎಂಬ ಬಿರುದೂ, ಚಿಕ್ಕನಾಯಕನಹಳ್ಳಿ ೧೮ ನೆಯ ಶಾಸನದಲ್ಲಿ 'ತಲಕಾಡು-ಕೊಂಗು-ನಂಗಲಿ-ಹಾನುಂಗಲುಚ್ಚಂಗಿ-ಬನವಸೆ-ಗೊಂಡ' ಎಂಬ ಬಿರುದೂ, ಗುಬ್ಬಿ ೪೨ ನೆಯ ಶಾಸನದಲ್ಲಿ 'ತಲ

ಹುಟ್ಟಿದ ಕಾಲದಲ್ಲಿ ತಲಕಾಡು, ಕೊಂಗು, ಬನವಾಸೆ, ಹಾನುಂಗಲ್ಲು, ನೊಳಂಬ ವಾಡಿ ಮೊದಲಾದುವುಗಳನ್ನು ಗ್ರಹಿಸಿದ್ದನೆಂದು ನಾವು ಭಾವಿಸಕೂಡದೆಂದೂ ಅವರು ಅಲ್ಲಿ ಹೇಳಿರುವರು.

ಇದು ಸಾಧುವಾದ ಅಭಿಪ್ರಾಯವೆಂದೇ ನಮಗೆ ತೋರುವುದು. ಹೊಯ್ಸಲ ರಾಜನಾದ ಒಂದನೆಯ ನರಸಿಂಹನು ತಲಕಾಡು ಮುಂತಾದ ನಗರಗಳನ್ನು ಗೆದ್ದು ಹಿಡಿದನೆಂದು ನಮಗೆ ತಿಳಿದಂತೆ ಎಲ್ಲಿಯೂ ಹೇಳಿಲ್ಲ. ಅವನ ಮಗನಾದ ವೀರಬಲ್ಲಾಳನು ನೊಳಂಬವಾಡಿ, ಉಚ್ಚಂಗಿ, ಬನವಾಸಿ, ಹಾನುಗಲ್ಲು, ಹಲಸಿಗೆಗಳನ್ನು ವಾಸ್ತವವಾಗಿ ಗ್ರಹಿಸಿದಾಗ್ಯೂ, ಇವನ್ನು ಮೇಲೆ (೯೮ನೇ ಪುಟದ ಟಿಪ್ಪಣಿಯಲ್ಲಿ) ಹೇಳಿದ ಶಾಸನಗಳು ಹುಟ್ಟಿದ ಕಾಲದಲ್ಲಿ ಎಂದರೆ ಕ್ರಿ. ಶ. ೧೧೭೪–೧೧೭೫ ರಲ್ಲಿ ಅವನು ಗೆದ್ದು ಹಿಡಿದಿರಲಿಲ್ಲವೆಂದು ದೃಢವಾಗಿ ಹೇಳಬಹುದು. ತಲಕಾಡನ್ನಂತೂ ಇವನು ಯಾವಾಗಲೂ ಗ್ರಹಿಸಲಿಲ್ಲ. ವಿಷ್ಣುವರ್ಧನ-ಬಿಟ್ಟಿದೇವನು ಆ ನಗರವನ್ನು ತನ್ನ ವಶ ಮಾಡಿಕೊಂಡ ಕಾಲದ ಮೊದಲು ಆ ನಗರವು ಹೊಯ್ಸಲರ ವಶದಲ್ಲಿಯೇ ಇದ್ದುದರಿಂದ ಅದನ್ನು ಅವನ ವಂಶಿಕರು ಪುನಃ ವಶಮಾಡಿಕೊಳ್ಳಬೇಕಾದ ಆವಶ್ಯಕತೆಯು ಯಾವಾಗಲೂ ಒದಗಲಿಲ್ಲ.

ಆದಾಗ್ಯೂ ವೀರಬಲ್ಲಾಳನು ಉಚ್ಚಂಗಿ ಕೋಟೆಯನ್ನು ವಶಮಾಡಿಕೊಂಡದ್ದು ಕ್ರಿ. ಶ. ೧೧೯೬ನೆಯ ವರ್ಷದ ಈಚೆಯೆಂಬ ಡಾ|| ಫ್ಲೀಟ್‌ರವರ ಮೇಲೆ ಹೇಳಿದ ಅಭಿಪ್ರಾಯವು ತಪ್ಪೆಂದು ಕಾಣುವುದು. ಶಕವರ್ಷ ೧೧೦೪ ನೆಯ ಶುಭಕೃತ್ಸಂವತ್ಸರದಲ್ಲಿ ಎಂದರೆ ಕ್ರಿ: ಶ. ೧೧೮೨ ರಲ್ಲಿ ಹುಟ್ಟಿದ ಬೇಲೂರು ೧೩೭ ನೆಯ

---

ಕಾಡು-ಕೊಂಗು-ಗಂಗವಾಡಿ-ನೊಳಂಬವಾಡಿ--ಬನವಸೆ--ಹಾನುಂಗಲ್ಲು--ಹಲಸಿಗೆ--ಬೆಳ್ವೊಲ--ಗೊಂಡ' ಎಂಬ ಬಿರುದೂ, ತುಂಕೂರು ೯ ನೆಯ ಶಾಸನದಲ್ಲಿ 'ತಲಕಾಡು-ಕೊಂಗು-ನಂಗಲಿ-ಗಂಗವಾಡಿ-ನೊಳಂಬವಾಡಿ-ಬನವಸೆ-ಹಾನುಂಗಲ್ಲು-ಹಲಸಿಗೆ-ಬೆಳ್ವೊಲ--ವುಚ್ಚಂಗಿ--ಗೊಂಡ' ಎಂಬ ಬಿರುದೂ ಹೇಳಲ್ಪಟ್ಟಿರುವುವು.

ಹೀಗೆಯೇ ಅವನ ಮಗನಾದ ವೀರಬಲ್ಲಾಳನಿಗೂ ಮೈಸೂರು ೫೮ನೆಯ ಶಾಸನದಲ್ಲಿ (ಇದು ಕ್ರಿ. ಶ. ೧೧೭೪ರಲ್ಲಿ ಹುಟ್ಟಿದ್ದು) 'ತಲಕಾಡು-ಕೊಂಗು-ನಂಗಲಿ-ಕೋಲಾಲ-ಉಚ್ಚಂಗಿ-ಬನವಾಸಿ-ಹಾನುಂಗಲ್ಲು-ಗೊಂಡ' ಎಂಬ ಬಿರುದೂ, ಮೈಸೂರು ೮ನೆಯ ಶಾಸನದಲ್ಲಿ (ಇದೂ ಇದರ ಮುಂದೆ ಹೇಳಲ್ಪಡುವ ಎರಡು ಶಾಸನಗಳೂ ಕ್ರಿ. ಶ. ೧೧೭೫ರಲ್ಲಿ ಹುಟ್ಟಿದವುಗಳು.) 'ತಲಕಾಡು-ಗಂಗವಾಡಿ-ನೊಳಂಬವಾಡಿ-ಹಲಸಿಗೆ-ಹಾನುಂಗಲ್ಲು-ಬನವಸೆ-ಬೆಳ್ವೊಳಂ-ಗೊಂಡ' ಎಂಬ ಬಿರುದೂ, ಶ್ರೀರಂಗಪಟ್ಟಣದ ೧೪೬ ಮತ್ತು ೧೩೭ನೆಯ ಶಾಸನಗಳಲ್ಲಿ 'ತಲಕಾಡು-ಗಂಗವಾಡಿ-ನೊಳಂಬವಾಡಿ-ಬನವಸೆ-ಹಾನುಂಗಲ್ಲು-ಗೊಂಡ', 'ತಲಕಾಡು-ಕೊಂಗು-ನಂಗಲಿ-ನೊಳಂಬವಾಡಿ-ಉಚ್ಚಂಗಿ-ಬನವಸೆ-ಹಾನುಂಗಲ್ಲು-ಹಲಸಿಗೆ-ಗೊಂಡ' ಎಂಬ ಬಿರುದುಗಳೂ ಹೇಳಲ್ಪಟ್ಟಿರುವುವು.

ಶಾಸನದಲ್ಲಿ ವೀರಬಲ್ಲಾಳನು ಉಚ್ಚಂಗಿಕೋಟೆಯನ್ನು ವಶಮಾಡಿಕೊಂಡನೆಂಬ ವಿಷಯವು ಕೀರ್ತಿತವಾಗಿರುವುದಲ್ಲದೆ, ಚಿಕ್ಕನಾಯಕನಹಳ್ಳಿ ೩೬ನೆಯ ಶಾಸನದಲ್ಲಿಯೂ ಕೂಡ 'ಸ್ವಸ್ತಿ ಶ್ರೀಮನ್ಮಹಾಮಂಡಲೇಶ್ವರಂ ತ್ರಿಭುವನಮಲ್ಲ ತಳಕಾಡು-ಕೊಂಗು-ನಂಗಲಿ-ನೊಳಂಬವಾಡಿ-ಬನವಾಸೆ-ಹಾನುಂಗಲುಚ್ಚಂಗಿ-ಹಲಸಿಗೆ-ಹುಲಿಗೆಱೆ-ಬೆಳ್ವಲ-ಗೊಂಡ ಭುಜಬಲ ವೀರಗಂಗನಸಹಾಯಶೂರ ನಿಶ್ಶಂಕಪ್ರತಾಪ ಹೊಯ್ಸಳ ವೀರ ಬಲ್ಲಾಳದೇವರು ಹಿಮಸೇತುಮರ್ಯ್ಯಾದೆಯಾದ ಭೂಮಿಯಂ ದುಷ್ಟನಿಗ್ರಹ ಶಿಷ್ಟ ಪ್ರತಿಪಾಲನಪೂರ್ವಕಂ ಏಕಚ್ಛತ್ರಚ್ಛಾಯೆಯಿಂ ಪ್ರತಿಪಾಲಿಸುತ್ತಂ ದಿಗ್ವಿಜಯಂಗೆಯ್ದು ಪಾಂಡ್ಯನಂ ಗೆಲ್ದುಚ್ಚಂಗಿಯಂ ರಾಜಧಾನಿ ಮಾಡಿ ಸುಖಸಂಕಥಾವಿನೋದದಿಂ ಪೃಥ್ವೀರಾಜ್ಯಂ ಗೆಯುತ್ತಮಿರಲು' ಎಂದು ಪಾಂಡ್ಯನ, ಎಂದರೆ ಉಚ್ಚಂಗಿಯಧಿಪತಿಯಾದ ಪಾಂಡ್ಯವಂಶದ ಕಾಮದೇವನ ಪರಾಭವವೂ ಉಚ್ಚಂಗಿಕೋಟೆಯ ವಶೀಕರಣವೂ ಕೀರ್ತಿಸಲ್ಪಟ್ಟಿರುವುವು. ಇಲ್ಲಿ 'ತಳಕಾಡು-ಕೊಂಗು' ಮೊದಲಾದ ಬಿರುದು ಕುಲಕ್ರಮಾಗತವಾದ ಬಿರುದಾಗಿದ್ದಾಗ್ಯೂ 'ದಿಗ್ವಿಜಯಂಗೆಯ್ದು...' ಇತ್ಯಾದಿ ಪದಗಳು ಬಲ್ಲಾಳನು ದಿಗ್ವಿಜಯವನ್ನು ಮಾಡಿ ತಾನು ಸ್ವಯಂ ಉಚ್ಚಂಗಿಯನ್ನು ವಶಮಾಡಿಕೊಂಡಿದ್ದನೆಂಬ ಅರ್ಥವನ್ನು ಸೂಚಿಸುವುವು. ಈ ಶಾಸನವು ಕ್ರಿ. ಶ. ೧೧೭೭ ನೆಯ ವರ್ಷದ ಸೆಪ್ಟಂಬರ್ ೨೬ ನೆಯ ಸೋಮವಾರದಲ್ಲಿ ಹುಟ್ಟಿದುದಾದ್ದರಿಂದ ಇದೆಲ್ಲವೂ ಆ ಸೆಪ್ಟಂಬರ್ ೨೬ಕ್ಕೆ ಹಿಂದೆ ನಡೆದಿತ್ತೆಂದು ಸ್ಪಷ್ಟವಾಗುವುದು.

ಇದೇ ಕ್ರಿ. ಶ. ೧೧೭೭ ನೆಯ ಮಾರ್ಚಿ ೧೪ ರಲ್ಲಿ ಹುಟ್ಟಿದ ಚಿಕ್ಕನಾಯಕನಹಳ್ಳಿ ೧೩ ನೆಯ ಶಾಸನದಲ್ಲಾದರೆ 'ತಲಕಾಡು-ಕೊಂಗು-ನಂಗಲಿ-ಗಂಗವಾಡಿ-ನೊಳಂಬವಾಡಿ-ಬನವಸೆ-ಹಾನುಂಗಲ್ಲುಚ್ಚಂಗಿ-ಗೊಂಡ' ಬಲ್ಲಾಳದೇವನು ದೋರಸಮುದ್ರದ ನೆಲೆವೀಡಿನಲ್ಲಿ ರಾಜ್ಯವನ್ನು ಗೆಯ್ಯುತ್ತಿದ್ದನೆಂದು ಹೇಳಿರುವುದನ್ನು ಯೋಚಿಸಿದರೆ ಆ ಕಾಲದಲ್ಲಿ ಅವನು ದಿಗ್ವಿಜಯಕ್ಕಾಗಿ ಹೊರಟಿರಲಿಲ್ಲವೆಂದೂ, ಉಚ್ಚಂಗಿಕೋಟೆಯನ್ನು ಅವನು ೧೧೭೭ ನೆಯ ಏಪ್ರೆಲ್-ಸೆಪ್ಟಂಬರು ತಿಂಗಳ ಒಳಗೆ ವಶಮಾಡಿಕೊಂಡನೆಂದೂ ನಾವು ಊಹಿಸಬೇಕಾಗುವುದು.

ಉಚ್ಚಂಗಿಯ ಅಧಿಪತಿಯಾದ ಪಾಂಡ್ಯವಂಶದ ಮಹಾಮಂಡಲೇಶ್ವರ ಕಾಮದೇವನನ್ನಲ್ಲದೆ, ಹಾನುಗಲ್ಲಿನಲ್ಲಿ ರಾಜ್ಯವಾಳುತ್ತಿದ್ದ ಕಾದಂಬ ಮಹಾಮಂಡಲೇಶ್ವರನಾದ ಕಾಮದೇವನೊಬ್ಬನನ್ನು ವೀರಬಲ್ಲಾಳನು ಸುಮಾರು ಕ್ರಿ. ಶ. ೧೧೯೬-೧೧೯೭ ರಲ್ಲಿ ಸೋಲಿಸಿ, ಹಾನುಗಲ್ಲು ಕೋಟೆಯನ್ನು ಹಿಡಿದನು; ಡಾ|| ಫ್ಲೀಟ್‌ರವರ ಮೇಲೆ ಹೇಳಿದ ಪುಸ್ತಕದ ೫೬೩ ನೆಯ ಪುಟವನ್ನು ನೋಡಿ.

‘ಅರಿಕಾಮಧ್ವಂಸಿ’ ಎಂಬ ವೀರಬಲ್ಲಾಳನ ವಿಶೇಷಣದಲ್ಲಿ ರುದ್ರಭಟ್ಟನಿಂದ ಲಕ್ಷೀಕರಿಸಲ್ಪಟ್ಟಿರುವ ಕಾಮನು ಉಚ್ಚಂಗಿಕೋಟೆಯ ಅಧಿಪತಿಯಾದ ಕಾಮನಾಗಿದ್ದಲ್ಲಿ ರುದ್ರಭಟ್ಟನು ತನ್ನ ಗ್ರಂಥವನ್ನು ೧೧೭೭ ಕ್ಕಿಂತ ಈಚೆ ಬರೆದಿರಬೇಕೆಂದು ವ್ಯಕ್ತವಾಗುವುದು. ಈ ಕಾಮನು ಕಾದಂಬಮಹಾಮಂಡಲೇಶ್ವರನಾದ ಕಾಮದೇವನಾಗಿದ್ದ ಪಕ್ಷದಲ್ಲಿ ರುದ್ರಭಟ್ಟನ ಗ್ರಂಥವು ಕ್ರಿ. ಶ. ೧೧೯೬–೧೧೯೭ ಕ್ಕಿಂತ ಈಚೆ ಹುಟ್ಟಿರಬೇಕೆಂದೂ ವ್ಯಕ್ತವಾಗುವುದು.

‘ಉಮಾಕಾಮಿನೀಜೀವಿತೇಶಂ’ ಎಂಬ ವೀರಬಲ್ಲಾಳನ ವಿಶೇಷಣವು ಕವಿಚರಿತಕಾರರು ಹೇಳುವಂತೆ ಅವನಿಗೆ ಉಮಾದೇವಿಯೆಂಬ ರಾಣಿಯಿದ್ದಳೆಂಬುದನ್ನು ಸೂಚಿಸುವುದು. ಆದರೆ ೧೧೮೦ ರಲ್ಲಿ ಈ ಹೆಸರಿನ ರಾಣಿಯು ವೀರಬಲ್ಲಾಳನಿಗೆ ಇರಲಿಲ್ಲ. ಕವಿಚರಿತಕಾರರು ಮೇಲೆ ನಿರ್ದೇಶಿಸಿರುವ ಅರಸೀಕೆರೆ ೪೦ ನೆಯ ಶಾಸನ ಮತ್ತು ೭೭, ೮೫, ೯೦, ೯೩ ನೆಯ ಶಾಸನಗಳೂ ಮತ್ತು ಚನ್ನರಾಯಪಟ್ಟಣದ ೧೭೨ ನೆಯ ಶಾಸನವೂ ಕ್ರಿ. ಶ. ೧೧೮೦ ಕ್ಕಿಂತ ಈಚೆ ಕೆಲವು ಸಂವತ್ಸರಗಳಾದ ನಂತರ, ಎಂದರೆ ಕ್ರಿ. ಶ. ೧೨೦೮ ನೆಯ ಡಿಶಂಬರ್ ೨೩ ರಲ್ಲಿಯೂ, ೧೨೧೯ ನೆಯ ಡಿಸೆಂಬರ್ ೨೨ ರಲ್ಲಿಯೂ, ೧೧೮೬ ನೆಯ ಏಪ್ರಿಲ್ ೨೫ ರಲ್ಲಿಯೂ, ೧೧೮೫ನೆಯ ಡಿಸೆಂಬರ್ ೨೩ ರಲ್ಲಿಯೂ, ೧೧೮೫ ನೆಯ ಡಿಸೆಂಬರ್ ೨೩ ರಲ್ಲಿಯೂ ಮತ್ತು ೧೨೦೯ ನೆಯ ಜುಲೈ ೧೯ ರಲ್ಲಿಯೂ ಕ್ರಮವಾಗಿ ಹುಟ್ಟಿರುವುವು.

ಮೈಸೂರು ದೇಶದ ಶಾಸನಗಳ (ಎಪಿಗ್ರಾಫಿಯ ಕರ್ಣಾಟಕ) ೫ ನೆಯ ಸಂಪುಟದ ಉಪೋದ್ಘಾತದಲ್ಲಿ (ಪುಟ ೨೦) ಮ|| ರೈಸ್‌ರವರು ವೀರಬಲ್ಲಾಳನ ಮಹಿಷಿಯರಾದ ಬಮ್ಮಲದೇವಿ, ಕೇತಲದೇವಿಯರ ಹೆಸರುಗಳು ಇವನ ಆಳಿಕೆಯ ಮೊದಲು ಮೊದಲಿನ ಶಾಸನಗಳಲ್ಲಿ ಕೀರ್ತಿಸಲ್ಪಟ್ಟಿರುವುವೆಂದು ಹೇಳಿ, ಪಟ್ಟಮಹಿಷಿ ಉಮಾದೇವಿಯ ಹೆಸರು ಮೊದಲು ಅರಸೀಕೆರೆಯ ೯೩ ನೆಯ ಶಾಸನದಲ್ಲಿ ಕೀರ್ತಿತವಾಗಿರುವುದೆಂದು ಹೇಳಿರುವರು. ಈ ಶಾಸನವು ಕ್ರಿ. ಶ. ೧೧೮೫ (ನೆಯ ಡಿಸೆಂಬರ್ ೨೩) ರಲ್ಲಿ ಹುಟ್ಟಿದ್ದಾಗಿರುವುದು. ಉಮಾದೇವಿಯ ಹಿಂದೆ ವೀರಬಲ್ಲಾಳನಿಗೆ ಇಬ್ಬರು ಮಹಿಷಿಯರು ಇದ್ದರೆಂದು ಹೇಳಿರುವುದರಿಂದ, ಈ ಉಮಾದೇವಿಯು ಸುಮಾರು ಮೇಲಿನ ಶಾಸನವು ಹುಟ್ಟಿದ ಕಾಲದಲ್ಲಿಯೇ, ಎಂದರೆ ೧೧೮೫ ಅಥವಾ ೧೧೮೪ ರಲ್ಲಿ ವೀರಬಲ್ಲಾಳನಿಗೆ ಮಹಿಷಿಯಾದಳೆಂದೂ, ೧೧೮೦ ರಲ್ಲಿ ಅವಳು ವೀರಬಲ್ಲಾಳನ ರಾಣಿಯಾಗಿರಲಿಲ್ಲವೆಂದೂ ನಾವು ಊಹಿಸಬಹುದು. ಆದುದರಿಂದ ‘ಉಮಾಕಾಮಿನೀಜೀವಿತೇಶಂ’ ಎಂದು ರುದ್ರಭಟ್ಟನು ತನ್ನ ಗ್ರಂಥದಲ್ಲಿ ಕ್ರಿ. ಶ. ೧೧೮೪ ಕ್ಕಿಂತ ಹಿಂದೆ ಪ್ರಾಯಶಃ ಬರೆದಿರಲಾರನು.

'ಪರಮೈಶ್ವರ್ಯಾಸ್ಪದಂ' ಎಂದು ಎರಡನೆಯ ಪದ್ಯದಲ್ಲಿ ಉಪಯೋಗಿಸಲ್ಪಟ್ಟಿರುವ ವಿಶೇಷಣಕ್ಕೆ 'ಪರಮೇಶ್ವರಭಾವಕ್ಕೆ ನೆಲೆ' ಎಂದರೆ, 'ಪರಮೇಶ್ವರನು' ಎಂದು ಅರ್ಥವು. ವೀರಬಲ್ಲಾಳನ ವಿಷಯದಲ್ಲಿ ಈ ಪದವು ಅವನು ಪರಮೇಶ್ವರ ಎಂದರೆ ಚಕ್ರವರ್ತಿಯಾಗಿದ್ದನೆಂಬುದನ್ನು ಬೋಧಿಸುವುದು. ಕ್ರಿ. ಶ. ಸುಮಾರು ೧೧೯೦ ರಲ್ಲಿ ವೀರಬಲ್ಲಾಳನು ಸೇವುಣರಾಜನಾದ ಭಿಲ್ಲಮನೊಡನೆ ಸೊರಟೂರಿನ ಸಮೀಪದಲ್ಲಿ ಯುದ್ಧಮಾಡಿ ಅವನನ್ನು ಸೋಲಿಸಿದನೆಂದು ನಾವು ಮೇಲೆ (ಪುಟ ೧೩) ಹೇಳಿರುವೆವಷ್ಟೆ. ಕ್ರಿ. ಶ. ಸುಮಾರು ೧೧೮೭ ರಲ್ಲಿ ಈ ಭಿಲ್ಲಮನು ಚಾಲುಕ್ಯಚಕ್ರವರ್ತಿಯಾದ ನಾಲ್ಕನೆಯ ಸೋಮೇಶ್ವರನ ಸೈನ್ಯಗಳೊಡನೆ ಕಾದಿ ಅವನ್ನು ಹಿಂದಕ್ಕೆ ಅಟ್ಟಿದನೆಂದೂ ಕೂಡ ನಾವು ಮೇಲೆಯೇ ಹೇಳಿರುವೆವು. ಹೀಗೆ ಚಾಲುಕ್ಯ ಚಕ್ರವರ್ತಿಯ ಸೈನ್ಯಗಳನ್ನು ಸೋಲಿಸಿದನಂತರ * ಭಿಲ್ಲಮನು ಸುಮಾರು ಕ್ರಿ. ಶ. ೧೧೮೭ ರಲ್ಲಿ ಸಮಸ್ತಭುವನಾಶ್ರಯ, ಶ್ರೀ ಪೃಥ್ವಿವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಪರಮಭಟ್ಟಾರಕ, ಪ್ರತಾಪಚಕ್ರವರ್ತಿ ಎಂಬ ಚಕ್ರವರ್ತಿ ಬಿರುದುಗಳನ್ನು† ವಹಿಸಿಕೊಂಡನು. (ಡಾ|| ಫ್ಲೀಟ್‌ರವರ ಮೇಲೆ ಹೇಳಿದ ಪುಸ್ತಕ, ಪುಟ ೫೪೮.)

ಭಿಲ್ಲಮನಂತೆ ವೀರಬಲ್ಲಾಳನೂ ಚಾಲುಕ್ಯಚಕ್ರವರ್ತಿಯ ಸೈನ್ಯಗಳನ್ನು ಕ್ರಿ.ಶ. ೧೧೮೯ ಅಥವಾ ೧೧೯೦ ರಲ್ಲಿ ಸೋಲಿಸಿ ೧೧೯೦ ರಲ್ಲಿ ಈ ಭಿಲ್ಲಮನನ್ನು ಸೋಲಿಸಿ ತದನಂತರ ಸಮಸ್ತಭುವನಾಶ್ರಯ, ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ ಪರಮಭಟ್ಟಾರಕ, ಪ್ರತಾಪ—(ಭುಜಬಲ, ಭುಜಬಲಪ್ರತಾಪ, ಹೊಯ್ಸಳ, ಹೊಯ್ಸಳಪ್ರತಾಪ–) ಚಕ್ರವರ್ತಿ ಎಂಬ ಬಿರುದುಗಳನ್ನು ಕ್ರಿ. ಶ. ೧೧೯೦ ರಲ್ಲಿ ವಹಿಸಿಕೊಂಡನಷ್ಟೆ. (ಮೇಲೆ ೯೨ನೆಯ ಪುಟವನ್ನು ನೋಡಿ.) ಆದುದರಿಂದ ರುದ್ರಭಟ್ಟನು 'ಪರಮೈಶ್ವರ್ಯಾಸ್ಪದಂ' ಎಂಬ ಈ ವಿಶೇಷಣವನ್ನು (ಶ್ಲೇಷೆಯಿಂದ) ವೀರಬಲ್ಲಾಳನ ವಿಷಯದಲ್ಲಿ ಉಪಯೋಗಿಸಿದ ಕಾಲವು, ಎಂದರೆ ಜಗನ್ನಾಥವಿಜಯವನ್ನು ಬರೆದ ಕಾಲವು ಕ್ರಿ. ಶ. ೧೧೯೦ ಕ್ಕಿಂತ ಈಚಿನದೆಂದು ಸ್ಪಷ್ಟವಾಯಿತು.

---

*ಹೀಗೆಯೇ ಈ ಚಾಲುಕ್ಯಚಕ್ರವರ್ತಿಯ ಪೂರ್ವಿಕನಾದ ಸತ್ಯಾಶ್ರಯ ಪುಲಿಕೇಶಿಯು 'ಪರಮೇಶ್ವರ' ಎಂಬ ಬಿರುದುಳ್ಳ ಕನ್ಯಕುಬ್ಜದ ಅಧಿಪತಿಯಾದ ಹರ್ಷವರ್ಧನನನ್ನು ಸೋಲಿಸಿದನಂತರ ಮಹಾರಾಜಾಧಿರಾಜ, ಪರಮೇಶ್ವರ ಮೊದಲಾದ ಬಿರುದುಗಳನ್ನು ವಹಿಸಿಕೊಂಡನೆಂದು ಶಾಸನಗಳಲ್ಲಿ ಹೇಳಲ್ಪಟ್ಟಿರುವುದು; ಜರ್ನಲ್ ಆಫ್ ದಿ ಬಾಂಬೆ ಬ್ರಾಂಚ್ ಆಫ್ ದಿ ರಾಯಲ್ ಏಷ್ಯಾಟಿಕ್ ಸೊಸೈಟಿ ಎಂಬ ಪತ್ರಿಕೆಯ ೧೬ನೇ ಸಂಪುಟದ ೨೨೬ನೇ ಪುಟದಲ್ಲಿರುವ 'ಸಮರಸಂಸಕ್ತಸಕಲೋತ್ತರಾಪಥೇಶ್ವರ ಶ್ರೀಹರ್ಷವರ್ಧನಪರಾಜಯೋಪಲಬ್ಧಪರಮೇಶ್ವರಾಪರನಾಮಧೇಯಃ ಸತ್ಯಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಃ' ಎಂಬ ಪದಗಳನ್ನು ನೋಡಿ.

†ಈ ಭಿಲ್ಲಮನನಂತರ ಈ ಬಿರುದುಗಳು ಇವನ ಅನುಯಾಯಿಗಳಿಂದ ಧರಿಸಲ್ಪಟ್ಟಿದ್ದುವು.

'ಪದ್ಮಾನುಷಂಗಿತ್ವಂ' ಎಂಬ ನಾಲ್ಕನೆಯ ಪದ್ಯದಲ್ಲಿ ಹೇಳಲ್ಪಟ್ಟಿರುವ ಪದವು ಈ ವೀರಬಲ್ಲಾಳನು ಸಾಮ್ರಾಜ್ಯಲಕ್ಷ್ಮಿ, ವಿಜಯಲಕ್ಷ್ಮಿಯೇ ಮೊದಲಾದ ಅಷ್ಟಲಕ್ಷ್ಮಿಯರಿಗೆ ವಲ್ಲಭನಾಗಿದ್ದನೆಂಬುದನ್ನಲ್ಲದೆ ಇವನು ಪದ್ಮಾದೇವಿಯ ಪತಿಯಾಗಿದ್ದನೆಂಬ ಅರ್ಥವನ್ನೂ ಸೂಚಿಸುವುದು. ಈ ಪದ್ಮಾದೇವಿಯೆಂಬ ವೀರಬಲ್ಲಾಳನ ರಾಣಿಯು ಅವನ ಮಗನಾದ ಎರಡನೆಯ ನರಸಿಂಹ (ವೀರನರಸಿಂಹ)ನ ಜನನಿಯಾಗಿದ್ದಳೆಂದು ತಿಪ್ಟೂರು ೪೦ ನೆಯ ಶಿಲಾಲೇಖನದಲ್ಲಿನ—

ಪದ್ಮಾ ಮಹಿಷ್ಯಭೂತ್ತಸ್ಯ ಪದ್ಮಪತ್ರಾಯತೇಕ್ಷಣಾ |
ಪದ್ಮಹಸ್ತಮುಖೀ ಶಕ್ರಪದ್ಮಾಸನಸುರಸ್ತುತಾ ||

. . . . . . . . . . . . . . . . . . . . . . . . . . . . . .

ತಸ್ಯಾಂ ಬಲ್ಲಾಳಭೂಪಾಲಾನ್ನರಸಿಂಹಃ ಸುತೋಽಭವತ್ |
ಯಃ ಸಾಂಪ್ರತಮಿಳಾಂ ಪಾತಿ ಸೋಮಸೂನುಸಮಪ್ರಭಃ ||

. . . . . . . . . . . . . . . . . . . . . . . . . . . . . .

ಪದ್ಮಾಯಾಃ ಪ್ರಜನಿಷ್ಣುತೈವ ಕಥಯತ್ಯಸ್ಯೇಹ ರೋಚಿಷ್ಣುತಾಂ
ಸ್ವಾಖ್ಯೈವಾಖ್ಯದಮುಷ್ಯ ವಿಕ್ರಮಗುಣಂ ವೈರೀಭಕುಂಭಚ್ಛಿದಾ |
ಬಲ್ಲಾಳಪ್ರಭವಿಷ್ಣುತಾ ಸುಭಟತಾಂ ಯಸ್ಯಾಂಚಿತಾಚೀಕೃತತ್
ಕಾಂತಿಂ ಸೋಮಕುಲಪ್ರಸೂತಿರತುಳಾಂ ಯದ್ವಾವದೀತಿ ಪ್ರಭೋಃ ||

ಎಂಬ ಪದ್ಯಗಳಿಂದಲೂ ಇತರ ಶಾಸನಗಳಿಂದಲೂ ತಿಳಿದುಬರುವುದು. ಇವಳು ಪ್ರಾಯಿಕವಾಗಿ ಪದ್ಮಲದೇವಿ† ಎಂಬ ಹೆಸರಿನಿಂದಲೇ ಶಾಸನಗಳಲ್ಲಿ ವ್ಯವಹರಿಸಲ್ಪಟ್ಟಿರುವಳು.

ಈ ಪದ್ಮಾ ಅಥವಾ ಪದ್ಮಲ-ದೇವಿಯು ವೀರಬಲ್ಲಾಳನಿಗೆ ಯಾವ ವರ್ಷದಲ್ಲಿ ರಾಣಿಯಾದಳೆಂಬುದು ನಮಗೆ ತಿಳಿಯದು. ಆದಾಗ್ಯೂ ಇವಳ ಹೆಸರೂ,

---

† ಹೀಗೆಯೇ ಶಾಂತಾದೇವಿಯು ಶಾಂತಲ (ಸಾಂತಲ) ದೇವಿಯೆಂದೂ, ಚಂದ್ರಿಕಾದೇವಿಯು ಚಂದಲದೇವಿಯೆಂದೂ, ಭಾಗಾದೇವಿಯು ಭಾಗಲದೇವಿಯೆಂದೂ ಹರಿಹರದೇವಿ ಲಕ್ಷ್ಮೀದೇವಿಯರು ಹರಿಯಲದೇವಿ ಲಕ್ಕಲದೇವಿಯರೆಂದೂ ಶಾಸನಗಳಲ್ಲಿ ವಾಡಿಕೆಯಾಗಿ ವ್ಯವಹರಿಸಲ್ಪಟ್ಟಿರುವರು. ಹೀಗೆಯೇ ಆಚವ್ವೆ, ಏಚವ್ವೆ, ಬೊಮ್ಮವ್ವೆ, ಹೊನ್ನವ್ವೆ, ದುಗ್ಗವ್ವೆಯರು ಶಾಸನಗಳಲ್ಲಿ ಆಚಲೆ, ಏಚಲೆ, ಬೊಮ್ಮಲೆ, ಹೊನ್ನಲೆ, ದುಗ್ಗಲೆ ಎಂದು ಪ್ರಾಯಿಕವಾಗಿ ವ್ಯವಹರಿಸಲ್ಪಟ್ಟಿರುವರು.

ಸಂಸ್ಕೃತದಲ್ಲಿ ವಾತ್ಸಲ್ಯಾರ್ಥದಲ್ಲಿ 'ಇಲ' ಪ್ರತ್ಯಯವು ಮನುಷ್ಯವಾಚಕ ಸಂಜ್ಞಾಪದಗಳಿಗೆ ಬರುವಂತೆ (ಪಾಣಿನಿ ೫-೩-೭೯ ನ್ನು ನೋಡಿ) ಕನ್ನಡದಲ್ಲಿ ಈ 'ಲ' ಪ್ರತ್ಯಯವು ಬಂದು ಪದ್ಮಲಾ, ಶಾಂತಲಾ, ಮೊದಲಾದ ರೂಪಗಳು ನಿಷ್ಪನ್ನವಾಗಿರುವವು.

ಇವಳ ಮಗನಾದ ಕುಮಾರ-ನರಸಿಂಹನ ಹೆಸರೂ ವೀರಬಲ್ಲಾಳನ ಆಳಿಕೆಯ ಕೊನೆಯಭಾಗದಲ್ಲಿ ಹುಟ್ಟಿದ ಶಾಸನಗಳಲ್ಲಿ ಮಾತ್ರ ಸ್ತುತಿಸಲ್ಪಟ್ಟಿರುವುದನ್ನು ನೋಡಿದರೆ ಇವಳು ೧೧೯೫ ಕ್ಕಿಂತ ಮುಂಚೆ ವೀರಬಲ್ಲಾಳನ ರಾಣಿಯಾಗಿರಲಿಲ್ಲವೆಂದು ಊಹಿಸುವುದಕ್ಕವಕಾಶವಿರುವುದು. ಈ ಊಹೆಯು ಸರಿಯಾಗಿದ್ದ ಪಕ್ಷದಲ್ಲಿ 'ಪದ್ಮಾನುಷಂಗಿತ್ವಂ' ಎಂಬ ಪದವನ್ನು ವೀರಬಲ್ಲಾಳನ ವಿಷಯದಲ್ಲಿ ಉಪಯೋಗಿಸುವ ರುದ್ರಭಟ್ಟನ ಗ್ರಂಥವು ೧೧೯೫ ಕ್ಕಿಂತ ಹಿಂದೆ ಹುಟ್ಟಿರಲಾರದೆಂದು ವ್ಯಕ್ತವಾಗುವುದು.

ಇನ್ನು ಉಳಿದ 'ರಾಜರಾಜಪ್ರತಿಷ್ಠಾನಿರತಂ' ಎಂಬ ವೀರಬಲ್ಲಾಳನ ವಿಶೇಷಣದ ವಿಷಯವಾಗಿ ಸ್ವಲ್ಪ ವಿಚಾರವನ್ನು ಮಾಡಬೇಕಾಗಿರುವುದು. ಕವಿಚರಿತಕಾರರು ಹೇಳಿರುವಂತೆ, ಎರಡನೆಯ ನರಸಿಂಹನಿಗೂ ಅವನನಂತರ ರಾಜ್ಯವಾಳಿದ ಇತರ ಹೊಯ್ಸಳ ಚಕ್ರವರ್ತಿಗಳಿಗೂ 'ಚೋಳರಾಜಪ್ರತಿಷ್ಠಾಚಾರ್ಯ' ಎಂಬ ಬಿರುದು ಇತ್ತೆಂದು ಆ ಚಕ್ರವರ್ತಿಗಳ ಕಾಲದಲ್ಲಿ ಹುಟ್ಟಿದ ಶಾಸನಗಳಿಂದ ತಿಳಿದುಬರುವುದು. 'ರಾಜರಾಜ' ಎಂಬ ಹೆಸರೂ ಕೂಡ ಕವಿಚರಿತಕಾರರು ಹೇಳಿರುವಂತೆ ವಿಶೇಷವಾಗಿ ಚೋಳರಾಜರಲ್ಲಿ ಪ್ರಚಾರದಲ್ಲಿತ್ತು. ಆದುದರಿಂದ 'ರಾಜರಾಜಪ್ರತಿಷ್ಠಾನಿರತಂ' ಎಂಬ ವೀರಬಲ್ಲಾಳನ ವಿಶೇಷಣದಲ್ಲಿ ಹೇಳಲ್ಪಟ್ಟಿರುವ ರಾಜರಾಜನೆಂಬವನು ಒಬ್ಬ ಚೋಳರಾಜನೆಂದು ನಾವು ನಿಸ್ಸಂದೇಹವಾಗಿ ಹೇಳಬಹುದು.

ರಾಜರಾಜ ಎಂಬ ಹೆಸರುಳ್ಳ ಮೂವರು ಚೋಳರಾಜರಿದ್ದರೆಂದು ಕವಿಚರಿತಕಾರರು ಕವಿಚರಿತೆಯ ದ್ವಿತೀಯ ಮುದ್ರಣದಲ್ಲಿ ಹೇಳಿರುವರಷ್ಟೆ. ಇವರಲ್ಲಿ ಮೊದಲನೆಯ ರಾಜರಾಜನು ಕ್ರಿ. ಶ. ೯೮೫ ರಲ್ಲಿ ಜೂನ್ ೨೫–ಜುಲೈ ೨೫ ರಲ್ಲಿ ರಾಜ್ಯವಾಳುವುದಕ್ಕೆ ಪ್ರಾರಂಭಿಸಿ ೧೦೧೨ ರ ವರೆಗೆ ರಾಜ್ಯಭಾರ ಮಾಡಿದನೆಂದೂ, ಎರಡನೆಯ ರಾಜರಾಜನು ಕ್ರಿ.ಶ. ೧೧೪೬ ರಲ್ಲಿ ಮಾರ್ಚಿ ೨೬–ಜುಲೈ ೧೧ ರಲ್ಲಿ ರಾಜ್ಯವಾಳುವುದಕ್ಕೆ ಪ್ರಾರಂಭಿಸಿ ಸುಮಾರು ೧೧೬೧ರ ವರೆಗೆ ರಾಜ್ಯಭಾರವನ್ನು ಮಾಡಿದನೆಂದೂ, ಮೂರನೆಯ ರಾಜರಾಜನು ಕ್ರಿ. ಶ. ೧೨೧೬ ರಲ್ಲಿ ಜೂನ್ ೨೬–ಜುಲೈ ೧೦ ರಲ್ಲಿ ರಾಜ್ಯವಾಳುವುದಕ್ಕೆ ಪ್ರಾರಂಭಿಸಿ ೧೨೪೬ ರ ವರೆಗೆ ರಾಜ್ಯಭಾರ ಮಾಡಿದನೆಂದೂ ಡಾ|| ಕೀಲ್‌ಹೋರ್ನ್‌ರವರು ಎಪಿಗ್ರಾಫಿಯ ಇಂಡಿಕ ಪತ್ರಿಕೆಯ ಎಂಟನೆಯ ಸಂಪುಟದ ಎರಡನೆಯ ಅನುಬಂಧದಲ್ಲಿ (ಪುಟ ೨೨, ೨೩, ೨೪) ಬರೆದಿರುವರು. ವೀರಬಲ್ಲಾಳನು ಕ್ರಿ. ಶ. ೧೧೭೩ ರಿಂದ ೧೨೨೦ರ ವರೆಗೆ ರಾಜ್ಯವನ್ನಾಳುತ್ತಿದ್ದುದರಿಂದ, ಇವನಿಗೂ ಒಂದನೆಯ ಮತ್ತು ಎರಡನೆಯ ರಾಜರಾಜರಿಗೂ ಯಾವ ಸಂಬಂಧವೂ ಇದ್ದಿರಲಾರದು. ಆದುದರಿಂದ 'ರಾಜರಾಜಪ್ರತಿಷ್ಠಾನಿರತಂ'

ಎಂಬ ವಿಶೇಷಣದಲ್ಲಿ ನಿರ್ದಿಷ್ಟನಾದ ರಾಜರಾಜನು ಮೇಲೆ ಹೇಳಲ್ಪಟ್ಟಿರುವ ಮೂರ**ನೆಯ** ರಾಜರಾಜನೇ ಆಗಿರಬೇಕೆಂದು ಸ್ಪಷ್ಟವಾಗುವುದು.

ಈ ಮೂರನೆಯ ರಾಜರಾಜನು ಮೇಲೆ ಹೇಳಿದಂತೆ ಕ್ರಿ. ಶ. ೧೨೧೬ ನೆಯ ವರ್ಷದ ಮಧ್ಯಭಾಗದಲ್ಲಿ ರಾಜ್ಯಭಾರವನ್ನು ಮಾಡುವುದಕ್ಕೆ ಪ್ರಾರಂಭಿಸಿದುದರಿಂದ ಇವನನ್ನು ಬಲ್ಲಾಳನು ಆ ವರ್ಷದ ಆದಿಭಾಗಕ್ಕಿಂತ ಹಿಂದೆ ಸಿಂಹಾಸನದ ಮೇಲೆ ಸ್ಥಾಪಿಸಿರಲಾರನಷ್ಟೆ. ಈ ೧೨೧೬ ಕ್ಕಿಂತ ಈಚೆ ಹುಟ್ಟಿದ ವೀರಬಲ್ಲಾಳನ ಶಾಸನಗಳು ಕರ್ಣಾಟಕ ದೇಶದಲ್ಲಿ ಸುಮಾರಾಗಿ ಅಲ್ಪವಾಗಿರುವುದರಿಂದಲೂ, ಚೋಳದೇಶದಲ್ಲಿರುವ ಇವನ ಶಾಸನಗಳು ಪ್ರಾಯಃ ಅಜ್ಞಾತಗಳಾಗಿ ಮುದ್ರಿಸಲ್ಪಡದೆ ಇರುವುದರಿಂದಲೂ ಕೂಡ ಈ ಚೋಳರಾಜರಾಜ್ಯಸ್ಥಾಪನಾಕಾರ್ಯವು ಹೇಗೆ ನಡೆಯಿತೆಂಬುದು ವಿವರವಾಗಿ ನಮಗೆ ತಿಳಿದಿಲ್ಲ. ಆನಾಗ್ಯೂ 'ಎಪಿಗ್ರಾಫಿಯ ಕರ್ಣಾಟಿಕ' ದಲ್ಲಿರುವ ಮೂರುನಾಲ್ಕು ಶಾಸನಗಳ ಆಧಾರಬಲದಿಂದಲೂ, ಎಪಿಗ್ರಾಫಿಯ ಇಂಡಿಕ ಪತ್ರಿಕೆಯ ೭ನೇ ಸಂಪುಟದಲ್ಲಿ (ಪುಟ ೧೬೭) ಮುದ್ರಿತವಾಗಿರುವ ತಿರುವೇಂದಿಪುರದ* ದೇವನಾಯಕಸ್ವಾಮಿಯ ಗುಡಿಯಲ್ಲಿ ತಮಿಳುಭಾಷೆಯಲ್ಲಿ ಬರೆದಿರುವ ಒಂದು ಹೊಯ್ಸಳ ಶಿಲಾಲೇಖನದ ಆಧಾರ ಬಲದಿಂದಲೂ ಕೂಡ, ಈ ಕಾರ್ಯವು ಹೀಗೆ ನಡೆಯಿತೆಂದು ಸ್ಥೂಲವಾಗಿ ನಾವು ಸ್ವಲ್ಪಮಟ್ಟಿಗೆ ಊಹಿಸಿಕೊಳ್ಳಬಹುದು.

ಈ ತಿರುವೇಂದಿಪುರದ ಶಿಲಾಲೇಖನವು ಮೇಲೆ ಹೇಳಿದ ಚೋಳರಾಜನಾದ ಮೂರನೆಯ ರಾಜರಾಜನ ಹದಿನೈದನೆಯ ವರ್ಷದಲ್ಲಿ, ಎಂದರೆ ಕ್ರಿ. ಶ. ೧೨೩೧-೧೨೩೨ರಲ್ಲಿ ಹೊಯ್ಸಳ ಚಕ್ರವರ್ತಿ ಎರಡನೆಯ ನರಸಿಂಹನ ಕಾಲದಲ್ಲಿ ಹುಟ್ಟಿದ್ದು. ಚೋಳಾಧಿಪನಾದ ರಾಜರಾಜದೇವನ ೧೫ನೆಯ ವರ್ಷದಲ್ಲಿ ಹೊಯ್ಸಳ ಚಕ್ರವರ್ತಿ ವೀರನಾರಸಿಂಹದೇವನು ಚೋಳಚಕ್ರವರ್ತಿಯನ್ನು ಕೋಪ್ಪೆರುಂಜಿಂಗನು† ಶೇಂದಮಂಗಲದಲ್ಲಿ ಸೆರೆಹಿಡಿದು ತನ್ನ ಸೈನಿಕರಿಂದ ಅವನ ರಾಜ್ಯವನ್ನು ಧ್ವಂಸಮಾಡಿಸಿ ದೇವಾಲಯಗಳನ್ನೂ ವಿಷ್ಣುಸ್ಥಾನಗಳನ್ನೂ ಅಳಿಸಿದನೆಂದು ಕೇಳಿ, 'ಚೋಳಮಂಡಲಪ್ರತಿಷ್ಠಾಚಾರ್ಯ ಎಂಬ ನನ್ನ ಬಿರುದನ್ನು ಊರ್ಜಿತಮಾಡಿದಲ್ಲದೆ ಈ ಕಾಳೆಯನ್ನು

---

* ಈ ತಿರುವೇಂದಿಪುರವೆಂಬ ಹಳ್ಳಿಯು ದಕ್ಷಿಣ ಆರ್ಕಾಟುಜಿಲ್ಲೆಗೆ ಮುಖ್ಯಸ್ಥಳವಾದ ಕಡಲೂರಿಂದ ಸುಮಾರು ೪ ಮೈಲಿ ದೂರದಲ್ಲಿ ವಾಯುವ್ಯದಿಕ್ಕಿನಲ್ಲಿರುವುದು.

† ಕೋಪ್ಪೆರುಂಜಿಂಗ ಎಂದರೆ ಮಹಾರಾಜಸಿಂಹ ಅಥವಾ ಮಹಾಸಿಂಹರಾಜ ಎಂದು ಅರ್ಥ. ದ್ರಾಕ್ಷಾರಾಮದಲ್ಲಿರುವ ಒಂದು ಸಂಸ್ಕೃತಶಿಲಾಲೇಖನದಲ್ಲಿ ಈ ರಾಜನು 'ಮಹಾರಾಜಸಿಂಹ' ಎಂದು ತನ್ನನ್ನು ವ್ಯವಹರಿಸಿಕೊಂಡಿರುವನು.

ಊದುವುದಿಲ್ಲ' ಎಂದು ದೋರಸಮುದ್ರದಿಂದ ಹೊರಟು ಮಗರರಾಜ್ಯವನ್ನು ನಿರ್ಮೂಲಮಾಡಿ ಅವನನ್ನೂ ಅವನ ಭಂಡಾರವನ್ನೂ ಸ್ತ್ರೀಯರನ್ನೂ ಕೈಕೊಂಡು ಪಾಚ್ಚೂರಿನಲ್ಲಿ ನಿಂತು, 'ಕೋಪ್ಪೆರುಂಜಿಂಗನ ದೇಶವನ್ನು ಧ್ವಂಸಮಾಡಿ ಚೋಳ ಚಕ್ರವರ್ತಿಯನ್ನು ಬಿಡುಗಡೆ ಮಾಡಿಸಿ' ಎಂದು ಮಹಾಪ್ರಧಾನಿ ಪರಮವಿಶ್ವಾಸಿ ದಂಡಿನಗೋಪ ಜಗದೊಬ್ಬಗಂಡ ಅಪ್ಪಣದಂಡನಾಯಕನಿಗೂ ಸಮುದ್ರಗೊಪ್ಪಯ ದಂಡನಾಯಕನಿಗೂ ಆಜ್ಞೆಮಾಡಲಾಗಿ, ಅವರು ಅಲ್ಲಿಂದ ಹೊರಟು ಕೋಪ್ಪೆರುಂ ಜಿಂಗನಿದ್ದ ಎಳ್ಳೇರಿ, ಕಲ್ಲಿಯೂರ್ಮೂಲೈ ಮೊದಲಾದ ಊರುಗಳನ್ನು ಧ್ವಂಸಮಾಡಿ ......ಚೋಳಚಕ್ರವರ್ತಿಯನ್ನು ಸೆರೆಯಿಂದ ಬಿಡಿಸಿ ರಾಜ್ಯದಲ್ಲಿ ಪುಗಿಸಿದರೆಂದು ಈ ಶಿಲಾಲೇಖನದಲ್ಲಿ ಹೇಳಿರುವುದು.*

ಈ ಶಿಲಾಲೇಖನದಲ್ಲಿ ಹೇಳಲ್ಪಟ್ಟಿರುವ 'ಚೋಳಮಂಡಲಪ್ರತಿಷ್ಠಾಚಾರ್ಯ' ಅಥವಾ 'ಚೋಳರಾಜ್ಯಪ್ರತಿಷ್ಠಾಚಾರ್ಯ' ಎಂಬ ಬಿರುದು ಈ ಶಿಲಾಲೇಖನವು ಹುಟ್ಟಿದ ಕಾಲಕ್ಕಿಂತ ಎಂದರೆ ಕ್ರಿ. ಶ. ೧೨೩೧-೧೨೩೨ನೆಯ ವರ್ಷಕ್ಕಿಂತ ಪೂರ್ವವೇ ಈ ವೀರನಾರಸಿಂಹನಿಗೆ ಇತ್ತೆಂದು ಈ ಶಿಲಾಲೇಖನದ ಪದಗಳಿಂದಲೇ ವ್ಯಕ್ತವಾಗುವುದಷ್ಟೆ; ಕ್ರಿ. ಶ. ೧೨೩೧-೧೨೩೨ ಕ್ಕಿಂತ ಎಷ್ಟು ಹಿಂದೆ ಈ ಬಿರುದು ಇವನಿಗೆ ಇತ್ತು ಎಂಬ ವಿಷಯವನ್ನು ಡಾಕ್ಟರ್ ಹುಲ್ಟ್ಷ್‌ರವರು ಮೇಲೆ ಹೇಳಿದ ಎಪಿ. ಇಂಡಿಕ ೭ನೆಯ ಸಂಪುಟದಲ್ಲಿ (ಪುಟ ೧೬೨, ೧೬೪) ವಿಚಾರಮಾಡಿ ಕ್ರಿ. ಶ. ೧೨೨೪ನೆಯ ವರ್ಷದಲ್ಲಿ ಹುಟ್ಟಿದ ಹರಿಹರದ ದೇವಸ್ಥಾನದಲ್ಲಿರುವ ಶಿಲಾ ಲೇಖನದಲ್ಲಿ 'ಚೋಳರಾಯರಾಜ್ಯಪ್ರತಿಷ್ಠಾಚಾರ್ಯ, ಮಗರರಾಯರಾಜ್ಯನಿ

* ಸ್ವಸ್ತಿಶ್ರೀ ತಿರಿಬುವನ ಚ್ಚಕ್ಕರವತ್ತಿಗಳ್ ಶ್ರೀರಾಜರಾಜದೇವರ್ಕು ಯಾಂಡು ೧೫ ವದಿರ್ ಎದಿರಾಮಾಂಡು ಪ್ರತಾಪಚ್ಚಕ್ಕರವತ್ತಿ ಹೊಯ್ಸಣ-ಶ್ರೀ-ವೀರನಾರಸಿಂಹದೇವನ್ ಚೋಳಚ್ಚಕ್ಕರವತ್ತಿಯ್ಯೈ ಕೋಪ್ಪೆರುಂಜಿಂಗನ್ ಶೇಂದಮಂಗಲತ್ತೇ ಪಿಡಿತ್ತುಕೊಡು ಇರುನ್ದು ತನ್ಪಡೈಯ್ಯೈ ಇಟ್ಟು ರಾಜ್ಯತ್ತೈ ಅಳಿತ್ತು ದೇವಾಲೈಯಂಗಳುಂ ವಿಷ್ಣುಸ್ಥಾನಂಗಳುಂ ಅಳಿಗೈಯಾಲೇ ಇಪ್ಪಡಿ ದೇವನ್ ಕೇಟ್ಟರುಳಿ ಚೋಳಮಂಡಲಪ್ರತಿಷ್ಠಾಚಾರಿಯನ್ ಎನ್ನುಂ ಕೀರ್ತ್ತಿ ನಿಲೈನಿರುತ್ತಿ ಅಲ್ಲದು ಇಕ್ಕಾಳಂ ಊದುವುದಿಲ್ಲೈ ಎನ್ರು ದೋರಸಮುತ್ತಿರತ್ತಿನಿನ್ರುಂ ಎಡುತ್ತು ವಂದು ಮಗರರಾಜ್ಯನಿರ್ಮ್ಮೂಲ ಮಾಡಿ ಇವನ್ನೈಯ್ಯುಂ ಇವನ್ ಪೆಂಡುಪಂಡಾರಮುಂ ಕೈಕ್ಕೊಡು ಪಾಚ್ಚೂರಿಲೇ ವಿಟ್ಟು ಕೋಪ್ಪೆರುಂ ಜಿಂಗನ್ ದೇಶಮುಂ ಅಳಿತ್ತು ಚ್ಚೋಳಚ್ಚಕ್ಕರವತ್ತಿಯ್ಯೈಯುಂ ಎಳುಂದರುಳಿವಿತ್ತುಕೊಡುವನನ್ರು ದೇವನ್ ತಿರುವಳ್ಳಮಾಯೇವ ವಿಡ್ಡೈ ಕೊಂಡು ಎಳುಂದ ಸ್ವಸ್ತಿ ಶ್ರೀಮನುಮಹಾಪ್ರಧಾನಿ ಪರಮ ವಿಶ್ವಾಸಿ ದಂಡಿನಕೋಪನ್ ಜಗದೊಬ್ಬಗಂಡನ್ ಅಪ್ಪಣದಣ್ಣಾಕ್ಕನುಂ ಶಮುತ್ತಿರಗೊಪ್ಪಯ-ದಣ್ಣಾಕ್ಕನುಂ ಕೋಪ್ಪೆರುಂಜಿಂಗನಿರುನ್ದ ಎಳ್ಳೇರಿಯುಂ ಕಲ್ಲಿಯೂರ್ಮೂಲೈಯುಂ....ಅಳಿತ್ತು....ಚೋಳ ಚ್ಚಕ್ಕರವತ್ತಿಯ್ಯೈ ಎಳುನ್ದರುಳಿವಿತ್ತುಕ್ಕೊಡು ಪೋಂದು ರಾಜ್ಯತ್ತೇ ಪುಗವಿಟ್ಟದು.

ಮೂರ್ಲನ ಪಾಂಡ್ಯಗಂಡಶೈಲವಜ್ರದಂಡಂ' ಎಂಬ ಬಿರುದುಗಳು ನರಸಿಂಹನಿಗೆ ಹೇಳಲ್ಪಟ್ಟಿರುವುದರಿಂದಲೂ, ಚಿಕ್ಕಮಗಳೂರು ೫೬ ನೆಯ ವೀರಕಲ್ಲು ಲೇಖನದಲ್ಲಿ 'ಶಕವರ್ಷ ೧೧೪೪ ಚಿತ್ರಭಾನು ಸಂ|| ರದ ಆಶ್ವೀಜ ಶುದ್ಧ ೧೦ ಶಮೀ ಮಂಗಳ ವಾರದಂದು' ವೀರನರಸಿಂಹನು ತೆಂಕಲುರಂಗನ ಮೇಲೆ ಎಂದರೆ ಶ್ರೀರಂಗದಮೇಲೆ ನಡೆದನೆಂದು ಹೇಳಿರುವುದರಿಂದಲೂ, ಕ್ರಿ. ಶ. ೧೨೨೨-೧೨೨೪ರಲ್ಲಿ ಅವನು ಮಗರ ರಾಜ್ಯ ಚೋಳರಾಜ್ಯಗಳ ಮೇಲೆ ನಡೆದಂತೆ ತೋರುವುದೆಂದು ಹೇಳಿರುವರು.

ಈ ಮೇಲೆ ಹೇಳಿದ ಹರಿಹರೇಶ್ವರದೇವಸ್ಥಾನದ ಶಿಲಾಲೇಖನವು 'ಶಕವರ್ಷಂ ೧೧೪೫ ನೇ ಸ್ವಭಾನು ಸಂವತ್ಸರದ ಮಾಘಶುದ್ಧ ೧೧ ಬೃಹವಾರ' ದಂದು ಹುಟ್ಟಿದ್ದು. ಇದೇ ಶಕವರ್ಷ ೧೧೪೫ ನೆಯ ಸ್ವಭಾನು ಸಂವತ್ಸರದ ಚೈತ್ರಶುದ್ಧ ಏಕಾದಶಿ ಆದಿತ್ಯವಾರ ಸಂಕ್ರಮಣ-ವ್ಯತೀಪಾತದಂದು ಹುಟ್ಟಿದ ಚನ್ನರಾಯಪಟ್ಟಣದ ೧೯೭ನೆಯ ಶಾಸನದಲ್ಲಿಯೂ 'ಮಗರರಾಜ್ಯನಿರ್ಮೂಳನ ಪಾಂಡ್ಯದಿಶಾಪಟ್ಟ ಚೋಳರಾಜ್ಯಪ್ರತಿಷ್ಠಾಚಾರ್ಯ' ಎಂಬ ಬಿರುದುಗಳು ವೀರನರಸಿಂಹನಿಗೆ ಹೇಳಲ್ಪಟ್ಟಿರುವುವಲ್ಲದೆ '...ಎಱೆಯಂಗಂ ತತ್ಸುತಂ ವಿಷ್ಣು ತತ್ತನುಜಾತಂ ನರಸಿಂಹ ನಾತನ ಮಗಂ ಒಲ್ಲಾಳನಾತಂಗೆ ಸೂನು ನೃಸಿಂಹಂ ಮಗರಾಧಿರಾಯಲಯಕಾಳಂ ಚೋಳನಿಸ್ತಾರಕಂ' ಎಂಬ ಪದ್ಯವೂ ಕೂಡ ಶಾಸನದ ಉಪಕ್ರಮದಲ್ಲಿ ಹೇಳಲ್ಪಟ್ಟಿರುವುದು. ಹೀಗೆಯೇ 'ಶಕವರ್ಷ ೧೧೪೩ ನೆಯ ವಿಕ್ರಮಸಂವತ್ಸರದ ವೈಶಾಖ ಶುದ್ಧ ೫ ಆದಿವಾರ' ದಂದೋ ಅಥವಾ 'ಶಕವರ್ಷ ೧೧೪೪ ನೆಯ ವಿಷುಸಂವತ್ಸರದ ದ್ವಿತೀಯ ಜ್ಯೇಷ್ಠದ ಅಮಾವಾಸೆ ಸೋಮವಾರ ಸೂರ್ಯಗ್ರಹಣ'ದಂದೋ (ಈ ಎರಡು ತಾರೀಖುಗಳೂ ಶಿಲಾಲೇಖನದಲ್ಲಿ ಹೇಳಲ್ಪಟ್ಟಿರುವುವು.) ಹುಟ್ಟಿದ ಚೆನ್ನಗಿರಿ ೭೨ ನೆಯ ಶಿಲಾಲೇಖನದಲ್ಲಿ 'ಮಗರರಾಜ್ಯನಿರ್ಮೂಳನ ಚೋಳರಾಜ್ಯ ಪ್ರತಿಷ್ಠಾಚಾರ್ಯ' ಎಂಬ ಬಿರುದುಗಳು ವೀರಸಿಂಹನಿಗೆ ಹೇಳಲ್ಪಟ್ಟಿರುವುವಲ್ಲದೆ,

ಆನೆಯ ನಾಯಕಂಗೆ ನೆಱದಾನೆಯ ನಾಯಕನಲ್ಲದಾನನೆಂ
ಬೀ ನುಡಿ ಯೇವುದೆಂದು ನರಸಿಂಹಮಹೀಪತಿ ನೂಱುಗಾವುದಂ |
ತಾನಿರದೆತ್ತಿ ಮೂಡಣ ದಿಶಾವರದುದ್ಧತರಂ ಪೂರಳ್ಚಿ ನೂ
ಱಾನೆಯನೊಡ್ಡಿದಾ ಮಗರನಾನೆಗಳಂ ಪಿಡಿತಂದನಶ್ವದಿಂ ||

ಎಂಬ ಪದ್ಯವೂ ಹೇಳಲ್ಪಟ್ಟಿರುವುದು. ಮೇಲೆ ಹೇಳಿದ ಶಿಲಾಲೇಖನಗಳಲ್ಲಿ ಪ್ರೋಕ್ತವಾದ ತಾರೀಖುಗಳನ್ನು ಲೆಕ್ಕಮಾಡಿ ಈ ಶಿಲಾಲೇಖನಗಳು ಕ್ರಿ. ಶ. ಇಂಥ ವರ್ಷದ ಇಂಥ ದಿನದಲ್ಲಿ ಹುಟ್ಟಿದುವೆಂದು ನಿರ್ಧರಿಸುವುದಕ್ಕೆ ಆಗುವುದಿಲ್ಲವಾದರೂ ಕ್ರಿ. ಶ. ೧೨೨೦ ರಲ್ಲಿ ಎಂದರೆ ವೀರನರಸಿಂಹನಿಗೆ ಪಟ್ಟಾಭಿಷೇಕವಾದ ವರ್ಷದ

ಲ್ಲಿಯೇ (ಕ್ರಿ. ಶ. ೧೨೨೦ ನೆಯ ವಿಕ್ರಮಸಂವತ್ಸರದ ವೈಶಾಖಶುದ್ಧ ತ್ರಯೋದಶೀ ಬೃಹಸ್ಪತಿವಾರದಂದು ಇವನಿಗೆ ಪಟ್ಟಾಭಿಷೇಕವಾಯಿತೆಂದು ಚನ್ನರಾಯಪಟ್ಟಣದ ೧೭೨ ನೇ ಶಾಸನದಲ್ಲಿ ಹೇಳಲ್ಪಟ್ಟಿರುವುದು) ಅವನಿಗೆ ಚೋಳರಾಜ್ಯಪ್ರತಿಷ್ಠಾಚಾರ್ಯ ಮಗರರಾಜ್ಯನಿರ್ಮೂಲನ ಎಂಬ ಬಿರುದುಗಳು ಇದ್ದುವೆಂದು ನಾವು ಧಾರಾಳವಾಗಿ ಹೇಳಬಹುದಷ್ಟೆ.

ವಸ್ತುತಃ ಈ ಬಿರುದುಗಳು ವೀರನರಸಿಂಹನ ಪಟ್ಟಾಭಿಷೇಕಕ್ಕಿಂತ ಪೂರ್ವದಲ್ಲಿಯೇ ಎಂದರೆ ಅವನ ತಂದೆ ವೀರಬಲ್ಲಾಳನು ಜೀವಿಸಿದ್ದ ಕಾಲದಲ್ಲಿಯೇ ಅವನಿಗೆ ಇದ್ದುವೆಂದು ನಾಗಮಂಗಲದ ೨೯ ನೆಯ ಶಿಲಾಲೇಖನದಲ್ಲಿರುವ—

ಆ ರಾಜಾಗ್ರಣಿ ಯಾದವೇಂದ್ರತಿಳಕಂ ಬಲ್ಲಾಳದೇವಂಗೆ ಗಂ
ಭೀರಶ್ರೀಯನಿ ಸಂದ ಪದ್ಮಲಮಹಾದೇವೀನಿಜಾತ್ಮೋದರ |
ಕ್ಷೀರಾಂಭೋನಿಧಿಯಲ್ ಸಮುದ್ಭವಿಸಿದಂ ವೀರಂ ನೃಸಿಂಹಂ ಬುಧಾ
ಧಾರಂ ಚೋಳಕುಳೈಕರಕ್ಷ ಮಗರೋರ್ವೀಪಾಳನಿರ್ಮೂಳಕಂ* ||

ಎಂಬ ಪದ್ಯದಿಂದ ಸೂಚಿಸಲ್ಪಟ್ಟಿರುವುದು. 'ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರಕಂ ದ್ವಾರಾವತೀಪುರವರಾಧೀಶ್ವರಂ ಯಾದವಕುಲಾಂಬರದ್ಯುಮಣಿ ಗಿರಿದುರ್ಗಮಲ್ಲ ಮಗರರಾಜ್ಯದಿಶಾಪಟ್ಟ ಆದಿಯಮಘುರಟ್ಟ ಚೋಳರಾಜ್ಯಪ್ರತಿಷ್ಠಾಚಾರ್ಯಂ ಮೇರುನಗಧೈರ್ಯ್ಯಂ ಮಂಡಳಿಕಬೇಂಟೆಕಾರಂ ಪಾಂಡ್ಯಗಜಕೇಸರಿ ಸೇವುನಬಲಜಳಧಿ ಬಡವಾನಳಂ ಶ್ರೀಮತ್ಪ್ರತಾಪಚಕ್ರವರ್ತಿ' ವೀರಬಲ್ಲಾಳದೇವನು ದೋರಸಮುದ್ರದ ನೆಲೆವೀಡಿನಲ್ಲಿ ಪೃಥ್ವೀರಾಜ್ಯವನ್ನು ಆಳುತ್ತಿದ್ದಾಗ ಅವನ ಪಾದಪದ್ಮೋಪಜೀವಿಯಾದ ಮಲ್ಲನಾಯಕನು 'ಶಕವರ್ಷ ೧೧೪೦ ನೆಯ ಬಹುಧಾನ್ಯ ಸಂವತ್ಸರದ ಮಾಘ-ಸಂ ೧೩ ಬೃಹವಾರದುತ್ತರಾಯಣ ಸಂಕ್ರಮಣ ವ್ಯತೀಪಾತದಂದು' ಮಲ್ಲಿಕಾರ್ಜುನದೇವರ ಅಂಗಭೋಗಾದಿಗಳಿಗಾಗಿ ಒಂದು ದತ್ತಿಯನ್ನು ಕೊಟ್ಟನೆಂದು ಈ ಶಿಲಾಲೇಖನದಲ್ಲಿ ಹೇಳಿರುವುದು. 'ಬೃಹವಾರ' ಎಂಬ ಪದಕ್ಕೆ 'ಶನಿವಾರ' ಎಂದು ಅರ್ಥ ಮಾಡಿದರೆ ಈ ಮೇಲೆ ನಿರ್ದಿಷ್ಟವಾದ ಬೃಹವಾರವು ಕ್ರಿ. ಶ. ೧೨೧೪ ನೇ ಜನವರಿ ೨೫ ನೆಯ ಶನಿವಾರವಾಗುವುದೆಂದೂ 'ಬೃಹಸ್ಪತಿವಾರ' ಎಂದು ಅರ್ಥಮಾಡಿದರೆ

* ಈ ಪದವನ್ನು 'ಮಗಧೋರ್ವೀಪಾಳನಿರ್ಮೂಳಕಂ' ಎಂದು ಮ|| ರೈಸ್‌ರವರು ಮುದ್ರಿಸಿರುವರು. ಇದು 'ಮಗರೋರ್ವೀ—' ಎಂದು ಇರಬೇಕೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಕ್ರಿ. ಶ. ೧೨೧೮ ನೇ* ಜನವರಿ ೧೧ ನೆಯ ಬೃಹಸ್ಪತಿವಾರವಾಗುವುದೆಂದೂ ನಾನು 'ಸಮ್ ಶಕ ಡೇಟ್ಸ್ ಇನ್ ಇನ್‌ಸ್ಕ್ರಿಪ್ಷನ್ಸ್' ಎಂಬ ನನ್ನ ಪುಸ್ತಕದಲ್ಲಿ (ಪುಟ ೧೧; ನಂ. ೧೫) ವ್ಯಕ್ತಮಾಡಿರುವೆನು. ಕ್ರಿ. ಶ. ೧೨೧೪ನೇ ವರ್ಷದ ಜನವರಿ ತಿಂಗಳಿಗೆ ಪೂರ್ವದಲ್ಲಿಯೇ ವೀರಬಲ್ಲಾಳನ ಸೇನಾನಾಯಕರು ಚೋಳರಾಜನನ್ನು ಅವನ ರಾಜ್ಯದಲ್ಲಿ ಸ್ಥಾಪಿಸಿದರೆಂಬುದು ಅಸಂಭವವೆಂದೇ ನಮಗೆ ತೋರುವುದು. ಅಲ್ಲದೆ ವೀರಬಲ್ಲಾಳನಿಂದ ಸ್ವರಾಜ್ಯದಲ್ಲಿ ಸ್ಥಾಪಿತನಾದ ಚೋಳರಾಜನು ರಾಜರಾಜನೆಂಬ ಹೆಸರುಳ್ಳವನೆಂದು ರುದ್ರಭಟ್ಟನ ಜಗನ್ನಾಥವಿಜಯದಿಂದ ನಮಗೆ ತಿಳಿಯುವುದರಿಂದಲೂ, ಈ ರಾಜರಾಜನು ನಾವು ಮೇಲೆ ಹೇಳಿರುವಂತೆ ಕ್ರಿ. ಶ. ೧೨೧೬ ನೆಯ ಜೂನ್ ೨೭ ರ ನಂತರ ರಾಜ್ಯವನ್ನಾಳುವುದಕ್ಕೆ ಉಪಕ್ರಮಿಸಿದ್ದರಿಂದಲೂ, ಮೇಲೆ ಹೇಳಿದ ನಾಗಮಂಗಲ ೨೯ ನೆಯ ಶಿಲಾಲೇಖನದಲ್ಲಿ ಉಕ್ತವಾದ ಬೃಹವಾರವು ಕ್ರಿ. ಶ. ೧೨೧೪ ನೆಯ ಜನವರಿ ೨೫ ನೇ ಶನಿವಾರವಲ್ಲವೆಂದೂ ಅದು ಕ್ರಿ. ಶ. ೧೨೧೮ ನೆಯ ಜನವರಿ ೧೧ ನೇ ಬೃಹಸ್ಪತಿವಾರವೇ ಆಗಿರಬೇಕೆಂದೂ ಸ್ಪಷ್ಟವಾಗುವುದು. ಹೀಗೆ ಕ್ರಿ. ಶ. ೧೨೧೮ ನೆಯ ಜನವರಿಯಲ್ಲಿ ಹುಟ್ಟಿದ ಈ ಶಿಲಾಲೇಖನದಲ್ಲಿ ವೀರಬಲ್ಲಾಳನಿಗೆ 'ಚೋಳರಾಜ್ಯಪ್ರತಿಷ್ಠಾಚಾರ್ಯ' ಎಂಬ ಬಿರುದು ಹೇಳಲ್ಪಟ್ಟಿರುವುದರಿಂದಲೂ, ಇವನ ಮಗ ವೀರನರಸಿಂಹನು 'ಚೋಳಕುಲೈಕರಕ್ಷ ಮಗರೋರ್ವೀಪಾಲನಿರ್ಮೂಲಕಂ' ಎಂದು ಸ್ತುತಿಸಲ್ಪಟ್ಟಿರುವುದರಿಂದಲೂ, ಹೊಯ್ಸಳರಾಜಕೃತವಾದ ಚೋಳರಾಜನ ಸ್ಥಾಪನೆಯು ಆ ಜನವರಿ ತಿಂಗಳಿಗೆ ಹಿಂದೆ ನಡೆದಿರಬೇಕೆಂದು ವ್ಯಕ್ತವಾಗುವುದು.

ಹೀಗೆಯೇ ಆಲದಹಳ್ಳಿಯಲ್ಲಿರುವ (ಅರಶಿಕೆರೆ ೧೮೩) ಒಂದು ಶಾಸನದಲ್ಲಿಯೂ 'ಸಮಸ್ತಭುವನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ...ಶನಿವಾರಸಿದ್ಧಿ ಗಿರಿದುರ್ಗಮಲ್ಲ ಚಲದಂಕರಾಮ ನದಿಯುಮುದೇಭಕಂಠೀರವಂ ಪಾಂಡ್ಯಗಂಡಶೈಲವಜ್ರದಂಡಂ ಕಾಡವರಾಯಕೈಟಭಜನಾರ್ದನಂ ಮಕರರಾಯರಾಜ್ಯನಿರ್ಮೂಳನುಂ ಚೋಳರಾಯರಾಜ್ಯಪ್ರತಿಷ್ಠಾಚಾರ್ಯನೆನಿಸಿದ ಹೊಯ್ಸಣ-ಶ್ರೀವೀರಬಲ್ಲಾಳದೇವರು' ದೋರಸಮುದ್ರದಲ್ಲಿ ಪೃಥಿವೀರಾಜ್ಯವನ್ನು ಮಾಡುತ್ತಿದ್ದು ಬಾರಕೂರಿಗೆ ಬಿಜಯಂಗೈದಾಗ ತತ್ಪಾದಪದ್ಮೋಪಜೀವಿ ಶ್ರೀಮನ್ಮಹಾಪಸಾಯಿತ ಅಂಕೆಯ ನಾಯಕನು ಶಕವರ್ಷದ ೧೧೬೧ ನೆಯ ಬಹುಧಾನ್ಯ ಸಂವತ್ಸ

* '೧೨೧೮' ಎಂಬುದಕ್ಕೆ ಬದಲು ನನ್ನ ಪುಸ್ತಕದಲ್ಲಿ '೧೧೧೮' ಎಂದು ಪ್ರಮಾದದಿಂದ ಮುದ್ರಿತವಾಗಿರುವುದು. ಇದನ್ನು '೧೨೧೮' ಎಂದು ತಿದ್ದಿಕೊಳ್ಳಬೇಕು.

ರದ ವೈಶಾಖ-ಸು ೨ ಬು-ದಂದು ಬಾರಕೂರಲ್ಲಿ ಇರುವುದಕ್ಕೆ ಬಲ್ಲಾಳದೇವನಿಂದ ಅಪ್ಪಣೆಯನ್ನು ಪಡೆದನೆಂದು ಹೇಳಿರುವುದು.

ಶಕ ೧೧೬೧ ನೇ ವರ್ಷವು ಬಹುಧಾನ್ಯ ಸಂವತ್ಸರವಲ್ಲ; ವಿಕಾರಿ ಸಂವತ್ಸರವು; ಅಲ್ಲದೆ ಆ ವರ್ಷದಲ್ಲಿ ವೀರಬಲ್ಲಾಳದೇವನು ರಾಜ್ಯಭಾರವನ್ನು ಮಾಡುತ್ತಿರಲಿಲ್ಲ. ಆದುದರಿಂದ ಮ|| ರೈಸ್‌ರವರು '೧೧೬೧' ಎಂಬುದರ ಸ್ಥಾನದಲ್ಲಿ '೧೨೬೧' ಎಂದು ಇರಬೇಕೆಂದು ಹೇಳಿ (ಎಪಿ. ಕರ್ಣಾಟಿಕ ಸಂ. ೫, ಪುಟ ೪೨೮) ಈ ಶಾಸನವು ಹೊಯ್ಸಳ ರಾಜನಾದ ಮೂರನೆಯ ಬಲ್ಲಾಳನ ಕಾಲದಲ್ಲಿ ಹುಟ್ಟಿದುದೆಂದು ಹೇಳಿರುವರು.

ಆದರೆ ಈ ಅಭಿಪ್ರಾಯವು ತಪ್ಪಾದುದೆಂದು ಪ್ರಕೃತ ಶಾಸನದಲ್ಲಿರುವ 'ಪಾಂಡ್ಯಗಂಡಶೈಲವಜ್ರದಂಡಂ' ಎಂಬ ಬಿರುದಿನಿಂದಲೇ ವ್ಯಕ್ತವಾಗುವುದು. ಈ ಬಿರುದು (ಅಥವಾ ತತ್ಸಜಾತೀಯವಾದ 'ಪಾಂಡ್ಯಗಜಕೇಸರಿ' 'ಪಾಂಡ್ಯರಾಜದಿಶಾಪಟ್ಟ', 'ಪಾಂಡ್ಯರಾಯಪನ್ನಗವೈನತೇಯ' ಮೊದಲಾದ ಬಿರುದು) ನಾವು ಮೇಲೆ ನೋಡಿದಂತೆ ಹೊಯ್ಸಲ ಚಕ್ರವರ್ತಿಯಾದ ಎರಡನೆಯ ಬಲ್ಲಾಳನಿಂದ ಮೊದಲು ಧರಿಸಲ್ಪಟ್ಟು, ತದನಂತರ ಅವನ ಮಗನಾದ ಎರಡನೆಯ ನರಸಿಂಹನಿಂದಲೂ ಮತ್ತು ಮೊಮ್ಮಗನಾದ ವೀರಸೋಮೇಶ್ವರನಿಂದಲೂ ಧರಿಸಲ್ಪಟ್ಟಿದ್ದವೆಂದು ಶಾಸನಗಳಿಂದ ತಿಳಿಯಬರುವುದು. ಈ ಬಿರುದಿಗೆ ತಕ್ಕಂತೆ ವೀರಸೋಮೇಶ್ವರನು ಕ್ರಿ. ಶ. ೧೨೩೬ ರಲ್ಲಿ 'ಪ್ರಬಲತರ ಪ್ರತಾಪಪ್ರಸರವಶೀಕೃತ'ವಾದ ಪಾಂಡ್ಯದೇಶದಲ್ಲಿದ್ದು, ತನ್ನ ಸೇನಾನಾಯಕರಾದ ಬೋಗೈಯ ಮಲ್ಲೈಯರೆಂಬ ಸಹೋದರರಿಗೆ ಅಗ್ರಹಾರವನ್ನು ಮಾಡುವುದಕ್ಕೋಸ್ಕರ ತೆಂಗಿನಕಟ್ಟವೆಂಬ ದೊಡ್ಡ ಗ್ರಾಮವನ್ನು ಪ್ರೀತಿಪೂರ್ವಕವಾಗಿ ಕೊಟ್ಟನೆಂದೂ ಈ ದಂಡನಾಯಕರು ಪೂರ್ವೋಕ್ತವರ್ಷದ ವೈಶಾಖ ಬಹುಳ ಅಮಾವಾಸ್ಯೆಯಂದು (ಮೇ ೬ ನೆಯ ತಾರೀಖು) ಸೇತುವಿನಲ್ಲಿ ಶ್ರೀರಾಮನಾಥದೇವರ ಸನ್ನಿಧಿಯಲ್ಲಿ ಆ ಗ್ರಾಮವನ್ನು ಬ್ರಾಹ್ಮಣರಿಗೆ ದಾನಮಾಡಿದರೆಂದೂ ಕೃಷ್ಣರಾಜಪೇಟೆ ೬೩ ನೆಯ ಶಾಸನದಲ್ಲಿ ಹೇಳಿರುವುದು. ಈ ಶಾಸನದಲ್ಲಿ ಮಕರರಾಜ್ಯನಿರ್ಮೂಲನ, ಪಾಂಡ್ಯರಾಜದಿಶಾಪಟ್ಟ, ಚೋಳರಾಜ್ಯಪ್ರತಿಷ್ಠಾಚಾರ್ಯ ಎಂಬ ಬಿರುದುಗಳು ವೀರಸೋಮೇಶ್ವರನಿಗೆ ಹೇಳಲ್ಪಟ್ಟಿರುವುವು. ಹತ್ತು ವರ್ಷಗಳನಂತರ (ಕ್ರಿ. ಶ. ೧೨೪೭ ನೇ ವರ್ಷದ ಮಾರ್ಚಿ ೧೨ ನೇ ಮಂಗಳವಾರದಂದು) ಹುಟ್ಟಿದ ಮಂಡ್ಯದ ೬೨ ನೆಯ ಶಾಸನದಲ್ಲಾದರೆ ಮಗರರಾಜ್ಯನಿರ್ಮೂಳ ಚೋಳರಾಜ್ಯಪ್ರತಿಷ್ಠಾಚಾರ್ಯ ಪಾಂಡ್ಯರಾಜ್ಯಸ್ಥಾಪನಾಚಾರ್ಯ ಎಂಬ ಬಿರುದು

ಗಳು ವೀರಸೋಮೇಶ್ವರನಿಗೆ ಹೇಳಲ್ಪಟ್ಟಿರುವುವು. ಎಂದರೆ ಕ್ರಿ. ಶ. ೧೨೩೬ ಕ್ಕೂ ೧೨೪೬ ಕ್ಕೂ ನಡುವೆ ಮಧುರೆಯಲ್ಲಿ ರಾಜ್ಯವಾಳುತ್ತಿದ್ದ ಪಾಂಡ್ಯರಾಜನಿಗೆ ಕಷ್ಟಗಳುಂಟಾಗಿ ಅವನು ಸೋಮೇಶ್ವರನೊಡನೆ ಕಲಹಮಾಡುವುದನ್ನು ಬಿಟ್ಟು ಅವನ ಸಹಾಯವನ್ನೇ ಕೋರಿ, ತದ್ದ್ವಾರಾ ತನ್ನ ರಾಜ್ಯದಲ್ಲಿ ಸ್ಥಾಪಿತನಾದನೆಂದು ಈ ಶಾಸನಗಳಿಂದ ಸೂಚಿಸಲ್ಪಟ್ಟಿರುವುದು. ಈ ಕಾಲ ಮೊದಲುಗೊಂಡು 'ಪಾಂಡ್ಯರಾಜ್ಯಸ್ಥಾಪನಾಚಾರ್ಯ' ಎಂಬ ಬಿರುದೇ (ಅಥವಾ ಏತತ್ಸಜಾತೀಯವಾದ ಪಾಂಡ್ಯರಾಜ್ಯಪ್ರತಿಷ್ಠಾಚಾರ್ಯ,* ಪಾಂಡ್ಯಸಮುದ್ಧರಣ,† ಪಾಂಡ್ಯರಾಜ್ಯಸಮುದ್ಧರಣ,‡ ಪಾಂಡ್ಯರಾಯರಾಜ್ಯವಲ್ಲರೀವಸಂತ,§ ಪಾಂಡ್ಯಕುಲಸಮುದ್ಧರಣ,** ಮುಂತಾದ ಬಿರುದೇ) ಈ ಸೋಮೇಶ್ವರನಿಂದಲೂ, ಇವನ ಬಳಿಕ ರಾಜ್ಯವಾಳಿದ ಹೊಯ್ಸಳ ಚಕ್ರವರ್ತಿ ಮೂರನೆಯ ನರಸಿಂಹ ಮೂರನೆಯ ಬಲ್ಲಾಳರಿಂದಲೂ ಧರಿಸಲ್ಪಟ್ಟಿರುವುವು. ಆದುದರಿಂದ ಈ ಮೇಲೆ ಹೇಳಲ್ಪಟ್ಟ ಆಲದಹಳ್ಳಿಯ ಶಾಸನವು ಹೊಯ್ಸಳಚಕ್ರವರ್ತಿ ೩ನೆಯ ಬಲ್ಲಾಳನ ಕಾಲದಲ್ಲಿ ಹುಟ್ಟಿದುದಲ್ಲವೆಂದೂ ೨ನೇ ಬಲ್ಲಾಳನ ಕಾಲದಲ್ಲಿ ಹುಟ್ಟಿದ್ದಾಗಿರಬೇಕೆಂದೂ ಸ್ಪಷ್ಟವಾಗುವುದು.

ಎಂದರೆ ಈ ಶಾಸನದಲ್ಲಿ ಹೇಳಲ್ಪಟ್ಟಿರುವ ಶಕವರ್ಷ ೧೧೬೧ ನೆಯ ಬಹುಧಾನ್ಯ ಸಂವತ್ಸರವು ಕಲಿಯುಗ ೪೩೧೯ ನೆಯ ಅಥವಾ ಶಕವರ್ಷ ೧೧೪೧ ನೆಯ ಬಹುಧಾನ್ಯ ಸಂವತ್ಸರವೇ ಎಂದು ವ್ಯಕ್ತವಾಯಿತು. ಶಾಸನದಲ್ಲಿ ೧೧೪೧ ಎಂಬ ಸಂಖ್ಯೆಗೆ ಬದಲಾಗಿ ಪ್ರಮಾದದಿಂದ ೧೧೬೧ ಎಂದು ಬರೆಯಲ್ಪಟ್ಟಿರುವುದೋ ಅಥವಾ ಅಸಾಧಾರಣವಾದ ಒಂದು ಸಂಪ್ರದಾಯಕ್ಕನುಸಾರವಾಗಿ ಆ ಬಹುಧಾನ್ಯ ಸಂವತ್ಸರವು ಶಕ ೧೧೬೧ ನೇ ವರ್ಷವೆಂದು ಗಣಿಸಲ್ಪಟ್ಟಿರುವುದೋ ಎಂಬ ವಿಷಯವು ನಮಗೆ ತಿಳಿಯದು. ಅದು ಹೇಗಾದರೂ ಆಗಲಿ; ಕಲಿಯುಗ ೪೩೧೯ ನೆಯ ಬಹುಧಾನ್ಯ ಸಂವತ್ಸರದ ವೈಶಾಖ ಶುದ್ಧ ೨ ಬುಧವಾರದಂದು, ಎಂದರೆ ಪ್ರಾಯಶಃ ಕ್ರಿ.ಶ. ೧೨೧೯ನೇ ವರ್ಷದ ಏಪ್ರಿಲ್ ೧೭ನೇ ಬುಧವಾರದಂದು ಹುಟ್ಟಿದ ಈ ಶಾಸನದಲ್ಲಿ 'ಪಾಂಡ್ಯಗಂಡಶೈಲವಜ್ರದಂಡಂ ಚೋಳರಾಯರಾಜ್ಯಪ್ರತಿಷ್ಠಾಚಾರ್ಯ' ಎಂಬ ಬಿರುದುಗಳು ವೀರಬಲ್ಲಾಳನಿಗೆ ಹೇಳಲ್ಪಟ್ಟಿರುವುದರಿಂದ ಮೇಲೆ ಹೇಳಿದ

* ತಿಪ್ಟೂರು ೨೪ನೆಯ ಶಾಸನ.

† ತಿರುಮಕೂಡ್ಲು-ನರಶೀಪುರ ೭೪.

‡ ತಿರುಮಕೂಡ್ಲು-ನರಶೀಪುರ ೯೭.

§ ಕೃಷ್ಣರಾಜಪೇಟೆ ೯.

** ನಾಗಮಂಗಲ ೯೭.

ತಾರೀಖಿಗೆ ಹಿಂದೆಯೇ ಚೋಳರಾಜನು ಅವನಿಂದ ಸ್ವರಾಜ್ಯದಲ್ಲಿ ಸ್ಥಾಪಿಸಲ್ಪಟ್ಟ ನೆಂದು ಬೋಧಿತವಾಗುವುದು.

ಮೇಲೆ (ಪುಟ ೧೦೭) ಡಾ|| ಹುಲ್ಟ್ಸ್ರವರಿಂದ ಉದಾಹೃತವಾಗಿರುವ ಚಿಕ್ಕ ಮಗಳೂರು ೫೬ ನೆಯ ಶಾಸನದಲ್ಲಿ ವೀರನರಸಿಂಹನು 'ಶಕವರ್ಷ ೧೧೪೪ ಚಿತ್ರ ಭಾನು ಸಂ|| ದ ಆಶ್ವೀಜ ಶುದ್ಧ ೧೦ ಶಮೀ ಮಂಗಳವಾರದಂದು ತೆಂಕಲು ರಂಗನ ಮೇಲೆ' ನಡೆಯುತ್ತಿದ್ದನೆಂದು ಹೇಳಲ್ಪಟ್ಟಿದ್ದು ತೆಂಕಲು ರಂಗ ಎಂದರೆ ಶ್ರೀರಂಗ ವೆಂದು ಡಾ|| ಹುಲ್ಟ್ಸ್ರವರು ಅರ್ಥಮಾಡಿರುವರಷ್ಟೆ. ಈ ಶಾಸನದಲ್ಲಿ ಹೇಳಿರುವ 'ಆಶ್ವೀಜ ಶುದ್ಧ ದಶಮೀ' ಮಂಗಳವಾರವು ಕ್ರಿ.ಶ. ೧೨೨೨ ನೇ ವರ್ಷದ ಯಾವ ಮಂಗಳವಾರವೂ ಅಲ್ಲವೆಂದೂ ಆ ವರ್ಷದಲ್ಲಿ ಆಶ್ವೀಜ ಶುದ್ಧ ದಶಮಿಯು ಸೆಪ್ಟೆಂಬರ್ ೧೬ ನೆಯ ಶುಕ್ರವಾರವಾಯಿತೆಂದೂ, (ಸೆಪ್ಟೆಂಬರ್ ೧೩ ನೆಯ) ಮಂಗಳವಾರದ ದಿವಸ ಆಶ್ವೀಜ ಶುದ್ಧ ಸಪ್ತಮೀ ತಿಥಿ ಇತ್ತೆಂದೂ ಡಾ|| ಕೀಲ್ ಹೋರ್ನ್‌ರವರು ಲೆಕ್ಕಮಾಡಿ ಹೇಳಿರುವರೆಂದು ಡಾ|| ಹುಲ್ಟ್ಸ್ರವರೇ ಪೂರ್ವೋಕ್ತ ಎಪಿ. ಇಂಡಿಕ ೭ ನೇ ಸಂಪುಟದ ೧೬೨ ನೆಯ ಪುಟದಲ್ಲಿ (ಟಿಪ್ಪಣಿ ೧೦) ಬರೆದಿರು ವರು. ಆದುದರಿಂದ ಈ ಶಾಸನವು ಕ್ರಿ. ಶ. ೧೨೨೨ ರಲ್ಲಿ ಹುಟ್ಟಲಿಲ್ಲವೆಂದು ಸ್ಪಷ್ಟ ವಾಯಿತು. ಆರ್ಯಸಿದ್ಧಾಂತರೀತ್ಯಾ ಬೃಹಸ್ಪತಿಚಾರವನ್ನು ಗುಣಿಸಿನೋಡಿದಲ್ಲಿ, ಚಿತ್ರಭಾನು ಸಂವತ್ಸರವು ಕ್ರಿ. ಶ. ೧೨೧೭ ನೆಯ ವರ್ಷದ ಜೂಲೈ ೨೪ ರಲ್ಲಿ ಸುಮಾರು ೪೫ ಘಳಿಗೆ ೫ ವಿಘಳಿಗೆಗೆ ಹುಟ್ಟಿತು ಈ ಚಿತ್ರಭಾನು ಸಂವತ್ಸರದಲ್ಲಿ ಆಶ್ವೀಜ ಶುದ್ಧ ದಶಮಿಯು ೧೨೧೭ ನೆಯ ಸೆಪ್ಟೆಂಬರ್ ೧೨ ನೇ ಮಂಗಳವಾರದ ದಿವಸ ಲಂಕೋದಯೋತ್ತರ ೧೪ ಘಳಿಗೆ ೧೩ ವಿಘಳಿಗೆ ವರೆಗೆ ವ್ಯಾಪಿಸಿದ್ದುದರಿಂದ ಈ ಮಂಗಳವಾರವೇ ಮೇಲಿನ ಶಾಸನದಲ್ಲಿ ನಿರ್ದಿಷ್ಟವಾದ ದಿವಸವಾಗಿರುವಂತೆ ತೋರುವುದು (ಮೇಲೆ ನಿರ್ದಿಷ್ಟವಾದ ನನ್ನ ಪುಸ್ತಕದ ೧೦-೧೬ ನೇ ಪುಟಗಳನ್ನು ನೋಡಿ).

ಆದುದರಿಂದ ಕ್ರಿ. ಶ. ೧೨೧೭ ನೇ ವರ್ಷದ ಸೆಪ್ಟೆಂಬರ್ ತಿಂಗಳ ಸಮಯ ದಲ್ಲಿ ವೀರಬಲ್ಲಾಳನ ಮಗನಾದ ವೀರನರಸಿಂಹನು ದಕ್ಷಿಣದಲ್ಲಿ ಮಗರರಾಜ್ಯದ ಮೇಲೆ ದಂಡಯಾತ್ರೆ ಮಾಡಿ ೧೨೧೮ ನೆಯ ಜನವರಿ ಒಳಗೆ ಮಗರರಾಜನನ್ನು ಸೋಲಿಸಿ ಚೋಳರಾಜನಾದ ಮೂರನೇ ರಾಜರಾಜನನ್ನು ತನ್ನ ರಾಜ್ಯದಲ್ಲಿ ಸ್ಥಾಪನೆ ಮಾಡಿದನೆಂದು ತೋರುವುದು. ಇದರ ಪ್ರಯುಕ್ತ ವೀರಬಲ್ಲಾಳನು 'ಮಗರರಾಜ್ಯ ನಿರ್ಮೂಲನ ಚೋಳರಾಜ್ಯಪ್ರತಿಷ್ಠಾಚಾರ್ಯ' ಎಂಬ ಬಿರುದುಗಳನ್ನೂ, ವೀರನರ

ಸಿಂಹನು 'ಚೋಳರಾಜ್ಯಪ್ರತಿಷ್ಠಾಚಾರ್ಯ ಮಗರರಾಜ್ಯ ನಿರ್ಮೂಲನ' ಎಂಬ ಬಿರುದುಗಳನ್ನೂ ೧೨೧೮ ರಲ್ಲಿಯೇ ವಹಿಸಿದ್ದರೆಂದು ಮೇಲೆ ಹೇಳಿದ ಶಿಲಾಲೇಖನ ಗಳಿಂದ ನಾವು ಊಹಿಸಬಹುದು.

ಆ ಕಾಲದಲ್ಲಿ ಮಗರರಾಜ್ಯವನ್ನು ಯಾವ ದೊರೆಯು ಆಳುತ್ತಿದ್ದನೆಂಬುದು ನಮಗೆ ತಿಳಿಯದು. ಮೇಲಿನ ತಿರುವೇಂದಿಪುರದ ಶಿಲಾಲೇಖನದಲ್ಲಿ ಹೇಳಿರುವಂತೆ ಕ್ರಿ. ಶ. ೧೨೩೧-೩೨ ರಲ್ಲಿ ಚೋಳರಾಜನನ್ನು ಸೆರೆಹಿಡಿದಿದ್ದ ಕೋಪ್ಪೆರುಂಜಿಂಗನು ಮಗರರಾಜ್ಯದ ಅಧಿಪತಿಯಾಗಿದ್ದನೋ ಅಥವಾ ಬೇರೆ ಒಂದು ರಾಜ್ಯದ ಅಧಿಪತಿ ಯಾಗಿದ್ದನೋ ಎಂಬುದು ಕೂಡ ನಮಗೆ ತಿಳಿಯದು. ಈ ಕೋಪ್ಪೆರುಂಜಿಂಗನು ಕ್ರಿ. ಶ. ೧೨೪೩ ರಲ್ಲಿ 'ತ್ರಿಭುವನಚಕ್ರವರ್ತಿ' ಎಂಬ ಬಿರುದನ್ನು ವಹಿಸಿಕೊಂಡ ನೆಂದೂ, ಕ್ರಿ. ಶ. ೧೨೭೮-೭೯ ರಲ್ಲಿ ಕೂಡ ರಾಜ್ಯವನ್ನಾಳುತ್ತಿದ್ದನೆಂದೂ ತಿಳಿದು ಬರುವುದರಿಂದ (ಎಪಿ. ಇಂಡಿಕ, ಸಂಪುಟ ೭, ಪುಟ ೧೭೫) ಮಗರರಾಜ್ಯವನ್ನು ಕ್ರಿ. ಶ. ೧೨೧೭ ರಲ್ಲಿ ಇವನೇ ಆಳುತ್ತಿದ್ದ ಪಕ್ಷದಲ್ಲಿ, ಇವನು ೧೨೧೭ ರಿಂದ ೧೨೭೮-೭೯ರ ವರೆಗೆ ಎಂದರೆ, ಕನಿಷ್ಠಪಕ್ಷ ೬೧ ವರ್ಷಗಳ ಕಾಲ ರಾಜ್ಯಭಾರ ವನ್ನು ಮಾಡಿರಬೇಕು.

ಮೇಲೆ ಹೇಳಿದ ಚನ್ನಗಿರಿ ೭೨ ನೆಯ ಶಿಲಾಲೇಖನದಲ್ಲಿ ನಿರೂಪಿಸಲ್ಪಟ್ಟಿರು ವಂತೆ ಆನೆಗಳನ್ನು ಹಿಡಿದು ತರುವುದಕ್ಕಾಗಿ ನರಸಿಂಹನು ಸುಮಾರು ಕ್ರಿ.ಶ. ೧೨೨೧ ರಲ್ಲಿ ಮಗರರಾಜ್ಯದ ಮೇಲೆ ಮಾಡಿದ ದಂಡಯಾತ್ರೆಯು ಪ್ರಾಯಶಃ ಕ್ರಿ. ಶ. ೧೨೧೭ ರಲ್ಲಿ ಮಾಡಿದ ದಂಡಯಾತ್ರೆಗಿಂತ ಭಿನ್ನವಾಗಿರುವಂತೆ ಕಾಣಿಸುವುದು. ಹೀಗೆಯೇ 'ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿ ರಾಜ ಪರಮೇಶ್ವರಂ ದ್ವಾರಾವತೀಪುರವರಾಧೀಶ್ವರಂ···ವೈರೀಭಕಂಠೀರವಂ ಮಗರ ರಾಜ್ಯನಿರ್ಮ್ಮೂಳನಂ ಪಾಂಡ್ಯದಿಶಾಪಟ್ಟನುಂ ಚೋಳರಾಜ್ಯಪ್ರತಿಷ್ಠಾಚಾರ್ಯ ನಿಶ್ಯಂ ಕಪ್ರತಾಪಚಕ್ರವರ್ತಿ ಹೊಯ್ಸಳಶ್ರೀವೀರನಾರಸಿಂಹದೇವರು ಪೂರ್ವದಿಗ್ವಿಜಯದೊ ಳ್ ಅಪೂರ್ವಸಾಧಿತಕರಿತುರಗರತ್ನವಸ್ತುವಿಸ್ತಾರಿತವಿಜಯಲಕ್ಷ್ಮೀವಿಳಾಸಮೆಸೆಯೆ ನಿಜರಾಜಧಾನಿ ದೋರಸಮುದ್ರದ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ' ಎಂದು 'ಶಕವರ್ಷ ೧೧೪೫ನೆಯ ಸ್ವಭಾನುಸಂವತ್ಸರದ ಚೈತ್ರಶುದ್ಧ ಯೇಕಾದಶಿ ಆದಿತ್ಯವಾರ ವುತ್ತರಾಯಣ ಸಂಕ್ರಮಣ ವ್ಯತೀಪಾತ ದಂದು' ಹುಟ್ಟಿದ ಚನ್ನರಾಯಪಟ್ಟಣದ ೧೯೭ ನೆಯ ಶಾಸನದಲ್ಲಿ ನಿರ್ದಿಷ್ಟವಾಗಿ ರುವ ಪೂರ್ವದಿಗ್ವಿಜಯವು ೧೨೧೭ ನೆಯ ವರ್ಷದ ದಿಗ್ವಿಜಯದಿಂದ ಭಿನ್ನವಾಗಿರು ವುದು. ಹೀಗೆಯೇ 'ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾ

ಜಾಧಿರಾಜಂ ಪರಮೇಶ್ವರಂ ದ್ವಾರಾವತೀಪುರವರಾಧೀಶ್ವರಂ· ·ಮಗರರಾಜ್ಯನಿ ಮ್ರ್ಮೂಳನ ಚೋಳರಾಜ್ಯಪ್ರತಿಷ್ಠಾಚಾರ್ಯ ನಿಶ್ಶಂಕಪ್ರತಾಪಚಕ್ರವರ್ತಿ ಹೊಯ್ಸಣ-ಶ್ರೀವೀರನಾರಸಿಂಹದೇವರು ಮಗರನಮೇಲೆತ್ತಿನಡೆವುತಂ ಜೂಡವಾಡಿಯಕೊಪ್ಪದಲ್ ಉಪ್ಪಯಣಮಾಡಿ ಪೃಥ್ವೀರಾಜ್ಯಂಮಾಡುತ್ತಂ ಮುನಿವರಾದಿತ್ಯನಿಂ ಬಂದ ಪಚ್ಚೆಯುಂ ಕಂಠಾಭರಣವನಿಕ್ಕಿಕೊಂಬುತ್ಸವದಲ್ ತತ್ಪಾದಪದ್ಮೋಪಜೀವಿ ಶ್ರೀಕರಣದ ವಿಶ್ವನಾಥದೇವಂಗೆ ನೀನು ನಿರುಗುಂದನಾಡ ಕೆಂಬಾಳನಗ್ರಹಾರಂ ಮಾಡೆಂದು ಬೆಸಸಲಾ ವಿಶ್ವನಾಥದೇವ ಶಕವರ್ಷದ ೧೧೪೬ ನೆಯ ಸ್ವಭಾನು ಸಂವತ್ಸರದ ಆಶ್ವಯುಜ ಬ ೧೦ ಆ· · ·ಅಗ್ರಹಾರಂ ಮಾಡಿ' ಎಂದು ಚನ್ನರಾಯಪಟ್ಟಣದ ೨೦೩ ನೆಯ ಶಾಸನದಲ್ಲಿ ಹೇಳಲ್ಪಟ್ಟ ಮಗರರಾಜ್ಯದಮೇಲಿನ ದಂಡಯಾತ್ರೆಯು ಮೇಲೆ ಹೇಳಲ್ಪಟ್ಟ ಎಲ್ಲಾ ದಂಡಯಾತ್ರೆಗಳಿಂದಲೂ ಭಿನ್ನವಾದುದೆಂದು ಕಾಣಿಸುವುದು. ಆದುದರಿಂದ ವೀರನರಸಿಂಹನು ಮಗರರಾಜ್ಯದ ಮೇಲೆ ಅನೇಕವೇಳೆ ದಂಡಯಾತ್ರೆಯನ್ನು ಮಾಡಿದನೆಂದು ಹೇಳಬೇಕಾಗಿರುವುದು.

ಮೇಲೆ ಹೇಳಿದ ಹರಿಹರೇಶ್ವರ ದೇವಸ್ಥಾನದ ಶಿಲಾಲೇಖನದಲ್ಲಿ 'ಪಾಂಡ್ಯಗಂಡಶೈಲ ವಜ್ರದಂಡಂ' ಎಂಬ ಬಿರುದೂ, ಚನ್ನರಾಯಪಟ್ಟಣದ ೧೯೭ ನೆಯ ಶಾಸನದಲ್ಲಿ 'ಪಾಂಡ್ಯದಿಶಾಪಟ್ಟ' ಎಂಬ ಬಿರುದೂ ವೀರನರಸಿಂಹನಿಗೆ ಹೇಳಲ್ಪಟ್ಟಿರುವವಷ್ಟೆ. ಹೀಗೆಯೇ ವೀರಬಲ್ಲಾಳನಿಗೂ ನಾಗಮಂಗಲದ ೨೯ ನೆಯ ಶಿಲಾಲೇಖನದಲ್ಲಿ 'ಪಾಂಡ್ಯಗಜಕೇಸರಿ' ಎಂಬ ಬಿರುದು ಹೇಳಲ್ಪಟ್ಟಿರುವುದಷ್ಟೆ. ಅಲ್ಲಿ ಹೇಳಿರುವ 'ಚೋಳರಾಜ್ಯಪ್ರತಿಷ್ಠಾಚಾರ್ಯ ಮಗರರಾಜ್ಯದಿಶಾಪಟ್ಟ' ಎಂಬ ಬಿರುದುಗಳಂತೆ ಈ 'ಪಾಂಡ್ಯಗಜಕೇಸರಿ' ಎಂಬ ಬಿರುದೂ ಕೂಡ ಅವನ ಮಗ ವೀರನರಸಿಂಹನು ಕ್ರಿ. ಶ. ೧೨೧೭ ರಲ್ಲಿ ದಂಡಯಾತ್ರೆಯಲ್ಲಿ ಪಡೆದ ವಿಜಯಗಳ ಪ್ರಯುಕ್ತ ವೀರಬಲ್ಲಾಳನಿಂದ ವಹಿಸಲ್ಪಟ್ಟಿತೆಂದು ತೋರುವುದು.

ಆ ಕಾಲದಲ್ಲಿ ರಾಜ್ಯವನ್ನಾಳುತ್ತಿದ್ದ ಪಾಂಡ್ಯರಾಜನಾದ ಮಾರವರ್ಮನೆಂಬ ಒಂದನೆಯ ಸುಂದರಪಾಂಡ್ಯನು ಕ್ರಿ.ಶ. ೧೨೧೬ ರಲ್ಲಿ ಸಿಂಹಾಸನಕ್ಕೆ ಬಂದನು (ಎಪಿ. ಇಂಡಿಕ, ಸಂ. ೬, ಪುಟ ೩೧೪). ಈ ಸುಂದರಪಾಂಡ್ಯನಿಗೆ ಶಿಲಾಲೇಖನಗಳಲ್ಲಿ ಹೇಳಿರುವ 'ಶೋನಾಡುಕೊಂಡ' (ಚೋಳರಾಜ್ಯವನ್ನು ಹಿಡಿದವನು), 'ಶೋನಾಡುವಳಂಗಿಯ' (ಚೋಳರಾಜ್ಯವನ್ನು ವಿಭಾಗಮಾಡಿಕೊಟ್ಟವನು) ಎಂಬ ಬಿರುದುಗಳಿಂದಲೂ, ತಂಜಾವೂರು ಉರೈಯೂರು ಮೊದಲಾದ (ಚೋಳರ) ಊರುಗಳನ್ನು ಸುಟ್ಟವನು' ಎಂಬ ಬಿರುದಿನಿಂದಲೂ, ಇವನು ಚೋಳರ ಮೇಲೆ ಯುದ್ಧ ಮಾಡಿ ಅವರ ಊರುಗಳನ್ನು ಸುಟ್ಟನೆಂದು ತಿಳಿಯುವುದು. ಮೇಲೆ ಹೇಳಿದ

'ಶೋನಾಡುಕೊಂಡ' ಎಂಬ ಬಿರುದನ್ನು ಇವನಿಗೆ ಹೇಳುವ ಶಿಲಾಲೇಖನಗಳಲ್ಲಿ ಅರುಪ್ಪುಕೋಟ್ಟೆಯಲ್ಲಿನ ಸುಂದರೇಶ್ವರ ಗುಡಿಯಲ್ಲಿರುವ ಇವನ ಐದನೆಯ ವರ್ಷದ ಒಂದು ಶಿಲಾಲೇಖನವೇ ನಮಗೆ ತಿಳಿದಂತೆ ಮೊದಲನೇದಾಗಿದ್ದಾಗ್ಯೂ, ಇದಕ್ಕಿಂತ ಹಿಂದೆ ಹುಟ್ಟಿದ ಶಿಲಾಲೇಖನಗಳಲ್ಲಿಯೂ ಇಂತಹ ಬಿರುದುಗಳು ಇವನಿಗೆ ಹೇಳಲ್ಪಟ್ಟಿರುವುವೆಂದು ಊಹಿಸುವುದಕ್ಕೆ ಅವಕಾಶವಿರುವುದು. ಆದುದರಿಂದ ಇವನು ಸಿಂಹಾಸನವನ್ನೇರಿದ ವರ್ಷದಲ್ಲಿಯೇ ಅಥವಾ ಅದರ ಮುಂದಿನ ವರ್ಷದಲ್ಲಿಯೇ— ಎಂದರೆ ಕ್ರಿ.ಶ. ೧೨೧೬-೧೨೧೭ ರಲ್ಲಿ ಚೋಳರಾಜ್ಯವನ್ನು ಆಕ್ರಮಿಸಿ ಚೋಳನ ರಾಜಧಾನಿಯಾದ ತಂಜಾವೂರು ಉರೈಯೂರು ಪಟ್ಟಣಗಳನ್ನು ಸುಟ್ಟು ಅವನನ್ನು ರಾಜ್ಯಚ್ಯುತನನ್ನಾಗಿ * ಮಾಡಿದನೆಂದೂ, ಹೀಗೆ ರಾಜ್ಯಚ್ಯುತನಾದ ಚೋಳರಾಜನು 'ದಕ್ಷಿಣಚಕ್ರವರ್ತಿ' ಯೆಂದು ಪ್ರಸಿದ್ಧನಾದ ವೀರಬಲ್ಲಾಳನಲ್ಲಿ ಮೊರೆಯಿಡಲಾಗಿ ಅವನು ತನ್ನ ಮಗನಾದ ನರಸಿಂಹನನ್ನು ಕಳುಹಿಸಿ, ತನ್ಮೂಲಕವಾಗಿ ಪಾಂಡ್ಯರಾಜನನ್ನು ಸೋಲಿಸಿ ಚೋಳರಾಜನನ್ನು ಅವನ ರಾಜ್ಯದಲ್ಲಿ ಸ್ಥಾಪಿಸಿದನೆಂದೂ ತೋರುವುದು.

ಅದು ಹೇಗಾದರೂ ಆಗಲಿ; ರಾಜ್ಯಚ್ಯುತನಾಗಿದ್ದ ಚೋಳರಾಜನು ಸುಮಾರು ಕ್ರಿ.ಶ. ೧೨೧೭ನೇ ವರ್ಷದಲ್ಲಿ ವೀರಬಲ್ಲಾಳನ ಮೂಲಕವಾಗಿ ಪುನಃ ತನ್ನ ರಾಜ್ಯದಲ್ಲಿ ಸ್ಥಾಪಿಸಲ್ಪಟ್ಟನೆಂಬುದು ಸ್ಪಷ್ಟವಷ್ಟೆ. ವೀರಬಲ್ಲಾಳ ಕಾರಿತವಾದ ಈ ಚೋಳರಾಜರಾಜ್ಯಪ್ರತಿಷ್ಠಾಪನೆಯು 'ರಾಜರಾಜಪ್ರತಿಷ್ಠಾನಿರತಂ' ಎಂಬ ರುದ್ರಭಟ್ಟನ ವಿಶೇಷಣದಿಂದ ನಿರ್ದಿಷ್ಟವಾಗಿರುವುದರಿಂದ ರುದ್ರಭಟ್ಟನು ತನ್ನ ಗ್ರಂಥವನ್ನು ಕ್ರಿ.ಶ. ೧೨೧೭ ನೇ ವರ್ಷದ ಸೆಪ್ಟೆಂಬರ್ ತಿಂಗಳಿಂದ ಈಚೆಗೆ ಬರೆದಿರಬೇಕೆಂಬುದು ಸ್ಪಷ್ಟ. ಕ್ರಿ.ಶ. ೧೨೨೦ ನೇ ವರ್ಷದ ಏಪ್ರಿಲ್ ೧೬ ನೇ ತಾರೀಖಿಗಿಂತ ಹಿಂದೆ (ಆ ತಾರೀಖಿನಲ್ಲಿ ವೀರನರಸಿಂಹನು ಪಟ್ಟಾಭಿಷಿಕ್ತನಾದನೆಂದು ಚನ್ನರಾಯಪಟ್ಟಣದ ೧೭೨ ನೆಯ ಶಿಲಾಲೇಖನದಿಂದ ತಿಳಿದುಬರುವುದು. ಎಪಿ. ಕರ್ಣಾಟಕ ಸಂ. ೫, ಉಪೋ. ಪುಟ ೨೩ ರನ್ನು ನೋಡಿ) ಲೋಕಾಂತರವನ್ನೈದಿದ ಅವನ ಸ್ವಾಮಿಯಾದ ವೀರಬಲ್ಲಾಳನು ಆ ಗ್ರಂಥರಚನಾಕಾಲದಲ್ಲಿ ಜೀವಿಸುತ್ತಿದ್ದುದರಿಂದ ಆ ಗ್ರಂಥವು ಆ ತಾರೀಖಿಗಿಂತ ಹಿಂದೆ ಬರೆಯಲ್ಪಟ್ಟಿರಬೇಕೆಂಬುದೂ ಸ್ಪಷ್ಟ. ಆದುದರಿಂದ ರುದ್ರಭಟ್ಟನು ತನ್ನ ಗ್ರಂಥವನ್ನು ಕ್ರಿ.ಶ. ೧೨೧೮-೧೨೧೯ ರಲ್ಲಿ ಬರೆದನೆಂದು ಸಿದ್ಧವಾಗುವುದು.

---

* ಮೇಲೆ ಹೇಳಿದ ಬಿರುದುಗಳಲ್ಲದೆ, 'ಮುಡಿಗೊಂಡ ಶೋಳಪುರದಲ್ಲಿ ವೀರರಿಗೆ ಪಟ್ಟಾಭಿಷೇಕವನ್ನು ಮಾಡಿದವನು' ಎಂಬ ಬಿರುದೂ ಕೂಡ ಈ ಸುಂದರಪಾಂಡ್ಯನಿಗೆ ಹೇಳಲ್ಪಟ್ಟಿರುವುದು. ಇದನ್ನು ನೋಡಿದರೆ, ಇವನು ಚೋಳರಾಜನನ್ನು ಓಡಿಸಿ ಆ ರಾಜ್ಯದಲ್ಲಿ ಬೇರೆ ಒಬ್ಬನನ್ನು ಪಟ್ಟಗಟ್ಟಿ, ದೊರೆಯಾಗಿ ಮಾಡಿದನೆಂದು ಕಾಣಿಸುವುದು.

## ೧೧. ದೇವಕವಿ.

ಈ ಕವಿಯ ವಿಷಯವನ್ನು ಕುರಿತು ಕವಿಚರಿತಕಾರರು ಹೀಗೆಂದು ಬರೆದಿರುವರು —

" ಈತನು ಕುಸುಮಾವಳೀ ಕಾವ್ಯವನ್ನು ಬರೆದಿದ್ದಾನೆ.

ಇವನು ಶೈವನು ; ತನ್ನ ಹೆಸರನ್ನು ಕಂಠೋಕ್ತವಾಗಿ ಹೇಳಿಕೊಂಡಿಲ್ಲ. ಆದರೆ ಗ್ರಂಥದ ಹದಿನೈದನೆಯ ಆಶ್ವಾಸದಲ್ಲಿ ಸೈನ್ಯದ ಭೇರೀರವವನ್ನು ವರ್ಣಿಸುವಾಗ—

ಕವಿಕಮಳಜಸೂಕ್ತಿಸುಧಾ | ರ್ಣವಸೋಮಂ ದೇವಕವಿ ದಲೆಂದಿನಿತಂ ಸಾ ||

ಱುವವೋಲ್ ಭೇರೀಭಾಂಕೃತಿ | ರವಮೊಗೆದತ್ತುತ್ತರಾಶೆಯೊಳ್ ಮತ್ತಾಗಳ್ ||

ಎಂಬ ಪದ್ಯವನ್ನು ಬರೆದಿದ್ದಾನೆ. ಇಲ್ಲಿ ದೇವಕವಿಯೆಂದು ತನ್ನ ಹೆಸರನ್ನೇ ಹೇಳಿಕೊಂಡಿರುವಂತೆ ಕಾಣುತ್ತದೆ. ಕವಿಕಮಳಜಸೂಕ್ತಿಸುಧಾರ್ಣವಸೋಮಂ ಎಂಬುದರಿಂದ ಶಾಂತೀಶ್ವರ ಪುರಾಣವನ್ನು ಬರೆದ ಕವಿಕಮಳಭವನಿಗೆ ಗ್ರಂಥರಚನೆಯಲ್ಲಿ ಈತನು ಪ್ರೋತ್ಸಾಹಮಾಡಿದಂತೆ ಊಹಿಸಬಹುದಾಗಿದೆ. ಈ ಊಹೆಗೆ ಸಹಕಾರಿಯಾಗಿ ಋತು ಸೂರ್ಯಾಸ್ತ ಮೊದಲಾದ ವರ್ಣನಾಭಾಗಗಳಲ್ಲಿ ಈತನು ಬರೆದಿರುವ ಪದ್ಯಗಳಲ್ಲಿ ಹಲವು ಅದೇ ಸಂದರ್ಭಗಳಲ್ಲಿ ಶಾಂತೀಶ್ವರಪುರಾಣದಲ್ಲಿಯೂ ದೊರೆಯುತ್ತವೆ.

ಈತನ ಗ್ರಂಥದಿಂದ ಮಲ್ಲಿಕಾರ್ಜುನನು (ಸು. 1245) ಪದ್ಯಗಳನ್ನು ಉದ್ಧರಿಸಿ ಬರೆದಿರುವುದರಿಂದ ಈತನು ಅವನ ಕಾಲಕ್ಕೆ ಹಿಂದಣವನು ಎಂಬುದು ವ್ಯಕ್ತವಾಗುತ್ತದೆ. ಈತನು ರುದ್ರಭಟ್ಟನನ್ನೂ (ಸು. 1180), ಅಗ್ಗಳನನ್ನೂ (1189) ಸ್ತುತಿಸಿರುವುದರಿಂದ ಅವರ ಕಾಲಕ್ಕೆ ಈಚೆಯವನು ಎಂಬುದೂ ವ್ಯಕ್ತವಾಗುತ್ತದೆ. ಆದುದರಿಂದ ಈತನು ಸುಮಾರು 1200 ರಲ್ಲಿ ಇದ್ದಿರಬಹುದು " (ಕವಿಚರಿತೆ I. ೨೪೮-೨೪೯).

ರುದ್ರಭಟ್ಟನು ಜಗನ್ನಾಥವಿಜಯವನ್ನು ಕ್ರಿ.ಶ. ೧೨೧೭ ನೇ ವರ್ಷದ ಸೆಪ್ಟಂಬರ್ ತಿಂಗಳಿಂದ ಈಚೆಗೂ ಕ್ರಿ.ಶ. ೧೨೨೦ ರಲ್ಲಿ ವೀರಬಲ್ಲಾಳನ ಮರಣಕ್ಕಿಂತ ಹಿಂದೆಯೂ ಬರೆದನೆಂದು ನಾವು ಮೇಲೆ ವ್ಯಕ್ತಮಾಡಿರುವೆವಷ್ಟೆ. ಆದುದರಿಂದ ಈ ರುದ್ರಭಟ್ಟನನ್ನು ಹೊಗಳುವ ದೇವಕವಿಯು ಕ್ರಿ.ಶ. ೧೨೧೭ ನೆಯ ಸೆಪ್ಟೆಂಬರ್ ತಿಂಗಳಿನಿಂದೀಚೆಗೆ ತನ್ನ ಗ್ರಂಥವನ್ನು ಬರೆದಿರಬೇಕೆಂಬುದು ಸ್ಪಷ್ಟವಾಗುವುದು.

ಮೇಲೆ ಹೇಳಿದ ಕಮಲಭವನು ಶಾಂತೀಶ್ವರ ಪುರಾಣವನ್ನು ಕ್ರಿ.ಶ. ಸುಮಾರು ೧೨೫೫ ರಲ್ಲಿ ಬರೆದನೆಂದು ನಾವು ಮುಂದೆ (ಪುಟ ೧೧೮) ನಿರೂಪಿಸುವೆವು. ಆದುದರಿಂದ ಈ ಗ್ರಂಥದ ರಚನೆಗೆ ಪ್ರೋತ್ಸಾಹಕನಾಗಿದ್ದ ದೇವಕವಿಯು ಸುಮಾರು ೧೨೪೫–೧೨೫೦ ರಲ್ಲಿ ಕುಸುಮಾವಳೀ ಕಾವ್ಯವನ್ನು ಬರೆದನೆಂದು ನಾವು ಹೇಳಬಹುದು.

# ದೂರದ ಆಸೆ

ರಾಮಚಂದ್ರ—"ಏನು ಯೋಚಿಸುತ್ತಿದ್ದೆ ಶ್ರೀಕಂಠ?"

ಶ್ರೀಕಂಠ—"ಏನು ಯೋಚಿಸಲಿ ರಾಮು! ನನಗೆ ಇರುವುದು ಒಂದೇ ಯೋಚನೆ"

"ಅದೇನು?"

"ನಿನಗೆ ಗೊತ್ತಿಲ್ವೆ?"

"ಏನು?"

"ನನ್ನ ತಂಗಿ ಮದುವೆ ನಿಂತುಹೋದದ್ದು"

"ಗೊತ್ತು"

"ಅದಕ್ಕೆ ಕಾರಣವೂ ಗೊತ್ತಿರಬಹುದು."

"ಕಣ್ಣು ಏನೋ ಸ್ವಲ್ಪ.........."

"ಹೌದು. ಅದು ದಿನದಿನಕ್ಕೆ ಹೆಚ್ಚಿ ಈಗ ಅವಳು ಶುದ್ಧ ಕುರುಡಿಯಾಗಿ ಬಿಟ್ಟಿದ್ದಾಳೆ. ಅವಳ ಸಂಕಟ ಹೇಳಲಾರೆ. ಅಮ್ಮ ಒಂದು ಕಡೆ ಕೊರಗುತ್ತಿದ್ದಾಳೆ. ಮೀನಾಕ್ಷಿಗೆ ಈಗಾಗಲೇ ಹನ್ನೆರಡು ತುಂಬಿ ಹದಿಮೂರನೆಯ ವರ್ಷ. ಇನ್ನೂ ಮದುವೆಯಿಲ್ಲ. ಹೇಗೆ ಆಗುತ್ತೋ ನಾನು ಕಾಣೆ. ಮದುವೆಗೆ ಗಂಡು ಗೊತ್ತಾಗಿ, ಎಲ್ಲವೂ ನಿಶ್ಚಯವಾಗಿ, ಲಗ್ನಕ್ಕೆ ದಿನವನ್ನೂ ಗೊತ್ತುಮಾಡಿದ್ದರು. ಅಷ್ಟರಲ್ಲೇ ದೇವರು ನಮಗೆ ಈ ಸಂಕಟ ತಂದಿಟ್ಟ. ಅಪ್ಪ ಬದುಕಿದ್ದಿದ್ದರೆ ಎಷ್ಟೋ ಧೈರ್ಯ ವಿರುತ್ತಿತ್ತು. ದೇವರು ಅವನನ್ನು ಕರೆದುಕೊಂಡ. ರಾಮು! ಈಗ ನಮ್ಮ ಪಾಡು ನಾಯಿಯ ಪಾಡಾಗಿದೆ. ಅವಳಿಗೆ ಮದುವೆಯಾಗಲೇಬೇಕು. ಆದರೆ ಹೇಗೆ ಆಗ ಬೇಕು? ಈಗ ಆ ನಿರ್ಭಾಗ್ಯಳನ್ನು ಯಾರು ಮದುವೆಯಾಗುತ್ತಾರೆ? ರಾಮು, ಅವಳದ್ದು ಎಂತಹ ಕರ್ಮ! ಮನೆಯ ಕೆಲಸಕಾರ್ಯಗಳಲ್ಲಿ ಅವಳಿಗೆ ಎಷ್ಟು ಚಟು ವಟಿಕೆ! ಒಂದು ದಿನವೂ ಗಟ್ಟಿಯಾಗಿ ಮಾತನಾಡಿದವಳಲ್ಲ. ಎಷ್ಟು ಪುಸ್ತಕಗಳನ್ನು ಓದುತ್ತಿದ್ದಳು! ಎಷ್ಟು ಹಾಡುಗಳು! ಈಗ ಅವಳಿಗೆ ಹಾಡು ಗೀಡು ಒಂದೂ ಬೇಡ. ಮೂಲೆಯಲ್ಲಿ ಕುಳಿತು ಅಳುವುದು ಒಂದೇ ಅವಳ ಹಾಡು. ಇನ್ನುಮುಂದೆ ಅವಳಿಗೆ ಎಂತಹ ಜೀವನ! ಅಯ್ಯೋ ಕರ್ಮವೇ!"

ಶ್ರೀಕಂಠನ ಕಣ್ಣುಗಳ ಅಂಚಿನಲ್ಲಿ ನೀರು ತುಂಬಿಕೊಂಡಿತು. ಅವನಿಗೆ ಮುಂದೆ ಮಾತನಾಡಲಾಗಲಿಲ್ಲ. ಮುಖವನ್ನು ಬೇರೆಕಡೆಗೆ ತಿರುಗಿಸಿಕೊಂಡು ಕಣ್ಣೀ ರನ್ನು ಒರಸಿಕೊಳ್ಳುತ್ತ ಮೌನವಾಗಿ ಅಳುತ್ತಿದ್ದ. ರಾಮಚಂದ್ರನೂ ಮಾತಿಲ್ಲದೆ ಕುಳಿ

ತಿದ್ದ. ರಜನಿಯ ನೀಲಿಸೀರೆಯ ಸೆರಗಿನಲ್ಲಿ ಸೇರಿಸಿ ನೆಯ್ದ ವಜ್ರದ ಕಿಡಿಗಳಂತೆ, ಆಕಾಶದಲ್ಲಿ ಅಲ್ಲಲ್ಲಿ ನಕ್ಷತ್ರಗಳು ತಲೆದೋರುತ್ತಿದ್ದವು. ಯಾರನ್ನೋ ಹುಡುಕಿಕೊಂಡು ಸುತ್ತಾಡುತ್ತಿದ್ದಂತೆ, ತಣ್ಣನೆಯ ಗಾಳಿ ಅಲ್ಲಿ ಸುಳಿದು ಇಲ್ಲಿ ಸುಳಿದು ಮೆಲ್ಲಗೆ ಬೀಸಿ ಬರುತ್ತಿತ್ತು. ರಾಮಚಂದ್ರ ಏನೋ ಯೋಚಿಸುತ್ತಿದ್ದವನು ಹಾಗೆಯೇ ಹಿಂದಕ್ಕೆ ಒರಗಿಕೊಂಡು ಆಕಾಶದ ಕಡೆ ನೋಡತೊಡಗಿದನು. ಬರಬರುತ್ತ ಅವನ ಹೊರಗಿನ ದೃಷ್ಟಿ ಮಂಕಾಯಿತು. ನಿಧಾನವಾಗಿ ಅವನ ಕಣ್ಣರೆಪ್ಪೆಗಳು ಮುಚ್ಚಿಕೊಂಡವು. ಹುಬ್ಬು ಗಂಟಾಯಿತು. ಶ್ರೀಕಂಠನ ಗೋಳಿನ ಕಥೆಯನ್ನು ಕೇಳಿ ಅವನ ಮನಸ್ಸು ನೀರು ಹೊಯ್ದ ಸುಣ್ಣಕಲ್ಲಿನಂತೆ ಆಗಿತ್ತು. ರಾಮಚಂದ್ರ ಬಹಳ ಹೊತ್ತು ಹಾಗೆಯೇ ಇದ್ದು ಆಮೇಲೆ ದೊಡ್ಡದಾಗಿ ನಿಟ್ಟುಸಿರು ಬಿಟ್ಟು, ಶ್ರೀಕಂಠನ ಕಡೆ ತಿರುಗಿದ. ಶ್ರೀಕಂಠ ತಲೆ ಬಗ್ಗಿಸಿಕೊಂಡು ಕುಳಿತಿದ್ದ. ಅಷ್ಟುಹೊತ್ತಿಗೆ ಅಠಾರಾಕಚೇರಿಯಲ್ಲಿ ಏಳುಗಂಟೆ ಹೊಡೆಯಿತು. ರಾಮಚಂದ್ರ "ಹೋಗೋಣವೆ?" ಎಂದು ಎದ್ದು ನಿಂತುಕೊಂಡ. ಶ್ರೀಕಂಠನೂ ನಿಧಾನವಾಗಿ ಎದ್ದು, ಪಂಚೆಯ ತುದಿಯಿಂದ ಕಣ್ಣೀರನ್ನು ಒರೆಸಿಕೊಂಡು ಹೊರಟ

(೨)

ಮಾರನೆಯದಿನ ಸಾಯಂಕಾಲ ಶ್ರೀಕಂಠನಿಗೆ ಒಂದು ಕಾಗದ ಬಂತು—ಕವರು. ಅವನಿಗೆ ಆಶ್ಚರ್ಯವಾಯಿತು. ಕಾಗದ ಪತ್ರ ಬರೆಯುವ ವಾಡಿಕೆಯೇ ಅವನಲ್ಲಿರಲಿಲ್ಲ. ಟಪಾಲು ಮುದ್ರೆ ನೋಡಿದ. ಅದೇ ಊರಿನದೆ! ಅವನಿಗೆ ಕುತೂಹಲ ಹೆಚ್ಚಿತು. ಕವರನ್ನು ಹರಿದು ನೋಡಿದರೆ ಒಳಗೆ ಕನ್ನಡದಲ್ಲಿ ಒಂದು ಕಾಗದ. ಯಾರು ಬರೆದಿರಬಹುದು ಎಂಬ ಕುತೂಹಲದಿಂದ ಕಾಗದದ ಕೆಳಗೆ ಮೊದಲು ನೋಡಿದ. "ರಾಮಚಂದ್ರ" ಎಂದು ಇತ್ತು. ಆತುರದಿಂದ ಕಾಗದವನ್ನು ಓದಿದ. ಓದುತ್ತ ಓದುತ್ತ ಅವನ ಕಣ್ಣುಗಳಲ್ಲಿ ನೀರು ತುಂಬಿ ಜಾರಿತು. "ರಾಮು! ರಾಮು!" ಎಂದು ಮೆಲ್ಲಗೆ ಹೇಳುತ್ತ ಆ ಕಾಗದವನ್ನು ತನ್ನ ಎದೆಗೆ ಒತ್ತಿಕೊಂಡ. ರಾಮಚಂದ್ರ ದೊಡ್ಡ ಕಾಗದವನ್ನು ಬರೆದಿದ್ದ. ಅದರಲ್ಲಿ ಮುಖ್ಯವಾದ ವಿಷಯ ಈ ರೀತಿಯಾಗಿತ್ತು:—

ಬೆಂಗಳೂರು,

ತಾ||......................

"......................ನೆನ್ನೆ ನೀನು ಹೇಳಿದ ವಿಚಾರವಾಗಿ, ಆಗಿನಿಂದ ಇದುವರೆಗೂ ಬಹಳ ಯೋಚಿಸಿದ್ದೇನೆ. ಯಾವ ರೀತಿಯಲ್ಲಿ ಯೋಚಿಸಿದರೂ ನನಗೆ ಒಂದೇ ಒಂದು ದಾರಿ ತೋರುವುದು. ನೆನ್ನೆ ನೀನು "ಆ ನಿರ್ಭಾಗ್ಯಳನ್ನು ಯಾರು ಮದುವೆಯಾಗುತ್ತಾರೆ?"

ಎಂದು ಕೇಳಿದೆ. ಆದಕ್ಕೆ ಉತ್ತರವು ನೆನ್ನೆ ರಾತ್ರೆ ನನ್ನ ಮನಸ್ಸಿಗೆ ಹೊಳೆಯಿತು. ಉತ್ತರ—ನಾನು. ನಾನು ಅವಳನ್ನು ಮದುವೆಯಾಗುತ್ತೇನೆ. ನಾನು ನಿಮ್ಮ ಪಂಗಡಕ್ಕೆ ಸೇರಿದವನಲ್ಲ. ಆದರೆ ನೀನು ಎಷ್ಟರಮಟ್ಟಿಗೆ ಬ್ರಾಹ್ಮಣನೋ ನಾನೂ ಅಷ್ಟರಮಟ್ಟಿಗೇ ಬ್ರಾಹ್ಮಣ. ನನಗೆ ಒಂದು ಕುರುಡುಕಾಸಿನ ಆಸೆಯೂ ಇಲ್ಲ. ಈ ವಿಷಯವನ್ನು ನಿನ್ನ ತಾಯಿಯವರೊಡನೆ ಆಲೋಚನೆ ಮಾಡಿ ನೋಡು. ನಿನ್ನ ತಂಗಿಯ ಅಭಿಪ್ರಾಯವೂ ಅವಶ್ಯಕ. ನೀವೆಲ್ಲರೂ ಒಪ್ಪುವುದಾದರೆ ನನ್ನ ಪರೀಕ್ಷೆ ಮುಗಿದ ಕೂಡಲೆ ಮದುವೆಯಾಗಲು ಸಿದ್ಧನಾಗಿದ್ದೇನೆ. ಈ ಕಾಗದದಲ್ಲಿ ಸಂಕ್ಷೇಪವಾಗಿ ಬರೆದಿದ್ದೇನೆ. ಸಾಧ್ಯವಾದರೆ ನಾಳೆ ಸಾಯಂಕಾಲ ನನ್ನ ಕೊಠಡಿಯ ಹತ್ತಿರ ಬಾ. ಇಬ್ಬರೂ ಹೆಚ್ಚು ವಿಶದವಾಗಿ ಮಾತನಾಡಬಹುದು............"

...........................

ಇತಿ ರಾಮಚಂದ್ರ.

ರಾಮಚಂದ್ರನ ಕಾಗದ ಬಂದು ಶ್ರೀಕಂಠನ ಮನಸ್ಸಿಗೆ ಬಹಳ ಶಾಂತಿಯನ್ನು ತಂದಿತು. ದಾರಿತಪ್ಪಿದ ಕುರುಡನಿಗೆ ಯಾರೋ ಕೈಹಿಡಿದು ನಡೆಸಿದಂತಾಯಿತು. ಶ್ರೀಕಂಠ ಹೆಚ್ಚು ಕಾಲ ವಿಳಂಬ ಮಾಡದೆ ರಾಮಚಂದ್ರ ಬರೆದ ವಿಷಯವಾಗಿ ತನ್ನ ತಾಯಿಯೊಡನೆ ಪ್ರಸ್ತಾಪ ಮಾಡಿದ. ಲಕ್ಷ್ಮಮ್ಮನವರು ಮೊದಲು ಒಪ್ಪಲಿಲ್ಲ. "ಅವನು ಬೇರೆ ಪಂಗಡಕ್ಕೆ ಸೇರಿದವನು. ಹೇಗೆ ಅವನಿಗೆ ಹುಡುಗಿಯನ್ನು ಕೊಡುವುದು—ಜನ ಏನೆಂದಾರು!" ಎಂದು ಮುಂತಾಗಿ ಆಕ್ಷೇಪಣೆ ತಂದರು. ಶ್ರೀಕಂಠನಿಗೆ ಸ್ವಲ್ಪ ಸಿಟ್ಟುಬಂತು. ಅವನು ಹೇಳ ತೊಡಗಿದನು :—"ಅಮ್ಮ ಇಲ್ಲಿ ಕೇಳು, 'ಜನ ಏನೆಂದಾರು?' ಎನ್ನುವೆ. ಈಗ ಮೀನಾಕ್ಷಿಯ ಮದುವೆ ನಿಂತುಹೋಯಿತಲ್ಲ, 'ಜನ' ನಮ್ಮ ಸಹಾಯಕ್ಕೆ ಬರುತ್ತಾರೇನು? ಅಪ್ಪ ಕಷ್ಟಪಟ್ಟಿದ್ದು ನಿನಗೆ ಗೊತ್ತಿಲ್ಲವೆ? ಆಗ 'ಜನ' ಏನು ಸಹಾಯ ಮಾಡಿದರು? ಜನರ ಮನೆ ಹಾಳಾಯಿತು! ನೀನು ತಲೆಕೆಳಗಾದರೂ 'ನಮ್ಮ ಜನ' ಎನ್ನಿಸಿಕೊಂಡವರಲ್ಲಿ ಯಾವ ವರನೂ ಸಿಕ್ಕುವುದಿಲ್ಲ. ಹುಡುಗಿ ಸರಿಯಾಗಿದ್ದಾಗಲೇ ಆ ಗತಿ. ಈಗ ಹೇಳುವುದೇನಿದೆ? ನೀನೇ ಯೋಚಿಸಿನೋಡು. ನಮ್ಮ ಪಂಗಡದಲ್ಲಿ ಅಲ್ಲ—ಇನ್ನು ಯಾವ ಪಂಗಡದಲ್ಲಿಯಾದರೂ, ನಾವು ಕಾಲಿಗೆ ಬಿದ್ದರೂ ಒಪ್ಪುವ ಗಂಡು ಒಬ್ಬನೂ ಇಲ್ಲ. ಹೀಗಿರುವಾಗ (ಕಣ್ಣುಗಳಲ್ಲಿ ಚಿಮ್ಮಿಬಂದ ನೀರನ್ನು ಒರಸಿಕೊಳ್ಳುತ್ತ)—ನಾನು ಹೇಳಿದುದನ್ನೆಲ್ಲಾ ಕೇಳಿ, ರಾಮಚಂದ್ರ ತಾನಾಗಿ ಮೀನಾಕ್ಷಿಯನ್ನು ಮದುವೆಯಾಗಲು ಒಪ್ಪಿ ಬರೆದಿರುತ್ತಾನೆ. ಅವನು ನಮ್ಮ ಪಂಗಡಕ್ಕೆ ಸೇರದ ಮಾತ್ರಕ್ಕೆ ಬ್ರಾಹ್ಮಣನಲ್ಲವೆ? ನಮ್ಮ ಪಂಗಡದವರೇ ನಮ್ಮ ಕೈಬಿಟ್ಟ ಮೇಲೆ ಇನ್ನು ಆ ಪಂಗಡದಲ್ಲಿ ಏಕೆ ಇರಬೇಕು? ಅವನು ಈ ವರ್ಷ ಪರೀಕ್ಷೆಗೆ ಹೋಗಿದ್ದಾನೆ. ಖಂಡಿತವಾಗಿಯೂ

"ಪ್ಯಾಸ್" ಮಾಡುತ್ತಾನೆ. ಕೊನೆಗೆ ಒಂದು ಐವತ್ತು ರೂಪಾಯಿ ಸಂಬಳ ಸಿಕ್ಕಿದರೂ ಅವರು ಗಂಡಹೆಂಡತಿ ಸುಖವಾಗಿರಬಹುದು. ನೋಡು 'ಒಂದು ಕುರುಡು ಕಾಸಿನ ಆಸೆಯೂ ಇಲ್ಲ' ಎಂದು ಬರೆದಿದ್ದಾನೆ. ಆ ಬ್ರಹ್ಮರಾಕ್ಷಸ ವರದಕ್ಷಿಣೆಯ ಕಾಟವಂತೂ ಇಲ್ಲ. ಅಪ್ಪ ಮದುವೆಗಾಗಿ ಸೇರಿಸಿದ ದುಡ್ಡು ಹಾಗೆಯೇ ಇದೆಯಲ್ಲ, ಅದರಲ್ಲಿ ಅವನು ಮಾಡಿರುವ ಸಾಲವನ್ನೆಲ್ಲಾ ತೀರಿಸಿ ಉಳಿದ ಅಲ್ಪಸ್ವಲ್ಪದರಲ್ಲಿ ಹೇಗೋ ಹಾಗೆ ಮದುವೆ ಮಾಡಬಹುದು. ಅವನ "ಲೈಫ್ ಇನ್ಷೂರೆನ್ಸ್" ಹಣ ಸ್ವಲ್ಪ ಬರುವುದಿದೆ. ಬಂದರೆ ಎಷ್ಟೋ ಸಹಾಯವಾಗುತ್ತದೆ. ನೀನು ಇದನ್ನೆಲ್ಲಾ ಯೋಚನೆಮಾಡದೆ ಸುಮ್ಮನೆ 'ಆಗುವುದಿಲ್ಲ' ಎಂದರೆ ಚೆನ್ನಾಗಿರುತ್ತದೆಯೆ?"

ಈ ಉಪನ್ಯಾಸವನ್ನು ಕೇಳಿದ ಮೇಲೆ ಲಕ್ಷ್ಮಮ್ಮನವರಿಗೆ ಜ್ಞಾನೋದಯವಾಯಿತು. "ಆಗಲಪ್ಪ—ಆದರೆ. .." ಎಂದು ಹೇಳಿ ಸ್ವಲ್ಪ ನಿಲ್ಲಿಸಿದರು. ಶ್ರೀಕಂಠ ಹುಬ್ಬುಗಂಟಿಕ್ಕಿ "ಪುನಃ ಇದೇನು? ಆದರೆ" ಎಂದು ಕೇಳಿದ.

"ಮೀನಾಕ್ಷಿ ಏನು ಹೇಳುವಳೋ?"

"ಅದರ ವಿಷಯ ನನಗೆ ಬಿಡು."

ಶ್ರೀಕಂಠ ಪಕ್ಕದ ಕೊಠಡಿಗೆ ಹೋದ. ಒಳಗೆ ಬಾಗಿಲ ಹಿಂದೆ ಮೀನಾಕ್ಷಿ ಕುಳಿತಿದ್ದಳು. ತಲೆಬಾಚಿಕೊಂಡಿದ್ದಳು. ಬಲಗೈಯ ತೋರಬೆರಳಿನ ತುದಿಯಲ್ಲಿ ಒಂದು ಕುಂಕುಮದ ಬೊಟ್ಟು. ಕುಂಕುಮವನ್ನು ಇಟ್ಟುಕೊಳ್ಳುವುದರಲ್ಲಿದ್ದಳು. ಅಣ್ಣ ತಾಯಿಯರ ಮಾತುಗಳನ್ನೆಲ್ಲಾ ಕೇಳುತ್ತಿದ್ದವಳು, ಕುಂಕುಮವನ್ನು ಇಟ್ಟುಕೊಳ್ಳುವುದನ್ನು ಮರೆತು, ಹಾಗೆಯೇ ಕೈಯನ್ನು ತೊಡೆಯಮೇಲೆ ಇಟ್ಟುಕೊಂಡಿದ್ದಳು. ಕಂಬನಿಗಳನ್ನು ಆಗತಾನೇ ಒರಸಿಕೊಂಡಿದ್ದಳು. ಮುಖದ ಮೇಲೆ, ಒಳಗಿನಿಂದ ಹರಿದುಬಂದ ಮುಗುಳ್ನಗೆಯ ಚಿಕ್ಕದೊಂದು ತರಂಗ ಆಡುತ್ತಿತ್ತು. ಶ್ರೀಕಂಠ ಇದನ್ನೆಲ್ಲಾ ನೋಡಿ ಮಾತನಾಡದೆ ಹೊರಗೆ ಬಂದು, "ಅಮ್ಮಾ, ಮೀನಾಕ್ಷಿ ಒಪ್ಪಿದಳು" ಎಂದ.

## (೩)

ಮರುದಿನ ಸಾಯಂಕಾಲ ಶ್ರೀಕಂಠ ರಾಮಚಂದ್ರ ಬರೆದಿದ್ದ ಪ್ರಕಾರ ಅವನ ಕೊಠಡಿಯ ಹತ್ತಿರ ಹೋದ. ರಾಮಚಂದ್ರ ಇವನಿಗಾಗಿ ಕಾದುಕೊಂಡಿದ್ದ. ಇಬ್ಬರೂ "ಲಾಲ್‌ಬಾಗ್" ಕಡೆಗೆ ಹೊರಟರು. ಸ್ವಲ್ಪದೂರ ಯಾರೂ ಮಾತನಾಡಲಿಲ್ಲ. ಶ್ರೀಕಂಠನ ಮನಸ್ಸಿನಲ್ಲಿ "ಹೇಗೆ ಮಾತನ್ನು ಪ್ರಾರಂಭಿಸುವುದು?" ಎಂದು ಯೋಚನೆ. ರಾಮಚಂದ್ರನ ಮನಸ್ಸಿನಲ್ಲಿ "ನನ್ನ ಕಾಗದ ಏನೇನು ಕಾರು

ಬಾರು ಮಾಡಿದೆಯೋ ! '' ಎಂದು ಯೋಚನೆ. ಹೀಗೆ ಇಬ್ಬರೂ ಯೋಚನಾಪರರಾಗಿದ್ದುದರಿಂದ ಒಬ್ಬರೊಡನೊಬ್ಬರು ಮಾತನಾಡಲು ಅವಕಾಶವಾಗಲಿಲ್ಲ. ಇಬ್ಬರೂ ಮೌನವಾಗಿಯೇ " ಲಾಲ್‌ಬಾಗ್ '' ತೋಟವನ್ನು ಸೇರಿದರು. ಅಲ್ಲಿ ಸಾಂದ್ರವಾಗಿ ಬೆಳೆದಿದ್ದ ಮರಗಳ ಮಧ್ಯೆ ಹಾಕಿರುವ ಒಂದು ಶಿಲಾಸನದ ಮೇಲೆ ಕುಳಿತುಕೊಂಡರು. ರಾಮಚಂದ್ರನೇ ಮೊದಲು ಮೌನವನ್ನು ಭೇದಿಸಿ " ನನ್ನ ಮನಸ್ಸಿಗೆ ಹೊಳೆದ ಉತ್ತರ ಸರಿಯೆ ? '' ಎಂದು ಕೇಳಿದ.

ಶ್ರೀಕಂಠನಿಗೆ ಮಾತಿಲ್ಲ. ಇದ್ದರೂ ನಾಲಗೆ ಹೇಳಲಾರದಂತಾಯಿತು. ಅವನ ಕಣ್ಣುಗಳಲ್ಲಿ ನೀರು ಜಳಜಳನೆ ಸುರಿಯಿತು. ಮೆಲ್ಲಗೆ ತಲೆಯನ್ನು ಎತ್ತಿ ರಾಮಚಂದ್ರನ ಮುಖವನ್ನು ನೋಡಿದ. ಏನನ್ನೋ ಹೇಳಬೇಕೆಂದು ಪ್ರಯತ್ನಪಟ್ಟ—ಆಗಲಿಲ್ಲ. ಇದನ್ನು ನೋಡಿ ರಾಮಚಂದ್ರನು ಮೃದುವಾದ ಧ್ವನಿಯಿಂದ " ಶ್ರೀಕಂಠ, ಏಕೆ ಹೀಗೆ ? ನಾನು ಕಾಗದ ಬರೆದದ್ದು ತಪ್ಪಾಯಿತೆ ? '' ಎಂದು ಕೇಳಿದ. ಶ್ರೀಕಂಠ ಸುಮ್ಮನಿದ್ದ. ರಾಮಚಂದ್ರ ಪುನಃ ಪುನಃ ಕೇಳಿದ. ಬಹಳ ಹೊತ್ತಾದ ಮೇಲೆ ಶ್ರೀಕಂಠ ರಾಮಚಂದ್ರನ ಕಡೆಗೆ ತಿರುಗಿ, " ರಾಮು, ರಾಮು, ನಿನ್ನದು—'' ಎಂದು ಅಷ್ಟಕ್ಕೆ ನಿಲ್ಲಿಸಿದ. ರಾಮಚಂದ್ರನ ಮನಸ್ಸು ಸ್ವಲ್ಪ ಅಸ್ಥಿರವಾಯಿತು. " ಏನು—ನನ್ನದು ? '' ಎಂದು ಕೇಳಿದ.

" ಬಹಳ ದೊಡ್ಡ ಮನಸ್ಸು. ನೀನು ನಮ್ಮ ಭಾಗದ—''

" ಓ ! ಅಷ್ಟೇ ತಾನೆ ! ''

" ನಾನು ಮುಖಸ್ತು—''

" ನನ್ನ ಉತ್ತರ ಸರಿಯಾಗಿತ್ತೆ ಹೇಳು ''

" ರಾಮು, ನನ್ನ ತಂಗಿ ಕುರುಡಿ—ಶುದ್ಧ ಕುರುಡಿ, ಸ್ವಲ್ಪವೂ ಕಣ್ಣು ಕಾಣಿಸುವುದಿಲ್ಲ. ಈ ವಿಷಯ ನಿನ್ನ ಮನಸ್ಸನ್ನು ಸ್ವಲ್ಪವೂ ಹಿಂದೆಳೆಯಲಿಲ್ಲವೆ ? ನಿನ್ನ ಕಾಗದದಿಂದ ನಮಗೆ ಎಷ್ಟು ಸಂತೋಷವಾಯಿತೋ ಅದನ್ನು ಹೇಳಲಾರೆ. ಆದರೆ ಈ ವಿಷಯದಲ್ಲಿ ಇಬ್ಬರೂ ಸುಖವಾಗಿರುವುದು ಮುಖ್ಯ. ಮುಂದೆ ನೀನು ' ಹೀಗೆ ಮಾಡಬಾರದಾಗಿತ್ತು ' ಎಂದು ಅನ್ನುವ ಹಾಗಾಗಬಾರದು. ''

" ಶ್ರೀಕಂಠ, ನನ್ನ ಮನಸ್ಸನ್ನು ನೀನಿನ್ನೂ ಅರಿಯೆ. ನಾನು ಆ ಕಾಗದವನ್ನು ಬಹಳ ಸಂತೋಷದಿಂದ ಬರೆದೆ.

" ಆದರೆ ನಿನ್ನದು ಎಂತಹ ಆತ್ಮನಿರಾಕರಣೆ ! ''

" ಆತ್ಮನಿರಾಕರಣೆ ಎಲ್ಲಿ ಬಂತು ! ''

" ಹೌದು, ನೀನು ಎಲ್ಲಾ ಸರಿಯಾಗಿರುವ ಕಡೆ ಮದುವೆಯಾಗಿ ಸುಖವಾಗಿರು—"

" ಅಯ್ಯೋ ! ಹುಚ್ಚ ! ಹೆಂಡತಿ ಕುರುಡಳಾದ ಮಾತ್ರಕ್ಕೆ ಸುಖವಾಗಿರಲಾರೆನೆ ? ಹೌದು, ಸ್ವಲ್ಪ ಕಷ್ಟವಾಗುತ್ತದೆ. ಆದರೆ ಹಾಗೆ ಕಷ್ಟಪಡುವುದರಲ್ಲಿ ಎಷ್ಟು ಸುಖವಿದೆ, ನಿನಗೆ ಗೊತ್ತೆ ? ಯಾರಿಗೋಸ್ಕರ ನಮ್ಮ ಹೃದಯ ಕರುಳು ಎದ್ದು ಬರುತ್ತದೆಯೋ ಅವರಿಗೋಸ್ಕರ ಸಾಯುವುದೂ ಸುಖವಾಗಿರುತ್ತದೆ. ಇಲ್ಲಿ ಆತ್ಮ ನಿರಾಕರಣೆ ಎಲ್ಲಿ ?"

" ನಿನ್ನ ಮನಸ್ಸು ದೊಡ್ಡದು. ಅದಕ್ಕೆ ಹಾಗೆ ತೋರದಿರಬಹುದು. ಆದರೆ ನಮಗೆ—"

" ಮೀನಾಕ್ಷಿ ಏನು ಹೇಳಿದಳು ?"

" ಏನೂ ಇಲ್ಲ."

" ಹಾಗಾದರೆ—?"

" ನಿನ್ನ ಕಾಗದವನ್ನು ಅಮ್ಮನಿಗೆ ಓದಿಹೇಳಿ ಅದರ ವಿಷಯವಾಗಿ ಮಾತನಾಡುತ್ತಿದ್ದಾಗ ಮೀನಾಕ್ಷಿ ಪಕ್ಕದ ಕೊಠಡಿಯಲ್ಲಿ ಕುಳಿತು ಕೇಳುತ್ತಿದ್ದಳು. ಅಮ್ಮನ ಕೈಲಿ ' ಆಗಲಿ ' ಅನ್ನಿಸಿಕೊಂಡು ಮೀನಾಕ್ಷಿ ಏನು ಹೇಳುವಳೋ ಎಂದು ಅವಳಿದ್ದ ಕೊಠಡಿಗೆ ಹೋದೆ. ನಾನು ಹೋದದ್ದು ಅವಳಿಗೆ ಗೊತ್ತಾಗಲಿಲ್ಲ. ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತ್ತು. ತನ್ನಷ್ಟಕ್ಕೆ ತಾನೆ ಮೆಲ್ಲಗೆ ಮುಗುಳ್ನಗೆ ನಗುತ್ತಿದ್ದಳು. ಇನ್ನೇನಾಗಬೇಕು ?"

" ಓ ! ಬೇಕಾದಷ್ಟಾಯಿತು ! ಬಾ, ಹೊತ್ತಾಯಿತು, ಹೋಗೋಣ."

(೪)

ರಾಮರಾಯರು ಮಗಳ ಮದುವೆಗಾಗಿ ಗಳಿಸಿಟ್ಟಿದ್ದ ಹಣ ಹಾಗೆಯೇ ಇತ್ತು. ಶ್ರೀಕಂಠ ಅವರ ಕಾಗದಪತ್ರಗಳನ್ನೆಲ್ಲಾ ಹುಡುಕಿತೆಗೆದು, ಅವರು ಮಾಡಿದ್ದ ಸಾಲವನ್ನೆಲ್ಲಾ ಗಡುವು ಮುಗಿಯುವುದಕ್ಕೆ ಮುಂಚೆಯೇ ತೀರಿಸಿ ಉಳಿದುದನ್ನು ತನ್ನಲ್ಲಿಯೇ ಇಟ್ಟುಕೊಂಡಿದ್ದನು. ತಂದೆಯ ಜೀವವಿಮೆ ಹಣ ಸುಮಾರು ಎರಡು ಸಾವಿರ ರೂಪಾಯಿ ಕೈಗೆ ಬಂತು.

ರಾಮಚಂದ್ರನ ಪರೀಕ್ಷೆಮುಗಿದು ರಜ ಬಂತು. ರಜಾದಲ್ಲಿ ಮೀನಾಕ್ಷಿಗೂ ರಾಮಚಂದ್ರನಿಗೂ ಮದುವೆಯಾಯಿತು. ರಾಮಚಂದ್ರ ಕುರುಡಿಯನ್ನು ಮದುವೆಯಾದ. ಕಾರ್ಯ ವಿದುರಾಶ್ವತ್ಥದಲ್ಲಿ ನೆರವೇರಿತು. ಬಡತನದ ಮದುವೆ. ಸುಲಿಗೆ ಇಲ್ಲ.

ಸಂಕ್ಷೇಪದಲ್ಲಿ ಮುಗಿಯಿತು. ಅದರ ವರ್ಣನೆ ಅನಾವಶ್ಯಕ. ಧಾರೆಯಾಯಿತು. ಹೋಗಿದ್ದವರೆಲ್ಲರೂ ಹಿಂತಿರುಗಿ ಊರಿಗೆ ಬಂದರು.

ರಾಮಚಂದ್ರ ಮದುವೆಯಾದ ಮೇಲೆ ಕೆಲವು ದಿನಗಳು ಶ್ರೀಕಂಠನ ಮನೆಯಲ್ಲಿಯೇ ಇದ್ದು ತನಗೆ ಬರುತ್ತಿದ್ದ "ಸ್ಕಾಲರ್‌ಷಿಪ್" ಹಣದಲ್ಲಿ ಸ್ವಲ್ಪವನ್ನು ಗಳಿಸಿಟ್ಟಿದ್ದ. ಅದನ್ನು ಅವರ ಮನೆಯ ಖರ್ಚಿಗೆ ಕೊಟ್ಟುಬಿಟ್ಟ.

ಪರೀಕ್ಷೆಯ ಫಲಿತಾಂಶವು ಬಂತು. ರಾಮಚಂದ್ರ ಉತ್ತಮತರಗತಿಯಲ್ಲಿ ಉತ್ತೀರ್ಣನಾಗಿದ್ದ. ಕೆಲವು ದಿನಗಳಲ್ಲಿಯೇ ಅವನಿಗೆ ಎಪ್ಪತ್ತೈದು ರೂಪಾಯಿ ಸಂಬಳದ ಒಂದು ಉಪಾಧ್ಯಾಯವೃತ್ತಿ ದೊರೆಯಿತು. ಕೆಲಸವಾದ ಐದಾರುದಿನಗಳಲ್ಲಿಯೇ ಒಂದು ಸಣ್ಣ ಅನುಕೂಲವಾದ ಮನೆಯನ್ನು ಗೊತ್ತುಮಾಡಿ, ಹೆಂಡತಿ, ಅತ್ತೆ, ಭಾವಮೈದುನ ಎಲ್ಲರನ್ನೂ ಬರಮಾಡಿಕೊಂಡ. ಸಂಸಾರ ಸುಖವಾಗಿ ಸಾಗುತ್ತಿತ್ತು.

ಹೀಗೆಯೇ ಕೆಲವು ದಿನಗಳು ಕಳೆದುವು. ಒಂದು ದಿನ ರಾಮಚಂದ್ರ ಒಬ್ಬನೇ ತನ್ನ ಕೊಡಿಯಲ್ಲಿ ಕುಳಿತು ಏನೋ ಯೋಚಿಸುತ್ತ ಯೋಚಿಸುತ್ತ ಕೊನೆಗೆ ಹೀಗೆ ಅಂದುಕೊಂಡ—"ದೇವರು ನನ್ನ ಮೀನಾಕ್ಷಿಯನ್ನು ನಾನು ಕಣ್ಣು ತುಂಬಾ ನೋಡುವ ಅದೃಷ್ಟವನ್ನು ನನಗೆ ಕೊಟ್ಟಿದ್ದಾನೆ. ಆದರೆ ಅದು ಅವಳಿಗೆ ಎಂದೆಂದಿಗೂ ಇಲ್ಲದಂತಾಯಿತಲ್ಲಾ ! ಅಯ್ಯೋ ! ಇದು ಮಾಯೆಯಂತೆ ! ಲೀಲೆಯಂತೆ !" ಅವನ ಮುಖ ಹಾಗೆಯೇ ಗಂಭೀರವಾಯಿತು. ಬರಬರುತ್ತ ತಿರಸ್ಕಾರ ಭಾವವನ್ನು ತಾಳಿತು. ದೊಡ್ಡದಾಗಿ ನಿಟ್ಟುಸಿರುಬಿಟ್ಟ. ಮೀನಾಕ್ಷಿಯೂ ಒಂದು ಕಡೆ ಕುಳಿತು ಯೋಚಿಸುವಳು. ಅವಳಿಗೆ ಏನು ಯೋಚನೆ ಅನ್ನುವಿರಾ ? ಮೀನಾಕ್ಷಿ ಹದಿಮೂರು ವರ್ಷದ ಹುಡುಗಿ ; ವಯಸ್ಸಿಗಿಂತ ತಿಳುವಳಿಕೆ ಹೆಚ್ಚು. ಸಂಸ್ಕಾರ ಹೊಂದಿದ ಜೀವ ; ತಿದ್ದಿದ ಮನಸ್ಸು ; ಅವಳು ಹೀಗೆ ಯೋಚಿಸುವಳು—"ಕಣ್ಣಿದ್ದವಳನ್ನು ಮದುವೆಯಾಗಿದ್ದರೆ ಎಷ್ಟು ಸುಖವಾಗಿರುತ್ತಿದ್ದರೊ ! ಎಷ್ಟು ಸಂತೋಷವಿರುತ್ತಿತ್ತೋ ! ಈಗ ಅದನ್ನೆಲ್ಲಾ ಬಿಟ್ಟು ನನ್ನನ್ನು ಕಟ್ಟಿಕೊಂಡರಲ್ಲಾ ಅವರದ್ದು ಇನ್ನೆಂತಹ ದೊಡ್ಡ ಮನಸ್ಸು ! ಅಂತಹ ದೇವರ ಕೈಹಿಡಿದೆನಲ್ಲಾ !" ಎಂಬ ಸಂತೋಷ. ಇದು ಒಂದು ಯೋಚನೆ ; ಇನ್ನೊಂದು ಯೋಚನೆ—"ಅವರು ನನಗೆ ಎಷ್ಟು ಹತ್ತಿರದವರು ! ಅಷ್ಟು ಹತ್ತಿರದವರನ್ನು ಕಣ್ಣು ತುಂಬಾ ನೋಡುವ ಪುಣ್ಯವೇ ನನಗೆ ಇಲ್ಲವಾಯಿತಲ್ಲಾ ! ಭಗವಂತ !" ಎಂಬುದು. ಇದು ಅವಳ ಜೀವವನ್ನೇ ಸುಡುವ ಯೋಚನೆ.

ಒಂದು ದಿನ ರಾಮಚಂದ್ರನಿಗೆ ಮೀನಾಕ್ಷಿಯನ್ನು ಮಾತನಾಡಿಸಬೇಕೆಂದು ಮನಸ್ಸಾಯಿತು. ಮೀನಾಕ್ಷಿ ಒಳಗಿನ ಕೊಠಡಿಯಲ್ಲಿ ಒಬ್ಬಳೇ ಕುಳಿತಿದ್ದಳು.

ಅದಕ್ಕೆ ಮೊದಲು ಅವನು ಅವಳೊಡನೆ ಮಾತನಾಡಿರಲಿಲ್ಲ. ಇದೇ ಮೊದಲು; ಮೆಲ್ಲಗೆ ಅವಳಿದ್ದ ಕೊಠಡಿಯೊಳಕ್ಕೆ ಹೋದ. ಕಣ್ಣುಕಾಣಿಸುವ ಹುಡುಗಿಯಾಗಿದ್ದಿದ್ದರೆ ಅವನು ಬರುವ ಸುಳುವು ಕಂಡಿದ್ದರೂ ಓಡಿಹೋಗುತ್ತಿದ್ದಳು. ಆದರೆ ಮೀನಾಕ್ಷಿ ಶುದ್ಧ ಕುರುಡಿ. ಕಾಲಿನ ಸಪ್ಪಳವನ್ನು ಕೇಳಿ, “ ಯಾರು ? ” ಎಂದು ಮೃದುವಾಗಿ ಕೇಳಿದಳು. ರಾಮಚಂದ್ರನ ಕಿವಿಗೆ ಆ ಎರಡು ಅಕ್ಷರ ಬಹಳ ಇಂಪಾಗಿ ಕೇಳಿಸಿತು. ಅವನು “ ನಾನು ” ಎಂದು ಮೆಲ್ಲಗೆ ಹೇಳಿದ. ಅವಳು ಧ್ವನಿಯನ್ನು ಗುರ್ತಿಸಿ ಹೋಗಲು ಎದ್ದು ನಿಂತುಕೊಂಡಳು. ಆದರೆ ಹೇಗೆ ಹೋಗುವುದು ? ಕುರುಡಿ ! ಯಾರಾದರೂ ಕೈಹಿಡಿದು ದಾರಿ ತೋರಿಸಬೇಕು. ಈಗ ಕೊಠಡಿಯನ್ನು ಬಿಟ್ಟು ಹೋಗಲು ನಿಸ್ಸಹಾಯಳಾಗಿ ಇದ್ದಲ್ಲಿಯೇ ನಿಂತುಬಿಟ್ಟಳು. ಅವಳ ಮುಖವು ಕೆಂಪೇರಿ ಅದರ ಮೇಲೆಲ್ಲಾ ಬೆವರು ಹನಿಗಳು ಮೂಡಿದವು. ಭಯದಿಂದ ಸ್ವಲ್ಪ ನಡುಗುತ್ತಿದ್ದ ಶರೀರ. ಜೊತೆಗೆ ನಾಚಿಕೆ ಬೇರೆ. ಅವಳಿಗೆ ದೃಷ್ಟಿಮಾತ್ರ ಇದ್ದಿದ್ದರೆ, ಈ ಸಂದರ್ಭದಲ್ಲಿ ಅವಳ ಕಣ್ಣುಗಳಲ್ಲಿ, ಭಯಪಟ್ಟ ಚಿಗರಿ ಮರಿಯ ಕಣ್ಣಿನ ಚಂಚಲತ್ವದ ಪ್ರತಿ ಛಾಯೆಯನ್ನು ನೋಡಬಹುದಾಗಿತ್ತು. ಅದೇ ಇಲ್ಲ ! ರಾಮಚಂದ್ರನಿಗೆ ಇದುವರೆಗೂ ಅವಳ ಕುರುಡು ವ್ಯಥೆಯನ್ನು ಕೊಟ್ಟಿರಲಿಲ್ಲ. ಆದರೆ ಇಂದು ಬಳುಕಿ ನಿಂತಿದ್ದ ಆ ಚೆಲುವೆಯನ್ನು ನೋಡಿ, ಅವನ ಮನಸ್ಸೂ ತಲ್ಲಣಿಸಿತು. ಅವನ ಹೃದಯ “ ಅಯ್ಯೋ ! ” ಎಂದು ಧ್ವನಿಮಾಡಿತು. ಕಣ್ಣು ಕುರುಡಾಗಿ ಮೀನಾಕ್ಷಿಯ ಜೀವವೇ ಭೂಮಿಗೆ ಇಳಿದುಹೋಗಿತ್ತು. ಯಾವಾಗಲೂ ಒಂದು ಮೂಲೆಯಲ್ಲಿ ತಲೆ ಬಗ್ಗಿಸಿಕೊಂಡು ಕುಳಿತಿರುವಳು. ಲಕ್ಷ್ಮಮ್ಮನವರಿಗೆ ಅವರ ಕೆಲಸ. ಶ್ರೀಕಂಠನಿಗೆ ಒಬ್ಬ ಸಾಹುಕಾರನ ಮನೆಯಲ್ಲಿ ಗುಮಾಸ್ತಗಿರಿಯ ಕೂಲಿ. ರಾಮಚಂದ್ರನಿಗೆ ಸ್ಕೂಲು. ಇನ್ನು ಅವಳೊಡನೆ ಮಾತನಾಡುತ್ತ ಅವಳ ಮನಸ್ಸಿಗೆ ಶಾಂತಿಯನ್ನು ತರುವವರಾರು ? ರಾಮಚಂದ್ರ ಇದನ್ನೆಲ್ಲಾ ಯೋಚನೆಮಾಡಿ ತಾನೇ ಆ ಕೆಲಸವನ್ನು ಕೈಕೊಳ್ಳಬೇಕೆಂದು ನಿಶ್ಚಯಿಸಿ ಈ ದಿನ ಅವಳ ಕೊಠಡಿಗೆ ಬಂದ. ಮೀನಾಕ್ಷಿ ಸುಮ್ಮನೆ ನಿಂತಿದ್ದನ್ನು ನೋಡಿ ಅವನು “ ಮೀನಾಕ್ಷಿ ” ಎಂದು ಮೆಲ್ಲಗೆ ಕರೆದ.

ಮೀನಾಕ್ಷಿ ಮೌನ ! ರಾಮಚಂದ್ರ ಒಳಕ್ಕೆ ಹೋಗಿ, ಅವಳ ಕೈಹಿಡಿದುಕೊಂಡ. ಅವಳು ಬಿಡಿಸಿಕೊಳ್ಳಲು ಪ್ರಯತ್ನಮಾಡಿದಳು—ರಾಮಚಂದ್ರ ಬಿಡಲಿಲ್ಲ. ಬಲವಂತದಿಂದ ಕೂರಿಸಿಕೊಂಡು, ಪುನಃ ಮೃದುವಾಗಿ “ ಮೀನಾಕ್ಷೀ ” ಎಂದು ಕರೆದ.

ಉತ್ತರವಿಲ್ಲ.

" ಮೀನಾಕ್ಷಿ, ನಾನು ನಿನ್ನ ಕೂಡ ಮಾತಾಡಬೇಕೆಂದು ಎಷ್ಟು ಆಸೆಯನ್ನು ಇಟ್ಟುಕೊಂಡು ಬಂದೆ ಗೊತ್ತೆ? ನಾನು ಇಷ್ಟು ಸಲ ಕರೆದರೂ ನೀನು ಒಂದು ಬಾರಿಯೂ ಮಾತನಾಡುವುದಿಲ್ಲವಲ್ಲಾ!" ಎಂದು ಮನಸ್ಸು ಕರಗುವಹಾಗೆ ಹೇಳಿದ. ಪುನಃ " ಮೀನಾಕ್ಷಿ " ಎಂದು ಇನ್ನೂ ಮೃದುವಾಗಿ ಕರೆದ.

ಇಷ್ಟುಹೊತ್ತಿಗೆ ಅವಳ ಮನಸ್ಸು ಕರಗಿತೆಂದು ಕಾಣುತ್ತದೆ. ಬಗ್ಗಿದ ತಲೆಯನ್ನು ಇನ್ನೂ ಬಗ್ಗಿಸಿ, ಕೇಳಿಸಿತೋ ಇಲ್ಲವೋ ಅನ್ನುವ ಹಾಗೆ,

" ಏನು ? " ಎಂದಳು.

" ಮೂರು ಹೊತ್ತೂ ನೀನು ಒಬ್ಬಳೇ ಕೂತಿರುವೆಯಲ್ಲಾ—ನಿನಗೆ ಬೇಸರವಾಗುವುದಿಲ್ಲವೆ ? "

ಮೀನಾಕ್ಷಿ ಮಾತನಾಡಲಿಲ್ಲ. ದೊಡ್ಡದಾಗಿ ನಿಟ್ಟುಸಿರುಬಿಟ್ಟಳು.

" ನಾನು ನಿತ್ಯ ಸ್ವಲ್ಪಹೊತ್ತು ಬಂದು, ನಿನ್ನ ಹತ್ತಿರದಲ್ಲಿ ಕುಳಿತು, ನಿನ್ನ ಬೇಸರ ಹೋಗುವಹಾಗೆ ಮಾಡಲೆ ? "

ಈಗಲೂ ಮೀನಾಕ್ಷಿ ಮಾತನಾಡಲಿಲ್ಲ. ಮುಖವನ್ನು ಸ್ವಲ್ಪ ಮೇಲಕ್ಕೆ ಎತ್ತಿದಳು. ಅದರಲ್ಲಿ ಒಳಗಿನ ಆನಂದ ಒತ್ತಿಬರುತ್ತಿತ್ತು.

" ಹೇಳು ಮೀನಾಕ್ಷಿ ! ನೀನು ಒಪ್ಪಿದರೆ ಬರುತ್ತೇನೆ. ಇಲ್ಲವಾದರೆ ಇಲ್ಲ ! "

ಮೀನಾಕ್ಷಿಗೆ ಸಂಕಟಕ್ಕೆ ಬಂತು ! ಕೊನೆಗೆ ತುಟಿಯನ್ನು ಸ್ವಲ್ಪ ಕಂಪಿಸುತ್ತ—" ಆಗಬಹುದು. " ಎಂದು ಉತ್ತರಕೊಟ್ಟಳು.

" ನಿನ್ನನ್ನು ಇಂದಿನಿಂದ ' ಮೀನಾ ' ಎಂದು ಕರೆಯುತ್ತೇನೆ. ಆಗಬಹುದೆ ? "

ಮೀನಾಕ್ಷಿಗೆ ನಾಚಿಕೆಯಾಯಿತು. ನಕ್ಕು ತಲೆಯನ್ನು ಬಗ್ಗಿಸಿ " ಹು " ಎಂದಳು.

" ಮೀನಾ ! "

ಮೀನಾಕ್ಷಿ ನಗುತ್ತ—" ಏನು ? " ಎಂದಳು.

## (೫)

ಒಂದುದಿನ ಸಾಯಂಕಾಲ ಲಕ್ಷ್ಮಮ್ಮನವರು ಎಲ್ಲಿಯೋ ನೆರೆಮನೆಗೆ ಹೋಗಿದ್ದರು. ಶ್ರೀಕಂಠ ಏನೋ ಕೆಲಸದ ಮೇಲೆ ಪೇಟೆಯಕಡೆಗೆ ಹೋಗಿದ್ದ. ಮನೆಯಲ್ಲಿ ಮೀನಾಕ್ಷಿ, ರಾಮಚಂದ್ರ ಇಬ್ಬರೆ. ಮೀನಾಕ್ಷಿ ಕೊಠಡಿಯಲ್ಲಿ ಕುಳಿತು ಮಲ್ಲಿಗೆ ಹೂವಿನ ಸರವನ್ನು ಕಟ್ಟುತ್ತಿದ್ದಳು. ರಾಮಚಂದ್ರ ಅವಳ ಪಕ್ಕದಲ್ಲಿ ಹಾಸಿಗೆ ಸುರುಳಿಗೆ ತಲೆಕೊಟ್ಟು ಮಲಗಿಕೊಂಡಿದ್ದ. ಮಾತು ಪ್ರಾರಂಭವಾಗಿ ಸ್ವಲ್ಪ ಹೊತ್ತಾಗಿತ್ತು.

"ನೀವಾಗಿ ಮನಸ್ಸು ಒಪ್ಪಿ ನನ್ನನ್ನು ಮದುವೆಯಾದಿರಾ ?"

ಗಂಡಹೆಂಡರಿಗೆ ಆಗಲೆ ಸ್ವಲ್ಪ ಸಲಿಗೆ !

"ಹೌದು."

"ಶ್ರೀಕಂಠ ನಿಮಗೆ ಹೇಳಲಿಲ್ಲವೆ—ನಾನು ಶುದ್ಧ ಕುರುಡಿ ಅಂತ ?"

"ಹೇಳಿದ."

"ಹಾಗೂ ಒಪ್ಪಿದಿರಾ ?—ಈ ಕುರುಡಿಯನ್ನು ಮದುವೆಯಾಗುವುದಕ್ಕೆ ? ಒಂದು ಕಡೆಯಿಂದ ಇನ್ನೊಂದು ಕಡೆಗೆ ಕೈಹಿಡಿದು ಕರೆದುಕೊಂಡು ಹೋಗಬೇಕು. ನಾನೇನೋ ನಿಮ್ಮ ಕೈಹಿಡಿದುದು ಸರಿ"—(ಮಾತು ನಿಲ್ಲಿಸಿ, ನಗುತ್ತ)—"ನೀವೂ ನನ್ನ ಕೈ ಹಿಡಿಯುವ ಹಾಗಾಯಿತಲ್ಲಾ !"

"ಅಯ್ಯೋ ! ಮೀನಾ ! ಅದರಲ್ಲಿ ಎಷ್ಟು ಸುಖವಿದೆ ಗೊತ್ತೆ ?"

"ಏನು ಸುಖವೋ ನಾನು ಕಾಣೆ ! ಎಲ್ಲಿ ಎಷ್ಟು ಸುಖ ಸಂತೋಷ ಕಾದಿತ್ತೋ—ಯಾವ ಪುಣ್ಯವಂತೆ ಮಾಲೆ ಹಿಡಿದಿದ್ದಳೋ—ಅದನ್ನೆಲ್ಲಾ ಬಿಟ್ಟು—"

"ಸರಿ ! ಪ್ರಾರಂಭ ಮಾಡಿದೆಯಲ್ಲ !—ಮೀನಾ ! ನಾನೂ ಹೂ ಕಟ್ಟಲೆ ?"

"ಈ ಕುರುಡಿಯನ್ನು ಕಟ್ಟಿಕೊಂಡಿರಲ್ಲ !"

"ನೀನು ಕುರುಡಿಯಾದ ಮಾತ್ರಕ್ಕೆ ಏನು ? ಗುಣ, ರೂಪ ಎಲ್ಲಾ ಇದೆಯಲ್ಲ."

(ನಗುತ್ತ) "ನನ್ನ ಗುಣವನ್ನು ನೀವೇ ಮೆಚ್ಚಬೇಕು !"

"ನ್ಯಾಯ ! ಮೆಚ್ಚಬೇಕಾದವರು ಮೆಚ್ಚದೆ ಇತರರು ಮೆಚ್ಚಿದರೇನು ?"

"ಕುರುಡಿಗೆ ರೂಪವೆಲ್ಲಿ ?"

"ಅಯ್ಯೋ ! ಪೆಚ್ಚಿ ! ಕಣ್ಣು ಕಾಣದ ಮಾತ್ರಕ್ಕೆ ರೂಪವಿಲ್ಲವೆ. ನೀನು ಕಣ್ಣುರೆಪ್ಪೆಗಳನ್ನು ಮುಚ್ಚಿಕೊಂಡರೆ ಕುರುಡಿ ಎಂದು ಯಾರೂ ಹೇಳಲಾರರು."

"ಸರಿ ! ಹಾಗಾದರೆ ಮೂರುಹೊತ್ತೂ ರೆಪ್ಪೆ ಮುಚ್ಚಿಕೊಂಡೇ ಇರುತ್ತೇನೆ."

"ನಾನು ಹಾಗೆ ಹೇಳಲಿಲ್ಲ ನಿನ್ನ ಕಣ್ಣಿನ ನೋಡುವ ಶಕ್ತಿ ಮಾತ್ರ ಹೋಗಿದೆ. ಅಷ್ಟೆ ಹೊರತು ಕಣ್ಣಿನ ಆಕೃತಿ ಸ್ವಲ್ಪವೂ ಕೆಟ್ಟಿಲ್ಲ."

ಸ್ವಲ್ಪಹೊತ್ತು ಇಬ್ಬರೂ ಸುಮ್ಮನಾದರು. ಮೀನಾಕ್ಷಿ ಮೌನವಾಗಿ ಸರ ಕಟ್ಟುತ್ತಿದ್ದವಳು ಅರ್ಧ ಮುಗಿದಿದ್ದ ಸರವನ್ನು ಹಾಗೆಯೇ ತೊಡೆಯ ಮೇಲೆ ಇಟ್ಟುಕೊಂಡು, ತಲೆಯನ್ನು ಸ್ವಲ್ಪ ಎತ್ತಿ, ಮುಖವನ್ನು ಅವಳ ನಲ್ಲನು ಕುಳಿತಿದ್ದ ಕಡೆಗೆ ತಿರುಗಿಸಿದಳು. ಕಾಂತಿ ಇಲ್ಲದ ಕಣ್ಣುಗಳು. ಅವುಗಳಲ್ಲಿ ಸರಿಯಾಗಿ ಹೇಳುವುದಕ್ಕೆ ಆಗದ ಒಂದು ವಿಧವಾದ ಭಾವ. ಅವಳ ಸರ್ವಜೀವವೂ ಆಭಾವಗರ್ಭಿತವಾದ

ಕಣ್ಣುಗಳ ಹಿಂದೆ ಒತ್ತಿಬಂದು, " ಪ್ರಿಯನನ್ನು ನೋಡಬೇಕು ! ನೋಡಬೇಕು ! " ಎಂದು ತುಡಿದುಕೊಳ್ಳುವುದು. ಆದರೆ ಅವುಗಳ ಆ ಶಕ್ತಿಯೇ ಇಂಗಿಹೋಗಿದೆ. ಅವಳು ತನ್ನ ಆ ಕೊಳ್ಳೆಹೋದ, ಶೂನ್ಯವಾದ ಕಣ್ಣಾಲಿಗಳನ್ನು ಗಂಡನ ಕಡೆಗೆ ತಿರುಗಿಸಿ, ಒಂದು ವಿಧವಾದ ನೊಂದ ನಗುವಿನೊಡನೆ, " ನೀವು—ನೀವು ಹೇಗೆ ಇದ್ದೀರಿ ನೋಡುವುದಕ್ಕೆ ? " ಎಂದು ಕೇಳಿದಳು. ಕೇಳುತ್ತಿದ್ದ ಹಾಗೆಯೇ ಅವಳ ಕಣ್ಣುಗಳಲ್ಲಿ ಹನಿಗೂಡಿತು.

" ಹೇಗೆ—ಎಂದರೆ ಏನು ಹೇಳಲಿ ? "

" ನಿಮ್ಮ ಮುಖ—ಕಣ್ಣು.........."

" ಅದು ಹೇಗಿದ್ದರೇನು ?

" ಅಯ್ಯೋ ! ನೀವು ಹೇಗೆ ಇದ್ದೀರಿ ಎಂದು ನೋಡಲು ನನ್ನ ಜೀವ ಬೇಯುತ್ತಿದೆ. ಹೃದಯ ನೋಡಬೇಕು ಎಂದು ಎದ್ದುಬಂದ ಹಾಗಾಗುತ್ತೆ. ಆದರೆ ಈ ನನ್ನ ಹಾಳು ಕಣ್ಣುಗಳು ನೋಡಲಾರವು. ನಿಮ್ಮ ರೂಪವೇ ನನಗೆ ಇಲ್ಲದ ಹಾಗಾಯಿತು ! "

ಮುಂದೆ ಮಾತು ಹೊರಡಲಿಲ್ಲ. ಮಾತಿಗೆ ಬದಲು ಎರಡು ಕಣ್ಣುಗಳಿಂದಲೂ ನೀರು ಉಕ್ಕಿ ಉಕ್ಕಿ ಹರಿಯಿತು. ಕಣ್ಣೀರು ಮೌನವಾದ ಮಾತು. ರಾಮಚಂದ್ರನ ಕಣ್ಣಿಗೆ ಆ ಕಣ್ಣೀರು, ಎಲ್ಲಿಯೋ ಕತ್ತಲೆಯೊದ ಗುಹೆಯ ಅಂತರಾಳದಿಂದ, ತನ್ನದೇ ಒಂದು ಸಂಗೀತದೊಡನೆ ಹರಿದುಬರುವ ಸಣ್ಣ ಪ್ರವಾಹದಂತೆ ತೋರಿತು. ಅವನ ಕಣ್ಣಾಲಿಗಳೂ ನೀರಿನಲ್ಲಿ ತೇಲಲಾರಂಭಿಸಿದವು. ಅವನು ಎದ್ದು ಕುಳಿತು, ಮೀನಾಕ್ಷಿಯ ಹತ್ತಿರಕ್ಕೆ ಸರಿದು, ಅವಳ ಕಣ್ಣೊರಸಿ, ಮುಂದಲೆಯನ್ನು ಸವರುತ್ತ ಮೃದುವಾಗಿ

" ಮೀನಾ, ಏಕೆ ಕಣ್ಣೀರು ? "—ಎಂದು ಕೇಳಿದ.

" ನನ್ನ ಸಂಕಟವನ್ನು ನೀವು ಬಲ್ಲಿರಾ ? "

" ಬಲ್ಲೆ. ಆದರೆ ಸುಮ್ಮನೆ ಕೊರಗಿದರೆ ಏನು ಮಾಡಿದ ಹಾಗಾಯಿತು ? "

" ಹಾಗಾದರೆ ಇನ್ನೇನು ಮಾಡಬೇಕು ಕೊರಗದೆ ? ಅಯ್ಯೋ ! ನಾವಿಬ್ಬರೂ ಇಷ್ಟು ಹತ್ತಿರದವರಾದರೂ, ಈ ನನ್ನ ಹಾಳು ಕುರುಡುಕಣ್ಣು ನಮ್ಮಿಬ್ಬರಿಗೂ ಮಧ್ಯೆ ಈ ಕತ್ತಲೆಯನ್ನು ತಂದುಹಾಕಿದೆಯಲ್ಲ ! ಈ ಕತ್ತಲೆ ಹರಿಯುವುದು ಯಾವಾಗ ? "

" ಮೀನಾ, ಹಾಗೆ ಹೇಳಬೇಡ. ಮನುಷ್ಯಪ್ರಯತ್ನ ಇನ್ನೂ ಇದೆ ; ನಿನ್ನ ಕಣ್ಣಿಗೆ ಪುನಃ ಬೆಳಕನ್ನು ತರಲು ಸರ್ವಪ್ರಯತ್ನ ಮಾಡುತ್ತೇನೆ. ಸಾವಿರ ಔಷಧಿ

ಗಳು ವ್ಯರ್ಥವಾದರೆ ಸಾವಿರದ ಒಂದನೆಯದು ಸಫಲವಾಗಬಹುದು. ನಿನ್ನೊಡನೆ ನಾನು ಮೊದಲು ಮಾತನಾಡಿದಂದಿನಿಂದ ಇದುವರೆಗೂ ನನ್ನ ಅಂತರಾಳದಲ್ಲಿ ಯಾರೋ, 'ಪ್ರಯತ್ನಮಾಡು—ಸಫಲವಾಗಬಹುದು' ಎಂದು ಹೇಳುತ್ತಿರುವಂತಿದೆ. ನಾನು ಪ್ರಯತ್ನಮಾಡುತ್ತೇನೆ. ಇಲ್ಲಿ ಕೇಳು ಮೀನಾ, ನೀನು ಒಂದಲ್ಲ ಒಂದು ದಿನ ನನ್ನನ್ನು ಕಣ್ಣು ತುಂಬಾ ನೋಡುವೆ! ನಿನ್ನ ಮನಸ್ಸು ಸೋಲುವ ವರೆಗೂ ನೋಡುವೆ! ನಾನು ನಿನ್ನ ಹೃದಯವನ್ನು ತುಂಬಿತುಳುಕುವ ವರೆಗೂ ನೋಡುವೆ. ನೀನು ಹುಟ್ಟುಕುರುಡಿಯಲ್ಲ. ನನಗೊಂದು ದೂರದ ಆಸೆ ಇದೆ. ......ಈ ಮಾತಿನಲ್ಲಿ ಹೂವಿನ ಸರವನ್ನು ಮರತೇಬಿಟ್ಟೆಯಲ್ಲ!''

ಮೀನಾಕ್ಷಿ ಹೂವಿನ ಸರವನ್ನು ಪೂರ್ತಿಮಾಡಿದಳು. ರಾಮಚಂದ್ರ ಮೆಲ್ಲಗೆ ಆ ಸರವನ್ನು ಅವಳ ಕೈಯಿಂದ ತೆಗೆದುಕೊಂಡು ಮೀನಾಕ್ಷಿಯ ತುರುಬಿಗೆ ಸುತ್ತಿದ. ಮೀನಾಕ್ಷಿಗೆ ನಗು ಬಂತು. ಚಿಗುರಿನಂತಿದ್ದ ತನ್ನ ಕೈ ಬೆರಳುಗಳಿಂದ ತುರುಬನ್ನು ಮುಟ್ಟಿ ನೋಡಿಕೊಂಡಳು.

(೬)

ಮೀನಾಕ್ಷಿಯ ಮದುವೆಯಾಗಿ ಐದುವರ್ಷವಾಯಿತು. ಈಗ ಅವಳಿಗೆ ಎರಡು ವರ್ಷದ ಒಂದು ಗಂಡುಮಗು ಇದೆ. ಚಂದ್ರಶೇಖರ ಎಂದು ಹೆಸರು. ಮಗು ಬಹುಮುದ್ದಾಗಿದೆ. ಆದರೆ ಮೀನಾಕ್ಷಿಗೆ ಆ ಮುದ್ದಿನ ಅನುಭವ ಹಣೆಯಲ್ಲಿ ಬರೆದಿಲ್ಲ. ಎತ್ತಿಕೊಂಡು ಎಷ್ಟೋ ಮುದ್ದಾಡುವಳು. ಎಷ್ಟೋ ಆದರಿಸುವಳು. ಆದರೆ ಅದನ್ನು ನೋಡುವುದಕ್ಕಿಲ್ಲ! ಮಗು ಹುಟ್ಟಿದಮೇಲೆ ಅವಳ ಕೊರಗು ಇದ್ದದ್ದೂ ಹೆಚ್ಚಾಯಿತು. "ಅಯ್ಯೋ! ನನ್ನ ಕಂದ ನನ್ನ ಮುದ್ದಿನ ಗೊಂಬೆ ನನ್ನ ಕರುಳು. ಅದೂ ನನ್ನ ಕಣ್ಣಿಗೆ ಇಲ್ಲವಾಯಿತಲ್ಲಾ!'' ಎಂದು ಹಗಲೂ ಇರಳೂ ಕಣ್ಣೀರು ಸುರಿಸುವಳು. ಇದು ಯಾವ ಪಾಪಕ್ಕೆ ಶಿಕ್ಷೆ?

ಒಂದು ದಿನ ಹೀಗೆಯೇ ಮಗುವನ್ನು ಎತ್ತಿಕೊಂಡು ಅಳುತ್ತಾ ಕುಳಿತಿದ್ದಳು. ಆ ಸಮಯಕ್ಕೆ ರಾಮಚಂದ್ರ ಅವಳಿದ್ದಲ್ಲಿ ಬಂದ. ಹೆಂಡತಿ ಅಳುತ್ತಿದ್ದುದನ್ನು ನೋಡಿ ಅವಳ ಸಮೀಪಕ್ಕೆ ಹೋಗಿ ಕುಳಿತುಕೊಂಡು ಮೃದುವಾಗಿ "ಮೀನಾ ಇದೇನು?'' ಎಂದು ಕೇಳಿದ. ಮೀನಾಕ್ಷಿ ಕಣ್ಣು ಒರಸಿಕೊಂಡು ಸುಮ್ಮನಾದಳು. ಚಂದ್ರಶೇಖರ ತಂದೆಯನ್ನು ನೋಡಿ ತಾಯಿಯನ್ನು ಬಿಟ್ಟು ಅವನ ತೊಡೆಯನ್ನು ಏರಿದ. ರಾಮಚಂದ್ರ ಅವನನ್ನು ಮುತ್ತಿಡುತ್ತ ಪುನಃ ಹೆಂಡತಿಯನ್ನು ಕುರಿತು "ಮೀನಾ'' ಎಂದ.

ಮೀನಾಕ್ಷಿ "ಏನು'' ಎಂದಳು.

" ನೀನು ನಿತ್ಯವೂ ಹೀಗೆ ಅತ್ತು ಅತ್ತು ಬೇಯುವುದನ್ನು ನೋಡಿ ನಾನು ಹೇಗೆ ಸಹಿಸಿಕೊಂಡಿರಲಿ ? "

" ಹೌದು ; ನಾನು ಕಣ್ಣೀರು ಹಾಕುವುದನ್ನು ನೋಡಿ ನಿಮಗೆ ವ್ಯಥೆಯಾಗುತ್ತದೆ. ಆದರೆ ಏನು ಮಾಡಲಿ ? ನನ್ನ ಜೀವ ಹತ್ತಿಕೊಂಡು ಉರಿಯುತ್ತಿದೆ. ತಡೆದುಕೊಳ್ಳಬೇಕು. ಎಂದು ಎಷ್ಟೋ ಪ್ರಯತ್ನಮಾಡುತ್ತೇನೆ. ಆದರೂ ಅದು ನನ್ನ ಪ್ರಯತ್ನ ಸಹನೆ ಎಲ್ಲವನ್ನೂ ಮೀರಿ ಉರಿಯುವ ಜಿಂಕೆ."

" ಅಯ್ಯೋ ! ಮೀನಾ ನಾನು ಎಷ್ಟೆಷ್ಟು ಆಸೆ ಭರವಸೆ ಇಟ್ಟುಕೊಳ್ಳುತ್ತೇನೋ ನೀನು ಅಷ್ಟಷ್ಟೂ ನಿರಾಶಳಾಗುತ್ತೀಯಲ್ಲ ! "

" 'ನಿರಾಶಳಾಗುತ್ತೀಯಲ್ಲಾ' ಎಂದರೆ ಏನು ಹೇಳಲಿ ? ನೀವು ಹೇಳಿದಿರಲ್ಲಾ 'ನನ್ನ ಅಂತರಾಳದಲ್ಲಿ ಯಾರೋ ಆಸೆಯನ್ನು ಹುಟ್ಟಿಸುತ್ತಿದ್ದಾರೆ' ಎಂದು, ಹಾಗೆಯೇ ನನ್ನ ಅಂತರಾಳವನ್ನೆಲ್ಲಾ ಯಾರೋ ನಿರಾಶೆಯಿಂದ ತುಂಬುತ್ತಿರುವಂತೆ ತೋರುತ್ತದೆ. ನಾನು ಏನುಮಾಡಲಿ ? "

ಮೀನಾಕ್ಷಿಯ ಈ ಮಾತಿಗೆ ರಾಮಚಂದ್ರ ಯಾವ ಉತ್ತರವನ್ನೂ ಹೇಳಲಾರದೆ ಹೋದ.

ರಾಮಚಂದ್ರ ಅವನ " ಅಂತರಾಳದಲ್ಲಿ ಯಾರೋ ಹೇಳಿದ" ಪ್ರಕಾರ ಪ್ರಯತ್ನವನ್ನು ಆರಂಭಿಸಿದ್ದನು. ಆ ಡಾಕ್ಟರು ಈ ಡಾಕ್ಟರು ಎಂದು ಕಣ್ಣು ಚಿಕಿತ್ಸೆಯಲ್ಲಿ ಹೆಸರುಪಡೆದಿದ್ದ ಡಾಕ್ಟರುಗಳನ್ನೆಲ್ಲಾ ನೋಡಿದ್ದಾಯಿತು. ಏಳೆಂಟು ಜನ ಪಂಡಿತರೂ ಆದರು. ಏನೂ ಪ್ರಯೋಜನವಾಗಲಿಲ್ಲ. ಪಂಡಿತರನ್ನು ಬಿಟ್ಟು ಹಕೀಮರಲ್ಲಿಗೆ ಕರೆದುಕೊಂಡು ಹೋದ. ಅವರೂ ನೋಡುವಷ್ಟು ನೋಡಿ ಕೊನೆಗೆ ಆಗುವುದಿಲ್ಲವೆಂದು ಕೈಬಿಟ್ಟರು. ಪತ್ರಿಕೆಗಳಲ್ಲಿ ಪ್ರಕಟನೆಗಳನ್ನು ನೋಡಿ ಹೊರಗಿನಿಂದಲೂ ಅನೇಕ ಔಷಧಿಗಳನ್ನು ತರಿಸಿ ಉಪಯೋಗಿಸಿ ನೋಡಿದ. ಸ್ವಲ್ಪವೂ ಬದಲಾವಣೆಯಿಲ್ಲ. ಇಷ್ಟು ಪ್ರಯತ್ನವೆಲ್ಲಾ ವ್ಯರ್ಥವಾದದ್ದನ್ನು ನೋಡಿ ರಾಮಚಂದ್ರನ " ದೂರದ ಆಸೆ " ಸ್ವಲ್ಪಸ್ವಲ್ಪವಾಗಿ ಹಿಂಜರಿಯತೊಡಗಿತು. ಅವನ ಮನಸ್ಸಿನಲ್ಲಿ ಅಧೈರ್ಯ ಕಾಲಿಟ್ಟಿತು. ಅವನ ಮನಸ್ಸಿಗೆ ಇಬ್ಬರೂ ಸೇರಿ ತೀರ್ಥ ಯಾತ್ರೆ ಮಾಡಿಕೊಂಡುಬರೋಣ ಎನಿಸಿತು. ಒಂದು ತಿಂಗಳು ರಜ ತೆಗೆದುಕೊಂಡು, ಹೆಂಡತಿ ಮಗುವಿನೊಡನೆ ಎಂಟು ಹತ್ತು ಪುಣ್ಯಸ್ಥಳಗಳಿಗೆ ಹೋಗಿಬಂದ. ಇಬ್ಬರ ಮನಸ್ಸಿಗೂ ತೀರ್ಥಯಾತ್ರೆಯಾಯಿತಲ್ಲಾ ಎಂದು ತೃಪ್ತಿಯಾಯಿತು. ಅಷ್ಟೇ ಹೊರತು, ಮೀನಾಕ್ಷಿಯ ನಿರಾಶೆಯ ಗಟ್ಟಿ ಕರಗಲಿಲ್ಲ. ರಾಮಚಂದ್ರನ ಮನಸ್ಸಿನಲ್ಲಿ ಹುಟ್ಟಿದ್ದ ಆಸೆ

ನಿಧಾನವಾಗಿ ಸವೆಯುತೊಡಗಿತು. ಆದರೆ ಅವನು—ಅವನ ಮನಸ್ಸು—ಆ 'ಸವೆಯುತ್ತಿದೆ' ಎಂಬ ಅಂಶವನ್ನು ತಿಳಿಯಲು ಅಪೇಕ್ಷಿಸುತ್ತಿರಲಿಲ್ಲ. ಇದೊಂದು ವಿಧವಾದ ಆತ್ಮವಂಚನೆ. ರಾಮಚಂದ್ರ ಆತ್ಮವಂಚನೆಯಿಂದ ಆಸೆಯನ್ನು ಕಟ್ಟಿ ಹಾಕಲು ಪ್ರಯತ್ನಿಸುತ್ತಿದ್ದ.

ಮೀನಾಕ್ಷಿ ಬರಬರುತ್ತ ಅಳುವುದನ್ನು ನಿಲ್ಲಿಸಿದಳು. ಕಣ್ಣೀರು ನಿಂತಿತು. ಈಚೀಚೆಗೆ ಅವಳು ಸುಮ್ಮನೆ ಯೋಚಿಸುವಳು. ಆಳವಾದ ಯೋಚನೆ; ಮುಖ ಗಂಭೀರವಾಗುವುದು. ಅವಳು ತನ್ನಷ್ಟಕ್ಕೆ ತಾನೇ ಅಂದುಕೊಳ್ಳುವಳು.—"ನನ್ನ ಹಣೆಯಲ್ಲಿ ಕೊನೆಯವರೆಗೂ ಈ ಗೋಳನ್ನೇ ಬರೆದಿದ್ದರೆ ಎಷ್ಟು ಅತ್ತರೆ ಏನು ? ಎಷ್ಟು ಕಣ್ಣೀರು ತಾನೆ ಅದನ್ನು ಅಳಿಸಬಲ್ಲದು ? ನನ್ನ ಪ್ರಾರಬ್ಧಕರ್ಮ ! ಯಾರೇನುಮಾಡುವರು !" ಎಂದು. ಇಷ್ಟರಮಧ್ಯೆ ಒಂದೊಂದು ಸಲ "ಅಯ್ಯೋ ದೇವಾ ! ಒಂದು ಕ್ಷಣಕಾಲ—ಒಂದೇ ಕ್ಷಣಕಾಲ ನನಗೆ ದೃಷ್ಟಿಯನ್ನು ಕೊಡು. ಅವರು ಚಂದ್ರು ಇಬ್ಬರೂ ಎದುರಿಗಿದ್ದಾಗ ಒಂದು ಕ್ಷಣಕಾಲ ಈ ಕತ್ತಲೆಯನ್ನು ಹರಿಸು. ಸಾಕು ಆಮೇಲೆ ನಾನು ಕೇಳುವುದಿಲ್ಲ, ಅಳುವುದಿಲ್ಲ, ಕಣ್ಣೀರು ಸುರಿಸುವುದಿಲ್ಲ. ಭಗವಂತ ! ಒಂದು ಕ್ಷಣಕಾಲ ಈ ಶಿಕ್ಷೆಯನ್ನು ನಿಲ್ಲಿಸಲಾರೆಯಾ ?" ಎಂದು ಕೈ ಕೈ ಹಿಸುಕಿಕೊಂಡು ದೇವರಲ್ಲಿ ಮೊರೆ ಇಡುವಳು.

## (೭)

ಬೇಸಿಗೆಯ ರಜ ಬಂದು ಹದಿನೈದು ದಿನಗಳಾಗಿತ್ತು. ಮಧ್ಯಾಹ್ನ ಸುಮಾರು ಮೂರುಗಂಟೆ ಸಮಯ. ರಾಮಚಂದ್ರ ಮನೆಯಲ್ಲಿ ಮುಂಬಾಗಿಲಿಗೆದುರಾಗಿ ಒಂದು ಸುಖಾಸನದ ಮೇಲೆ ಕುಳಿತುಕೊಂಡಿದ್ದ. ಮೀನಾಕ್ಷಿ ಪಕ್ಕದಲ್ಲಿ ಕೆಳಗೆ, ಚಾಪೆಯ ಮೇಲೆ ಒಂದು ತಲೆದಿಂಬನ್ನು ಇಟ್ಟುಕೊಂಡು ಮಲಗಿದ್ದಳು. ಸ್ವಲ್ಪ ನಿದ್ದೆ ಹತ್ತಿತ್ತು. ಅವಳಿಂದ ಸ್ವಲ್ಪ ದೂರದಲ್ಲಿ ಚಂದ್ರಶೇಖರ ಕೈಯಲ್ಲಿ ಒಂದು ಬೊಂಬೆಯನ್ನು ಹಿಡಿದುಕೊಂಡು ಅದನ್ನು ಹಾಗೆ ತಿರುಗಿಸಿ ಹೀಗೆ ತಿರುಗಿಸಿ ಪರೀಕ್ಷಿಸುತ್ತಿದ್ದ. ರಾಮಚಂದ್ರ ಎಡಗೈಯನ್ನು ಗಲ್ಲದಮೇಲೆ ಇಟ್ಟುಕೊಂಡಿದ್ದ. ಕಣ್ಣು ರೆಪ್ಪೆಗಳು ಅರ್ಧ ಮುಚ್ಚಿಕೊಂಡಿದ್ದವು. ಅಲ್ಲಿ ಕುಳಿತಾಗಿನಿಂದ ಅವನ ಮನಸ್ಸಿನಲ್ಲಿ ಯೋಚನೆಗೆ ಪ್ರಾರಂಭವಾಗಿತ್ತು. ಅವನಿಗೆ "ದೂರದ ಆಸೆ ಇದೆ" ಎಂದು ಹೇಳಿದಾಗ ಇದ್ದಷ್ಟು ಧೈರ್ಯ ಈಗ ಇಲ್ಲ. ಮೀನಾಕ್ಷಿಗೆ "ನನ್ನನ್ನು ಕಣ್ಣುತುಂಬಾ ನೋಡುವೆ" ಎಂದು ಹೇಳಿದ್ದು ಜ್ಞಾಪಕಕ್ಕೆ ಬಂತು. ಇದ್ದಷ್ಟು ಧೈರ್ಯವೂ ಕ್ರಮೇಣ ಜಾರತೊಡಗಿತು. ಅವನ ದೃಷ್ಟಿ ಬರಬರುತ್ತ ಮಂಕಾಗಿ ಎದುರಿಗಿದ್ದ ಪದಾರ್ಥಗಳೆಲ್ಲಾ ಮಾಯ

ವಾದಂತಾಯಿತು. ಅವನಿಗಿದ್ದ "ದೂರದ ಆಸೆ" ಅವನ ಮನಸ್ಸಿನ ದಿಗಂತದ ಮೊಬ್ಬಿನಲ್ಲಿ ಮೆಲ್ಲ ಮೆಲ್ಲನೆ ಮರೆಯಾಗುತ್ತ ಬಂತು. ಮೀನಾಕ್ಷಿ "ದೂರವೇ ಸರಿ!" ಎಂದು ಬಹು ದಾರುಣವಾದ ನಿಟ್ಟುಸಿರಿನೊಡನೆ ಹೇಳಿದ್ದು ಆ ಮೊಬ್ಬು ಕವಿದ ಮನಸ್ಸಿನಲ್ಲಿ ಪ್ರತಿಧ್ವನಿಯಾಯಿತು. ಅವನು ಇನ್ನುಮುಂದೆ ಯೋಚಿಸಲಾರದೆ ಹೋದ. ಯೋಚಿಸಲೊಲ್ಲದೆ ಹೋದ ಎಂದರೆ ಹೆಚ್ಚು ನಿಜವನ್ನು ಹೇಳಿದಂತಾಗುತ್ತದೆ. ಇಲ್ಲಿಯೂ ಆತ್ಮವಂಚನೆ. ಅವನ ಮುಖದ ಭಾವ ಬಾಡಿತು. ಅವನ ಆತ್ಮ ಜಾಗ್ರದವಸ್ಥೆಯ ಸರಹದ್ದನ್ನು ದಾಟುವುದರಲ್ಲಿತ್ತು. ಹಾಗೆಯೇ ಕುಳಿತಿದ್ದ. ಹೊರಗೆ "ಜೈ! ಗೌರೀಶಂಕರ್" ಎಂದು ಯಾರೋ ಕೂಗಿದಹಾಗಾಯಿತು. ರಾಮಚಂದ್ರ ಆ ಅರನಿದ್ರೆಯಿಂದ ಎಚ್ಚರವಾಗಿ ಕಣ್ಣುಬಿಟ್ಟು ನೋಡಿದ. ಬಾಗಿಲಿಗೆದುರಾಗಿ ಹೊರಗೆ ಒಬ್ಬ ಭಿಕ್ಷುಕ ಬೈರಾಗಿ ನಿಂತಿದ್ದ. ಎತ್ತರವಾದ ಆಳು—ದೃಢವಾದ ಮೈಕಟ್ಟು. ಮುಖವನ್ನು ನೋಡಿದರೆ "ಸಾಧಾರಣ ಬೈರಾಗಿಗಳಂತೆ ಅಲ್ಲ" ಅನ್ನುವ ಹಾಗಿತ್ತು. ರಾಮಚಂದ್ರ ಒಳಗಿನಿಂದ ಒಂದು ಹಿಡಿ ಅಕ್ಕಿಯನ್ನು ತಂದು ಅವನಿಗೆ ನೀಡಿದ. ಇಷ್ಟು ಹೊತ್ತಿಗೆ ಚಂದ್ರಶೇಖರ ಆಡುತ್ತಿದ್ದವನು ಬೈರಾಗಿಯನ್ನು ನೋಡಿ, ದೊಡ್ಡದಾಗಿ ಕಣ್ಣುಬಿಟ್ಟು, ಕಕಬಿಕಿಯಾಗಿ ಕೊನೆಗೆ ಚಪ್ಪಾಳೆ ತಟ್ಟುತ್ತ ನಕ್ಕುಬಿಟ್ಟ. ಬೈರಾಗಿಗೆ ಆ ಮಗುವನ್ನೂ ಅದರ ಆಟವನ್ನೂ ನೋಡಿ ಬಹಳ ಆನಂದವಾಯಿತು; ಮುಂದಕ್ಕೆ ಹೋಗದೆ, ರಾಮಚಂದ್ರನ ಮುಖವನ್ನು ನೋಡಿ, "ಆ ಮಗ ಯಾರದ್ದು?" ಎಂದು ಕೇಳಿದ.

ರಾಮಚಂದ್ರ ಮಗನನ್ನು ಎತ್ತಿಕೊಂಡು "ನನ್ನದು" ಎಂದ.

ಬೈರಾಗಿ ಅವನ ಮುಖವನ್ನೇ ದೃಷ್ಟಿಸಿ ನೋಡುತ್ತ "ನಿಮಗೆ ಏನೋ ದುಃಖ ಇದೆ; ಏನು ಅದು?" ಎಂದು ಕೇಳಿದ. ರಾಮಚಂದ್ರ ಬೈರಾಗಿಗಳ ವಿಷಯವಾಗಿ ಅನೇಕ ವಿಚಿತ್ರವಾದ ಕಥೆಗಳನ್ನು ಕೇಳಿದ್ದ. ಈ ಬೈರಾಗಿ ಇಷ್ಟು ವಿಚಾರಣೆಗೆ ಪ್ರಾರಂಭಿಸಿದ್ದನ್ನು ನೋಡಿ ಅವನ ಮನಸ್ಸಿಗೆ "ಇವನಿಂದ ಏನಾದರೂ ಉಪಯೋಗವಾಗಬಹುದೆ? ದೇವರೇ ಇವನನ್ನು ಇಂದು ಇಲ್ಲಿಗೆ ಕಳಿಸಿರಬಹುದೆ?" ಎಂದು ಯೋಚಿಸಿದ. "ಮುಳುಗುತ್ತಿರುವವನು ಒಂದು ತೇಲುತ್ತಿರುವ ಹುಲ್ಲುಕಡ್ಡಿ ಸಿಕ್ಕಿದರೂ ಅದನ್ನು ಹಿಡಿದುಕೊಳ್ಳಲು ಯತ್ನಿಸುತ್ತಾನೆ" ಎಂದು ಇಂಗ್ಲೀಷಿನಲ್ಲಿ ಒಂದು ಗಾದೆ ಇದೆ—ರಾಮಚಂದ್ರ ಮುಳುಗುತ್ತಿರುವವನಂತೆಯೇ ಆಗಿದ್ದ. ತೇಲುವ ಹುಲ್ಲನಂತೆ ಈ ಬೈರಾಗಿ ಬಂದ. "ಮನುಷ್ಯ ಪ್ರಯತ್ನ ಇನ್ನೂ ಇದೆ!" ಎಂದು ತಾನು ಹೇಳಿದ್ದು ಜ್ಞಾಪಕಕ್ಕೆ ಬಂತು. ಮನಸ್ಸಿನಲ್ಲಿ ಈ ಯೋಚನೆಗಳು

ಹುಟ್ಟಿ ರಾಮಚಂದ್ರ ಬೈರಾಗಿಯ ಪ್ರಶ್ನೆಗೆ ಉತ್ತರ ಹೇಳುವುದು ಸ್ವಲ್ಪ ತಡವಾಯಿತು. ಬೈರಾಗಿ ಮನೆಯ ಒಳಗೆ ನೋಡಿದ. ಮೀನಾಕ್ಷಿ ಸಿದ್ಧಮಾಡುತ್ತಿದ್ದಳು. ಬೈರಾಗಿ ಅವಳನ್ನು ತೋರಿಸಿ, "ಆ ಅಮ್ಮ ಯಾರು?" ಎಂದು ಕೇಳಿದ.

"ಈ ಮಗುವಿನ ತಾಯಿ"

"ಮಹರಾಜ್, ನಿಮಗೆ ಏನು ದುಃಖ?"

"ಅವಳು ಕುರುಡಿ"

"ಹಾಯ್! ಭಗವಾನ್! ಹುಟ್ಟುಕುರುಡು ಏನು?"

"ಅಲ್ಲ; ಹನ್ನೆರಡುವರ್ಷ ಆದಮೇಲೆ ಕುರುಡಿಯಾದಳು"

ಈ ಮಾತನ್ನು ಕೇಳಿ ಬೈರಾಗಿಯ ಮುಖ ಸ್ವಲ್ಪ ಅರಳಿದಂತಾಯಿತು. ಅವನು ತನ್ನ ಗಂಟನ್ನು ಮೆಟ್ಟಲಿನ ಮೇಲೆಯೇ ಇಟ್ಟು ಅಲ್ಲಿ ಕುಳಿತುಕೊಂಡು ರಾಮಚಂದ್ರನನ್ನು ಕುಳಿತುಕೊಳ್ಳುವಹಾಗೆ ಸಂಜ್ಞೆಮಾಡಿದ. ರಾಮಚಂದ್ರನೂ ಕುಳಿತ. ಬೈರಾಗಿ ಮುಂದಕ್ಕೆ ಬಗ್ಗಿ ಅವನ ಮುಖವನ್ನೇ ನೋಡುತ್ತ "ಒಳ್ಳೇದು ಸಾಮಿ, ನಾನು ಒಂದು ಔಷಧ ಮಾಡಿಕೊಡುತ್ತೇನೆ ಹಾಕುತ್ತೀರಾ?" ಎಂದು ಕೇಳಿದ. ರಾಮಚಂದ್ರ ಉತ್ತರವಾಗಿ ಮುಖವನ್ನು ಸಪ್ಪಗೆ ಮಾಡಿಕೊಂಡು "ಅಯ್ಯೋ! ಈಗಾಗಲೆ ನೂರು ಔಷಧಿಯಾಯಿತು. ಇನ್ನೂ ಅವಳು ಕುರುಡಿಯಾಗಿಯೇ ಇದ್ದಾಳೆ" ಎಂದ. ಬೈರಾಗಿ ಸ್ವಲ್ಪ ನಕ್ಕು "ಅಯ್ಯಾ, ಇದರಲ್ಲಿ ಬಲವಂತ ಏನೂ ಇಲ್ಲ. ನೂರು ಆಯಿತಲ್ಲ, ಇದು ನಂದು ನೂರೊಂದನೇದು ನೋಡಿ. ಕಷ್ಟ ಏನೂ ಇಲ್ಲ." ಎಂದ. ಈ ಮಾತನ್ನು ಕೇಳಿ ರಾಮಚಂದ್ರನ ಮನಸ್ಸಿನಲ್ಲಿ "ಏನು! ನಾನು ಮೀನಾಕ್ಷಿಗೆ ಹೇಳಿದ ಮಾತನ್ನೇ ಇವನು ನನಗೆ ಹೇಳುತ್ತಿದಾನಲ್ಲಾ! ಆಗಲಿ, ಇದನ್ನೂ ಪರೀಕ್ಷಿಸಿಬಿಡೋಣ" ಎಂದು ತೋರಿತು. ಬೈರಾಗಿಯನ್ನು ಕುರಿತು "ಆಗಲಿ, ನೀನು ಔಷಧಿಯನ್ನು ಮಾಡಿಕೊಡು" ಎಂದು ಹೇಳಿದ.

"ಸರಿ ಇನ್ನು ಮೂರುದಿನ ಆದ್ಮೇಲೆ ತರ್ತೇನೆ. ಬರ್ತೇನೆ ಸಾಮಿ, 'ಜೈ ಗೌರೀಶಂಕರ್'" ಎಂದು ಹೇಳಿಕೊಂಡು ಹೊರಟುಹೋದ.

ಮೂರು ದಿನಗಳಾದ ಮೇಲೆ ಬೈರಾಗಿ ತನ್ನ ಮಾತಿನ ಪ್ರಕಾರ, ಕೈಯಲ್ಲಿ ಎರಡು ಸೀಸೆಗಳನ್ನು ಹಿಡಿದುಕೊಂಡು ರಾಮಚಂದ್ರನ ಮನೆಗೆ ಬಂದ. ಆ ಎರಡು ಸೀಸೆಗಳನ್ನೂ ಅವನ ಕೈಗೆ ಕೊಟ್ಟು ಅದನ್ನು ಉಪಯೋಗಿಸುವ ವಿಧಾನವನ್ನು ಹೇಳಿದ. ರಾಮಚಂದ್ರ "ಇದಕ್ಕೆ ಎಷ್ಟು ದುಡ್ಡು ಕೊಡಬೇಕು?" ಎಂದು ಕೇಳಿದ. ಅದಕ್ಕೆ ಬೈರಾಗಿ ನಗುತ್ತ

"ಇಲ್ಲ. ಮಹಾರಾಜ್, ನನಗೆ ದುಡ್ಡುಬೇಡ. ಈ ಔಷಧಿ ಹಾಕಿ ಇನ್ನು ಒಂದು ತಿಂಗ್ಳು ಆಗೋದ್ರಲ್ಲಿ ಆಯಮ್ಮನಿಗೆ ಚೆನ್ನಾಗಿ ಕಣ್ಣು ಕಾಣ್ತದೆ. ನಾನು ಇನ್ನು ಆರು ತಿಂಗ್ಳು ಬಿಟ್ಕೊಂಡು ಮತ್ತೆ ಇಲ್ಲಿಗೆ ಬರ್ತೇನೆ. ನನ್ನ ಮಾತು ನಿಜ ಆಗಿದ್ರೆ ನಿಮ್ಮ ಮನಸ್ ಬಂದಿದ್ದು ಕೊಡಿ. ಇಲ್ದೇ ಇದ್ರೆ ಬೇಡ. ನನ್ಗೆ ನಂಬ್ಕೆ ಐತೆ. ಈ ಮದ್ದು ಎಷ್ಟೋ ಕಡೆ ಕೊಟ್ಟಿದ್ದೇನೆ ಸಾಮಿ, ಎಲ್ಲೂ ಸುಳ್ಳಾಗಿಲ್ಲ. ಭಗವಂತ ಐದಾನೆ ಮಹರಾಜ್!" ಎಂದು ಮೇಲಕ್ಕೆ ಕೈತೋರಿಸುತ್ತ ಹೇಳಿದ. ರಾಮಚಂದ್ರ "ಆಗಲಿ ನೋಡೋಣ" ಎಂದು ಸೀಸೆಗಳನ್ನು ತೆಗೆದುಕೊಂಡು ಎದ್ದ. ಅಷ್ಟು ಹೊತ್ತಿಗೆ ಚಂದ್ರಶೇಖರ ಒಳಗಿನಿಂದ ತಪ್ಪುತಪ್ಪು ಹೆಜ್ಜೆಗಳನ್ನಿಡುತ್ತ ನಗುತ್ತ ನಗುತ್ತ ಹೊರಕ್ಕೆ ಬಂದ. ಬೈರಾಗಿ ಎದ್ದು ಅವನ ಗಲ್ಲವನ್ನು ಮುಟ್ಟಿ ನಗುತ್ತ ಹೊರಟು ಹೋದ.

## (೮)

ಬೈರಾಗಿ ತಂದು ಕೊಟ್ಟ ಎರಡು ಸೀಸೆಗಳಲ್ಲಿ, ಒಂದರಲ್ಲಿ ಯಾವುದೋ ಒಂದು ದ್ರಾವಕ, ಇನ್ನೊಂದರಲ್ಲಿ ಏನೋ ತೈಲ. ಮೀನಾಕ್ಷಿ ಅವೆರಡನ್ನೂ ಅವನು ಹೇಳಿದ್ದ ಪ್ರಕಾರ ಉಪಯೋಗಿಸ ತೊಡಗಿದಳು. ಮೊದಮೊದಲು ಅವಳಿಗೆ ಈ ಔಷಧಿಯಲ್ಲೂ ನಂಬಿಕೆ ಇರಲಿಲ್ಲ. ಗಂಡನ ಬಲವಂತಕ್ಕೆ ಉಪಯೋಗಿಸುತ್ತಿದ್ದಳು. ಆದರೆ ರಾಮಚಂದ್ರನಿಗೆ ಮಾತ್ರ ಬೈರಾಗಿಯ "ಎಲ್ಲೂ ಸುಳ್ಳಾಗಿಲ್ಲ" ಎಂಬ ಮಾತು ಜ್ಞಾಪಕಕ್ಕೆ ಬಂದು, ಅವನ ಮನಸ್ಸಿನ ಆ "ದಿಗಂತದ ಮೊಬ್ಬು" ಹರಿದು ದೂರದಲ್ಲಿ ಪುನಃ ಆಸೆಯು ತಲೆದೋರಿತು. ದಿನಗಳು ಕಳೆದ ಹಾಗೆಲ್ಲಾ ತಾನು ಹೇಳಿದ್ದ "...ಸಾವಿರದ ಒಂದನೆಯದು ಸಫಲವಾಗಬಹುದು" ಎಂಬ ಮಾತು ನಿಜ ವಾಗುವಂತೆ ತೋರಿತು. ಔಷಧಿಯ ಮಹಾತ್ಮೆಯೋ ಅಥವಾ ಇಷ್ಟು ದಿನಕ್ಕೆ ಮೀನಾಕ್ಷಿಯ ಕರ್ಮವೆಲ್ಲಾ ಸವೆಯಿತೋ ಹೇಗೋ ಅಂತು ಬೈರಾಗಿ ಕೊಟ್ಟ ಔಷಧಿ ಯಿಂದ ಗುಣ ಕಂಡುಬಂತು. ಎಂಟುದಿನ ಅನ್ನುವುದರಲ್ಲಿ ಅವಳ ಕಣ್ಣಿಗೆ ಕತ್ತಲೆ ಬೆಳಕು ಇವುಗಳ ಅನುಭವ ಉಂಟಾಗ ತೊಡಗಿತು. ಆದ ಹಾಗೆಲ್ಲಾ ಅವಳ ನಿರಾ ಶೆಯ ಗಟ್ಟಿ ಬೇಗಬೇಗ ಕರಗುತ್ತ ಬಂತು. ತಾನು ನಿರಾಶಳಾಗಿ ಅಳುತ್ತಿದ್ದಾಗ ತನ್ನ ಪ್ರಿಯನು ಹೇಳಿದ್ದ "ಮನುಷ್ಯ ಪ್ರಯತ್ನ—ಕಣ್ಣು ತುಂಬಾ ನೋಡುವೆ——ದೂರದ ಆಸೆ" ಈ ಮಾತುಗಳು ಅವಳ ಮನಸ್ಸಿನಲ್ಲಿ ಪುನಃ ಜಾಗರಿತವಾದವು. ಮನಸ್ಸಿನ ಒಳಗೇ ಅವಳು ಬಹಳ ಸುಖವನ್ನು ಅನುಭವಿಸಿದಳು. ಅವಳ ಅಂತರಾಳ ದಲ್ಲಿ "ಕಣ್ಣು ಬರುತ್ತೆ" ಎಂದು ಯಾರೋ ಭರವಸೆ ಕೊಟ್ಟಹಾಗಾಯಿತು.

"ನನ್ನ ಜೀವದ ದೇವರನ್ನು ನೋಡಬಹುದು! ನನ್ನ ಕಂದ—ನನ್ನ ಚಂದ್ರನನ್ನು ನೋಡಬಹುದು!" ಎಂದು ಅವಳ ಮೈ ಪುಳಕಾಂಕಿತವಾಯಿತು. ಇನ್ನೂ ಕೆಲವು ದಿನಗಳು ಕಳೆಯುವ ಹೊತ್ತಿಗೆ, ಬೆಳಗಿನ ಜಾವದಲ್ಲಿ ಕತ್ತಲು ಸವೆದಂತೆ, ಅವಳ ಕುರುಡೂ ಹೋಗುತ್ತ ಹೋಗುತ್ತ ಸುತ್ತಮುತ್ತಲಿನ ಪದಾರ್ಥಗಳು ಹೆಚ್ಚು ಹೆಚ್ಚು ವಿಶದವಾಗಿ ಕಾಣ ತೊಡಗಿದವು. ಮೆಲ್ಲಗೆ ಪ್ರಪಂಚವು ತನ್ನ ಕಪ್ಪಾದ ಮುಸುಕನ್ನು ತೆಗೆಯುತ್ತಿರುವಂತೆ ತೋರಿತು. ಮೆಲ್ಲಮೆಲ್ಲಗೆ ಆದರ ಬೆಳಕೂ ಅವಳ ಹೃದಯದ ಬೆಳಕೂ ಒಂದು ಪ್ರವಾಹದಲ್ಲಿ ಸೇರತೊಡಗಿದವು. ಅವಳು ದಿನವೂ ಗಂಡನನ್ನು ನೋಡುವಳು. ಮಗುವನ್ನು ನೋಡುವಳು. ದಿನದಿನಕ್ಕೆ ಅವರು ಕತ್ತಲೆಯ ಸಮುದ್ರ ದಲ್ಲಿ ಈಜಿಕೊಂಡು ಇವಳಿದ್ದೆಡೆಗೆ ಬರುತ್ತಿದ್ದಂತೆ ತೋರಲಾರಂಭಿಸಿತು. ಕತ್ತಲು ಹರಿದ ಹಾಗೆಲ್ಲಾ ಅವಳಿಗೆ ಆತುರವೂ ಹೆಚ್ಚಿತು. "ಕಣ್ಣು ತುಂಬಾ ನೋಡುವ ದಿನ ಎಂದು ಬರುತ್ತದೆಯೋ" ಎಂದು ಹಂಬಲಿಸಲಾರಂಭಿಸಿದಳು. ಆ ದಿನವೇನೂ ದೂರ ವಿರಲಿಲ್ಲ—ಅದೂ ಬಂತು. ಅವಳ ಜೀವನದಲ್ಲಿ ಅದೆಂತಹ ಸುದಿನ!

(೬)

ಒಂದುದಿನ ಭಾನುವಾರ ಮಧ್ಯಾಹ್ನ. ರಾಮಚಂದ್ರನಿಗೆ ರಜ. ಶ್ರೀಕಂಠನಿಗೆ ರಜ ಇರಲಿಲ್ಲ. ಕೂಲಿಯವರಿಗೆ ರಜ ಎಲ್ಲಿ? ಲಕ್ಷ್ಮಮ್ಮನವರು ಕೆಲಸ ಮುಗಿಸಿ ಕೊಂಡು ಒಳಗೆ ಎಲ್ಲೋ ನಿದ್ದೆ ಹೋಗುತ್ತಿದ್ದರು. ರಾಮಚಂದ್ರ, ಮೀನಾಕ್ಷಿ ಇಬ್ಬರೂ ತಮ್ಮ ಕೊಠಡಿಯಲ್ಲಿದ್ದರು. ಚಂದ್ರಶೇಖರ ಮೂಲೆಯಲ್ಲಿದ್ದ ರಾಮಚಂ ದ್ರನ ಒಂದು ಬೂಟ್ಸನ್ನು ತೆಗೆದುಕೊಂಡು ಅದರಲ್ಲಿ ತನ್ನ ಎರಡು ಕಾಲುಗಳನ್ನೂ ಹಾಕಲು ಸರ್ವಪ್ರಯತ್ನ ಮಾಡುತ್ತಿದ್ದ. ರಾಮಚಂದ್ರ ಅವನನ್ನು ನೋಡಿ "ಎಲಾ! ಪೋಲಿ!" ಎಂದು ಕರೆದು ನಕ್ಕ. ಚಂದ್ರಶೇಖರ ಹಿಂತಿರುಗಿ ತಂದೆ ತಾಯಿ ಇಬ್ಬ ರನ್ನೂ ನೋಡಿ ಕುಣಿಯುತ್ತ ಕೇಕೆ ಹಾಕಿಕೊಂಡು ನಗುವುದಕ್ಕಾರಂಭಿಸಿದ. ಮೀನಾಕ್ಷಿಗೂ ಬಹಳ ನಗುಬಂತು. ಅವಳು ನಗುತ್ತ ನಗುತ್ತ ಹಾಗೆಯೇ ಸ್ವಲ್ಪ ಕೊರಳನ್ನು ಬಳುಕಿಸಿ ಓರೆಗಣ್ಣಿನಿಂದ ಗಂಡನನ್ನು ನೋಡಿದಳು. ರಾಮಚಂದ್ರ ಈ ಪ್ರಸಾದವನ್ನು ಉಚಿತವಾದ ರೀತಿಯಲ್ಲಿ ಸ್ವೀಕಾರಮಾಡಿ, ನಗುತ್ತ "ನೋಡು! ನೋಡು! ನಿನ್ನ ಮಗನ ಆಟಾನ!" ಎಂದು ಹೇಳಿ ಅವಳ ಕೈಹಿಡಿದುಕೊಂಡು ಸ್ವಲ್ಪಹೊತ್ತು ಸುಮ್ಮನಿದ್ದು ಆಮೇಲೆ "ನಿಮ್ಮ ತಾಯಿ ಎಲ್ಲಿ?" ಎಂದು ಕೇಳಿದ.

"ಒಳಗೆ ಮಲಗಿಕೊಂಡಿದ್ದಾರೆ."

“ ಇದುವರೆಗೂ ಒಳಗೆ ಅವರೊಬ್ಬರದ್ದೇ ಕೆಲಸವಾಗಿತ್ತು. ಮೀನಾ! ಇನ್ನುಮೇಲೆ ನೀನೂ ಮೈಬಗ್ಗಿಸಬೇಕಾಯಿತಲ್ಲ! ” (ಹೀಗೆಂದು ಹೇಳಿ ನಗುತ್ತ) “ ಕುರುಡಾಗಿಯೇ ಇದ್ದಿದ್ದರೆ ಈ ಕಷ್ಟವೆಲ್ಲಾ ಇರುತ್ತಿರಲಿಲ್ಲ. ಅಲ್ಲವೆ? ” ಎಂದನು.

(ನಗುತ್ತ) “ ಹೌದು! ನನಗೂ ಹಾಗೇ ಅನ್ನಿಸುತ್ತೆ! ”

ಅಷ್ಟು ಹೊತ್ತಿಗೆ ಬೈರಾಗಿ ಬಂದು ಕೂಗಿದ. ಮೀನಾಕ್ಷಿ ತಟ್ಟನೆ ಎದ್ದು ಹೋಗುವುದರಲ್ಲಿದ್ದಳು. ರಾಮಚಂದ್ರ ಅವಳನ್ನು ಹಿಡಿದು ನಿಲ್ಲಿಸಿ, ಎದ್ದು ತನ್ನ ಪೆಟ್ಟಿಗೆಯಿಂದ ಒಂದುನೂರು ರೂಪಾಯಿನ ನೋಟನ್ನು ತೆಗೆದುಕೊಂಡು ಬಂದು ಮೀನಾಕ್ಷಿಯ ಕೈಗೆ ಕೊಟ್ಟು, “ ಮೀನಾ ನೀನು ಹೋಗಿ, ಒಂದು ಬೊಗಸೆಯಲ್ಲಿ ಅಕ್ಕಿ ತೆಗೆದುಕೊಂಡು ಅದರಲ್ಲಿ ಈ ನೋಟನ್ನು ಹುದುಗಿಟ್ಟುಕೊಂಡು ಬೈರಾಗಿಗೆ ಹಾಕು ಎಂದು ಹೇಳಿದ. ಮೀನಾಕ್ಷಿ ಹೊರಗೆ ಬಂದು ಭಿಕ್ಷುಕನಿಗೆ ಅಕ್ಕಿ ನೀಡಿದಳು. ಅವನು ಅವಳ ಕಣ್ಣುಗಳನ್ನು ನೋಡಿದ. ಅವನಿಗೆ ಆನಂದವಾಯಿತು. “ ಹಾ! ಭಗವಂತ! ಎಲ್ಲಾ ನಿನ್ನದು! ” ಎಂದುಕೊಂಡು ಹಿಂತಿರುಗುವುದರಲ್ಲಿದ್ದ. ಅಷ್ಟರಲ್ಲಿಯೇ ಅಕ್ಕಿಯ ಜೊತೆಯಲ್ಲಿ ನೋಟು ಇದ್ದುದನ್ನು ಕಂಡು ಆಶ್ಚರ್ಯದಿಂದ ಮೀನಾಕ್ಷಿಯನ್ನು ಕುರಿತು “ ತಾಯಿ! ಇದೇನು ನೋಟು! ” ಎಂದು ಕೇಳಿದ. ರಾಮಚಂದ್ರ ಬಾಗಿಲ ಹಿಂದೆ ನಿಂತುಕೊಂಡು ಕೇಳುತ್ತಿದ್ದವನು ಮುಂದಕ್ಕೆ ಬಂದು “ ಅದು ನೀವು ಕೊಟ್ಟ ಔಷಧಿಗೆ ” ಎಂದು ಹೇಳಿದ. ಬೈರಾಗಿ “ ಇದೆಷ್ಟು? ” ಎಂದು ಕೇಳಿದ.

“ ಒಂದುನೂರು ರೂಪಾಯಿ. ”

“ ಎಷ್ಟು! ”

“ ಒಂದುನೂರು. ”

“ ಮಹರಾಜ್! ಇಷ್ಟು ಏಕೆ ನನಗೆ? ನಾನು ಗರೀಬ! ನನಗೆ ಈ ದುಡ್ಡೇ ಬೇಡ. ನನ್ನ ಗುರುವಿನಲ್ಲಿ ನನ್ನ ಪ್ರಮಾಣವಿದೆ. ನಾನು ಮದ್ದಿಗೆ ದುಡ್ಡು ತೆಗೆದು ಕೊಳ್ಳುವುದಿಲ್ಲ. ”

“ ಮತ್ತೆ ನಿಮಗೆ ಇನ್ನೇನು ಕೊಡಲಿ? ”

“ ಒಂದು ಕೃಷ್ಣಾಜಿನ—ಒಂದು ಚೆಂಬು—ಒಂದು ಹಿಡಿ ಅಕ್ಕಿ. ”

“ ಆಗಲಿ, ನಾಳೆ ಬನ್ನಿ, ತರಿಸಿ ಇಟ್ಟಿರುತ್ತೇನೆ. ”

ಬೈರಾಗಿ ಹೊರಟುಹೋದ. ರಾಮಚಂದ್ರ ಮೀನಾಕ್ಷಿ ಇಬ್ಬರೂ ಪುನಃ ತಮ್ಮ ಕೊಠಡಿಗೆ ಹೋಗಿ ಕುಳಿತುಕೊಂಡರು. ಸ್ವಲ್ಪಹೊತ್ತು ಇಬ್ಬರೂ ಮಾತನಾಡ

ಲ್ಲ. ಮಿಾನಾಕ್ಷಿ ರಾಮಚಂದ್ರನನ್ನೇ ನಟ್ಟ ದೃಷ್ಟಿಯಿಂದ ನೋಡತೊಡಗಿದಳು. ಅವಳ ಮುಖದ ಮೇಲೆ ಮೆಲ್ಲಗೆ ಮುಗುಳ್ನಗೆ ಹರಡಿಕೊಂಡಿತು. ರಾಮಚಂದ್ರನಿಗೂ ನಗು ಬಂತು. "ಇದೇನು ಹೀಗೆ ನೋಡುತ್ತಿ ?" ಎಂದನು.

"ಕಣ್ಣುತುಂಬಾ ನೋಡುತ್ತಿದ್ದೇನೆ."

(ನಗುತ್ತ) "ಹುಂ, ಸರಿ! ಆಮೇಲೆ?"

"ನಿಮ್ಮನ್ನ ಹಿಡಿದು ನನ್ನ ಹೃದಯದಲ್ಲಿ ತುಂಬಿಕೊಳ್ಳುತ್ತಾ ಇದ್ದೇನೆ"

"ನಾನು ಸಿಕ್ಕಿದರೆ ಹೌದೋ ಅಲ್ಲವೋ ನೀನು ಹಿಡಿದುಕೊಳ್ಳುವುದು!"

"ಸಿಕ್ಕದಿದ್ದರೆ ಬಿಡುವರು ಯಾರು"




---

# ಕಾವ್ಯಾವಲೋಕನ

**ಶ್ರೀಬಸವೇಶ್ವರನ ಚರಿತ್ರೆ.**—ಲೇಖಕರು, ಮ|| ಸಿಂದಿಗಿ ಸಿದ್ದಪ್ಪ, ಬಳ್ಳಾರಿ. ಬೆಲೆ ರೂ. ೧—೦—೦.

ಪುಸ್ತಕ ಬರೆಯುವವರು ಅದನ್ನು ವಿಮರ್ಶೆಗೆ ಕಳುಹುವ ಪದ್ಧತಿಯೊಂದು ಇರುವುದಷ್ಟೆ. "ಪ್ರೋತ್ಸಾಹಕರವಾದ ವಿಮರ್ಶೆಯನ್ನು ದಯವಿಟ್ಟು ಮಾಡಿ" ಎಂದು ಕೆಲವರು ಸೂಚಿಸುವುದುಂಟು; ಮತ್ತೆ ಕೆಲವರು "ಇನ್ನೇನು ಕೊಡಲಾಗದಿದ್ದರೂ ಒಂದಷ್ಟು ಒಳ್ಳೆಯ ಮಾತನ್ನಾದರೂ ಹೇಳಿ" ಎಂದು ಕೊಸರು ಬೇಡುವುದುಂಟು. ಒಳ್ಳೆಯ ಮಾತು ಹೇಳತಕ್ಕದ್ದೇ,—ಅಲ್ಲವೆನ್ನುವರಾರು? ಪ್ರೋತ್ಸಾಹವನ್ನು ಕೊಡಬೇಕಾದುದೇ,—ನಿಜ. ವಿಮರ್ಶೆಯಿಂದ ಲೇಖಕರಿಗೆ ಉಪಕಾರವಾಗಬೇಕಾದರೆ ಒಂದೊಂದು ಸಾರಿ ಬೇರೆ ಕೆಲವು ಮಾತುಗಳನ್ನೂ ಹೇಳಬೇಕಾಗುತ್ತದೆ. ಇದೇ ವಿಮರ್ಶಕಾರರಿಗೆ ಬರುವ ತೊಂದರೆ. ಪ್ರಕೃತ ಗ್ರಂಥವು ಈ ತೊಂದರೆಯನ್ನು ಶತಾಧಿಕವಾಗಿ ಮಾಡಿರುತ್ತದೆ.

ಪುಸ್ತಕದ ವಿಷಯವು ಶ್ರೀ ಬಸವೇಶ್ವರನ ಚರಿತ್ರೆ. ಬರೆದವರು ಭೃಂಗಿಗೋತ್ರ, ವೃಷ್ಟಿಸೂತ್ರ, ದ್ವಿವಕ್ತ್ರ ಪ್ರವರದ, ಬಸವಪ್ಪ ಪ್ರಪೌತ್ರ, ಸಿದ್ಧಪ್ಪ ಪೌತ್ರ, ಮರಿಸಿದ್ಧಪ್ಪ ಪುತ್ರ, ಸಿಂದಿಗಿ ಸಿದ್ಧಪ್ಪನವರು,—ಪಂಡಿತ ಮನೆತನದವರೆಂದು ಒಪ್ಪಬಹುದು. ತೆಗೆದುಕೊಂಡಿರುವ ಶ್ರಮವನ್ನು ಬಾಯಿಮಾತಿನಿಂದ ಹೇಳುವ ಹಾಗಿಲ್ಲ. ಅವರು ಅವಲೋಕನಮಾಡಿರುವ ಗ್ರಂಥಗಳು ಸಂಸ್ಕೃತ, ಕನ್ನಡ, ತೆಲುಗು ಮತ್ತು ಇಂಗ್ಲೀಷು ಸೇರಿ ನೂರರ ಮೇಲೆ. ಹೆಚ್ಚುಕಡಿಮೆ ಒಂದೊಂದು ವಾಕ್ಯಕ್ಕೂ ತಕ್ಕ ಆಧಾರ ಪ್ರಮಾಣಗಳನ್ನು ಕೊಟ್ಟುಕೊಂಡೇ ಪುಸ್ತಕವನ್ನು ಬರೆದಿರುವರು. ಇಷ್ಟೇ ಆಗಿದ್ದರೆ ನಾವೂ ಧೈರ್ಯ ಮಾಡಬಹುದಾಗಿತ್ತು.

೧. "ಸಾರಾಂಶ: ಆಧುನಿಕ ಜೈನಕವಿಗಳ ಮತ್ತು ಅಸಮಗ್ರವಿಚಾರ ಶೂನ್ಯಮತಿಯ ಚರಿತ್ರ ಶೋಧಕರ ದುರಭಿಮಾನ ಮೂಢ ವಿಶ್ವಾಸಕಲ್ಪನೆಗಳಿಗೆ ನಿಷ್ಪಕ್ಷಪಾತಮತಿಯು ತೊಂದರೆಗೀಡಾಗುವುದೇ ತಕ್ಕ ಫಲವಾಗಿರುವುದು."

೨ "ಇಂಥಾತನನ್ನು ಸಂಸ್ಕೃತವನ್ನರಿಯದ ಕೇವಲ ಕನ್ನಡಿಗನೆಂದು ಹೇಳುವುದು ಕೂಪಮಂಡೂಕನ ಅವಿಚಾರಮತಿಯು ಕಾಕಮುಖಿಗಳ (ಇವರು ಒಂದು ಆರಣ್ಯಕ ಅನಾರ್ಯ ಆದಿಮ ನಿವಾಸಿಗಳು) ತೀರ್ಥಕಾಕರ ಕಾಕದೃಷ್ಟಿಯಂತಿರುತ್ತದೆ."

---

೧. ಪುಟ ೯; ೨. ಪುಟ ೨೪;

೩. "ಶ್ರೀ ಬಸವೇಶ್ವರನು ಮೇಲ್ಕಂಡವರ ಪ್ರಸಂಗಾವಧಾನ ಚಾಣಕ್ಯಭಾಷಾಪ್ರಪಂಚ ಸುಧಾಸಮುದ್ರದಲ್ಲಿ ಹಂಸನಂತೆ ವಿಹರಿಸುತ್ತಿದ್ದನೆಂಬುವುದು ಭಾಷಾಶೋಧರಸಜ್ಞರಿಗಲ್ಲದೇ ಸ್ವಪರ ಮತ ಜಾತಿ ಭ್ರಮಿಷ್ಟರಾದ ಅರ್ಧನಿಮಿಲಿತನೇತ್ರ ಗ್ರಾಮ ದೇವಲುಲಾಯ ಸದೃಶಗರ್ವಿತ ಕೃದ್ಧ ಮೂಢ ವಿಶ್ವಾಸಿಗಳಿಗೆ ತಿಳಿಯುವಂತಿಲ್ಲ."

೪. "ಮತ್ತು ಒಬ್ಬ ಆಧುನಿಕಪಾಪಿಯು ಅನಾರ್ಯಕರ್ಣಪ್ರವರಣರ ಹಾಗೆ ಬಡಬಡಿಸಿ........

........ಹಾಗಿಲ್ಲದಿದ್ದರೆ ಪೌರ್ವಿಮೌಢ್ಯ ಬದ್ಧಪ್ರಶ್ನಕರ್ತನು ಆಧುನಿಕ ಆಂಗ್ಲೇಯರ ಹೈಂದವ ಶಿಕ್ಷಾಸ್ಮೃತಿಯ ೩೦೨ ವಿಧಿಯನ್ನು ಅನುಭವಿಸಲೇಬೇಕಾಗುತ್ತದೆಂಬುದನ್ನು ಸಂಪೂರ್ಣ ಲಕ್ಷ್ಯಕ್ಕೆ ತಂದು, ಇತಃಪರ ಹಾಗೆಮಾಡುವುದಿಲ್ಲೆಂಬ ಅಭಯವನ್ನು ಕೊಟ್ಟು ಶ್ರೀ ಬಸವೇಶ್ವರನ ಕ್ಷಮೆಯನ್ನು ಬೇಡಿ ಪುನೀತನಾಗಲಿ" ಜಿ-ಗ್ಯಾರೆಟ್ ದೊರೆಗಳು ಆಗಲೇ ಪುನೀತರಾದರು !

ಸಿಂದಿಗಿ ಸಿದ್ಧಪ್ಪನವರ ವಿಚಾರದಲ್ಲಿ ನಮಗೆ ಬಹಳ ಕನಿಕರವಿದೆ. ಅವರಾ ಧಮನಿಗಳಲ್ಲಿ ರಕ್ತವು ಹಾಗೆ ಕುದಿಯುವುದಕ್ಕೆ ಕಾರಣಗಳಿಲ್ಲದೆ ಹೋಗಿಲ್ಲ. ಕೆಲವು ವರ್ಷಗಳ ಹಿಂದೆ ಪಾವಟೆ ಪರಾಜಯ, ಗರ್ವಭಂಗ, ಬಸವಧ್ವಾಂತದಿವಾಕರಾದಿಗಳು ಪ್ರಕಟವಾಗಿ ಒಂದು ಘೋರ ಯುದ್ಧವೇ ಆಯಿತು. ಇದರ ಜೊತೆಗೆ ಅನ್ಯಮತೀಯರು ಸ್ವಲ್ಪ ಕ್ರೂರವಾಗಿಯೇ ಬರೆದಿದ್ದಾರೆ. ಬಸವೇಶ್ವರನ ಭಕ್ತರು ತಾವಾಗಿ, ತಮ್ಮ ಆಚಾರ್ಯಪುರುಷನ ಈ ಅವಹೇಳನವನ್ನು ಸೈರಿಸುವುದುಂಟೆ ? ಆದರೂ ನಾವು ಹೇಳಬೇಕಾದ ಮಾತು ಒಂದುಂಟು. ಬಸವೇಶ್ವರನ ಗುಣಗೌರವವನ್ನೂ ಮಹತ್ವವನ್ನೂ ಲೋಕಕ್ಕೆ ತಿಳಿಸಬೇಕಾದುದು ಅತ್ಯಾವಶ್ಯಕ; ಇದಕ್ಕಾಗಿ ನೂರಾರು ಗ್ರಂಥಗಳನ್ನು ಓದಿ ಶೋಧಿಸಿ ನಿಶ್ಚಯಾಂಶಗಳನ್ನು ಹೊರಪಡಿಸುವುದೂ ಅತ್ಯಗತ್ಯ. ಆದರೆ ಸಿದ್ಧಪ್ಪನವರ ಮಾರ್ಗವನ್ನು ನಾವು ಒಪ್ಪುವುದಿಲ್ಲ. ಅವರು ಪಟ್ಟ ಶ್ರಮಕ್ಕೆ ಫಲವಿಲ್ಲದೇ ಹೋಗುವ ಸಂಭವವಿದೆ. ಬೈಗಳ ಬೆಂಬಲದಿಂದ ಸತ್ಯದ ಕಳೆ ಕುಗ್ಗುತ್ತದೆ, ಏರುವುದಿಲ್ಲ. ಸತ್ಯಸ್ಥಾಪನೆಗೆ ಶಾಂತಿಯು ಬೇಕು.

ಬಸವೇಶ್ವರನ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿರುವುದು ನಿಜ. ಇದಕ್ಕೆ ಗ್ರಂಥಗಳೇ ಕಾರಣ. ಪರಮತೀಯರ ಗ್ರಂಥಗಳಿಗಿಂತ ವೀರಶೈವ ಗ್ರಂಥಗಳೇ ಹೆಚ್ಚು ಕಾರಣ. ಈ ಗ್ರಂಥಗಳಲ್ಲಿ ಕೆಲವು ನಮಗೆ ಒಪ್ಪಿಕೆ; ಮತ್ತೆ ಕೆಲವು ಸಿದ್ಧಪ್ಪನವರಿಗೆ ಒಪ್ಪಿಕೆ. ಸಿಂಗಿರಾಜಪುರಾಣವೇ ವಿಶ್ವಸನೀಯವೆಂದು ಅವರು ಹೇಳಬಹುದು. ಬಸವ ಪುರಾಣವೇ ಆದರಣೀಯವೆಂದು ನಾವು ಹೇಳಬಹುದು. ಇತರರಿಗೆ ಎರಡೂ ಪುರಸ್ಕರಣೀಯವಾಗದಿರಬಹುದು. ಸಿದ್ಧಪ್ಪನವರ ಅಭಿಪ್ರಾಯಕ್ಕೆ ಅವರಿಗೆಷ್ಟು ಆಧಾರವಿದ್ದಿತೋ ಇತರರ ಅಭಿಪ್ರಾಯಕ್ಕೂ ಅಷ್ಟೇ ಆಧಾರವಿದೆ. ಸಿದ್ಧಪ್ಪನವರು

೩. ಪುಟ ೨೬ ; ೪. ಪುಟ ೧೨.

ಕೋಪಗೊಂಡು ಬೈದುಬಿಟ್ಟರೆ ಭಿನ್ನಾಭಿಪ್ರಾಯಗಳು ಓಡಿ ಹೋಗುವುವೇ? ಇತಿಹಾಸವು ಮಾರ್ಪಡುವುದೇ?

ಇಷ್ಟೊಂದು ಗಲಾಟೆಯಾಗಿರುವುದು ಸಿಂಗಿರಾಜನಿಂದ. ಮ|| ಮಂಜಪ್ಪ ಹರ್ಡೇಕರ್ ಮತ್ತು ಮ|| ಸಿಂದಿಗಿ ಸಿದ್ಧಪ್ಪ ಇವರು ಮಲಬಸವ ಚಾರಿತ್ರವನ್ನು (ಸಿಂಗಿರಾಜಪುರಾಣ) ಪ್ರಮಾಣವಾಗಿ ಅಂಗೀಕರಿಸಿರುತ್ತಾರೆ. ಸಿಂಗಿರಾಜನು ಬಸವೇಶ್ವರನ ಸಮಕಾಲೀನನಾದುದರಿಂದ ಅದನ್ನು ಎಲ್ಲರೂ ಒಪ್ಪಬೇಕು, ಅದೇ ಆದಿಕಾವ್ಯ ಎಂಬುದು ಅವರ ಹಟ. ಇದನ್ನು ಕೂಲಂಕಷವಾಗಿ ವಿಚಾರಿಸಬೇಕಾದರೆ ಬೇರೊಂದು ಲೇಖನವೇ ಆವಶ್ಯಕ. ಆದರೆ ಇಲ್ಲಿ ಸ್ಥೂಲವಾಗಿ ಕೆಲವು ಸಂಶಯಗಳನ್ನು ತಿಳಿಸುತ್ತೇವೆ.

೧. ಸಿಂಗಿರಾಜಪುರಾಣವೇ ಬಸವೇಶ್ವರನ ವಿಚಾರದಲ್ಲಿ ಆದಿಕಾವ್ಯವಾಗುವ ಪಕ್ಷಕ್ಕೆ ಬಸವಪುರಾಣವನ್ನು ಬರೆದ ಭೀಮಕವಿಯು ಆಂಧ್ರಭಾಷೆಯಲ್ಲಿ ರಚಿತವಾದ ಪಾಲ್ಕುರಿಕೆ ಸೋಮಾರಾಧ್ಯನ ಬಸವಪುರಾಣವನ್ನೇಕೆ ಆಧಾರಮಾಡಿಕೊಂಡನು?

೨. ದಶಗಣಗಳಲ್ಲಿ ಒಬ್ಬನಾಗಿ ಬಸವಪುರಾಣವನ್ನು ಕನ್ನಡದಲ್ಲಿಯೇ ಬರೆದ ಸಿಂಗಿರಾಜನನ್ನು—"ಪರಮಶಿವಭಕ್ತ ಸಿಂಗಿರಾಜ"‡ನನ್ನು ಭೀಮಕವಿ ಮೊದಲಾದವರು ತಿಳಿಯದೆ ಬಿಟ್ಟರೆಂದು ಹೇಳಬಹುದೇ?

೩. * ಸಿಂಗಿರಾಜನೂ ಬಸವೇಶ್ವರನೂ ಸಮಕಾಲೀನರಾದ ಮೇಲೆ, ಪಾಲ್ಕುರಿಕೆ ಸೋಮಾರಾಧ್ಯನೂ† ಬಸವೇಶ್ವರನೂ ಸಮಕಾಲೀನರಾದ ಮೇಲೆ,—ಸಿಂಗಿರಾಜನೂ ಪಾಲ್ಕುರಿಕೆ ಸೋಮನೂ ಸಮಕಾಲೀನರೆಂದು ಒಪ್ಪಬಹುದಷ್ಟೆ. ಈ ಇಬ್ಬರೂ ಕವಿಗಳು ಹೆಚ್ಚು ಕಡಿಮೆ ಏಕಕಾಲದಲ್ಲಿಯೇ ಬರೆದ ಗ್ರಂಥಗಳಲ್ಲಿ ಯಾರದನ್ನು ಹೆಚ್ಚು ಆದರಿಸಬೇಕು?

††೪. ಬಲದೇವ ಮದುವೆಯಂ ಮಾಡಿ ಕೆಲವಾಳ್ದಿನ |
ಕಳಿದಡಾಪದವ ಬಸವಂಗಿತ್ತರೆಂಬಕೃತಿ |
ವಳಕೆಯುಂಟಂತಲ್ಲವಿದು ಚೆನ್ನಬಸವೇಶನಮಲವಚನೋಚಿತೋಕ್ತ ||

.........§ ಬೀಳುವ ಬಸವನೆನೆ ಕೇಳಿ ಕೈಯೆನಾಂತು ||
ನಿಲಿಸಿದನು ಗಗನದಲ್ಲೆಂದೀಪವಾಡಮುಂ |

‡ ಚೆನ್ನಬಸವಪುರಾಣ.

* "ಮತ್ತು ಸಿಂಗಿರಾಜನು ಬಸವೇಶ್ವರನ ಸಮಕಾಲೀನನಾದರೂ" ಪುಟ ೪.

† "ಮತ್ತು ಶ್ರೀ ಬಸವನಾಮಾಕ್ಷರವನ್ನು ಸಾರ್ಥಕಪಡಿಸುವುದಕ್ಕಾಗಿಯೇ....ಮುಂತಾದ ಗ್ರಂಥಗಳನ್ನು ಸಮಕಾಲೀನ ಪಾಲ್ಕುರಿಕೆ ಸೋಮನೊಬ್ಬನೇ ಬರೆದಿರುವನು" ಪುಟ ೭.

†† ಸಿಂಗಿರಾಜಪುರಾಣ ೬ ನೆಯ ಸಂಧಿ. § ಸಿಂಗಿರಾಜಪುರಾಣ ೧೫ ನೆಯ ಸಂಧಿ.

ಕೆಲರು ಪೇಳುವರದನುಚಿತ ನಂದಿಕೇಶ ಗಣ
ಕುಲಕೆ ಪೇಳ್ವಾಶಾಸ್ತ್ರಮಾರ್ಗವರ್ಣನೆಯು ಸದ್ಭಕ್ತರೊಲಿದಾಲಿಸುವುದು ||

ಎಂದು ಮುಂತಾಗಿ ಸಿಂಗಿರಾಜನು ಬರೆದಿರುವುದರಿಂದ ಸಿಂಗಿರಾಜಪುರಾಣಕ್ಕಿಂತ ಮೊದಲು ಬಸವಪುರಾಣಾದಿಗಳು ಇದ್ದಿರಬಹುದೇ ?

೫. ಒಂದುವೇಳೆ ದಶಗಣಗಳ ಸಿಂಗಿರಾಜನೇ ಬೇರೆ, ಮಲಬಸವ ಚಾರಿತ್ರದ ಸಿಂಗಿರಾಜನೇ ಬೇರೆ ಆಗಿದ್ದಿರಬಹುದೇ ? ಹಿಂದಿನ ಬಸವಪುರಾಣಗಳು ಸಾಧುವಲ್ಲವೆಂದು ಸಿಂಗಿರಾಜನೆಂಬ ಕವಿಯು ಸುಮಾರು ೧೬ನೆಯ ಶತಮಾನದಲ್ಲಿ " ನಂದೀಶ ಪ್ರಮಥರ್ಗಮಲವಚನರಚನಾಮಹಾವಸ್ತು ವಿಸ್ತೀರ್ಣಮಂ ಸ್ಥಲವಿಟ್ಟನಾಮಂತ್ರ ರಹಸ್ಯಾದಿಯ " ತಿಳಿಸುವೆನೆಂದು " ನೂತನ ಕಥಾಕಲ್ಪದೊಳಗೊಂದು ಚಿತ್ರತರ ಜ್ಯೋತಿಯ ಚಮತ್ಕೃತಿಯ ಪ್ರಲಹರಿಯ ' ನ್ನಾಗಿ ಹೇಳಿರಬಹುದೇ ?

ಇಂತಹ ಸಂಶಯಗಳು ಸಾಮಾನ್ಯವಾಗಿ ತಲೆದೋರುವಾಗ ಯಾವುದೊಂದು ಹಟವಾದಕ್ಕೂ ತಕ್ಕಷ್ಟು ಆಧಾರವಿಲ್ಲವೆಂದು ನಮ್ಮ ನಂಬಿಕೆ. ಭಿನ್ನಾಭಿಪ್ರಾಯಗಳು ಮತದ್ವೇಷದಿಂದಲೇ ಹುಟ್ಟಿರುವುವೆಂಬುದು ಅಷ್ಟೊಂದು ನಿಜವಲ್ಲ. ಇದುವರೆಗೆ ಬರೆದಿರುವವರು ಅಜ್ಞರು, ಸಿದ್ಧಪ್ಪನವರೊಬ್ಬರೇ ಸರ್ವಜ್ಞರೆನ್ನಲಾದಿತೋ ? ಬಸವೇಶ್ವರರ ಜನ್ಮಸಂವತ್ಸರ, ಅಕ್ಕನಾಗಮ್ಮನ ವಿಚಾರ, ಬಿಜ್ಜಳನಕೊಲೆ ಇತ್ಯಾದಿಗಳು ತೀರ್ಮಾನಕ್ಕೆ ಬರುವುವೋ ಇಲ್ಲವೋ ಖಂಡಿತ ಹೇಳಲಾರೆವು. ಉದಾಹರಣೆಗೆ ನೋಡೋಣ.

೧. " ಆದರೆ ಒಬ್ಬಳಾಗಲಿ ಇಬ್ಬರಾಗಲಿ ಸಹೋದರಿಯರೇ ಇದ್ದಿಲ್ಲವೆಂದು ಧಾರಾಳವಾಗಿ ಹೇಳತಕ್ಕದ್ದಾಗಿದೆ." ೨. " ಅಕ್ಕನಿದ್ದಳೆಂಬ ವಿಷಯವನ್ನು ಅನೇಕರು ಬರೆದಿದ್ದರೂ ಅದು, ಸಹಾ ಅಸಂಭವವೆಂದು ನನ್ನ ಮುಂದಿನ ಅಲ್ಲಮ ಚೆನ್ನಬಸವಾದಿಗಳ ಚರಿತ್ರೆಯ ಮೇಲಿಂದ ಸಂಪೂರ್ಣವಾಗಿ ತಿಳಿಯಬರುವುದು "—ಎಂದು ಸಿದ್ಧಪ್ಪನವರು ಬರೆದಿದ್ದಾರೆ. ಈ ಚರಿತ್ರೆಗಳನ್ನು ಆದರದಿಂದ ನಿರೀಕ್ಷಿಸುತ್ತಿದ್ದೇವೆ. ಮ|| ರಾ|| ಹರ್ಡೀಕರವರು ಅಕ್ಕ ನಾಗಮ್ಮನು ಬಸವೇಶ್ವರನ ಸಹೋದರಿಯಲ್ಲವೆಂದು ಮೊದಲು ಪೀಠಿಕೆಯನ್ನು ಹಾಕಿದರು.—

*" ಬಸವನ ಈ ವೀರಸದ್ಭಕ್ತಿಯನ್ನು ತಾಯಿತಂದೆಗಳು ನೋಡಿ ಸಂತೋಷಪಟ್ಟು ವೈರಾಗ್ಯವೀರನಾದ ಶಿವದೇವನ ಮಗಳಾದ ಅಕ್ಕ ನಾಗಮ್ಮನನ್ನು ಬಸವನ ಉಪಚಾರಕ್ಕೋಸ್ಕರ ಅಲ್ಲಿಟ್ಟು ತಮ್ಮ ಮನೆಗೆ ಬಂದರೆಂದು ಸಿಂಗಿರಾಜಪುರಾಣದ ಐದನೆಯ ಸಂಧಿಯ ಮೇಲಿಂದ ಗೊತ್ತಾಗುತ್ತದೆ. "

೧ ೨; ಪುಟ ೮.

* ಶ್ರೀ ಬಸವಚರಿತ್ರೆ ಪುಟ ೨೮, ೨೯ ;

ಸಿಂಗಿರಾಜಪುರಾಣದ ಪ್ರಾಮಾಣ್ಯವನ್ನು ಅಂಗೀಕರಿಸಿದವರು ಹೇಳಿರುವ ಮಾತುಗಳಾದುವು. ಆ ಪುರಾಣದ ಐದನೆಯ ಸಂಧಿಯಲ್ಲಿ ಬಸವೇಶ್ವರನು ಕಪ್ಪಡಿ ಕ್ಷೇತ್ರವನ್ನು ಸೇರಿ ಪವಾಡವನ್ನು ಮೆರೆದಾಗ ತಾಯಿತಂದೆಗಳು ಅಲ್ಲಿಗೆ ಹೋಗಿ ಹಿಂದಕ್ಕೆ ಬರಬೇಕೆಂದು ಮಗನನ್ನು ಕೇಳಿಕೊಳ್ಳುವರು. ಬಸವೇಶ್ವರನು ತಾನು ಹಿಂದಿರುಗಿ ಬರುವುದಿಲ್ಲವೆಂದೂ, ಸಂಸಾರದಲ್ಲಿ ಸುಖವಿಲ್ಲ, ಸಂಸಾರಭ್ರಾಂತಿಯನ್ನು ಉಳಿಯಿರಿ—ಎಂದೂ ಹೇಳಿದನು. ಆದರೂ ಅವರಿಗೆ ಭ್ರಾಂತಿಯಳಿಯದೆ "ಅಳಿಯ ಶಿವದೇವ ಮಗಳ್ನಾಗಾಯನಾತಂಗೆ ಸೇವೆಗೋಸುಗಮಿತ್ತು ತಕ್ಕುದಂ ಕೊಟ್ಟು ಬಂದರುಯಿತ್ತಲು" ಎಂದಿದೆ. ಇದರಿಂದ ಮಗಳಾದ ನಾಗಮ್ಮನನ್ನೂ ಅಳಿಯ ನಾದ ಶಿವದೇವನನ್ನೂ (ಶಿವಸ್ವಾಮಿ) ಮಗನ ಉಪಚಾರಕ್ಕೆ ಬಿಟ್ಟು ಬಂದರೆಂದು ಸಿದ್ಧಿಸುವುದು. ನಾಗಮ್ಮನ ಗಂಡ ಶಿವಸ್ವಾಮಿ (ಶಿವದೇವ) ಎಂದು ಒತ್ತಿ ಹೇಳುವ ನಮ್ಮ ಲೇಖಕರು ಅಳಿಯ ಶಿವದೇವ, ಮಗಳು ನಾಗಾಯನ, ಎಂಬುದನ್ನು ಬಿಟ್ಟು ಶಿವದೇವ ಮಗಳ್ನಾಗಾಯ, "ವೈರಾಗ್ಯ ವೀರನಾದ ಶಿವದೇವನ ಮಗಳು"— ಎಂದು ಪತಿಯನ್ನು ಪಿತನನ್ನಾಗಿ ಮಾಡಿದರಲ್ಲಾ! ಸಿದ್ಧಪ್ಪನವರ ಶೈಲಿಯಲ್ಲಿ ಹೇಳೋಣವೇ ನಮಗೂ "ಸಖೇದಾಶ್ಚರ್ಯವಾಗುತ್ತಿದೆ" ಎಂದು? ಅದೇ ಸಿಂಗಿರಾ ಜಪುರಾಣದಲ್ಲಿ ಪುನಃ

೧. "ನೃಪನೊಂದುದಿನ ಪಗಲೊಳಗಣೋಲಗಮನಿತ್ತಿರಲ್ಕಾಸಮಯಕೆಂದಿ ನಂದದಿ ಬಸವರಾಜನಗ್ರಜೆ ಬರಲ್ಕೆ" ಎಂದು ಇರುವುದು. ಬಸವೇಶ್ವರನ ವಚನಗಳಲ್ಲಿ

೨. "ಹೆಂಗಸು ಗಂಡಸು ನೀನೇ ದೇವಾ, ಎಮ್ಮಕ್ಕನ ಗಂಡ ನೀನೇ ದೇವಾ! ಕೂಡಲಸಂಗಮದೇವಾ, ಭ್ರಾಂತಳಿದು ಭಾವ ಸಿಂದುದಾಗಿ"

ಎಂದು ಇದೆ. ಶಿವದೇವನ ವಿಚಾರವು ಹೇಗಾದರೂ ಇರಲಿ, ನಾಗಮ್ಮನು ಬಸವೇಶ್ವರನ ಸಹೋದರಿಯೆಂದೂ,

೩. "............ಪುತ್ರಾರ್ಥಸಂಕಲ್ಪ ವು | ಷ್ಪಂಗಳಿತ್ತಂಪ ಪಿಡಿದಾ ಲಿಂಗನುಂ ಶೃಂಗಮಧ್ಯದಿ ನೋಡಿ ಮತ್ತೆ"

ಎಂದು ಸಿಂಗಿರಾಜನು ಹೇಳಿರುವನಲ್ಲದೆ ಅನ್ಯಥಾ ಅಲ್ಲವೆಂದೂ, ನಾವು ಅಭಿ ಪ್ರಾಯಪಡುವುದು ಸಹಜವಲ್ಲವೇ.

೪. "ಬಜ್ಜಳನು ಬಸವೇಶ್ವರನಿಂದ ಕೊಲ್ಲಲ್ಪಟ್ಟನೆಂಬುವುದಾಗಲಿ...... ಬಿಜ್ಜಳನು ಕೊಲ್ಲಿಸಲ್ಪಟ್ಟವನೆಂಬುವುದಾಗಲಿ............ಇಂತಿವೆಲ್ಲವು ನಾಸ್ತಿ

೧. ಸಿಂಗಿರಾಜಪುರಾಣ ಸಂಧಿ ೩೪, ಪದ್ಯ ೧೮. ೨. ಬಸವೇಶ್ವರನ ವಚನಗಳು ಪುಟ ೧೩೬, ಸಂ. ೭. ೩. ಸಿಂಗಿರಾಜಪುರಾಣ ೫ನೆಯ ಸಂಧಿ ೪೪೫; ಪುಟ ೨೦-೨೩.

ಕವಾದಾತ್ಮಕ ಮತಪ್ರವಿಷ್ಟರಾದ ಧರ್ಮ ದುರಭಿಮಾನಕ್ಕೃದ್ಧ, ಮೂಢ, ವಿಶ್ವಾಸ, ಕವಿತಾ ಕಲ್ಪನೆಯಾಗಲಿ ಬೇರೊಂದಿಲ್ಲವು''......... ೫. "ಕಡೆಗೆ ಬಿಜ್ಜಳನು ಯಮಧರಮುನಿಯಿಂದ ಬೋಧಿಸಲ್ಪಟ್ಟು ತತ್ಕಾಲಿಕ ವಿರಕ್ತನಾಗಿ............ ತಿರುಗಿ ಬರುವ ಕಾಲದಲ್ಲಿ ಭೀಮಾನದಿಯ ದಂಡೆಯ ಮೇಲೆ ಅಸಂಖ್ಯಸಂಹಾರದಿಂದ ಸಂಪೂರ್ಣವಿರಕ್ತಿಯನ್ನು ಹೊಂದಿ ಮಗನಿಗೆ ರಾಜ್ಯವನೊಪ್ಪಿಸಿ ಸಲ್ಲೇಖನ (ಜೈನ ಧಾರ್ಮಿಕ ಉಪವಾಸ) ದ್ವಾರಾ ಕ್ರಿ. ಶ. ೧೧೭೩ ರಲ್ಲಿ ಸೌಧರ್ಮ ಸಾಮ್ರಾಜ್ಯ ವನ್ನು ಹೊಂದಿದನು.'' ಇವುಗಳಿಗೆ ಸಿದ್ಧಪ್ಪನವರ ಆಧಾರಗಳು ಎಲ್ಲರಿಗೂ ತಿಳಿದಿರುವ ವಿಷಯ. ಆದರೆ ನಾವು ಕೇಳುವ ಪ್ರಶ್ನೆಯು ಬೇರೆಯಾಗಿದೆ.

೧. ಬಸವೇಶ್ವರನ ಸಮಕಾಲೀನನಾದ ಸೋಮಾರಾಧ್ಯನು ಸುಮ್ಮಸುಮ್ಮನೆ ಇಂತಹ ಘೋರವಾದ, ಬಸವೇಶ್ವರನ ಕೀರ್ತಿಗೆ ಕಳಂಕವನ್ನು ತರುವ ಬಿಜ್ಜಳನ ಮರಣವೃತ್ತಾಂತವನ್ನು ಸೇರಿಸುವುದುಂಟೇ ?

೨. ರಾಘವಾಂಕನು—ಹೆಚ್ಚುಕಡಿಮೆ ಬಸವೇಶ್ವರನ ಸಮಕಾಲೀನನು— ಸಿದ್ಧರಾಮಪುರಾಣದ ೯ ನೆಯ ಸಂಧಿಯಲ್ಲಿ "ಭಾಸ ಬಿಜ್ಜಳನಳಿದ ವೀರಜಗದೇವನಿಂ ಸಿದ್ಧಸಂಖ್ಯಾತದಿಂದ'' ಎಂದು ಕುತರ್ಕಕಾಮಿಯಾಗಿ ಬರೆದು ಬಿಟ್ಟನೆ ?

ಸಿಂಗಿರಾಜನು ಒಬ್ಬನು ಹೊರತು ವೀರಶೈವ ಕವಿಗಳೆಲ್ಲರೂ ಬಿಜ್ಜಳನ ಕೊಲೆಗೆ ಸಾಕ್ಷೀಭೂತರಾಗಿರುವಾಗ, ಬಸವಸ್ತೋತ್ರ ಪಂಚರತ್ನಾದಿಗಳನ್ನು ಭಕ್ತಿ ಯಿಂದ ರಚಿಸಿದ ಸೋಮಾರಾಧ್ಯನೇ ಅದನ್ನು ಹೇಳಿರುವಾಗ, * "ಒಬ್ಬ ಜಂಗ ಮದ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು, ಸಂದಿತ್ತು ಕೂಡಲ ಸಂಗಮದೇವ ನಿಮ್ಮ ಕವಳಿಗೆ.'' ಎಂದು ಬಸವೇಶ್ವರನು ಸಾಕ್ಷಾತ್ತಾಗಿ ಪಶ್ಚಾತ್ತಾಪ ಪಟ್ಟಿರುವಾಗ—ನಾವು ಆ ವಿಚಾರವನ್ನು ನಂಬದೇ ಇರುವುದು ಹೇಗೆ? ಸಿದ್ಧಪ್ಪ ನವರು "ತೀರ್ಥಕಾಕ, ಕಾಕದೃಷ್ಟಿ, ಕೃದ್ಧ......'' ಇತ್ಯಾದಿಗಳಿಂದ ವಿಜೃಂಭಿ ಸಿದರೆ ಆಧಾರಗ್ರಂಥಗಳು ಪಲಾಯನಮಾಡುವುವೇ ?

ನಮ್ಮ ವೀರಶೈವಬಾಂಧವರಲ್ಲಿ ಎಲ್ಲರೂ ಸಿದ್ಧಪ್ಪನವರಂತಿಲ್ಲ. ಬಸವೇಶ್ವರನ ಜನ್ಮಸಂವತ್ಸರದ ಮೇಲೆ ಬೆಳಕನ್ನು ಬೀರುವ ಸಂದರ್ಭದಲ್ಲಿ ಮ|| ರಾ|| ಹಳಕಟ್ಟಿ ಯವರು ಹೇಳಿರುವುದನ್ನು ನೋಡೋಣ. † "ನಾನು ಮೇಲ್ಕಂಡ ವಿವರಣೆಯೆಲ್ಲ ಪೂರ್ಣ ನಿಶ್ಚಯಾತ್ಮಕವೆಂದು ತಿಳಿದು ಬರೆದಿಲ್ಲ. ಜನರಲ್ಲಿ ಈ ಮಹತ್ವದ ವಿಷಯದ ಬಗ್ಗೆ ಚರ್ಚೆಯು ಆಗಬೇಕೆಂಬ ಉದ್ದೇಶದಿಂದ ಮಾತ್ರ ಬರೆದಿದ್ದೇನೆ. ಯಾರಿಗಾ

*ಬಸವೇಶ್ವರನ ವಚನಗಳು ಪುಟ ೯೧, ಸಂ. ೯೦ †ಶಿವಾನುಭವ ಸಂ. ೨, ಪುಟ ೧೫.

ದರೂ ಬಸವೇಶ್ವರನ ಕಾಲದ ಸಂಬಂಧವಾಗಿ ಎಲ್ಲಾದರೂ ಉಲ್ಲೇಖಗಳು ಸಿಕ್ಕಿದ್ದರೆ ಅವುಗಳನ್ನು ಅವರು ಬರೆದು ನಮ್ಮ ಕಡೆಗೆ ಕಳಿಸಿಕೊಟ್ಟರೆ, ನಾವು ಅವರಿಗೆ ಅತ್ಯಂತ ಆಭಾರಿಯಾಗುವೆವು'' ಇದನ್ನು ನೋಡಿ ಯಾರಿಗೆತಾನೇ ಸಂತೋಷವಾಗದು? ತೀರ್ಮಾನವು ಹೇಗಾದರೂ ಬರಲಿ ಬರೆಯುವ ರೀತಿಯನ್ನು ಎಲ್ಲರೂ ಮೆಚ್ಚಬೇಕು. ವಿಚಾರಪರರಾದ ವೀರಶೈವರು ಹೀಗೆ ಇಲ್ಲದೆಹೋಗಿಲ್ಲ, ಇದ್ದೇ ಇದ್ದಾರೆ. ಈಚೆಗೆ ದೊರೆತ ಒಂದು ಶಿಲಾಲೇಖನದ ವಿಚಾರದಲ್ಲಿ ವೀರಪ್ಪ ಜನಬಸಪ್ಪ ಯಗಟಿಯವರು *'' ಈ ಶಿಲಾಲೇಖವು ನಂಬಲರ್ಹವಾಗದು. ಯಾಕೆಂದರೆ, ಬಿಜ್ಜಳನ ಕೊಲೆಯಾಯಿತೆಂಬ ಅಪಕೀರ್ತಿಯನ್ನು ಹೋಗಲಾಡಿಸುವುದಕ್ಕೆ ಇದೊಂದು ಕೃತ್ರಿಮ ಸೃಷ್ಟಿ ಏಕಾಗಿರಬಾರದು ............ ಆದ್ದರಿಂದ ಬಿಜ್ಜಳನು ೧೧೬೮ ರಲ್ಲಿಯೇ ಕೊಲೆ ಮಾಡಲ್ಪಟ್ಟನೆಂದು ಹೇಳುವ ಚರಿತ್ರಾಧಾರವನ್ನೇ ನಂಬುವುದು ಉಚಿತವಾಗಿದೆ'' ಎಂದು ಬರೆದಿದ್ದಾರೆ. ಇತಿಹಾಸ, ಸತ್ಯಶೋಧನೆ—ಎಂಬಿವುಗಳಲ್ಲಿ ಮತಾಭಿಮಾನದಿಂದ ಮನಸ್ಸನ್ನು ಸಂಕುಚಿಸಿಕೊಳ್ಳುವುದು ನ್ಯಾಯವಲ್ಲ—ಎಂಬುದು ಮ|| ರಾ|| ಯಗಟಿಯವರಿಗೆ ಗೊತ್ತು. § '' ಮೂವತ್ತೈದು ಲಕ್ಷ ವೀರಶೈವರ ತುದಿನಾಲಗೆಯ ಮೇಲೆ ಆ ಬಸವನಾಮಾಕ್ಷರಗಳು ಕುಣಿದಾಡುತ್ತಿರುವುದೇ ಸಾಕ್ಷಿಯಾಗಿರುವುದು'' ಎಂದು ಸಿದ್ಧಪ್ಪನವರು ಬೇಕಾದರೆ ಹೇಳಿಕೊಳ್ಳಲಿ. ಪವಿತ್ರವಾದ ಬಸವನಾಮಾಕ್ಷರಗಳಿಗೆ '' ಕುಣಿ'' ಎಂಬ ಅಶ್ಲೀಲ ಪದಸಂಯೋಗವುಂಟಾದುದು ಆ ಮತಾಭಿಮಾನದ ದುರ್ದೈವ.

ಬಸವೇಶ್ವರನ ಗುಣಗೌರವವನ್ನು ಪವಾಡಗಳ ಮೂಲಕ ಪ್ರಸಿದ್ಧಪಡಿಸಲು ಪ್ರಯತ್ನಪಟ್ಟರೆ ಅದರ ಪರಿಣಾಮವು ವಿಪರೀತವಾಗುವುದರಲ್ಲಿ ಸಂದೇಹವಿಲ್ಲ. ಲಿಪಿಯನ್ನು ಓದಿದುದರಿಂದ ಬಹು ಭಾಷಾಶಾಸ್ತ್ರಜ್ಞ, ಕಣ್ಣುಗಳನ್ನು ಚಿಕಿತ್ಸೆಮಾಡಿದರಿಂದ ಘನನೇತ್ರವೈದ್ಯ ಹೀಗೆಯೇ ಪದಾರ್ಥವಿಜ್ಞಾನಶಾಸ್ತ್ರಜ್ಞ ಪಶುಚಿಕಿತ್ಸಕ, ಈಜುಗಾರ, ವೃಕ್ಷದೋಹದ ಶಾಸ್ತ್ರಜ್ಞ, ಕೃಷಿಶಾಸ್ತ್ರಪಂಡಿತ, ಭೂಗರ್ಭಶಾಸ್ತ್ರಜ್ಞ, ಇತ್ಯಾದಿಯಾಗಿ ಪವಾಡಗಳ ಮೇಲಿಂದ ಬೇಕಾದವರು ಮಹತ್ವದ ಪಟ್ಟಿಯನ್ನು ಸಂಪೂರ್ಣಮಾಡಿಕೊಳ್ಳಲಿ. ಸಾಕ್ಷಾತ್ ನಂದೀಶ್ವರನೆಂಬುದನ್ನು ನಾವೆಲ್ಲರೂ ಬಲ್ಲೆವು. ಇದರಿಂದಲೇ ಆತನು ಸರ್ವಶಾಸ್ತ್ರಪಂಡಿತನೆಂದು ಹೇಳಿದ್ದರೆ ಒಂದು ವಾಕ್ಯದಲ್ಲಿ ಮುಗಿಯುತ್ತಿತ್ತು.

ನಮಗೆಲ್ಲರಿಗೂ ಬಸವೇಶ್ವರನ ವಿಚಾರದಲ್ಲಿ ಗೌರವವಿದೆ, ಭಕ್ತಿಯಿದೆ. ಬಸವೇಶ್ವರನ ಮಹತ್ವವನ್ನು ತಿಳಿಯಬೇಕೆಂಬಾಸೆಯು ಬಲವತ್ತರವಾಗಿಯೂ ಇದೆ.

*ಶಿವಾನುಭವ ೫ ನೆಯ ಸಂಚಿಕೆ ಪುಟ ೬೩. §ಶ್ರೀ ಬಸವೇಶ್ವರನ ಚರಿತ್ರೆ ಪುಟ ೧೨.

ಮೊದಲೇ ದೋಷಾರೋಪಣೆಗಳಿಂದ ದುರದೃಷ್ಟಶಾಲಿಯೆನಿಸಿರುವ ಬಸವೇಶ್ವರನನ್ನು ಈ ಚರ್ಚೆಗಳಲ್ಲಿ ಮನಬಂದಂತೆಲ್ಲ ಎಳೆದು ನಿಲ್ಲಿಸಿ ಅಗೌರವಪಡಿಸುವುದು ಸಾಧುವಲ್ಲ. ಆತನಲ್ಲಿ ನಮಗಿರುವ ಭಕ್ತಿಯೇ ಇದಕ್ಕೆ ಕಾರಣವಾಗಬಹುದು. ಮುಖ್ಯವಾಗಿ ಆಗಿನ ಕಾಲವಾದರೋ ಅಲ್ಲಕಲ್ಲೋಲ; ಇತಿಹಾಸದ ಸಹಾಯ ಕಡಿಮೆ; ಪುರಾಣಗಳಲ್ಲಿ ಪರಸ್ಪರ ವಿರೋಧ; ಅನಿಶ್ಚಿತಾರ್ಥಗಳು ಮಂದವಾಗಿ ಕವಿದುಕೊಂಡಿವೆ. ಇಂತಹ ಗಹನ ವಿಚಾರಗಳಲ್ಲಿ ನಾವು ಎಷ್ಟು ಎಚ್ಚರಿಕೆಯಿಂದಿದ್ದರೆ ಅಷ್ಟು ಒಳ್ಳೆಯದು. ನಮಗೆ ಬೇಡದಾಗ ಕೇವಲ ಆಧುನಿಕ, ಇವನ ಹೇಳಿಕೆಯು ನಂಬತಕ್ಕದ್ದಲ್ಲ, ಮತ ದ್ವೇಷ—ಕಾಕದೃಷ್ಟಿ—ಎನ್ನುವುದೂ ಬೇಕಾದಾಗ ಆ ಲೇಖಕನನ್ನೇ ಆಧಾರ ಕೊಡುವುದು ಹೊಗಳುವುದು—ಇಂತಹ ಅಸಾಂಗತ್ಯವನ್ನು ಹಾಡುವುದಕ್ಕಿಂತ ಬಸವೇಶ್ವರನ ಜೀವನಚರಿತ್ರೆಯನ್ನು ಆತನ ವಚನಗಳ ಆಧಾರದಿಂದಲೇ ಚಿತ್ರಿಸುವುದು ಒಳ್ಳೆಯದೆಂದು ನಮಗೆ ತೋರುತ್ತದೆ. * "ಅವನ ವಿಚಾರಗಳನ್ನು ಅರಿಯಲಿಕ್ಕೆ ಅವನ ವಚನಗಳೇ ಮಹತ್ವದ ಸಾಧನೆಗಳಾಗಿವೆ" ಎಂದು ಮ|| ರಾ|| ಹಳಕಟ್ಟಿಯವರು ಚೆನ್ನಾಗಿ ಅಭಿಪ್ರಾಯಪಟ್ಟಿರುತ್ತಾರೆ.

ಒಟ್ಟಿನಲ್ಲಿ ಸಿದ್ಧಪ್ಪನವರ "ಶ್ರೀ ಬಸವೇಶ್ವರನ ಚರಿತ್ರೆ"ಯಿಂದ ವೀರಶೈವ ಮಂಡಲಿಗೆ ಎಷ್ಟು ಉಪಕಾರವಾಗಬಹುದೋ ನಾವು ಹೇಳುವಹಾಗಿಲ್ಲ. ಅದರಿಂದ ಸಂಶಯಾಂಶಗಳು ಪರಿಹಾರವಾಗಿ ಇತಿಹಾಸಕ್ಕೆ ಎಷ್ಟರಮಟ್ಟಿಗೆ ಸಹಾಯವಾಗಬಹುದೋ ನಿಶ್ಚಯಿಸಲು ಸಾಧ್ಯವಿಲ್ಲ. ಬಸವೇಶ್ವರನ ಮಹತ್ವವು ನಮ್ಮಂತಹ ಪಾಮರರಿಗೆ ಅಲ್ಲಿ ಗೋಚರಿಸುವುದಿಲ್ಲ. ಕಡೆಗೆ ಪಾವಟೆ ಪರಾಭವ, ಬಸವಧ್ವಾಂತ ದಿವಾಕರಾದಿಗಳನ್ನು ಓದಿ ದುರ್ಮತಿಗಳಾದವರು ಈ ಚರಿತ್ರೆಯನ್ನು ಓದಿದಮೇಲೆ ಸುಮತಿಗಳಾಗುವ ಹಾಗೂ ಇಲ್ಲ. ಮೊದಲೇ ವೀರಶೈವಸಮಾಜದಲ್ಲಿರುವ ಭಿನ್ನ ಭಿನ್ನ ಪಂಗಡಗಳ ದ್ವೇಷಾಸೂಯೆಗಳು ಈ ಪುಸ್ತಕದಿಂದ ಹೆಚ್ಚದೇ ಇರುವಂತೆ ಭಗವಂತನು ಅನುಗ್ರಹಿಸಬೇಕು.

ಎಂ. ಆರ್. ಶ್ರೀ.

---

* ಶಿವಾನುಭವ ಸಂ. ೧ ಪುಟ 27.

**ತಾರಾಪ್ಯಾರಿ.**—ಲೇಖಕರು : ಮ|| ರಾ|| ನರಶೀಪುರದ ಶೇಷಗಿರಿರಾವ್ ; ಕ್ರೌನ್ ಪುಟಗಳು ii + ೨೫೩ ; ಮೈಸೂರು ಕ್ರೌನ್ ಎಲೆಕ್ಟ್ರಿಕ್ ಪ್ರೆಸ್ ; ೧೯೨೬ ; ಕ್ರಯ ೧-೪-೦.

ಸಾಹಿತ್ಯದ ಧ್ಯೇಯವು ಯಾವುದು : ನೀತಿಯನ್ನು ಬೋಧಿಸುವುದೆ, ಆನಂದವನ್ನು ಕೊಡುವುದೆ? ಉಪದೇಶ ಮಾಡುವುದಕ್ಕೆಂದೇ ಕಾವ್ಯವನ್ನಾಗಲಿ ಕಾದಂಬರಿಯನ್ನಾಗಲಿ ರಚಿಸಬಹುದೇ? ಈ ವಿಷಯವನ್ನು ಕುರಿತು ಅನೇಕ ಚರ್ಚೆಗಳು ಇದುವರೆಗೆ ನಡೆದುಹೋಗಿವೆ. ತಿಳಿದವರು ಯಾರೂ ಕಾವ್ಯದಲ್ಲಿ ನೀತಿಯ ಸೆಲೆಯೇ ಇರಕೂಡದು ಎಂದು ಹೇಳುವುದಿಲ್ಲ. ಹಾಗೆ ನೋಡಿದರೆ, ಉದಾತ್ತವಾದ ಭಾವಗಳನ್ನು ಒಳಕೊಳ್ಳದ ಕವನವಾಗಲಿ, ನಾಟಕವಾಗಲಿ ಕಾದಂಬರಿಯಾಗಲಿ ಉತ್ತಮವಾದ ಸಾಹಿತ್ಯವೆನ್ನಿಸಿಕೊಳ್ಳುವುದಿಲ್ಲವೆಂದೇ ಹೇಳಬೇಕು ; ಪೊಳ್ಳುಹರಟೆಗೆ ಯಾರೂ ಗೌರವ ಕೊಡುವುದಿಲ್ಲ. ಆದರೆ ಒಂದು ಅಂಶವನ್ನು ಮಾತ್ರ ಮರೆಯಕೂಡದು. ಸಾಹಿತ್ಯದ ಗುರಿಯು ಆನಂದವೇ ಹೊರತು ಬೇರೆಯಲ್ಲ. ಒಂದು ಗ್ರಂಥವು ಓದುವವರಿಗೆ ಹೊಸ ಸಂಗತಿಗಳನ್ನು ತಿಳಿಸಲಿ, ಧರ್ಮಮಾರ್ಗವನ್ನು ಬೋಧಿಸಲಿ, ಮಿಕ್ಕ ಯಾವ ಕಾರ್ಯವನ್ನಾದರೂ ಮಾಡಲಿ,—ಅವರಿಗೆ ಆನಂದವನ್ನು ಮಾತ್ರ ಕೊಡದೆ ಇದ್ದರೆ ಅದು ಸಾಹಿತ್ಯವಾಗುವುದಿಲ್ಲ. ಕಾವ್ಯದಲ್ಲಿ ಉಪದೇಶವು ಬರುವುದು ತಪ್ಪೆಂದು ನಾವು ಹೇಳುವುದಿಲ್ಲ ; ಬೇಕಾದಷ್ಟು ಬರಲಿ. ಅದು ಬಂದುದರಿಂದ ಗ್ರಂಥವು ಕೊಡುವ ಆಹ್ಲಾದಕ್ಕೆ ಮಾತ್ರ ಹಾನಿ ತಟ್ಟಕೂಡದು. ಎಂದರೆ, ರಸಿಕರು ಆನಂದದಿಂದ ಮೈಮರೆತಾಗ ಉಪದೇಶವು ತನ್ನ ಸುಳಿವು ಸಿಕ್ಕದಂತೆ ಅವರ ಹೃದಯವನ್ನು ಪ್ರವೇಶಿಸಬೇಕು ; ಅಷ್ಟೇ ಹೊರತು, ಆನಂದವಾಹಿನಿಯನ್ನು ಬತ್ತಿಸಿ ಅದರ ಸ್ಥಾನವನ್ನು ತಾನು ಆಕ್ರಮಿಸಕೂಡದು.

"ತಾರಾಪ್ಯಾರಿ" ಯನ್ನು ಓದಿದರೆ ಈ ವಿಧವಾದ ಆಲೋಚನೆಗಳು ತಲೆದೋರುತ್ತವೆ. ಮ|| ಶೇಷಗಿರಿರಾಯರ ಉದ್ದೇಶವು ಘನವಾದುದು. "ನಾವು ಅನುಮೋದಿಸಬಹುದಾದ ಪಾಶ್ಚಾತ್ಯರ ಸದ್ಗುಣಗಳ್ಯಾವವು ಮತ್ತು ನಮಗೆ ಅನುಗುಣವಲ್ಲದ ಅವರ ಇತರ ಗುಣಗಳ್ಯಾವುವೆಂಬುದನ್ನು ಸೂಕ್ಷ್ಮವಾಗಿ ತಿಳಿಸುವ ಪ್ರಯತ್ನವನ್ನು" (ಪು. ೨೫೨) ಅವರು ಇಲ್ಲಿ ಮಾಡಿದ್ದಾರೆ. ನೀತಿಯನ್ನು ಬೋಧಿಸುವುದಕ್ಕೆಂದೇ ಅವರು ಹೊರಟಿರುವುದು ಗ್ರಂಥಕ್ಕೆ ಕಾದಂಬರಿಯ ಸ್ವರೂಪವನ್ನು ಕೊಟ್ಟಿರುವುದು "ಶಿಕ್ಷಣವು ಔಷಧಿಯಂತೆ ಕಹಿಯಾಗದಿರಲಿ, ಸಕ್ಕರೆಯ ಗುಳಿಗೆಯಂತೆ ರುಚಿಕರವಾಗಲಿ" ಎಂಬ ಅಭಿಪ್ರಾಯದಿಂದ ಎಂದು ತೋರುತ್ತದೆ. ಗ್ರಂಥವೇನೋ ಹೆಸರಿಗೆ ಕಾದಂಬರಿಯಾಯಿತು ; ಆದರೆ ನೀತಿಯ ಭಾರವನ್ನು ತಡೆಯಲಾರದೆ, ಉಪದೇಶವನ್ನು ಅರಗಿಸಿಕೊಳ್ಳಲಾರದೆ, ಬಡಕಲಾಗಿ ಹೋಯಿತು. "ಕಾಂತಾ

ಸಂಮಿತತಯೋಪದೇಶಯುಜೇ'' ಎಂಬ ಕಾವ್ಯೋದ್ದೇಶವು ಇಲ್ಲಿ ಫಲಿಸದೆಹೋಯಿತು. ಹೀಗೆ ಕಾದಂಬರಿಗಳನ್ನು ಬರೆಯುವುದು ಇಬ್ಬರು ಧಣಿಗಳ ಸೇವೆ ಮಾಡಿದ ಹಾಗೆ. ನೀತಿಯ ಕಡೆಗೆ ಗಮನವು ಹೋದ ಹಾಗೆಲ್ಲ ಕಾದಂಬರಿಯ ಬಿಕ್ಕಟ್ಟೂ ಸ್ವಾರಸ್ಯವೂ ಕೆಟ್ಟುಹೋಗುತ್ತವೆ. ಕಥೆಯಮೇಲೆ ಗೀಳು ಹೋದರೆ ಉಪದೇಶಕ್ಕೆ ಮುನಿಸು ಬರುತ್ತದೆ.

ಗ್ರಂಥಕ್ಕೆ ಇಟ್ಟಿರುವ "ತಾರಾಪ್ಯಾರಿ'' ಎಂಬ ಹೆಸರು ವಾಚಕರಿಗೆ ಸ್ವಲ್ಪ ಭ್ರಾಂತಿಯನ್ನುಂಟುಮಾಡಬಹುದು. ತಾರೆಯೂ ಪ್ಯಾರಿ (ಪಾರ್ವತಿ)ಯೂ ಬೇರೆ ಬೇರೆ ವ್ಯಕ್ತಿಗಳು. ತಾರೆ ಗಂಗಾಶಂಕರನ ಪತ್ನಿ ; ಪ್ಯಾರಿ ಅವನ ತಮ್ಮನಾದ ಗೌರೀ ಶಂಕರನ ಹೆಂಡತಿ. ಪ್ಯಾರಿಯೂ ಅವಳ ಗಂಡನೂ ನವನಾಗರಕತೆಯ ಬಲೆಗೆ ಬಿದ್ದು ಕೆಟ್ಟುಹೋಗಿರುವರು. ತನ್ನ ವಿದ್ಯಾಭ್ಯಾಸಕ್ಕಾಗಿಯೇ ಹಣವನ್ನು ವೆಚ್ಚಮಾಡಿ ಅಣ್ಣನು ಬಡವನಾಗಿದ್ದರೂ ಅವನ ಮೇಲೆ ಈಗ ಗೌರೀಶಂಕರನಿಗೆ ಪ್ರೀತಿಯಿಲ್ಲ. "ತಾರಾದೇವಿಯ ಜಾತಕದಂತೆ ಅವಳಿಗೆ ಇಪ್ಪತ್ತೈದನೆಯ ವರ್ಷಕ್ಕೆ ಮರಣ. ಅದಕ್ಕೆ ಶಾಂತಿಯನ್ನು ಮಾಡಲು ಹಣವನ್ನು ಕೊಡು'' ಎಂದು ಗಂಗಾಶಂಕರನೇ ಬೇಡಿಕೊಂಡರೂ ಗೌರೀಶಂಕರನು ಅವನ ಮೌಢ್ಯಕ್ಕೆ ನಕ್ಕು ಧಿಕ್ಕರಿಸಿಬಿಡುವನು. ತನ್ನ ಗುರುವಾದ ರಮಾನಂದನು ಸಹಾಯಮಾಡುವೆನೆಂದು ಹೇಳಲು ಗಂಗಾಶಂಕರನು ಒಪ್ಪುವುದಿಲ್ಲ. ಈಚೆಗೆ ಜ್ಞಾನಾನಂದ ಎಂಬ ಹೆಸರನ್ನು ತಾಳಿ ರಾಮಾನಂದನ ಆಶ್ರಮದಲ್ಲಿದ್ದ ಜಾರ್ಸ್ ಎಂಬ ಮಹನೀಯನು ಉದಾರಬುದ್ಧಿಯಿಂದ ದ್ರವ್ಯ ಸಹಾಯ ಮಾಡಲು ಇಚ್ಛೆಪಟ್ಟು ತಾರಾದೇವಿಗೆ ಹಣವನ್ನು ಕೊಡುವಂತೆ ವಿಶಾಲ ನಗರದಲ್ಲಿರುವ ತನ್ನ ಏಜಂಟಿಗೆ ಕಾಗದ ಬರೆಯುವನು. ತಾರೆ ಅದನ್ನು ಮುಟ್ಟದಿದ್ದರೂ ದುಷ್ಟೆಯಾದ ಪ್ಯಾರಿಯು ಆ ಹಣವನ್ನು ತನ್ನ ಪ್ರಿಯನಾದ ಏಜಂಟಿನಿಂದ ಪಡೆದು ತಾರಾದೇವಿಯ ಮೇಲೆ ಸಲ್ಲದ ಅಪವಾದವನ್ನು ಹೊರಿಸುವಳು. ಇಷ್ಟರೊಳಗೆ ಪ್ಯಾರಿಯೂ ಅವಳ ಗಂಡನೂ ಕ್ರೈಸ್ತರಾಗಿರುವರು. ಗಂಗಾಶಂಕರನೂ ತಾರೆಯೂ ತಮ್ಮ ಎರಡುವರ್ಷದ ರಾಮೇಶನೆಂಬ ಮಗುವಿನೊಡನೆ ತಾರೆಯ ತಂದೆಯ ಊರಿಗೆ ಹೋಗುವರು. ಗರ್ಭಿಣಿಯಾದ ಪತ್ನಿಯನ್ನು ಅಲ್ಲಿ ಬಿಟ್ಟು ಗಂಗಾಶಂಕರನು ದೇಶದಲ್ಲೆಲ್ಲಾ ಅಲೆಯುವನು. ಜಾರ್ಸ್ ಸಾಹೇಬನೂ ರಮಾನಂದನೂ ಅವನಿಗೆ ಹೇಳದೆ ಶಾಂತಿಯನ್ನು ನೆರವೇರಿಸುವರು. ಇಷ್ಟರಲ್ಲಿ ತಾರೆ ಸತ್ತಳೆಂದು ಸುದ್ದಿಹುಟ್ಟುವುದು. ಇದನ್ನು ಹರಡಿದವಳು ನೀಚಳಾದ ಪ್ಯಾರಿಯೇ. ಗಂಗಾಶಂಕರನೂ ತಾರಾದೇವಿಯೂ ಬಹುಕಾಲದ ಬಳಿಕ ಒಟ್ಟುಗೂಡುವರು. ಅವರ ಮಗು

ರಾಮೇಶನು ಯಾರಿಗೂ ಗೊತ್ತಿಲ್ಲದಂತೆ ಜಾರ್ಸ್ ಸಾಹೇಬನ ಪೋಷಣೆಯಲ್ಲಿರುವನು. ಅವರ ಮಗಳಿಗೆ ಒಬ್ಬ ಕ್ರೈಸ್ತಗಂಡನನ್ನು ಗಂಟುಹಾಕಬೇಕೆಂದು ಪ್ಯಾರಿ ತಂತ್ರಮಾಡುವಳು. ಆದರೆ ಶ್ವೇತನಗರದಲ್ಲಿ ನಡೆದ ಕ್ರೈಸ್ತಮಹಾಸಭೆಯಲ್ಲಿ ಅವಳಿಗೆ ಅವಮಾನವಾಗುವುದಲ್ಲದೆ, ಗಂಡನಿಗೂ ತನಗೂ ಮನಸ್ತಾಪವು ಬರುವುದು. ಕೆಲವು ಕಾಲ ಕಳೆದ ಮೇಲೆ ಇದುವರೆಗೂ ಇಂಗ್ಲೆಂಡಿನಲ್ಲಿ ಸರಿಯಾದ ಆಚಾರದಲ್ಲಿದ್ದ ರಾಮೇಶನು ರಾಮಸೆ ಎಂಬ ಹೆಸರಿನಿಂದ ಜಾರ್ಸ್ ಸಾಹೇಬನ ಹೊಸ ಏಜಂಟಾಗಿ ವಿಶಾಲನಗರಕ್ಕೆ ಬರುವನು. ಪ್ಯಾರಿ ಅವನನ್ನು ಮೋಹಿಸುವಳು. ಆದರೆ ವಿವೇಕಶಾಲಿಯಾದ ಆತನ ಉಪದೇಶದಿಂದ ಇವಳ ಬುದ್ಧಿ ತಿರುಗುವುದು. ತನ್ನ ಮಗಳು ಸುಮಿತ್ರೆಯನ್ನು ಆತನಿಗೆ ಕೊಡಬೇಕೆಂದು ಈಗ ಪ್ರಯತ್ನಮಾಡುವಳು. ರಾಮಸೆಯು ತನ್ನ ಮಗನೆಂದೇ ಗೊತ್ತಿಲ್ಲದಿದ್ದರೂ ಗಂಗಾಶಂಕರನಿಗೆ ಸಂಶಯವುಂಟಾಗಿ ಅವನು ರಮಾನಂದನನ್ನು ವಿಚಾರಿಸಲು ರಹಸ್ಯವೆಲ್ಲಾ ಆಗ ಬಯಲಾಗಿ ರಾಮೇಶನು ತನ್ನ ತಂಗಿಯಾದ ಸುಮಿತ್ರೆಯನ್ನೇ ವರಿಸುವ ಘಟನೆ ತಪ್ಪುವುದು. ರಾಮಾನಂದನು ಒಂದು ಗುರುಕುಲವನ್ನು ಸ್ಥಾಪಿಸಿ ಸ್ವತಂತ್ರಜೀವನದ ಮಾರ್ಗವನ್ನು ಬೋಧಿಸುವನು.—ಇದೇ ತೊಡಕಾದ ಈ ಕಥೆಯ ಸಾರಾಂಶ.

ನಮ್ಮ ಸಮಾಜದಲ್ಲಿ ಬೆಳಗಾದರೆ ಚರ್ಚೆಗೆ ಬೀಳುವ ಹಲವು ಧರ್ಮಸಮಸ್ಯೆಗಳನ್ನು ಬಿಡಿಸಲು ಗ್ರಂಥಕರ್ತರು ಇಲ್ಲಿ ಪ್ರಯತ್ನಮಾಡಿದ್ದಾರೆ. ಸ್ತ್ರೀಸ್ವಾತಂತ್ರ್ಯ, ಮಾಂಸಾಹಾರ, ವಿಗ್ರಹಾರಾಧನೆ, ಮೊದಲಾದ ವಿಷಯಗಳ ಮೇಲೆ ದೊಡ್ಡದೊಡ್ಡ ಉಪನ್ಯಾಸಗಳೇ ಇವೆ. ಗ್ರಂಥದ ಕೊನೆಕೊನೆಗೆ ಉಪನ್ಯಾಸಗಳು ಹೆಚ್ಚಿಹೋಗಿವೆ.

ಒಂದು ಅಂಶದಲ್ಲಿ ಮಾತ್ರ ಗ್ರಂಥಕರ್ತರನ್ನು ಹೊಗಳಬೇಕು. ಕ್ರೈಸ್ತ ಸಮಾಜ, ಹಿಂದೂಸಮಾಜ, ನಾಸ್ತಿಕರು, ಧರ್ಮಾಂಧರು, ಸಂನ್ಯಾಸಿಗಳು, ಸಾಧುಗಳು, ಸತ್ಪುರುಷರು—ಎಲ್ಲಾ ಬಗೆಯವರನ್ನೂ ತಂದು ನಮ್ಮ ಮುಂದುಗಡೆ ಅವರು ನಿಲ್ಲಿಸಿದ್ದಾರೆ. ಹೀಗೆ ಧೈರ್ಯವಾಗಿ ಆಧುನಿಕ ಸಮಾಜದ ತೊಡಕನ್ನು ಚಿತ್ರಿಸಲು ಹೊರಟ ಕಾದಂಬರಿಗಳು ಕನ್ನಡದಲ್ಲಿ ಅಪೂರ್ವ. "ತುಚ್ಛವಾದ ಕಾರಣಗಳನ್ನೇ ಮುಂದಿಟ್ಟುಕೊಂಡು, ಅನಾದಿಯಿಂದಲೂ ನಮ್ಮ ದೇಶದಲ್ಲಿ ನೆಲೆಸಿರುವ ಆಚಾರ, ಆಹಾರ, ನಡತೆ, ಉಡುಪು ಮುಂತಾದವುಗಳನ್ನು ಬದಲಾಯಿಸಬಾರ"ದೆನ್ನುವುದೇ (ಪೀಠಿಕೆ) ಗ್ರಂಥಕರ್ತರ ಸಿದ್ಧಾಂತ. ಇದನ್ನು ಮನಸ್ಸಿಗೊಪ್ಪುವ ಹಾಗೆ ಉಪಪಾದಿಸಿರುವರೇ ಎನ್ನುವುದನ್ನು ಪ್ರತಿಯೊಬ್ಬ ಪಾಠಕನ ಸ್ವತಂತ್ರವಿಚಾರಕ್ಕೆ ಬಿಡುವುದು ಯುಕ್ತವಾಗಿದೆ.

ಒಂದು ಸಣ್ಣಮಾತು. ಬರವಣಿಗೆಯ ಭಾಷೆಯ ಸ್ವರೂಪವು ಇನ್ನೂ ನಿಶ್ಚಿತವಾಗಿಲ್ಲದ ಈ ಕಾಲದಲ್ಲಿ "ಈ ಶಬ್ದದ ರೂಪವು ತಪ್ಪು" ಎಂದು ಖಂಡನೆ ಮಾಡುವುದು ಸಾಹಸವೇ ಸರಿ. ಆದರೂ ಯಾವ ಕಟ್ಟಿಗೂ ಒಳಪಡದೆ, ಸಿಕ್ಕಿದ ರೂಪಗಳನ್ನು ಪ್ರಯೋಗಿಸುವುದು ಸರಿಯಲ್ಲವೆಂದು ತೋರುತ್ತದೆ. ಕೆಲವು ಶಬ್ದಗಳಂತೂ ಹೀಗೆಯೇ ಇರಬೇಕೆಂದು ಸಾಮಾನ್ಯವಾಗಿ ಎಲ್ಲರೂ ಒಪ್ಪುವರು. 'ಶೇವಕ' (ಪುಟ ೧೯), 'ಪುಸ್ತುಕ' (ಪೀಠಿಕೆ), 'ನಿಮಿತ್ಯ' (ಪುಟ ೨೮), ನನಿಗೆ, ನಿಮಿಗೆ (ಗ್ರಂಥದಲ್ಲೆಲ್ಲಾ),—ಇವೇ ಮೊದಲಾದ ರೂಪಗಳು ಅವ್ಯುತ್ಪನ್ನವೆಂದು ಹೇಳಬೇಕಾಗುತ್ತದೆ. 'ಭಾರತಭೂಮಿಗೆ' (ಪು. ೩೬), 'ಪ್ರೀತೀಗೆ', 'ಧಣೀಗೂ', (ಪು. ೩೯) —ಈ ರೀತಿಯಾಗಿ ಚತುರ್ಥೀವಿಭಕ್ತಿಯ ಪದಗಳು ದೀರ್ಘದೊಡನೆ ಬಲುಕಡೆಗಳಲ್ಲಿ ಬಂದಿರುವುದು ಮುದ್ರಣದ ತಪ್ಪಿನಿಂದಲೋ ವ್ಯಾಕರಣದ ಹೊಸನಿಯಮದಂತೆಯೋ ಸರಿಯಾಗಿ ಗೊತ್ತಾಗುವುದಿಲ್ಲ.

ತೀ. ನಂ. ಶ್ರೀ.

---

**ಕರ್ಣಾಟಕ ಚಂದ್ರಿಕೆ.**—ಪ್ರತಿ ಪೂರ್ಣಿಮೆಯೂ ಪ್ರಕಟವಾಗುವ ಕನ್ನಡ ಮಾಸಪತ್ರಿಕೆ. ಹನ್ನೆರಡನೆಯ ಸಂಪುಟ. ವಾರ್ಷಿಕಚಂದಾ ಅಂಚೆ ವೆಚ್ಚ ಸೇರಿ ರೂ. ೨—೦—೦. ಸಂಪಾದಕರು —ಆಸ್ಥಾನ ವಿದ್ವಾನ್ ವೇ|| ನಂ. ಶ್ರೀಕಂಠಶಾಸ್ತ್ರಿಗಳು, ಮೈಸೂರು.

ಈ ಸಂಪುಟದ ಪೀಠಿಕೆಯಲ್ಲಿ ಸಂಪಾದಕರು "ಚಂದ್ರಿಕೆಯು ಜನ್ಮವೆತ್ತಿ ಹದಿನೆಂಟು ವರ್ಷಗಳಾದುವು. ಆದರೆ ಹನ್ನೆರಡು ವರ್ಷಕಾಲ ಮಾತ್ರ ಸಂಪುಟಗಳ ರೂಪದಲ್ಲಿ ಭಾಷಾಸೇವೆಮಾಡುವ ಸುಯೋಗವು ಕೈಸೇರಿತು. ಮಿಕ್ಕ ಆರು ವರ್ಷಗಳು ವಿಫಲವೇ ಆದುವು......ಹನ್ನೆರಡನೆಯ ಸಂಪುಟದಲ್ಲಿ ಪ್ರಕಟವಾಗಬೇಕಾಗಿದ್ದ 'ವಿಶ್ವಾಮಿತ್ರ' ಎಂಬ ಕಥೆಯನ್ನೂ 'ಕರಾಟಪುರಾಣ' ಎಂಬ ನೀತಿಗರ್ಭಿತವಾದ ಎಂದು ಉಪನ್ಯಾಸವನ್ನೂ ಮಹಾವಿದ್ವಾನ್ ಬ್ರ|| ಶ್ರೀ|| ಮೈಸೂರು ಸೀತಾರಾಮ ಶಾಸ್ತ್ರಿಗಳವರ 'ಕರ್ಣಾಟ ವಿಕ್ರಮಾರ್ಕ ಚರಿತ್ರೆ' ಎಂಬ ಚಂಪೂ ಗ್ರಂಥವನ್ನೂ... ಶ್ರೀ|| ಡಿ. ಎಸ್. ಶಂಕರನಾರಾಯಣ ಶಾಸ್ತ್ರಿ, ಬಿ.ಎ. ಯವರ 'ಬಾಲಕುಮಾರಿ' ಎಂಬ ಬಂಗಾಳೀ ಕಾದಂಬರಿಯ ಭಾಷಾಂತರವನ್ನೂ ಸಮಗ್ರವಾಗಿ ಪ್ರಕಟಿಸಿ ಈ ಸಂಪುಟದೊಡನೆ ಸಮರ್ಪಿಸಲಾಗಿದೆ...ಮುಂದಣ ಸಂಪುಟವು—ಆಸ್ಥಾನದ ಕವಿತಾ ಬಹುಮಾನಸ್ಪರ್ಧೆಯಲ್ಲಿಯೂ ದೇವರಾಜ ಬಹದ್ದೂರ್ ಸ್ಮಾರಕನಿಧಿಯ ಸಾಹಿತ್ಯ ಶಾಖೆಯ ಪ್ರಾಜ್ಞಮಂಡಲಿಯಲ್ಲಿಯೂ ಉತ್ತಮವೆಂದಾದೃತವಾದ—ನಮ್ಮ ಮಹಾಪ್ರಭುಗಳವರ ಹಿರಿಯರ ಚರಿತ್ರೆಯಿಂದ ರಮ್ಯವಾದ 'ಶ್ರೀ ಕೃಷ್ಣರಾಜೇಂದ್ರ ವಂಶ

ಚರಿತಂ’ ಎಂಬ ನವೀನ ಚಂಪೂಗ್ರಂಥವನ್ನೂ...ವಿಹಾರಿಚರಣನೆಂಬ ಸ್ವಾಮಿಭಕ್ತನ ಸಾಹಸವನ್ನು ಚಿತ್ತರಿಸುವ ‘ಸರ್ವಸುಂದರಿ’ ಎಂಬ ರಂಗ ಚಿತ್ರವನ್ನೂ ನಾಟಕ ವಿಷಯಿಕಗಳಾದ ಹಲಕೆಲವು ಲೇಖನಗಳನ್ನೂ ಸ್ವಯಂಸೇವಕದಳವು ವಿಹಾರಕಾಲ ಗಳಲ್ಲಿ ಉಪಯೋಗಿಸಿಕೊಳ್ಳಲರ್ಹವಾದ ಗಾನಪ್ರದರ್ಶನಾದಿಗಳನ್ನೂ ಪ್ರಕಟಿಸು ವುದು” ಎಂದು ಬರೆದಿದ್ದಾರೆ. ಕರ್ಣಾಟಕ ಕಾವ್ಯಕಲಾನಿಧಿ ಮತ್ತು ಕಾವ್ಯಮಂಜ ರಿಗಳು ಪ್ರಾಚೀನ ಕನ್ನಡ ಕಾವ್ಯಗಳ ಪ್ರಕಾಶಕ್ಕೆ ಹೇಗೆ ಕಾರಣವಾದುವೋ ಹಾಗೇ ಕರ್ಣಾಟಕ ಗ್ರಂಥಮಾಲೆ ಮತ್ತು ಕರ್ಣಾಟಕ ಚಂದ್ರಿಕೆಗಳು ನವೀನ ಗ್ರಂಥಗಳ ಪ್ರಕಾಶಕ್ಕೆ ಕಾರಣವಾದುವು. ಇವುಗಳಲ್ಲಿ ಮೊದಲಿನ ಮೂರು ಒಣಗಿಹೋಗಿವೆ. ಚಂದ್ರಿಕೆಯು ಮಾತ್ರ ಸ್ವಲ್ಪ ಹಸುರನ್ನು ತೋರುತ್ತ ಹಣ್ಣು ತಿನ್ನುವವರು ಸಿಕ್ಕಿದರೆ ಫಲಬಿಟ್ಟೇನೆಂದು ಉತ್ಸಾಹದಿಂದ ಎದುರುನೋಡುತ್ತಿದೆ. ಗಿಡಮರಗಳಲ್ಲಿ ಇನ್ನೂ ಹಸಿ ಇರುವಾಗಲೇ ಅವಕ್ಕೆ ಜೀವನವನ್ನೆರೆದರೆ ಅವು ಇನ್ನೂ ನಾಲ್ಕು ಕಾಲ ಬದುಕಿ ಫಲಬಿಡುತ್ತಿರುತ್ತವೆ. ಒಣಗಿ ಹೋದಮೇಲೆ ಅಮೃತದಲ್ಲಿ ಅದ್ದಿದರೂ ಪುನಃ ಅವಕ್ಕೆ ಜೀವಬರದು. ಹೊಸ ಗಿಡಗಳನ್ನು ಹಾಕಿ ರೋಗರುಜಿನಾದಿಗಳು ಬರದಂತೆ ನೋಡಿ ಕೊಂಡು ಅವುಗಳನ್ನು ಆರೈಕೆಮಾಡುತ್ತ ಅವು ಫಲೋನ್ಮುಖವಾಗುವವರೆಗೆ ಪಾಳು ಗಂದಾಯವನ್ನು ತೆರುವುದಕ್ಕಿಂತ ಹಣ್ಣುಬಿಡುತ್ತಿರುವ ಮರವನ್ನು ಪೋಷಿಸಿ ಕೂಡಲೆ ಫಲ ಪಡೆಯುವುದು ಧರ್ಮ, ವಿವೇಕ. ಹಳೆಯ ಮರಗಳು ಬಿದ್ದುಹೋದರೂ ಹೋಗಲಿ ಎನ್ನುವುದಕ್ಕೆ ನಮ್ಮ ತೋಟದಲ್ಲಿ ಫಲೋನ್ಮುಖವಾದ ಗಿಡಗಳು ಹೆಚ್ಚಾಗಿಲ್ಲ. ಕನ್ನಡ ಭಾಷಾಸಾಹಿತ್ಯಗಳ ಅಭಿವೃದ್ಧಿಯಲ್ಲಿ ಆಸಕ್ತಿಯುಳ್ಳ ಮಹಾಜನರು ಇದನ್ನು ಮನಸ್ಸಿಗೆ ತಂದುಕೊಂಡು ಚಂದ್ರಿಕೆಗೆ ತಕ್ಕ ಪ್ರೋತ್ಸಾಹವನ್ನು ಕೊಡುವರೆಂದು ನಂಬಿದ್ದೇವೆ.

ಎ. ಆರ್. ಕೃ.

---

**ಹರಿಭಜನಕುಸುಮವಲ್ಲರಿ** (ದ್ವಿತೀಯ ಭಾಗ).—ಡೆಮ್ಮಿ ಪುಟಗಳು ೭೧. ಗ್ರಂಥ ಕರ್ತರು ಮ|| ಕೆ. ರಾಮಸ್ವಾಮಯ್ಯಂಗಾರ್, ಸಾಲಿಗ್ರಾಮ. ಬೆಲೆ ?

ಇದರಲ್ಲಿ ಹಿಂದಿನ ದಾಸರ ಕೀರ್ತನೆಗಳನ್ನು ಅನುಕರಿಸಿ “ಮಾಂಗಿರಿ ರಂಗ”ನ ಅಂಕಿತದಲ್ಲಿ ಬರೆದ ೧೧೮ “ಭಜನೆಯ ಪದ”ಗಳಿರುವುವು. “ಸರ್ವಕರ್ತನಾದ ಭಗವಂತನು ಒಬ್ಬನೇ ಆಗಿದ್ದು ವಿವಿಧನಾಮಗಳಿಂದ ಸ್ತುತಿಸಲ್ಪಡುತ್ತಲಿರುವನೆಂಬು ದನ್ನೂ, ಒಬ್ಬನಲ್ಲಿ ಹೆಚ್ಚು ಗುಣವನ್ನೂ ಮತ್ತೊಬ್ಬನಲ್ಲಿ ಸ್ವಲ್ಪ ಗುಣವನ್ನೂ ಕಲ್ಪಿಸ ಬಾರದೆಂಬುದನ್ನೂ ಮತ್ತು ಸಂಸಾರಸಾಗರದಲ್ಲಿ ಮುಳುಗಿ ಕೊರಗುವ ನಾವು ಭಿನ್ನಾ

ಭಿಪ್ರಾಯಗಳನ್ನು ಹೊಂದಿ ದ್ವೈವದ್ವೇಷಕ್ಕೆ ಅವಕಾಶವನ್ನು ಕೊಡಬಾರದೆಂದೂ ಹೇಳುವ ಭಕ್ತಶಿಖಾಮಣಿಗಳ ಅಭಿಪ್ರಾಯಾನುಗುಣವಾಗಿ ಈ ಪುಸ್ತಕವು ಬರೆಯಲ್ಪಟ್ಟಿರುವುದು '' ಎಂದೂ ಇದರ '' ಮೂರನೆಯ ಭಾಗದಲ್ಲಿ ಪೂರ್ವಾಚಾರ್ಯರುಗಳ ಅಭಿಪ್ರಾಯಗಳನ್ನೂ ಅವರು ಭಗವಂತನ ಅನುಗ್ರಹಕ್ಕೆ ಪಾತ್ರರಾದುದು ಹೇಗೆಂಬುದನ್ನೂ ವರ್ಣವೈಷಮ್ಯಗಳಿಗೆ ಅವಕಾಶವಿಲ್ಲದಿರುವಂತೆ ಅವರು ಬೋಧಿಸಿರುವ ರೀತಿಯನ್ನೂ ಕೀರ್ತನರೂಪದಲ್ಲಿ ಕೈಲಾದಮಟ್ಟಿಗೆ ಬರೆದು ಸಮರ್ಪಿಸುವೆನು '' ಎಂದೂ ಗ್ರಂಥಕರ್ತರು ತಿಳಿಸಿರುತ್ತಾರೆ.

---

**ಸರಳ ವಿಜ್ಞಾನಪಾಠಗಳು; ಪ್ರಕೃತಿ ವಿಮರ್ಶೆ** (ಸಸ್ಯವರ್ಗ).—ಡೆಮ್ಮಿ ಪುಟಗಳು ೪೬. ಬೆಲೆ ೨ ಆಣೆ. ಗ್ರಂಥಕರ್ತರು ಮ॥ ಗಳಾದ ಜಿ. ಬಿ. ಕೇಶವರಾವ್ ಮತ್ತು ಜಿ. ಭೀಮರಾವ್, ಬಿ.ಎ., ಚಿಕ್ಕಬಳ್ಳಾಪುರ.

ಈಗ ನಮ್ಮ ಹುಡುಗರು ಸ್ಕೂಲುಗಳಲ್ಲಿ '' ಪ್ರಕೃತಿ ವಿಮರ್ಶೆ ''ಯನ್ನೂ ಕಲಿಯುತ್ತಿರುವರಷ್ಟೆ. ಪ್ರೈಮರಿ ಮತ್ತು ಮಿಡಲ್‌ಸ್ಕೂಲುಗಳಲ್ಲಿ ಇದನ್ನು ಕಲಿಯುವ ಹುಡುಗರ ಉಪಯೋಗಕ್ಕಾಗಿ ಈ ಗ್ರಂಥವು ಬರೆಯಲ್ಪಟ್ಟಿದೆ. ಇದರಲ್ಲಿನ ಪಾಠಗಳು ಒಂದೊಂದು ವರ್ಷಕ್ಕೆ ಒಂದೊಂದರಂತೆ ನಾಲ್ಕುಭಾಗ ಮಾಡಲ್ಪಟ್ಟಿವೆ. ಇವು ಗಿಡಮರಗಳ ಸ್ವರೂಪ ವಿಭಾಗ ವಿಮರ್ಶೆ ಬೀಜ ಫಲಪುಷ್ಪಾದಿಗಳು ಈ ವಿಚಾರವನ್ನು ಹೇಳುತ್ತವೆ. ಕನ್ನಡಕ್ಕೆ ಈ ವಿಷಯವು ಹೊಸದು ; ಆದ್ದರಿಂದ ದೊಡ್ಡವರಿಗೂ ಸುಲಭವಾಗಿ ಅರ್ಥವಾಗದ ಇಂಥ ಕೆಲವು ವಾಕ್ಯಗಳು ಇದರಲ್ಲಿ ಬರುತ್ತವೆ:—

" ಹೆಣ್ಣು ಹೂವಿಗೆ ಬೇರೆ ಪುಷ್ಪದಿಂದ ಪುಷ್ಪಧೂಳಿಯು ಬರುವ ರೀತಿಯಲ್ಲಿಯೇ ಮಿಶ್ರಲಿಂಗ ಪುಷ್ಪಗಳಿಗೂ ಬರುವುದಾದರೂ, ಕೆಲವುವೇಳೆಯಲ್ಲಿ ಮಿಶ್ರಲಿಂಗಪುಷ್ಪಗಳಲ್ಲಿರುವ ಕೇಸರಗಳೂ, ಶಲಾಕಾಗ್ರವೂ ಸಂಬಂಧಿಸುವುವು............" (ಪುಟ ೨೧)

---

**ರಂಗಭೂಮಿ**.—(ಸರ್ವವಿಧವಾದ ಕಲೆ, ಸಾಹಿತ್ಯ ಮತ್ತು ವಿದ್ಯೆಗಳ ಸಂಬಂಧವಾದ ಸಚಿತ್ರ ಮಾಸಪತ್ರಿಕೆ) ಸಂಪುಟ ೨. ಸಂಚಿಕೆ ೩. ವಾರ್ಷಿಕಚಂದಾ ರೂ. ೩-೮-೦.

ಈ ಸಂಚಿಕೆಯಿಂದ ಬೆಂಗಳೂರಿನ '' ಅಮೆಚೂರ್ ನಾಟಕಸಂಘದವರು ರಂಗಭೂಮಿ ಮಾಸಪತ್ರಿಕೆಯ ಎಲ್ಲ ವಿಧವಾದ ಯಾಜಮಾನ್ಯವನ್ನೂ ವಹಿಸಿಕೊಂಡಿರುವರು. ಇನ್ನು ಮುಂದೆ ಇದರಲ್ಲಿ ಕೇವಲ ಕಲೆಗಳಿಗೆ ಸಂಬಂಧಿಸಿದ ಲೇಖನಗಳೊಂದಿಗೆ ಸಾಮಾನ್ಯರಿಗೂ ಕೂಡ ಅಭಿರುಚಿಯುಂಟಾಗುವಂತೆ ಮನೋರಂಜಕವಾದ ಬೋಧಪ್ರದವಾದ ಚಿಕ್ಕ ಚಿಕ್ಕ ಕಥೆಗಳೂ ಕಾದಂಬರಿಗಳೂ ಪಾಠಶಾಲೆಯ ಮಕ್ಕಳ

ನಾಟಕಗಳೂ ಪ್ರಕಟಗೊಳ್ಳುವುವು.'' ಮುಖ್ಯ ಸಂಪಾದಕರು ಹಳಬರಾದರೂ ಈಗಿನ ಸಂಪಾದಕಮಂಡಲಿಯು ಹೊಸದು.

ಅಮೆಚೂರ್ ನಾಟಕಮಂಡಲಿಯವರು ಈ ಕೆಲಸವನ್ನು ಕೈಕೊಂಡದ್ದು ಅನಿರೀಕ್ಷಿತವೇನೂ ಅಲ್ಲ. ಅವರು ಹಿಂದೆ "ನಾಟ್ಯಕಲಾ'' ಎಂಬ ಇಂಥ ಒಂದು ಪತ್ರಿಕೆಯನ್ನು ಹೊರಡಿಸಬೇಕೆಂದು ಉದ್ದೇಶಿಸಿದ್ದು ಕಾರಣಾಂತರದಿಂದ ಆ ಉದ್ದೇಶವು ಗರ್ಭಸ್ಥವಾಗಿಯೇ ಉಳಿದಿತ್ತು. ಅದು ಈಗ ನೆರವೇರಿತು. ಈ ಮಂಡಲಿಯವರು ಕಲಾಸಾಹಿತ್ಯಾಭಿಮಾನಿಗಳೆಂಬುದೂ ನಮ್ಮ ಕರ್ಣಾಟಕ ಸಂಘಕ್ಕೆ ಪ್ರತಿವರ್ಷವೂ ಮುವ್ವತ್ತು ರೂಪಾಯಿಗಳನ್ನು ಕೊಡುತ್ತ ಅದನ್ನು ಪ್ರೋತ್ಸಾಹಿಸುತ್ತಿರುವರೆಂಬುದೂ ತಿಳಿದ ವಿಷಯ. ಈ ಪತ್ರಿಕೆಯನ್ನು ಉತ್ತಮವಾಗಿ ನಡೆಸಲು ಇಂಥ ಸಂಸ್ಥೆಗಿಂತಲೂ ಹೆಚ್ಚು ಅಭಿಮಾನ ಅವಕಾಶ ಸಾಮರ್ಥ್ಯ ಅನುಕೂಲ್ಯಗಳು ಯಾರಿಗೆ ಇದ್ದಾವು ?

ಎ. ಆರ್. ಕೃ.

---

**ಅರುಣ, ಕಮಲ** (Lotus).—ಇವು ಹೊಸದಾಗಿ ಹೊರಟ ಎರಡು ಪತ್ರಿಕೆಗಳು. ಮೊದಲನೆಯದು ಶಿವಮೊಗ್ಗಾ ಹೈಸ್ಕೂಲಿನಿಂದಲೂ, ಎರಡನೆಯದು ಹಾಸನದ ಹೈಸ್ಕೂಲಿನಿಂದಲೂ ಪ್ರಕಟವಾಗುತ್ತಿದೆ. ಇದರಂತೆ ಬೆಂಗಳೂರು ತುಮಕೂರು ಮುಂತಾದ ಇನ್ನು ಕೆಲವು ಹೈಸ್ಕೂಲಿನವರೂ ತಮ್ಮ ತಮ್ಮ ಪತ್ರಿಕೆಗಳನ್ನು ಹೊರಡಿಸುತ್ತಿದ್ದಾರೆ. ಆ ಕೆಲಸವನ್ನು ಮಾಡದಿರುವ ಸ್ಕೂಲುಗಳವರು ಇನ್ನೂ ಮಾಡಿಲ್ಲವಲ್ಲಾ ಎಂದು ಕೊರಗುತ್ತಲೋ ಯತ್ನಿಸುತ್ತಲೋ ಇದ್ದಾರೆ. ಸಂಘಗಳೂ ಪತ್ರಿಕೆಗಳೂ ಈಗ ಓದುವ ಹುಡುಗರಿಗೆ ಟೋಪಿ ಹೇಗೋ ಹಾಗೆ, ಸ್ಕೂಲುಗಳಿಗೆ ಒಂದು ಕಿರೀಟವೆಂಬ ಭಾವವು ಉತ್ಪನ್ನವಾಗಿರುವಂತಿದೆ. ಪತ್ರಿಕಾಲೇಖನಚಾಲನಾದಿ ಕಾರ್ಯಗಳು ಹೈಸ್ಕೂಲಿನ ಹುಡುಗರಿಗೇ ಸಾಧ್ಯವಾಗಿರುವುದು ಮುಂದಿನ ಸಾಹಿತ್ಯ ಶುಭೋದಯಕ್ಕೆ ಸೂಚಕವಾಗಿದೆ. ಆದರೆ ಇಂಥ ಪತ್ರಿಕೆಗಳ ಉದ್ದೇಶವೇನು ? ಉದ್ದೇಶವನ್ನು ಖಚಿತವಾಗಿ ಇಟ್ಟುಕೊಳ್ಳದೆ ಅದು ಈಡೇರುವುದಕ್ಕೆ ತಕ್ಕ ಸಾಧನಗಳನ್ನು ನಿಷ್ಕೃಷ್ಟವಾಗಿ ಏರ್ಪಡಿಸಿಕೊಳ್ಳಡದೆ ಹೋದರೆ ಮದ್ದಿನಲ್ಲಿ ಏನುಮಾಡಬೇಕೆಂದು ತಿಳಿಯದೆ ಸುಮ್ಮನೆ ಅದನ್ನು ಹೊತ್ತಿಸಿ ಬುರುಬುರನೆ ಉರಿಸಿದಂತಾಗುವುದು. ಪ್ರತಿಯೊಂದು ಸ್ಕೂಲಿನವರೂ ತಮ್ಮ ತಮ್ಮ ಸ್ಕೂಲಿನ ಅಥವಾ ಸಂಘದ ವೃತ್ತಾಂತಗಳನ್ನು ತಿಳಿಸಬಹುದು ; ತಮ್ಮ ತಮ್ಮ ಹೆಸರಿನಲ್ಲಿ ಲೇಖನಗಳನ್ನು ಪ್ರಕಟಿಸಿ ಕೀರ್ತಿಗೌರವಗಳನ್ನು ಸಂಪಾದಿಸಬಹುದು. ತಮ್ಮ ನೆಂಟರಿಷ್ಟರಿಗೆ ಹೆಮ್ಮೆ ತರಬಹುದು.

ಬರೆವಣಿಗೆಯನ್ನು ಅಭ್ಯಾಸಮಾಡಬಹುದು, ಜನರಿಗೆ ಹೊಸ ಹೊಸ ಸಂಗತಿಗಳನ್ನು ಹೊಸ ಹೊಸ ರೀತಿಯಲ್ಲಿ ತಿಳಿಸಿ ಜ್ಞಾನಾಭಿವೃದ್ಧಿಮಾಡಿ ಆನಂದಗೊಳಿಸಬಹುದು. ಇವೇ ಮುಂತಾದವುಗಳು ಉದ್ದೇಶಗಳಷ್ಟೆ. ಆದರೆ ಕನ್ನಡದೇಶದ ಹೈಸ್ಕೂಲು ಗಳಿಂದ ಇಂಗ್ಲಿಷ್ ಪತ್ರಿಕೆ ಹೊರಟರೆ ಏನು ಪ್ರಯೋಜನ? ಇವುಗಳಲ್ಲಿ ಎಂಥ ಉತ್ತಮವಾದ ಇಂಗ್ಲಿಷ್ ಲೇಖನ ಬರಲಿ ಇಂಗ್ಲಿಷ್ ಓದಿರುವವರಿಗೆ ಅವು ಸಪ್ಪೆಸಾರು. ಬರೆದವರಿಗೆ ಅವರ ಬರಹ ಮುದ್ದಾಗಿರಬಹುದು; ಅದು ಬೇರೆ ವಿಚಾರ. ಆದರೆ ಅದೇ ವಿಷಯುಗಳನ್ನೇ ಕನ್ನಡದಲ್ಲಿ ಬರೆದರೆ ಅದನ್ನು ಓದುವ ವರಿಗೆ ಎಷ್ಟೋ ಲಾಭ—ಮೂರುಕಾಸು ಇದ್ದವನಿಗೆ ಒಂದು ಬಿಡಿಕಾಸು ಸಿಕ್ಕಿದ ಹಾಗೆ. ಇಂಗ್ಲಿಷಿನವರು ಐಶ್ವರ್ಯವಂತರು; ಅವರು ಪೌಂಡು ಷಿಲಿಂಗ್ ಪೆನ್ಸ್ ನವರು; ಇವರಿಗೆ ಬಿಡಿಗಾಸು ಮಾನ್ಯವಾಗುತ್ತದೆಯೇ? ಪ್ರಾಯಶಃ ಅವರಲ್ಲಿ ಭಿಕ್ಷುಕನೂ ಒಂದಾಣೆಗೆ ಕಡಮೆಯಾದ ಭಿಕ್ಷವನ್ನು ಮುಟ್ಟನು. ಲೇಖಕರಿಗೆ ಕೀರ್ತಿ ಗೌರವಗಳು ಹೇಗಿದ್ದರೂ ಬರುತ್ತವೆ.—ಮಾತೃಭಾಷೆಯಲ್ಲಿಯೇ ಹೆಚ್ಚು ಸಂಭವ. ಅದರಲ್ಲಿ ಬರೆಯುವುದಕ್ಕೆ ಬರುವುದಿಲ್ಲವೆಂಬುದು ನಾಚಿಕೆಕೇಡು! ಅನ್ಯಭಾಷೆಯಲ್ಲಿ ಬರೆದು ಜಹಗೀರಿ ಹಾಕಿಸಿಕೊಳ್ಳುವುದಕ್ಕಿಂತ ಸ್ವಭಾಷೆಯಲ್ಲಿ ಮುಲುಕಿ ತಪ್ಪು ಮಾಡುವುದು ಶ್ರೇಯಸ್ಸು. ಚೆನ್ನಾಗಿ ಬರೆಯಬಲ್ಲೆವೆಂದು ಧೈರ್ಯವಿರುವವರೆಲ್ಲರೂ ಇಂಗ್ಲಿಷಿಗೆ ಹೋಗಿಬಿಟ್ಟರೆ ಕನ್ನಡದ ಗತಿಯೇನು? ಇಂಗ್ಲೀಷಿಗೆ ಹೋಗಲಾರದವರು ಅಪ್ಪರ್‌ಸೆಕೆಂಡರಿಗೂ ವಿದ್ವತ್ಪರೀಕ್ಷೆಗೂ ಹೋಗುತ್ತಿಲ್ಲವೇ ಹಾಗೆತಾನೆ! ಕೆಲವು ಪತ್ರಿಕೆಗಳಲ್ಲಿ ಕನ್ನಡ ಲೇಖನಗಳೇನೋ ಇವೆ; ಆದರೆ ಅವು ಕೀಳುಜಾತಿ ಯವರನ್ನು ಬಾಗಿಲಿನಹತ್ತಿರ ಕೂರಿಸಿ ಅನ್ನಹಾಕುವಹಾಗೆ ಎಲ್ಲೋ ಸಂಕೋಚದಿಂದ ಬರುತ್ತಿವೆ. 'ಅರುಣ' ಎಂಬಂಥ ಕನ್ನಡ ಹೆಸರೂ ಲಕ್ಷ್ಮಿ ಸರಸ್ವತಿ ವಿಶ್ವೇಶ್ವರಯ್ಯ ನವರು ಇಂಥ ಚಿತ್ರಗಳೂ ಇರತಕ್ಕ ಶಿವಮೊಗ್ಗೆಯ ಪತ್ರಿಕೆಯು ಈ ವಿಚಾರದಲ್ಲಿ ಆದರ್ಶಸ್ವರೂಪವಾಗಿದೆ. ಇಂಗ್ಲಿಷಿನಲ್ಲಿ ಬರೆಯಲೇಬಾರದೆಂಬುದು ನಮ್ಮ ಅಭಿಪ್ರಾಯ ವಲ್ಲ. ನಮ್ಮ ದೇಶಭಾಷೆಯನ್ನರಿಯದವರಿಗೆ ವಿಷಯಗಳನ್ನು ತಿಳಿಸಲು ಅದನ್ನು ಬಿಟ್ಟರೆ ಈಗ ಬೇರೆ ಗತಿಯಿಲ್ಲ. ಇಂಗ್ಲಿಷಿನಿಂದ ಬಂದಿರುವ ತಪ್ಪು ತಿಳಿವಳಿಕೆ ಅಜ್ಞಾನ ಅವಿವೇಕಗಳನ್ನು ಅದರ ಮೂಲಕವೇ ನಿವಾರಣೆಮಾಡಬೇಕು. ಅಂಥ ಕಾರ್ಯಗಳು ಹೈಸ್ಕೂಲಿನ ಮಾಸಪತ್ರಿಕೆ ಅಥವಾ ತ್ರೈಮಾಸಪತ್ರಿಕೆಗಳಿಗೆ ಏನಿವೆ? ಕೆಲವು ಪತ್ರಿಕೆಗಳ ಚಾಲಕರೂ ಲೇಖಕರೂ ಅನ್ಯದೇಶೀಯರು, ಬೇರೆಮಾತಿನವರು. ಆದ್ದರಿಂದ ಸ್ವಲ್ಪಕಷ್ಟ; ಇಂಥ ಕಷ್ಟ ಇತರಕಡೆಗಳಲ್ಲಿಯೂ ಇದೆ. ಉದಾಹರಣೆ—ಮೈಸೂರಿನ

ವಿಶ್ವವಿದ್ಯಾಲಯದವರಿಗೆ ನಾನಾ ಶಾಸ್ತ್ರಗಳ ಮೇಲೆ ಕನ್ನಡದಲ್ಲಿ ಉಪನ್ಯಾಸಗಳನ್ನು ಕೊಡಿಸಬೇಕೆಂದು ಆಶೆ. ಆದರೆ ಆಯಾ ವಿಷಯಗಳನ್ನು ಅರಿತ ವಿಶಾರದರು ಕನ್ನಡ ವನ್ನು ಅರಿಯರು. ಅರಿತಿದ್ದರೂ ಅದರಲ್ಲಿ ಹೇಳಲಾರದಂಥವರು ಕೆಲವರು. ಅವರ ಕಷ್ಟ ಹೇಗಾದರೂ ಇರಲಿ, ಮೈಸೂರು ದೇಶೀಯರು, ಕನ್ನಡದಲ್ಲಿ ಆಸಕ್ತಿ ಇರುವ ವರು, ಅಗತ್ಯವಿಲ್ಲದ ಕಡೆಯೂ ಇಂಗ್ಲಿಷನ್ನು ನೆಟ್ಟು ಕಳೆಬೆಳೆಸಿದರೆ ನಮ್ಮ ಹೂವಿನ ಗಿಡ ದೊಡ್ಡದಾಗಿ ಅದರಲ್ಲಿ ಹೂ ಬಿಟ್ಟೀತು ಹೇಗೆ? ಇನ್ನೊಂದು ಮಾತು. ಈ ಪತ್ರಿಕೆಗಳೆಲ್ಲವೂ ಒಂದಾಗಿ ವಿದ್ಯಾಭ್ಯಾಸದ ಇಲಾಖೆಯ ಆಶ್ರಯದಲ್ಲಿ ಉತ್ತಮವಾಗಿ ನಡೆಯಬಾರದೇಕೆ?

ಅರುಣದಲ್ಲಿ ಶ್ರೀನಿವಾಸರ ಕೆಲವು ಸಣ್ಣ ಕಥೆಗಳ ಮೇಲೆ ಬರೆದಿರುವ ವಿಮರ್ಶೆಯೂ, 'ವಿರಧಾತ್ರಿಪನ್ನಾ' ಎಂಬ ಕಥೆಯೂ 'ತಾರಗೆ' ಎಂಬ ಪದ್ಯವೂ ಕಮಲ (Lotus) ದಲ್ಲಿ ಬಂದಿರುವ "ಗೋವಿನ ಕಥೆಯ ಅಂದಚಂದ" ಗಳೂ (ತುಮಕೂರಿನ "ಸ್ಕೂಲ್‌ಫೋಕ್" ನಲ್ಲಿ ಬಂದಿರುವ "ಇಂಗ್ಲಿಷ್ ಗೀತೆಗಳ" ವಿಮರ್ಶೆಯೂ) ಚೆನ್ನಾಗಿವೆ. ಪನ್ನಾ ಕಥೆಯ ಕೊನೆಯ ಭಾಗವನ್ನು ಓದಿದರೆ ಸಂಕಟ ಹತ್ತಿ ಹೊಟ್ಟೆ ಉರಿದುಹೋಗುತ್ತದೆ. ಇದಕ್ಕೆ ಮಗುವಿನ ಮರಣಯಾತನೆ ಯನ್ನು ಕೇಳಿ ಜಜ್ಜಿಹೋಗಿರುವ ನಿರ್ಭಾಗ್ಯಹೃದಯವೇ ಕಾರಣವೋ, ಗ್ರಂಥಕರ್ತರ ಕೌಶಲ್ಯವೇ ಕಾರಣವೋ ತಿಳಿಯದು. ಲಲಿತ ಕಲೆಗೆ ಈ ವಸ್ತುವೂ ಪ್ರತಿಪಾದನವೂ ಅತಿ ಘೋರವೆನ್ನಿಸುತ್ತದೆ.

ಎ. ಆರ್. ಕೃ

---

**ಉಪನಿಷತ್-ಪ್ರಕಾಶವು** ಮ|| ರಂಗನಾಥ ರಾಮಚಂದ್ರ ದಿವಾಕರ ಇವರಿಂದ.

**ಈಶಾವಾಸ್ಯೋಪನಿಷತ್** ಮ|| ವಾಯ್. ಜಿ. ಕುಲಕರ್ಣಿ ಇವರಿಂದ.

ವೇದಾಂತಶಾಸ್ತ್ರದ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ಪ್ರಸ್ಥಾನತ್ರಯ ವೆಂದು ಸಂಪ್ರದಾಯಾನುಸಾರವಾಗಿ ವ್ಯವಹರಿಸುವ ಉಪನಿಷತ್ಪ್ರಸ್ಥಾನ, ಗೀತಾ ಪ್ರಸ್ಥಾನ ಮತ್ತು ಸೂತ್ರಪ್ರಸ್ಥಾನಗಳಲ್ಲಿ ಗೀತಾಪ್ರಸ್ಥಾನವು ಕನ್ನಡಿಗರಿಗೆ ಸ್ವಲ್ಪ ಮಟ್ಟಿಗೆ ಪರಿಚಿತವೇ ಆಗಿದೆ. ಯಶಃಕಾಯರಾದ ಲೋಕಮಾನ್ಯ ಶ್ರೀ ಬಾಲ ಗಂಗಾಧರ ತಿಲಕರವರ "ಗೀತಾರ್ಥರಹಸ್ಯ" ವೆಂಬ ಉದ್ಗ್ರಂಥವೂ ಕನ್ನಡದ ರೂಪವನ್ನು ಹೊಂದಿ ಕೆಲವು ವರ್ಷಗಳಾಗಿವೆ.

ಆದರೆ ವೇದಾಂತಶಾಸ್ತ್ರದ ಪರಮಮೂಲವು ಉಪನಿಷತ್ತುಗಳು. ಉಪನಿಷ ತ್ತುಗಳು ಗೋವುಗಳೆಂದೂ ಶ್ರೀ ಭಗವದ್ಗೀತೆಯು ಅವು ಕರೆದ ಹಾಲೆಂದೂ ಗೀತಾ ಧ್ಯಾನಶ್ಲೋಕದಲ್ಲಿ ಒಂದು ಮನೋಹರವಾದ ರೂಪಕವಿದೆ. ಕರ್ಮಕಾಂಡ ಜ್ಞಾನ

ಕಾಂಡವೆಂದು ವಿಭಕ್ತವಾಗಿರುವ ವೇದರಾಶಿಯಲ್ಲಿ ಉಪನಿಷತ್ತುಗಳು ಸಾರವತ್ತಮವಾದ ಭಾಗ. ತದೇಕಚಿತ್ತರಾಗಿ ತತ್ತ್ವವಿಚಾರಮಾಡಿ ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮವಸ್ತುವನ್ನು ಸಾಕ್ಷಾತ್ಕಾರ ಮಾಡಿಕೊಂಡ ಮಹರ್ಷಿಗಳ ಅನುಭವವು ಇವುಗಳಲ್ಲಿದೆ. ಇವುಗಳನ್ನು ಕರ್ಣಾಟಕ ವಾಙ್ಮಯಕ್ಕೆ ಪರಿಚಯ ಮಾಡಿಸಲು ಮೇಲೆ ಹೇಳಿದ ಗ್ರಂಥಕರ್ತರು ಪ್ರವೃತ್ತರಾಗಿರುವರು. ಇವರ ಪ್ರಯತ್ನವು ಶ್ಲಾಘ್ಯವಾಗಿದೆ.

ಶ್ರೀ ದಿವಾಕರರ ಗ್ರಂಥವು ಈಶ, ಕೇನ, ಕಠ, ಪ್ರಶ್ನ, ಮಾಂಡೂಕ್ಯಗಳೆಂಬ ಐದು ಉಪನಿಷತ್ತುಗಳನ್ನು ಒಳಕೊಂಡಿದೆ. ಪ್ರಥಮತಃ ಆಯಾ ಉಪನಿಷತ್ತಿನ ಸಾರಾಂಶ, ಆಮೇಲೆ ಮಂತ್ರಗಳ ಕನ್ನಡ ಅನುವಾದ, ಕಡೆಯಲ್ಲಿ ಆಯಾ ಉಪನಿಷತ್ತಿನ ಮೇಲೆ ಸ್ವವಿಮರ್ಶರೂಪವಾದ "ನಾಲ್ಕುನುಡಿಗಳು"—ಇದು ಇವರ ಉಪಪಾದನ ಕ್ರಮ. ಆದರೆ ಮಂತ್ರಗಳ ಕನ್ನಡ ಅನುವಾದಕ್ಕೆ ಬದಲಾಗಿ ಸುಪ್ರಸಿದ್ಧ ಮತತ್ರಯಾಚಾರ್ಯರುಗಳ ಭಾಷ್ಯಗಳಲ್ಲಿ ಯಾವುದಾದರೂ ಒಂದನ್ನು ಅನುವಾದ ಮಾಡುವುದು ಮೇಲು. ಗುರುಪರಂಪರಾ ಪ್ರಾಪ್ತವಾದ ಯಾವುಗಾದರೂ ಒಂದು ಅರ್ಥವನ್ನು ಬರೆದು ಆಮೇಲೆ ಸ್ವವಿಮರ್ಶೆಯಲ್ಲಿ ಅದರ ಪ್ರಾಬಲ್ಯದೌರ್ಬಲ್ಯಗಳನ್ನು ವಿಚಾರಮಾಡುವುದು ವಾಚಕರಿಗೆ ಹೆಚ್ಚು ಪ್ರಯೋಜನವನ್ನುಂಟುಮಾಡೀತು.

"ಹೆಜ್ಜಿಜ್ಜಿ", "ಸಂತುಷ್ಟಪಡಿಸಿ", "ಭೋಕ್ತೃನಾದನು", "ಜಾಗ್ರತ್", "ಪ್ರಥಃಕರಿಸಿದ", "ಅಂಧಃಕಾರ", "ಯಚ್ಚಾವಚ್ಚ" ಇತ್ಯಾದಿ ಅಸಾಧುಪ್ರಯೋಗಗಳನ್ನು ಮಾರ್ಪಡಿಸುವುದು ಆವಶ್ಯಕ.

ಶ್ರೀ ಕುಲಕರ್ಣಿಯವರು ಪೀಠಿಕಾಪ್ರಕರಣದಲ್ಲಿ ಉಪನಿಷಚ್ಛಬ್ದಾರ್ಥವಿಚಾರ ಮಾಡಿ ಅವುಗಳ ಶಾಖಾವ್ಯವಸ್ಥೆಯನ್ನು ತೋರಿಸಿರುವರು. ಮಂತ್ರಗಳನ್ನು ಸ್ವರ ಸಹಿತವಾಗಿ ಮುದ್ರಿಸಿರುವುದಲ್ಲದೆ ಪ್ರತಿಮಂತ್ರದ ಋಷಿದೇವತಾಛಂದಸ್ಸುಗಳನ್ನೂ ಕೊಟ್ಟಿರುವರು. ಆಮೇಲೆ ಪ್ರತಿಯೊಂದು ಮಂತ್ರದ ಮೇಲಿನ ಶ್ರೀ ಶಾಂಕರ ಭಾಷ್ಯದ ಪದಶಃ ಅನುವಾದವನ್ನು ಕೊಟ್ಟು ಕಡೆಯಲ್ಲಿ ಉವಟಾರ್ಯರು ಅನಂತಾಚಾರ್ಯರು ಮುಂತಾದ ಇತರ ವ್ಯಾಖ್ಯಾತೃಗಳು ಅಲ್ಲಲ್ಲಿ ಪಡುವ ಭಿನ್ನಾಭಿಪ್ರಾಯಗಳನ್ನು ಸೂಚಿಸಿರುವರು. ಆದರೂ ಉಪನಿಷತ್ತಿನ ಸಾರಾಂಶವನ್ನೂ, ಆಧುನಿಕಸಂಪ್ರದಾಯಾನುಗುಣವಾಗಿ ಸ್ವವಿಮರ್ಶರೂಪವಾದ ಸಂಗ್ರಹವಾದ ಪ್ರಬಂಧವನ್ನೂ ಸೇರಿಸಿದರೆ ಪಾಠಕರಿಗೆ ಹೆಚ್ಚು ಅನುಕೂಲಪಡಿಸಿದಂತಾಗುತ್ತದೆ.

ಎಮ್. ಎಲ್. ಎ.

---

# ವ ಸ್ತು ಕೋ ಶ

ಈ ಸಂಚಿಕೆಯು ಅಕ್ಷಯ ಸಂವತ್ಸರದ ಕಾಮನಹಬ್ಬದ ದಿನವೇ ಬರಬೇಕಾಗಿತ್ತು. ಈ ವರ್ಷಕ್ಕೆ ಇದೇ ಕಡೆಯ ಸಂಚಿಕೆಯಾದ್ದರಿಂದ ಈ ಸಂಪುಟವೂ ಅದರೊಡನೆಯೇ ಮುಗಿಯಬೇಕಾಗಿತ್ತು. ಆದರೆ ಅಕ್ಷಯ ಸಂವತ್ಸರದಲ್ಲಿ ಯಾವುದನ್ನೂ ಮುಗಿಸಬಾರದೆಂದು ಕೆಲವು ಪಂಚಾಂಗ ಕರ್ತರು ಅಕ್ಷಯ ಸಂವತ್ಸರದ ಪಂಚಾಂಗದ ಜೊತೆಗೆ ಪ್ರಭವ ಸಂವತ್ಸರದ ಪಂಚಾಂಗವನ್ನೂ ಪ್ರಕಟಿಸಿದ್ದಾರೆ. ನಾವೂ ಹಾಗೆಯೇ ನಮ್ಮ ಪಂಚಾಂಗವನ್ನೂ ಅಕ್ಷಯದಿಂದ ಮುಂದಕ್ಕೆ ಎಳೆದುತಂದು ಪ್ರಭವದಲ್ಲಿ ಸೇರಿಸಿದ್ದೇವೆ. ಕಾಮನಹಬ್ಬದಲ್ಲಿ ಮುಗಿಯುವುದು ನಿಜವಾದರೂ ಪ್ರಭವದಲ್ಲಿ ತಲೆದೋರುವುದು ಪ್ರಿಯವಲ್ಲವೇ? ಪ್ರಭವವು ಹೊಸವರ್ಷ; ಹೊಸ ಯುಗದ ಹೊಸ ವರ್ಷ. ಇದು ಎಂದಿಗೆ ಬಂದೀತು, ಲೋಕಕ್ಕೆ ತಂಪನ್ನು ತಂದೀತು, ಎಂದು ಈಗ ಹಲವು ವರ್ಷಗಳಿಂದ ಎದುರುನೋಡುತ್ತಿದ್ದೆವಷ್ಟೆ. ಇಗೋ ಅದು ಈಗ ಬಂದಿದೆ. ಈ ಪ್ರಭವವು ಎಲ್ಲರಿಗೂ ವಿಭವದಾಯಕವಾಗಲಿ!

**ಅಕ್ಷಯ—ಪ್ರಭವ ವಿಭವ.**

---

ಈ ವರ್ಷ ಸಂಘದಲ್ಲಿ ಒಟ್ಟು ಏಳು ಉಪನ್ಯಾಸಗಳು ನಡೆದುವು. ಇವುಗಳಲ್ಲಿ ಎರಡು ಇಂಗ್ಲಿಷಿನಲ್ಲಿಯೂ ಐದು ಕನ್ನಡದಲ್ಲಿಯೂ ಆದುವು. ಆ ಉಪನ್ಯಾಸಗಳ ವಿಷಯಗಳೂ ಉಪನ್ಯಾಸಕರ ಹೆಸರುಗಳೂ ಕೆಳಗೆ ಸೂಚಿತವಾಗಿವೆ:—

**ಸಂಘದಲ್ಲಿ ನಡೆದ ಕೆಲಸಗಳು.**

## ಇಂಗ್ಲಿಷ್ ಉಪನ್ಯಾಸಗಳು.

೧ ತ್ಯಾಗರಾಜರವರ ಚರಿತ್ರೆ.—

ಮ|| ರಾ|| ಎಂ. ಎಸ್. ರಾಮಸ್ವಾಮಿಶಾಸ್ತ್ರಿ, ಬಿ.ಎ., ಬಿ.ಎಲ್., ಎಲ್.ಟಿ.

೨ ಕಾರ್ಡಿನಲ್ ನ್ಯೂಮನ್ ಮತ್ತು ಆಕ್ಸ್‌ಫರ್ಡ್ ಪ್ರಗತಿ.—

ರೆವರೆಂಡ್ ಫಾದರ್ ಬ್ರೌನ್‌ರವರು.

## ಕನ್ನಡ ಉಪನ್ಯಾಸಗಳು.

೧ ಕರ್ಣಾಟಕ ಕವಿತೆಗಳೂ, ಹೊಸ ಛಂದಸ್ಸೂ.—

ಮ|| ಎಂ. ವೆಂಕಟೇಶಯ್ಯಂಗಾರ್, ಎಂ.ಎ.

೨ ಭಾಸನ ಪ್ರತಿಮಾನಾಟಕವೂ ಪಾಶ್ಚಾತ್ಯ ವಿಮರ್ಶಕರೂ.—

ಮ|| ಸಿ. ಕೆ. ವೆಂಕಟರಾಮಯ್ಯ, ಎಂ.ಎ.,ಎಲ್.ಎಲ್.ಬಿ.

೩ ರವೀಂದ್ರನಾಥಠಾಕೂರರವರ ಕವಿತೆಗಳು.—

ಮ|| ಜಿ. ವೀರರಾಘವಾಚಾರ್ಯ ಎಂ. ಎ.

೪ ಗದಾಯುದ್ಧದ ದುರ್ಯೋಧನ.—

ಮ|| ಕೆರೋಡಿ ಕೃಷ್ಣಮೂರ್ತಿ.

೫ ಕನ್ನಡಸಾಹಿತ್ಯದಲ್ಲಿ ಪ್ರಕೃತಿ ವರ್ಣನೆ.—

ಮ|| ಡಿ. ಎಲ್. ನರಸಿಂಹಾಚಾರ್ಯ.

ಮ|| ವೀರರಾಘವಾಚಾರ್ಯರು ಉಪನ್ಯಾಸಕೊಟ್ಟಾಗಲೂ, ಮ|| ಡಿ. ಎಲ್. ನರಸಿಂಹಾಚಾರ್ಯರು ಲೇಖನವನ್ನು ಓದಿದಾಗಲೂ ಮ|| ಎಂ. ವೆಂಕಟೇಶಯ್ಯಂಗಾರ್ಯರೂ, ಮ|| ಕೃಷ್ಣಮೂರ್ತಿಯವರು ಲೇಖನವನ್ನು ಓದಿದಾಗ ಮ|| ಟಿ. ಎಸ್. ವೆಂಕಣ್ಣಯ್ಯ ಎಂ. ಎ. ಯವರೂ ಅಗ್ರಾಸನವನ್ನು ವಹಿಸಿದ್ದರು. ಈ ಉಪನ್ಯಾಸಕರಿಗೂ ಉಪನ್ಯಾಸಕಾಲದಲ್ಲಿ ಅಗ್ರಾಸನವನ್ನು ವಹಿಸಿದ್ದ ದೊಡ್ಡ ಮನುಷ್ಯರಿಗೂ ಸಂಘವು ಕೃತಜ್ಞವಾಗಿದೆ.

ಈ ವರ್ಷ ಚರ್ಚಾಸಭೆಗಳು ಹೆಚ್ಚಾಗಿ ನಡೆಯಲಿಲ್ಲ. "ಅಖಿಲಕರ್ಣಾಟಕ ವಿಶ್ವವಿದ್ಯಾಲಯಕ್ಕೆ ಕೇಂದ್ರಸ್ಥಾನವಾಗಲು ಮೈಸೂರು ನಗರವೇ ತಕ್ಕದ್ದಾಗಿರುವುದು." ಎಂಬ ವಿಷಯದಮೇಲೆ ಕನ್ನಡದಲ್ಲಿ ಒಂದು ಚರ್ಚೆಮಾತ್ರ ನಡೆಯಿತು. "ವಿಶ್ವವಿದ್ಯಾಲಯದ ಕಲಾಶಾಲೆಗಳಲ್ಲಿ ಕೈಗಾರಿಕೆಗಳನ್ನು ಬೋಧಿಸುವುದರಿಂದಲೆ ವಿದ್ಯಾವಂತರ ನಿರುದ್ಯೋಗ ಪ್ರಶ್ನೆಯು ನಿರ್ಣಯವಾಗುವುದು." "ಭರತಖಂಡದ ಆರ್ಥಿಕ ಸಂಕಷ್ಟವು ವಿದ್ಯಾವಂತರು ಹಳ್ಳಿಗಳನ್ನು ಸೇರುವುದರಿಂದಲೆ ತಿಳಿಯುತ್ತದೆ." ಎಂಬ ಎರಡು ವಿಷಯಗಳನ್ನು ಚರ್ಚಿಸುವುದಕ್ಕೆ ಇದುವರೆಗೂ ಸಮಯ ದೊರೆಯಲಿಲ್ಲ.

ವಿಶ್ವವಿದ್ಯಾಲಯದ ಉಚ್ಚಶಿಕ್ಷಣವನ್ನು ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ಕನ್ನಡಭಾಷೆಯಲ್ಲೂ, ಸಾಹಿತ್ಯದಲ್ಲೂ, ಆಸಕ್ತಿಯನ್ನು ಅಭಿವೃದ್ಧಿಗೊಳಿಸಲು ಸಂಘವು ಪ್ರತಿ ವರ್ಷವೂ ಕೆಲವು ಸ್ಪರ್ಧೆಗಳನ್ನು ಏರ್ಪಡಿಸುತ್ತಿದೆ. ಈ ವರ್ಷವೂ ಕೆಲವನ್ನು ಏರ್ಪಡಿಸಿತ್ತು. ಅವುಗಳ ವಿವರವನ್ನು ಕೆಳಗೆ ಕೊಟ್ಟಿದೆ.—

೧ ಭಾರತವಾಚನಸ್ಪರ್ಧೆ.—

೧ ನೆಯ ವರ್ಷದ ಬಿ.ಎ. ವಿದ್ಯಾರ್ಥಿಗಳಿಗೆ ಮಾತ್ರ. ಸ್ಪರ್ಧೆಗೆ ಬಂದವರ ಸಂಖ್ಯೆ ೨೦. ಪರೀಕ್ಷಕರು ಮ|| ಗಳಾದ ಶ್ರೀನಿವಾಸರಾವ್, ಬಿ.ಎಸ್‌ಸಿ. ಬಿ. ನಾಗೇಶರಾವ್, ಎಂ.ಎ.

೨ ಇಂಗ್ಲಿಷ್‌ಭಾಷಣ ಸ್ಪರ್ಧೆ.—

ಸ್ಪರ್ಧೆಗೆ ಬಂದವರ ಸಂಖ್ಯೆ ೨೧. ಪರೀಕ್ಷಕರು.—ಮ|| ಗಳಾದ ಎಂ. ಜಿ. ಶ್ರೀನಿವಾಸರಾವ್, ಎಂ.ಎ., ಎ.ಎಂ. ಬಿ. ವೆಂಕಟೇಶಾಚಾರ್, ಎಂ.ಎ. ಬಿ. ನಾಗೇಶರಾವ್, ಎಂ.ಎ.

೩ ಕನ್ನಡಭಾಷಣ ಸ್ಪರ್ಧೆ.—

ಸ್ಪರ್ಧೆಗೆ ಬಂದವರ ಸಂಖ್ಯೆ ೧೫. ಪರೀಕ್ಷಕರು.—ಮ|| ಗಳಾದ ಅನಂತ ರಾಮಯ್ಯ, ಎಂ.ಎ. ಎ. ಎನ್. ನರಸಿಂಹಯ್ಯ, ಬಿ.ಎ., ಎಲ್.ಟಿ. ಪಿ. ಶ್ರೀನಿವಾಸರಾವ್, ಬಿ.ಎಸ್‌ಸಿ.

೪ ಕಾವ್ಯವಾಚನ ಸ್ಪರ್ಧೆ.—

ಬಂದವರ ಸಂಖ್ಯೆ ೨೧. ಪರೀಕ್ಷಕರು.—ಮ|| ಗಳಾದ ಎಂ. ವೆಂಕಟೇಶ ಯ್ಯಂಗಾರ್, ಎಂ.ಎ. ಸಿ. ಕೆ. ವೆಂಕಟರಾಮಯ್ಯ, ಎಂ.ಎ.,ಎಲ್‌ಎಲ್.ಬಿ. ಸಿ. ಶ್ರೀಕಂಠಯ್ಯ, ಬಿ.ಎ.

೫ ಕವಿತಾಸ್ಪರ್ಧೆ.—

ಬಂದವರ ಸಂಖ್ಯೆ ೧೩. ಪರೀಕ್ಷಕರು.—ಮ|| ಗಳಾದ ಬಿ. ಎಂ. ಶ್ರೀಕಂ ಠಯ್ಯ, ಎಂ.ಎ., ಬಿ.ಎಲ್. ಎ. ಆರ್. ಕೃಷ್ಣಶಾಸ್ತ್ರಿ, ಎಂ.ಎ. ವಿ. ಸೀತಾ ರಾಮಯ್ಯ, ಎಂ.ಎ.

೬ ಸಣ್ಣಕಥೆಗಳ ಸ್ಪರ್ಧೆ.—

ಬಂದವರ ಸಂಖ್ಯೆ ೨೯. ಪರೀಕ್ಷಕರು.—ಮ|| ಗಳಾದ ಬೆನಗಲ್ ರಾಮ ರಾವ್, ಎಂ.ಎ., ಎಲ್‌ಎಲ್.ಬಿ. ಕೆ. ಟಿ. ಕುಂದಣಗಾರ್, ಎಂ.ಎ. ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.

"ಫ್ರೆಂಡ್ಸ್ ಯೂನಿಯನ್"ನವರು ಭಾಷಣಸ್ಪರ್ಧೆಯನ್ನು ಸಂಘದಲ್ಲಿ ಏರ್ಪಡಿಸಿ ಬಹುಮಾನ ಕೊಡುವುದಕ್ಕಾಗಿ ಪುದುವಟ್ಟು ಹಣವನ್ನು ಕೊಟ್ಟಿರುವರು. ಈ ವರ್ಷ ಸಾಕಾದಷ್ಟು ಜನ ಸ್ಪರ್ಧಿಷ್ಣುಗಳು ಬರಲಿಲ್ಲವಾದುದರಿಂದ ಅದನ್ನು ನಡೆ ಯಿಸಲು ಆಗಲಿಲ್ಲ. ಮುಂದಿನ ವರ್ಷ ನಡೆಯಿಸಲಾಗುತ್ತದೆ. ಮೇಲೆ ಕಂಡ ಸ್ಪರ್ಧೆ ಗಳಿಗೆ ಪರೀಕ್ಷಕರಾಗಲು ಒಪ್ಪಿ ಶ್ರಮವನ್ನು ವಹಿಸಿ ಸಂಘಕ್ಕೆ ಉಪಕಾರಮಾಡಿದ ಮಹನೀಯರೆಲ್ಲರಿಗೂ ಸಂಘವು ಕೃತಜ್ಞವಾಗಿದೆ. ಮೇಲೆ ಹೇಳಿದ ಸ್ಪರ್ಧೆಗಳಲ್ಲಿ ಜಯಶೀಲರಾದ ಎಲ್ಲರನ್ನೂ ಸಂಘವು ಅಭಿನಂದಿಸುತ್ತದೆ.

ಈ ಸ್ಪರ್ಧೆಗಳಲ್ಲಿ ಜಯಶೀಲರಾದವರಿಗೆ ಬಹುಮಾನಕೊಡಲು ಕೆಳಗೆ ಹೇಳಿರುವ ದೊಡ್ಡಮನುಷ್ಯರು ದ್ರವ್ಯಸಹಾಯ ಮಾಡಿದ್ದಾರೆ.—

| | |
|---|---|
| ರಾವ್ ಬಹದ್ದೂರ್ ಎಚ್. ಕೃಷ್ಣಶಾಸ್ತ್ರಿಗಳು | ೫೦—೦—೦ |
| ಡಾ|| ಎಂ. ಎ. ಸಂಪತ್ಕುಮಾರನ್, ಎಂ.ಎ., ಪಿ.ಹೆಚ್‌ಡಿ. | ೧೫—೦—೦ |
| ಮ|| ರಾ|| ಸಿ. ಶ್ರೀಕಂಠಯ್ಯ, ಬಿ.ಎ. | ೫—೦—೦ |
| ಮ|| ರಾ|| ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. | ೫—೦—೦ |
| ಮ|| ರಾ|| ಎಂ. ವೆಂಕಟೇಶಯ್ಯಂಗಾರ್, ಎಂ.ಎ. | ೫—೦—೦ |
| ಒಟ್ಟು ರೂ. | ೮೦—೦—೦ |

ಸಂಘದಲ್ಲಿ ನಡೆಯುವ ಸ್ಪರ್ಧೆಗಳಿಗಾಗಿ ಒಟ್ಟು ಸುಮಾರು ೧೫೦—೦—೦ ರೂಪಾಯಿಗಳು ವಿನಿಯೋಗಿಸಲ್ಪಡುತ್ತವೆ.

ಈ ಮಹನೀಯರು ಸಹಾಯಮಾಡಿ ಸಂಘದಲ್ಲಿಯೂ ವಿದ್ಯಾರ್ಥಿಗಳಲ್ಲಿಯೂ ಆಸ್ಥೆ ಅಕ್ಕರೆಗಳನ್ನು ತೋರಿಸಿರುವುದಕ್ಕಾಗಿ ಸಂಘವು ತನ್ನ ಧನ್ಯವಾದಗಳನ್ನೂ ವಂದನೆಗಳನ್ನೂ ಸಮರ್ಪಿಸುತ್ತದೆ.

---

ಮೇಲ್ಕಂಡ ವಿಷಯಗಳಿಗೆ ಸಂಬಂಧಿಸದೆ ಪ್ರತ್ಯೇಕವಾಗಿ ನಿರೂಪಿತವಾಗಬೇಕಾದ ಮತ್ತೊಂದು ವಿಷಯ ಉಂಟು. ಅದು ಯಾವುದೆಂದರೆ.—ಮ|| ಎಸ್. ಜಿ. ಬಿಂದೂರಾಯರು ಸಂಘದ ಪರವಾಗಿ ಶ್ರೀ ರಾಮೇಶ್ವರ ದೇವಾಲಯದ ಸಭಾಭವನದಲ್ಲಿ ಭಾರತವನ್ನು ಓದಿದುದು. ಈ ಮೂಲಕ ನಮ್ಮ ನಾಡಿನ ನಷ್ಟಕಲೆಗಳಲ್ಲಿ ಒಂದಾದ ವಾಚನಕಲೆಯನ್ನು ಉಜ್ಜೀವನ ಮಾಡಲು ಸಂಘವು "ಅಳಿಲು ಭಕ್ತಿ ಮಳಲ ಸೇವೆ" ಎಂಬಂತೆ ತನ್ನ ಕೈಲಾದ ಪ್ರಯತ್ನವನ್ನು ಮಾಡಿತು. ಬೆಂಗಳೂರಿನ ಮಹಾಜನಗಳನೇಕರು ಬಂದು ಆಲಿಸಿ ಸಂಘದ ಉದ್ದೇಶವನ್ನು ಸಫಲಗೊಳಿಸಿದರು. ಸಂಘವು ಮ|| ಬಿಂದೂರಾಯರಿಗೆ ಒಂದು ಸ್ವರ್ಣಪದಕವನ್ನೂ ೫೦ ರೂಪಾಯಿಗಳ ಬಹುಮಾನವನ್ನೂ ಸಂಭಾವನೆಮಾಡಿತು. ಇದಕ್ಕಾಗಿ ಮ|| ಗಳಾದ ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾಯರು ೧೫ ರೂಪಾಯಿಗಳನ್ನೂ, ಬೆಳವಾಡಿ ರಾಮಸ್ವಾಮಯ್ಯನವರು, ಎಂ. ವೆಂಕಟೇಶಯ್ಯಂಗಾರ್, ಸಿ. ಕೆ. ವೆಂಕಟರಾಮಯ್ಯನವರು, ಯಸ್. ಜಿ. ಶಾಸ್ತ್ರಿಗಳು ಇವರು ಹತ್ತು ಹತ್ತು ರೂಪಾಯಿಗಳನ್ನೂ ಮತ್ತು ಇನ್ನೂ ಅನೇಕರು ತಮ್ಮ ಶಕ್ತ್ಯನುಸಾರವಾಗಿಯೂ ಸಹಾಯಮಾಡಿರುವರು. ದ್ರವ್ಯಸಹಾಯಮಾಡಿದ ಇವರಿಗೂ, ಆ ದಿನ ಅಗ್ರಾಸನವನ್ನು ವಹಿಸಿ ಸಂಭಾವನೆಯನ್ನು

ಕೊಟ್ಟ ರಾಜಕಾರ್ಯಪ್ರಸಕ್ತ ದಿವಾನ್ ಬಹದ್ದೂರ್ ಎಂ. ಯನ್. ಕೃಷ್ಣರಾವ್, ಬಿ.ಎ., ಯವರಿಗೂ ಸಂಘವು ಅತ್ಯಂತ ಕೃತಜ್ಞವಾಗಿದೆ.

ಮ|| ಕೃಷ್ಣರಾಯರು ಸಂಭಾವನೆಯನ್ನು ಕೊಡುವಾಗ ಹೀಗೆಂದು ಅಪ್ಪಣೆ ಕೊಡಿಸಿದರು :—

"ನಾನು ಇಲ್ಲಿಗೆ ಬಂದಾಗ ಮ|| ರಾ|| ಬಿಂದೂರಾಯರು ಭಾರತ ಓದುವದನ್ನು ಕೇಳುವ ಭಾಗ್ಯವೊಂದೇ ನನಗೆ ದೊರೆಯುವದೆಂದು ತಿಳಿದಿದ್ದೆನು. ಆದರೆ ಅವರಿಗೆ ಬಹುಮಾನವನ್ನು ಒಪ್ಪಿಸುವ ಭಾಗ್ಯವೂ ನನಗೆ ದೊರೆಯುವದೆಂದು ಭಾವಿಸಿರಲಿಲ್ಲ. ಈ ಕಾರ್ಯವನ್ನು ನನಗಿಂತ ವಯಸ್ಸಿನಲ್ಲಿಯೂ, ಗೌರವದಲ್ಲಿಯೂ ಅಧಿಕರಾಗಿರುವ ಮ|| ರಾ|| ಶಾಮರಾಯರಾಗಲಿ ಕರ್ಪೂರ್ ಶ್ರೀನಿವಾಸರಾಯರಾಗಲಿ ವಹಿಸಿದ್ದರೆ ಚೆನ್ನಾಗಿತ್ತು. ಆದರೂ ಈ ಕಾರ್ಯವನ್ನು ನನಗೆ ವಹಿಸಿದುದಕ್ಕಾಗಿ ಕರ್ಣಾಟಕ ಸಂಘದವರನ್ನು ವಂದಿಸುತ್ತೇನೆ. ನಮ್ಮಲ್ಲಿ ಅನೇಕ ಭಾರತಗಳಿದ್ದರೂ ಅದನ್ನು ಓದುವವರು ಬಹುಜನವಿಲ್ಲ. ಸಂಸ್ಕೃತ ಭಾರತವನ್ನು ಬಲ್ಲವರೂ ಬಹು ವಿರಳ. ಕನ್ನಡದಲ್ಲಿ ಒಂದು ಭಾರತ ಉಂಟೆಂಬುದನ್ನೂ ಅದನ್ನು ಇಷ್ಟು ಹೃದಯಂಗಮವಾಗಿ ಓದುವವರು ಇರುವರೆಂಬುದನ್ನೂ ನಾನು ಇದುವರೆಗೆ ತಿಳಿದಿರಲಿಲ್ಲ. ಆದುದರಿಂದ ಭಾರತವನ್ನು ಕೇಳುವ ಭಾಗ್ಯವೂ, ಮ|| ರಾ|| ಬಿಂದೂರಾಯರಿಗೆ ಬಹುಮಾನವನ್ನು ಒಪ್ಪಿಸುವ ಭಾಗ್ಯವೂ ಒಟ್ಟಿಗೆ ದೊರೆತುದಕ್ಕಾಗಿ ನಾನು ಮನಃಪೂರ್ವಕವಾಗಿ ಸಂತೋಷಪಡುತ್ತೇನೆ. ಮ|| ರಾ|| ರಾಯರು ಭಾರತವನ್ನೋದಿದುದನ್ನು ಕೇಳಿ ಸಂತೋಷದಲ್ಲಿ ಮುಳುಗಿರುವ ನಿಮ್ಮನ್ನು ನನ್ನ ಶುಷ್ಕಮಾತುಗಳಿಂದ ಬೇಸರಪಡಿಸಲು ನಾನು ಬಯಸುವದಿಲ್ಲ. ಆದುದರಿಂದ ಈ ಕಾರ್ಯವನ್ನು ನನ್ನಿಂದ ಮಾಡಿಸಿದುದಕ್ಕಾಗಿ ಕರ್ಣಾಟಕ ಸಂಘದವರನ್ನು ಮತ್ತೊಮ್ಮೆ ವಂದಿಸಿ ಅವರ ಪರವಾಗಿ ಬಹಳ ಸಂತೋಷದಿಂದ ಈ ಬಹುಮಾನವನ್ನು ಮ|| ರಾ|| ಬಿಂದೂರಾಯರಿಗೆ ಒಪ್ಪಿಸುತ್ತೇನೆ."

ಹೀಗೆಂದು ಬಹುಮಾನವನ್ನು ಒಪ್ಪಿಸಲು ಮ|| ರಾ|| ಬಿಂದೂರಾಯರು ಗುಣಕ್ಕೆ ಸಹಜವಾದ ವಿನಯದಿಂದ ತಾವು ಬಹಳ ಅಲ್ಪರೆಂದೂ ಕರ್ಣಾಟಕಸಂಘದವರು ಮಾಡಿದ ಬಹುಮಾನವು ಅವರ ಮಮತೆಯಿಂದಲೇ ಹೊರತು ತಮ್ಮ ಯೋಗ್ಯತೆಯಿಂದಲ್ಲವೆಂದೂ ಉತ್ತರಕೊಟ್ಟರು.

---

ಇನ್ನು ಪ್ರಕಟನೆಯ ಶಾಖೆಯ ವಿಚಾರವಾಗಿ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ಈ ವರ್ಷದ ಆರಂಭದಲ್ಲಿ ಸಂಘವು "ಇಂಗ್ಲಿಷ್ ಗೀತೆ" ಗಳನ್ನು ಪ್ರಕಟಿಸಿ ಚಂದಾದಾರರಿಗೆಲ್ಲಾ ಕಾಣಿಕೆಯಾಗಿ ಒಪ್ಪಿಸಿತು. ಸಂಘವು ಕಾಣಿಕೆಯಾಗಿ ಒಪ್ಪಿಸಿದ ಗ್ರಂಥಗಳಲ್ಲಿ ಇದು ಮೂರನೆಯದು. ಈ ಗ್ರಂಥದ ವಿಚಾರವಾಗಿ ಸಂಘದ ಅಧ್ಯಕ್ಷರು ತಮ್ಮ ಮುನ್ನುಡಿಯಲ್ಲಿ ಹೀಗೆ ಬರೆದಿರುವರು.

"ಪ್ರಸಿದ್ಧ ಆಂಗ್ಲೇಯ ಕವಿಗಳ ಉತ್ತಮವಾದ ಸಣ್ಣ ಸಣ್ಣ ಗೀತೆಗಳನ್ನು ಮೂಲದಲ್ಲಿಯ ಭಾವವೂ ರಸವೂ ಬಿಟ್ಟುಹೋಗದಂತೆ ಸಾಧ್ಯವಾದಮಟ್ಟಿಗೆ ಪ್ರಯತ್ನಿಸಿ ಕನ್ನಡಕ್ಕೆ ಸ್ವಾಭಾವಿಕ

ಾಗಿರುವಂತೆ ಮಾರ್ಪಡಿಸಿ ಲಲಿತವಾದ ಭಾಷೆಯಲ್ಲಿ ಇಂಗ್ಲಿಷಿಗೆ ಹೋಲುವ ಹೊಸ ಛಂದಸ್ಸಿನಲ್ಲಿ ಥಕರ್ತರು ಈ ಕವಿತೆಗಳನ್ನು ರಚಿಸಿರುವರು.

"ಗ್ರಂಥಕರ್ತರಾದ ಮ|| ಬಿ. ಎಮ್. ಶ್ರೀಕಂಠಯ್ಯ, ಎಂ.ಎ, ಬಿ.ಎಲ್. ಅವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್‌ಭಾಷಾ ವಿಶಾರದರಾಗಿ ಮನ್ನಣೆಯನ್ನು ಪಡೆದಿರುವರಲ್ಲದೆ, ಕನ್ನಡಭಾಷೆಯಲ್ಲಿ ಅಸಾಧಾರಣ ಪಾಂಡಿತ್ಯವುಳ್ಳವರಾಗಿ ಅದರ ಅಭಿವೃದ್ಧಿಗೆ ಗಲಭೆಮಾಡದೆ ಶ್ರಮಿಸುತ್ತಿರುವರು. ಹೆಸರುವಾಸಿಗೆ ಇಷ್ಟಪಡದೆ ಗೋಪ್ಯವಾಗಿ ಭಾಷಾಸೇವೆಯನ್ನು ಮಾಡುತ್ತಿರುವ ಇಂಥಾ ವಿದ್ವಾಂಸರನ್ನು ಕನ್ನಡಿಗರಿಗೆ ಪರಿಚಯಮಾಡಿಕೊಡುವ ಸನ್ನಿವೇಶವು ದೊರೆತುದಕ್ಕಾಗಿ ಸಂತೋಷಿಸುತ್ತೇವೆ. ಈ ಕವಿತೆಯನ್ನು ಪುಸ್ತಕರೂಪವಾಗಿ ಪ್ರಕಾಶಗೊಳಿಸಲು ಅನುಕೂಲತೆಯನ್ನಿತ್ತುದಕ್ಕಾಗಿ ಗ್ರಂಥಕರ್ತರಿಗೆ ನಾವು ಕೃತಜ್ಞರಾಗಿರುವೆವು."

---

ಈ ವರ್ಷದ ಕಾರ್ಯದರ್ಶಿಗಳು ಮಾಡಬೇಕಾದ ಕೆಲಸವನ್ನು ತಮ್ಮ ಮನದ ಯುವಂತೆ ಮಾಡದೆ ಒಂದು ವರ್ಷದ ಅವಧಿಯನ್ನು ಹಾಗೂ ಹೀಗೂ ಕಳೆದಿರುವ ಅವರ ಸ್ಥಾನಕ್ಕೆ ಮುಂದೆ ಬರುವ ಉತ್ಸಾಹಿಗಳಿಂದ ಕೊರತೆ ಬರದಂತೆ ಮಾಡಿಸಿಕೊಳ್ಳುವುದು, ಉದಾರಿಗಳೂ ಭಾಷಾಭಿಮಾನಿಗಳೂ ಆದ ಕನ್ನಡಿಗರ ಸೇರಿರುತ್ತದೆ. ಈ ವರ್ಷದ ಕಾರ್ಯನಿರ್ವಾಹಕ ಸಭೆಯ ಸದಸ್ಯರು ನಮ್ಮೊಡನೆ ಸ ಕರಿಸಿ ಸಲಹೆಗಳಿಂದಲೂ ದೇಹಶ್ರಮದಿಂದಲೂ ನೆರವಾಗಿರುವರು. ಹೊರಗಿನ ಅನೇ ದೊಡ್ಡಮನುಷ್ಯರು, ನಾವು ಪದೇ ಪದೇ ಹೋಗಿ ಕೊಟ್ಟ ತೊಂದರೆಯನ್ನೆಣಿಸ ಕೇಳಿದಾಗ ಸಹಾಯಮಾಡಿ ಉಪಕಾರಮಾಡಿದ್ದಾರೆ. ಇವರಿಗೆ ಸಂಘದಲ್ಲಿಯ ತಾಯ್ನುಡಿಯಲ್ಲಿಯೂ ಇರುವ ಮಮತೆಯೇ ಇದಕ್ಕೆ ಕಾರಣವೆಂದು ನಂಬಿದ್ದೇ ಇವರಲ್ಲದೆ ಎಷ್ಟೋ ಜನರು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಸಹಾ ಮಾಡಿರುವರು. ಅವರೆಲ್ಲರಿಗೂ ನಮ್ಮ ಕೃತಜ್ಞತಾಪೂರ್ವಕವಾದ ವಂದನೆಗಳ ರ್ಪಿಸುತ್ತೇವೆ. ಮುಂದೆ ಉರುತರವಾದ ಭಾರವನ್ನು ತಕ್ಕವರು ವಹಿಸಿ ಕನ್ನಡಿ ಸಹಾಯದಿಂದ ತಮಗೆ ಯಶಸ್ಸನ್ನೂ ಸಂಘಕ್ಕೆ ಕೀರ್ತಿಯನ್ನೂ ಸಂಪಾದಿಸ ಕರ್ಣಾಟಕಸಂಘವೂ ಪ್ರಬುದ್ಧ ಕರ್ಣಾಟಕವೂ ಶ್ರೀಶನ ಕೃಪೆಯಿಂದ ಚಿರಾ ಗಳಾಗಿ ಬಾಳಿ ಭಾಷಾಸೇವೆಯ ಮೂಲಕ ದೇಶಸೇವೆ ಈಶಸೇವೆಗಳನ್ನು ಮಾ ಕನ್ನಡತಾಯಿಯ ಅಚ್ಚುಮೆಚ್ಚಿನ ಮಕ್ಕಳಾಗಿರಲಿ!

ಇತಿ,

ಕರ್ಣಾಟಕಸಂಘದ ಕಾರ್ಯದರ್ಶಿ



---